# ಕನ್ನಡ ಪತ್ರಿಕಾ ಸೂಚಿ

( ೧೮೪೩ - ೧೯೭೭ )

ಕನ್ನಡ ಪತ್ರಿಕಾ ಸೂಚಿ



ಸಂಪಾದಕರು :
ಡಾ. ಶ್ರೀನಿವಾಸ ಹಾವನೂರ

ಸಂಕಲನಕಾರರು :
ಮೋಹನ ಗ. ಹೆಗಡೆ
ಪಂಡಾರಿ ಚೆಲ್ಲಪ್ಪನ್



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ

# ಕನ್ನಡ ಪತ್ರಿಕಾ ಸೂಚಿ

( ೧೮೪೩ – ೧೯೭೨ )

## ಪತ್ರಿಕಾ ಪ್ರಪಂಚದ ಮೇಲಿನ ಲೇಖನಗಳ ಸಹಿತ


ಸಂಪಾದಕರು

ಡಾ. ಶ್ರೀನಿವಾಸ ಹಾವನೂರ

ಪತ್ರಿಕಾ ಸಂಗ್ರಾಹಕರು

ಶ್ರೀ ಮೋಹನ ಗ. ಹೆಗಡೆ

ಸಹಾಯಕರು

ಶ್ರೀ ಪಂಡಾರಿ ಚೆಲ್ಲಪ್ಪನ್






೨೦೦೪

ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

# ಕನ್ನಡ ಪತ್ರಿಕಾ ಸೂಚಿ

## ಪ ರಿ ವಿ ಡಿ



## ಸೂಚಿಯ ವಿಭಾಗ



## ಕೆಲವು ಪತ್ರಿಕೆಗಳ ಮುಖಪುಟಗಳು

## ಲೇಖನ ವಿಭಾಗ

### ವಿ ಷ ಯ ಗ ಳು

### (ಅ) ಪತ್ರಿಕಾ ಪ್ರಪಂಚದ ಸಮೀಕ್ಷೆಗಳು

## (ಆ) ಕೆಲವು ಗಮನಾರ್ಹ ಪತ್ರಿಕೆಗಳು



## (ಇ) ಸಂಪಾದಕರ ಬರಹದ ಮಾದರಿಗಳು



## (ಈ) ಕೆಲವು ಪತ್ರಕರ್ತರು

| | |
|---|---|
| ೩೬. 'ಕಂಠೀರವ'ದ ಹುರುಳಿ ಭೀಮರಾವ್ | - ಹ.ವೆಂ. ನಾಗರಾಜರಾವ್ |
| ೩೭. ಮೊಹರೆ ಹಣಮಂತರಾಯರು | - ಆರ್ ಕೆ. ಜೋಶಿ |
| ೩೮. 'ಜಯಂತಿ'ಯ ಬೆಟಗೇರಿ ಕೃಷ್ಣಶರ್ಮರು | - |
| ೩೯. ಪಾ. ವೆಂ. ಆಚಾರ್ಯರು | - ಶೀ. ಹಾ. |
| ೪೦. 'ನುಡಿ'ಯ ಬಲ್ಲಾಳರು | - ಶೀ. ಹಾ. |

## (ಉ) ಅನುಬಂಧಗಳು

(೧) ಏನೂ ಮಾಹಿತಿ ಸಿಕ್ಕದ ಪತ್ರಿಕೆಗಳು
(೨) ಪತ್ರಿಕಾ ಸಂಪುಟಗಳ ಲಭ್ಯತೆಯ ವಿಚಾರ
(೩) ವಿದೇಶದ ಗ್ರಂಥಾಲಯಗಳಲ್ಲಿರುವ ಪತ್ರಿಕಾ ಸಂಪುಟಗಳು

## ನುಡಿನಮನ

ಯಾವುದೇ ನಾಡಿನ ಆರೋಗ್ಯಕರ ಮುನ್ನಡೆಯಲ್ಲಿ ಪತ್ರಿಕೋದ್ಯಮ ವಹಿಸುವ ಪಾತ್ರ ಮಹತ್ವಪೂರ್ಣವಾಗಿರುತ್ತದೆ. ಸಮಾಜಕ್ಕೆ ಅಗತ್ಯವಾಗುವಂತಹ ಹಲವಾರು ವಿಷಯಗಳನ್ನು ತಲಸ್ಪರ್ಶಿಯಾಗಿ ಶೋಧಿಸಿ, ವಿಮರ್ಶಿಸಿ, ಶ್ರೀಸಾಮಾನ್ಯರಿಗೆ ತಿಳಿವಳಿಕೆ ನೀಡಿ ಜನಸ್ತೋಮವನ್ನು ಪ್ರಬುದ್ಧವನ್ನಾಗಿ ಮಾಡುವ ಜವಾಬ್ದಾರಿಯನ್ನು ಪತ್ರಿಕೆಗಳು ನಿರ್ವಹಿಸುತ್ತವೆ. "ಕತ್ತಿಗಿಂತ ಲೇಖನಿ ಮೊನಚಾಗಿರುತ್ತದೆ" ಎಂಬ ಮಾತು ಪತ್ರಿಕೆಗಳಿಗೆ ಸಂಬಂಧಪಟ್ಟಂತೆ ಅಪ್ಪಟ ಸತ್ಯ. ಜನಪರವಾದ, ಸಮಾಜದ ಹಿತಾಸಕ್ತಿಗೆ ಮುಡಿಪಾದ ಪತ್ರಿಕೆಗಳು ನಿಜಕ್ಕೂ ಉತ್ತಮ ಸಮಾಜವನ್ನು ನಿರ್ಮಿಸುವ ಕಾಯಕದಲ್ಲಿ ಪುರೋಗಾಮಿಯಾಗುತ್ತವೆ.

ಪತ್ರಿಕೋದ್ಯಮ ಬೆಳೆದುಬಂದ ಹಾದಿ ಕುತೂಹಲಕರವಾಗಿದೆ, ಅಧ್ಯಯನ ಯೋಗ್ಯವಾಗಿದೆ. ತಮ್ಮ ಸ್ವಂತ ಹಿತಾಸಕ್ತಿಗಳನ್ನು, ಸುಖ–ಸಂತೋಷಗಳನ್ನು ಬದಿಗೊತ್ತಿ ಅರ್ಪಣಾ ಮನೋಭಾವದಿಂದ ಪತ್ರಿಕೋದ್ಯಮಕ್ಕೆ ಮೀಸಲಾಗಿ ದುಡಿದ ಸಾಹಸಿಗಳ, ಪತ್ರಕರ್ತರ ಪರಂಪರೆಯೇ ನಮ್ಮಲ್ಲಿ ಕಂಡುಬರುತ್ತದೆ. ಭಾರತೀಯ ಪತ್ರಿಕೋದ್ಯಮದ ಪ್ರಮುಖ ಅಂಗವೆನಿಸಿರುವ ಕನ್ನಡ ಪತ್ರಿಕೋದ್ಯಮ ೧೯ನೆಯ ಶತಮಾನದ ಪೂರ್ವಾರ್ಧದಿಂದಲೂ ನೆಲೆ–ಬೆಲೆಗಳನ್ನು ಕಂಡುಕೊಂಡು ವಿಕಾಸಪಥದಲ್ಲಿ ಸಾಗುತ್ತಾ ಬಂದಿದೆ.

ಇಂದಿನ ಪತ್ರಿಕೋದ್ಯಮ ವಿದ್ಯಾರ್ಥಿಗಳಿಗೆ ಹಾಗೂ ಆಸಕ್ತರಿಗೆ ಈ ದಿಸೆಯಲ್ಲಿ ಕಂಡುಬರುವ ಬೆಳವಣಿಗೆಯ ಕುರಿತಂತೆ ಐತಿಹಾಸಿಕ ತಿಳಿವಳಿಕೆ ಅಗತ್ಯವಾಗಿದೆ. ಬೇರುಗಳ ಆಳ, ವಿಸ್ತಾರಗಳ ಬಗೆಗೆ ಅರಿವನ್ನು ಪಡೆದರೆ ಅದು ಉತ್ತುಂಗ ಶಾಖೋಪಶಾಖೆಗಳ ಹರವು ವಿಸ್ತಾರಗಳ ಪರಿಜ್ಞಾನಕ್ಕೆ ಪೋಷಕವಾಗಿ ಬೆಂಬಲವಾಗಿ ನಿಲ್ಲಬಲ್ಲದು. ಈ ನಿಟ್ಟಿನಲ್ಲಿ ಪ್ರಸಾರಾಂಗದ ವತಿಯಿಂದ ಹೊರತರಲಾಗುತ್ತಿರುವ "ಕನ್ನಡ ಪತ್ರಿಕಾ ಸೂಚಿ" ಒಂದು ಪ್ರಮುಖವಾದ ಮೈಲಿಗಲ್ಲು.

ಪ್ರಸಕ್ತ ಹೊತ್ತಗೆಯಲ್ಲಿ ೧೮೪೩ ರಿಂದ ೧೯೭೭ ರ ವರೆಗೆ ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಬೆಳಕು ಕಂಡ ಪತ್ರಿಕೆಗಳ ಉಪಯುಕ್ತವಾದ ಸೂಚಿ ದೊರೆಯುತ್ತದೆ. ಆದರೆ ಇದು ಕೇವಲ ಸೂಚಿಗಷ್ಟೇ ಮೀಸಲಾಗದೆ ಪತ್ರಿಕಾ ಪ್ರಪಂಚದ ಮೇಲಿನ ಕೆಲವಾರು ಲೇಖನಗಳನ್ನೂ ಕೂಡ ಒಳಗೊಂಡಿದೆ. ಕನ್ನಡ ಪತ್ರಿಕೋದ್ಯಮದ ಇತಿಹಾಸ ಮಾತ್ರವಲ್ಲದೆ ಪತ್ರಿಕಾ ಪ್ರಪಂಚದ ಸಮೀಕ್ಷೆಗಳನ್ನೂ, ಕೆಲವು ಗಮನಾರ್ಹ ಪತ್ರಿಕೆಗಳ ಬಗ್ಗೆ ಮಾಹಿತಿಯನ್ನೂ, ಸಂಪಾದಕರ ಬಂದದ ಮಾಹಿತಿಗಳನ್ನೂ ಹಾಗೂ ಕೆಲವು ಮಂದಿ ಪತ್ರಕರ್ತರ ಬದುಕಿನ ವಿವರಗಳನ್ನೂ ಕೂಡ ಇಲ್ಲಿ ನೀಡಲಾಗಿದೆ. ವಿಶೇಷವಾದ ಪರಿಶ್ರಮ ವಹಿಸಿ ಡಾ. ಶ್ರೀನಿವಾಸ ಹಾವನೂರ ಶ್ರೀ ಮೋಹನ ಹೆಗಡೆ ಮತ್ತು ಶ್ರೀ ಭಂಡಾರಿ ಚೆಲ್ಲಪ್ಪನ್ – ಈ ಉಪಯುಕ್ತವಾದ ಹೊತ್ತಗೆಯನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಇವರಿಗೆ ನಾವು ತುಂಬಾ ಆಭಾರಿಯಾಗಿದ್ದೇವೆ.

ವಿಶ್ವವಿದ್ಯಾನಿಲಯದ ಮಾನ್ಯ ಕುಲಪತಿಯವರಾದ ಪ್ರೊ. ಜೆ. ಶಶಿಧರ ಪ್ರಸಾದ್‌ರವರು ಹಾಗೂ ಕುಲಸಚಿವರಾದ ಶ್ರೀ ಎಸ್.ಡಿ. ತಿವಾರಿಯವರು ಈ ಹೊತ್ತಗೆಯನ್ನು ಹೊರತರುವಲ್ಲಿ ವಿಶೇಷ ಆಸ್ಥೆ ವಹಿಸಿದ್ದಾರೆ. ಅವರಿಗೂ ಈ ಹೊತ್ತಗೆಯ ಡಿ.ಟಿ.ಪಿ.ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿ ಕೊಟ್ಟಿರುವ ದುರ್ಗಾ ಕಂಪ್ಯೂಟರ್ಸ್‌ನ ಮಾಲೀಕರಿಗೂ, ಅಚ್ಚಿಸಿ ಕೊಟ್ಟಿರುವ ವಿಶ್ವವಿದ್ಯಾನಿಲಯದ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಚಂದ್ರಶೇಖರ ದೊಡ್ಡಮನಿ ಹಾಗೂ ಅವರ ಸಿಬ್ಬಂದಿ ವರ್ಗದವರಿಗೂ ಎಂದಿನಂತೆ ಈ ಕೆಲಸ ಕಾರ್ಯಗಳಲ್ಲಿ ಸಹಕರಿಸುತ್ತಿರುವ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ವಾ. ವೇ. ಶ್ರೀಧರ ಮತ್ತು ಇತರ ಸಹೋದ್ಯೋಗಿಗಳಿಗೂ ನನ್ನ ಹಾರ್ದಿಕ ವಂದನೆಗಳು.

ಪ್ರೊ.. ಲಕ್ಷ್ಮೀನಾರಾಯಣ ಅರೋರಾ
ನಿರ್ದೇಶಕ

## ಪತ್ರಿಕಾ ಸೂಚಿಯ ನಮೂದು

ಶೀರ್ಷಿಕೆ ಊರು

ನಿಯತತೆ * ಸೈಜ್ (ಸೆಂ. ಮೀ. ನಲ್ಲಿ) ಪುಟ ಸಂಖ್ಯೆ

ವಿಷಯ ವರ್ಷ

ಸ್ಥಾಪಕರು

ಸಂಪಾದಕರು

ಸಹಸಂಪಾದಕರು

ಪ್ರಕಾಶಕರು

ಮುದ್ರಕರು

ಧ್ಯೇಯವಾಕ್ಯ

ಹೆಚ್ಚಿನ ಮಾಹಿತಿ

ವಿಶೇಷ ಮಾಹಿತಿ

## ಕಾಲಾವಧಿಯ ಸಂಜ್ಞೆಗಳಿಗೆ ವಿವರಣೆ

| | | |
|---|---|---|
| ೧೯೨೫ - ೫೫ | - | ೧೯೨೫ಕ್ಕೆ ಆರಂಭವಾಗಿ ೧೯೫೫ರಂದು ನಿಂತಿತು. |
| ೧೯೫೧- | - | ೧೯೫೧ರಲ್ಲಿ ಆರಂಭ. ಇನ್ನೂ ಹೊರಡುತ್ತಿದೆ. |
| ೧೯೩೭ . . | | ಆರಂಭದ ವರ್ಷ ೧೯೩೭. ಮುಂದೆ ಎಷ್ಟು ಕಾಲ ನಡೆಯಿತೆಂಬುದು ತಿಳಿಯದು. |
| -- ೧೯೪೨ -- | - | ೧೯೪೨ರಲ್ಲಿ ಬದುಕಿ ಇದದ್ದು ಮಾತ್ರ ಗೊತ್ತು. |
| ೧೯೦೮-೧೯೭೬● | - | ಪತ್ರಿಕೆ ನಿಂತ ವರ್ಷ ೧೯೭೬ ಇರಬಹುದು. ನಿಶ್ಚಿತವಾಗಿ ಗೊತ್ತಿಲ್ಲ. |

* ನಿಯತತೆಯ ವಿವರಗಳು :

ದಿನ, ವಾರ, ವಾರಕ್ಕೆರಡು, ಪಕ್ಷ, ಮಾಸ, ದ್ವೈಮಾ, ತ್ರೈಮಾ, ಷಾಣ್ಮಾಸಿಕ, ಚಾತುರ್ಮಾಸ, ಅರ್ಧವರ್ಷ, ವಾರ್ಷಿಕ, ಅನಿಯತ

# ಪ್ರಸ್ತಾವನೆ

ಕನ್ನಡದ ಆದ ಪತ್ರಿಕೆ 'ಮಂಗಳೂರು ಸಮಾಚಾರ'ವು ಪ್ರಕಟವಾದಂದಿನಿಂದ ( ೧೮೪೩ ) ಇದುವರೆಗೆ ಕಾಣಿಸಿಕೊಂಡ ಪತ್ರಿಕೆಗಳು ಯಾವ ಯಾವುವು? ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ಗ್ರಂಥಸೂಚಿ' ಯೋಜನೆಯ ಫಲವಾಗಿ ಪುಸ್ತಕಗಳ ವಿವರಗಳು ದೊರೆಯಬಲ್ಲವು. ಆದರೆ ಪತ್ರಿಕೆಗಳ ವಿಚಾರದಲ್ಲಿ ಅವುಗಳ ಅಂದಾಜು ಲೆಕ್ಕ ಸಹಿತ ಸಿಗುವಂತಿಲ್ಲ.

ಇಂಥ ಶೋಚನೀಯ ಸ್ಥಿತಿಯ ಮುಖ್ಯ ಕಾರಣವೆಂದರೆ, 'ಪತ್ರಿಕೆಗಳು ಎಷ್ಟೆಂದರೂ ಸಾಮಯಿಕ; ಕಾಲ ಸರಿದಂತೆ ಅವು ನಿರುಪಯುಕ್ತ' ಎಂಬ ನಮ್ಮ ಭಾವನೆ. ಹಳೆಯ ಪತ್ರಿಕಾ ಸಂಚಿಕೆಗಳು ಮನೆಯಲ್ಲಿ ಬಿದ್ದಿದ್ದರೆ ಅವನ್ನು ಯಾವಾಗ ರದ್ದಿಯ ಅಂಗಡಿಗೆ ಹಾಕಿಯೇವೊ - ಎಂಬ ಆತುರ, ನಮಗೆ. ನಮ್ಮ ನಾಡಿನ ಸಾರ್ವಜನಿಕ ಹಾಗೂ ಸಂಘ ಸಂಸ್ಥೆಗಳ ಲೈಬ್ರರಿಗಳಲ್ಲಿ ತೀರ ಹಳೆಯದಾದ ಪುಸ್ತಕಗಳನ್ನು ಬೇಕಾದರೆ ಉಳಿಸಿಕೊಂಡು ಬಂದಿರಬಹುದು. ಆದರೆ ಪತ್ರಿಕೆಗಳ ಸಂಪುಟಗಳನ್ನು, ಅವು ಈಚಿನವೇ ಇರಲಿ, ಕಾಯ್ದಿರಿಸುವ ಪ್ರವೃತ್ತಿ ಕಂಡುಬರುವುದಿಲ್ಲ. ಯಾವದೊಂದು ಪತ್ರಿಕೆಯ ಮೊದಲಿನಿಂದ ಕೊನೆವರೆಗಿನ ಎಲ್ಲ ಸಂಪುಟಗಳು ಅದರ ಪ್ರಕಾಶನ ಕಚೇರಿಯಲ್ಲಿ ಸಹಿತ ದೊರೆಯದೇ ಹೋಗಬಹುದು. ಇಂಥ ನಮ್ಮ ಪ್ರವೃತ್ತಿಯಿಂದಾಗಿ ಲಿಖಿತ ರೂಪದ ಜ್ಞಾನ ಸಮುದಾಯದ ಬಹುಭಾಗವನ್ನು ನಾವು ಕಳೆದುಕೊಂಡಂತಾಗಿದೆ.

ಕಳೆದ ೧೬೦ ವರ್ಷಗಳಲ್ಲಿ ಸಾಗಿ ಬಂದ ನಮ್ಮ ಬದುಕಿನ ವಿಕಾಸವನ್ನು, ವಿವಿಧ ಸ್ತರಗಳಲ್ಲಿ ಅರಿತುಕೊಳ್ಳುವ ಸಾಧನ - ಈ ಪತ್ರಿಕೆಗಳು. ಸ್ವಾತಂತ್ರ್ಯದ ಹೋರಾಟದಲ್ಲಿ, ನಾಡಿನ ಏಕೀಕರಣದಲ್ಲಿ ಅವು ವಹಿಸಿದ ಪಾತ್ರ ಅತ್ಯಂತ ಗಣನೀಯವಾದುದು, ಹೊಸಗನ್ನಡ ಗದ್ಯದ ವಿಕಾಸವಾದುದು ಪತ್ರಿಕೆಗಳ ಮೂಲಕವೇ, ಅನೇಕ ವಿಷಯಗಳನ್ನು ಕುರಿತು ಗ್ರಂಥವೊಂದು ಇರದೇ ಹೋದರೂ ಪತ್ರಿಕೆಗಳಲ್ಲಿ ಅವುಗಳ ಪರಿಚಯ, ವಿಶೇಷತೆಗಳನ್ನೊಳಗೊಂಡ ಲೇಖನಗಳು ತಪ್ಪದೇ ಬಂದಿರುತ್ತವೆ.

ಕನ್ನಡ ಸಾಹಿತ್ಯದ ಅಧ್ಯಯನ - ಸಂಶೋಧನಗಳಿಗಂತೂ ಪತ್ರಿಕೆಗಳೇ ಮುಖ್ಯ ವಾಹಕವಾಗಿವೆ. 'ಬೆಂಗಳೂರು ವಿಶ್ವವಿದ್ಯಾನಿಲಯ'ದ ಕನ್ನಡ–ಭಾಷಾ–ಸಾಹಿತ್ಯ–ಲೇಖನ ಸೂಚಿಯಲ್ಲಿ ಹತ್ತು ಸಾವಿರಕ್ಕೆ ಮೇಲ್ಪಟ್ಟು ಇಂಥ ಲೇಖನಗಳ ಉಲ್ಲೇಖವಿದೆ. ಇವುಗಳಲ್ಲಿ ಪರಿಷತ್ಪತ್ರಿಕೆ, ಪ್ರಬುದ್ಧ ಕರ್ನಾಟಕ ಮುಂತಾದ ಬೆರಳೆಣಿಕೆಯ ಪತ್ರಿಕೆಗಳಲ್ಲಿಯ ಲೇಖಗಳು ಸುಲಭವಾಗಿ ದೊರೆಯುವವು. ತುಸು ಪ್ರಯತ್ನಪಟ್ಟರೆ ಇನ್ನೂ ಅಷ್ಟು ದೊರಕಬಹುದು. ಉಳಿದ ಎಲ್ಲ ಲೇಖಗಳು ಜಿಜ್ಞಾಸುಗಳ ಪಾಲಿಗೆ, ಕನ್ನಡಿಯೊಳಗಿನ ನಿಧಿಯಂತೆ ಇಲ್ಲವಾಗಿವೆ. ಇನ್ನು ಯಾವದೊಂದು ಪರಿಚಿತವಾದ ಪತ್ರಿಕೆಯ ಸಂಪುಟ ಬೇಕಿದ್ದರೆ, ಅದು ಇಂಥದೊಂದು ಲೈಬ್ರರಿಯಲ್ಲಿ ನಿಶ್ಚಿತವಾಗಿ ದೊರೆಯುವುದರ ಭರವಸೆ ಇಲ್ಲ. ಹಾಗೆ ತಿಳಿದು ಬಂದರೂ ಆ ಲೈಬ್ರರಿಯಲ್ಲಿ ಪತ್ರಿಕೆಯ ಸಾದ್ಯಂತ ಸಂಪುಟಗಳು ಇರುವುದಿಲ್ಲ.

ಇಂದು ಪತ್ರಿಕೋದ್ಯಮವು ಬಂಡವಾಳವನ್ನು ಹಾಕಿ, ವ್ಯಾವಹಾರಿಕ ಲಾಭ ಪಡೆಯುವ ಉದ್ಯಮವಾಗಿದೆ. ಸ್ವಾತಂತ್ರ್ಯಪೂರ್ವದ ಕಾಲದಲ್ಲಿ ಇಂಥ ಪರಿಸ್ಥಿತಿ ಇರಲಿಲ್ಲ. ಆ ಕಾಲದ ಪತ್ರಿಕೆಯೆಂದರೆ ಒಬ್ಬಿಬ್ಬ ವ್ಯಕ್ತಿಗಳ ಸಾಹಸದ ಪ್ರತೀಕ. ಅದೆಷ್ಟು ಜನ ಸಾಹಿತಿಗಳು ಮತ್ತು ವಿದ್ಯಾವಂತರು ಪತ್ರಿಕಾ ಸಂಪಾದಕ ಪ್ರಕಾಶಕರಾಗಿ ಪರಿಶ್ರಮಪಟ್ಟಿದ್ದಾರೆ! ಆ ಪತ್ರಿಕೆಗಳಲ್ಲಿ ಅವರ ಬೆಲೆಯುಳ್ಳ ಲೇಖಗಳಲ್ಲದೆ ತಮ್ಮ ಸಾಹಿತಿ-ಮಿತ್ರರಿಂದ ಬರೆಯಿಸಿದವುಗಳೂ ಪ್ರಕಟಗೊಂಡಿವೆ. ಇಂಥ ಪತ್ರಿಕೆಗಳು ಕೆಲವೇ ವರ್ಷ ಬದುಕಿ ಇದ್ದರೂ ಅವು ಅಮೂಲ್ಯವೆನಿಸಿವೆ. ತಾತ ವೆಂಕಟಕೃಷ್ಣಯ್ಯನವರ 'ವೃತ್ತಾಂತ ಚಿಂತಾಮಣಿ' ಹಾಗೂ 'ಸಾಧ್ವಿ' ಪತ್ರಿಕೆಗಳು, ಬೆನಗಲ್ ರಾಮರಾಯರ 'ಸುವಾಸಿನಿ', ಎಂ. ಎನ್. ಕಾಮತರ 'ಆನಂದ', ಹರ್ಡೇಕರ್ ಮಂಜಪ್ಪನವರ 'ಶರಣ ಸಂದೇಶ', ಶಿವರಾಮ ಕಾರಂತರ 'ವಸಂತ', ತಾರಾನಾಥರ 'ಪ್ರೇಮ', ಬಿ.ವೆಂಕಟನಾರಣಪ್ಪರ 'ವಿಜ್ಞಾನ', ಅ.ನ.ಕೃ ಅವರ 'ಕಥಾಂಜಲಿ' ಮೊದಲಾದ ಪತ್ರಿಕೆಗಳ ಸಂಪೂರ್ಣ ಸೆಟ್ ಒಂದೆಡೆಗಾದರೂ ಇಂದು ದೊರೆಯಬಲ್ಲವೆ?

ತಮ್ಮ ವಿಶಿಷ್ಟ ವಿಷಯಗಳಿಂದಾಗಿ ಧ್ಯೇಯಧೋರಣೆಗಳಿಂದಾಗಿ ಕೆಲವು ಪತ್ರಿಕೆಗಳು ಅಪೂರ್ವವೆನಿಸಿದುವು. ವಿಚಾರ ಜಾಗ್ರತಿಯಲ್ಲಿ ಆದ್ಯತನ ತೋರಿದ ೧೯ನೇ ಶತಮಾನದ 'ಮೈಸೂರು ವೃತ್ತಾಂತಬೋಧಿನಿ' 'ಚಂದ್ರೋದಯ' (ಧಾರವಾಡ), 'ಕನ್ನಡ ಸುವಾರ್ತೆ' (ಮುಂಬಯಿ) ಇವನ್ನು ಕಳೆದುಕೊಂಡಿದ್ದೇವೆ. ಈ ಶತಮಾನದಲ್ಲಿಯೇ ಬಿ. ಎನ್. ಗುಪ್ತರು ನಡೆಸುತ್ತಿದ್ದ ಆರಂಭದ 'ಪ್ರಜಾಮತ'ದ ಸಂಪುಟಗಳು ಎಲ್ಲಿವೆ? ಬೆಳ್ಳಿಯಪ್ಪನವರ 'ಕೊಡಗು' ದೊರೆಯುವುದೆ? ಅದರಂತೆ ತಿ. ತಾ. ಶರ್ಮರ 'ವಿಶ್ವಕರ್ಣಾಟಕ'? ಶಿಶುಸಾಹಿತ್ಯಪ್ರೇತರಾದ ಹೊಯ್ಸಳರು ಹೊರಡಿಸುತ್ತಿದ್ದ 'ಕನಕ', 'ಚಕ್ಕುಲಿ ಮಾಮ' - ಇವು ದೊರೆಯುವುದಂತಿರಲಿ, ಹೆಸರನ್ನು ಕೇಳಿದವರಾದರೂ ಎಷ್ಟು ಜನ? ಮೇಲರ್ಜೆಯ ಭಾರತೀಯ ಕಥೆಗಳನ್ನು ಪ್ರಕಟಿಸುತ್ತಿದ್ದ ಮುಂಬಯಿಯ 'ಭಾರತಿ' ಪತ್ರಿಕೆಯ ಸಂಚಿಕೆಗಳು? ಎಲ್ಲಿಲ್ಲಿಯೂ ದೊರೆಯವು.

ಕನ್ನಡ ನಾಡು, ನುಡಿ ಹಾಗೂ ಜನಜೀವನಕ್ಕೆ ಸಂಬಂಧಿಸಿದ ಯಾವುದೇ ಪ್ರಸಂಗಕ್ಕೆ ಅಮೂಲ್ಯ ಆಕರವೆನಿಸಿದ ಪತ್ರಿಕಾ ಸಮುದಾಯದ ಬಗೆ. ಈ ಅಲಕ್ಷ್ಯದ ಪರಿಸ್ಥಿತಿಯನ್ನು ಹಾಗೆ ಮುಂದುವರಿಯಗೊಟ್ಟರೆ ಇದ್ದವುಗಳೂ ನಿರ್ನಾಮವಾಗುವುದರಲ್ಲಿ ಸಂದೇಹವಿಲ್ಲ.

ಸುದೈವಕ್ಕೆ ನಾಲ್ಕಾರು ಜನ ಉತ್ಸಾಹಿಗಳು ಹಳೆಯ ಪತ್ರಿಕೆಗಳನ್ನು ಕಲೆಹಾಕಿ, ಆಗಾಗ ಪ್ರದರ್ಶಿಸುತ್ತಿದ್ದರು. ಕೆಲವರಾದರೂ ಹಳೆಯುಳಿಕೆಗಳ ಪ್ರೇಮಿಗಳು ತಮಗೆ ದೊರೆತಷ್ಟು ಪತ್ರಿಕೆಗಳ ಸಂಪುಟಗಳನ್ನು ಕಾಯ್ದಿರಿಸಿಕೊಂಡಿದ್ದಾರೆ. ಹಲವು ಲೈಬ್ರರಿಗಳಲ್ಲಿಯೂ ಅಷ್ಟಿಷ್ಟು ಪತ್ರಿಕಾ ಸಂಪುಟಗಳು ಇದ್ದೇ ಇವೆ. ವಿದೇಶಗಳ ಲೈಬ್ರರಿಗಳಲ್ಲಿ ಸುಮಾರು ೬೦ ಪತ್ರಿಕಾ ಸಂಪುಟಗಳು ಕಾಯ್ದಿರಿಸಲ್ಪಟ್ಟಿವೆ. ಹೀಗೆ ಪತ್ರಿಕಾ ವಿವರಗಳನ್ನು ಕ್ರೋಡೀಕರಿಸಿ, ಇದುವರೆಗಿನ ಕನ್ನಡ ಪತ್ರಿಕೆಗಳು ಯಾವ ಯಾವವು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಬೇಕೆಂದು ನಮಗೆ ತೋಚಿತು.

## ಕನ್ನಡ ಪತ್ರಿಕಾಭಿಸರಣ ಸಂಸ್ಥೆ

ಈ ಹಿನ್ನೆಲೆಯಲ್ಲಿ ಪತ್ರಿಕಾ ಪ್ರಪಂಚದ ಕುಲಗೋತ್ರವನ್ನು ಕಂಡುಹಿಡಿಯುವುದಕ್ಕಾಗಿ ೧೯೭೮ರಷ್ಟು ಹಿಂದೆ ಈ ಸಂಸ್ಥೆ ಅಸ್ತಿತ್ವದಲ್ಲಿ ಬಂತು. ಇದ್ದವರು ನಾಲ್ಕೇ ಜನ. ಶ್ರೀ ಮೋಹನ ಹೆಗಡೆ ಪ್ರಮುಖ ಸಂಗ್ರಹಕಾರರಿದ್ದಾಗ ಶ್ರೀ ಪಂಡಾರಿ ಚೆಲ್ಲಪನ್ ಜೊತೆಗೂಡಿದರು. ಶ್ರೀ ಬಿ. ಶ್ಯಾಮಸುಂದರರು ಸಹಾಯಕರಾದರು. ಡಾ. ಶ್ರೀನಿವಾಸ ಹಾವನೂರರು ಯೋಜನೆಯನ್ನು ರೂಪಿಸಿ ಇಡೀ ಕಾರ್ಯಕ್ರಮದ ನಿರ್ದೇಶನವನ್ನು ನಿರ್ವಹಿಸಿದರು. ಸದಸ್ಯರಾದ ನಾವು ಬೇರೆ ಬೇರೆ ಊರುಗಳಲ್ಲಿದ್ದವರಾದರೂ ಕಾಲಕಾಲಕ್ಕೆ ಭೆಟ್ಟಿಯಾಗಿ ವಿಚಾರ ವಿನಿಮಯ ಮಾಡುತ್ತಿದ್ದೆವು.

ಮೊದಲಿಗೆ ಆಗಬೇಕಾದದ್ದು ಪತ್ರಿಕೆಗಳ ಬಗೆಗಿನ ಮಾಹಿತಿ ಸಂಗ್ರಹ. ಪತ್ರಿಕೆಗಳ ಪ್ರದರ್ಶನಕಾರರಾಗಿದ್ದ ಮೇಗರವಳ್ಳಿಯ ಶ್ರೀ ಬಿ. ವಿ. ಮೂರ್ತಿ ಹಾಗೂ ಶ್ರೀ ಮೋಹನ ಹೆಗಡೆ ಇವರ ಸಂಗ್ರಹಗಳು ಈ ಕೆಲಸಕ್ಕೆ ಮೂಲಧನವಾಗಿ ಒದಗಿ ಬಂದುವು. ಶ್ರೀ ಪಂಡಾರಿ ಚೆಲಪನ್ ಅವರು ತಮಗೆ ದೊರೆತಂತೆಲ್ಲ ಪತ್ರಿಕಾ ಮಾಹಿತಿ ಕೊಡುತ್ತಾ ಹೋದರು. ನನ್ನಲ್ಲಿ ಇದ್ದ ಹಳೆಯ ಪತ್ರಿಕೆಗಳ ಮಾಹಿತಿಯನ್ನು ಸೇರಿಸಿಕೊಂಡೆವು. ಮಾಹಿತಿ ಕಲೆ ಹಾಕುವ ಕೆಲಸ ಏಳೆಂಟು ವರ್ಷದವರೆಗೆ ನಡೆಯಿತೆನ್ನಬೇಕು. ಪತ್ರಿಕಾ ಸಂಗ್ರಹಗಳಿರುವ ಸ್ಥಳಗಳಿಗೆ ಸ್ವತಃ ಹೋಗಿಯೋ, ಪತ್ರವ್ಯವಹಾರ ಮಾಡಿಯೋ - ಮಾಹಿತಿ ಸಂಗ್ರಹಿಸಲಾಯಿತು - ಹನಿಗೆ ಹನಿ ಕೂಡಿ ಹಳ್ಳವಾದಂತೆ.

ಅನಂತರದ ಮಹತ್ವದ ಕೆಲಸ, ಹೀಗೆ ದೊರೆತ ಸುಮಾರು ಎರಡು ಸಾವಿರ ಪತ್ರಿಕೆಗಳ ಮಾಹಿತಿಯನ್ನು ಕ್ರೋಡೀಕರಿಸಿ, ಒಂದು ಯುನಿಫಾರ್ಮ್ ನಮೂದಿನಲ್ಲಿ ಬರೆದು ತೆಗೆಯುವುದು. ಈ ಕೆಲಸವನ್ನು ಮೋಹನ ಹೆಗಡೆಯವರೊಬ್ಬರೇ ಎತ್ತಿಕೊಂಡು ಬರೆದು, ತೆಗೆದರು. ಅದರ ಆಧಾರದಿಂದ, ಕನ್ನಡ ಪತ್ರಿಕೋದ್ಯಮದ ಇತಿಹಾಸವನ್ನು, ತರಂಗದ ಆಗಿನ ಸಂಪಾದಕರಿದ್ದ ಶ್ರೀ ಸಂತೋಷಕುಮಾರ ಗುಲ್ವಾಡಿಯವರ ಕೇಳಿಕೆಯ ಮೇರೆಗೆ ಪ್ರಕಟಿಸಿದೆವು.

ಇನ್ನೀಗ ಪತ್ರಿಕಾ ಸೂಚಿಯ ಪ್ರಕಟನೆ ಆಗಬೇಕು. ಅದಕ್ಕಾಗಿ ಸಾಹಿತ್ಯ ಅಕಾಡೆಮಿ, ಪತ್ರಿಕಾ ಅಕಾಡೆಮಿ ಮುಂತಾದ ಸಂಸ್ಥೆಗಳಿಗೆ ಕೇಳಿಯಾಯಿತು. ಪತ್ರಿಕಾ ಅಕಾಡೆಮಿಗೆ ಶ್ರೀ ಜಿ. ನಾರಾಯಣರು ಅಧ್ಯಕ್ಷರಿದ್ದಾಗ ಇದರಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಈ ಬೃಹತ್ ಪ್ರಕಟಣೆಗೆ ಅಗತ್ಯವಾದ ಹೆಚ್ಚಿನ ಅನುದಾನಕ್ಕಾಗಿ ಸರಕಾರಕ್ಕೆ ಬರೆದರು (೧೯೯೨). ಇಂಥ ವಿಚಾರಗಳಲ್ಲಿ ವಿಧಾನಸೌಧದ ಗತಿ-ನಿಧಾನ ತಾನೇ. ಅಷ್ಟರಲ್ಲಿ ಅವರ ಅಧ್ಯಕ್ಷಾವಧಿ ಮುಗಿದುಬಿಟ್ಟಿತು. ಆಮೇಲೆ ಬಂದ ಅಧ್ಯಕ್ಷರುಗಳಾರೂ ಇದರ ಪ್ರಕಟನೆಗೆ ಆಸಕ್ತಿ ವಹಿಸಲಿಲ್ಲ. ಪ್ರಕಟನೆಯ ಯಾವುದೇ ಮಾರ್ಗ ತೋಚದೆ, ಇಷ್ಟು ವರ್ಷ ಪಟ್ಟ ಪರಿಶ್ರಮವೆಲ್ಲ ವ್ಯರ್ಥವಾಯಿತೆಂದು ಹತಾಶರಾದಾಗ -

ಈಗ ಮೂರು ವರ್ಷಗಳ ಹಿಂದೆ, ಮೈಸೂರು ವಿಶ್ವವಿದ್ಯಾನಿಲಯದ ಆಗಿನ ನಿರ್ದೇಶಕರಾದ ಡಾ. ಅರವಿಂದ ಮಾಲಗತ್ತಿಯವರಿಂದ ಅವಸರದ ಕರೆ. "ನಮ್ಮ ವಿ. ಸಿ. ಯವರು ಆದೇಶಿಸಿದ್ದಾರೆ: ನಿಮ್ಮ ಪತ್ರಿಕಾ ಸೂಚಿಯ ಹಸ್ತಪ್ರತಿಯನ್ನು ತೆಗೆದುಕೊಂಡು ಬನ್ನಿರಿ. ಪ್ರಸಾರಾಂಗದ ವತಿಯಿಂದ ಪ್ರಕಟಿಸುವೆವು."

ನನಗೆ ಆಶ್ಚರ್ಯವೋ ಆಶ್ಚರ್ಯ! ಆಗಲೇ ಹಸ್ತಪ್ರತಿಯನ್ನು ಕೊಟ್ಟುಬಿಟ್ಟಿದ್ದರೆ ಪತ್ರಿಕಾಸೂಚಿಯು ಪ್ರಕಟವಾಗಿ ಎರಡು ವರ್ಷಗಳೇ ಸಲ್ಲುತ್ತಿದ್ದವು. ಆದರೆ - ಹಸ್ತಪ್ರತಿ ಕೊಡದಿದ್ದುದರ ಕಾರಣ ಇದು:

ಪತ್ರಿಕೆಯ ಪೂರ್ಣ ಹಾಗೂ ಸರಿಯಾದ ಮಾಹಿತಿ ಕೊಡುವುದೇ ಆದರೆ, ಅದರ ಮೊದಲ ಸಂಚಿಕೆಯಿಂದ ಕೊನೆಯವರೆಗಿನ ಎಲ್ಲ ಸಂಚಿಕೆಗಳನ್ನು ನಾವು ನೋಡಬೇಕು. ಏಕೆಂದರೆ, ಆ ಪತ್ರಿಕೆ ಸಾಪ್ತಾಹಿಕವಾಗಿದ್ದು ಅದಾವಾಗಲೋ

ಮಾಸಪತ್ರಿಕೆಯಾಗಿರುತ್ತದೆ. ಸಂಪಾದಕರು ಬದಲಾಗಬಹುದು, ಸ್ಥಳವೂ ಸ್ಥಾನಾಂತರವಾಗಿರಬಹುದು. 'ಬಹುದು' ಅಲ್ಲ; ಏನಾದರೊಂದು ಮಾರ್ಪಾಟು ಆಗಿಯೇ ಇರುತ್ತದೆ. ಇತ್ತ ನಾವು ಒಂದೋ ಎರಡೋ ಸಂಚಿಕೆಯನ್ನೊ, ಸಂಪುಟವನ್ನೋ ಕಂಡು ಅಪ್ಪರ ಮೇಲಿಂದ ಆ ಪತ್ರಿಕೆಯ ಇತಿವೃತ್ತವನ್ನು ಬರೆಯಬೇಕು. ಮಾಹಿತಿಯು ಹೀಗೆ ಅರೆಬರೆಯಾಗುವುದಂತೂ ಸರಿಯೇ, ನಾವು ಎಷ್ಟೋ ಬಾರಿ ಪತ್ರಿಕೆಯ ಒಂದು ಸಂಚಿಕೆಯನ್ನೂ ಸಹ ಕಣ್ಣಾರೆ ನೋಡದೆ ಬೇರೆ ಆಕರಗಳ ಆಧಾರದಿಂದ ಪತ್ರಿಕೆಯ ದಾಖಲಾತಿ ಮಾಡಬೇಕಾದ ಪರಿಸ್ಥಿತಿ.. ( ಗ್ರಂಥಸೂಚಿಯ ಕಾರ್ಯ ಹಾಗೆ ಆಗಿಲ್ಲ, ಆ ಸಂಪಾದಕರು ಕಣ್ಣಾರೆ ನೋಡದೆ ಒಂದಾದರೂ ದಾಖಲೆಯನ್ನು ಸಿದ್ಧಪಡಿಸಿಲ್ಲ. )

ಪರಿಸ್ಥಿತಿ - ಹೀಗಿರುತ್ತ, ಈ ಎರಡು ವರ್ಷಗಳ ಕಾಲ ಶಕ್ಯವಿದ್ದಷ್ಟು ರಿಪೇರಿ ಮಾಡುವ, ತೇಪೆ ಹಚ್ಚುವ ಕೆಲಸ ನನ್ನದಾಯಿತು. ಪೂರ್ಣತಃ ತೃಪ್ತಿಕರವೆನಿಸಿರಲಿಲ್ಲ. ಇನ್ನೂ ಒಂದೆರಡು ವರ್ಷ ಮುಂದೂಡುತ್ತಿದ್ದೆವೇನೊ. ಅಷ್ಟರಲ್ಲಿ -

ಈಗಿನ ನಿರ್ದೇಶಕರಿಂದ ''ಯಾವಾಗ ಹಸ್ತಪ್ರತಿ ಕಳಿಸ್ತೀರಿ?'' ಎಂಬ ನೆನಪಿನ ದೂರವಾಣಿ ಬಂದಿತು. ಹೀಗಾಗಿ ಶಕ್ಯವಿದ್ದಷ್ಟು ಸರಿಪಡಿಸಿ, ಹಸ್ತಪ್ರತಿಯನ್ನು ಸಾದರಪಡಿಸಿದ್ದೇವೆ.

## ಸೂಚಿಯ ಸ್ವರೂಪ

ಇದರಲ್ಲಿ ೧೮೪೩ರಿಂದ ೧೯೭೭ರ ವರೆಗೆ, ಆರಂಭಿಸಲ್ಪಟ್ಟ ಪತ್ರಿಕಾ ವಿವರಗಳು ಮಾತ್ರ ಇವೆ. ಹತ್ತು ವರ್ಷಗಳ ಹಿಂದೆ ಈ ಕೆಲಸ ಮುಗಿಯುತ್ತ ಬಂದಾಗ ೧೯೯೩ರ ವರೆಗಿನ ಪತ್ರಿಕೆಗಳನ್ನು ಗಣನೆಗೆ ತೆಗೆದುಕೊಂಡಿದ್ದೆವು. ಆದರೆ ಈಚೆಗೆ ಗ್ರಾಮಾಂತರ ಮಟ್ಟದಲ್ಲಿ ಅನೇಕ ಪತ್ರಿಕೆಗಳು ಜನ್ಮ ತಾಳುವುದು, ಸರಕಾರೀ ಜಾಹೀರಾತುಗಳು ನಿಂತೊಡನೆ ಪತ್ರಿಕೆಯನ್ನು ನಿಲ್ಲಿಸಿಬಿಡೋದು - ಇದೊಂದು ಉಪಕ್ರಮ ಕಂಡುಬಂತು. ಮೇಲಾಗಿ ಪ್ರೆಸ್ ಕೌನ್ಸಿಲಿನಿಂದ ಆ ಸಮಕಾಲೀನ ಪತ್ರಿಕೆಗಳ ಬಗ್ಗೆ ಮಾಹಿತಿ ಹೇಗೂ ಸಿಗುತ್ತದೆ ಎಂಬ ಕಾರಣದಿಂದ ೧೯೭೭ರ ವರೆಗಿನವನ್ನು ಮಾತ್ರ ಇಲ್ಲಿ ದಾಖಲಿಸಿದ್ದೇವೆ.

'ತಪ್ಪುಗಳೇನಾದರೂ ಇದ್ದರೆ, ದಯವಿಟ್ಟು ತಿಳಿಸುವುದು' ಎಂಬುದು ಲೇಖಕರಾದವರ ಮಾಮೂಲಿಯ ಮಾತು. ಇಲ್ಲಿ ಆದದ್ದು ಸಾಮಾನ್ಯ ತಪ್ಪುಗಳಲ್ಲ, ಗಂಭೀರ ಸ್ವರೂಪದವು; ನಾವಿಲ್ಲಿ ಕೊಟ್ಟಿರುವ ವರ್ಷಗಳಲ್ಲಿ, ಸಂಪಾದಕ ಮುಂತಾದವರ ಹೆಸರು ಕೊಡುವಲ್ಲಿ ಹೆಚ್ಚು ಕಡಿಮೆಯಾಗಿರಬಹುದು. ''ಹೆಚ್ಚಿನ ಮಾಹಿತಿ''ಯ ಸದರಿನಲ್ಲಿ ಮಹತ್ವದ ಅಂಶವನ್ನು ಕೊಡದೇ ಇರಬಹುದು. ಆದರೆ ಅದು ಅನಿವಾರ್ಯವಾಗಿತ್ತು. ಮಾಹಿತಿ ಪೂರ್ಣ ದೊರೆಯದ್ದರಿಂದ; ಹಾಗೂ ಎಷ್ಟೋ ಸಲ ಬೇರೆಯವರು ಪೂರೈಸದ ಮಾಹಿತಿಯಾದ್ದರಿಂದ ನಾವು ಅಪೂರ್ಣ ಹಾಗೂ ಅರೆಬರೆಯಾದ ರೀತಿಯಲ್ಲಿ ಪತ್ರಿಕಾ ಮಾಹಿತಿಯನ್ನು ಕೊಡುವಂತಾಯಿತಲ್ಲ! ಇದಕ್ಕಾಗಿ ನಾವು ಕ್ಷಮೆ ಕೇಳಬೇಕಾದದ್ದು–ಪ್ರಸಾರಾಂಗದವರಲ್ಲಿ. ಗ್ರಂಥಗಳ ಸೂಚಿಯನ್ನು ಚೊಕ್ಕಟವಾಗಿ ತಂದಿರುವಾಗ ಪತ್ರಿಕಾ ಸೂಚಿ ಹೀಗಾಗಿರುವುದು ನಮಗೇ ಬೇಸರ ಮೂಡಿದೆ.

ಎಷ್ಟೋ ಪತ್ರಿಕೆಗಳ ಬಗ್ಗೆ ಅಪೂರ್ಣ ಮಾಹಿತಿ ಇರುವುದರಿಂದ, ಈ ಸಂಕಲನಕ್ಕೆ ಬೇರೊಂದು ರೀತಿಯಲ್ಲಿ ಪರಿಪುಷ್ಟತೆ ಬರಲೆಂದು, ಪತ್ರಿಕಾ ಪ್ರಪಂಚಕ್ಕೆ ಸಂಬಂಧಿಸಿದ ಲೇಖಗಳನ್ನು ಎರಡನೆಯ ಭಾಗವಾಗಿ ಕೊಟ್ಟಿದೆ. ಇವನ್ನು ಒಂದು ಕ್ರಮವಿರಿಸಿಕೊಂಡು ಆಯ್ದಿಲ್ಲ. ಅದರಿಂದ ನಮ್ಮ ಪತ್ರಿಕಾರಂಗದ ಸಮಗ್ರ ಚಿತ್ರಣವೇನೂ ದೊರೆಯುವುದಿಲ್ಲ. ಅದೊಂದು ಇಣುಕು ನೋಟವೆಂದು ಬಗೆಯತಕ್ಕದ್ದು. ಅಲ್ಲದೆ ಪತ್ರಿಕೆಗಳನ್ನು, ಪತ್ರಿಕೋದ್ಯಮವನ್ನು ಕುರಿತು ಲೇಖಕರು ಬರೆದ ಮನನೀಯ ಲೇಖನಗಳು ತುಂಬಾ ಚದರಿಹೋಗಿದ್ದು ಕೆಲವನ್ನಾದರೂ ಇಲ್ಲಿ ಹಿಡಿದಿಡುವ ಪ್ರಯತ್ನ ಇದಾಗಿದೆ.

ಇನ್ನು ಉಳಿದದ್ದು ಉಪಕಾರ ಸ್ಮರಣೆ. ದೀರ್ಘಕಾಲದ ಈ ಯೋಜನೆಯಲ್ಲಿ, ಸಣ್ಣ ದೊಡ್ಡ ಪ್ರಮಾಣದಲ್ಲೇ ಇರಲಿ, ಅನೇಕಾನೇಕ ಜನ ನೆರವಾಗಿದ್ದಾರೆ. ಅವರ ಹೆಸರುಗಳೂ ನಮ್ಮ ನೆನಪಿನಲ್ಲಿವೆ. ಯಾದಿ ದೊಡ್ಡದಾಗುವುದರಿಂದ ಅವರ ಹೆಸರುಗಳನ್ನು ಉಲ್ಲೇಖಿಸಹೋಗದೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

೩೬, ವಿನಾಯಕ ಲೇಔಟ್,
ವಿಜಯನಗರ ೩ನೇ ಹಂತ,
ಬೆಂಗಳೂರು-೪೦
ದೂರವಾಣಿ: ೩೩೮೪೩೯೯

ಶ್ರೀನಿವಾಸ ಹಾವನೂರ
( ಪತ್ರಿಕಾಭಿಸರಣ ಸಂಸ್ಥೆಯ ಸದಸ್ಯರ ಪರವಾಗಿ )

# ಪ್ರಮುಖ ವಿಷಯಗಳು

ಅರವಿಂದ ಪ್ರಣಾಲಿ
ಆಯುರ್ವೇದ
ಆರೋಗ್ಯ
ಆರ್ಥಿಕ
ಆರ್ಯವೈಶ್ಯ
ಈಡಿಗ ಜನಾಂಗ
ಉದ್ಯಮ/ವಾಣಿಜ್ಯ
ಉಳಿತಾಯ
ಏಲಕ್ಕಿ ಕೃಷಿ

ಕಬ್ಬಿಣದ ಉದ್ಯಮ
ಕಮ್ಯುನಿಸ್ಟ್
ಕಲೆ/ಸಮ್ಮಿಶ್ರ
ಕಾನೂನು
ಕಾರ್ಮಿಕ ವರ್ಗ
ಕುಂಚಟಿಗ ಜನಾಂಗ
ಕುರುಬ ಜನಾಂಗ
ಕೃಷಿ
ಕ್ರೈಸ್ತ
ಖಾದಿ
ಗಾಂಧೀ ವಿಚಾರ
ಗೋರಕ್ಷಣೆ
ಗ್ರಂಥಾಲಯ
ಗ್ರಾಮಾಭಿವೃದ್ಧಿ

ಚಲನಚಿತ್ರ
ಜಾನಪದ
ಜಿಲ್ಲಾಭಿವೃದ್ಧಿ
ಜೇನು ವ್ಯವಸಾಯ
ಜೈನಧರ್ಮ
ಡೈಜೆಸ್ಟ್
ದಲಿತ ವರ್ಗ
ದೇವಾಂಗ ಸಮಾಜ
ದೇವಾಡಿಗ ಜನಾಂಗ
ದ್ವೈತಮತ
ಧಾರ್ಮಿಕ
ನಗರಾಭಿವೃದ್ಧಿ

ಪತ್ರಿಕೋದ್ಯಮ
ಪ್ರಚಾರ ಕಾರ್ಯ
ಬಾಲಸಾಹಿತ್ಯ
ಮತ್ಸ್ಯೋದ್ಯಮ
ಮಹಿಳಾ ಪ್ರಗತಿ
ಮುಸ್ಲಿಮ್

ಯಕ್ಷಗಾನ
ಯುವಜನಾಂಗ
ರಂಗಭೂಮಿ
ವಿಜ್ಞಾನ
ವಿನೋದ ಸಾಹಿತ್ಯ
ವಿಶ್ವಕರ್ಮ ಜನಾಂಗ
ವೀರಶೈವ
ಶಿಕ್ಷಣ
ಶ್ರೀವೈಷ್ಣವ
ಸಂಗೀತ
ಸಂಶೋಧನೆ
ಸನಾತನಧರ್ಮ
ಸಮ್ಮಿಶ್ರ
ಸರ್ವೋದಯ ವಿಚಾರ
ಸಹಕಾರ ತತ್ವ
ಸಾಮಾಜಿಕ
ಸಾಹಿತ್ಯ
ಸಾಹಿತ್ಯ/ಸಮ್ಮಿಶ್ರ
ಸ್ವಕುಲ ಸಾಳಿಸಮಾಜ
ಸ್ಥಾನಿಕ ಸ್ವರಾಜ್ಯ
ಸೋವಿಯತ್ ಸಮಾಚಾರ
ಸೋಮವಂಶ ಆರ್ಯಕ್ಷತ್ರಿಯ
ಸುದ್ದಿ
ಸುದ್ದಿ/ಸಮ್ಮಿಶ್ರ
ಸ್ಕೌಟ್ ಮತ್ತು ಗೈಡ್ಸ್
ಹರಿದಾಸ ಸಾಹಿತ್ಯ
ಹರಿಜನ ಅಭ್ಯುದಯ
ಹವ್ಯಕ ಸಮಾಜ
ಹಿಂದಿ ಪ್ರಚಾರ
ಹೊರನಾಡು

# ಕನ್ನಡ ಪತ್ರಿಕೋದ್ಯಮದ ಇತಿಹಾಸ

- ಡಾ. ಶ್ರೀನಿವಾಸ ಹಾವನೂರ

ಕನ್ನಡದ ಪ್ರಪ್ರಥಮ ಪತ್ರಿಕೆ 'ಮಂಗಳೂರು ಸಮಾಚಾರ' ಎನುವುದು ನಿರ್ವಿವಾದದ ಮಾತಾಗಿದೆ. ಅದರ ಒಂದು ಪ್ರತಿಯನ್ನು ಲಂಡನ್ನಿನ ಬ್ರಿಟಿಶ್ ಲೈಬ್ರರಿಯಿಂದ ತರಿಸಿಕೊಂಡು ೧೯೭೫ರ ಮೇ ತಿಂಗಳ 'ಕಸ್ತೂರಿ'ಯಲ್ಲಿ ಲೇಖವನ್ನು ಬರೆದೆ. ಹರ್ಮನ್ ಮೊಗಿಂಗ್ ಎಂಬ ಬಾಸೆಲ್ ಮಿಶನರಿಯು ಪ್ರಕಟಿಸಿದ ಅದರ ವರ್ಷ ೧೮೪೩. ಅಂದಿನಿಂದ ಇಂದಿನವರೆಗೆ ೨೪೦೦ಕ್ಕೆ ಮೇಲಟ್ಟು ಪತ್ರಿಕೆಗಳು ಹೊರಟಿವೆ. ಪ್ರಾಯಶಃ ಇಪ್ಪತ್ತು ಸಾವಿರಕ್ಕೂ ಮಿಕ್ಕಿದ ಜನ ಈ ಪತ್ರಿಕೋದ್ಯಮದಲ್ಲಿ ತೊಡಗಿಸಿಕೊಂಡಿರಲು ಸಾಕು. ಅವುಗಳಲ್ಲಿ ಬಂದ ವಿಷಯಗಳೋ, ಜಾಗತಿಕ ಮಟ್ಟದ ಒಂದು ಬೃಹತ್ ವಿಶ್ವಕೋಶ ಸಂಪುಟಗಳಲ್ಲಿಯ ವಿಷಯಗಳನ್ನು ಮೀರಿಸುವಂತಿದೆ. ಯಾವುದೊಂದು ಚಿಕ್ಕ ವಿಷಯದ ಬಗ್ಗೆ ಒಂದಾದರೂ ಕನ್ನಡದಲ್ಲಿ ಪುಸ್ತಕವೊಂದು ಇದಿರಲಿಕ್ಕಿಲ್ಲ. ಪತ್ರಿಕೆಯಲ್ಲಿ ಆ ಕುರಿತ ಲೇಖನ ಬಂದೇ ಇರುತ್ತದೆ.

ಇದಕ್ಕಿಂತ ಮುಖ್ಯವಾಗಿ ಕಳೆದ ನೂರೈವತ್ತು ವರ್ಷಗಳಲ್ಲಿ ಸಾಗಿ ಬಂದ ನಮ್ಮ ಬದುಕಿನ ಬಗೆಯನ್ನು, ಅದರ ವಿಕಾಸವನ್ನು ಪತ್ರಿಕೆಗಳಲ್ಲಿ ಸುಸ್ಪಷ್ಟವಾಗಿ ಕಾಣಬಲ್ಲೆವು. ಈ ನಮ್ಮ ಪತ್ರಿಕೆಗಳಲ್ಲಿ ಬಂದ ವಿಷಯಗಳನ್ನು ಹೀಗೆ ವರ್ಗೀಕರಿಸಬಹುದು: ವಾರ್ತಿಕ, ವೈಚಾರಿಕ ಹಾಗೂ ಮನೋರಂಜಕ. ಇದೇನೂ ಕಟ್ಟುನಿಟ್ಟಾದ ವಿಭಾಗವಲ್ಲ. ಪತ್ರಿಕೆಯೊಂದು ವಾರ್ತಿಕ ಮತ್ತು ಮನೋರಂಜಕ – ಇವೆರಡೂ ಅಂಶಗಳನ್ನು ಒಳಗೊಂಡಿರಬಹುದು. ಕೆಲವು ಮೂರೂ ಅಂಶಗಳನ್ನು ಹೊಂದಿರಬಹುದು.

ವಾರ್ತಿಕ ಅಥವಾ ವಾರ್ತಾ ಪತ್ರಿಕೆಗಳಲ್ಲಿ ದೇಶ ವಿದೇಶಗಳ ಸುದ್ದಿಗಳಿಗೆ ಪ್ರಧಾನತೆ. ಅದರಂತೆ ಸ್ಥಳೀಯ ಹಾಗೂ ಸ್ವಂತದ ಸುದ್ದಿಗಳಷ್ಟನ್ನೇ ಒಳಗೊಂಡಿರಬಹುದು. ವೈಚಾರಿಕ ಪತ್ರಿಕೆಗಳ ಸಂಖ್ಯೆಯೇ ಬಲು ದೊಡ್ಡದು. ಭಾಷೆ, ಸಾಹಿತ್ಯ, ಕಲೆ, ಧರ್ಮ, ಇತಿಹಾಸ, ಶಿಕ್ಷಣ, ಸಾಮಾಜಿಕ ಅಂಶಗಳು, ವಿಜ್ಞಾನ – ಇವೇ ಮುಂತಾದುವುಗಳ ಪ್ರಸ್ತಾವ ಇವುಗಳಲ್ಲಿ ಇರುತ್ತದೆ. ಆದರೆ ಪ್ರಸಾರದ ದೃಷ್ಟಿಯಿಂದ ವಾರ್ತಾಪತ್ರಿಕೆಗಳದೇ ಮೇಲುಗೈ. ಅವರ ಅನಂತರದ್ದು ಮನೋರಂಜಕ – ಎಂದರೆ ಲಲಿತ ಸಾಹಿತ್ಯ, ಚಲನಚಿತ್ರ, ಹಾಸ್ಯ, ಪ್ರಬಂಧ ಮುಂತಾದ್ದನ್ನು ಒಳಗೊಂಡಿರುವಂಥವು. ಈ ವಿಭಾಗೀಯ ಪರಿಜ್ಞಾನವು, ಪತ್ರಿಕೆಗಳ ಸ್ವರೂಪ ಹಾಗೂ ಸಾಧನೆಗಳನ್ನು ತಿಳಿದುಕೊಳ್ಳುವುದಕ್ಕೆ ಸಹಾಯವಾಗುತ್ತದೆ.

ಇನ್ನು ಕಾಲಮಾನದ ದೃಷ್ಟಿಯಿಂದ ಪತ್ರಿಕಾ ಚರಿತೆಯಲ್ಲಿ ಮೂರು ಘಟ್ಟಗಳನ್ನು ಗುರುತಿಸಬಹುದು. ಮೊದಲಿನದು ಪ್ರಾರಂಭದ ಹಾಗೂ ಪ್ರಯೋಗಶೀಲತೆಯ ಕಾಲ, ಎಂದರೆ ೧೮೪೩ರಿಂದ ೧೯೨೦ರ ವರೆಗಿನದು. ಅನಂತರದ್ದು ಸ್ವಾತಂತ್ರ್ಯ ಹೋರಾಟದ, ತಾರುಣ್ಯದ ಹುಮ್ಮಸಿನ ಕಾಲ (೧೯೨೦ - ೧೯೪೭). ಕೊನೆಯದು ಸ್ವಾತಂತ್ರ್ಯಾ ನಂತರದ, ವಿಸ್ತಾರ, ವೈವಿಧ್ಯಗಳಿಂದ ಕೂಡಿದ ಪ್ರೌಢ ಕಾಲ. ಈಚಿನ ಬೆಳವಣಿಗೆ ಜನಕ್ಕೆ ಪರಿಚಿತವಾದ್ದರಿಂದ ೧೯೭೦ರ ದಶಕದ ವರೆಗಿನ ಅವಧಿಗೆ ಈ ಹೆಜ್ಜೆ ಗುರುತುಗಳನು ಸೀಮಿತಗೊಳಿಸೋಣ.

## ಪ್ರಥಮ ಘಟ್ಟ

ಪ್ರಯೋಗಶೀಲತೆ ಕನ್ನಡದ ಪ್ರಥಮ ಪತ್ರಿಕೆಯಲ್ಲೇ ಕಂಡುಬರುತ್ತದೆ. ಹಾಗಲ್ಲವಾದರೆ ಮಂಗಳೂರಿನ ಸಮಾಚಾರವನ್ನು ಕೊಡಲೆಂದು ಹೊರಟ ಪತ್ರಿಕೆಯಲ್ಲಿ, 'ಸರ್ವರಾಜ್ಯ ವರ್ತಮಾನಗಳು, ಸಾಮತಿಗಳು, ದಾಸರ ಪದಗಳು' – ಇವೆಲ್ಲ ಯಾಕೆ ಬೇಕಾಗಿದ್ದುವು? ಭಾರತದ ಜನಸಂಖ್ಯೆ, ಇಂಗ್ಲೆಂಡ್ ರಾಜ್ಯದ ಆದಾಯ-ವೆಚ್ಚ, ಚೀನಾ ದೇಶದಲ್ಲಿ ನಡೆದ ಯುದ್ಧ – ಈ ಸುದ್ದಿ – ಮಾಹಿತಿಗಳೂ ಮಂಗಳೂರಿನ ಜನರಿಗೆ ಉಪಯೋಗಕ್ಕೆ ಬಿದ್ದಾವೆಂದು ಸಂಪಾದಕ ಮೊಗಿಂಗನಿಗೆ ತೋಚಿತು. ಮತ್ತದು ನಿಜವೂ ಆಯಿತು. ಆ ಕಾರಣದಿಂದ ಅದನ್ನು ವಿಸ್ತಾರಗೊಳಿಸಬೇಕೆಂದು ನಿರ್ಧರಿಸಿದನು:

"ಈ ದೇಶಸ್ಥರಲ್ಲಿ ಅನೇಕರಿಗೆ ಕನ್ನಡು ಭಾಷೆಯಲ್ಲಿ ಬರೆದ ಸಮಾಚಾರವನ್ನು ಓದುವವರಲ್ಲಿ ಮತಿ ಆಗುವದೆಂದು ನೋಡಿ ಸಂತೋಷದಿಂದ ಅದನ್ನು ನವಿ ಮಾಡುವ ಪ್ರಯತ್ನದಿಂದ ಇನ್ನು ಮುಂದೆ ಕಲಿನಲ್ಲಿ ಛಾಪಿಸದೆ ಬಳ್ಳಾರಿಯಲ್ಲಿ ಇರುವ ಅಕ್ಷರ ಛಾಪಶಾಸೆಯಲ್ಲಿ ಅಚ್ಚುಪಡಿ ಮಾಡಲಿಕ್ಕೆ ನಿಶ್ಚೈಸಿದೇವೆ... ಅದರಿಂದ ಮೊದಲಿನ ಎರಡು ಪಟ್ಟು ಬರಹ ಹಿಡಿಯುವುದರಿಂದ ಹೆಚ್ಚು ವರ್ತಮಾನವನ್ನೂ ಚರಿತ್ರೆಗಳನ್ನೂ ವಿದ್ಯಾಪಾಠಗಳನ್ನೂ ಬುದ್ಧಿ ಮಾತುಗಳನ್ನೂ ಬರಿಯುವುದಕ್ಕೆ [illegible]"

ಮೊಗ್ಲಿಂಗ್ ತನ್ನ ಜೀವನದಲ್ಲಿ ಇನ್ನೂ ಹಲವು ಪ್ರಯೋಗಗಳನ್ನು ಮಾಡಿದಾನೆ. ಉದಾ: ಕನ್ನಡ ಲಿಪಿ ಸುಧಾರಣೆ. ಇದರಲ್ಲಿ ಅಯಶಸ್ವಿಯಾದಂತೆ ತನ್ನ ಪತ್ರಿಕೆಯನ್ನು 'ಕಂನಡ ಸಮಾಚಾರ'ವೆಂದು ವಿಸ್ತರಿಸ ಹೋದಾಗಲೂ ಅಯಶಸ್ವಿಯಾದನು. ಕೆಲ ಕಾಲದ ಮೇಲೆ ಮತ್ತೊಂದು ಪತ್ರಿಕೆಯನ್ನು, ಆಮೇಲೆ ಮತ್ತೂ ಒಂದನ್ನು ಹೊರತಂದನು. ಆದರೆ ಒಂದೂ ಮುಂದುವರೆಯಲಿಲ್ಲ.

ಮೊತ್ತಮೊದಲಿನ ಸಣ್ಣ ಕತೆಯನ್ನು ಪಂಜೆಯವರೋ, ಎಂ. ಎನ್. ಕಾಮತರೋ ಬರೆದರೆಂದು ಹೇಳುತ್ತೇವೆ. ಆದರೆ 'ಸಣ್ಣ ಕತೆಯ ಜನಕ' ಎಂದು ಮಾಸ್ತಿಯವರನ್ನೆ ಲೆಕ್ಕಕ್ಕೆ ಹಿಡಿಯುತ್ತೇವೆ. ಕಾರಣವೆಂದರೆ ಆ ಮುನ್ನಿನವರದು ಬಿಡಿ ಪ್ರಯತ್ನಗಳು. ಮಾಸ್ತಿಯವರು ಸಣ್ಣ ಕತೆಯ ಪರಂಪರೆಯನ್ನು ಆರಂಭಿಸಿ, ಮುಂದುವರಿಸಿದವರು. ಇದೇ ಸಾದೃಶ್ಯ ಆರಂಭದ ಏಳೆಂಟು ಪತ್ರಿಕೆಗಳಿಗೂ ಅನ್ವಯಿಸುವುದು. ಹಾಗೆ ಪತ್ರಿಕಾ ವ್ಯವಸಾಯವನ್ನು ನಿಯಮಿತಗೊಳಿಸಿದವರು–ಭಾಷ್ಯಂ ಕುಟುಂಬದವರು–ತಮ್ಮ ವಾರಪತ್ರಿಕೆ 'ಮೈಸೂರು ವೃತ್ತಾಂತ ಬೋಧಿನಿ'ಯ ಮೂಲಕ (೧೮೫೯). ಈ ಪತ್ರಿಕೆ ಐದು ವರ್ಷ ಕಾಲ ನಡೆದುಕೊಂಡು ಬಂದಿತೆಂದು ಡಿ.ವಿ.ಜಿ. ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ಜ್ಞಾಪಿಸಿಕೊಂಡಿದ್ದಾರೆ. ಇದರ ಸಂಪಾದಕ/ಪ್ರಕಾಶಕರು ಭಾಷ್ಯಂ ತಿರುಮಲಾಚಾರ್ಯ ಮತ್ತು ಭಾಷ್ಯಾಚಾರ್ಯರು (ತಂದೆ-ಮಗ). ಅವರಿಗೆ ಮುಮ್ಮಡಿ ಕೃಷ್ಣರಾಜರು ಮೂರು ಸಾವಿರ ರೂಪಾಯಿಗಳ ಧನ ಸಹಾಯ ಮಾಡಿದರು. 'ಪತ್ರಿಕೆ' ಎನ್ನುವುದು ಒಂದು ಹೊಸ ಉಪಕ್ರಮವಾಗಿ ಮುಮ್ಮಡಿಯವರಿಗೆ ತೋಚಿದ್ದುದು ಗಣನೀಯವಾದದು. ಆಮೇಲೆ 'ಮೈ. ವೃ. ಬೋಧಿನಿ'ಯ ಬದಲಿಗೆ 'ಕರ್ನಾಟಕ ಪ್ರಕಾಶಿಕಾ' ಎಂಬ ಪಕ್ಷಪತ್ರಿಕೆಯನ್ನು ಆರಂಭಿಸಿದರು (೧೮೬೫). ಮೂರು-ನಾಲ್ಕು ವರ್ಷಗಳಾದ ಮೇಲೆ ಅದು ಸ್ಥಗಿತಗೊಂಡಿತು. ಭಾಷ್ಯಂ ಪರಿವಾರ ಅಲ್ಲಿಗೆ ಬಿಡದೆ ೧೮೭೫ರಿಂದ ಅದನ್ನು ವಾರಪತ್ರಿಕೆಯಾಗಿ ನಡೆಸಿಕೊಂಡು ಹೋದರು. ಪತ್ರಿಕೆ ಎಂಬುದನ್ನು ಜನಮನದಲ್ಲಿ ರೂಢಿಸಿದರು. ಹಾಗೆಂದೇ ನಾವು ಅವರನ್ನು 'ಕನ್ನಡ ಪತ್ರಿಕಾ ಪಿತಾಮಹ'ರೆಂದು ಕರೆಯತಕ್ಕದ್ದು.

'ಮೈಸೂರು ವೃತ್ತಾಂತ ಬೋಧಿನಿ'ಯು ಹಳೆಯ ಮೈಸೂರಿನ ಮಟ್ಟಿಗೆ ಆದ್ಯ ಪತ್ರಿಕೆ. ೧೮೫೭ರ ಸ್ವಾತಂತ್ರ್ಯದ ವಿಪ್ಲವ ಮುಗಿದ ಅನಿತರಲ್ಲಿಯೇ ಈ ಪತ್ರಿಕೆ ಹೊರಟಿತು. ಹೀಗಾಗಿ ಹೇಳಬೇಕೆಂದಿದ್ದುದನ್ನು ಧೈರ್ಯದಿಂದ ಹೇಳುವ ಮನೋಭಾವ ಅಲ್ಲಿ ಕಂಡುಬರುತ್ತದೆ. ಅದರ ಮೊದಲ ಸಂಚಿಕೆಯಲ್ಲಿ "ನಾವು ನಿಜವನ್ನು ನುಡಿಯುತ್ತೇವೆ. ನಿಜವನ್ನು ಕೇಳಲು ಅಪೇಕ್ಷಿಸುತ್ತೇವೆ. ನಿಜವನ್ನು ನಂಬುತ್ತೇವೆ" ಎಂಬ ಧ್ಯೇಯವಾಕ್ಯ ಇದ್ದದ್ದು ಗಮನಾರ್ಹ. ಜತೆಗೆ ಜನಹಿತ ದೃಷ್ಟಿ ಓತಪ್ರೋತವಾಗಿ ಇದ್ದಿತು. "ಬೆಂಗಳೂರ ಪಟ್ಟಣಿನೊಳಗೆ ಕೆಲವು ದೊಡ್ಡ ಬೀದಿಗಳು ವಿನಾ ಸಣ್ಣ ಸಂದುಗಳೆಲ್ಲದರಲ್ಲಿಯೂ ಕೆಂಪೇಗೌಡನ ಕಾಲದ ಕಲ್ಲುಲ್ಲವೆಲ್ಲವೂ ಭದ್ರಪಡಿಸಲ್ಪಟ್ಟಿದೆ. ಅವುಗಳನ್ನು ಕ್ರಮಪಡಿಸದೇ ಇರುವುದನ್ನು ಕುರಿತು ನಾವೆಷ್ಟೋ ಸಲ ಮುನಿಸಿಪಾಲಿಟಿಯವರಿಗೆ ತಿಳಿಸಿದೆವು ..."

'ಬೋಧಿನೀ' ಹಾಗೂ 'ಪ್ರಕಾಶಿಕೆ' ಇವೆರಡೂ ಪತ್ರಿಕೆಗಳಲ್ಲಿ ಟೀಕೆ ಟಿಪ್ಪಣಿಗಳು ಯಥೇಚ್ಛವಾಗಿ ಕಾಣಿಸಿಕೊಳ್ಳುತ್ತಿದ್ದವು. 'ಸಂಪಾದಕೀಯ' ಲೇಖನ ನಿಯಮಿತವಾಗಿ ಪ್ರಕಟವಾಗುತ್ತಿತ್ತು. 'ಇಂಡಿಯಾ ಮಿತ್ರ' ಎಂಬ ಕಲಕತ್ತೆಯ ಪತ್ರಿಕೆಯವರು ಮೈಸೂರಿನ ಆಡಳಿತವನ್ನು ಟೀಕಿಸಿ ಬರೆದಿದ್ದರೆಂದು ಕಾಣುತ್ತದೆ. ಭಾಷ್ಯಂ ಅದಕ್ಕೆ ಪ್ರತ್ಯುತ್ತರ ಕೊಟ್ಟದ್ದುಂಟು 'Bangalore Spectator' ಎನ್ನುವ ಆಂಗ್ಲ ಪತ್ರಕರ್ತರೂ 'ಕರ್ನಾಟಕ ಪ್ರಕಾಶಿಕಾ'ದವರೂ ಆಗಾಗ ಆರೋಪ–ಪ್ರತ್ಯಾರೋಪಗಳಲ್ಲಿ ತೊಡಗಿದ್ದುದನ್ನು ಗುರುತಿಸಬಲ್ಲೆವು.. ಸುದೈವಕ್ಕೆ ಈ ಪತ್ರಿಕೆಗಳ ಕೆಲವು ಸಂಪುಟಗಳು ಬೆಂಗಳೂರಿನ ಗೋಖಲೆ ಸಂಸ್ಥೆಯಲ್ಲಿಯೂ, ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿಯೂ ಇವೆ. ಅವುಗಳ ಪರಿಶೀಲನೆ ಮಾಡಿದಾಗ, ಅಂದಿನ ಜನತೆಯಲ್ಲಿ ಪತ್ರಿಕಾ ಪಜ್ಞೆ ಎಷ್ಟರಮಟ್ಟಿಗೆ ಬೆಳೆದಿತ್ತೆಂಬುದು ವ್ಯಕ್ತವಾಗುತ್ತದೆ. ಆಗೀಗ ಬೇರೆಯವರ ಪ್ರತಿಸಂದನದ ಲೇಖನಗಳೂ ಇರುತ್ತಿದ್ದವು. 'ಕರ್ನಾಟಕ ಪ್ರಕಾಶಿಕೆ'ಯಲ್ಲಿ 'ಬ್ರಾಹ್ಮಣರಿಗೆ ಸಮುದ್ರ ಯಾನವು ಶಾಸ್ತ್ರಾನುಗ್ರಹೀತವೋ?' ಎಂಬ ವಿಷಯವಾಗಿ ಸತತ ಮೂರು ತಿಂಗಳ ಕಾಲ ಲೇಖನಮಾಲೆಯೊಂದು ಪ್ರಕಟವಾಗಿದೆ. (ಡಿಸೆಂಬರ್ ೧೮೭೮-ಫೆಬ್ರವರಿ ೧೮೭೯). ಶಾಸ್ತ್ರಾಧಾರಗಳನ್ನು ಕೊಟ್ಟಾದ ಮೇಲೆ ಕೆಳಗಿನ ಈ ಎರಡು ಕಾರಣಗಳಿಂದ ಸಮರ್ಥಿಸಲಾಗಿದೆ. ಒಂದು, ಬ್ರಾಹ್ಮಣ ಅಗ್ನಿಯಂತೆ ಶುದ್ಧ. ಆದರಿಂದ ವಿದೇಶ ವ್ಯಕ್ತಿಗಳು ಅಬಾಧಕ. ಇನ್ನೊಂದು, ಬ್ರಾಹ್ಮಣ ಎಷ್ಟೆಂದರೂ ರಾಜರನ್ನು ಅನುಸರಿಸಿ ಧನಾರ್ಜನೆ ಮಾಡುವವ. ಆ ರಾಜರು ಪರದೇಶದಲ್ಲಿ ಇದ್ದರೆ, ಅಲ್ಲಿಗೆ ಹೋಗಲೇಬೇಕಲ್ಲ!

**ಕೆನರೀಜ್ ವರ್ನ್ಯಾಕ್ಯುಲರ್ ಸೊಸೈಟಿ**

'ಬೋಧಿನಿ' ಅಸ್ತಿತ್ವದಲ್ಲಿ ಬಂದ ಒಂದು ವರ್ಷದೊಳಗೆ ಬೆಳಗಾವಿಯಲ್ಲಿ 'ಕನ್ನಡ ಜ್ಞಾನಬೋಧಕ' ಎಂಬ ಪತ್ರಿಕೆ

ಆರಂಭವಾಯಿತು (ನವೆಂಬರ್ ೧೮೬೧). ಸರಕಾರಕ್ಕೇ ಆಗಲಿ, ಸಂಸ್ಥೆಯೊಂದು ಪತ್ರಿಕೆಯನ್ನು ಹೊರಡಿಸುವ ಯೋಚನೆ ಮಾಡಿದ್ದು ಮೊದಲ ಸಲ. ಆ ಸಂಸ್ಥೆಯ ಹೆಸರು 'ಕನ್ನಡು ಭಾಷೆಯಲ್ಲಿ ಪುಸ್ತಕಗಳಂನು ಛಾಪಿಸಿ ಪ್ರಸಿದ್ಧಿ ಮಾಡುವ ಮಂಡಳಿಯು.' ಕನ್ನಡದಲ್ಲಿ ಕ್ರಮಿಕ ಪುಸ್ತಕಗಳ ಕೊರತೆಯನ್ನು ತುಂಬಲೆಂದು ನೇಮಕವಾದ ಈ ಮಂಡಳಿಯು ಅದೇ ಶೈಕ್ಷಣಿಕ ಉದ್ದೇಶದಿಂದ ಪತ್ರಿಕೆಯನ್ನು ಹೊರಡಿಸಲಾರಂಭಿಸಿತು. 'ಸರ್ವದ್ರವ್ಯೇಷು ವಿದ್ಯೈತದ್ರವ್ಯಮಾಹುರಮುತ್ತಮಂ' ಎಂಬುದು ಅದರ ಧ್ಯೇಯವಾಕ. ಮರಾಠಿಯ ಅಭಿಯೋಗ (impact) ಒಡೆದು ತೋರುವಂತಹ ಅದರ ಭಾಷೆ; ಮೇಲಾಗಿ ಕಲ್ಲಚ್ಚಿನ ಕೆಟ್ಟ ಮುದ್ರಣ. ಆದ್ದರಿಂದ ಮುಂಬಯಿ ಸರಕಾರವು ಪತ್ರಿಕೆಯನ್ನು ನಡೆಸಲು ಬಾಸೆಲ್ ಮಿಶನ್ನಿನವರಿಗೆ ಅನುದಾನ ರೂಪದಲ್ಲಿ ಆದೇಶ ನೀಡಿತು. ಜೂನ್ ೧೮೬೨ರಿಂದ ಅದರ ಆರಂಭ. ಮೊದಲಿನದು ನಮ್ಮ ಪುಸ್ತಕಗಳ ಆಕಾರದ್ದಾದರೆ, ಇದು ಫೂಲ್‌ಸ್ಕ್ಯಾಪ್ ಆಕಾರದ್ದು, ಹೆಸರು? - 'ವಿಚಿತ್ರ ವರ್ತಮಾನ ಸಂಗ್ರಹ' ಎಂಬುದು! ಅದರ ವರ್ತಮಾನದಲ್ಲಿ ಏನು ವಿಚಿತ್ರವಿದೆ ಎಂದು ಸಾಶಂಕರಾಗಬೇಕಿಲ್ಲ. ಇಲ್ಲಿ ವಿಚಿತ್ರ ಎಂದರೆ ಸಚಿತ್ರ. ಸೊಗಸಾದ ಚಿತ್ರಗಳು; ಉತ್ಕೃಷ್ಟ ಮುದ್ರಣ (ಬಾಸೆಲ್ ಮಿಶನ್ನಿನವರದು ತಾನೆ!) ಓಹ್! ಕನ್ನಡದ ಪ್ರಥಮ ಸುಂದರ ಪತ್ರಿಕೆ ಎಂದರೆ ಇದೇ.

ಈ ಎರಡೂ ಪತ್ರಿಕೆಗಳಲ್ಲಿ ತಮ್ಮ ಮೂಲೋದ್ದೇಶದ ಶಿಕ್ಷಣ ಮಾತ್ರವಲ್ಲದೆ ವಿಧವಿಧ ವಿಷಯಗಳ ಜ್ಞಾನವನ್ನು ಮಾಡಿಕೊಡುವ ದೃಷ್ಟಿಯಿಂದ ಏನೇನೆಲ್ಲ ಬರಹಗಳನ್ನು ಛಾಪಿಸಿದ್ದಾಗಿದೆ! ವಿಶೇಷವೆಂದರೆ ಆಡಳಿತದಲ್ಲಿ ಬರುವ ಹಲವಾರು ಇಂಗ್ಲಿಷ್ ಶಬ್ದಗಳಿಗೆ ಕನ್ನಡ ರೂಪಗಳನ್ನು ಕೊಡುತ್ತ ಇದ್ದದ್ದು. ಹೀಗಿರುತ್ತ ಆ ಕೆನರೀಜ್ ವರ್ನ್ಯಾಕ್ಯುಲರ್ ಸೊಸೈಟಿಯು ಹಣ ಕೊಡುವುದನ್ನು ಹಠಾತ್ತನೆ ನಿಲ್ಲಿಸಿತು. ಪತ್ರಿಕೆಯೂ ನಿಂತು ಹೋಯಿತು.

ಆ ಕಾಲದಲ್ಲಿ ಮುಂಬಯಿ ಕರ್ನಾಟಕದ ಮೂಲೆ ಮೂಲೆಗಳಿಗೂ ಸಹ ಹೋಗುತ್ತಿದ್ದದ್ದು - 'ಮಠ ಪತ್ರಿಕೆ' (೧೮೬೫). ಮಠ ಅಂದರೆ ಶಾಲೆ! ಇದೂ ಶೈಕ್ಷಣಿಕ ಪತ್ರಿಕೆಯೇ. ಸರಕಾರದ ಶಿಕ್ಷಣ ಶಾಖೆಯಿಂದ ಪೋಷಿತವಾದದ್ದು. ಆದರೆ ಡೆಪ್ಯುಟಿ ಚನ್ನಬಸಪ್ಪನವರ ಕನ್ನಡ ಮಂತ್ರದಂಡದಿಂದಾಗಿ ಶೇ.೧೦೦ ಕನ್ನಡ ಪತ್ರಿಕೆಯಾಗಿಯೇ ಹೊರಬಂದು, ಪ್ರಾಥಮಿಕ ಶಾಲೆಗಳಿರುವ ಹಳ್ಳಿಹಳ್ಳಿಗೂ ಪ್ರಸಾರವನ್ನು ಹೊಂದಿತ್ತು. ಅದರಲ್ಲಿ ಬರುತ್ತಿದ್ದ ಸುದ್ದಿಗಳಿಂದ ಮುಂಬಯಿ ಕರ್ನಾಟಕದ ಸಾಮಾಜಿಕ ಜೀವನದ ಬಗೆಯನ್ನು ತಿಳಿಯಬಹುದು. ಇದೊಂದು ಮಾದರಿ:

"ಬಹು ಸಂತೋಷದಿಂದ ಸಮಸ್ತ ಜನರಿಗೆ, ವಿಶೇಷವಾಗಿ ಲಿಂಗವಂತರಿಗೆ ತಿಳಿಸುವದೇನೆಂದರೆ ಬೆಳಗಾವಿ ಜಿಲ್ಲೆಯ ಡೆಪಟಿ ಇನಸ್ಪೆಕ್ಟರರಾದ ಚನಬಸಪ್ಪನವರು ಹೇಳಿಕೊಂಡಿದ್ದರಿಂದ ಚಿತ್ರದುರ್ಗದ ಮುರಗಿ ಜಗದ್ಗುರು ಸ್ವಾಮಿಗಳವರು ಬಹು ದಯಾಳುಗಳಾಗಿ ಅನಾಥರಾದ ವಿದ್ಯಾರ್ಥಿಗಳಿಗೆ ಬೆಳಗಾಂವಿಯಲ್ಲಿ ಅಂನ ಕೊಡುವದಕ್ಕೋಸ್ಕರ ಪ್ರತಿ ತಿಂಗಳಿಗೆ ೩೦೦ ರೂ. ಕೊಡುವದಕ್ಕೆ ಒಪ್ಪಿಕೊಂಡಿದ್ದಾರೆ. ಈ ಹಣದಿಂದ .... ಸುಮಾರು ೫೦. ಜನ ನಿರಾಶ್ರಿರಾದ ವಿದ್ಯಾರ್ಥಿಗಳಿಗೆ ಎರಡು ಹೊತ್ತು ಊಟ, ಇರುವದಕ್ಕೆ ಸ್ಥಳ ಕೊಡತಕ್ಕ ಬಗ್ಗೆ ಈಗ ತಜವೀಜು ನಡೆದಿದೆ." ಈಗ ಎಲ್ಲೆಲ್ಲಿಯೂ ಕಾಣಸಿಗುವ ವೀರಶೈವ ಬೋರ್ಡಿಂಗ್‌ಗಳಿಗೆ ಇದುವೆ ನಾಂದಿಯಾಯಿತು.

ಕ್ರಿ.ಶ. ೧೮೪೩ರಿಂದ ಮುಂದಿನ ೪೦ ವರ್ಷಗಳ ವರೆಗೆ ಹೊರಟ ಪತ್ರಿಕೆಗಳು ಕೇವಲ ೨೫. ಅವುಗಳಲ್ಲಿ ನಾಲ್ಕೈದು ಬಿಟ್ಟರೆ, ಅಲ್ಪಾಯಿಷಿಗಳು. ಅವುಗಳ ಪ್ರಸಾರ ಕೂಡ ನೂರರಿಂದ ೫೦೦ರ ವರೆಗೆ ಮಾತ್ರ. ಪಕ್ಷ ಪತ್ರಿಕೆಗಳಿಗೆ ವಿಶೇಷ ಮನ್ನಣೆ ಇತ್ತು. 'ಸಂಪಾದಕ' ಎಂಬ ವ್ಯಕ್ತಿ ಅಧಿಕೃತವಾಗಿ ಇರಲೇ ಇಲ್ಲ! ಈಗಿನಂತೆ ಅಗ್ಗದ ಜನಪ್ರಿಯತೆಯನ್ನು ಗಳಿಸುವ ಉದ್ದೇಶವೂ ಅವರದಿರಲಿಲ್ಲ: ಬದಲಿಗೆ ಅವರದು ಲೋಕಶಿಕ್ಷಣ ಗುರಿ. ಪಾಶ್ಚಾತ್ಯ ಸಂಪರ್ಕದಿಂದ ತಿಳಿದು ಬಂದ ಲೌಕಿಕ ವಿಷಯಗಳ ಮತ್ತು ಪ್ರಪಂಚದ ಆಗುಹೋಗುಗಳ ಪರಿಚಯ ಮಾಡಿಕೊಟ್ಟು ಅವರ ತಿಳಿವಳಿಕೆಯನ್ನು ಹೆಚ್ಚಿಸಬೇಕು-ಎಂಬುದೇ ಪ್ರಧಾನವಾಗಿ ಅವರ ಮನದಲ್ಲಿದ್ದಿತು. ಕತೆಗಳು ಪ್ರಕಟವಾಗುತ್ತಿದ್ದರೂ ಅವುಗಳ ಉದ್ದೇಶ ನೀತಿಬೋಧೆಯೇ.

೧೮೮೦ನೆಯ ದಶಕದಿಂದ ಪತ್ರಿಕೆಗಳ ಹುಟ್ಟು ಮತ್ತು ಅವುಗಳ ಧೋರಣೆಯಲ್ಲಿ ಬೇರೊಂದು ದಿಸೆಯನ್ನು ಕಾಣುತ್ತೇವೆ. ಅದರ ಒಂದು ಕಾರಣ ಮೈಸೂರು ಸಂಸ್ಥಾನದಲ್ಲಿ ಸ್ಥಾಪಿತವಾದ ಪ್ರಜಾಪ್ರತಿನಿಧಿ ಸಭೆ (೧೮೮೧). ಅದಕ್ಕೆ ಕಾನೂನನ್ನು ಮಾಡುವ ಅಧಿಕಾರವಿರಲಿಲ್ಲ. ಆದರೆ ಆಡಳಿತದ ಕುಂದುಕೊರತೆಗಳನ್ನು ಎತ್ತಿ ತೋರಿಸುವ ಅವಕಾಶವಿತ್ತು. ಆಗ ಅದರ ಸದಸ್ಯರಿಗೆ ಆಸರೆಯಾಗಿ ಪತ್ರಿಕೆಗಳು ಸನ್ನದ್ಧವಾದುವು. ಜತೆಗೆ ಇಂಗ್ಲಿಷ್ ಶಿಕ್ಷಣವನ್ನು ಪಡೆದವರ ಸ್ವತಂತ್ರ ಮನೋಭಾವ, ಸ್ವಂತದ ಅಭಿಪ್ರಾಯಗಳ ಅಭಿವ್ಯಕ್ತಿ ಇವು ಅಂದಿನ ಪತ್ರಕರ್ತರಲ್ಲಿ ಕಾಣಿಸಿಕೊಂಡವು.

ಆಗಿನ ಪತ್ರಿಕೆಗಳಲ್ಲಿ ೧೮೮೩ರಿಂದ ಹೊರಟ 'ಹಿತಬೋಧಿನಿ'ಯನ್ನು ಮೊದಲಿಗೆ ಹೆಸರಿಸಬೇಕು. ಎಂ. ಬಿ. ಶ್ರೀನಿವಾಸಯ್ಯಂಗಾರ್, ಎಂ. ಶಾಮರಾವ್, ಎಂ. ಎಸ್. ಪುಟ್ಟಣ್ಣ, ಬಾಪು ಸುಬ್ಬರಾವ್ ಮತ್ತು ಮುಖ್ಯತಃ ತಾತಯ್ಯ ಎಂದರೆ ಎಂ. ವೆಂಕಟಕೃಷ್ಣಯ್ಯ ಮೊದಲಾದವರು ನಡೆಸಿಕೊಂಡು ಹೋದ ಮಹತ್ವಪೂರ್ಣ ಪತ್ರಿಕೆ ಇದು. ಇವರದೂ ಲೋಕಶಿಕ್ಷಣ ದೃಷ್ಟಿಯೇ. ೧೮೯೦ರಲ್ಲಿ ಅದು ನಿಂತ ಮೇಲೆ, ಎಂ. ಶಾಮರಾಯರು ಮತ್ತು ಬಾಪು ಸುಬ್ಬರಾಯರು ಸೇರಿ 'ವಿದ್ಯಾದಾಯಿನಿ' ಎಂಬ ಪತ್ರಿಕೆಯನ್ನು ಹುಟ್ಟು ಹಾಕಿ ಶೈಕ್ಷಣಿಕ ಪತ್ರಿಕಾಧರ್ಮವನ್ನು ಮುಂದುವರಿಸಿದರು. ಇತ್ತ ರಾಜಕೀಯ ವಿದ್ಯಮಾನಗಳಿಗಾಗಿ, 'ದೇಶಾಭಿಮಾನಿ' ಜನ್ಮ ತಾಳಿತು. (೧೮೯೩) ಅದರಲ್ಲಿ ಪ್ರಮುಖವಾಗಿ ಬರೆಯುತ್ತಿದ್ದ ಬಿ. ಸಿ. ಶ್ರೀನಿವಾಸ ಅಯ್ಯಂಗಾರ್ ಎಂಬುವರು ಮಹಾರಾಜರನ್ನು (ಅವರು ದಿವಾನರ ಕೈಗೊಂಬೆಯಾಗಿ ಇದ್ದುದಕ್ಕೆ) ಟೀಕಿಸುವಲ್ಲಿ ಹಿಂದು ಮುಂದೆ ನೋಡಿದವರಲ್ಲ. ಆಗಿನ ದಿವಾನರು ಈ ಕುರಿತು ಸಮಕ್ಷಮ ಹಾಜರಾಗಿ ಸ್ಪಷ್ಟೀಕರಣ ನೀಡಿರೆಂದು ಕೇಳಿದರಂತೆ. ಅದಕ್ಕೆ ಶ್ರೀನಿವಾಸಯ್ಯಂಗಾರರು ಕೊಟ್ಟ ಉತ್ತರ. "ಲೇಖನಿಯ ಮೂಲಕ ನಾನು ಟೀಕಿಸಿದ್ದು ತಾನೇ. ಲೇಖಿ ಆಗಿಯೇ ಉತ್ತರ ಕೊಟ್ಟೇನು. ನಿಮ್ಮೆದುರು ಬಂದು ನಿಲ್ಲುವ ಅಗತ್ಯ ಎಲ್ಲಿದೆ?" ಪರಿಣಾಮವಾಗಿ ಪತ್ರಿಕೆಯ ಮೇಲೆ ತಡೆಯಾಜ್ಞೆ ಹೊರಟಿತು. ಇತರ ಸಹೋದ್ಯೋಗಿ ಪತ್ರಿಕೆಗಳು ದಿವಾನರ ಈ ಕ್ರಮವನ್ನು ಖಂಡಿಸಿ ಬರೆದವು. 'ವೃತ್ತಾಂತ ಪತ್ರಿಕೆ'ಯಂತಹ ಮಿಶಿನರಿ ಪತ್ರಿಕೆಯೂ "ಜನತೆಯ ಆಶೋತ್ತರಗಳನ್ನು ಸರಕಾರವು ಈಡೇರಿಸದಿದ್ದಾಗ ಅದನ್ನು ಖಂಡಿಸುವುದು ತಪ್ಪೆ?" ಎಂದು ಬರೆಯಿತು. ಈ ರೀತಿ ಮೈಸೂರು ಸರಕಾರವು ಪತ್ರಿಕೆಯೊಂದನ್ನು ನಿಲ್ಲಿಸಿಬಿಡುವಷ್ಟು ನಿರ್ಬಂಧ ಹೇರಿದ್ದುದು ಮೊದಲನೆಯ ಸಲ ಎಂದು ಕಾಣುತ್ತದೆ. ಈ ಕುರಿತು ಡಿ.ವಿ.ಜಿ. ವ್ಯಾಖ್ಯಾನಿಸಿದ್ದು ಹೀಗೆ:

"ಶೇಷಾದ್ರಿ ಅಯ್ಯರರಂತಹ ಸಮರ್ಥ ಹಾಗೂ ಪ್ರಭಾವೀ ದಿವಾಣರು ಕೆಲವೇ ನೂರು ಪ್ರತಿಗಳ ಒಂದು ಪತ್ರಿಕೆಗೆ ಇಷ್ಟೊಂದು ಮಹತ್ವ ಕೊಡುವುದೆಂದರೆ (ಪತ್ರಿಕೆಗಳ) ಮುದ್ರಿತ ಶಬ್ದಕ್ಕಿರುವ ಸಾಮರ್ಥ್ಯವನ್ನು ಒಪ್ಪಿಕೊಂಡಂತೆ."

ಮೈಸೂರು ಪ್ರದೇಶದಲ್ಲಿ, ಅದೇಕೆ ಕರ್ನಾಟಕದಲ್ಲಿಯೇ ಪ್ರಥಮ ದಿನಪತ್ರಿಕೆಯಾದ 'ಸೂರ್ಯೋದಯ ಪ್ರಕಾಶಿಕೆ'ಯೂ (೧೮೮೮) ದಿವಾಣರ ಆಡಳಿತ ವೈಖರಿಯನು ಕಾಲಕಾಲಕ್ಕೆ ಟೀಕಿಸಿತು. "ಪ್ಲೇಗ್ ಹಾವಳಿಯಿಂದ ಜನತೆ ತತ್ತರಿಸಿದಾಗ ದಿವಾಣರು ಗಿರಿಧಾಮವೊಂದರಲ್ಲಿ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವುದು ನ್ಯಾಯಸಮ್ಮತವೆ?" ಎಂದು ಪ್ರಶ್ನಿಸಿತು. (ಈಗೂ ಕೆಲವು ಮಂತ್ರಿ, ಮುಖ್ಯಮಂತ್ರಿಗಳು ಆ ಬಗೆಯ ನಿರ್ಲಕ್ಷ್ಯವನ್ನು ತೋರಿಸುತ್ತಾರಲ್ಲವೆ.) ಕ್ರಿ.ಶ. ೧೯೦೦ರಿಂದಂತೂ ಪತ್ರಿಕೆಗಳು ಸರಕಾರದ ಟೀಕೆಯನ್ನು ಉಗಗೊಳಿಸಿದಾಗ ಅವುಗಳ ಮೇಲಿನ ನಿರ್ಬಂಧಗಳು ಬಲಗೊಂಡವು. ಉದಾಹರಣೆಗೆ, ಸರಕಾರವನ್ನು ಟೀಕಿಸುವ ಪತ್ರಿಕೆಗಳಿಗೆ ಸರಕಾರೀ ಜಾಹೀರಾತನ್ನು ಕೊಡಲಾಗದೆಂಬ ಇಂದಿನ ಕ್ರಮ ೬೦ ವರ್ಷಗಳ ಹಿಂದೆಯೇ ಮೊದಲಾಯಿತು. 'Mysore Standard'– ಎಂಬ ಇಂಗ್ಲಿಷ್ ಪತ್ರಿಕೆಯನ್ನು ಎಂ. ಗೋಪಾಲ ಅಯ್ಯಂಗಾರರು ನಡೆಸುತ್ತಿದ್ದರು. ಆ ಪತ್ರಿಕೆಗೆ ಜಾಹೀರಾತು ಮಾತ್ರವಲ್ಲದೆ "ಸರಕಾರಿ ವೆಚ್ಚದಲ್ಲಿ ಚಂದಾಹಣ ಕೊಡಕೂಡದು; ಸರಕಾರೀ ಸುದ್ದಿಯನ್ನೂ ಪೂರೈಸಲಾಗದು" ಎಂಬ ಹುಕುಮನ್ನು ಹೊರಡಿಸಿತು (೧೦-೧೧-೧೯೦೫) ಅಲ್ಲದೆ ಸಂಪಾದಕರನ್ನು ಗಡೀಪಾರು ಮಾಡಿತು.

ಅವರು ಸರಕಾರದ ರಹಸ್ಯಗಳನ್ನು ಹೊರಗೆಳೆದ ಒಂದು ಪ್ರಸಂಗವೂ ಇದೆ! ಬಂಗಾಲ ವಿಭಜನೆಯ ಎತ್ತುಗಡೆ (೧೯೦೫) ನಡೆದ ರೀತಿಯಲ್ಲಿಯೆ ಮದ್ರಾಸು ಸರಕಾರವು ಮೈಸೂರಿನ ಸಮೃದ್ಧ ಜಿಲ್ಲೆಗಳಾದ ಬೆಂಗಳೂರು ಮತ್ತು ಕೋಲಾರಗಳನ್ನು ತನ್ನಲ್ಲಿಗೆ ಸೇರಿಸಿಕೊಂಡು, ಅವುಗಳ ಬದಲಿಗೆ ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಗಳನ್ನು ಬಿಟ್ಟುಕೊಡಬೇಕೆಂದು ಮಾಡಿದ ಸೂಚನೆ ಗುಟ್ಟಾಗಿ ನಡೆದಾಗ 'ದೇಶಾಭಿಮಾನಿ' ಪತ್ರಿಕೆಯು ಅದನ್ನು ಹೊರಹಾಕಿಬಿಟ್ಟಿತು!

ಇಂಥವೆಲ್ಲ ಘಟನೆಗಳಿಂದಾಗಿಯೇ ೧೯೦೮ರ ಪತ್ರಿಕಾ ವಿಷಯಕ ಕರಾಳ ಶಾಸನ ಜಾರಿಗೆ ಬಂದದ್ದು (The Mysore Newspaper Regulation.1908) ಅದರ ಶಿಲ್ಪಿ ದಿವಾನ್ ವಿ.ಪಿ. ಮಾಧವರಾಯರು. ಇದರಲ್ಲಿ ನಿರ್ಬಂಧವಿರುವ ಕಲಮುಗಳು ಆರೇ ಆರು! ಆದರೆ ಕರಾಳಸ್ವರೂಪದವು. ಪತ್ರಿಕಾ ನಿರ್ಬಂಧವು ಬ್ರಿಟಿಷರ ನೇರ ಆಡಳಿತದ ಪ್ರದೇಶಗಳಲ್ಲಿಯೂ ಇದ್ದಿತು. ಆದರೆ ಇದರಲ್ಲಿಯ ಕೆಲವು ಅಂಶಗಳು ಇನ್ನೂ ಮುಂದೆ ಹೋಗಿವೆ. ಒಂದನೆಯದು; ಸರಕಾರದ ಪೂರ್ವ ಸಮ್ಮತಿಯಿಲ್ಲದೆ ಯಾರೂ ಪತ್ರಿಕೆಯನ್ನು ಹೊರಡಿಸತಕ್ಕದಲ್ಲ. ಹಾಗೆ ಕೊಟ್ಟ ಅನುಮತಿಯನ್ನು ಯಾವ ಕಾಲಕ್ಕೂ ಹಿಂತೆಗೆದುಕೊಳ್ಳಬಹುದು. ಹಾಗೂ ಪತ್ರಿಕೆ ಹೊರಡಿಸಿದರೆ, ಅದರ ಪತ್ರಕರ್ತರನ್ನು:-

(ಅ) ಮೈಸೂರನ್ನು ಬಿಟ್ಟು ಹೊರಹಾಕಲಾಗುವುದು ಮತ್ತು ಪೂರ್ವ ಪರವಾನಿಗೆ ಇಲ್ಲದ ಅವರು ಸಂಸ್ಥಾನದಲ್ಲಿ ಒಳಬರುವಂತಿಲ್ಲ

(ಆ) ಪತ್ರಿಕೆಗೆ ಸಂಬಂಧಪಟ್ಟ ಚರಾಚರ ವಸ್ತುಗಳನ್ನೂ ಹಿಂದಿನ ಸಂಚಿಕೆಗಳನ್ನೂ ಜಪ್ತ ಮಾಡಿ ತನಗೆ ತಿಳಿದಂತೆ ಸರಕಾರವು ವಿಲೇವಾರಿ ಮಾಡುವುದು. ಆದರೆ ಸಂಸ್ಥಾನದ ಹೊರಗಡೆ ಆ ನಿರ್ಬಂಧಿತ ಪತ್ರಕರ್ತರು ಪತ್ರಿಕೆಯನ್ನು ಮುದ್ರಿಸಿದ್ದಾದರೆ ಅದರ ಪ್ರತಿಗಳನ್ನು ಸಂಸ್ಥಾನದಲ್ಲಿ ಯಾರೂ ಪ್ರಸಾರ ಮಾಡಲಾಗದು. ಹಾಗೂ

(ಇ) ಈ ಕಾರ್ಯದಲ್ಲಿ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷವಾಗಿ ನೆರವಾದವರನ್ನೂ ಸಂಸ್ಥಾನದಿಂದ ಹೊರ ಹಾಕಲಾದೀತು.

ಇಷ್ಟೇ ಅದರ ಕಲಮುಗಳು!

ಈ ಶಾಸನದ ಬಗ್ಗೆ ದೇಶಾದ್ಯಂತ ಖಂಡನೆಗಳ ಸುರಿಮಳೆ. ಆದರೆ ಸರಕಾರ ಜಗ್ಗಲಿಲ್ಲ. ದುರ್ದೈವದ ಸಂಗತಿ ಎಂದರೆ ಎಂ. ವಿಶ್ವೇಶ್ವರಯ್ಯ ಹಾಗೂ ಮಿರ್ಜಾ ಇಸ್ಮಾಯಿಲರಂತಹ ಉದಾರ ಮನದ ದಿವಾನರಿದ್ದಾಗಲೂ ಈ ಶಾಸನ ಆಚರಣೆಯಲ್ಲಿದ್ದದ್ದು. ಮುಂದೆ ೧೯೩೯ರಲ್ಲಿ ಇದನ್ನು ಹಿಂತೆಗೆದುಕೊಳ್ಳಲಾಯಿತು. ಈ ಶಾಸನವನ್ನು ಪ್ರತಿಭಟಿಸುವಲ್ಲಿ ವೆಂಕಟಕೃಷ್ಣಯ್ಯ, ಡಿ.ವಿ.ಜಿ., ಬಿ. ಎನ್. ಗುಪ್ತ - ಮೊದಲಾದವರು ನಿರಂತರವಾಗಿ ಹೋರಾಡಿದರೆಂಬುದು ನಿಜ. ಆದರೆ ಅದರಲ್ಲಿ ಅವರ ಶಕ್ತಿಯ ಹ್ರಾಸ ಸಾಕಷ್ಟಾಯಿತೆಂಬ ಖೇದವನ್ನು ವ್ಯಕ್ತಪಡಿಸದಿರಲಾರೆ. ಜತೆಗೆ ಒಟ್ಟಿನ ಪತ್ರಿಕೋದ್ಯಮದ ವಿಕಾಸಕ್ಕೂ ಪೆಟ್ಟು ಬಿದ್ದಿತು. ಒಂದು ಉದಾಹರಣೆ ಕೊಡುವೆ. ವಿಶ್ವಕರ್ನಾಟಕ ದಿನಪತ್ರಿಕೆಯ ೨೨-೯-೧೯೨೯ರ ಸಂಚಿಕೆಯಲ್ಲಿ ಆದುವರೆಗೆ ಅನುಮತಿ ನಿರಾಕರಿಸಲಾದ ಸಂಸ್ಥಾನದ ಪತ್ರಿಕೆಗಳ ಪಟ್ಟಿ ಇದೆ. ಇವು ಎಷ್ಟು ಅಂತೀರಿ? ೧೩೫! ಅವುಗಳಲ್ಲಿ 'ಸನಾತನ ಧರ್ಮಪತ್ರಿಕೆ', 'ಆರ್ಯಾ ಬಾಲ ಸಮಾಜ', 'ವೀರಶೈವ ಗ್ರಂಥ ಪ್ರಕಾಶ', 'ಬಿಸಿನೆಸ್ ಮೆಸೆಂಜರ್' ಎಂಬ ಪತ್ರಿಕೆಗಳೂ ಇವೆ. ಇಂಥವನ್ನು ನಿರ್ಬಂಧಿಸುವ ಅಗತ್ಯ ದಿವಾಣ 'ಬಹುದ್ದೂರ್'ರಿಗೆ ಏಕೆ ಒದಗಿತೋ!

**ಧಾರವಾಡದ ಮೊದಲ ವೃತ್ತಪತ್ರ**

೧೮೭೭ರಲ್ಲಿ ಆರಂಭವಾದ 'ಚಂದ್ರೋದಯ'ವೇ ಧಾರವಾಡದ ಪ್ರಥಮ ಸುದ್ದಿ ಪತ್ರ. ಸುಬುದ್ಧಿ ಪ್ರಕಾಶವು ಬಲು ಬೇಗ ನಿಂತು ಹೋಗಿದ್ದಿತು. ತತ್ಪೂರ್ವದಲ್ಲಿ ಪತ್ರಿಕೆಗಳಿದ್ದುವು. ವಾರ್ತಿಕಗಳಲ್ಲ. ಇದರರ್ಥ ಪತ್ರಿಕೆಯನ್ನು ಓದಬಲ್ಲ ಕನ್ನಡಿಗರಿರಲಿಲ್ಲವೆಂದಲ್ಲ. ಅವರಿಗಾಗಿ 'ಬೆಳಗಾವ ಸಮಾಚಾರ', 'ಧಾರವಾಡ ವೃತ್ತ', 'ಹುಬಳೀ ವೃತ್ತ' ಇದ್ದವು. 'ಕರ್ನಾಟಕ ವೃತ್ತ' ಎಂಬುದೂ ಇದ್ದಿತು. ಆದರೆ ಕರ್ನಾಟಕದಲ್ಲಿಯ ಗಂಡುಮೆಟ್ಟಿನ ಊರುಗಳ ಹೆಸರುಗಳನ್ನಿಟ್ಟುಕೊಂಡಿದ್ದರೂ ಅವುಗಳ ಭಾಷೆ ಮರಾಠಿ. ಕಾರಣವೆಂದರೆ ಆಗಿನ ಶಹಾಣೇ ಬ್ರಾಹ್ಮಣರೂ, ವ್ಯಾಪಾರೀ ಲಿಂಗವಂತರೂ ಕಲಿತು ವ್ಯವಹರಿಸುತ್ತಿದ್ದ ಭಾಷೆ ಮರಾಠಿ!

ಇಂಥ ಸ್ಥಿತಿಯಲ್ಲಿ ಕನ್ನಡ ಸಾಪ್ತಾಹಿಕವೊಂದನ್ನು ಹೊರಡಿಸುವ ಹುಚ್ಚು ಒಬ್ಬರಲ್ಲಿ ತಲೆದೋರಿತು. ಅದುವೆ 'ಚಂದ್ರೋದಯ'. ಚಂದಾಹಣ? ಮುಂಗಡ ಕೊಟ್ಟರೆ ಎರಡೂವರೆ ರೂಪಾಯಿ. ಆಮೇಲಾದರೆ ಮೂರೂವರೆ ರೂಪಾಯಿ. ಸುರುವಿಗೆ ೨೦೦ ಜನ ಚಂದಾದಾರರಾದರು. ಪತ್ರಿಕೆಯು ಕೈಗೆ ಸಿಕ್ಕ ಸುದ್ದಿಯನ್ನು ಕೊಡುತ್ತಿತ್ತು. ಆದರೆ ಲೋಕಜಾಗರದ, ದೇಶಾಭಿಮಾನದ ವಿಷಯದಲ್ಲಿ ಯಾರಿಗೂ ಕಡಿಮೆ ಇಲ್ಲದ್ದು, ಇದೊಂದು ಉದಾಹರಣೆ:

೧೮೮೫ರಲ್ಲಿ ಇಂಗ್ಲೆಂಡ್-ರಶಿಯಾಗಳ ನಡುವೆ ಯುದ್ಧ ನಡೆಯಿತು. ಅದರ ವೆಚ್ಚಕ್ಕಾಗಿ ನಮ್ಮ ದೇಶದಿಂದ ದುಡ್ಡಿನ ಸರಬರಾಜು. ಅದಕ್ಕಾಗಿ ವಿವಿಧ ಖಾತೆಗಳ ವೆಚ್ಚದಲ್ಲಿ ಕಡಿತ. ನೌಕರರ ಪಗಾರದಲ್ಲಿಯೂ ಒತ್ತಾಯದ ಕಡಿತ. ಸಾಲದ್ದಕ್ಕೆ ಈ ಕಡಿತಗಳ ಅನುಷ್ಠಾನವನ್ನು 'ಸುಪರ್‌ವೈಸ್' ಮಾಡಲು ಬಿಳಿಯ ಅಧಿಕಾರಿಗಳು! ಆಗ ದಿನಾಂಕ ३೦-೫-೧೮೮೫ರ 'ಚಂದ್ರೋದಯ'ದಲ್ಲಿ ಸಂಪಾದಕರು ಈ ರೀತಿ ಬರೆದರು:

"ಗೌರಕಾಯಸ್ಥ ಈ ನೇಮಣೂಕಿಯಿಂದ ನೂರಾರು ಬಡ ನೇಟಿವರ ಹೊಟ್ಟೆಯ ಮೇಲೆ ಕಾಲು ಬಿದ್ದು, ಅವರ ಬೊಜ್ಜು ಬೆಳೆಯುವುದಕ್ಕೆ ಅಡ್ಡಿಯಿಲ್ಲ. ಗೌರಕಾಯಸ್ಥರನ್ನು ನೇಮಿಸುವ ಬದಲು ಅವರ 1/4 ಪಗಾರದ ಮೇಲೆ ಬರಲಿಕ್ಕೆ ಸಿದ್ಧವಿರುವ ನೇಟಿವರನ್ನು ಯಾಕೆ ನೇಮಿಸಬಾರದು? ಅವರಲ್ಲಿ ವಿಶ್ವಾಸಿಕರು ಯಾರೂ ಇಲ್ಲವೊ? ... ಸಣ್ಣ ಸಣ್ಣ ಪಗಾರ

ತ್ತೆಗೆದುಕೊಂಡು ಬಡತಿಯ ಆಶೆಯಿಂದ ಹಗಲು ಹನ್ನೆರಡು ತಾಸು ದುಡಿದು ಕಷಬಡುವ ನೇಟಿವರಿಗಿಂತಲೂ ಢೋಂಗಿನ ಈ ಗೌರಕಾಯಸರಿಂದ ಹೆಚ್ಚು ಕೆಲಸವಾಗುತ್ತಿರುವದಿಲವೆಂಬುದಕ್ಕೆ ಅನೇಕ ಉದಾಹರಣೆಗಳಿರುತವೆ. ಅನುಪಯೋಗಿ ಗೌರ ಕಾಮದಾರರ ಸಳಗಳನ್ನೇ ತೆಗೆದು ಬಿಟ್ಟರೆ ಹಣವು ತಕ್ಕ ಮಟ್ಟಿಗೆ ಪುರವಠೆಯಾದೀತು. ಹಣಕ್ಕಾಗಿ ಹೀಗೆ ತಿರುಕರಂತೆ ಭಿಕ್ಷೆ ಬೇಡುವದರಕಿಂತಲೂ ಯುರೋಪಿಯನ್ ಕಾಮದಾರರಿಗೆ ಅವರವರ ಸ್ವದೇಶದ ಅಥವಾ ಯುದ್ಧವಾಗುವ ಕಡೆ ಮಾರ್ಗ ತೋರಿಶಿದರೆ ಒಳ್ಳಿತಾಗುವದು.''

ತಿರುಕರಂತೆ ಭಿಕ್ಷೆ ಬೇಡುವುದು! ಅಬ್ಬಾ, ಅದೇನು ಧೈರ್ಯ! 'ಚಂದ್ರೋದಯ'ದ 'ವಿಚಿತ್ರ ವಿಶ್ವ' ಎಂಬ ಸದರಿನಲ್ಲಿ ಬರುವ ರಂಜನೀಯ ಸುದ್ದಿಗಳ 'ಮಾಸಲೆ' ಇಲ್ಲಿವೆ:

"ಚಮತ್ಕಾರಿಕ ಶೋಧ - ನಾಟಕಗಳನ್ನು ಆಡತಕ್ಕವರ ಪುಣ್ಯಕ್ಕೆ ಎಣೆಯೇ ಇಲ್ಲ! ನಾಟಕ ಶಾಲೆಯಲ್ಲಿ ಮಕ್ಕಳು ಅಳುವಂತೆ ಮಾಡಲು ಇದುವರೆಗೆ ಸಾಧ್ಯವಾಗಿದ್ದಿಲ್ಲ. ಈಗೇನು, ಪತಿಯೊಂದು ಕಂಪೆನಿಯವರು ಮಿ. ಎಡಿಸನ್ ಸಾಹೇಬರ ಯಂತ್ರವನ್ನು ತಂದು ಮಧ್ಯಾನ್ಹದಲ್ಲಿ (!) ಒಂದು ಮಗುವಿಗೆ ಅಳಿಸಿ ಅವರ ರೋದನವನ್ನೆಲ್ಲಾ ಈ ಯಂತ್ರಕ್ಕೆ ತುಂಬಿಸಿದರೆ ರಾತ್ರಿ ನಾಟಕದಲ್ಲಿ ಈ ಯಂತ್ರವು ಅತ್ತಂತೆ ಧ್ವನಿ ಮಾಡಬಲ್ಲದು!!'' (೬-೯-೧೮೯೦ರ ಸಂಚಿಕೆ).

"ಅಮೆರಿಕೆಯ ಕಾಡುಗಳಲ್ಲಿ ಒಂದು ಪಕ್ಷಿಯಿದ್ದು ಅದನ್ನು ಕೊಂದು ಅದರ ಗಂಟಲಲ್ಲಿ ಬತ್ತಿಯನ್ನು ತುರುಕಿ ದೀಪ ಹಚ್ಚಿಸಿದರೆ ಒಂದು ತಾಸು ಹಾಗೇ ಉರಿಯುತ್ತದೆ.'' - ಏನದರ ಹೆಸರು? ತಿಳಿಯದು. 'ಚಂದ್ರೋದಯ' ಕರ್ತರೇ ಆ ಪಕ್ಷಿಗೆ 'ದೀಪಾಕ್ಷಿ' ಎಂದು ಯಥಾರ್ಥವಾದ ನಾಮಕರಣ ಮಾಡಿದ್ದಾರೆ. (ವಿಶಾಲಾಕ್ಷಿ, ಮೀನಾಕ್ಷಿ, ಕಮಲಾಕ್ಷಿ - ಈ ಹೆಸರುಗಳನ್ನು ಹೆಣ್ಣು ಶಿಶುವಿಗೆ ಇಡುವುದಕ್ಕಿಂತ ದೀಪಾಕ್ಷಿ ಚೆನ್ನಾಗಿದೆ; ಅಲ್ಲವೆ).

ಯಾರು ಇದರ ಸಂಪಾದಕರು? ಅಲ್ಲ, ಸಂಚಾಲಕರು? ಅವರೇ ಹುಚ್ಚಯ್ಯ ವಿಭೂತಿಮಠ. ಚಂದಾದಾರರ ಸಂಖ್ಯೆ ಯಥಾ ಯಥಾ. ಅಂಥದ್ದೂ ಕಡಿಮೆಯಾಗುತ್ತ ಹೋಗಬೇಕೆ? ಅವರ ಆಗಿನ ಒಂದು ಸಂಪಾದಕೀಯ ಹೀಗಿದೆ: "ನಮ್ಮ ಇಲಾಖೆಯಲ್ಲಿರುವ ಬಹುತೇಕ ಎಲ್ಲ ಕನ್ನಡ ಪತ್ರಿಕೆಗಳು ಸರ್ವಸಾಧಾರಣವಾಗಿ ಮರಾಠೀ ಪತ್ರಿಕೆಗಳ ಎಂಜಲವನ್ನೇ ನೆಕ್ಕಿ 'ಈ ಎಂಜಲವು ಅಮೃತಕ್ಕಿಂತ ಹೆಚ್ಚು ರುಚಿಕರವಾಗಿದೆ' ಎಂದು [ತಿಳಿಯುವರು]... ಆದ್ದರಿಂದ ನಾವು ಹಣಿ ಕೊಯ್ದು ಮಣಿ ಮಾಡಿದರೂ ನಮ್ಮ ಚಂದಾದಾರರ ಸಂಖ್ಯೆ ಹೆಚ್ಚಾಗಲೊಲ್ಲದು ... ಇನ್ನು ಮುಂದಾದರೂ ನಮ್ಮ ಕನ್ನಡಿಗರ ಮೈಯಲ್ಲಿ ಅಭಿಮಾನದ ಗಾಳಿಯು ಶೇರಿ–'' ಎಂದೆಲ್ಲ ಬರೆದರು. ಆ ಗಾಳಿ ಶೇರಿದಂತಿಲ್ಲ. ಪತ್ರಿಕೆ ೧೯೦೨ರ ಸುಮಾರಿಗೆ ನಿಂತಿತು. ಆದಾಗೂ ತಂದೆಯಿಂದ ಪತ್ರಿಕೆ ನಡೆಸುವ ವಾರಸುದಾರಿಕೆಯನ್ನು ಪಡೆದ ಗದಿಗೆಯ್ಯ ಹೊನ್ನಾಪುರಮಠರು ಆ ಕಾರ್ಯಕವನ್ನು ಮುಂದುವರಿಸಿದರು.

ಸಾಮಾನ್ಯ ಜನತೆಯ ಬಗ್ಗೆ 'ಚಂದ್ರೋದಯ' ಪತ್ರಿಕೆ ತೋರಿದ ಕಾಳಜಿಯಂತೆಯೇ ತಾತ ವೆಂಕಟಕೃಷ್ಣಯ್ಯನವರ 'ವೃತ್ತಾಂತ ಚಿಂತಾಮಣಿ' ಪತ್ರಿಕೆಯು ಮೂರನೆಯ ವರ್ಗದ ರೈಲು ಪಯಾಣಿಕರ ಬಗೆ ಕಾಳಜಿ ವ್ಯಕ್ತಮಾಡಿದೆ:

"... ರೈಲಿನಲ್ಲಿ ಪಯಾಣ ಮಾಡುವ ೩ನೆಯ ತರಗತಿಯ ಜನರ ಅನಾನುಕೂಲಗಳನ್ನು ರೈಲಿನವರು ಸುತರಾಂ ಗಣನೆಗೆ ತರುವುದೇ ಇಲ್ಲ, ಅವರು ಬಡಾಬಡಾ ಸಾಹೇಬರೇನು? ಆದರೆ ಪಯಾಣಿಕರಿಂದ ಉತ್ಪತ್ತಿಯಾಗುವ ಒಟ್ಟು ರೈಲು ಉತ್ಪತ್ತಿಯಲ್ಲಿ ಈ ೩ನೆಯ ತರಗತಿಯವರಿಂದ ಶೇಕಡಾ ೭೫ರೂ. ವಸೂಲಾಗುತದೆಯಲವೆ? ಇವರಿಗೆ ಜಲಮಲ ಬಾಧೆಗಳಿಗೆ ಕ್ರಮವಾದ ಅನುಕೂಲಗಳನು ಕಲಿಶಿರುವುದಿಲ. ಇಲಿ ಪಯಾಣಿಕರನ್ನು ಕುರಿಗಳಂತೆ ಕೂಡಿ ಹಾಕುತ್ತಾರೆ. ಕೆಲವು ವೇಳೆ ಅಧಿಕಾರಿಗಳು ಹೆಚ್ಚು ಪಯಾಣಿಕರನ್ನು, ಬಟ್ಟೆ ಗಂಟುಗಳನು ಪೇರಿಸುವಂತೆ ನೂಕಿ ಬಿಡುತಾರೆ. ಆಮೇಲೆ ಹೊರಗೆ ಬೀಗಾ ಹಾಕಿಬಿಡುತಾರೆ. ಆಗ ಮೊದಲು ಕೂತಿದವರೂ ಹೊಸದಾಗಿ ತೂರಿಬಂದವರೂ ಕಚ್ಚಾಡಿ ಸಾಯುತ್ತಾರೆ. ಆದರೆ ಇದರಿಂದ ರೈಲ್ವೆ ಅಧಿಕಾರಿಗಳಿಗೇನೂ ಬಾಧೆ ಇಲ. ಕೈಲಾಸದವರುಂಟು. ವೈಕುಂಠದವರುಂಟು! ಈ ೩ನೆಯ ತರಗತಿಯ ಪಯಾಣಿಕರು ಬಹು ದೂರಪದೇಶದಿಂದ ಮಕ್ಕಳು ಮರಿಗಳು, ಹೆಂಗಸರನ್ನು, ಗಂಟುಮೂಟೆಗಳನ್ನು ಕಟ್ಟಿಕೊಂಡು ರೈಲು ತಪ್ಪೀತೆಂಬ ಭಯದಿಂದ ಸ್ಟೇಷನ್ ಬಳಿಗೆ ಬಹಳ ಹೊತ್ತಿಗೆ ಮುಂಚೆ ಬಂದು ಹಗಲೋ ರಾತಿಯೊ ಕಾದುಕೊಂಡಿರುತ್ತಾರೆ. ಅಲಿ ಇವರು ನಿಲಲು ಇವರಿಗೇನಾದರೂ ಆಸರವುಂಟೆ? ಭೂಮಿ. ಆಕಾಶ ಮತು ಚಳಿ ಗಾಳಿಗಳ ಆಸರೆಯೇ ಹೊರ್ತು ಬೇರೆ ಆಸರೆ ಯಾವದೂ ಅವಶವಿಲ ಎಂಬುದು ರೈಲ್ವೆ ಅಧಿಕಾರಿಗಳ ಮತವಾಗಿ ತೋರುತದೆ. ಇನ್ನು ಪಯಾಣ ಕಾಲದಲ್ಲಿ ರಾತ್ರಿ ದೀಪಗಳೇ ಇರುವುದಿಲ.

ರೇಲ್ವೆಗೆ ಹೆಚ್ಚು ಫಾಯದೆಯನ್ನುಂಟು ಮಾಡುವವರಿಗೆ ಹೆಚ್ಚು ಅನುಕೂಲಗಳಿರಬೇಕಾದದ್ದು ನ್ಯಾಯ. ಅದಕ್ಕೆ ಬದಲಿಗೆ ಅಸೌಖ್ಯಗಳನ್ನೂ, ಅನಾನುಕೂಲಗಳನ್ನೂ ಕಲಿಸುವುದು ಶುದ್ಧ ಅನ್ಯಾಯ.''

**'ಹಿಂದೂ ಮತಾಭಿಮಾನಿ'**

ಹೆಸರಿಗೆ ತಕ್ಕಂತೆಯೇ ಈ ಪತ್ರಿಕೆಯ ಧ್ಯೇಯ–ಧೋರಣೆ ಇತ್ತು. ಕ್ರೈಸ್ತರ ಮತಾಂತರ ಯತ್ನಕ್ಕಿಂತ ಅವರು ಹಿಂದೂ ಮತದ ವಿಚಾರಗಳನ್ನು ಟೀಕಿಸುತ್ತಿದ್ದುದು ಸಂಪಾದಕ ವೆಂಕಟಕೃಷ್ಣ ಸರಸ್ವತಿ ಅವರನ್ನು ಬಡಿದೆಬ್ಬಿಸಿತು. ಪತ್ರಿಕೆಯ ಮೊದಲ ಸಂಚಿಕೆಯಲ್ಲಿಯೇ (ಜನವರಿ ೧೮೮೮) ಬೈಬಲಿನ ಕೆಲವು 'ಅವಾಧವ್ಯ'ಗಳನ್ನು ಎತ್ತಿ ತೋರಿಸಿದರು. ಅವಕ್ಕೆ ಉತ್ತರ ಬೇಕೆಂದು ಹತ್ತಾರು ಜನ ಪಾದಿಗಳಿಗೆ ಪ್ರತಿಯನ್ನು ಕಳಿಸಿದಾಗ ಯಾರೊಬ್ಬರೂ ಉತ್ತರ ಕೊಡಲಿಲ್ಲವಂತೆ!

'ಹಿಂದೂ ಮಿಷನ್' ಸಂಸ್ಥೆ! ಕ್ರಿಶ್ಚಿಯನ್ ಮಿಶನ್ನಿಗೆ ಪ್ರತಿಯಾಗಿ ಇಂಥದೊಂದು ಸಂಸ್ಥೆಯನ್ನು ಆರಂಭಿಸಿದ್ದರೆಂದು ಕಾಣುತ್ತದೆ. ಹಿಂದೂ ಧರ್ಮದ ಪ್ರಚಾರಕ್ಕಾಗಿ ಚಿಕ್ಕ ಧಾರ್ಮಿಕ ಪುಸ್ತಕಗಳನ್ನು ಪ್ರಕಟಿಸುವ ವಿಚಾರವನ್ನೂ ಸಂಪಾದಕರು ಮಾಡಿದ್ದರು. ಇಷ್ಟೇ ಅಲ್ಲ, ಬೇರೆ ಯಾರಾದರೂ ಅಂಥ ಹೊತ್ತಗೆಗಳನ್ನು ಬರೆದು ಪ್ರಕಟಿಸುವ ಅಪೇಕ್ಷೆ ಇದ್ದವರಾದರೆ ಸೋವಿ ದರದಲ್ಲಿ ಮುದ್ರಿಸಿಕೊಡುವುದಾಗಿಯೂ ತಿಳಿಯಪಡಿಸಿದ್ದರು.

ಇತ್ತ ತಮ್ಮ ಚಂದಾದಾರರಲ್ಲಿ ಅವರದೊಂದು ವಿಶೇಷ ವಿಜ್ಞಾಪನೆ ಇದ್ದಿತು. "ನಾವೇನೊ ಪತ್ರಿಕೆಯನ್ನು ನಿಮಗೆ ಕಳಿಸುತ್ತೇವೆ. ಆದರೆ ಓದಿಯಾದ ಮೇಲೆ ನಿಮಗೆ ಬೇಡವಾಗಿರಬಹುದು. ಅಂಥ ಸಂಚಿಕೆಗಳನ್ನು ತಮ್ಮಲ್ಲಿಟ್ಟುಕೊಂಡು ಲುಕ್ಸಾನು ಪಡಿಸದೇ ವಾಪ್ಸು ಮಾಡಿಬಿಡುವುದು. ಯಾರೂ ನಿರರ್ಥಕವಾಗಿ ಇಟ್ಟುಕೊಳ್ಳಬೇಡಿರಿ'', ಎಂದು ಬೇಡುವ - ವಿಧೇಯ, ಸಂಪಾದಕ, ಹಿಂ.ಮ.

**'ಧನುರ್ಧಾರಿ'**

ಮರಾಠೀ ಪತ್ರಿಕೆಗಳಿಂದ ಪ್ರಯೋಜನ ಪಡೆದ ಬೇರೊಂದು ಪತ್ರಿಕೆಯನ್ನು ಗಮನಿಸುವ ಹಾಗಿದೆ. ಸಂಬಂಧಪಟ್ಟ ವ್ಯಕ್ತಿಯ ಬಾಯಿಯಿಂದಲೇ ಕೇಳೋಣ.

"ನನ್ನ ಅಣ್ಣನವರಿಗೆ ಮರಾಠಿ ಚೆನ್ನಾಗಿ ಬರುತ್ತಿದ್ದಿತು. ಪುಣೆಯ ಸುಪ್ರಸಿದ್ಧ ವಾರಪತ್ರಿಕೆ 'ಕಾಳ' ತರಿಸುತ್ತಿದ್ದರು. ನಾನೂ ಅದನ್ನು ಓದುತ್ತಿದ್ದೆನು. ನನ್ನ ಶಾಲೆಯ ಹತ್ತಿರವೇ ಶೇಷಗಿರಿ ಶಾನಭಾಗ ಎಂಬುವರಿದ್ದರು. ಅವರು 'ಕೇಸರಿ'ಯ ಭಕ್ತರು. ಪ್ರತಿನಿತ್ಯ ಅವರಲ್ಲಿ ವಂಗಭಂಗದ ಚಟುವಟಿಕೆಗಳನ್ನು ಕುರಿತು ಮಾತಾಡುತ್ತಿದ್ದೆವು. ನನ್ನ ಅಣ್ಣ ಸರಕಾರೀ ನೌಕರಿಯನ್ನು ಬಿಟ್ಟು ವರ್ತಮಾನ ಪತ್ರಿಕೆ ತೆಗೆಯಬೇಕೆಂದು ಯೋಚಿಸಿದರು. ನಾನು ಬರಹಗಾರನೆಂದು ಅವರಿಗೆ ಗೊತ್ತಿತ್ತು.

ಆದರೆ ನಮ್ಮಲ್ಲಿ ಪ್ರಿಂಟಿಂಗ್ ಪ್ರೆಸ್ ಇಲ್ಲ. ಪತ್ರಿಕೆಯ ತಿಳಿವಳಿಕೆಯೂ ಇಲ್ಲ, ಹಣವಂತೂ ಮೊದಲೇ ಇಲ್ಲ. ಆದರೂ ಪತ್ರಿಕೆಯನ್ನು ಹೊರಡಿಸಬೇಕೆಂಬ ಉತ್ಕಟೇಚ್ಛೆ. ಪತ್ರಿಕೆಗೆ 'ಧನುರ್ಧಾರಿ' ಎಂಬ ಹೆಸರನ್ನು ನಿರ್ಧರಿಸಿದೆವು.

ದಾವಣಗೆರೆಯಲ್ಲಿ ಒಬ್ಬ ಶಾಲಾ ಮಾಸ್ತರರು 'ವಾಗ್ದೇವೀ ವಿಲಾಸ' ಎಂಬ ಹ್ಯಾಂಡ್ ಪ್ರೆಸ್ ಇಟ್ಟುಕೊಂಡಿದ್ದರು. ಆ ಊರಲ್ಲಿ ಅದೊಂದೇ ಪ್ರೆಸ್. ಅವರ ಪ್ರೆಸ್ಸನ್ನು ಒಂದು ವರ್ಷಕ್ಕೆ ೩೦೦ರೂ ಬಾಡಿಗೆಯ ಮೇರೆಗೆ ಕೊಡಬೇಕೆಂದು ಗೊತ್ತಾಯಿತು. ಪತ್ರಿಕೆಗೆ ಬೇಕಾದ ಇತರ ಸಿದ್ಧತೆಗಳನ್ನು ಮಾಡಿಕೊಂಡೆನು. ಕಂಪೋಸಿಟರ್ ಬೇಕು. ಹಾವೇರಿಯಿಂದ ಒಬ್ಬನನ್ನು ಕರತಂದೆನು. ನನಗೆ ಆ ಉದ್ಯೋಗ ಬರುವುದಿಲ್ಲವೆಂದು ಆತನಿಗೆ ತಿಳಿಯದಂತೆ ಆತನು ಮಾಡುವುದನ್ನು ನೋಡಿ ಸ್ವಲ್ಪ ಸ್ವಲ್ಪ ಕಲಿಯತೊಡಗಿದೆನು. ಆಮೇಲೆ ಶಿರಸಿಯಿಂದ ನನ್ನ ಅಣ್ಣನವರು ಬಂದರು. ನಾನು ಎಡಿಟರು; ಅವರು ಪ್ರೆಸ್ಸಿನವರು. ಪತ್ರಿಕೆಯ ಯಾವುದೊಂದು ಲೇಖನದ ವಿಷಯದಲ್ಲಿ ವ್ಯಾಜ್ಯವಾದರೆ ಇಬ್ಬರೂ ಶಿಕ್ಷೆ ಹೊಂದಬೇಕಾಗುವುದು ಎಂದು ಯೋಚಿಸಿ, ಎರಡಕ್ಕೂ ಅಣ್ಣನವರೊಬ್ಬರ ಹೆಸರೇ ಕೊಡಬೇಕೆಂದು ಗೊತ್ತು ಮಾಡಿಕೊಂಡೆವು.

ಟೀಕಾಸ್ತ್ರಗಳು! ಸ್ವಾತಂತ್ರ್ಯದ ಹೋರಾಟದಲ್ಲಿ ನಾಯಕರಾದವರ ಪಾತ್ರದಷ್ಟೇ ಪತ್ರಿಕೆಗಳ ಪಾತ್ರ ಗಣನೀಯವಾಗಿದೆ. ಏಕೆಂದರೆ ಅವರುಗಳ ಸಂದೇಶವನ್ನು ಸಾಮಾನ್ಯ ಜನಕ್ಕೆ ತಲುಪಿಸುವ ಕೆಲಸವನ್ನು ಪತ್ರಿಕೆಗಳೇ ಮಾಡಿದುವು - ತಾರುಣ್ಯದ ಹುಮ್ಮಸ್ಸಿನಿಂದ.

ಆಗಿನ ಪತ್ರಕರ್ತರ ಬಗ್ಗೆ ಒಂದೆರಡು ಅಂಶಗಳು ಗಮನಿಸುವಂತಹವಿವೆ. ಅವರು ವಿವಿಧ ವೃತ್ತಿಗಳಲ್ಲಿದ್ದವರು. ಆ ವೃತ್ತಿಯನ್ನು ಬಿಟ್ಟು ಇಲ್ಲವೆ ಅಂಶತಃ ಉಳಿಸಿಕೊಂಡು ಪತ್ರಿಕೋದ್ಯಮದಲ್ಲಿ ತೊಡಗಿಕೊಂಡರು. 'ಮಾತೃಭೂಮಿ' ದೈನಿಕದ ಸಂಪಾದಕ ಎಂ. ಎಲ್. ಶ್ರೀಕಂಠಯ್ಯ ವೃತ್ತಿಯಲ್ಲಿ ಅಡ್ವೋಕೇಟರು. ತಿ.ತಾ. ಶರ್ಮರು ಶಾಸನ ಸಹಾಯಕರಾಗಿ ಸರಕಾರೀ ನೌಕರಿಯಲ್ಲಿದ್ದವರು. 'ಪ್ರಜಾಮತ'ದ ಬಿ.ಎನ್. ಗುಪ್ತರು ಉದ್ಯಮಪತಿಗಳು. 'ರಾಷ್ಟ್ರಬಂಧು'ವಿನ ಕಡೆಂಗೋಡ್ಲು ಶಂಕರಭಟ್ಟರು ಪ್ರವೃತ್ತಿಯಲ್ಲಿ ಕವಿ–ಲೇಖಕರು. ನಿರಂಜನರು ಲೇಖನ ಕಾರ್ಯದಲ್ಲಿ ತೊಡಗಿದ್ದದ್ದು ಪತ್ರಿಕೆಗಳ ಮೂಲಕವೇ.

ಇನ್ನೀಗ ಆಗಿನ ಪತ್ರಿಕಾರಂಗದ ಪ್ರಮುಖ ಘಟಕವಾಗಿದ್ದ ಸ್ವಾತಂತ್ರ್ಯ ಚಳವಳಿಯಲ್ಲಿ ಪ್ರಖರವಾಗಿ ಕಾಣಿಸಿಕೊಂಡ ಕೆಲವು ಪತ್ರಿಕೆಗಳ ಬಗ್ಗೆ ತಿಳಿಯೋಣ.

**ವಿಶ್ವಕರ್ಣಾಟಕ**

ಇದೊಂದು ಪತ್ರಿಕೆಯ ಹುಟ್ಟು ಮತ್ತು ಹೋರಾಟದ ಬಗೆಯನ್ನು ತಿಳಿದುಬಿಟ್ಟರೆ ಸ್ವಾತಂತ್ರ್ಯ ಚಳವಳಿಯಲ್ಲಿ ಪತ್ರಿಕೆಗಳ ಕಾರ್ಯ ಹೇಗಿದ್ದಿತೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಮದ್ರಾಸಿನಲ್ಲಿ ದಿ.೧೨.೮.೧೯೨೦ರಂದು ಗಾಂಧೀಜಿಯ ಭಾಷಣ ಏರ್ಪಟ್ಟಿತ್ತು. ಆಗ ಮದ್ರಾಸಿನಲ್ಲಿದ್ದ ತಿ. ಶರ್ಮರು ಪತ್ನಿ ರಾಜಮ್ಮನಿಗೆ ತಾನು ಭಾಷಣಕ್ಕೆ ಹೋಗುವುದಾಗಿ ತಿಳಿಸಿದರು. ಭಾಷಣ ಕೇಳಿ ಬಂದ ಮೇಲೆ ಪುನಃ ರಾಜಮ್ಮನಿಗೆ ಪತ್ರ ಬರೆದರು: "ಮಹಾತ್ಮರ ದಿವ್ಯವಾಣಿಯನ್ನು ಕೇಳಿ ನಾನೆಂತಹ ಸ್ಥಿತಿಗೆ ವಶವಾದೆನೆಂದು ವರ್ಣಿಸಲಾರೆ. ದೇಶ ಸೇವೆಗೆ ಸಿದ್ಧನಾಗೆಂದು ಅಂತರಾತ್ಮನ ಬೋಧೆಯಾಗುತ್ತದೆ. ನಾನೇನು ಮಾಡಲಿ?"

'ಮೈಸೂರ ಸ್ಟಾರ್' – ಎಂಬ ಪತ್ರಿಕೆ ಕನ್ನಡದಲ್ಲೇ ಹೊರಡುತ್ತಿತ್ತು. ನೌಕರಿಯನ್ನು ಬಿಟ್ಟು ತಿ. ತಾ. ಶರ್ಮರು ಅದರಲ್ಲಿ ಸೇರಿದರು. ದಿ.೨. ೮. ೧೯೨೫ರಂದು ಅವರಿಂದ 'ವಿಶ್ವಕರ್ಣಾಟಕ'ದ ವಾರಪತ್ರಿಕೆಯ ಆರಂಭ – ಅದಕ್ಕಾಗಿ ೪೦೦ ರೂಪಾಯಿ ಸಾಲ ತಂದಿದ್ದರು!

ಆ ಕಾಲದಲ್ಲಿ ಸ್ವತಂತ್ರ ವಿಚಾರದ ಯಾವ ವೃತ್ತಪತ್ರವೂ ಮೈಸೂರಲ್ಲಿ ಉಳಿದಿರಲಿಲ್ಲ - ವೃತ್ತಪತ್ರಿಕಾ ಕಾನೂನಿನಿಂದಾಗಿ. ಇತ್ತ ಗಾಂಧಿಯವರ ನೇತೃತ್ವದಲ್ಲಿ ಅಸಹಕಾರ ಚಳವಳಿ, ಗ್ರಾಮ ಪುನರುಜ್ಜೀವನ ಮುಂತಾದ ಆಂದೋಲನಗಳು ಆರಂಭವಾಗಿದ್ದರೂ ಅವು ಮೈಸೂರಲ್ಲಿ ಅಧಿಕೃತವಾಗಿ ಕಾಲಿಟ್ಟಿರಲಿಲ್ಲ. ಆದರೆ ಭಾಷ್ಯಂ ಕುಟುಂಬದವರು, ತಾತಯ್ಯ, ಡಿ.ವಿ.ಜಿ., ವೆಂಕಟಕೃಷ್ಣ ಮುಂತಾದವರು ತಮ್ಮ ಪತ್ರಿಕೆಗಳ ಮೂಲಕ ಜನತೆಯಲ್ಲಿ ರಾಜಕೀಯ ಪ್ರಜ್ಞೆಯನ್ನು ಬಹುವಾಗಿ ಮೂಡಿಸಿದ್ದರು. ಇರಲಿ.

ಈ ಪತ್ರಿಕೆಯ ಉದ್ದೇಶವನ್ನು ಮತ್ತು ಪತ್ರಿಕೆಯ ಹೆಸರಿನ ಔಚಿತ್ಯವನ್ನು ಶರ್ಮರು ಹೀಗೆ ಘೋಷಿಸಿದರು: "ನಮ್ಮದು ಪ್ರಧಾನವಾಗಿ ಕನ್ನಡ ನಾಡಿನ ಮೇಲೆ ದೃಷ್ಟಿ. ಹಾಗೇನೆ ಮಾತೃಭೂಮಿಯಲ್ಲಿ ನಡೆಯುವ ವಿದ್ಯಮಾನಗಳನ್ನು ಹಾಗೂ ವಿಶ್ವದ ಇತರ ಭಾಗಗಳಲ್ಲಿ ನಡೆಯುವ ಚಳವಳಿಯನ್ನೂ ವಿವೇಚಿಸುತ್ತದೆ."

ಪತ್ರಿಕೆಯ ಜಾಹೀರಾತಿನ ರೀತಿ ಬೇರೊಂದು ತೆರನಾಗಿತ್ತು: "ಭರತಖಂಡದಲ್ಲಿ ನಡೆಯುತ್ತಿರುವ ಸ್ವರಾಜ್ಯ ಸಂಗ್ರಾಮದ ಸುದ್ದಿಗಳು ಬೇಕೆ? ಸತ್ಯಾಗ್ರಹಿಗಳ ಶೌರ್ಯ ಸಾಹಸದ ವರ್ಣನೆ ಬೇಕೆ? ಹಾಗಿದ್ದರೆ 'ವಿಶ್ವಕರ್ಣಾಟಕ'ವನ್ನು ಓದಿರಿ!"

ಪ್ರಕಟವಾಗುತ್ತಿದ್ದ ಲೇಖನಗಳೆಲ್ಲವೂ ಪ್ರಚಲಿತವೂ ಸತ್ವಯುತವೂ ಆಗಿದುವು: ಕಣಿಯ ಜನಾಂಗದ ಚಳವಳಿ. ಹತ್ತಿ ಗಿರಣಿಯಲ್ಲಿ ಮುಷ್ಕರ; ಗಾಂಧೀ ವಿಚಾರಸರಣಿ; ಕರ್ನಾಟಕ ಪ್ರಾಂತೀಕರಣ; ತಾಯ್ನುಡಿಯಲ್ಲಿ ಶಿಕ್ಷಣ ಇತ್ಯಾದಿ. ಪತ್ರಿಕೆಯ ಜನಪ್ರಿಯತೆ ಹೆಚ್ಚಿದ್ದರ ಇನ್ನೊಂದು ಕಾರಣ. ಮೈಸೂರಿನ ಆಡಳಿತದ ಕಟು ಟೀಕೆ. ಅನ್ಯಾಯ ಮತ್ತು ಅದರ ಪ್ರತಿಭಟನೆ ಎಲ್ಲಿಯೇ ನಡೆಯಲಿ 'ವಿಶ್ವಕರ್ಣಾಟಕ'ವು ಆ ಸುದ್ದಿಯನ್ನು ಪ್ರಾಮುಖ್ಯವಾಗಿ ಕೊಡುತ್ತಿತ್ತು.

ಬರಬರುತ್ತ ಕಾಂಗೆಸ್ಸಿನ ಆಡಿಯಲ್ಲಿ, ಗಾಂಧಿಯವರ ನೇತೃತ್ವದಲ್ಲಿ ಹೋರಾಟವು ಉಜ್ವಲಗೊಂಡಿತಷ್ಟೆ. ೧೯೩೦ರ ದಶಕವಂತೂ ಆಂದೋಲನದ ಉಗ್ರಕಾಲ. ಉಪ್ಪಿನ ಸತ್ಯಾಗ್ರಹ, ವಿದುರಾಶ್ವತ್ಥದ ಪ್ರಕರಣ, ಮುಂಬಯಿ ಕರ್ನಾಟಕದಲ್ಲಿಯ ಕರ ನಿರಾಕರಣ ಇವೆಲ್ಲ ಎಡಬಿಡದೆ ಪತ್ರಿಕೆಯ ಪುಟಗಳನ್ನು ತುಂಬಿಕೊಂಡವು. ೧೯೩೯ರಲ್ಲಿ ಮೈಸೂರು ಸರಕಾರವು ರಾಜಕೀಯ ಸುಧಾರಣೆಗಳನ್ನು ಮಾಡುವುದಾಗಿ ಘೋಷಿಸಿತು. ಆದರೆ ಈ ಪತ್ರಿಕೆಯು ಅವುಗಳ ಟೊಳ್ಳುತನವನ್ನು ಲೇಖನಗಳ ಮೇಲೆ ಲೇಖನ ಬರೆದು ಬಹಿರಂಗಗೊಳಿಸಿತು.

**ವಿಶ್ವ ಕರ್ನಾಟಕದಿಂದ ...**

ದಿವಾನರ ಪ್ರತಿ ಭಾಷಣದಲ್ಲಿ ಬಡವರ ಯೋಗಕ್ಷೇಮ, ಹಳ್ಳಿಗಾಡಿನವರ ಹಿತಚಿಂತನೆ, ಗ್ರಾಮಗಳ ಪುನರುಜ್ಜೀವನ ಮುಂತಾದ ವಿಷಯಗಳ ಮೇಲೆ ಅಮೋಘ ಭಾವಗಳು ಬಹು ಸುಂದರವಾಗಿ ಚಿತ್ತಾಕರ್ಷಕವಾಗಿ ಕಾಣಬರುತ್ತವೆ. ಆದರೆ ಕೃತಿಯಲ್ಲಿ ಮಾತ್ರ ಹಾವಾಡಿಗನ ಮಾವಿನಹಣ್ಣು! ಹೆಚ್ಚೇನು. ಸಂಸ್ಥಾನದ ಆದಾಯದ ಐದರಲ್ಲೊಂದಂಶವೇ ಕುಡಿತದಿಂದ ಬರುತ್ತದೆಯೆಂದರೆ ಯಾರಿಗೆ ತಾನೇ ಮೈಸೂರಿನ ಆಂತರಿಕ ಮತ್ತು ನೈತಿಕ ಕ್ಷೇಮ–ಜೀವನದಲ್ಲಿ ಧೈರ್ಯ ಬಂದೀತು? ಈಗಿನ ಮೈಸೂರನ್ನು ಕಂಡರೆ 'ಹೆಣ್ಣು ಚಂದ, ಕಣ್ಣು ಕುರುಡು' ಎಂಬ ಗಾದೆ ನೆನಪಿಗೆ ಬರುವುದಿಲ್ಲವೆ? (೨೩-೬-೧೯೨೯)

[ಕರ್ನಾಟಕದ ಇಂದಿನ ಪರಿಸ್ಥಿತಿಯೂ ಹೀಗೇ ಇದೆಯಲ್ಲವೆ]

೫೦,೦೦೦ ಭಾರತ ತರುಣ ತರುಣಿಯರು ಸೆರೆಮನೆಗಳಲ್ಲಿದ್ದಾರೆ. ನರಳುತ್ತಲಿದ್ದಾರೆ. ಲಾಹೋರ್ ಸೆರೆಮನೆಯಲ್ಲಿ ಕಾಲವಶನಾದ ವೀರ ಸತ್ಯಾಗ್ರಹಿ ಇಸ್ಮೇಯಿಲನೆಂಬ ತರುಣನ ಕಡೆನುಡಿಯೇನು ಬಲ್ಲಿರಾ?

'ಸುಖವೆನಗೆ ಬೇಡಮ್ಮ ಸ್ವಾತಂತ್ರ್ಯ ಬೇಕು'!
ಗುಜರಾತಿನ ರುದ್ರ ಶ್ಮಶಾನದಿಂದ ಕೇಳಿಬರುವ
"ಮನೆ ಮಾರು ಹೋದರೇಂ ಮಾನವತ್ವವು ಹೋಯ್ತೆ?
ದೇಹವಿದು ಬಿದ್ದರೇಂ ಭಾರತವು ಬಿತ್ತೆ?"
–ಎಂಬ ಅಮರವಾಣಿಯನ್ನಾಲಿಸಿ!
ಮುಂಬಯಿ ನಗರದ ಸ್ತ್ರೀಲೋಕದ
"ಗಂಡಸರು ಸತ್ತರೇಂ ಹೆಂಗಸರು ಪುಟ್ಟರೆ?"
–ಎಂಬ ಸಿಡಿಲ್ನುಡಿ ಕೇಳಿ ಬಂತೆ?

ಅಂದ ಮೇಲೆ ಬಿಟಿಷರಲ್ಲ, ಅವರ ತಾತ ಮುತ್ತಾತಂದಿರು ಬರಲಿ. ಭಾರತಿಗೆ ಭಯವಿಲ್ಲ; ಬಂಧನವಿಲ್ಲ. ['ವಿಶ್ವ ಕರ್ನಾಟಕ' ದಿ. ೨-೧-೧೯೩೩]

'ಸಭಾ ಪರಿತ್ಯಾಗ'ವೆಂಬುದು ಪ್ರಜಾಪ್ರತಿನಿಧಿಗಳ ಪಾಲಿಗಿರುವ ಒಂದು ಶಸ್ತ್ರ. ಆ ಶಸ್ತ್ರ ಪ್ರಯೋಗದಲ್ಲಿ ಎಷ್ಟು ಚಾತುರ್ಯವನ್ನು ತೋರಿಸಬೇಕೋ ಅಷ್ಟು ಮಿತವನ್ನೂ ತೋರಿಸಬೇಕು. ಕಾರಣವು ಪ್ರಬುದ್ಧವಾದದ್ದೂ ಒಂದು ತತ್ವಕ್ಕೆ ಸಂಬಂಧಪಟ್ಟದ್ದೂ ಆಗಿದ್ದರಲ್ಲದೆ ಸಣ್ಣಪುಟ್ಟ ಕಾರಣಗಳಿಗೆ ಈ ಶಸ್ತ್ರ ಪ್ರಯೋಗ ಮಾಡುವುದು ತಪ್ಪು.

ಮತ್ತೆ ಒಮ್ಮೆ ಈ ಶಸ್ತ್ರಪ್ರಯೋಗ ಮಾಡುವ ನಿಶ್ಚಯವಾದ ಕೂಡಲೇ ಆ ನೀತಿಗನುಸಾರವಾಗಿ ಮುಂದಿನ ನೀತಿಯೂ ನಡತೆಯೂ ಸಾಗಬೇಕು. ಆವಶ್ಯಕತೆ ಬಿದ್ದರೆ ಸದಸ್ಯತನಕ್ಕೆ ಸಹ ಗುಂಪುಗುಂಪಾಗಿ ರಾಜೀನಾಮೆ ಕೊಡಬೇಕು. ಮತ್ತೆ ಮರುಚುನಾವಣೆಗೆ ನಿಂತು ಪ್ರಜೆಗಳನ್ನೊಲಿಸಿ ಮತ್ತೆ ಸಭೆಗೆ ಬರಬೇಕು. ಆಗ ಪ್ರಭುತ್ವದವರ ಮುಖವು ಬೆಸ್ತು ಬೀಳುತ್ತದೆ.

ಮೊನ್ನೆ ಪ್ರಜಾಪ್ರತಿನಿಧಿ ಸಭೆಯ 'ವಾಕ್ ಔಟ್' ನೋಡಿದರೆ ನಮಗೆ ಬಹಳ ವ್ಯಸನವಾಗುತ್ತದೆ. ಇದು ಬರೀ ಬೂಟಾಟಕದ ವಾಕ್ ಔಟ್ (ವಿ.ಕ.೨೧-೬-೧೯೩೧)

[ದಿಲ್ಲಿಯ ಹಾಗೂ ವಿವಿಧ ರಾಜ್ಯಗಳ ಶಾಸನ ಸಭೆಗಳಲ್ಲಿ, ಈ ಬಗೆಯ ಸಭಾತ್ಯಾಗಗಳು ನಡೆದೇ ಇವೆ. ಕಾಲ ಬದಲಾಗಿಲ್ಲ!]

ತಿ. ತಾ. ಶರ್ಮರು ಮೂಲತಃ ಇತಿಹಾಸದ ವಿದ್ವಾಂಸರು. ಚರಿತೆಗೆ ಸಂಬಂಧಿಸಿದ ಒಂದು ಲೇಖನವನ್ನು ಬರೆದಿದ್ದರು. ಅದು ಮೈಸೂರು ಪಿ.ವಿ.ದವರ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾಯಿತು. ಆಗ ಅದರ ಸಂಪಾದಕ – ಎ. ಆರ್. ಕೃಷ್ಣಶಾಸ್ತ್ರಿಗಳು ಕೇಳಿದರಂತೆ; "ಶರ್ಮರೇ, ಈ ಲೇಖನದಲ್ಲಿ ತೋರಿರುವ ಸಂಯಮ ಹಾಗೂ ಶಾಸ್ತ್ರಮರ್ಯಾದೆ ನಿಮ್ಮ 'ವಿಶ್ವಕರ್ನಾಟಕ'ದಲ್ಲೇಕೆ ಕಂಡುಬರುವುದಿಲ್ಲ?" ಅದಕ್ಕೆ ಶರ್ಮರು " 'ಪ್ರಬುದ್ಧ ಕರ್ನಾಟಕ' ಬರಹದಲ್ಲಿ ಶಾಸ್ತ್ರ ಮರ್ಯಾದೆ ಇರಬೇಕಾದದ್ದೇ. ಆದರೆ 'ವಿಶ್ವಕರ್ನಾಟಕ'ದಲ್ಲಿ ಶಸ್ತ್ರ ಮರ್ಯಾದೆಯೇ ಸರಿ." ಎಂದು ಉತ್ತರಿಸಿದರಂತೆ. ಬೇರೊಂದು ಸಂದರ್ಭದಲ್ಲಿ ಅವರು ಹೇಳಿದರು: "ತಮ್ಮದು ವಾರಪತ್ರಿಕೆಯಲ್ಲ; ವಾರ್ (war) ಪತ್ರಿಕೆ" – ಎಂದು!

ಪತ್ರಿಕಾ ವಿಷಯಕವಾದ ಕರಾಳ ಶಾಸನವೆಂಬ ಶಸ್ತ್ರವನ್ನು ಧರಿಸಿದ ಮೈಸೂರು ಸರಕಾರವು 'ವಿಶ್ವಕರ್ನಾಟಕ'ದ ವಿರುದ್ಧ ಯುದ್ಧವನ್ನೇ ಸಾರಿದಂತಿತ್ತು. ಸರಕಾರವು ಯಾವುದೂ ಬಾಕಿ ಇಡದೆ ಎಲ್ಲ ಬಗೆಯ ನಿರ್ಬಂಧಗಳನ್ನು ಹೇರಿತು. ಮಧ್ಯೆ ಶರ್ಮರು 'ಈ ಕರಾಳ ಶಾಸನವನ್ನು ಶಾಸನ ಕಡತದಿಂದ ತೊಡೆದು ಹಾಕುವ ವರೆಗೆ ಸಂಪಾದಕೀಯವನ್ನೆ ಬರೆಯುವುದಿಲ್ಲ' ಎಂದು ಘೋಷಿಸಿ ಆ ಜಾಗವನ್ನು ಖಾಲಿ ಇರಿಸಿದ್ದರು. (೧೯೭೫ರ ತುರ್ತುಶಾಸನ ಕಾಲಕ್ಕೆ ದೇಶದ ಕೆಲವು ಪತ್ರಿಕೆಗಳು ಹಾಗೆಯೇ ಮಾಡಿದ್ದುದನ್ನು ಜ್ಞಾಪಿಸಿಕೊಳ್ಳಬಹುದು.) ೧೯೩೯ರಲ್ಲಿ ಕರಾಳ ಶಾಸನ ಹೋದ ಮೇಲೂ, ಅದರ ಉಪಟಳ ಇದ್ದೇ ಇತ್ತು. ೧೯೪೦ನೆಯ ದಶಕದಲ್ಲಿ ಶರ್ಮರ ಗುಡುಗೂ ಹೆಚ್ಚಾಯಿತು. 'ಸಿಡಿಲಮರಿ' ಎಂಬ ಹೆಸರಿನಲ್ಲಿ ವೈಸರಾಯರಿಗೆ ಅವರು ಬರೆದು ಪ್ರಕಟಿಸಿದ ಬಹಿರಂಗ ಪತ್ರವಂತೂ ಇಷ್ಟೊಂದು ಉಗ್ರವಾಗಿತ್ತಲ್ಲ. ಸರಕಾರವು ತತ್‌ಕ್ಷಣವೇ ಪತ್ರಿಕೆಯನ್ನು ನಿಲ್ಲಿಸಿತು. ಬೇರೊಂದು ಇಂಥದೇ ಲೇಖನದಿಂದಾಗಿ ಶರ್ಮರಿಗೆ ಜೈಲುವಾಸವೂ ಆಯಿತು. ಮಹತ್ತ್ವದೆಂದರೆ ಇತರ ಸಹಪತ್ರಿಕೆಗಳು ದಿ.೨೧-೮-೧೯೪೬ರಂದು ಸಾಂಕೇತಿಕ ಹರತಾಳವನ್ನಾಚರಿಸಿ 'ವಿಶ್ವಕರ್ನಾಟಕ'ವನ್ನು ಬೆಂಬಲಿಸಿದುವು. ಸಾಂಕೇತಿಕ ಹರತಾಳದ ಈ ಎತ್ತುಗಡೆ ಮೈಸೂರಿನ ಪತ್ರಿಕಾ ಕ್ಷೇತ್ರದಲ್ಲಿ ಇದೇ ಮೊದಲಿನದು. ಪತ್ರಿಕೆಯ ಮೇಲೆ ಸರಕಾರವು ಹೀಗೆ ಪದೇ ಪದೇ ಗದೆ ಎತ್ತುತ್ತಿದ್ದುದನ್ನು ಶರ್ಮರು ಬಹಳ ಸಮರ್ಪಕವಾಗಿ ವರ್ಣಿಸಿದ್ದಾರೆ: "ಮಿರ್ಜಾರವರ ದಿವಾನಗಿರಿಯ ೧೫ ವರ್ಷಗಳ ಅವಧಿಯಲ್ಲಿ 'ವಿಶ್ವಕರ್ನಾಟಕ'ದ ಮೇಲೆ ಆಪಾದನೆಗಳನ್ನು ಹೂಡಲಾಗಿತ್ತು. ಆದರೆ ಒಮ್ಮೆಯೂ ಪತ್ರಿಕೆಯನ್ನು ನಿಲ್ಲಿಸುವ ಹುಕುಮು ಹೊರಡಿಸಲಿಲ್ಲ. ಈ ಮಾಧವರಾಯರ (ಇವರು ಎನ್. ಮಾಧವರಾವ್) ಐದು ವರ್ಷಗಳ ದಿವಾನಗಿರಿಯಲ್ಲಿ ಪತ್ರಿಕೆ ಮೂರು ಬಾರಿ ನಿಂತಿತು. ಎರಡು ಬಾರಿ ಸೆಕ್ಯೂರಿಟಿ ಡಿಪಾಸಿಟ್ ಕೊಡುವ ಭಾಗ್ಯ ಒದಗಿ ಬಂತು. ಸಂಪಾದಕರ ಬಂಧನವೂ ಆಯಿತು. ಒಂದು ವರ್ಷ ಕಾಲ ಗಡೀಪಾರು ..."

ಆಯಿತು.! ವಿಶ್ವಕರ್ನಾಟಕದ ಹೋರಾಟವು ಸ್ವಾತಂತ್ರ್ಯ ದೊರೆತ ಮೇಲೆ ತಂತಾನೆ ನಿಂತಿತು ಪತ್ರಿಕೆ ಆಮೇಲೆ ಬಹುಕಾಲ ಬಾಳಲಿಲ್ಲ.

### 'ಚಂದ್ರಿಕೆ'ಯನ್ನು ಎತ್ತಿ ಮುದ್ದಾಡಿಸಿದ ಚಂದಾದಾರರು!

ಪತ್ರಿಕೆಯೊಂದನ್ನು ಹೊರಡಿಸಿ ಅದರಿಂದ ದುಡ್ಡು ಮಾಡಿ ಸಮಾಜ ಸೇವೆ-ಸತ್ಕಾರ್ಯಗಳಿಗಾಗಿ ಆ ಗಳಿಕೆಯನ್ನು ವಿನಿಯೋಗಿಸಬೇಕು - ಎನ್ನುವ ಯೋಚನೆ ಆಗಿನ ದಿನಗಳಲ್ಲಿ ಕೈಗೂಡೀತೆ? ಆ ದುಸ್ಸಾಹಸಕ್ಕೆ ಕೈ ಹಾಕಿದವರು ನಮ್ಮ ಗಳಗನಾಥರು. ಅದೂ ಅಗಡಿ-ಆನಂದವನದಂತಹ ಚಿಕ್ಕ ಹಳ್ಳಿಯಲ್ಲಿ ಕುಳಿತು!

ಪತ್ರಿಕೆ ೧೯೦೮ ಏಪ್ರಿಲ್ ತಿಂಗಳಿಂದ ಹೊರಡಲಾರಂಭಿಸಿತು. ಮೊದಲ ೧೨ ವರ್ಷಗಳಲ್ಲಿ ಅವರೇ ಸಂಚಾಲಕರು. ೫೦೦ ಪ್ರತಿಗಳ ಆರಂಭದ ಮುದ್ರಣ. ಮೂರನೆಯ ವರ್ಷಕ್ಕೆ ಆ ಸಂಖ್ಯೆ ೨,೫೦೦ಕ್ಕೇರಿತು. ಪತ್ರಿಕೆಯ ಮುಖ್ಯ ಆಕರ್ಷಣೆ-ಗಳಗನಾಥರ ಸುರಸ ಕಾದಂಬರಿಗಳದು. 'ಕಮಲ ಕುಮಾರಿ', 'ವೈಭವ', 'ಮೃಣಾಲಿನಿ', 'ಪ್ರಬುದ್ಧ ಪದ್ಮನಯನೆ' ... ಇತ್ಯಾದಿ.

ಚಂದಾದಾರರ ಈ ಏರಿಕೆಗೆ ಯಾರೂ ಸಂತೋಷಿಸಬೇಕಾದದ್ದೇ-ಆಗಿನ ಕಾಲದಲ್ಲಿ. ಆದರೆ ಮೇಲೆ ಹೇಳಿದ ಉದ್ದೇಶಕ್ಕಾಗಿ ಹೆಚ್ಚು ಹಣ ಬೇಕಾಗಿತ್ತು. ಅದಕ್ಕಾಗಿ ಚಂದಾಹಣವನ್ನು ಇಳಿಸುವುದು; ಪುಟಗಳನ್ನು ಹೆಚ್ಚಿಸುವುದು: ಆ ಮೂಲಕ ಚಂದಾದಾರರ ಸಂಖ್ಯೆಯನ್ನು ಇಮ್ಮಡಿಗೊಳಿಸುವುದು ಎಂದು ಗಳಗನಾಥರು ನಿರ್ಣಯಿಸಿದರು. ಪರಿಣಾಮ? ಕರ್ನಾಟಕ ಪತ್ರಿಕಾ ಪ್ರಪಂಚದಲ್ಲಿಯೇ ಆವರೆಗೆ ಆಗದಿದ್ದ ಪವಾಡವೊಂದು ನಡೆದು ಹೋಯಿತು. ಚಂದಾದಾರರ ಸಂಖ್ಯೆ ಹಲವು ಸಾವಿರವನ್ನು ದಾಟಿತು. (೧೯೧೪) ಆಗ ಪ್ರತಿದಿನವೂ ಬರುತ್ತಿದ್ದ ಮನಿಆರ್ಡರುಗಳನ್ನು ಸ್ವೀಕರಿಸಲೆಂದೇ ಅಂಚೆ

ಖಾತೆಯವರು, ಇನ್ನೊಬ್ಬ ಕಾರಕೂನನನ್ನು ನೇಮಿಸಬೇಕಾಗಿ ಬಂದಿತು. ಸಂಚಿಕೆ ಪ್ರಕಟವಾದೊಡನೆ ಸಾವಿರಗಟ್ಟಲೆ ಪ್ರತಿಗಳನ್ನು ಚಕ್ಕಡಿಯಲ್ಲಿ ತುಂಬಿಕೊಂಡು ೮ ಕಿಲೋ ಮೀಟರ್ ಅಂತರದ ತಾಲೂಕಿನ ಸ್ಥಳವಾದ ಹಾವೇರಿಗೆ ಕೊಂಡೊಯ್ಯಬೇಕಾದ ಪರಿಸ್ಥಿತಿ!

ಪತ್ರಿಕೆ ಹಾಗೂ ವಾಚಕರ ಸಂಬಂಧವು ತಾದಾತ್ಮ್ಯದ ಪರಮಾವಧಿಯನ್ನು ಕಂಡದ್ದು ಇನ್ನೊಂದು ಅಪೂರ್ವದ ಘಟನೆ. ವಾಚಕರಂತೆ ಪತ್ರಿಕೆಯೂ ಜೀವಂತ ವ್ಯಕ್ತಿಯೇ!

"ಮೊರದಲ್ಲಿ ಕೇವಲ ಶಿಶುವಾಗಿದ್ದ ಚಂದ್ರಿಕೆಯು ಈಗ ಕರ್ನಾಟಕ ಪ್ರಾಂತ್ಯದಲ್ಲಿ ದುಡುದುಡು ಓಡಾಡ ಹತ್ತಿದ್ದಾಳೆ. ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ ನಡಿಗೆಯ ವೇಗ. ಮೈಸೂರಲ್ಲಿ ನಡಿಗೆಯ ಗಾಂಭೀರ್ಯ, ಕಾರವಾರ, ಹೈದರಾಬಾದ್, ಮದ್ರಾಸ್ ಪ್ರಾಂತಗಳ ನಡಿಗೆಯ ಮಂದತ್ವ. ಇನ್ನು ಕನ್ನಡ ಪ್ರಾಂತಗಳ ಹೊರಗೆ ಬಹುದೂರ ಇದ್ದ ಕನ್ನಡಿಗರು ಕರೆದರೂ ಚಂದ್ರಿಕೆಯು ಬೆದರದೆ ತಟ್ಟನೆ ಹೋಗುತ್ತಿರುವಳು. ಕರೆದವರ ಕೈಯೊಳಗಿನ ಕೂಸು ಆಕೆ."

ಅನೇಕ ವಾಚಕರೂ ಹಾಗೆಯೇ ಪತ್ರಿಕೆಯನ್ನು ಪರಿಭಾಷಿಸಿದ್ದರು.

" 'ಸದ್ಬೋಧ ಚಂದ್ರಿಕೆ'ಯ ನಾಲ್ಕನೆಯ ವರ್ಷದ ಬಾಲ ಲೀಲೆಗಳನ್ನು ನೋಡಿ ಆದ ಆನಂದವನ್ನು ಬಾಯಿಂದ ವರ್ಣಿಸಲಿಕ್ಕೆ ಎಷ್ಟು ಪ್ರಯತ್ನ ಮಾಡಿದರೂ ಆಗದೆ ಹೋಯಿತು. ಚಿಕ್ಕಮಕ್ಕಳ ಲೀಲೆಯಿಂದಾಗುವ ಆನಂದವು ಇಂಥದೇ ಸರಿ." - ವ್ಯಾ. ಅ. ಹೆರಗಲ್ (ಶಾಲಾ ಮಾಸ್ತರ).

"ಚಂದ್ರಿಕೆಯು ಪದ್ಮನಯನಾ ಎಂಬುವ ಕೀರ್ತಿಶಾಲೀ ಮಗಳನ್ನು ಹಡೆದಿದ್ದಾಳೆ. ಈ ಉಭಯ ಸ್ತ್ರೀಯರನ್ನು, ಪುರುಷರು ಸ್ತೋತ್ರ ಮಾಡುವುದರಲ್ಲಿ ನನಗೇನೂ ಮಹತ್ವ ಕಾಣುವದಿಲ್ಲ. ಸ್ತ್ರೀಯರು ಪುರುಷರನ್ನು, ಪುರುಷರು ಸ್ತ್ರೀಯರನ್ನು ವರ್ಣನೆ ಮಾಡುವುದು ಸಾಹಜಿಕವೇ. ಆದರೆ ನನಗೆ ಎಂಥ ತಾಪವಿದ್ದರೂ ಅವರಿಬ್ಬರನ್ನು ನೆನೆದರೆ ಸಾಕು. ನಮ್ಮ ಪ್ರೀತಿಯ ತಂಗಿಯರಾದ ಚಂದ್ರಿಕೆ ಮತ್ತು ಪದ್ಮನಯನಾ ಇವರನ್ನು ಕೂಡೇ ಕಳಿಸಿಕೊಡಬೇಕು."

ಈ ಪತ್ರ ಬರೆದವರು ಯಾರೆಂದು ತಿಳಿದಿದ್ದೀರಿ? ಧಾರವಾಡದ ಕಾಮನಕಟ್ಟೆ ಓಣಿಯ ಯಮುನಾ ಸಾನಿ!! ಓಣಿಯ ಹೆಸರನ್ನು ಗಮನಿಸಿರಿ. ನೂರು ವರ್ಷಗಳ ಹಿಂದೆ ಧಾರವಾಡದ ರಸಿಕರು ರಾತ್ರಿ ಸಂಚರಿಸುತ್ತಿದ್ದ ಓಣಿ ಅದು. ಈಗೂ ಆ ಹೆಸರು ಉಳಿದಿದೆ. ಆದರೆ ಸಾನಿಯರಾರೂ ಇಲ್ಲ.

ಇದೊಂದು ಮೈಸೂರು ಕಡೆಯ ಪತ್ರ: "ಚಂದ್ರಿಕೆ, ಲೋಕನಂದಿನಿ ಅಹುದು. ಅದನ್ನು ಆದರಿಸದವನು ಪಶು ತುಲ್ಯನೇ ಸರಿ. ನಾನು ನನ್ನ ಪತ್ರಿಕೆಯೊಡನೆ, ನನ್ನ ಆನಂದಪಾತ್ರಳಾದ ಚಂದ್ರಿಕೆಗೂ ಯಥೋಚಿತ ಸಹಾಯ ಮಾಡಲು ಸಂಕಲ್ಪಿಸಿರುವೆನು."

"ನನ್ನ ಪತ್ರಿಕೆಯೊಡನೆ." ಅಂದರೆ ಅವರೂ ಒಂದು ಪತ್ರಿಕೆಯ ಸಂಪಾದಕರೆ? ಹೌದು. ಅವರು ಚಾಮರಾಜನಗರದಿಂದ ಹೊರಡುತ್ತಿದ್ದ ಸುಪ್ರಸಿದ್ಧ ಪತ್ರಿಕೆ 'ಕರ್ನಾಟಕ ಕಾದಂಬರೀ ಸಂಗ್ರಹ'ದ ಸಂಪಾದಕರು. ಒಬ್ಬ ಸಮಾನಶೀಲರು ಇನ್ನೊಬ್ಬರೊಡನೆ ಈ ರೀತಿಯ ಸೌಹಾರ್ದವನ್ನು ತೋರುವುದು ಪತ್ರಿಕಾಲೋಕದಲ್ಲಿ ಆಗೀಗ ಮಾತ್ರ ಕಂಡುಬರುವಂತಹದು.

**ಕವಿತಾರೂಪದ ಪತ್ರಿಕೆ**

ಇಡೀ ಸಂಚಿಕೆಯನ್ನು ಕವಿತೆಗೆ ಮೀಸಲಿರಿಸಬೇಕು. ಆ ಮೂಲಕ ತರುಣ ಕವಿಗಳಿಗೆ ಪ್ರೋತ್ಸಾಹ ಮತ್ತು ಅವಕಾಶ ನೀಡಬೇಕೆಂಬುದರ ಪ್ರಯೋಗವನ್ನು ಧಾರವಾಡದ ವೈ. ಬಿ. ಜಠಾರರು ಮಾಡಿದರು. ಆ ರೀತಿ -'ಪ್ರಭಾತ'ವು ೧೯೧೮ರ ಮಧ್ಯದಿಂದ ಆರಂಭವಾಗಿ ಸುಮಾರು ನಾಲ್ಕು ವರ್ಷ ನಡೆಯಿತು. ಜಾಹೀರಾತುಗಳು ಸಹ ಕವಿತೆಯಲ್ಲೇ! ಇದು ಕಿತ್ತೂರಲ್ಲಿರುವ ಔಷಧಿ ಸಂಗ್ರಹಾಲಯದ ಜಾಹೀರಾತು:-

ಭೂಭಾಗದಲ್ಲೆಲ್ಲ ಮಹಾಪಸಿದವು
ಈ ಭಾಗ ಚನ್ನವ್ವನ ದೇಸಗತ್ತಿನಿಂ
ಶೀಭಾರತಾಖ್ಯೌಷಧಿ ಸಂಗಹಾಲಯಂ
ಶೋಭಾವಹಂ ಪೇಟೆಗೆ ಸೋಮವಾರದ್ದು!!

( ಇಲ್ಲಿ ದ್ವಿತೀಯಾಕ್ಷರ ಪ್ರಾಸ ಇಟ್ಟುಕೊಂಡದ್ದನ್ನು ಗಮನಿಸುವುದು )

ಪ್ರಭಾತದಲ್ಲಿ ದ. ರಾ. ಬೇಂದ್ರೆ, ಶಾಂತಕವಿಗಳಿಂದ ಮೊದಲ್ಗೊಂಡು ಕೋಲಾರದ ಚನ್ನಕೃಷ್ಣಯ್ಯ, ಉ.ಕ. ಜಿಲ್ಲೆಯ ಕಡಕೋಡಿ ಮೊದಲಾದವರ ಕವಿತೆಗಳಿವೆ. ಶನಿಮಾಹಾತ್ಮ್ಯವಿದೆ. ಜೊತೆಗೆ ಕೆಸಬಿಯಾಂಕಾದ ಅನುವಾದ ಕೃತಿಯೂ ಇದೆ! ನವೋದಯ ಕಾವ್ಯದ ಉಗಮವನ್ನು ಅಭ್ಯಸಿಸಬೇಕೆಂದವರು ಈ 'ಪ್ರಭಾತ'ದ ಸಂಚಿಕೆಗಳನ್ನು ನೋಡಲೇಬೇಕು.

**'ಕರ್ಮವೀರ'ದ ವೀರಗಾಥೆ**

ಗಾಂಧೀಯುಗದ ಕಹಳೆಯನ್ನು ಕರ್ನಾಟಕಸ್ಥರು ಬಡಿದೇಳುವಂತೆ ಮೊದಲು ಊದಿದ್ದು 'ಕರ್ಮವೀರ'ವೇ. ೧೯೨೧ರ ಫೆಬ್ರವರಿ ೧೫ರಂದು ಎಂದರೆ, ಗಾಂಧೀಯುಗಾರಂಭದ ಮೊದಲ ವರ್ಷವೇ, ಮತ್ತು ಅದರ ಉದ್ದಿಶ್ಯವಾಗಿಯೇ 'ಕರ್ಮವೀರ'ವು ಹುಬ್ಬಳ್ಳಿಯಲ್ಲಿ ಜನ್ಮ ತಾಳಿತು. ರಂ.ರಾ. ದಿವಾಕರರು ಅದರ ಪ್ರತೋದಕರು. ತಿಳಿಯಬೇಕಾದ ಮಾತೆಂದರೆ ಪತ್ರಿಕೆಗೆ ಯಾವ ಕಾಲಕ್ಕೇ ಆಗಲಿ, ಎಂಥ ಕೆಲಸವೇ ಇರಲಿ ಅವರಿಗೆ ಬೆನ್ನಲುಬಾಗಿ ಧಾರವಾಡದ ಸಾಹಿತ್ಯಕರು ಸಿದ್ಧರಾಗಿ ನಿಂತಿದ್ದರು. ೧೯೨೧ರಲ್ಲಿ ಅಸಹಕಾರದ ಚಳವಳಿಯ ಆರಂಭ. ಧಾರವಾಡದ ಒಂದು ಹೆಂಡದಂಗಡಿಯ ಮುಂದೆ ಪಿಕೆಟಿಂಗ್ ನಡೆದು, ಗೋಳೀಬಾರ್ ಆಗಿ, ಮೂವರು ಮೃತಪಟ್ಟರು. ಎಷ್ಟೋ ಜನರಿಗೆ ಗಾಯವಾಯಿತಷ್ಟೇ. ಅದನ್ನು ವಿವರವಾಗಿ ವರದಿ ಮಾಡಿದ್ದರಿಂದ, ಸಂಪಾದಕರನ್ನು ಬಂಧಿಸಲಾಯಿತು. ಅವರ ಸ್ಥಳದಲ್ಲಿ ಹುಕ್ಕೇರಿಕರ ರಾಮರಾಯರು 'ಕರ್ಮವೀರ'ವನ್ನು ನೋಡಿಕೊಂಡರು. ಆಲೂರ ವೆಂಕಟರಾಯರು ಮತ್ತು ಶಂ.ಬಾ. ಜೋಶಿಯವರು ತಮ್ಮ ಹೆಸರು ಕೊಡದೇ ಲೇಖನ-ಸಂಪಾದನ ಕಾರ್ಯದಲ್ಲಿ ಜತೆಗೂಡಿದರು.

ಮೂರು ತಿಂಗಳಾದ ಮೇಲೆ ದಿವಾಕರರ ಬಿಡುಗಡೆಯಾಯಿತು. 'ಭೂರಕ್ಷಸಾಯ ಸ್ವಾಹಾ' ಎಂಬ ಅಗ್ರಲೇಖನ ಆ ಕೂಡಲೇ ಪ್ರಕಟಗೊಂಡಿತು. ಪುನಃ ದಿವಾಕರರ ಮೇಲೆ ರಾಜದ್ರೋಹದ ಆರೋಪ, ಆದರೆ ಆ ಲೇಖನವನ್ನು ಬರೆದವರೇ ಬೇರೆ-ಆಲೂರ ವೆಂಕಟರಾಯರು! 'ಕರ್ಮವೀರ'ಕ್ಕೆ ಅನೇಕರು ಬೆನ್ನೆಲುಬಾಗಿ ನಿಂತದ್ದು ಈ ರೀತಿ. ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಇದಕ್ಕೆ ಸಮನಾದ ಸಾಹಿತ್ಯಿಕರ ಸಹಯೋಗಕ್ಕೆ ಬೇರೆ ಉದಾಹರಣೆ ಇದ್ದಂತಿಲ್ಲ.

ಇತ್ತ ೧೯೨೯ರಲ್ಲಿ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ ಬೆಳಗಾವಿಯಲ್ಲಿ ಆರಂಭವಾಗಿದ್ದಿತು. ಅದನ್ನು ಹುಬ್ಬಳ್ಳಿಗೆ ತಂದಾಗ, ಕೃಷ್ಣೆ, ತುಂಗಭದ್ರೆಯರ ಸಂಗಮದಂತೆ ಆಯಿತು. ಉತ್ತರ ಕರ್ನಾಟಕದ ಜನಜೀವನದ ಮೇಲೆ ಇವೆರಡೂ ಪತ್ರಿಕೆಗಳು ಮಾಡಿದ ಪ್ರಭಾವವನ್ನು ಶಬ್ದಗಳಲ್ಲಿ ಹಿಡಿದಿಡುವುದು ಶಕ್ಯವೇ ಇಲ್ಲ.

'ಸಂಯುಕ್ತ ಕರ್ನಾಟಕ'-ಎಂದ ಮೇಲೆ ಮೊಹರೆ ಹಣಮಂತರಾಯರನ್ನು ನೆನೆಯದೆ ಮುಂದೆ ಹೋಗಲಾರೆ. ಅವರ ಜೀವನ ಚರಿತ್ರೆ, ಈಚೆಗೆ ಪ್ರಕಟವಾಗಿದೆ. ನನ್ನ ಪತ್ರಿಕಾಲೋಕದ ಆಸ್ಥೆಗೆ, ನನ್ನಂತೆ, ಅನೇಕ ಹೊಸ ಲೇಖಕರಿಗೆ, ಪತ್ರಿಕೋದ್ಯಮಿಗಳಿಗೆ ಅವರು ಇತ್ತ ಪ್ರೋತ್ಸಾಹ ಮತ್ತು ನೆರವು ಅನನ್ಯಿತ.

**ಸಹಕಾರದ ಸಕೃತ್ ನಿದರ್ಶನ**

ಒಂದು ಪತ್ರಿಕೆಗೆ ಒಬ್ಬರು, ಬಹಳವಾದರೆ ಇಬ್ಬರು ಸಂಪಾದಕರಿರುತ್ತಾರೆ. ನಾಲ್ಕು ಜನ ಸಂಪಾದಕರಿದ್ದ ಪತ್ರಿಕೆ ಪುತ್ತೂರಂಥ ಸಣ್ಣ ಊರಲ್ಲಿ ಅನೇಕ ವರ್ಷಗಳವರೆಗೆ ಬದುಕಿ ಇದ್ದಿತು. ಮಾತ್ರವಲ್ಲ ಇಬ್ಬರು ಸಂಪಾದಕರು ಘಟ್ಟದ ಮೇಲಿನ ಉತ್ತರ ಕರ್ನಾಟಕದವರು. ಸಂದರ್ಭ ಹೀಗಿದೆ: ಮುಂಬಯಿ ಸರಕಾರದ ಬಾಂಬೆ ಸೆಂಟ್ರಲ್ ಕೋ ಆಪ್. ಇನ್‌ಸ್ಟಿಟ್ಯೂಟ್

ಎಂಬ ಸಂಸ್ಥೆಯು, ದ.ಕ. ಜಿಲ್ಲೆಯ ಅಂಥದೇ ಒಂದು ಸಂಸ್ಥೆಯ ಸಹಯೋಗ ಪಡೆದದ್ದರ ಫಲವಾಗಿ, ಎಪ್ರಿಲ್ ೧೯೧೯ರಿಂದ ಒಂದು ಪತ್ರಿಕೆ ಪುತ್ತೂರಿನಲ್ಲಿ ಆರಂಭವಾಯಿತು. ಹಿಂದೊಮ್ಮೆ ಕೆನರೀಜ ವರ್ನ್ಯಾಕ್ಯುಲರ್ ಸೊಸೈಟಿ—ಎಂಬ ಮುಂಬಯಿ ಸರಕಾರದ ಸಂಸ್ಥೆಯೊಂದು ಈ ರೀತಿ ಬಾಸೆಲ್ ಮಿಶನ್ನಿನವರಿಗೆ ಅನುದಾನ ನೀಡಿದ್ದನ್ನು ನೋಡಿದ್ದೇವೆ. ಮುಂಬಯಿ ಕರ್ನಾಟಕದವರು ಹೀಗೆ ಉದ್ಯುಕ್ತರಾದದ್ದರ ಕಾರಣವೆಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊಳಹಳ್ಳಿ ಶಿವರಾವ್ ಮುಂತಾದವರ ಎತ್ತುಗಡೆಯಿಂದ ಸಹಕಾರೀ ಚಳವಳಿಯು ಬಲು ಬೇಗ ಆರಂಭವಾಗಿತ್ತು. ಇಷ್ಟೇ ಅಲ್ಲ, ಅಖಿಲ ಭಾರತ ಮಟ್ಟದಲ್ಲಿ ಅದಕ್ಕೆ ಮನ್ನಣೆ ದೊರಕಿತ್ತು. (ಸಹಕಾರಕ್ಕೆ ಸಂಬಂಧಿಸಿದ ರಾಯಲ್ ಕಮೀಶನ್ ತನ್ನ ವರದಿಯಲ್ಲಿ ಹಾಗೆಂದು ಈ ಮಾತನ್ನು ಕಾಣಿಸಿದೆ.)

ಸಹಕಾರಿಗಳು ಸಹಕಾರಿಗಳಿಗೋಸ್ಕರ ಏರ್ಪಡಿಸಿದ 'ತಿಳಿಗನ್ನಡ ಮಾಸಪತ್ರಿಕೆ' ಎಂಬ ವಿವರಣೆಯೊಡನೆ 'ಸಹಕಾರಿ' ಪತ್ರಿಕೆ ಪುತ್ತೂರಿನ ಸದಾನಂದ ಕೋಆಪರೇಟಿವ್ ಪ್ರೆಸ್‌ನಲ್ಲಿ ಮುದ್ರಣವಾಗತೊಡಗಿತು. ಸಂಪಾದಕರು-ಧಾರವಾಡ ಕಡೆಯಿಂದ ವಿ. ಎನ್. ಜೋಗ ಮತ್ತು ಕೆ. ಬಿ. ಅಂಕಲಗಿಯವರು. ಇತ್ತ ಪುತ್ತೂರಿನಿಂದ ಇದ್ದವರು ಮೊಳಹಳ್ಳಿ ಶಿವರಾಯರು ಮತ್ತು ಮಂಜೇಶ್ವರ ಅನಂತರಾಯರು. ಸಹಕಾರ ಕ್ಷೇತ್ರದಲ್ಲಿ ಹುದ್ದೆ ಬದಲಾದಂತೆ ಈ ಸಂಪಾದಕರಲ್ಲಿಯೂ ಆಗಾಗ ಬದಲಾವಣೆಗಳಾಗುತ್ತಿದ್ದವು. ಈ ಪತ್ರಿಕೆಯ ಬೆನ್ನೆಲುಬಾಗಿ ಇದ್ದವರು ಎಂ. ಅನಂತರಾಯರು. ಪತ್ರಿಕೆಗೆ ಒಳ್ಳೆಯ ಹೆಸರು ಬಂತು. ಪತ್ರಿಕೆಯ ಏಳನೆಯ ವರ್ಷದಲ್ಲಿ (೧೯೨೫) ಉಳ್ಳಾಲ ಮಂಗೇಶರಾಯರು ಅವರ ಸ್ಥಾನದಲ್ಲಿ ಬಂದರು. ತಮ್ಮ ಮೊದಲ ಸಂಪಾದಕೀಯದಲ್ಲಿ ಅನಂತರಾಯರ ಅವಿರತ ಶ್ರಮವನ್ನು ಹೊಗಳಿದಾಗ ಮರುಸಂಚಿಕೆಯಲ್ಲಿ ಅನಂತರಾಯರ ಪ್ರತಿಭಟನಾ ಪತ್ರ "ನಾನೊಬ್ಬನೇ ಇದರ ಯಶಸ್ಸಿಗೆ ಕಾರಣನಲ್ಲ" ಎಂದು! ಕಾಲ ಹಾಗಿತ್ತು. (ಅಂದ ಹಾಗೆ ಆ ವರ್ಷದಿಂದ ಧಾರವಾಡ ಕಡೆಯವರ ಹೆಸರುಗಳು ಕಾಣುತ್ತ ಇಲ್ಲ.) ಮಧ್ಯೆ, ೧೯೩೨-೩೮ರಲ್ಲಿ ಪತ್ರಿಕೆ ಸ್ಥಗಿತವಾಗಿತ್ತು. ೧೯೩೯ರಿಂದ ಹಿ. ರಾಮರಾಯ ಮಲ್ಯರು ಸಂಪಾದಕರಾಗಿ ಬಂದರು.

ವಿಷಯಗಳಲ್ಲಿ ಅದೆಂಥ ವೈವಿಧ್ಯ! ಹತ್ತಾರು ಬಗೆಯ ವಿಚಾರಗಳನ್ನು ವ್ಯಕ್ತಗೊಳಿಸಿ ಆ ಮೂಲಕವೂ ಸಹಕಾರ ಭಾವವನ್ನು ಹರಡಿದರೇನೊ. ಮಾಸ್ತಿಯವರು ಹಾಫೀಸ್ ಕವಿಯನ್ನು ಕುರಿತು ಬರೆದ ಲೇಖನ; ಗೋವಿಂದ ಪೈಗಳ 'ಗೀತಾಂಜಲಿ'ಯ ಅನುವಾದ; ಕೊಳ್ಳೆ ಪರಮೇಶ್ವರಯ್ಯನವರ ಭಾಷಾಶಾಸ್ತ್ರ ವಿವೇಚನೆ-ಇವೇ ಮೊದಲಾದ ಲೇಖನಗಳು ಸಹಕಾರದ ಪತ್ರಿಕೆಯಲ್ಲಿ ಆದೇಕೆ ಪ್ರಕಟವಾಗಬೇಕು! ಕೆಲವು ಕಾಲ ಶಿಕ್ಷಣ ವಿಷಯಕ ಪುರವಣಿಯೂ ಪ್ರಕಟವಾಗುತ್ತಿತ್ತು. ಪುಸ್ತಕ ವಿಮರ್ಶೆಗಳೂ ಬಂದಿವೆ. ಲೇಖಕನ ತಪ್ಪು ತೋರಿಸುವಲ್ಲಿ ನನ್ನವರು-ಎಂಬ ಮುಲಾಜೇ ಇಲ್ಲ. ಪಂಜೆಯವರ ಎರಡನೆಯ ಪದ್ಯ ಪುಸ್ತಕದ ವಿಮರ್ಶೆ ಆದಕ್ಕೊಂದು ಉದಾಹರಣೆ. 'ಸಹಕಾರಿ'ಯಲ್ಲಿ ಬಂದಿರುವ ಭಾವಗೀತೆಗಳು ಮೇಲ್ಮಟ್ಟದವು. ನವೋದಯ ಕಾವ್ಯಕ್ಕೆ ದ.ಕ. ಜಿಲ್ಲೆಯ ಕೊಡುಗೆಯನ್ನು ಹೇಳುವಾಗ ಉಲ್ಲೇಖನೀಯವಾದವುಗಳು.

ಅಂತೂ ಸ್ವಾತಂತ್ರ್ಯಪೂರ್ವದ ಕನ್ನಡ ಪತ್ರಿಕೆಗಳು ಸಮೀಕ್ಷೆಗೆ ಸುಲಭವಾಗಿ ಒಳಪಡುವಂತಹವಾಗಿದ್ದುವು. ಆ ಅವಧಿಯ ಪತ್ರಿಕೆಗಳ ಸಂಖ್ಯೆಯೇ ಅಳಿವಿನಲ್ಲಿದ್ದಿತು. (೨೦೦ ಮಾತ್ರ) ಹಾಗೂ ಪತ್ರಿಕೆಗಳನ್ನು ಹೊರಡಿಸುವಾಗ ಉದ್ದೇಶ ವಾರ್ತಿಕ, ವೈಚಾರಿಕ ಇಲ್ಲವೆ ಮನೋರಂಜಕ ಎಂಬುದು ಸ್ಪಷ್ಟವಾಗಿ ತಿಳಿಯಬರುವಂತಿತ್ತು. ಮತ್ತಲ್ಲದೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿಯೇ ಅನೇಕ ಪತ್ರಕರ್ತರ ದೃಷ್ಟಿ ಕೇಂದ್ರೀಕೃತವಾಗಿದ್ದು, ಸ್ವಾತಂತ್ರ್ಯ ದೊರೆತ ಮೇಲೆ ಅವರ ಗುರಿ ಕರ್ನಾಟಕ ಏಕೀಕರಣದ ಚಳವಳಿಯತ್ತ ತಿರುಗಿತು. ಈ ಕಾರ್ಯದಲ್ಲಿ, ಪತ್ರಿಕೆಯ ಸ್ವರೂಪ ಏನೇ ಇದ್ದರೂ, ರಾಜಕೀಯ ಒಲವು ಎಂಥದೇ ಇದ್ದರೂ ನಮ್ಮ ಪತ್ರಿಕೆಗಳು ನಿರ್ವ್ಯಾಜವಾಗಿ ನಾಡಿನ ಏಕೀಕರಣದ ಚಳವಳಿಯಲ್ಲಿ ಪಾಲ್ಗೊಂಡಿವೆ.

## ತೃತೀಯ ಘಟ್ಟ

ಈ ತೃತೀಯ ಘಟ್ಟದ ಪತ್ರಿಕೋದ್ಯಮವು ನಾನಾ ಬಗೆಯಿಂದ ಟಿಸಿಲೊಡೆಯಿತು. ಲೇಖನ ಸ್ವಾತಂತ್ರ್ಯವೆ? ನಮಗದು ಇದ್ದದ್ದೇ—ಎಂಬ ಮನೋಭಾವ ಪತ್ರಕರ್ತರದು. ಒಂದು ಪತ್ರಿಕೆಯನ್ನು ನಡೆಸುವಲ್ಲಿಯ, ಆ ಹಿಂದಿನ ಸೇವಾಮನೋಭಾವವಾಗಲೀ ಒಬ್ಬನೇ ವ್ಯಕ್ತಿಯ ಆಸ್ಥೆಯ ಪ್ರತಿರೂಪವಾಗಲೀ-ಉಳಿಯದೆ ಪತ್ರಿಕೋದ್ಯಮವು ಒಂದು ಸಂಸ್ಥೆಯ ಸ್ವರೂಪವನ್ನು ತಳೆಯಿತು. ದಿನ ಹಾಗೂ ವಾರಪತ್ರಿಕೆಗಳ ಪ್ರಸಾರ ಎಣೆಯಿಲ್ಲದಷ್ಟು ಹೆಚ್ಚಿತು. ಹಾಗಾಗಿ ಯಾವುದೊಂದು ಪತ್ರಿಕಾಲಯ ಕಚೇರಿಯಲ್ಲಿ ಒಬ್ಬ ಮುಖ್ಯಸ್ಥ, ನಾಲ್ಕಾರು ಜನ ಸಹಾಯಕರು—ಎಂಬ ಪರಿಸ್ಥಿತಿ ಹೋಗಿ ಸುದ್ದಿ ವಿಭಾಗ, ಜಾಹೀರಾತು ವಿಭಾಗ, ಕಲಾ

[illegible] ಆತಿಯಲ್ಲಿ [illegible] ವಿಭಾಗಗಳು ಕಾಣತೊಡಗಿದವು. ಒಂದು ಪತ್ರಿಕಾ ಸಂಸ್ಥೆ ಒಂದೇ ಪತ್ರಿಕೆಗೆ [illegible] ಎರಡು-ಮೂರನ್ನು [illegible] ಪ್ರವೃತ್ತಿ ಕಾಣಿಸಿಕೊಂಡಿತು. ಗ್ರಾಮೀಣ ಪತ್ರಿಕೋದ್ಯಮದ ಪ್ರೇರಣೆ [illegible] ಪತ್ರಿಕೋದ್ಯೋಗಿಗಳಿಗೆ ವಿಶೇಷ ಮಹತ್ವ ಪ್ರಾಪ್ತವಾಯಿತು. ಪತ್ರಿಕಾ ಸಂಘಗಳು ಹುಟ್ಟಿಕೊಂಡವು; ಪತ್ರಿಕೋದ್ಯಮ [illegible] ವಿಶ್ವವಿದ್ಯಾಲಯಗಳವರು ಆರಂಭಿಸಿದರು. ಅತ್ಯಂತ ವಿಶಾಲ ಪಾತಳಿಯ, ನಾನಾ ಶಾಖೆಗಳಿಂದ ಕೂಡಿದ್ದಾಗಿ, [illegible] ಉದ್ಯಮವಾಗಿ ವಹಿಸುತ್ತ ಕೆಲವೊಂದು ವಿಕ್ರಮಗಳನ್ನು ಸ್ಥಾಪಿಸುತ್ತ ನಮ್ಮ ಪತ್ರಿಕೋದ್ಯಮ ಅಭಿವರ್ಧಿಸುತ್ತ ಮುನ್ನಡೆದಿದೆ. [illegible]ನ್ನತವನ್ನು ಪಡೆದಿದೆ.

[illegible]ದ ಪತ್ರಿಕೋದ್ಯಮದ ಪ್ರೌಢದೆಸೆಯ ಲಕ್ಷಣವು ಸ್ವಾತಂತ್ರ್ಯದ ಮರುವರ್ಷವೇ 'ಪ್ರಜಾವಾಣಿ'ಯ ಮೂಲಕ [illegible]ಕವಾಯಿತು. 'ಡೆಕ್ಕನ್ ಹೆರಾಲ್ಡ್', 'ಸುಧಾ', 'ಮಯೂರ'ಗಳನ್ನು ಸೇರಿಸಿಕೊಂಡು ಬೆಳೆಯಿತು. ಪತ್ರಿಕೋದ್ಯಮದ ಆಧುನೀಕರಣವೂ 'ಪ್ರಜಾವಾಣಿ'ಯವರ ದಿ ಮೈಸೂರ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ ಸಂಸ್ಥೆಯ ಮೂಲಕ ಆರಂಭವಾಯಿತು ಇತ್ತ ಹುಬ್ಬಳ್ಳಿಯಲ್ಲಿ ನೇಸಿಯವರ 'ನವಯುಗ' ಬಂದಿತು. ದಿನಪತ್ರಿಕೆಯಾಗಿ, ತದನಂತರ ಕೆ. ಎಚ್. ಪಾಟೀಲರ 'ವಿ[illegible] ಕರ್ನಾಟಕ'. ಪಾ.ಪು. [illegible]ವರ 'ವಿಶ್ವವಾಣಿ', 'ಪ್ರಪಂಚ'ಗಳು. ಆದರೆ ಉತ್ತರ ಕರ್ನಾಟಕಸ್ಥರಿಗೆ 'ಸಂಯುಕ್ತ ಕರ್ನಾಟಕ'ದ್ದೇ ಹೆಚ್ಚಿನ ನಂಟು-ಮದ್ರಾಸಿಗರಿಗೆ 'ಹಿಂದೂ' ಪತ್ರಿಕೆಯಿದ್ದಂತೆ. ದ.ಕ. ಜಿಲ್ಲೆಯವರಲ್ಲಿ 'ನವಭಾರತ'ವು ಅದೇ ಹಿಡಿತವನ್ನು ಇಟ್ಟುಕೊಂಡಿತ್ತು. ಅದರ ಸ್ಥಾನದಲ್ಲಿ ಈಗ 'ಉದಯವಾಣಿ' ಬಂದಿದೆ.

ಪ್ರಕೃತ, ಕೆಲವೊಂದು ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ, ಮೂರೂ ಘಟ್ಟಗಳನ್ನು ಸಮಾವೇಶಗೊಳಿಸಿ ಪತ್ರಿಕಾ ಲೋಕವನ್ನು ವಿವೇಚಿಸೋಣ. ಮೊದಲಿಗೆ ಮಹಿಳೆಯರು.

ಕಲ್ಯಾಣ-ಸರಸ್ವತಿ

ಮಹಿಳೆಯರ ಆಸಕ್ತಿಯ ವಿಷಯಗಳು ಹಾಗೂ ಅವರ ಮನೋರಂಜನೆ-ಇವನ್ನು ಮುಖ್ಯವಾಗಿ ಇಟ್ಟುಕೊಂಡು ಇದುವರೆಗೆ ಕೆಲವೇ ಪತ್ರಿಕೆಗಳು ಹೊರಟಿವೆ. ಎಲ್ಲವೂ ಏಕಾಂಗ ಸಾಹಸಗಳು. ಕೆಲವೊಂದು ಹೆಸರುಗಳು ಮಹಿಳಾ ಲೇಖಕಿ ಎಂಬ ನಾತೆಯಿಂದ ಪರಿಚಿತ. ಉದಾಹರಣೆ-'ಸುಪ್ರಭಾತ'ವನ್ನು ನಡೆಸುತ್ತಿದ್ದ (೧೯೨೮) ಸರಸ್ವತಿ ರಾಜವಾಡೆ, 'ಸೋದರಿ'ಯ ಸಂಪಾದಕಿ ಎಂ. ಆರ್. ಲಕ್ಷ್ಮಮ್ಮ, ಧಾರವಾಡದ ವನಿತಾ ಸೇವಾಸಮಾಜದ 'ವೀರಮಾತೆ'ಯನ್ನು ೧೯೫೦ರ ದಶಕದಲ್ಲಿ [illegible]ಪಾದಿಸುತ್ತಿದ್ದ ಸರೋಜಿನಿ ಮಹಿಷಿ. ಆದರೆ 'ಮಹಿಳಾ ಜ್ಯೋತಿ'ಯ (ಹುಬ್ಬಳ್ಳಿ) ಶ್ರೀಮತಿ ಕಲಾಲ, 'ಪಾರಿಜಾತ'ದ [illegible]೬೨) ಜಿ. [illegible]ದೇವಮ್ಮ, 'ಚಿತಾ' ಪತ್ರಿಕೆಯ ದ್ವಾರಕಾಬಾಯಿ (ಸ್ವಾತಂತ್ರ್ಯಪೂರ್ವದ ಕಾಲದಲ್ಲಿ) ಇವರೆಲ್ಲ ಅಪರಿಚಿತರು. [illegible] ಜನ್ನೂರಿನ [illegible] 'ತಿರುಮಲಾಂಬಾ' ಅವರದು ಸಾಹಿತ್ಯಲೋಕದಲ್ಲಿ ಬಹು ದೊಡ್ಡ ಹೆಸರು. ಪತ್ರಿಕಾ ಕ್ಷೇತ್ರದಲ್ಲಿಯೂ ಹಿರಿಮೆಯಾಗಿ ಕೆಲಸ ಮಾಡಿದ್ದಾರೆ 'ಕರ್ನಾಟಕ ನಂದಿನಿ' (೧೯೧೬-೧೯೨೦), 'ಸನ್ಮಾರ್ಗ ದರ್ಶಿನಿ' (೧೯೨೨) ಇತ್ಯಾದಿ, ಪ್ರಥಮ ಮಹಿಳಾ ಪತ್ರಕರ್ತೆ ಎಂಬ ಸನ್ಮಾನ ಅವರಿಗೆ ಲಭಿಸಿದೆ.

ಆದರೆ ಪತ್ರಕರ್ತೆಯರಲ್ಲಿ ಎದ್ದು ಕಾಣುವ ಹೆಸರು ಆರ್. ಕಲ್ಯಾಣಮ್ಮ ಅವರದು. ಅಖಂಡ ೩೫ ವರ್ಷಗಳ ವರೆಗೆ (೧೯೨[illegible]-೧೯೫[illegible]) ಮಹಿಳಾ ಅಭಿವೃದ್ಧಿಯ ನಿರ್ದಿಷ್ಟ ಗುರಿಯನ್ನಿಟ್ಟುಕೊಂಡು ಸಂಪಾದಿಸಿದರು. ಅವರ 'ಸರಸ್ವತಿ' ಪತ್ರಿಕೆಯು 'ಮಹಿಳೆಯರು ಬೀದಿಯಲ್ಲಿ ನಡೆದು ಹೋಗುತ್ತಿದ್ದದ್ದೇ ಅಪರಾಧ'-ಎನ್ನುತ್ತಿದ್ದ ಕಾಲದಲ್ಲಿ ಆರಂಭವಾಯಿತು. ಅದರಲ್ಲಿ ಇತರ ವಿಷಯಗಳ ಬಗೆಯೂ ಲೇಖನಗಳು ಪ್ರಕಟವಾಗಿದ್ದವು. ಮೇಲ್ಮಟ್ಟದ ಸಾಹಿತ್ಯ ಪತ್ರಿಕೆಯಾದ್ದರಿಂದ ಬೇರೆ ಸಾಹಿತ್ಯಕರು ತಪ್ಪದೆ ಲೇಖನಗಳನ್ನು ಕಳಿಸುತ್ತಿದ್ದರು. (ಉದಾ: ಪೇಜಾವರ ಸದಾಶಿವರಾಯರು)

ಆದರೂ, ಮಹಿಳೆಯರೇ ಕೊಂಡು ಓದಬೇಕು ಎಂಬ ಸದಾಶಯ ಅವರದಾಗಿತ್ತು.

"ಕನ್ನಡ ಮಹಿಳೆಯರಿಗಾಗಿ ಕಾಲು ಶತಮಾನ ಸೇವೆ ಸಲಿಸಿರುವ ಪತ್ರಿಕೆ ಇದೊಂದೇ ಎನ್ನುವುದು ಎಲ್ಲರೂ ಅರಿತ ವಿಷಯವೇ ಆದರೂ ತಮ್ಮ ಮನೋಭಿಪ್ರಾಯವನ್ನೂ ತಮ್ಮ ಉನ್ನತಿಯ ಮಾರ್ಗವನ್ನೂ ಧೈರ್ಯದಿಂದ ಸೂಚಿಸಲು, ತಮ್ಮ [illegible] ಸರಿಯಾದ [illegible]ದಿಯನ್ನು ತೋರಲು ಸಾಕಷ್ಟು ಮಹಿಳೆಯರು ಮುಂದಾಗಬೇಕು." (ಜನವರಿ ೧೯೪೭ರ [illegible]ಕೆ)

ಅಪರೂಪಕ್ಕೆ ಆ ರೀತಿ ಮುಂದಾಗಬಯಸಿದ ಶ್ರೀಯರಿಗೆ ಮನೆಯಲ್ಲಿ ಸ್ವಾತಂತ್ರ್ಯವಿರಲಿಲ್ಲ—ಪತ್ರಿಕೆಗೆ ಚಂದಾಹಣ ಕೊಡುವುದಕ್ಕೂ! ಹಾಗೆ ಯಾರಾದರೂ ಮಹಿಳೆ ಸಂಪಾದಕಿಗೆ ಪತ್ರ ಬರೆದರೆ ಸಾಕು. ಸುಮಾರು ೪೦-೫೦ ಪ್ರತಿಗಳು ಆ ರೀತಿ ಉಚಿತವಾಗಿ ವಿನಿಯೋಗವಾಗುತ್ತಿದ್ದವು

೧೯೫೫ರಲ್ಲಿ ಮುಂದೆ 'ಸರಸ್ವತಿ'ಯನ್ನು ಬೇರೆಯವರು ಮುಂದುವರಿಸಿದರಾದರೂ ೧೯೬೩ಕ್ಕೆ ತಡೆದು ನಿಂತಿತು. ಯಾವುದೇ ಪ್ರಥಮ ದರ್ಜೆಯ ಪುರುಷ ಪತ್ರಕರ್ತರ ಸಾಲಿನಲ್ಲಿ ಎಣೆಯಾಗಿ ನಿಲಬೇಕಾದ ಹೆಸರು ಕಲ್ಯಾಣಮ್ಮನವರದು.

**ವಿನೋದ, ವಿಕಟಗಳ ಲಾಸ್ಯ**

'ಅಧಮರಿಂದ ಉತ್ತಮರಿಗುಂಟಾಗುವ ತಾಪ, ಸಜ್ಜನರಲ್ಲಿ ವಿಪ್ರಲಾಪ; ಅನಾಥರ ವಿಲಾಪ, ಸೋಮಾರಿಗಳ ಪ್ರಲಾಪ; ಕಾಮಿನಿಯರ ಸಲ್ಲಾಪ; ರಸಿಕರ ಆಲಾಪ; ಜಾರರ ಅಪಲಾಪ; ಮಾನಿನಿಯರ ಕೋಪ-ಈ ಕಲಾಪಗಳ ಚಿತ್ರಗಳಿಂದೊಪ್ಪುವುದು ನಮ್ಮ ವಿಕಟಪ್ರತಾಪ!' ಈ ವಿಶೇಷತೆಗಳನ್ನು ಹೊತ್ತುಕೊಂಡು, ಇಂಗ್ಲಿಷಿನ 'Punch' ಪತ್ರಿಕೆಯನ್ನೂ ಗಮನದಲ್ಲಿ ತಂದುಕೊಂಡು ೧೯೦೫ರಲ್ಲಿ 'ವಿಕಟ ಪ್ರತಾಪ'ವು ಹೊರಟಿತು. ನಮ್ಮಲ್ಲಿಂದ ೫೮-ಉತ್ತರ ಅರ್ಕಾಟ್ ಜಿಲ್ಲೆಯ ಕುಪ್ಪಂ—ಎಂಬ ಊರಿನಿಂದ. ಮೈಸೂರು ಸಂಸ್ಥಾನದಿಂದಲೇ ಇನ್ನೇನು ಹೊರಡಿಸಬೇಕು ಎಂಬಷ್ಟರಲ್ಲಿಯೆ ಪತ್ರಿಕಾ ವಿಚಾರದ ಕರಾಳ ಶಾಸನ ಅಡ್ಡ ಬಂತು.

ಪತ್ರಿಕೆಯ ವಿಷಯಗಳೆಲ್ಲಾ ವಿಕಟಮಯ, ವಿಕಟ ವಾರ್ತಾತರಂಗ, ವಿಕಟ ಸಂವಾದ, ವಿಕಟರಂಭಾ ನರ್ತನ ಮತ್ತು ವಿಕಟವಾಗಿಯೇ ಕಾಣಿಸುವ ಪಾತ್ರಗಳು! ಅವಲಕ್ಕಿ ಅಮ್ಮಣ್ಣಮ್ಮ, ಮೊಸರವಲಕ್ಕಿ ಶೀತಮ್ಮ, ಸಂಡಿಗೆ ಗುಂಡಕ್ಕ, ದೋಸೆ ವೆಂಕೂಬಾಯಿ-ಇವರು ಮಹಿಳಾಮಣಿಗಳಾದರೆ ಅವಿವೇಕಾವಧಾನಿ, ತಿಂಡಿಪೋತ, ಮಂದಮತ್ಯಾಚಾರ್ಯ – ಇವರೇ ಮೊದಲಾದವರು ಪುರುಷರತ್ನಗಳು.

ಹಾಂ. 'Punch'ನಲ್ಲಿ ಬರುತ್ತಿದ್ದ ಹಾಸ್ಯಕ್ಕೂ ಇಲ್ಲಿಯದಕ್ಕೂ ಅಜಗಜಾಂತರ.

ಇದುವೆ ಕನ್ನಡದ ಪ್ರಥಮ ಹಾಸ್ಯಪತ್ರಿಕೆ ಎಂದು ನನ್ನ ತಿಳಿವಳಿಕೆಯಾಗಿತ್ತು. ಆದರೆ ಇದಕ್ಕಿಂತ ಕೆಲವು ತಿಂಗಳುಗಳ ಹಿಂದೆ ಕಾರವಾರದಿಂದ 'ವಿನೋದಿನೀ' ಎಂಬ ಪತ್ರಿಕೆ ಹೊರಡುತ್ತಿತ್ತಲ್ಲ? ಕರ್ಕಿಯ ವಿನಾಯಕ ಶಾಸ್ತ್ರಿ ಮತ್ತು ನಾರಾಯಣ ಶಾಸ್ತ್ರಿ ಎಂಬವರು ಅದರ ಸಂಪಾದಕ/ಸಂಚಾಲಕರು. ಆದರದು ಕಲಚ್ಚಿನ ಮುದ್ರಣ-'ಶೇಖ ಆದಂ ಮೊಹಮ್ಮಡನ್ ಪ್ರೆಸ್' ಎಂಬಲ್ಲಿ! ಎಷ್ಟು ಕಾಲ ಬದುಕಿ ಇದ್ದಿತೋ! ಅದರ ಒಂದಾದರೂ ಪ್ರತಿ ಸಿಕ್ಕಿದರೆ, ಅದು ಹಾಸ್ಯ ಪತ್ರಿಕೆಯೇ ಹೌದು!—ಎಂದು ನಿರ್ಣಯಿಸಬಹುದಿತ್ತು.

ಆದರೆ ಕನ್ನಡಿಗರ ಹಾಸ್ಯ ಪ್ರವೃತ್ತಿಗೆ ಅತ್ಯಂತ ದೀರ್ಘ ಕಾಲದ ವರೆಗೆ (೧೯೧೧-೧೯೬೯) ಕನ್ನಡಿಯನ್ನು ಹಿಡಿದ ಪತ್ರಿಕೆ ಎಂದರೆ ಬೆಂಗಳೂರಿನ 'ವಿಕಟವಿನೋದಿನಿ' ಬಿ. ಶಿವಪ್ಪ ಮತ್ತಿತರರ ಜಿಗುಟುತನವೇ ಅದರ ಅರ್ಧಶತಕದ ಅಸ್ತಿತ್ವಕ್ಕೆ ಕಾರಣ.

ಈಚೆಗೆ ಇನ್ನೊಂದು ಹಾಸ್ಯ ಪತ್ರಿಕೆ ಕಣ್ಮರೆಯಾಯಿತು. ಅದುವೆ 'ಕೊರವಂಜಿ'. ಕನ್ನಡದ ಅನೇಕ ಹಿರಿಯ ಹಾಸ್ಯಲೇಖಕರ ಬರೆಹಗಳು ಅದರಲ್ಲಿ ಪ್ರಕಟವಾಗುತ್ತಿದ್ದವು. ಆರ್. ಕೆ. ಲಕ್ಷ್ಮಣರ ವ್ಯಂಗ್ಯಚಿತ್ರ ಸಾಧನೆಗೆ 'ಕೊರವಂಜಿ'ಯೇ ಗರಡಿ ಮನೆಯಾಗಿ ಪರಿಣಮಿಸಿತ್ತು. ಪತ್ರಿಕೆ ನಿಂತು ಹೋದಾಗ ಮಮ್ಮಲ ಮರುಗಿದ ಅನೇಕರಲ್ಲಿ ನಾನೂ ಒಬ್ಬ. ಪತ್ರಿಕೆಯ ಸರ್ವಸ್ವವಾಗಿದ್ದ 'ರಾ.ಶಿ' ಅವರೂ ಈಚೆಗೆ ತಮ್ಮ ಕೈಗೂಸು ಕೊರವಂಜಿಯನ್ನು ಬಿಟ್ಟಿರಲಾರದೆ ಅಲ್ಲಿಗೆ ಹೋದರಲ್ಲ!

೧೯೯೦-೨೦೦೦ರ ದಶಕಗಳಲ್ಲಿ 'ವಿಕಟಮಾವ' (ಹೊಳೆನರಸೀಪುರ), 'ವಿನೋದ ಪ್ರಪಂಚ' (ಬೆಂಗಳೂರು), 'ವಿನೋದ ಭಾರತ' (ಮಂಗಳೂರು), ಇವುಗಳು ಅಲ್ಪಾಯುಷಿಗಳನ್ನು ಹೆಸರಿಸುವೆ. ಸದ್ಯದ 'ವಿನೋದ' ಹಾಗೂ 'ಅಪರಂಜಿ' ಎಂಬೀ ಹಾಸ್ಯಪತ್ರಿಕೆಗಳು ಅವಿರತವಾಗಿ ಮುಂದುವರಿಯುವಂತೆ ನಾವು ನೋಡಿಕೊಳ್ಳಬೇಕಾಗಿದೆ.

ಬಿ. ಎನ್. ಗುಪ್ತರು ಮತ್ತು 'ಪ್ರಜಾಮತ'

'ಪ್ರಜಾಮತ' ಪತ್ರಿಕೆಯ ಮೂಲ ಕಲನೆ, ಅದರ ಗರ್ಭಸ್ಥ ಸ್ಥಿತಿ; ಹೆರಿಗೆಯ ನೋವು, ಎತ್ತಿ ಮುದ್ದಾಡಿದ್ದು, ಬೆಳೆಸಿದ್ದು–ಎಲ್ಲವನ್ನೂ ಬಿ. ಎನ್. ಗುಪ್ತರು ಮಾಡಿದರು. ಇದಕ್ಕೆ ಏನೇನೆಲ್ಲ ವಿಘ್ನಗಳು. ಪತ್ರಿಕೆಗೆ ೧೫ ವರ್ಷ ತುಂಬಿದಾಗ, ಒಂದು ಸಾವಿರದಿಂದ ೩೦ ಸಾವಿರದ ವರೆಗೆ ಅದರ ಪ್ರಸರಣ ಹೆಚ್ಚುವಷ್ಟು ಪ್ರಬುದ್ಧವಾದಾಗ ಬೇರೊಬ್ಬರಿಗೆ ಒಪ್ಪಿಸಿದರು. ಅವರು ನಡೆಸಿದ್ದು ಅದೊಂದೇ ಪತ್ರಿಕೆಯಲ್ಲ, 'ಕಥಾಂಜಲಿ', 'ಜನವಾಣಿ'; ಹಾಗೇನೆ ಇಂಗ್ಲಿಷ್, ತೆಲುಗು, ತಮಿಳು ಭಾಷಾ ಪತ್ರಿಕೆಗಳೂ ಅವರ ಪದರಿನಲ್ಲಿದ್ದುವು.

ಭೈಸಾನಿ ನರಸಿಂಹೇಶ್ವರ ಗುಪ್ತರು ವೃತ್ತಿಯಲ್ಲಿ ಉದ್ಯಮಿಗಳು. ಪ್ರವೃತ್ತಿಯಲ್ಲಿ ಗಾಂಧೀವಾದಿಗಳು. ಅವರನ್ನು ನೆನೆದಾಗಲೆಲ್ಲ ರಾಮನಾಥ ಗೋಯೆಂಕಾ ನೆನಪಾಗುತ್ತಾರೆ. ಅವರ ಹಾಗೆಯೇ ಗುಪ್ತರು ಅಪಟ ಹೋರಾಟಗಾರರು.

ಗುಪ್ತರು ತಾವು ಕಾರ್ಯದರ್ಶಿಯಾಗಿದ್ದ ಮೈಸೂರಿನ 'ಪ್ರಜಾಪಕ್ಷ'ದ ವತಿಯಿಂದ ಪತ್ರಿಕೆಯೊಂದನ್ನು ಹೊರಡಿಸಬೇಕೆಂದರು. ಆದರೆ ಪತ್ರಿಕೆ ಆರಂಭವಾಗುವ ಮುನ್ನವೆ, ಎಂದರೆ ಪತ್ರಿಕಾ ಶಾಸನದನ್ವಯ ಅನುಮತಿಗಾಗಿ ಅರ್ಜಿ ಕೊಡುವ ಮುನ್ನವೇ, ದಿವಾನರು ನಿರ್ಣಯವನ್ನೂ ಮಾಡಿಯಾಗಿತ್ತು! ಗುಪ್ತರು ತಮಗೆ ಪರಿಚಿತವಿದ್ದ ಮದ್ರಾಸದಿಂದ 'ಪ್ರಜಾಮತ'ವನ್ನು ಆರಂಭಿಸಿದರು. (೧೯೩೧). ಒಂದೆರಡು ವರ್ಷ ಕಳೆದ ಮೇಲೆ ಬೆಂಗಳೂರಿಗೇ ಅದನ್ನು ತರಲು ಪ್ರಯತ್ನಿಸಿದಾಗ, ದಿವಾಣ ಮಿರ್ಜಾ ಇಸ್ಮಾಯಿಲರು ಖಂಡತುಂಡವಾಗಿ ಅನುಮತಿಯನ್ನು ನಿರಾಕರಿಸಿದರು. ಏಕೆಂದರೆ ಪತ್ರಿಕೆಯು ಅಷ್ಟರೊಳಗೆ ತನ್ನ ನಿರ್ದಾಕ್ಷಿಣ್ಯ ಟೀಕೆಯಿಂದ ಸರಕಾರವನ್ನು ಅಂಜಿಸಿಬಿಟ್ಟಿತ್ತು.

ಪತ್ರಿಕೆಯೊಂದನ್ನು ಆರಂಭಿಸುವುದು ಸುಲಭ. ಅದನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುವುದಕ್ಕೆ ವಿಶೇಷವಾದ ದಕ್ಷತೆ, ಮೆಹನತ್ತು ಬೇಕು. ಅದರಲ್ಲಿಯೂ ೩೦ ಸಾವಿರದವರೆಗೆ ಅದರ ಪ್ರಸಾರವು ವರ್ಧಿಸುವಂತಾದಾಗ, ಅವರ ನೆಚ್ಚಿನ ಶಿಷ್ಯರೂ ಮದ್ರಾಸದ ದಿನಗಳಲ್ಲಿ ಪತ್ರಿಕೆಯ ಸರ್ವ ಜವಾಬ್ದಾರಿಯನ್ನು ಹೊತ್ತಿದ್ದವರೂ ಆದ ಮಾ. ನಾ. ಚೌಡಪ್ಪನವರು ಹೇಳಿದ ಒಂದು ಘಟನೆಯಿಂದ ಪತ್ರಿಕೋದ್ಯಮದ ಸಣ್ಣ ವಿಷಯಗಳಿಗೂ ಅವರು ಕೊಡುತ್ತಿದ್ದ ಗಮನದ ಕಲ್ಪನೆ ಬರುವುದು:

''ಮದರಾಸಿನಲ್ಲಿ ಪತ್ರಿಕೆ ಹೊರಡುತ್ತಿದ್ದಾಗ ಗುಪ್ತರು ವಾರದಲ್ಲಿ ನಾಲ್ಕು-ಐದು ದಿನ ಕರ್ನಾಟಕದಲ್ಲಿಯೇ ಓಡಾಡುತ್ತಿದ್ದರು. ಪತ್ರಿಕೆ ಹೊರಡುವ ಹಿಂದಿನ ದಿನ ಬರುತ್ತಿದ್ದರು. ಹಾಗೆ ಬಂದ ಒಂದು ದಿನ 'ಎಲ್ಲಪ್ಪಾ, ಲೆಕ್ಕದ ಪುಸ್ತಕ?' ಎಂದು ಕೇಳಿದರು. ಕೊಟ್ಟೆ. ಅದರಲ್ಲಿ ಪತ್ರಿಕೆಯನ್ನು ಕಟ್ಟಲು ಮೂರೂವರೆ ಆಣೆಯ ಹುರಿಯ ಐಟಮ್ ಇದ್ದಿತು. 'ಇದೇನು ಅರ್ಧ ಆಣೆ ಹೆಚ್ಚಿಗೆ ಆಯ್ತಲ್ಲ? ನಾಳೆ ಹುರಿಯನ್ನು ತಂದ ಆ ಹುಡುಗನಿಂದ ಅರ್ಧಾಣೆ ವಸೂಲು ಮಾಡಬೇಕು' ಎಂದರು.

ನನಗೆ ಬೇಸರ, ಒಂದು ಅರ್ಧ ಆಣೆಗೋಸ್ಕರ ಇವರು ಕಿರಿ ಕಿರಿ ಮಾಡುತ್ತಾರಲ್ಲಾ, ಎಂದು. 'ನೋಡು, ನೀನು ಹೀಗೇ ಅವನಿಗೆ ಚಿಲ್ಲರೆ ಕೆಲಸಕ್ಕಾಗಿ ಹಣ ಕೊಡ್ತಾ ಇರ್ತೀಯ. ಅವನು ಇದೇ ರೀತಿ ಅಷ್ಟಿಷ್ಟು ಹಣ ಉಳಿಸಿಕೊಳ್ಳುತ್ತಾನೆ. ಮುಂದೆ ಕಳ್ಳನಾಗುತ್ತಾನೆ. ಒಂದು ಕೆಲಸ ಮಾಡು. ನಾಳೆ ಅವನು ಬಂದನೆಂದರೆ, - ನೋಡಪ್ಪ, ನೀನು ಈ ಹುರಿಯನ್ನು ಬೇರೆ ಅಂಗಡಿಯಿಂದ ತಂದ ಹಾಗೆ ಕಾಣುತ್ತದೆ. ಅದಕ್ಕೇ ಅರ್ಧ ಆಣೆ ಜಾಸ್ತಿ ಕೊಟ್ಟದ್ದೀಯ. ಆದ್ದರಿಂದ ಆ ಅಂಗಡಿಯವನಿಗೆ ಹೋಗಿ ಹುರಿಯನ್ನು ಪರತು ಕೊಡುತ್ತ 'ಅರ್ಧ ಆಣೆ ಜಾಸ್ತಿ ತಗೊಂಡಿದ್ದೀಯಾ, ಹಣ ವಾಪಸ್ಸು ಕೊಡು' ಎಂದು ಹುಡುಗ ಹೇಳಲಿ. ಅದನ್ನು ಕೇಳಿದ ಹುಡುಗ ಗಾಬರಿಯಾಗುತ್ತಾನೆ. ಮುಂದೆ ನೋಡು' ಎಂದು ನುಡಿದರು. ನಾನು ಹುಡುಗನಿಗೆ ಹಾಗೇನೆ ತಿಳಿಸಿದೆ. ಹುಡುಗ ತುಸು ಹೊತ್ತಿನ ಮೇಲೆ ಅರ್ಧ ಆಣೆ ತಂದುಕೊಟ್ಟ. ಆಗ ಗುಪ್ತರು ಹೇಳಿದರು 'ಇದರಿಂದ ಆ ಹುಡುಗ ಎಚ್ಚರಿರುತ್ತಾನೆ. ಪ್ರಾಮಾಣಿಕನಾಗಿ ಉಳಿಯುತ್ತಾನೆ. ಅದಕ್ಕಿಂತ ಹೆಚ್ಚಾಗಿ ಈ ಎಡಿಟರ್ ಜನರು ಅಷ್ಟೇನೂ ಚುರುಕರಲ್ಲ ಸುಲಭವಾಗಿ ಮೋಸ ಮಾಡಬಹುದು–ಎಂದು ನಿನ್ನಲ್ಲಿ ಅಗೌರವ ಭಾವನೆ ತೋರಿಸುವುದಿಲ್ಲ.''

ಇನ್ನೊಬ್ಬರ ಮನಸ್ಸನ್ನೂ ನಡೆವಳಿಕೆಯನ್ನೂ ಗುಪ್ತರು ಸೂಕ್ಷ್ಮವಾಗಿ ಅರಿತುಕೊಳ್ಳುತ್ತಿದ್ದರು. ಅವರದು ಅತಿ ಹರಿತ ಬುದ್ಧಿ, ಸದೈವ ಚಟುವಟಿಕೆಯಿಂದ ಕೂಡಿರುತ್ತಿದ್ದರು. 'ಪ್ರಜಾಮತ'ದ ಯಶಸ್ಸಿಗೆ ಈ ಅಂಶಗಳೂ ಕಾರಣವಾದುವು.

### ಪಿ. ಆರ್. ರಾಮಯ್ಯ ಅವರ 'ತಾಯಿನಾಡು'

ರಾಷ್ಟ್ರೀಯ ಮನೋಭಾವವನ್ನಿಟ್ಟುಕೊಂಡೂ ದಿವಾನರೊಂದಿಗೆ ಸ್ನೇಹವನ್ನುಳಿಸಿಕೊಂಡಿದ್ದ ವ್ಯಕ್ತಿ—ಪಿ. ಆರ್. ರಾಮಯ್ಯನವರು. ೧೯೨೭ರಿಂದ ೧೯೫೬ರ ವರೆಗೆ ಎಂದರೆ, ಕರ್ನಾಟಕ ಏಕೀಕರಣವಾಗುವವರೆಗೆ ಪತ್ರಿಕೆಯ ಸೂತ್ರಧಾರತ್ವವನ್ನು ವಹಿಸಿದ್ದ ರಾಮಯ್ಯನವರು ಇತರ ಕನ್ನಡ ದಿನಪತ್ರಿಕೆಗಳಿಗಿದ್ದಿರದ ಕೆಲವು ವಿಶೇಷತೆಗಳನ್ನು ಸಾಧಿಸಿದ್ದರು. ರಾಯಿಟರ್ ಮತ್ತು ಎ.ಪಿ.ಐ. ಸುದ್ದಿ ಸಂಸ್ಥೆಗಳಿಂದ ವಿದೇಶಿ ಸುದ್ದಿಗಳನ್ನು ಶೀಘ್ರತಮವಾಗಿ ತರಿಸಿದವರು-ರಾಮಯ್ಯನವರು. ೧೯೩೦ರ ದಶಕದ ನಾಲ್ವಡಿ ಕೃಷ್ಣರಾಜರ ವಿದೇಶ ಸಂಚಾರವು, ಸಕೃತ್ ಆಗಿ ವರದಿ ಬಂದದ್ದು-ಈ 'ತಾಯಿನಾಡಿ'ನಲ್ಲಿ, ಕನ್ನಡ ಪತ್ರಿಕೆಯ ವರದಿಗಾರನೊಬ್ಬ ವರದಿ ಮಾಡಲೆಂದು ಮೊದಲ ಬಾರಿಗೆ ವಿದೇಶಕ್ಕೆ ಹೋದ ಘಟನೆಯದು. 'ದಿಲ್ಲಿ ಬಹುತ್ ದೂರ್' ಇದ್ದ ಆಗಿನ ಕಾಲದಲ್ಲಿ ಸೆಂಟ್ರಲ್ ಲೆಜಿಸ್ಲೇಟಿವ್ ಅಸೆಂಬ್ಲಿಯ ಕಾರ್ಯಕಲಾಪಗಳನ್ನು ವರದಿ ಮಾಡಲು, ಪ್ರಥಮತಃ ಕನ್ನಡ ಪತ್ರಿಕೆಗೆ ಪ್ರೆಸ್ ಗ್ಯಾಲರಿಯ ಟಿಕೆಟ್, 'ತಾಯಿನಾಡಿ'ಗೆ ದೊರಕಿತ್ತು. ಸ್ವಾತಂತ್ರ್ಯಪೂರ್ವ ಕಾಲದಲ್ಲಿ 'ತಾಯಿನಾಡು'-ಹಳೆಯ ಮೈಸೂರಿನ ಮನೆಮನೆಗೂ ಹೋಗುತ್ತಿತ್ತು.

ರಾಮಯ್ಯನವರು ಆಗ ಹದಿನಾರಾಣೆ ಕಾಂಗ್ರೆಸಿಗರು. ಆದರೆ ಸ್ವಾತಂತ್ರ್ಯ ಬಂದ ಮೇಲೆ ಮಂತ್ರಿಗಳು ಮಾಡುತ್ತಿದ್ದ ತಪ್ಪುಗಳನ್ನು ನಿರ್ಭಿಡೆಯಿಂದ ಎತ್ತಿ ತೋರಿಸುತ್ತಿದ್ದರು. 'ಹಾಗೆ ಮಾಡಬಾರದು. ಅಷ್ಟೇ ಅಲ್ಲ, ಕಾಂಗ್ರೆಸ್ ವಾಣಿಯಾಗಿ ನಿಮ್ಮ ಪತ್ರಿಕೆ ಹೊರಬರಬೇಕು' ಎಂದೆಲ್ಲ ಅವರನ್ನು ಪುಸಲಾಯಿಸಲು ಕೆಲ ಕಾಂಗ್ರೆಸ್ ಮುಂದಾಳುಗಳು ದೊಡ್ಡ 'ಹಮ್ಮಿಣಿ'ಯೊಡನೆ ರಾಮಯ್ಯನವರ ಮನೆಗೇ ಬಂದರು. (ಆಗಿನ ಕಾಲದಲ್ಲಿ ೫೦ ಸಾವಿರ ರೂಪಾಯಿಗಳು). ಬಂದವರು ತಮ್ಮವರೇ. ಆದರೂ ರಾಮಯ್ಯ ಸ್ಪಷ್ಟವಾಗಿ ಆಮಿಷವನ್ನು ನಿರಾಕರಿಸಿದರು. ಶಾಸನ ಸಭಾ ಚುನಾವಣೆಯಲ್ಲಿ ಅವರಿಗೆ ಟಿಕೆಟ್ ಸಿಗಲಿಲ್ಲ, ಸ್ವತಂತ್ರವಾಗಿ ಸ್ಪರ್ಧಿಸಿದರು. ಸೋತರು. ಏನೇನೆಲ್ಲ ಆಯಿತು. ಹೋಗಲಿ ಬಿಡಿ.

### 'ವೀರಕೇಸರಿ'ಯ ಸೀತಾರಾಮಶಾಸ್ತ್ರಿಗಳು

ಪತ್ರಿಕೆಯ ಹೆಸರೇ ಉಪನಾಮವಾಗಿ ಇದ್ದ ಕೆಲವೇ ವ್ಯಕ್ತಿಗಳಲ್ಲಿ ಶಾಸ್ತ್ರಿಗಳು ಒಬ್ಬರು. 'ವೀರಕೇಸರಿ' ಎಂಬುದು ಅವರು ಆರಂಭಿಸಿದ (೧೯೨೮) ಪತ್ರಿಕೆಯ ಹೆಸರು (ಇದರಂತೆಯೇ 'ಸುಬೋಧ' ರಾಮರಾಯರು).

ಶೃಂಗೇರಿಯಲ್ಲಿ ಶಾಸ್ತ್ರಾಧ್ಯಯನ ಮಾಡಿದ್ದ ಶಾಸ್ತ್ರಿಗಳು ಪರಂಪರಾಗತ ಪಂಡಿತರಾಗಿ ಉಳಿಯುವ ಎಲ್ಲ ಲಕ್ಷಣಗಳನ್ನೂ ಹೊಂದಿದ್ದರು. 'ಆರ್ಯ ಮಹಿಳಾ' ಎಂಬ ಅನ್ವರ್ಥಕ ಮಾಸಪತ್ರಿಕೆಯನ್ನು ಬಿಡುವಿನ ವೇಳೆಯಲ್ಲಿ ನಡೆಸುತ್ತಿದ್ದರು. ತಮ್ಮ ವಿದ್ಯಾಭ್ಯಾಸದ ಕಾಲಕ್ಕೆ 'ಕೇಸರಿ' ಮರಾಠೀ ಪತ್ರಿಕೆಯನ್ನು ಕೇಳಿಸಿಕೊಂಡು ಅದರಿಂದ ಪ್ರಭಾವಿತರೂ ಆಗಿದ್ದರು. ಆದರೆ ಯಾವಾಗ ಗಾಂಧೀಜಿಯ ಕರೆ ಕೇಳಬಂತೋ, ಆಗ 'ಏಳು ಸಾಯಣ, ಕಟ್ಟು ಗ್ರಂಥವ' ಎನ್ನುವ ಧರತಿಯಲ್ಲಿ ಶಾಸ್ತ್ರಿಗಳು ಸಿಡಿದೆದ್ದರು. ೧೯೨೮ರಲ್ಲಿ ಬೆಂಗಳೂರಿನಲ್ಲಿ ನಡೆದ 'ಗಣಪತಿ' ಗಲಭೆ ಅವರನ್ನು ಇನ್ನಷ್ಟು ಬಡಿದೆಬ್ಬಿಸಿತು. 'ವೀರಕೇಸರಿ'ಯ ಆರಂಭದ ದಿನಗಳಲ್ಲೇ ಅದರ ಮೇಲೆ ಮೈಸೂರು ಸರಕಾರದ ಕೃಪಾಕಟಾಕ್ಷ. ಪತ್ರಿಕೆಗೆ ಮುಟ್ಟುಗೋಲು ಮಾತ್ರವಲ್ಲದೆ ಶಾಸ್ತ್ರಿಗಳಿಗೆ ಜೈಲಿನ ಆತಿಥ್ಯ (೭-೨-೧೯೨೯). ೧೯೩೩ರಲ್ಲಿ ಪತ್ರಿಕೆಯನ್ನು ಮತ್ತೆ ಆರಂಭಿಸಿದರು. ಪುನಃ ಅದಕ್ಕೆ ನಿರ್ಬಂಧ. ಸರಿ, ಎಂದುಕೊಂಡು ಮದ್ರಾಸಿನಿಂದ ಹೊರಡಿಸಲಾರಂಭಿಸಿದಾಗ (೧೯೩೮-೪೭) ಎಚ್. ಚನ್ನಕೇಶವ ಅಯ್ಯಂಗಾರರು ಜತೆಗೂಡಿದ್ದರು. ಪತ್ರಿಕೆಯ ಪ್ರಸಾರ. ಸರಕಾರೀ ನಿರ್ಬಂಧಗಳಿಗನುಗುಣವಾಗಿ, ವಾರ, ಪಕ್ಷ, ದಿನ ಪತ್ರಿಕೆಯಾಗಿ ಮಾರ್ಪಾಟಾಗುತ್ತಿತ್ತು! ಅದರ ಪ್ರಸಾರ ಆಗಿನ ಕಾಲಕ್ಕೆ ೧೫ ಸಾವಿರದ ವರೆಗೆ ಇದ್ದದ್ದು ಗಣನೀಯ.

ಮದ್ರಾಸದಿಂದಲೂ 'ವೀರಕೇಸರಿ'ಗೆ ತಡೆಯಾಜ್ಞೆ, ಆದರೇನಂತೆ ಸೀತಾರಾಮ ಶಾಸ್ತ್ರಿಗಳು ಛಲವಾದಿಗಳು. ಪತ್ರಿಕೆಯನ್ನು ಮುಂಬಯಿಗೆ ಕೊಂಡೊಯ್ದರು. ಹೇಗೂ ದೇಶಕ್ಕೆ ಸ್ವಾತಂತ್ರ್ಯ ಬಂದಿತು. ಆಗೂ ಶಾಸ್ತ್ರಿಗಳು ಪತ್ರಿಕೆಯನ್ನು ಕೆಲವು ವರ್ಷ ನಡೆಸಿದರು. ೧೯೫೦ರಲ್ಲಿ ಪತ್ರಿಕೆಗೆ ವಿದಾಯ ಹೇಳಿದರು. ತಮ್ಮ ಊರಿನ ಹೆಸರು—ಮದ್ದೂರನ್ನು ಬದಿಗೆ ಸರಿಸಿ, 'ವೀರಕೇಸರೀ' ಎಂಬುದನ್ನು ಶಾಶ್ವತವಾಗಿ ಸೇರಿಸಿದರು.

(ಆಕರ: ರಘುಸುತ)

## ಸಾಹಿತ್ಯ ಪತ್ರಿಕೆಗಳು

ಸಾಹಿತ್ಯ ಪತ್ರಿಕೆ ಎಂದರೇನು? ಪತ್ರಿಕಾ ಬರಹವನ್ನೇ (ಅಂಕಣ ಲೇಖನ ಸೇರಿದಂತೆ) ಸಾಹಿತ್ಯದ ಒಂದು ಪ್ರಕಾರ ಎಂದು ತಿಳಿಯುವುದುಂಟಷ್ಟೆ. ಸಾಹಿತ್ಯವೇ ಪ್ರಧಾನವಾಗಿರುವ ಪರಿಷತ್ಪತ್ರಿಕೆಯಂತಹವು ಸಾಹಿತ್ಯ ಪತ್ರಿಕೆಗಳೆನ್ನುವುದು ನಿರ್ವಿವಾದ. ಆದರೆ ಸಾಹಿತ್ಯಕ್ಕೆ ವಿಶೇಷ ಮನ್ನಣೆ ಕೊಡುವ, ಇತರ ವಿಷಯಗಳುಳ್ಳ ಲೇಖನಗಳನ್ನು ಪ್ರಕಟಿಸಿದರೂ ಅವನ್ನು ಸಾಹಿತ್ಯಕ ರೀತಿಯಲ್ಲಿ ಬರೆದದ್ದಾದರೆ ಅವನ್ನೂ ಈ ಪ್ರಕಾರದಲ್ಲಿ ಗಣಿಸಬೇಕೆ? ಉದಾ.ಗೆ 'ಜಯಕರ್ನಾಟಕ', 'ಜಯಂತಿ'. ಇನ್ನು ದಿನಪತ್ರಿಕೆಗಳ ರವಿವಾರದ ಪುರವಣಿಯಲ್ಲಿ ಶಾದಕರ್ಮದಂತೆ ಒಂದು ಕತೆ, ಒಂದು ಕವಿತೆ ಮತ್ತು ಒಂದಿಷ್ಟು ಪುಸ್ತಕ ವಿಮರ್ಶೆ ಬಂದಾಕ್ಷಣ ಆ ಸಂಚಿಕೆಯನ್ನು ಸಾಹಿತ್ಯ ಸಂಚಿಕೆ ಎನ್ನಬೇಕೆ? ಆದರೆ ಕಡೆಂಗೋಡ್ಲು ಶಂಕರಭಟ್ಟರಂಥವರು 'ರಾಷ್ಟ್ರಬಂಧು' ಸಾಪ್ತಾಹಿಕ ಹೊರಡಿಸಿದಾಗ ಅದು ಸಾಹಿತ್ಯ ಗುಣದಿಂದ ಕೂಡಿದ್ದೆಂದೇ ಹೇಳಬೇಕು. ಅಂದರೆ ಅಚ್ಚ ಸಾಹಿತಿಗಳು ಪತ್ರಿಕಾ ರಂಗದಲ್ಲಿ ಪದಾರ್ಪಣ ಮಾಡಿದಾಗಲೂ. ಉದಾ.ಗೆ ಶಿವರಾಮ ಕಾರಂತ ('ವಸಂತ'), ಎಚ್. ಚೆನ್ನಕೇಶವ ಅಯ್ಯಂಗಾರ್ ('ನುಡಿಗನ್ನಡಿ'), ಮುಳಿಯ ತಿಮ್ಮಪ್ಪಯ್ಯ ('ಕನ್ನಡ ಕೋಗಿಲೆ'), ಮಾಸ್ತಿ ('ಜೀವನ')–ಇವನ್ನೂ 'ಸಾಹಿತ್ಯ ಪತ್ರಿಕೆ' ಎಂಬ ಸದರಿನಲ್ಲಿ ತಂದರೆ ತಪ್ಪೇನಿಲ್ಲ. ಇಂತು ಸಾಹಿತ್ಯ, ವಿಮರ್ಶೆ, ಸಂಶೋಧನೆಗಳಿಗೆ ಮಾತ್ರ ಸೀಮಿತಗೊಳಿಸದೆ, ಲಲಿತ ವಾಙ್ಮಯದ ವಿಶೇಷತಃ 'ಕಥಾಂಜಲಿ', 'ಕತೆಗಾರ', 'ಭಾರತೀ'–ಎಂಬೀ ಕಥಾಪತ್ರಿಕೆಗಳನ್ನೂ, ಮನೋರಂಜನೆಯೇ ಪ್ರಧಾನವಾಗಿದ್ದ ಅನೇಕಾನೇಕ ಪತ್ರಿಕೆಗಳನ್ನೂ ಸಾಹಿತ್ಯ ಪತ್ರಿಕೆಗಳೆಂದೇ ಬಗೆಯೋಣ. ಆ ದೃಷ್ಟಿಯಿಂದ ಮಹಿಳಾ ಪತ್ರಿಕೆಗಳನ್ನೂ (ಅವುಗಳಲ್ಲಿ ಮಹಿಳಾ ಸಮಸ್ಯೆಯ ಲೇಖನಗಳಿದ್ದರೂ ಕೂಡ) ಸಾಹಿತ್ಯ ಪತ್ರಿಕೆಗಳೇ ಎಂದು ಕರೆಯುವಷ್ಟು ವಿಶಾಲ ತಳಹದಿಯನ್ನಿಟ್ಟುಕೊಳ್ಳೋಣ. ಇವಲ್ಲದೆ ಪುರವಣಿಯಾಗಿ ಸಾಹಿತ್ಯಿಕ ಸುದ್ದಿಗಳನ್ನು ಕೊಡುವ, ಇಲ್ಲವೆ ಗ್ರಂಥೋದ್ಯಮಕ್ಕೆ ಮೀಸಲಾದ ಪತ್ರಿಕೆಗಳೂ ಸಾಹಿತ್ಯ ಪತ್ರಿಕೆಗಳ ಸದರಿನಲ್ಲಿಯೇ ಬರುವಂತಹವು. ಬೇಕಿದ್ದರೆ ಇದನ್ನೇ ತುಸು ಹಿಗ್ಗಿಸಿ, 'ವಾಗ್ಭೂಷಣ', 'ಶಿವಾನುಭವ', 'ಶರಣಸಂದೇಶ', 'ರಂಗಭೂಮಿ' ಮುಂತಾದವುಗಳು ಸಹ ಒಳಗೊಳ್ಳುವಂತೆ ಒಂದು ಪ್ರಕಾರವನ್ನು ಕಲ್ಪಿಸಿ ಅವನ್ನು ಮಾನವಿಕ ಪತ್ರಿಕೆಗಳೆಂದು ಕರೆಯೋಣ. ಈ ೧೫೦ ವರ್ಷಗಳಲ್ಲಿ ಪ್ರಕಟವಾದ ೨,೪೦೦ ಪತ್ರಿಕೆಗಳಲ್ಲಿ ೨/೩ರಷ್ಟು ಪತ್ರಿಕೆಗಳು ಮಾನವಿಕ ಸದರಿನಲ್ಲಿಯೇ ಬರುವಂತಹವು.

ಇಷ್ಟೊಂದು ಪತ್ರಿಕೆಗಳ ತೋಟಕ ಸಮೀಕ್ಷೆ ಸುಲಭವಲ್ಲ. ಆದ್ದರಿಂದ ಇಲ್ಲಿಯೂ ಹೆಜ್ಜೆಯ ಗುರುತುಗಳನ್ನು ನಿದರ್ಶಿಸುವ ಕೆಲಸವನ್ನು ಮಾಡಬಯಸುವೆ. ಯಾವ ಕಾಲಕ್ಕೂ ಮೌಲಿಕವೆನಿಸುವ ಎರಡು ಅಪರಿಚಿತ ಪತ್ರಿಕೆಗಳನ್ನು ಮಾತ್ರ ಕಾಣಿಸುವೆ. ಒಂದು 'ಪ್ರಬೋಧಕ' (ಮುಂಬಯಿ, ೧೯೩೦-೧೯೩೧), ಇನ್ನೊಂದು 'ಪ್ರೇಮ'–ಪಂ.ತಾರಾನಾಥ ಪ್ರಣೀತ. (೧೯೨೫-೧೯೩೪). ಇವೆರಡನ್ನು ಕಾಣಿಸುವ ಉದ್ದೇಶವೆಂದರೆ, ಶ್ರೀರಂಗ, ಬೇಂದ್ರೆ, ಕುವೆಂಪು ಇವರೇ ಮೊದಲಾದ ಹಿರಿಯ ತಲೆಮಾರಿನ ಲೇಖಕರ ತರುಣ ವಯದ ಬರಹಗಳು ಇವುಗಳಲ್ಲಿ ಕಾಣಿಸಿಕೊಂಡಿವೆ. ಇದೇ ಬಗೆಯ ಅವರ ಬರಹಗಳು ಅವರವರ ಕಾಲೇಜಿನ ಮ್ಯಾಗಜಿನ್‌ಗಳಲ್ಲಿ ಬಂದಿರುವುದನ್ನೂ ಗಮನಿಸಬೇಕು. ಉದಾ. ಧಾರವಾಡದ ಕರ್ನಾಟಕ ಕಾಲೇಜು ಮ್ಯಾಗಜಿನ್, ಪುಣೆಯ ಫರ್ಗ್ಯೂಸನ್ ಕಾಲೇಜಿನದ್ದು; ಕೊಲ್ಹಾಪುರದ ರಾಜಾರಾಮ ಕಾಲೇಜಿನದು, ಇತ್ಯಾದಿ. ಬೆಂಗಳೂರಿನ ದೇಶೀಯ ವಿದ್ಯಾಶಾಲಾ ಪತ್ರಿಕೆಯೂ ಇದೇ ಕಾರಣದಿಂದ ಗಮನಾರ್ಹವಾದದ್ದು.

### 'ಶಬ್ದಗಳ ಟಂಕಸಾಲೆ' - ತಿ. ತಾ. ಶರ್ಮ ಉವಾಚ

ವೃತ್ತಪತ್ರಿಕೆಗಳಿಗೂ, ಭಾಷೆಗೂ ಅತ್ಯಂತ ನಿಕಟ ಸಂಬಂಧ, ವಾರ್ತಾ ಲೇಖಕನ ಕನ್ನಡ ಶಬ್ದಭಂಡಾರವು. ಬಿಸಿ ಬಿಸಿ ಸುದ್ದಿಗಳನ್ನು ಆಗಿಂದಾಗ ಅನುವಾದಿಸಿ, ಆ ಕೂಡಲೇ ಮುದ್ರಿಸಿ ಬಿಡುವುದಕ್ಕೆ ನೆರವಾಗುತ್ತದೆ. ಆದರೆ ಯಾವುದೊಂದು ಹೊಸ ವಿಚಾರವನ್ನಾಗಲೀ, ವಸ್ತುವನ್ನಾಗಲೀ ನಿದರ್ಶಿಸಲು ಯೋಗ್ಯ ಶಬ್ದ ಆ ಭಾಷೆಯಲ್ಲಿ ಇಲ್ಲದಾಗ, ಅಲ್ಲಿಯೇನೆ ಸೂಕ್ತ ಶಬ್ದ ನಿರ್ಮಾಣವಾಗುತ್ತದೆ! ಅದಕ್ಕೇನೆ ಪತ್ರಿಕಾ ಕಾರ್ಯಾಲಯವನ್ನು 'ಶಬ್ದಗಳ ಟಂಕಸಾಲೆ' ಎಂದು ಕರೆಯಬೇಕಾಗುವುದು. ಅವೆಷ್ಟೋ ಶಬ್ದಗಳು ಹೀಗೆ ನಿರ್ಮಾಣಗೊಂಡಿವೆ. ಮತ್ತು ಜನರ ಬಾಯಿಯಲ್ಲಿ, ಮನದಲ್ಲಿ ಉಳಿದುಕೊಂಡಿವೆ. ಕೊನೆಗೆ ಶಬ್ದಕೋಶಗಳಲ್ಲಿ ಸೇರ್ಪಡೆಯಾಗಿ ಬಿಡುತ್ತವೆ.

ಆಶ್ಚರ್ಯದ ಸಂಗತಿಯೊಂದರೆ ನಿಜಾರ್ಥದಲ್ಲಿ ಆದ್ಯ ವೃತ್ತಪತ್ರಿಕೆಯೆಂದು ನಾವು ಕರೆದಿರುವ 'ಮೈಸೂರು ವೃತ್ತಾಂತ ಬೋಧಿನಿ'ಯಲ್ಲಿಯೇ (೧೮೫೯) ಈ ಆಶಯವು ವ್ಯಕ್ತವಾಗಿದೆ.

"ಒಂದು ಪತ್ರಿಕೆಯನ್ನು ನಡೆಸುವ ದಿಸೆಯಲಿ ಕನ್ನಡ ಭಾಷೆ ಬೆಳೆದು ಪರಿಪುಷ್ಟವಾಗಿದೆ. ಮೂರು ಮಾತುಗಳಲಿ ಮೂರು ಲೋಕಗಳ ಚಿತ್ರವನು ನಿರೂಪಿಸಬಲ್ಲ ಅಂತಶ್ಶಕ್ತಿ ಕನ್ನಡ ಭಾಷೆಗೆ ಇದೆ. ಪತ್ರಿಕೆಗಳ ಮೂಲಕ ಈ ಭಾಷೆಯ ಶಬ್ದ ಭಂಡಾರವನ್ನು ಮತ್ತಷ್ಟು ಬೆಳೆಸುವ ಅವಕಾಶವಿದೆ."

ಶಬ್ದಗಳು ಹೇಗೆ ಹಠಾತನೆ ಸೃಷ್ಟಿಯಾಗುವವೆನ್ನುವುದಕ್ಕೆ ನಿಮಗೆ ಪರಿಚಿತವಾದ ಒಂದು ಸಂದರ್ಭವನ್ನು ಹೇಳುವೆ. ಲೋಕಮಾನ್ಯ ಟಿಳಕರು 'ಕೇಸರೀ' ಪತ್ರಿಕೆಯಲ್ಲಿದ್ದಾಗ, ಓರ್ವ ಭಾಷಾಂತರ ಮಾಡುವವನು ಧಾವಿಸಿ ಬಂದು "ಬ್ಯೂರಾಕ್ರಸಿ ಶಬ್ದ ಬಂದಿದೆ. ಏನು ಹಾಕೋಣ?" ಎಂದು ಕೇಳಿದನು. ಲೋಕಮಾನ್ಯರು ಆ ಕ್ಷಣದಲ್ಲಿ ಹೇಳಿದರು: "ನೌಕರಶಾಹಿ ಎಂದು ಹಾಕು!"

೧೯೩೦ರ ದಶಕದಲ್ಲಿ 'ರೌಂಡ್ ಟೇಬಲ್ ಕಾನ್ಫರೆನ್ಸ್' ಇಂಗ್ಲೆಂಡಿನಲ್ಲಿ ನಡೆಯಿತು. ಅದನ್ನು 'ದುಂಡು ಮೇಜಿನ ಪರಿಷತ್ತು' ಎಂದೇ ಎಲ್ಲರೂ ಅನುವಾದಿಸಿ ದೇಶಭಾಷಾ ಪತ್ರಿಕೆಗಳಲ್ಲಿ ಹಾಕಿದರು. 'ವಿಶ್ವ ಕರ್ನಾಟಕ'ದ ತಿ. ತಾ. ಶರ್ಮರು ತತ್ಸಮಾನ ಅರ್ಥವುಳ್ಳ 'ಚಕ್ರಗೋಷ್ಠಿ' ಎಂಬ ಅರ್ಥಪೂರ್ಣ ಶಬ್ದವನ್ನು ಸೃಷ್ಟಿಸಿ ಬಳಸಿದರು.

ಒಂದೇ ಎರಡೇ, ಇಂಥ ಸಾವಿರಾರು ಶಬ್ದಗಳು ಸೃಷ್ಟಿಯಾಗಿವೆ. ಮೋಜೆಂದರೆ ಒಂದೇ ವಿದೇಶೀ ಪದಕ್ಕೆ ಬೇರೆ ಬೇರೆ ಪತ್ರಿಕೆಗಳವರಿಂದ ಶಬ್ದಗಳ ಸೃಷ್ಟಿಯಾದದ್ದು ಉಂಟು.

ಶಬ್ದದ ಮಾತು ಅಂತಿರಲಿ, ಅಭಿವ್ಯಕ್ತಿಯಲ್ಲಿಯೂ ಪತ್ರಕರ್ತರು ಹೊಸ ಶೈಲಿಯನ್ನು ರೂಢಿಸಬಲ್ಲರು. ಕಿರಿದರಲ್ಲಿ ಹಿರಿದರ್ಥವನ್ನು ಹೇಳುವುದಾಗಲೀ, ಶಬ್ದಗಳ ವ್ಯಂಜಕ ಗುಣವನ್ನು ಹೊರಹೊಮ್ಮಿಸುವುದಾಗಲೀ ಪತ್ರಕರ್ತರು ಎಂಥ ಸಾಹಿತಿಯನ್ನೂ ಮೀರಿಸಿಯಾರು. ಈ ಸಾಲು ಹೊತ್ತಿನ ಇನ್ನೊಂದು ಬಗೆಯೆಂದರೆ ಅನೇಕ ಸಾಹಿತಿಗಳು ಉತ್ತಮ ಪತ್ರಕರ್ತರಾಗಿದ್ದಾರೆ. ಇಲ್ಲವೆ ಎರಡೂ ಗುಣ ವಿಶೇಷತೆಗಳು ಒಬ್ಬನಲ್ಲಿ ಏಕೀಭವಿಸಿರಬಹುದು. ದಿವಾಕರ ರಂಗರಾವ, ಕಡೆಂಗೋಡ್ಲು ಶಂಕರಭಟ್ಟ, ಮುದವೀಡು ಕೃಷ್ಣರಾವ, ಸಿದ್ದವನಹಳ್ಳಿ ಕೃಷ್ಣಶರ್ಮ, ಖಾದ್ರಿ ಶಾಮಣ್ಣ, ಮುಂತಾದವರು. ಒಂದು ಮಾತು ನಿಜ. 'ಶಬ್ದ ಸಂಪತ್ತು ಬೆಳೆಯುವುದು ಹೆಚ್ಚಾಗಿ ಪತ್ರಕರ್ತರಿಂದ. ಇತರ ಸಾಹಿತ್ಯದ ಬರವಣಿಗೆಯಿಂದ ಅಷ್ಟರ ಮಟ್ಟಿಗೆ ಅಲ್ಲ.'

ಕೆಲವೊಮ್ಮೆ ನೇಮಕಾತಿ, ಖುಷಲಾತಿ ಎಂಬ ಅಪದ ಶಬ್ದಗಳೂ ಸೃಷ್ಟಿಯಾಗುವುದುಂಟು.

ಏನಿದರೂ ಇಂದಿನ ಹಾಗೆ ಪತಿಯೊಂದು ವೃತ್ತಪತ್ರಿಕೆಯವರು ತಮತಮಗೆ ತಿಳಿದಂತೆ ಮಾಡದೇ, ಒಂದು ಪತ್ರಿಕಾ ನಿಘಂಟು ಇದ್ದಿದ್ದರೆ ಚೆನ್ನಾಗಿದ್ದಿತು. ಪತ್ರಿಕಾ ವೃತ್ತಿಯಲ್ಲಿ ಹೊಸತಾಗಿ ತೊಡಗಿರುವವರ ಸಂಖ್ಯೆ ಹೆಚ್ಚುತ್ತ ನಡೆದಿದೆ ಎಂಬುದನ್ನು ಮರೆಯಲಾಗದು. ಆ ಕೆಲಸವನ್ನು ಸುಮಾರು ಮೂರು ದಶಕಗಳ ಹಿಂದೆ ಲೋಕ ಶಿಕ್ಷಣ ಟ್ರಸ್ಟಿನವರು ಮಾಡಿದ್ದನ್ನು ಪ್ರಶಂಸಾ ರೂಪದಲ್ಲಿ ನೆನೆಯುತ್ತೇನೆ. ಪತ್ರಿಕಾ ಅಕಾಡೆಮಿಯಾಗಲೀ, ಪತ್ರಕರ್ತರ ಸಂಘಗಳಾಗಲೀ ಇಂಥದೊಂದು ನಿಘಂಟನ್ನು ಪ್ರಕಟಿಸಬೇಕು. ೪-೫ ವರ್ಷಗಳಿಗೊಮ್ಮೆ ಅದನ್ನು ನವೀಕರಿಸಬೇಕು.

## ಅನ್ಯಭಾಷಾ ಪತ್ರಿಕೆಗಳು

ಪರಭಾಷಾ ಸಹಿಷ್ಣುತೆ ಕನ್ನಡಿಗರ ಒಂದು ವಿಶೇಷ ಗುಣಧರ್ಮ ತಾನೇ. ಒಳನಾಡಿನಲ್ಲಿ ಆ ರೀತಿ ಪ್ರಕಟವಾಗುತ್ತಿದ್ದ ಅನ್ಯಭಾಷಾ ಪತ್ರಿಕೆಗಳನ್ನು ನಾವು ತುಂಬು ಹೃದಯದಿಂದ ಸ್ವಾಗತಿಸಿದ್ದೇವೆ. ನಾಡಿನ ಪೂರ್ವದಿಕ್ಕಿನಲ್ಲಿ ಹಾಗೆ ಮೊದಲಿಗೆ ಕಂಡು ಬಂದ ಪತ್ರಿಕೆಯ ಹೆಸರು 'ಕಾಸೀಮ್-ಅಲ್-ಅಕಬರ' ಎಂಬುದು (೧೮೬೩) ಇದು ಉರ್ದು ಪತ್ರಿಕೆ ಅಲ್ಲ, ಹಿಂದೂಸಾನೀ ಭಾಷೆಯದು. ಸುಮಾರು ೩೦ ವರ್ಷಗಳ ವರೆಗೆ ಬದುಕಿದಿತು. ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಉನ್ನತಿಗಾಗಿ ಈ ಪತ್ರಿಕೆಯಲ್ಲಿ ಮೇಲಿಂದ ಮೇಲೆ ಲೇಖನಗಳು ಬರುತ್ತಿದ್ದವು. ಇತ್ತ ಪ್ರಥಮ ಉರ್ದು ಪತ್ರಿಕೆಯ ಹೆಸರು 'ಕೌಲ-ಎ-ಮೈಸೂರು' (೧೯೧೩) 'ತಮಿಳಿಯನ್' ಎಂಬ ಪತ್ರಿಕೆ ಇಂಗ್ಲಿಷ್ ಹೆಸರನ್ನು ಹೊತ್ತಿದ್ದರೂ ತಮಿಳಿನಲ್ಲೇ ಇದ್ದಿತಂತೆ. ಅದರ ಆರಂಭ ವರ್ಷ ೧೯೨೪ ಮತ್ತು ಜನ್ಮಸ್ಥಾನ ಕೋಲಾರ ಚಿನ್ನದ ಗಣಿ-ಎಂಬುದನ್ನು ಗಮನಿಸಬೇಕು. ತೆಲುಗಿನ ಪತ್ರಿಕೆಗಳೂ ಇದ್ದಿರಲೂ ಸಾಕು.

ಉತ್ತರ ಕರ್ನಾಟಕದಲಿ ಮರಾಠೀ ಪತ್ರಿಕೆಗಳು ಅದೊಂದು ಹಾವಳಿ ಎನ್ನುವಷ್ಟು ಹೊರಟವು. ಕಲಾದಗಿಯ ಸಿತೇಬ್ಳು (೧೮೭೦), ಧಾರವಾಡದ ಛಾವಾ (೧೮೮೦ನೆಯ ದಶಕದ)–ಕನ್ನಡ ಪತ್ರಿಕೆಗಳೆಂದು ತಪ್ಪಾಗಿ ಭಾವಿಸಿದ್ದರಲ್ಲವೆ. ಅವು ನಿಶ್ಚಿತವಾಗಿ ಮರಾಠಿಯವು. ಬೇಸರದ ಸಂಗತಿಯೆಂದರೆ ಕನ್ನಡಿಗರ ಸುದ್ದಿಗಳನ್ನೇ ಕೊಡುತ್ತಿದ್ದರೂ ಪತ್ರಿಕೆಯನ್ನು ಮರಾಠೀ ಭಾಷೆಯಲ್ಲಿ ಪ್ರಕಟಿಸುವಂತಹ ಪರಿಸ್ಥಿತಿ. 'ಹುಬಳೀವೃತ್ತ' ದ ಪತ್ರಿಗಳು ಕೇವಲ ೭೫! ಅಲ್ಲಿ ಇದ್ದ ಮರಾಠಿಗರು ಮತ್ತು ಮರಾಠೀ ಪ್ರೇಮೀ ಕನ್ನಡಿಗರು ಮರಾಠಿಯಲ್ಲೇ ಓದಬೇಕೆಂಬ ಹಟದ ಪರಿಣಾಮವಿದು.

ಉತ್ತರ ಕರ್ನಾಟಕದ ವಿವಿಧ ಊರುಗಳಲ್ಲಿ, ೧೮೮೦ ರಿಂದ ೧೯೪೭ರ ವರೆಗಿನ ಅವಧಿಯಲಿ ೬೦ಕ್ಕೂ ಮಿಕ್ಕಿ ಮರಾಠೀ ಪತ್ರಿಕೆಗಳು ಜನ್ಮ ತಾಳಿದುವು ಎನ್ನುವುದು ವಾಸ್ತವ ಸಂಗತಿ. ಬೆಳಗಾವಿ, ವಿಜಾಪುರಗಳಂತಹ ಜಿಲ್ಲಾ ಕೇಂದ್ರಗಳಲ್ಲದೆ ಖಾನಾಪುರ, ಚಿಕ್ಕೋಡಿ, ಯಾದಗೀರ, ರಾಮದುರ್ಗಗಳಲ್ಲಿಯೂ ಮರಾಠೀ ವಾಚಕರಿಗಾಗಿ ಪತ್ರಿಕೆಗಳಿದ್ದುವು. ಜಿನವಿಜಯ, ಕಾವ್ಯನಾಟಕಾದರ್ಶ, ಮಧ್ವಸಿದ್ಧಾಂತ ಸುಧಾಕರ, ನ್ಯಾಯಪ್ರಭಾ, ಗ್ರಾಮಸೇವಕ–ಎಂಬೀ ಬಗೆಯ ಹೆಸರುಗಳಿಂದ ಆ ಆ ಮರಾಠೀ ಪತ್ರಿಕೆಗಳ ಆಶಯವೇನೆಂಬುದನ್ನು ಅರಿಯಬಹುದು.

ಬೆಳಗಾವಿಯಲ್ಲಿದ್ದ 'ಬೆಳಗಾವ ಸಮಾಚಾರ'ವು ದೀರ್ಘಕಾಲೀನ ಪತ್ರಿಕೆ. ಅದರಲ್ಲಿ ಕನ್ನಡ ಪುಟಗಳೂ ಕೆಲವು ಇರುತ್ತಿದ್ದವು. ಅದು ೧೯ನೆಯ ಶತಮಾನದ ಜನಪ್ರಿಯ ವಾರಪತ್ರಿಕೆಯಾಗಿತ್ತು. ಅದೇ ೧೯೧೮ರಲ್ಲಿ ಆರಂಭವಾದ 'ತರುಣ ಭಾರತ'ದ ಬಗ್ಗೆ ವಿಶೇಷತೆ-ಇದೆ. ಸ್ವಾತಂತ್ರ್ಯದ ಸೇನಾನಿ ಬಾಬೂರಾವ ಠಾಕೂರರು ಪತ್ರಿಕೆಯನ್ನು ರಾಷ್ಟ್ರೀಯ ಹೋರಾಟಕ್ಕೆ ಅಣಿಗೊಳಿಸಿದರು. ಮಾಸದಿಂದ ವಾರಕ್ಕೆ, ಅಲ್ಲಿಂದ ದಿನಪತ್ರಿಕೆಗೆ ತಿರುಗಿತು (೧೯೬೬). ಬೆಳಗಾವಿಯು ಮಹಾರಾಷ್ಟ್ರದಲ್ಲಿ ಸೇರಬೇಕೆಂಬ ಉಗ್ರ ಪ್ರತಿಪಾದನೆ-ಪತ್ರಿಕೆಯದು. ಈಗಂತೂ ನೂರಕ್ಕೆ ನೂರು ಪೈಸೆ ಕನ್ನಡ ವಿರೋಧಿಯಂತೆ ನಡೆಯುತ್ತಿದೆ.

## ಉತ್ತರ ಕನ್ನಡ ಜಿಲ್ಲೆಯ ಪತ್ರಿಕೋದ್ಯಮ

ಕರ್ನಾಟಕದಲ್ಲಿ ಮೂರು ಜಿಲ್ಲೆಗಳು ಹಿಂದೆ ಬಿದ್ದವುಗಳು. ಕೊಡಗು, ಬೀದರ ಮತ್ತು ಅವುಗಳಂತೆಯೇ ಉತ್ತರ ಕನ್ನಡ ಜಿಲ್ಲೆ. ಜನವಸತಿ ಕಡಿಮೆ. ವಾಚಕರ ಸಂಖ್ಯೆ ಕಡಿಮೆ, ಅನುಕೂಲಸ್ಥರದೂ ಮಿತ ಪರಿವಾರ. ಮೇಲಾಗಿ ನಾಡಿನ ಇತರ ದೊಡ್ಡ ಪತ್ರಿಕೆಗಳ ಮೇಲ್ಗಾಯ್ದ ಪ್ರಭಾವ.

ಆದರೂ ಸ್ವಾಭಿಮಾನದಿಂದ ಹಾಗೂ ಪತ್ರಿಕಾ ಲೇಖನಿಯ ಮಹತ್ವವನ್ನರಿತು ತಮ್ಮ ಜಿಲ್ಲೆಗೆ ಸೀಮಿತವಾಗಿದ್ದರೂ ಪತ್ರಿಕೆಗಳನ್ನು ಕಾಲಕಾಲಕ್ಕೆ ಹೊರಡಿಸಿದವರಿದ್ದಾರೆ. ೧೯೦೦ರರ ಸುಮಾರಿಗೆ ಹೊರಟ ಮೊದಲ ಪತ್ರಿಕೆ 'ಸರಸ್ವತಿ'. ಅನಂತರದ ವಿನೋದಿನಿ, ಸುಧಾರಕ, ವಿಚಾರಿ, ನಂದಿನಿ ... ಹೀಗೆ ಸುಮಾರು ೫೦ ಪತ್ರಿಕೆಗಳನ್ನಾದರೂ ಹೆಸರಿಸಬಹುದು. ಕೆಲವು ಪಕ್ಷ ಪತ್ರಿಕೆ ಇದ್ದದ್ದು ಮಾಸಪತ್ರಿಕೆಯೋ ವಾರಪತ್ರಿಕೆಯೊ ಆಗಿ ಪರಿಣಮಿಸಿದ್ದುಂಟು. ಕೆಲವು ಕನ್ನಡವಲ್ಲದೆ ಇಂಗ್ಲಿಷ್, ಮರಾಠೀ ಲೇಖನಗಳನ್ನು ಒಳಗೊಂಡಿರುತ್ತಿದ್ದವು. 'ಶಿರಸಿ ಸಮಾಚಾರ', 'ಗ್ರಾಮ ಜೀವನ', 'ಶರಣ ಸಂದೇಶ', 'ಶಿಕ್ಷಣದ ಮುನ್ನಡೆ' ಎಂಬೀ ಹೆಸರುಗಳ ಮೇಲಿಂದ ಅವುಗಳ ನಿರ್ದಿಷ್ಟ ಧೋರಣೆಯನ್ನು ಕಂಡುಕೊಳ್ಳಬಹುದು. ಏನಿದ್ದರೂ ಬೆಳಕು, ನಾಗರಿಕ, ನವಚೇತನ, ಜನಸೇವಕ ಮತ್ತು ಕಾನಡಾವೃತ್ತ – ಇವು ಮಾತ್ರ ಉ.ಕ.ಜಿಲ್ಲೆಯ ಪತ್ರಿಕೋದ್ಯಮದ ಅಳಿಸಲಾಗದ ಮರೆಯಲಾಗದ ಹೆಚ್ಚೆ ಗುರುತುಗಳು.

'ಬೆಳಕು', 'ನಾಗರಿಕ' ಪತ್ರಿಕೆಗಳಿಗೆ ಬೆನ್ನೆಲುಬಾಗಿ ನಿಂತವರು ಗೌರೀಶ ಕಾಯ್ಕಿಣಿ, ದಾಮೋದರ ಚಿತ್ತಾಲ, ಮ. ಗ. ಶೆಟ್ಟಿ–ಅವರುಗಳು. ವಾಲಗಳ್ಳಿಯವರ ನವಚೇತನ, ಹಾಗೆಯೇ ಸಾಧನ–ಅವರ ಪತ್ರಿಕಾ ಸಾಹಸದ ಪ್ರತೀಕಗಳು.

ದಿನಕರ ದೇಸಾಯಿಯವರ ವರದ ಹಸ್ತದಲ್ಲಿ, ಅಮ್ಮೆಂಬಳ ಆನಂದರ ಸಂಪಾದಕತ್ವದಲ್ಲಿ ಗೌರೀಶ ಕಾಯ್ಕಿಣಿಯಂತಹವರ ಅಂಕಣಕಾರರಿಂದ ಪತ್ರಿಕೋದ್ಯಮದಲ್ಲಿ ಉನ್ನತ ಸ್ಥಾನಕ್ಕೇರಿದ 'ಜನಸೇವಕ'ದ ಬಗ್ಗೆ ಏನು ಹೇಳಲಿ ಏನು ಬಿಡಲಿ ಎಂಬಂತಾಗಿದೆ. ಜಿಲ್ಲಾ ಪತ್ರಿಕೆಯಾಗಿದ್ದ 'ಜನಸೇವಕ' ತನ್ನ ೧೮ ವರ್ಷಗಳ ಅವಧಿಯಲ್ಲಿ (೧೯೫೫-೧೯೭೩) ಅಖಿಲ ಕರ್ನಾಟಕ ಮಟ್ಟದ ಪತ್ರಿಕೆಯಾಗಿ ಬಾಳಿತಲ್ಲವೆ. ಅದರ ಎಷ್ಟೋ ಲೇಖನಗಳಲ್ಲಿಯ ಅವುಗಳಲ್ಲಿಯ ಸ್ವತಂತ್ರ ಸುವಿಚಾರವನ್ನು, ನಿರ್ಭೀತ ಮಂಡನೆಯನ್ನು ಮನದಂದು ಬೇರೆ ಪತ್ರಿಕೆಗಳು ಅವನ್ನು ಮರು ಮುದ್ರಿಸಿದುವು. ನಿಜಕ್ಕೂ ಅದು ಜನತೆಯ ಸೇವಕ

ಆಗಿದಿತು. ಅದರ ಬಿಡಿ ಪತಿಯ ವೆಚ್ಚ ೨೭ ಪೈಸೆ ಇದ್ದರೂ, ಮಾರಾಟದ ಬೆಲೆ ೧೨ ಪೈಸೆ ಮಾತ್ರ ಇರಿಸಿರುವುದಕ್ಕೆ ಏನೆಂದು ಅರ್ಥ ಹಚ್ಚಬೇಕು?

ಪತ್ರಿಕೆಯೊಂದರ ಸಂಪಾದಕತ್ವವನ್ನು ಏಳು ದಶಕಗಳಿಂದ ಮಾಡುತ್ತಿದವರು ಯಾರಾದರೂ ಇದ್ದಾರೆಯೆ? ಪಾಂಡುರಂಗ ಕೃಷ್ಣ ಶಾನಭಾಗರು 'ಕಾನಡಾ ವೃತ್ತ'ವನ್ನು ಆ ರೀತಿ ನಡೆಸಿಕೊಂಡು ಬಂದರು. ಮಹಾಯುದ್ಧ ಕಾಲದಲ್ಲಿ ಜನ್ಮ ತಾಳಿದ ಈ ಪತ್ರಿಕೆ (೧೯೧೬) ಮೊದಲಿನಿಂದಲೂ ರಾಷ್ಟ್ರೀಯ ಚಳವಳಿಯಲ್ಲಿ ಧುಮುಕಿದಿತು. ಸರಕಾರವು ದಂಡ, ಜಪ್ತಿ, ಇಡುಗಂಟಿನ ಭಾರ–ಏನೆಲ್ಲಾ ಹೇರಿತ್ತಾದರೂ, ಪತ್ರಿಕೆ ತನ್ನ ನಿರ್ಭೀತ ಲೆಕ್ಕಣಿಯನ್ನು ಹಿಂತೆಗೆದದ್ದೇ ಇಲ್ಲ. 'ಯಾರ ಮುಲಾಜಿಲ್ಲದೆ' ಎಂಬುದು ಈ ಪತ್ರಿಕೆಗೆ ಅನ್ವರ್ಥಕ. ಗೋವಿಂದ ಪೈಗಳು, ತಮ್ಮ ಸಾಹಿತ್ಯ ಸಮ್ಮೇಳನದ (ಮುಂಬಯಿ) ಅಧ್ಯಕ್ಷ ಭಾಷಣದಲ್ಲಿ 'ತಮ್ಮ ಮಾತೃಭಾಷೆ (ಕೊಂಕಣಿ)ಯಲ್ಲಿ ಮೊಲೆ ಹಾಲಿಲ್ಲ; ಕನ್ನಡ ದಾದಿಯ ಪೋಷಣೆಯಲ್ಲಿ ಬೆಳೆದೆ'-ಎಂಬಾಶಯದ ಮಾತನ್ನು ಹೇಳಿದಾಗ 'ಕಾನಡಾ ವೃತ್ತ' ಕಟುವಾಗಿ ಆಕ್ಷೇಪಿಸಿತ್ತು!

**ದ.ಕ.ಪತ್ರಿಕೋದ್ಯಮದ ವೈಶಿಷ್ಟ್ಯಗಳು**

ದಕ್ಷಿಣ ಕನ್ನಡ ಜಿಲ್ಲೆಯವರು ಏನು ಮಾಡಿದರೂ ವೈಶಿಷ್ಟ್ಯಪೂರ್ಣವಾಗಿ ಮಾಡುತ್ತಾರೆಂಬುದು ಪತ್ರಿಕೋದ್ಯಮಕ್ಕೂ ಅನ್ವಯಿಸುತ್ತದೆ. ಇವು ಕೆಲವು ವೈಶಿಷ್ಟ್ಯಗಳು.

- ಒಟ್ಟಿನ ಪತ್ರಿಕಾ ಪ್ರಪಂಚದ ೧೧% ಪತ್ರಿಕೆಗಳು ಈ ಜಿಲ್ಲೆಯಲ್ಲಿ ಹುಟ್ಟಿದವುಗಳು. ಇತರ ಯಾವುದೇ ಜಿಲ್ಲೆಗೆ ಹೋಲಿಸಿದರೆ (ಬೆಂಗಳೂರು ನಗರವನ್ನು ಬಿಟ್ಟು) ಇದು ತುಂಬಾ ಹೆಚ್ಚು.

- ಇಲ್ಲಿಯವೆಲ್ಲ 'ಹೆಳವ' ಪತ್ರಿಕೆಗಳು ಎಂದರೆ ಘಟ್ಟವನ್ನು ಹತ್ತಿ ಕರ್ನಾಟಕದ ಇತರ ಪ್ರದೇಶಗಳಿಗೆ ಹೋಗಲಾರದವುಗಳು!

- ಆದರೆ ಇವು ಕೆಲವು ಅಪವಾದಗಳು: 'ಶ್ರೀಕೃಷ್ಣಸೂಕ್ತಿ', 'ವಸಂತ' ಮಾಸಿಕ, 'ಸಂಡೆ ಟೈಮ್ಸ್' (ಎಂ.ಎಸ್. ಕಾಮತ್), 'ಮೊಗವೀರ' (ಮುಂಬಯಿ ಮಟ್ಟಿಗೆ).

- ಇಲ್ಲಿಯ ಪತ್ರಿಕೋದ್ಯಮಿಗಳು ಎಕ್ಸ್‌ಪೋರ್ಟ್ ಕ್ವಾಲಿಟಿಯವರು! ಎಂದರೆ ಸ್ವಂತದ ಜಿಲ್ಲೆಯನ್ನು ಬಿಟ್ಟು ಬೇರೆಡೆ ಹೋಗಿ ಹೆಸರು ಮಾಡಿದವರು. ದ.ಕ. ಮಟ್ಟಿಗೆ ಹೋತಿನ ಮೊಲೆಯಂತಿದ್ದವರು. ಬೆನಗಲ್ ಶಿವರಾಯರಿಂದ ಇದರ ಆರಂಭ. ಇಂಗ್ಲಿಷ್, ಕನ್ನಡ ಎಂಬ ಭೇದಭಾವವಿಲ್ಲ–ಇಲ್ಲಿ, ಇಂಥವರ ಯಾದಿ ಬಲು ದೊಡ್ಡದಿದೆ: ಆರ್. ಕೆ. ಪ್ರಭು, ಡಿ. ಆರ್. ಮಂಕೀಕರ, ಯು. ಜಿ. ರಾವ್, ಬಿ. [illegible] ತುಂಗ, ಪಾ. ವೆಂ. ಆಚಾರ್ಯ, ನಿರಂಜನ ಮುಂತಾದವರು. ಇನ್ನೂ ಕೆಲವು ಹೆಸರುಗಳು ಬೇಕೆ? ಎಂ. [illegible] ಕಾಮತ್, ವ್ಯಾಸರಾಯ ಬಲ್ಲಾಳ, ಕುಲವರ್ಮ, ಕೆ. ವಿ. ಭಟ್ಟ, ಡಿ. ಕೆ. ಮೆಂಡನ್ ...

- ನವಯುಗ, ಕಂಠೀರವ, ಪ್ರಭಾತ, ರಾಷ್ಟ್ರಬಂಧು, ಅಂತರಂಗ, ಸುದರ್ಶನ, ಯುಗಪುರುಷ, ಭಾರತೀ ಈ ಪತ್ರಿಕೆಗಳು ದ.ಕ. ಜಿಲ್ಲೆಯವರು ಹೆಮ್ಮೆಯಿಂದ ಹೇಳಬಹುದಾದ ಪತ್ರಿಕೆಗಳು.

- ಇಲ್ಲಿಯ ಜನರ ಸ್ವಾತಂತ್ರ್ಯದ ಹಂಬಲ, ಅನೇಕ ಪತ್ರಿಕೆಗಳ ಹೆಸರಿನಿಂದಲೇ ತಿಳಿದು ಬರುತ್ತದೆ. ಸ್ವದೇಶಾಭಿಮಾನಿ (೧೯೦೬), ಕರ್ನಾಟಕ ಕೇಸರೀ, ನವಭಾರತ, ಸತ್ಯಾಗ್ರಹಿ ಇತ್ಯಾದಿ. ಹಿ.ರಾ. ಮಲ್ಯರು, ಸ್ವಾತಂತ್ರ್ಯ ಬರುವುದಕ್ಕೆ ಮೊದಲೇ 'ಸ್ವತಂತ್ರ ಭಾರತ' ಎಂದು ತಮ್ಮ ಪತ್ರಿಕೆಗೆ ಹೆಸರು ಕೊಟ್ಟಿದ್ದರು.

- ಕನ್ನಡ ಮಾತ್ರವಲ್ಲದೆ, ತುಳು ಹಾಗೂ ಕೊಂಕಣಿ ಭಾಷೆಗಳಲ್ಲಿಯ ಪತ್ರಿಕೆಗಳು ಹೆಚ್ಚಾಗಿ ಇಲ್ಲಿಯೇ ಕಾಣಿಸಿಕೊಂಡಿವೆ.

- ಅದರಂತೆ ಮುಸ್ಲಿಂ ಪತ್ರಿಕೆಗಳ ಹೆಚ್ಚಳವನ್ನೂ ಇಲ್ಲಿ ಕಾಣುತ್ತೇವೆ. ಹೈದರ್ ಅವರ ಜ್ಯೋತಿ (೧೯೩೫), ಮಹಜರರ ಹಮ್‌ದರ್ದ್ (೧೯೩೯), ಬಿ. ಎಂ. ಇದಿನಬ್ಬರು ಕೆಲಸ ಮಾಡಿದ ಉದಯಚಂದ್ರ–ಇತ್ಯಾದಿ.

- [illegible] ಕೇರಳದಲ್ಲಿರುವ ಕಾಸರಗೋಡು [illegible] [illegible], ಕಳಿಗೆ [illegible], ಇತ್ಯಾದಿ

- ಉತ್ತಮ ಇಲ್ಲವೆ ಸಂಸ್ಮರಣ ಸಂಚಿಕೆಗಳನ್ನು ಆ ಆ ಸಂದರ್ಭಗಳಿಗಾಗಿ ತಪ್ಪದೆ ಹೊರತರುವುದು ಈ ಜಿಲ್ಲೆಯ ವೈಶಿಷ್ಟ. ಕಾಸರಗೋಡು 'ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಹೊರ ತಂದ 'ಗಡಿನಾಡು' ಒಂದು ಉತ್ಕೃಷ್ಟ ಉದಾಹರಣೆ.

- ಉದ್ಯಮ, ವಾಣಿಜ್ಯಗಳಿಗೆ ಸಂಬಂಧಿಸಿದ ವಿಶಿಷ್ಟ ಪತ್ರಿಕೆಗಳು ಈ ಜಿಲ್ಲೆಯಲ್ಲಿ ಬಂದಿವೆ. ಮಧುಪ್ರಪಂಚ, ಮೀನುಗಾರ, ಜೀವನ ಕಷ್ಟ, (ಜೀವವಿಮಾ ನಿಗಮದು) ವರ್ತಕಧುರೀಣ, ಅಂಚೆ ಗೆಳೆಯ - ಈ ಮೊದಲಾದ ಹೆಸರುಗಳ ಮೂಲಕವೇ ಅವುಗಳ ಉದ್ದೇಶ-ವ್ಯಾಪ್ತಿಗಳನ್ನು ಕಂಡುಕೊಳ್ಳಬಹುದು

- ಜಿಲ್ಲೆಯ ಯಾರಿಬ್ಬರಿಗೆ ಜಗಳದ ಪ್ರಸಂಗ ಬಂದರೆ, ಮಾರಾಮಾರಿಯಾಗಲಿ, ಅತಿಯಾದ ಒದರಾಟವಾಗಲೀ, ನಡೆಯದೆ, ಅವರಲ್ಲೊಬ್ಬ "ನೋಡ್ತೇನೊ! ಕೋರ್ಟಿನ ಆವಾರದಲ್ಲೇ ಆಗಿ ಹೋಗಲಿ" ಎಂದು ಥಟ್ಟನೆ ಹೇಳಿ ಬಿಡುವನಂತೆ! ಕೋರ್ಟು, ಕಚೇರಿ, ವ್ಯಾಜ್ಯ - ಇವು ಜಿಲ್ಲೆಯ ಜನಕ್ಕೆ ಸರ್ವಸಾಧಾರಣ ವಿಷಯ. ಮನದಲ್ಲಿ ಥಟ್ಟನೆ ಸ್ಫುರಿಸುವಂತಹದು. ಅದಕ್ಕೇನೆ ಇರಬೇಕು. ದ.ಕ. ದಲ್ಲಿ ಕಾನೂನಿಗೆ ಸಂಬಂಧಪಟ್ಟ ಹಲವಾರು ಪತ್ರಿಕೆಗಳು ಕಾಣಿಸಿಕೊಂಡಿವೆ. ಈಗ ಎಂದಲ್ಲ; ಕಳೆದ ಶತಮಾನದಿಂದಲೇ. ಆದ್ಯ ಪತ್ರಿಕೆ 'ಮಂಗಳೂರ ಸಮಾಚಾರ'ದಲ್ಲಿಯೇ ಇದರ ಹೊಳಹು ಇದೆ. ಈ ವಿಷಯದಲ್ಲಿ ಪ್ರಥಮವಾದ ಪತ್ರಿಕೆ ನ್ಯಾಯಸಂಗ್ರಹ (೧೮೬೮) ಎಂಬುದು. ಇನ್ನೊಂದು 'ನ್ಯಾಯಾಧಿಕರಣ' ೧೮೭೮ರಲ್ಲಿ ಮಂಗಳೂರಿನಿಂದಲೇ ಹೊರಡುತ್ತಿತ್ತು.

- ಕೊನೆಯದಾಗಿ ಮಣಿಪಾಲ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್ ಲಿ. ಸಂಸ್ಥೆಯ ಆವಿರ್ಭಾವ. ತನ್ನ ನಾಲ್ಕು ಪತ್ರಿಕೆಗಳಿಂದಲೂ, ಉತ್ಕೃಷ್ಟ ಮುದ್ರಣದಿಂದಲೂ, ಕನ್ನಡ ಪತ್ರಿಕಾ ಲೋಕದ ದಿಕ್ಕು ದೆಸೆಗಳನ್ನೂ, ಅದರ ವ್ಯಾಪ್ತಿ ಹಾಗೂ ದೃಷ್ಟಿಕೋನವನ್ನೆ ಬದಲಿಸಲಿಕ್ಕೆ ಕಾರಣವಾದದ್ದು ತಿಳಿದ ವಿಷಯ.

## ಪತ್ರಿಕೆಗಳ ಪ್ರಸಾರ: ಅಂದು-ಇಂದು

ದೇಶದಲ್ಲಿ ಮುದ್ರಾಯಂತ್ರಗಳು ಹೆಚ್ಚಿದಂತೆ ಪತ್ರಿಕೆಗಳು (ಮತ್ತು ಪುಸ್ತಕಗಳು) ಹೆಚ್ಚೆಚ್ಚು ಹೊರಡತೊಡಗಿದವು. ಹಾಗೆಂದು ಪತ್ರಿಕೆಗಳನ್ನು ಓದುವವರ ಸಂಖ್ಯೆಯಲ್ಲಿ ಅಂಥ ಹೆಚ್ಚಳವೇನೂ ಇರಲಿಲ್ಲ.

ಆದೇನಿದ್ದರೂ, ೧೯ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಯಾರೊಬ್ಬರು ಹೊಸದಾಗಿ ಪತ್ರಿಕೆಯನ್ನು ಆರಂಭಿಸುವುದಿದ್ದರೆ ಸುರುವಿಗೆ ೧೫೦ ಇಲ್ಲವೆ ೨೦೦ ಪ್ರತಿಗಳಿಂದ ಕ್ರಮೇಣ ಹೆಚ್ಚಿಸುತ್ತಿದ್ದರು—ಬೇಡಿಕೆಗೆ ಅನುಗುಣವಾಗಿ, ನಮಗೆ ದೊರೆತ ಅತಿ ಕಡಿಮೆ ಸಂಖ್ಯೆ—(ಎಂದರೆ ಕೇವಲ ೭೫ ಪ್ರತಿಗಳದ್ದು)—ಪತ್ರಿಕೆ ಎಂದರೆ 'ಹುಬಳೀ ವೃತ್ತ'. ೧೮೬೭ರಿಂದ ಕೆಲವು ದಶಕಗಳ ವರೆಗಿನ ಯಾವುದೊಂದು ಪತ್ರಿಕೆಯ ಮುದ್ರಣ ಪ್ರತಿಯ ಸಂಖ್ಯೆ ನಮಗೆ ರಿಪೋರ್ಟ್ ಆನ್ ನೇಟಿವ್ ಪ್ರೆಸ್ ಎಂಬ ಸರಕಾರೀ ಸಾಪ್ತಾಹಿಕ ವರದಿಗಳಿಂದ ತಿಳಿದುಬರುತ್ತದೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ಹಲವು ವರ್ಷಗಳ ಅನಂತರ ಪ್ರೆಸ್ ರಿಜಿಸ್ಟ್ರೇಶನ್ ಆ್ಯಕ್ಟ್ ಜಾರಿಗೆ ಬಂದು ಇದೇ ರೀತಿಯ ಅಂಕಿ ಸಂಖ್ಯೆಗಳು ಪ್ರತಿ ವರ್ಷ ದೊರೆಯುತ್ತವೆ. ಆದರೆ ೧೯೭೦ನೆಯ ದಶಕದ ವರೆಗೆ ಈ ಲೇಖನದ ವ್ಯಾಪ್ತಿ ಇರುವುದರಿಂದ, ಪ್ರೆಸ್ ರಿಜಿಸ್ಟ್ರೇಶನಿನ ರಿಜಿಸ್ಟ್ರಾರರ ೧೯೭೩ರ ವರದಿಯಿಂದ ಕೆಲವು ವಿವರಗಳನ್ನು ಕೊಡುತ್ತೇವೆ:

- ಕ್ರಿ.ಶ. ೧೯೬೮ರಲ್ಲಿ ನಮ್ಮ ಪತ್ರಿಕೆಗಳ ಸಂಖ್ಯೆ ೩೫೪ ಇದ್ದದ್ದು ೧೯೭೩ರ ಕೊನೆಗೆ ೫೫೬ಕ್ಕೆ ಏರಿದೆ. ಎಂದರೆ ೫೭% ಹೆಚ್ಚಳ-ಈ ಐದು ವರ್ಷಗಳಲ್ಲಿ.

- ಈ ೫೫೬ ಪತ್ರಿಕೆಗಳಲ್ಲಿ ೩೨೫ ಕನ್ನಡ; ೧೦೪ ಇಂಗ್ಲಿಷ್. ಉಳಿದದ್ದು ಮತ್ತಿತರ ಭಾಷೆಗಳ ಪತ್ರಿಕೆಗಳದ್ದು.

- ಇವೆಲ್ಲ ಪತ್ರಿಕೆಗಳ ಪ್ರಸಾರ ಸಂಖ್ಯೆ ೧೯೬೮ರಲ್ಲಿ ೧೦. ೮೩ ಲಕ್ಷ ಇದ್ದದ್ದು ೧೯೭೩ರಲ್ಲಿ ೧೫. ೬೦ ಲಕ್ಷಕ್ಕೆ ಏರಿದೆ. ಎಂದರೆ ಈ ಹೆಚ್ಚಳ ೪೪% ಎಂದಂತಾಯಿತು.

- ಈ ೫೫೬ ಪತ್ರಿಕೆಗಳಲ್ಲಿ ೬೭ ದೈನಿಕಗಳಿವೆ (ಸಂಜೆಯವೂ ಸೇರಿ). ೧೬೮ ಸಾಪ್ತಾಹಿಕಗಳಾಗಿವೆ. ಇನ್ನುಳಿದುವು ವಿವಿಧ ಕಾಲಾವಧಿಯವು.

- ಈ ೫೫೬ ಪತ್ರಿಕೆಗಳಲ್ಲಿ ಸುಮಾರು ಅರ್ಧದಷ್ಟು ಬೆಂಗಳೂರು ನಗರವೊಂದರಲ್ಲಿಯೇ ಹೊರಡುತ್ತವೆ!

✸ ✸

# ಕನ್ನಡ ಪತ್ರಿಕೆಗಳ ಅಕಾರಾದಿ ಸೂಚಿ

( ೧೮೪೩ರಿಂದ ೧೯೭೨ರ ವರೆಗೆ )

| ಪತ್ರಿಕೆಗಳು | ಅನುಕ್ರಮ ಸಂಖ್ಯೆ |
|---|---|
| ಅಂಕುಶ | ೧ |
| ಅಂಚೆ ವಾಣಿ | ೨ |
| ಅಂತರಂಗ | ೩ |
| ಅಕ್ಷರಾಂಜಲಿ | ೪ |
| ಅಖಿಲ ಭಾರತ ಪತ್ರಿಕೆ | ೫ |
| ಅಗ್ನಿ | ೬ |
| ಅಜಂತ | ೭ |
| ಅಡಿಕೆ ಸಂಚಿಕೆ | ೮ |
| ಅನಂತ ಚೈತನ್ಯ | ೯ |
| ಅನುಭವ ಮಂಟಪ | ೧೦ |
| ಅಪ್ಸರಾ (ಮಂಗಳೂರು) | ೧೧ |
| ಅಭಯ | ೧೨ |
| ಅಭಿರುಚಿ | ೧೩ |
| ಅಮರವಾಣಿ | ೧೪ |
| ಅಮಾನತ್ | ೧೫ |
| ಅಮೃತಾರ್ಪಣ | ೧೬ |
| ಅಮೆರಿಕನ್ ರಿಪೋರ್ಟರ್ | ೧೭ |
| ಅರುಣ (ಮಂಗಳೂರು) | ೧೮ |
| ಅರುಣ (ಬೆಂಗಳೂರು) | ೧೯ |
| ಅರುಣ (ಮೈಸೂರು) | ೨೦ |
| ಅರುಣೋದಯ (ಬೆಂಗಳೂರು) | ೨೧ |
| ಅರುಣೋದಯ (ಬೆಳಗಾವಿ) | ೨೨ |
| ಅರ್ಥವಿಕಾಸ | ೨೩ |
| ಅರ್ಥಸಾಧಕ ಪತ್ರಿಕೆ | ೨೪ |
| ಅಲಂಕಾರ | ೨೫ |
| ಅಲ್ಪಸಂಖ್ಯಾತರ ವಾಣಿ | ೨೬ |
| ಅಲ್ಪಸಂಖ್ಯಾತರು | ೨೭ |
| ಅವಕಾಶತೋಷಿಣೀ | ೨೮ |
| ಅಶೋಕ (ಹೆಗ್ಗೋಡು) | ೨೯ |
| ಅಶೋಕ (ಮೈಸೂರು) | ೩೦ |
| ಅಶ್ವಿನಿ | ೩೧ |
| ಆಂದೋಲನ | ೩೨ |
| ಆತ್ಮಗಳ ಬೆಲೆ | ೩೩ |
| ಆತ್ಮಮಿತ್ರ | ೩೪ |
| ಆತ್ಮ ವಿಚಾರ | ೩೫ |
| ಆತ್ಮಶಕ್ತಿ | ೩೬ |
| ಆತ್ಮಾನಂದ | ೩೭ |
| ಆತ್ಮಾಹ್ಲಾದಿನೀ | ೩೮ |
| ಆದರ್ಶ | ೩೯ |
| ಆಧ್ಯಾತ್ಮ ಪ್ರಕಾಶ | ೪೦ |
| ಆನಂದ (ಬಂಟವಾಳ) | ೪೧ |
| ಆನಂದ (ಬೆಂಗಳೂರು) | ೪೨ |
| ಆನಂದ ಚಂದ್ರಿಕೆ | ೪೩ |
| ಆನಂದ ಜ್ಯೋತಿ | ೪೪ |
| ಆಯುರ್ವೇದ (ತೀರ್ಥಹಳ್ಳಿ) | ೪೫ |
| ಆಯುರ್ವೇದ (ಹಿರಿಯಡ್ಕ) | ೪೬ |
| ಆಯುರ್ವೇದ ಮಾರ್ತಾಂಡ | ೪೭ |
| ಆರಾಧನೆ | ೪೮ |
| ಆರಾಧ್ಯ ಧರ್ಮೋಜ್ಜೀವಿನಿ | ೪೯ |
| ಆರೋಗ್ಯ ಚಂದ್ರಿಕೆ | ೫೦ |
| ಆರೋಗ್ಯ ಮಂದಿರ | ೫೧ |
| ಆರ್ಯ ಕರ್ನಾಟಕ | ೫೨ |
| ಆರ್ಯಧರ್ಮ ಪ್ರಕಾಶ | ೫೩ |
| ಆರ್ಯಧರ್ಮ ಸಂಗ್ರಹ | ೫೪ |
| ಆರ್ಯಮತ ಸಂಜೀವಿನೀ | ೫೫ |
| ಆರ್ಯ ಮಹಿಳಾ | ೫೬ |
| ಆರ್ಯವೈದ್ಯ | ೫೭ |
| ಆಶಾಜ್ಯೋತಿ | ೫೮ |
| ಆಶಾವಾದಿ | ೫೯ |
| ಆಹಾರ ವಿಜ್ಞಾನ | ೬೦ |
| ಇಂದ್ರಧನುಸ್ | ೬೧ |
| ಇತಿಹಾಸ | ೬೨ |
| ಇಳಿದು ಬಾ ತಾಯೆ | ೬೩ |
| ಈಡಿಗ | ೬೪ |
| ಉಕ್ಕಿನವಾರ್ತೆ | ೬೫ |
| ಉಜ್ವಲ | ೬೬ |

| | |
|---|---|
| ಕಾವೇರಿ | ೨೨೬ |
| ಕಾವ್ಯ ಕಲ್ಪದ್ರುಮಮ್ | ೨೨೭ |
| ಕಾವ್ಯಾಂಬುಧಿ | ೨೨೮ |
| ಕಾಸರಗೋಡು ಸಮಾಚಾರ | ೨೨೯ |
| ಕ್ರಾಂತಿ (ಬೆಂಗಳೂರು) | ೨೩೦ |
| ಕ್ರಾಂತಿ (ಕಲಬುರ್ಗಿ) | ೨೩೧ |
| ಕಿಡಿ | ೨೩೨ |
| ಕಿನಿಮಾ | ೨೩೩ |
| ಕಿರಣ (ಶಿರಸಿ) | ೨೩೪ |
| ಕಿರಣ (ಉಡುಪಿ) | ೨೨೫ |
| ಕಿರ್ಲೋಸ್ಕರ ವಾರ್ತೆ | ೨೩೬ |
| ಕ್ರಿಸ್ತ ಆಗಮನ ದೂತ | ೨೩೭ |
| ಕೀರ್ತಿ | ೨೩೮ |
| ಕೀರ್ತಿ ಕಿರಣ | ೨೩೯ |
| ಕುಂಚಿಟಿಗರ ಪತ್ರಿಕೆ | ೨೪೦ |
| ಕುಟುಂಬ | ೨೪೧ |
| ಕುಟ್ಬೋಶನಿ | ೨೪೨ |
| ಕುರುಕ್ಷೇತ್ರ | ೨೪೩ |
| ಕುರುಬರ ಜಗತ್ಪಾವನ | ೨೪೪ |
| ಕೃಷಿ ಕಳಾನಿಧಿ | ೨೪೫ |
| ಕೃಷಿ ಪ್ರಪಂಚ | ೨೪೬ |
| ಕೃಷಿ ಲೋಕ | ೨೪೭ |
| ಕೃಷಿ ವಾರ್ತಾಪತ್ರಿಕೆ | ೨೪೮ |
| ಕೃಷಿ ವಿಜ್ಞಾನ | ೨೪೯ |
| ಕೃಷಿಕರ ಬಂಧು | ೨೫೦ |
| ಕೃಷಿಕರ ಸಂಘಟನೆ | ೨೫೧ |
| ಕೇಸರಿ | ೨೫೨ |
| ಕೈಗಾರಿಕೆ | ೨೫೩ |
| ಕೈಲಾಸ | ೨೫೪ |
| ಕ್ರೈಸ್ತ ಸುಪ್ರಭಾತ | ೨೫೫ |
| ಕ್ರೈಸ್ತ ಹಿತವಾದಿ | ೨೫೬ |
| ಕೊಡಗು | ೨೫೭ |
| ಕೊಡುಗು ಗುರುವಾಣಿ | ೨೫೮ |
| ಕೊಡಗು ಚಂದ್ರಿಕೆ (ಬೆಂಗಳೂರು) | ೨೫೯ |
| ಕೊಡಗು ಚಂದ್ರಿಕೆ (ಮಡಿಕೇರಿ) | ೨೬೦ |
| ಕೊಡಗು ಬೋಧಿನೀ | ೨೬೧ |
| ಕೊಡಗು ವೃತ್ತಾಂತ | ೨೬೨ |
| ಕೊಡಗು ಸಮಾಚಾರ | ೨೬೩ |
| ಕೊಡಗು ಸಹಕಾರ ಬಂಧು | ೨೬೪ |
| ಕೊರವಂಜಿ | ೨೬೫ |
| ಕೋದಂಡ | ೨೬೬ |
| ಕ್ಷೇಮ ಸಮಾಚಾರ | ೨೬೭ |
| ಖಾದಿ ಗ್ರಾಮೋದ್ಯೋಗ | ೨೬೮ |
| ಖಾದಿ ವಿಜಯ | ೨೬೯ |
| ಖಿಲಾಡಿ | ೨೭೦ |
| ಗಡಿನಾಡು | ೨೭೧ |
| ಗಣಿತ ಕೌಮುದೀ | ೨೭೨ |
| ಗರಿಕೆ | ೨೭೩ |
| ಗರ್ಜನೆ | ೨೭೪ |
| ಗಾಂಧೀದರ್ಶನ | ೨೭೫ |
| ಗಾಂಧೀವಾಣಿ | ೨೭೬ |
| ಗಾಂಧೀ ಸ್ಮಾರಕ ನಿಧಿ | ೨೭೭ |
| ಗಾನವಾಹಿನಿ | ೨೭೮ |
| ಗಾಯನಗಂಗಾ | ೨೭೯ |
| ಗಿರಿವಾರ್ತಾ | ೨೮೦ |
| ಗೀತ ನಮ್ಮ ಪುಸ್ತಕ | ೨೮೧ |
| ಗೀತಮಿತ್ರ | ೨೮೨ |
| ಗೀತಾವಾಣಿ | ೨೮೩ |
| ಗುಡುಗು | ೨೮೪ |
| ಗುರುದೇವ | ೨೮೫ |
| ಗುಲಾಬಿ | ೨೮೬ |
| ಗೃಹವೈದ್ಯ | ೨೮೭ |
| ಗೆಳೆಯ | ೨೮೮ |
| ಗೋಕರ್ಣ ಗೋಷ್ಠಿ | ೨೮೯ |
| ಗೋಕುಲ (ಬೆಂಗಳೂರು) | ೨೯೦ |
| ಗೋಕುಲ II (ಬೆಂಗಳೂರು) | ೨೯೧ |
| ಗೋಪಾಲ | ೨೯೨ |
| ಗೋರಕ್ಷಣೆ | ೨೯೩ |
| ಗೋಸೇವಕ | ೨೯೪ |
| ಗ್ರಾಮಜೀವನ | ೨೯೫ |
| ಗ್ರಾಮಸೇವಕ (ರಾಮದುರ್ಗ) | ೨೯೬ |
| ಗ್ರಾಮಸೇವಕ (ಅಂಕೋಲಾ) | ೨೯೭ |
| ಗ್ರಾಮಸೇವೆ | ೨೯೮ |
| ಗ್ರಾಮಹಿತ | ೨೯೯ |
| ಗ್ರಾಮಾಧಿಪತಿಯು | ೩೦೦ |
| ಗ್ರಾಮಾಭ್ಯುದಯ | ೩೦೧ |
| ಗ್ರಾಮಾಭ್ಯುದಯ ಮತ್ತು ಸಹಕಾರ | ೩೦೨ |
| ಗ್ರಾಮೋದಯ | ೩೦೩ |
| ಚಂದಮಾಮ | ೩೦೪ |
| ಚಂದಪ್ರಭಾ | ೩೦೫ |

| | |
|---|---|
| ಚಂದ್ರೋದಯ | ೩೦೬ |
| ಚಕ್ಕುಲಿಮಾಮ | ೩೦೭ |
| ಚದುರಂಗ | ೩೦೮ |
| ಚರಕಾ | ೩೦೯ |
| ಚಲಚಿತ್ರ | ೩೧೦ |
| ಚಾತುರ್ಯ | ೩೧೧ |
| ಚಿಂತಾಮಣಿ ಅಭ್ಯುದಯ | ೩೧೨ |
| ಚಿತ್ರ | ೩೧೩ |
| ಚಿತ್ರಗುಪ್ತ (ಬೆಂಗಳೂರು) | ೩೧೪ |
| ಚಿತ್ರಗುಪ್ತ II | ೩೧೫ |
| ಚಿತ್ರಗುಪ್ತ (ಮೈಸೂರು) | ೩೧೬ |
| ಚಿತ್ರಜ್ಯೋತಿ | ೩೧೭ |
| ಚಿತ್ರತಾರಾ | ೩೧೮ |
| ಚಿತ್ರದುರ್ಗ ಜಿಲ್ಲಾ | ೩೧೯ |
| ಚಿತ್ರಪಟ | ೩೨೦ |
| ಚಿತ್ರಭೂಮಿ | ೩೨೧ |
| ಚಿತ್ರಲತಾ | ೩೨೨ |
| ಚಿತ್ರಲೇಖಾ | ೩೨೩ |
| ಚಿತ್ರವಾಣಿ (ಮಂಗಳೂರು) | ೩೨೪ |
| ಚಿತ್ರವಾಣಿ (ಬೆಂಗಳೂರು) | ೩೨೫ |
| ಚಿತ್ರಶ್ರೀ | ೩೨೬ |
| ಚಿತ್ರಸುಧಾ | ೩೨೭ |
| ಚಿತ್ರಾಪುರ ರವಿಕಿರಣ | ೩೨೮ |
| ಚಿತ್ರಾವತಿ | ೩೨೯ |
| ಚಿರಾಯು | ೩೩೦ |
| ಚಿಲುಮೆ | ೩೩೧ |
| ಚುನಾವಣೆ | ೩೩೨ |
| ಚೆಲುವ | ೩೩೩ |
| ಚೇತನ (ಕುಷ್ಟಗಿ) | ೩೩೪ |
| ಚೇತನ (ಮುಂಬಯಿ) | ೩೩೫ |
| ಚೇತನ (ಮಡಿಕೇರಿ) | ೩೩೬ |
| ಚೈತನ್ಯ | ೩೩೭ |
| ಚೈತನ್ಯ ಕುಸುಮಾವಳಿ | ೩೩೮ |
| ಚೌಕದ ದೀಪ | ೩೩೯ |
| ಛಲದಂಕಮಲ್ಲ | ೩೪೦ |
| ಛಾಯಾ | ೩೪೧ |
| ಛಾಯಾಲೋಕ | ೩೪೨ |
| ಜಗದರ್ಶಿ | ೩೪೩ |
| ಜನಜಾಗೃತಿ | ೩೪೪ |
| ಜನಜೀವಾಳ | ೩೪೫ |
| ಜನತಾ (ಹೊನ್ನಾವರ) | ೩೪೬ |
| ಜನತಾ (ಬೆಂಗಳೂರು) | ೩೪೭ |
| ಜನದೀಪ | ೨೪೮ |
| ಜನಪದ | ೩೪೯ |
| ಜನಪ್ರಗತಿ | ೩೫೦ |
| ಜನಪ್ರೇಮಿ | ೩೫೧ |
| ಜನಮತ | ೩೫೨ |
| ಜನಮನ | ೩೫೩ |
| ಜನಮಿತ್ರ | ೩೫೪ |
| ಜನಯುಗ | ೩೫೫ |
| ಜನರಾಜ್ | ೩೫೬ |
| ಜನವಾಣಿ | ೩೫೭ |
| ಜನಶಕ್ತಿ | ೩೫೮ |
| ಜನಸಂದೇಶ | ೩೫೯ |
| ಜನಸೇವಕ | ೩೬೦ |
| ಜನ್ಮಭೂಮಿ (ತೀರ್ಥಹಳ್ಳಿ) | ೩೬೧ |
| ಜನ್ಮಭೂಮಿ (ಮಡಿಕೇರಿ) | ೩೬೨ |
| ಜಯ (ಹುಬ್ಬಳ್ಳಿ) | ೩೬೩ |
| ಜಯಂತಿ | ೩೬೪ |
| ಜಯಕರ್ನಾಟಕ | ೩೬೫ |
| ಜಯಭಾರತ | ೩೬೬ |
| ಜಯಭೇರಿ | ೩೬೭ |
| ಜಯಮಾಲ | ೩೬೮ |
| ಜಯಮಾಲಾ | ೩೬೯ |
| ಜಯ ಹಿಂದ್ | ೩೭೦ |
| ಜಾಗೃತ ಕರ್ನಾಟಕ | ೩೭೧ |
| ಜಾಗೃತ ಭಾರತ | ೩೭೨ |
| ಜಾಗೃತಿ (ಶಿವಮೊಗ್ಗ) | ೩೭೩ |
| ಜಾಗೃತಿ (ಧಾರವಾಡ) | ೩೭೪ |
| ಜಾನಪದ | ೩೭೫ |
| ಜಾಹೀರಾತು ಮತ್ತು ಸಮಾಚಾರ ಪತ್ರಿಕೆ | ೩೭೬ |
| ಜಿನಮತಪ್ರಕಾಶಿಕಾ | ೩೭೭ |
| ಜಿನಮತಾದರ್ಶ | ೩೭೮ |
| ಜಿನವಾಣಿ | ೩೭೯ |
| ಜಿನವಿಜಯ | ೩೮೦ |
| ಜೀವಜಲ (ಬೆಂಗಳೂರು) | ೩೮೧ |
| ಜೀವಜಲ (ಮಳವಳ್ಳಿ) | ೩೮೨ |
| ಜೀವನ | ೩೮೩ |
| ಜೀವನವಿಕಾಸ | ೩೮೪ |
| ಜೀವನಶಿಕ್ಷಣ | ೩೮೫ |

| | |
|---|---|
| ಜೀವೋತ್ತಮ | ೩೮೬ |
| ಜೀಸುದಾಸರ ತಿರುಹೃದಯದ ದೂತ | ೩೮೭ |
| ಜೈನಬಂಧು | ೩೮೮ |
| ಜೈನಹಿತೈಷಿಣಿ | ೩೮೯ |
| ಜ್ಞಾನಕರ್ನಾಟಕ | ೩೯೦ |
| ಜ್ಞಾನ ಪ್ರಸಾದ | ೩೯೧ |
| ಜ್ಞಾನಭಾರತಿ (ಹುನಗುಂದ) | ೩೯೨ |
| ಜ್ಞಾನಭಾರತಿ (ಕುಮಟಾ) | ೩೯೩ |
| ಜ್ಞಾನ ಬೋಧಕ | ೩೯೪ |
| ಜ್ಞಾನಮಂಜರಿ | ೩೯೫ |
| ಜ್ಞಾನಸುಧಾ | ೩೯೬ |
| ಜ್ಞಾನಾಂಜನ (ಬೆಂಗಳೂರು) | ೩೯೭ |
| ಜ್ಞಾನಾಂಜನ (ಬೆಳಗಾಂವಿ) | ೩೯೮ |
| ಜ್ಞಾನಾಂಜಲಿ | ೩೯೯ |
| ಜ್ಞಾನೋದಯ (ಶಿವಮೊಗ್ಗ) | ೪೦೦ |
| ಜ್ಞಾನೋದಯ (ಮೈಸೂರು) | ೪೦೧ |
| ಜ್ವಾಲಾಮುಖಿ | ೪೦೨ |
| ಜ್ಯೋತಿ | ೪೦೩ |
| ಜ್ಯೋತಿರ್ವಾಣಿ | ೪೦೪ |
| ಜ್ಯೋತಿಷ | ೪೦೫ |
| ಜ್ಯೋತಿಷ್ಯ ಕಲದ್ರುಮ | ೪೦೬ |
| ಜ್ಯೋತಿಷ್ಯ ಕಿರಣ | ೪೦೭ |
| ಜ್ಯೋತಿಷ್ಯ ವಿಚಾರಸಾಗರ | ೪೦೮ |
| ಜ್ಯೋತಿಷ್ಯ ವಿದ್ಯಾಸಾಗರ | ೪೦೯ |
| ತಂತ್ರ | ೪೧೦ |
| ತತ್ವಪ್ರಕಾಶಿಕೆ | ೪೧೧ |
| ತತ್ವವಾದ | ೪೧೨ |
| ತರಂಗಿಣಿ | ೪೧೩ |
| ತರುಣ | ೪೧೪ |
| ತರುಣ ಕರ್ನಾಟಕ (ಬೈಲಹೊಂಗಲ) | ೪೧೫ |
| ತರುಣ ಕರ್ನಾಟಕ (ಹುಬ್ಬಳ್ಳಿ) | ೪೧೬ |
| ತರುಣವಾಣಿ | ೪೧೭ |
| ತಾಯಿನಾಡು | ೪೧೮ |
| ತಾಯಿನುಡಿ | ೪೧೯ |
| ತಾರಕೋದಯ | ೪೨೦ |
| ತಾರಾ | ೪೨೧ |
| ತಾಲೂಕಾ ಸಮಾಚಾರ (ಶಿರಹಟ್ಟಿ) | ೪೨೨ |
| ತಿಲಕಸಂದೇಶ | ೪೨೩ |
| ತುಘಲಕ್ | ೪೨೪ |
| ತುಣುಕು-ಮಿಣುಕು | ೪೨೫ |
| ತುತ್ತೂರಿ | ೪೨೬ |
| ತುಮಕೂರು ವರ್ತಮಾನ | ೪೨೭ |
| ತ್ರಿವೇಣಿ | ೪೨೮ |
| ತ್ರಿಶೂಲಿ | ೪೨೯ |
| ದ.ಕ.ಜಿಲ್ಲಾ ಗೆಝೆಟ್ ಗ್ರಾಮ ಸಪ್ಲಿಮೆಂಟ್ | ೪೩೦ |
| ದಕ್ಕನ್ ಸುಪ್ರಭಾತ | ೪೩೧ |
| ದರ್ಪಣ | ೪೩೨ |
| ದಲಿತ ವಾಣಿ | ೪೩೩ |
| ದಲಿತ ಬಂಧು | ೪೩೪ |
| ದರ್ಶನ (ಬೆಳಗಾವಿ) | ೪೩೫ |
| ದರ್ಶನ (ಕಾರವಾರ) | ೪೩೬ |
| ದರ್ಶನ (ಬೆಂಗಳೂರು) | ೪೩೭ |
| ದಾಂಪತ್ಯ ಜೀವನ | ೪೩೮ |
| ದಾರಿದೀಪ | ೪೩೯ |
| ದಾಸಬಂಧು | ೪೪೦ |
| ದಾಸವಾಣಿ | ೪೪೧ |
| ದಾಸವಾಣಿ II | ೪೪೨ |
| ದಿಗ್ವಿಜಯ (ಬೆಂಗಳೂರು) | ೪೪೩ |
| ದಿಗ್ವಿಜಯ (ಗದಗ) | ೪೪೪ |
| ದಿವ್ಯಜೀವನ (ತಿರುವಂಗಿಮಲೈ) | ೪೪೫ |
| ದಿವ್ಯಜೀವನ (ಬೆಂಗಳೂರು) | ೪೪೬ |
| ದಿವ್ಯಜ್ಯೋತಿ | ೪೪೭ |
| ದಿವ್ಯದರ್ಶನ | ೪೪೮ |
| ದಿವ್ಯವಾಣಿ | ೪೪೯ |
| ದಿವ್ಯವಾಣಿ | ೪೫೦ |
| ದೀಕ್ಷಾ | ೪೫೧ |
| ದೀರ್ಘಾಯು | ೪೫೨ |
| ದೀನಬಂಧು | ೪೫೩ |
| ದೀನಬಂಧು | ೪೫೪ |
| ದೀಪಮಾಲೆ | ೪೫೫ |
| ದೀಪ್ತಿ (ಪಾಂಡಿಚೆರಿ) | ೪೫೬ |
| ದೀಪ್ತಿ (ಬೆಳಗಾಂವಿ) | ೪೫೭ |
| ದೀಪ್ತಿ (ಬೆಂಗಳೂರು) | ೪೫೮ |
| ದುಡಿಮೆ | ೪೫೯ |
| ದೂತ | ೪೬೦ |
| ದೇವಭೂಜ | ೪೬೧ |
| ದೇವಾಂಗ ಪತ್ರಿಕೆ | ೪೬೨ |
| ದೇವಾಡಿಗರ ಕೊಡಿ | ೪೬೩ |
| ದೇಶಪ್ರೇಮಿ | ೪೬೪ |
| ದೇಶಬಂಧು (ಹುಬ್ಬಳ್ಳಿ) | ೪೬೫ |

| | |
|---|---|
| ದೇಶಬಂಧು (ಬೆಂಗಳೂರು) | ೪೬೬ |
| ದೇಶಭಕ್ತ | ೪೬೭ |
| ದೇಶರಂಜನ | ೪೬೮ |
| ದೇಶಾಭಿಮಾನಿ | ೪೬೯ |
| ದೇಶೀಯ ವಿದ್ಯಾಶಾಲಾಪತ್ರಿಕೆ | ೪೭೦ |
| ದೈವಜ್ಞ ಸಂದೇಶ | ೪೭೧ |
| ದ್ವೈತ ದುಂದುಭಿ | ೪೭೨ |
| ಧನಂಜಯ | ೪೭೩ |
| ಧನ್ವಂತರಿ | ೪೭೪ |
| ಧನುರ್ಧಾರಿ | ೪೭೫ |
| ಧರ್ಮತರಂಗಿಣಿ | ೪೭೬ |
| ಧರ್ಮಪ್ರಕಾಶ | ೪೭೭ |
| ಧರ್ಮಬೋಧ | ೪೭೮ |
| ಧರ್ಮಸಂಜೀವಿನಿ | ೪೭೯ |
| ಧರ್ಮಸಂದೇಶ | ೪೮೦ |
| ಧರ್ಮಾದಿ ಪುರುಷಾರ್ಥ | ೪೮೧ |
| ಧೀರವಾಣಿ | ೪೮೨ |
| ಧುರೀಣ | ೪೮೩ |
| ನಂದಾದೀಪ | ೪೮೪ |
| ನಂದಿನಿ (ನಂಜನಗೂಡು) | ೪೮೫ |
| ನಂದಿನಿ (ಗೋಕರ್ಣ) | ೪೮೬ |
| ನಂದಿನಿ (ಶಿರಸಿ) | ೪೮೭ |
| ನಂದಿನಿ (ಶಿವಮೊಗ್ಗ) | ೪೮೮ |
| ನಗರಪಾಲಕ | ೪೮೯ |
| ನಗರ ಸಂಚಾರಿ | ೪೯೦ |
| ನಗುವ ನಂದ | ೪೯೧ |
| ನಟನ | ೪೯೨ |
| ನಟರಾಜ | ೪೯೩ |
| ನಡೆಗನ್ನಡಿ | ೪೯೪ |
| ನಮ್ಮ ನಾಡು | ೪೯೫ |
| ನಮ್ಮ ಪುಸ್ತಕ | ೪೯೬ |
| ನಮ್ಮ ರೈತರು | ೪೯೭ |
| ನಮ್ಮ ವಾರಭವಿಷ್ಯ | ೪೯೮ |
| ನಮ್ಮ ಸಮಾಜ | ೪೯೯ |
| ನರಪತಿ | ೫೦೦ |
| ನರಸಿಂಹ | ೫೦೧ |
| ನರಹರಿ | ೫೦೨ |
| ನವಕರ್ನಾಟಕ | ೫೦೩ |
| ನವಕಲ್ಯಾಣ | ೫೦೪ |
| ನವಕೀರ್ತಿ | ೫೦೫ |
| ನವಚೇತನ (ಶಿರಸಿ) | ೫೦೬ |
| ನವಚೇತನ (ಪೆರಡಾಲ) | ೫೦೭ |
| ನವಜೀವನ (ಬಬಲೇಶ್ವರ) | ೫೦೮ |
| ನವಜೀವನ (ಸುರತ್ಕಲ್) | ೫೦೯ |
| ನವಜೀವನ (ಬೆಂಗಳೂರು) | ೫೧೦ |
| ನವಜ್ಯೋತಿ (ಶಿವಮೊಗ್ಗ) | ೫೧೧ |
| ನವಜ್ಯೋತಿ (ಚಿಕ್ಕಮಗಳೂರು) | ೫೧೨ |
| ನವನೀತ (ಧಾರವಾಡ) | ೫೧೩ |
| ನವನೀತ (ಬೆಳಗಾವಿ) | ೫೧೪ |
| ನವನೀತ (ಬ್ಯಾಡಗಿ) | ೫೧೫ |
| ನವನೀತ (ಕಾಪು) | ೫೧೬ |
| ನವಭಾರತ (ಬಳ್ಳಾರಿ) | ೫೧೭ |
| ನವಭಾರತ (ಮಂಗಳೂರು) | ೫೧೮ |
| ನವ ಮೈಸೂರು | ೫೧೯ |
| ನವಯುಗ (ಉಡುಪಿ) | ೫೨೦ |
| ನವಯುಗ (ಹುಬ್ಬಳ್ಳಿ) | ೫೨೧ |
| ನವಶಕ್ತಿ (ಮಡಿಕೇರಿ) | ೫೨೨ |
| ನವಶಕ್ತಿ (ಉಡುಪಿ) | ೫೨೩ |
| ನವಶಕ್ತಿ (ಮಂಗಳೂರು) | ೫೨೪ |
| ನವಸಂದೇಶ | ೫೨೫ |
| ನವೀನ ಭಾರತ | ೫೨೬ |
| ನಾಗರಿಕ (ಹೊನ್ನಾವರ) | ೫೨೭ |
| ನಾಗರಿಕ (ಗದಗ) | ೫೨೮ |
| ನಾಡಕಹಳೆ | ೫೨೯ |
| ನಾಡಗುಡಿ | ೫೩೦ |
| ನಾಡಪ್ರೇಮಿ | ೫೩೧ |
| ನಾಡೋಜ | ೫೩೨ |
| ನಾರದ | ೫೩೩ |
| ನ್ಯಾಯ | ೫೩೪ |
| ನ್ಯಾಯವಾದಿ | ೫೩೫ |
| ನ್ಯಾಯಸಂಗ್ರಹ | ೫೩೬ |
| ನ್ಯಾಯಾಧಿಕರಣ | ೫೩೭ |
| ನಿಖಿಲ ಕರ್ನಾಟಕ ಆಯುರ್ವೇದ | ೫೩೮ |
| ನಿಜಗುಣ | ೫೩೯ |
| ನಿತ್ಯಾನಂದ ದರ್ಶನ | ೫೪೦ |
| ನಿರ್ಭಯ | ೫೪೧ |
| ನಿರ್ಮಲಾ | ೫೪೨ |
| ನೀತಿಜ್ಯೋತಿ | ೫೪೩ |
| ನೀಲಕಂಠ ವಿಜಯ | ೫೪೪ |
| ನುಡಿ (ಮುಂಬಯಿ) | ೫೪೫ |

| | |
|---|---|
| ನುಡಿ (ಬೆಂಗಳೂರು) | ೫೪೬ |
| ನುಡಿಜೇನು | ೫೪೭ |
| ನೂತನ | ೫೪೮ |
| ನೃತ್ಯಭಾರತಿ | ೫೪೯ |
| ನೇಗಿಲಯೋಗಿ (ಹಾಸನ) | ೫೫೦ |
| ನೇಗಿಲಯೋಗಿ (ಗದಗ) | ೫೫೧ |
| ನೇತಾಜಿ | ೫೫೨ |
| ನ್ಯೂ ವ್ಯೂಸ್ | ೫೫೩ |
| ಪಂಚಾಕ್ಷರ ಪ್ರಕಾಶ | ೫೫೪ |
| ಪಂಚಾಚಾರ್ಯ ಪಭಾ | ೫೫೫ |
| ಪಂಚಾಮೃತ (ಹಿಂಚಕಡ) | ೫೫೬ |
| ಪಂಚಾಮೃತ (ಗದಗ) | ೫೫೭ |
| ಪಂಚಾಯತಿ ರಾಜ್ಯ | ೫೫೮ |
| ಪಂಡಿತಮಂಡಲ ಪತ್ರಿಕೆ | ೫೫೯ |
| ಪತ್ತೇದಾರ | ೫೬೦ |
| ಪಥಿಕ | ೫೬೧ |
| ಪರಂಜ್ಯೋತಿ | ೫೬೨ |
| ಪರಮಾತ್ಮ | ೫೬೩ |
| ಪರಮಾರ್ಥ | ೫೬೪ |
| ಪರಮಾರ್ಥ ಚಂದ್ರೋದಯ | ೫೬೫ |
| ಪರಮಾನಂದ ಸಾಧನ | ೫೬೬ |
| ಪರಶುರಾಜ್ಯ | ೫೬೭ |
| ಪರಾಗ | ೫೬೮ |
| ಪರಿಪೂರ್ಣ | ೫೬೯ |
| ಪರಿಮಳ (ಬೆಂಗಳೂರು) | ೫೭೦ |
| ಪರಿಮಳ (ನಂಜನಗೂಡು) | ೫೭೧ |
| ವರಿವರ್ತಕ | ೫೭೨ |
| ಪರಿವಾರ ಪತ್ರಿಕೆ | ೫೭೩ |
| ಪರೀಕ್ಷಾ ದರ್ಪಣ | ೫೭೪ |
| ಪರ್ಯಾಯ ಪ್ರಕಾಶಿನಿ | ೫೭೫ |
| ಪಾಂಚಜನ್ಯ | ೫೭೬ |
| ಪಾಪಚ್ಚಿ | ೫೭೭ |
| ಪಾರಿಜಾತ ಕುಸುಮ | ೫೭೮ |
| ಪುತ್ತೂರು ಪಗತಿ | ೫೭೯ |
| ಪುರಾಣ ಕಥಾವಳಿ | ೫೮೦ |
| ಪುಷ್ಪ | ೫೮೧ |
| ಪುಸ್ತಕ ಪಪಂಚ | ೫೮೨ |
| ಪೂಜಾರಿ ಬಂಧು | ೫೮೩ |
| ಪೂರ್ಣಬೋಧ | ೫೮೪ |
| ಪೋಲೀಸ್ ಗೆಝೆಟ್ | ೫೮೫ |
| ಪೌರಕಾಂತಿ | ೫೮೬ |
| ಪೌರಮತ | ೫೮೭ |
| ಪೌರವಾಣಿ (ಬೆಂಗಳೂರು) | ೫೮೮ |
| ಪೌರವಾಣಿ (ಹಿಂದೂಪುರ) | ೫೮೯ |
| ಪೌರವಾಣಿ (ಮಂಡ್ಯ) | ೫೯೦ |
| ಪೌರವೀರ | ೫೯೧ |
| ಪೌರಸಂದೇಶ (ಬೆಂಗಳೂರು) | ೫೯೨ |
| ಪೌರಸಮಿತಿ | ೫೯೩ |
| ಪೌರ ಸಾಮಾಜಿಕ ಪತ್ರಿಕೆ | ೫೯೪ |
| ಪ್ರಕಾಶ (ಬೆಳಗಾವಿ) | ೫೯೫ |
| ಪಕಾಶ (ಉಡುಪಿ) | ೫೯೬ |
| ಪ್ರಕಾಶಿನಿ | ೫೯೭ |
| ಪ್ರಗತಿ | ೫೯೮ |
| ಪ್ರಜಾಚಿಂತನ | ೫೯೯ |
| ಪ್ರಜಾಜ್ಯೋತಿ | ೬೦೦ |
| ಪ್ರಜಾಬಂಧು | ೬೦೧ |
| ಪ್ರಜಾಮತ | ೬೦೨ |
| ಪಜಾಮಿತ (ಬಬಲೇಶ್ವರ) | ೬೦೩ |
| ಪ್ರಜಾಮಿತ್ರ (ಬೆಂಗಳೂರು) | ೬೦೪ |
| ಪ್ರಜಾಮಿತ್ರ II (ಬೆಂಗಳೂರು) | ೬೦೫ |
| ಪಜಾವಾಣಿ | ೬೦೬ |
| ಪಜಾಶಕ್ತಿ | ೬೦೭ |
| ಪಜಾಸೇವೆ | ೬೦೮ |
| ಪ್ರಜಾಹಿತ (ವಿಜಯಪುರ) | ೬೦೯ |
| ಪಜಾಹಿತ (ಬೆಂಗಳೂರು) | ೬೧೦ |
| ಪ್ರಜ್ಞಾಶೀಲ ಧೀರವಾಣಿ | ೬೧೧ |
| ಪ್ರಜ್ಞೆ | ೬೧೨ |
| ಪ್ರತಿನಿಧಿ (ಬೀರೂರು) | ೬೧೩ |
| ಪತಿನಿಧಿ (ಹಾಸನ) | ೬೧೪ |
| ಪ್ರತಿಬಿಂಬ | ೬೧೫ |
| ಪತಿಭಾ (ಧಾರವಾಡ) | ೬೧೬ |
| ಪ್ರತಿಭಾ (ಬೆಂಗಳೂರು) | ೬೧೭ |
| ಪ್ರತೀಕ | ೬೧೮ |
| ಪದೀಪ | ೬೧೯ |
| ಪಪಂಚ | ೬೨೦ |
| ಪಬುದ್ಧ ಕರ್ನಾಟಕ | ೬೨೧ |
| ಪಬೋಧ (ಬೆಳಗಾಂವಿ) | ೬೨೨ |
| ಪಬೋಧ (ತೀರ್ಥಹಳ್ಳಿ) | ೬೨೩ |
| ಪ್ರಬೋಧಕ | ೬೨೪ |
| ಪಬೋಧವಾಣಿ | ೬೨೫ |

| | |
|---|---|
| ಲೋಕಮತ | ೮೬೨ |
| ಲೋಕಮಿತ್ರ | ೮೬೩ |
| ಲೋಕರಹಸ್ಯ | ೮೬೪ |
| ಲೋಕರಾಜ್ಯ | ೮೬೫ |
| ಲೋಕವಾಣಿ | ೮೬೬ |
| ಲೋಕಶಿಕ್ಷಕ | ೮೬೭ |
| ವಂದೇಮಾತರಂ | ೮೬೮ |
| ವದಂತಿ | ೮೬೯ |
| ವನಸುಮ | ೮೭೦ |
| ವರದಿಗಾರ | ೮೭೧ |
| ವರ್ತಕಧುರೀಣ | ೮೭೨ |
| ವರ್ತಮಾನ | ೮೭೩ |
| ವಸಂತ (ಕುಂದಾಪುರ) | ೮೭೪ |
| ವಸಂತ (ಗದಗ) | ೮೭೫ |
| ವಸಂತ (ಮೈಸೂರು) | ೮೭೬ |
| ವಸಂತ (ಧಾರವಾಡ) | ೮೭೭ |
| ವಸಂತ (ಬೆಂಗಳೂರು) | ೮೭೮ |
| ವ್ಯವಸಾಯ ದರ್ಪಣ | ೮೭೯ |
| ವ್ಯವಸಾಯೋತ್ಪನ್ನಗಳ ವಾಣಿಜ್ಯ ವಾರ್ತೆ | ೮೮೦ |
| ವಾಗ್ಭೂಷಣ | ೮೮೧ |
| ವಾಗ್ದೇವಿ | ೮೮೨ |
| ವಾಣಿ | ೮೮೩ |
| ವಾಣೀ | ೮೮೪ |
| ವಾಣಿಜ್ಯ ಪ್ರಬೋಧಿನೀ | ೮೮೫ |
| ವಾರ್ತಾ | ೮೮೬ |
| ವಾರ್ತಾಪತ್ರ | ೮೮೭ |
| ವಾರ್ತಾಪತ್ರಿಕೆ | ೮೮೮ |
| ವಾರ್ತಾಲೋಕ | ೮೮೯ |
| ವಾರ್ತಾವಾಣಿ | ೮೯೦ |
| ವಾರ್ತಾವಿಚಾರ | ೮೯೧ |
| ವಾಸವಿ | ೮೯೨ |
| ವಾಹಿನಿ | ೮೯೩ |
| ವಿಕಾಸ (ಶಿರಾಳಕೊಪ್ಪ) | ೮೯೪ |
| ವಿಕಾಸ (ಉಡುಪಿ) | ೮೯೫ |
| ವಿಕಾಸವಾಣಿ (ಮಂಗಳೂರು) | ೮೯೬ |
| ವಿಕಾಸವಾಣಿ (ಶಿವಮೊಗ್ಗ) | ೮೯೭ |
| ವಿಕ್ರಾಂತ ಭಾರತ | ೮೯೮ |
| ವಿಚಾರ ಗುಚ್ಛ | ೮೯೯ |
| ವಿಚಾರ ತರಂಗಿಣೀ | ೯೦೦ |
| ವಿಚಾರ ಪ್ರಭ | ೯೦೧ |
| ವಿಚಾರ ವಾಣಿ | ೯೦೨ |
| ವಿಚಾರ ವಾಹಿನಿ | ೯೦೩ |
| ವಿಚಿತ್ರ ವರ್ತಮಾನ ಸಂಗ್ರಹ | ೯೦೪ |
| ವಿಜಯ (ಧಾರವಾಡ) | ೯೦೫ |
| ವಿಜಯ (ಮೈಸೂರು) | ೯೦೬ |
| ವಿಜಯ (ಕಾರ್ಕಳ) | ೯೦೭ |
| ವಿಜಯ (ರಾಯಚೂರು) | ೯೦೮ |
| ವಿಜಯಕೇಸರೀ (ಸಾಗರ) | ೯೦೯ |
| ವಿಜಯಕೇಸರೀ (ರಾಯಚೂರು) | ೯೧೦ |
| ವಿಜಯ ಧ್ವಜ | ೯೧೧ |
| ವಿಜಯ ಮಾಲ | ೯೧೨ |
| ವಿಜಯ ವಾಣಿ (ಬೆಂಗಳೂರು) | ೯೧೩ |
| ವಿಜಯ ವಾಣಿ (ತುಮಕೂರು) | ೯೧೪ |
| ವಿಜ್ಞಾನ (ಬೆಂಗಳೂರು) | ೯೧೫ |
| ವಿಜ್ಞಾನ II (ಬೆಂಗಳೂರು) | ೯೧೬ |
| ವಿಜ್ಞಾನ ಕರ್ನಾಟಕ | ೯೧೭ |
| ವಿಜ್ಞಾನ ಜ್ಯೋತಿಷ | ೯೧೮ |
| ವಿಜ್ಞಾನ ಜ್ಯೋತಿಷ್ಯ | ೯೧೯ |
| ವಿಜ್ಞಾನ ದೀಪಿಕೆ | ೯೨೦ |
| ವಿಜ್ಞಾನ ಭಾರತಿ | ೯೨೧ |
| ವಿಜ್ಞಾನ ಯುಗ | ೯೨೨ |
| ವಿಜ್ಞಾನ ಲೋಕ | ೯೨೩ |
| ವಿಜ್ಞಾನ ವೈಭವ | ೯೨೪ |
| ವಿದ್ಯಾ | ೯೨೫ |
| ವಿದ್ಯಾರ್ಥಿ (ಬೆಂಗಳೂರು) | ೯೨೬ |
| ವಿದ್ಯಾರ್ಥಿ (ಮಡಿಕೇರಿ) | ೯೨೭ |
| ವಿದ್ಯಾರ್ಥಿ (ವಿಜಾಪುರ) | ೯೨೮ |
| ವಿದ್ಯಾರ್ಥಿ II (ಬೆಂಗಳೂರು) | ೯೨೯ |
| ವಿದ್ಯಾದಾಯಿನಿ (ಮೈಸೂರು) | ೯೩೦ |
| ವಿದ್ಯಾನಂದ | ೯೩೧ |
| ವಿದ್ಯಾಲೋಕ | ೯೩೨ |
| ವಿದ್ಯಾಸಾಗರ | ೯೩೩ |
| ವಿದ್ಯೋದಯ | ೯೩೪ |
| ವಿನೋದ | ೯೩೫ |
| ವಿನೋದ II | ೯೩೬ |
| ವಿನೋದ ಚಂದಿಕೆ | ೯೩೭ |
| ವಿನೋದ ಪ್ರಪಂಚ | ೯೩೮ |
| ವಿನೋದ ಭಾರತ | ೯೩೯ |
| ವಿನೋದ ರಂಜಿನಿ | ೯೪೦ |
| ವಿನೋದ ವಾಣಿ | ೯೪೧ |

| | |
|---|---|
| ವಿನೋದಿನೀ | ೯೪೨ |
| ವಿಪಂಚೀ | ೯೪೩ |
| ವಿಮರ್ಶಕ | ೯೪೪ |
| ವಿಮಾ ವಾಣಿಜ | ೯೪೫ |
| ವಿವೇಕ | ೯೪೬ |
| ವಿವೇಕ ದೀಪಿಕ | ೯೪೭ |
| ವಿವೇಕಾನಂದ | ೯೪೮ |
| ವಿವೇಕಾಭ್ಯುದಯ | ೯೪೯ |
| ವಿವೇಕೋದಯ | ೯೫೦ |
| ವಿಶ್ವಕರ್ನಾಟಕ | ೯೫೧ |
| ವಿಶ್ವಕರ್ಮ | ೯೫೨ |
| ವಿಶ್ವಕರ್ಮಾ | ೯೫೩ |
| ವಿಶ್ವಕರ್ಮಪ್ರಕಾಶ | ೯೫೪ |
| ವಿಶ್ವಕಲ್ಯಾಣ | ೯೫೫ |
| ವಿಶ್ವದೂತ | ೯೫೬ |
| ವಿಶ್ವಪ್ರಭ | ೯೫೭ |
| ವಿಶ್ವಪ್ರೇಮಿ | ೯೫೮ |
| ವಿಶ್ವಬಂಧು (ಮೈಸೂರು) | ೯೫೯ |
| ವಿಶ್ವಬಂಧು (ಸೊಲ್ಲಾಪುರ) | ೯೬೦ |
| ವಿಶ್ವಬಂಧು (ಸಕಲೇಶಪುರ) | ೯೬೧ |
| ವಿಶ್ವಭಾರತಿ | ೯೬೨ |
| ವಿಶ್ವವಾಣಿ (ಬೆಂಗಳೂರು) | ೯೬೩ |
| ವಿಶ್ವವಾಣಿ (ಹುಬ್ಬಳ್ಳಿ) | ೯೬೪ |
| ವಿಶಾಲ ಕರ್ನಾಟಕ | ೯೬೫ |
| ವಿಶ್ವಾಮಿತ್ರ | ೯೬೬ |
| ವಿಶಿಷ್ಟಾದ್ವೈತ | ೯೬೭ |
| ವಿಸ್ತರಣ ವಿಜ್ಞಾನ | ೯೬೮ |
| ವಿಹಾರಿ | ೯೬೯ |
| ವೀಣಾ | ೯೭೦ |
| ವೀರ ಕನ್ನಡಿಗ | ೯೭೧ |
| ವೀರಕೇಸರಿ | ೯೭೨ |
| ವೀರಭಾರತಿ | ೯೭೩ |
| ವೀರಭೂಮಿ | ೯೭೪ |
| ವೀರಮಾತೆ | ೯೭೫ |
| ವೀರ ಮು[illegible] | ೯೭೬ |
| ವೀರವಾಣಿ | ೯೭೭ |
| ವೀರವಾಣಿ II | ೯೭೮ |
| ವೀರವಾಣಿ | ೯೭೯ |
| ವೀರವಿಲಾಸಿನಿ | ೯೮೦ |
| ವೀರಶೈವ | ೯೮೧ |
| ವೀರಶೈವ ಚಂದ್ರಿಕೆ | ೯೮೨ |
| ವೀರಶೈವ ದರ್ಪಣ | ೯೮೩ |
| ವೀರಶೈವ ಧರ್ಮತರಂಗಿಣಿ | ೯೮೪ |
| ವೀರಶೈವ ಧರ್ಮ ಸಂಗ್ರಹ | ೯೮೫ |
| ವೀರಶೈವ ಧರ್ಮಸಂಜೀವಿನಿ | ೯೮೬ |
| ವೀರಶೈವ ಧರ್ಮಸಾಮ್ರಾಜ್ಯ | ೯೮೭ |
| ವೀರಶೈವ ಪ್ರಕಾಶಿಕೆ | ೯೮೮ |
| ವೀರಶೈವ ಪ್ರಭಾಕರ | ೯೮೯ |
| ವೀರಶೈವ ಮತಪ್ರಕಾಶಿಕೆ | ೯೯೦ |
| ವೀರಶೈವ ಮತಾದರ್ಶ | ೯೯೧ |
| ವೀರಶೈವ ವಿಜಯ | ೯೯೨ |
| ವೀರಶೈವಾಚಾರದರ್ಶನ | ೯೯೩ |
| ವೃತ್ತ | ೯೯೪ |
| ವೃತ್ತಾಂತ ಚಿಂತಾಮಣಿ | ೯೯೫ |
| ವೃತ್ತಾಂತ ಪತ್ರಿಕೆ | ೯೯೬ |
| ವೃತ್ತಾಂತ ಮಂಜರಿ | ೯೯೭ |
| ವೃತ್ತಾಂತ ರತ್ನಾಕರ | ೯೯೮ |
| ವೇದವಾಹಿನಿ | ೯೯೯ |
| ವೇದಸಂದೇಶ (ಮಂಗಳೂರು) | ೧೦೦೦ |
| ವೇದಸಂದೇಶ | ೧೦೦೧ |
| ವೇದಾರ್ಥ ಪ್ರಕಾಶ | ೧೦೦೨ |
| ವೈದ್ಯಬಂಧು | ೧೦೦೩ |
| ವೈದ್ಯಸಿಂಧು | ೧೦೦೪ |
| ವೈದಿಕ ಮಿತ್ರ | ೧೦೦೫ |
| ವೈದಿಕ ಸಂದೇಶ | ೧೦೦೬ |
| ವೈದಿಕ ಸನಾತನ ಧರ್ಮ | ೧೦೦೭ |
| ವೈದಿಕ ಸನಾತನ ಧರ್ಮಪತ್ರಿಕಾ | ೧೦೦೮ |
| ವೈಶ್ಯ ಕುಲವರ್ಧಿನೀ | ೧೦೦೯ |
| ವೈಶ್ಯಬಂಧು | ೧೦೧೦ |
| ಶಕ್ತಿ (ಕಾರ್ಕಳ) | ೧೦೧೧ |
| ಶಕ್ತಿ (ಮೈಸೂರು) | ೧೦೧೨ |
| ಶಕ್ತಿ (ಮಡಿಕೇರಿ) | ೧೦೧೩ |
| ಶರಣ ತತ್ವ | ೧೦೧೪ |
| ಶರಣ ಮಾರ್ಗ | ೧೦೧೫ |
| ಶರಣ ವಾಣಿ | ೧೦೧೬ |
| ಶಿಕ್ಷಣ ಸಂದೇಶ | ೧೦೧೭ |
| ಶಿಕ್ಷಣ ಸಾಹಿತ್ಯ | ೧೦೧೮ |
| ಶರಾವತಿ | ೧೦೧೯ |
| ಶರೀರ ವ್ಯಾಯಾಮ | ೧೦೨೦ |
| ಶಾಂತಿ | ೧೦೨೧ |

| | | | |
|---|---|---|---|
| ಶಾಂತಿ ಸಂದೇಶ | ೧೦೨೨ | ಸಂಕೀರ್ಣ | ೧೦೬೨ |
| ಶಾಂತಿ ಸಂದೇಶ II | ೧೦೨೩ | ಸಂಗಮ | ೧೦೬೩ |
| ಶಾರದಾ (ಬೆಂಗಳೂರು) | ೧೦೨೪ | ಸಂಗಾತಿ | ೧೦೬೪ |
| ಶಾರದಾ (ಮಡಿಕೇರಿ) | ೧೦೨೫ | ಸಂಘಟಕ | ೧೦೬೫ |
| ಶಾರದಾ (ಬೆಳಗಾಂವಿ) | ೧೦೨೬ | ಸಂಜಯ | ೧೦೬೬ |
| ಶಿಕ್ಷಕಬಂಧು | ೧೦೨೭ | ಸಂತವಾಣಿ | ೧೦೬೭ |
| ಶಿಕ್ಷಕಮಿತ್ರ | ೧೦೨೮ | ಸಂದರ್ಶನ | ೧೦೬೮ |
| ಶಿಕ್ಷಕವಾಣಿ | ೧೦೨೯ | ಸಂದೇಶ | ೧೦೬೯ |
| ಶಿಕ್ಷಣ | ೧೦೩೦ | ಸಂಧ್ಯಾ (ತುಮಕೂರು) | ೧೦೭೦ |
| ಶಿರಸಿ ಸಮಾಚಾರ | ೧೦೩೧ | ಸಂಧ್ಯಾ (ಮಡಿಕೇರಿ) | ೧೦೭೧ |
| ಶಿವಮೊಗ್ಗ ಗೆಝೆಟ್ | ೧೦೩೨ | ಸಂಧ್ಯಾದೀಪ | ೧೦೭೨ |
| ಶಿವಮೊಗ್ಗ ವೃತ್ತಾಂತ | ೧೦೩೩ | ಸಂಪದಭ್ಯುದಯ | ೧೦೭೩ |
| ಶಿವಮೊಗ್ಗ ವೃತ್ತಾಂತಮಂಜರಿ | ೧೦೩೪ | ಸಂಯುಕ್ತ ಕರ್ನಾಟಕ | ೧೦೭೪ |
| ಶಿವಾನುಭವ | ೧೦೩೫ | ಸಂಯುಕ್ತ ಭಾರತ | ೧೦೭೫ |
| ಶುಭೋದಯ | ೧೦೩೬ | ಸಚಿತ್ರ ಚಾತುರ್ಯ | ೧೦೭೬ |
| ಶೃಂಗಾರ | ೧೦೩೭ | ಸಚಿತ್ರ ಭಾರತ | ೧೦೭೭ |
| ಶೋಧಕ | ೧೦೩೮ | ಸಚಿತ್ರ ಲೋಕಬಂಧು | ೧೦೭೮ |
| ಶೋಭಾ (ಮಂಗಳೂರು) | ೧೦೩೯ | ಸಚೇತನ | ೧೦೭೯ |
| ಶೋಭಾ (ಮದ್ರಾಸ್) | ೧೦೪೦ | ಸಣ್ಣ ಕತೆಗಳು | ೧೦೮೦ |
| ಶ್ರೀ ಅರವಿಂದ ಕರ್ಮಧಾರಾ | ೧೦೪೧ | ಸತ್ಯ | ೧೦೮೧ |
| ಶ್ರೀಕೃಷ್ಣ (ಮೈಸೂರು) | ೧೦೪೨ | ಸತ್ಯಕಾಮ | ೧೦೮೨ |
| ಶ್ರೀಕೃಷ್ಣ (ಬೆಂಗಳೂರು) | ೧೦೪೩ | ಸತ್ಯಜ್ಯೋತಿ | ೧೦೮೩ |
| ಶ್ರೀಕೃಷ್ಣ ಪರ್ಯಾಯ ಪ್ರಕಾಶಿನಿ | ೧೦೪೪ | ಸತ್ಯದೀಪಿಕ | ೧೦೮೪ |
| ಶ್ರೀಕೃಷ್ಣರಾಜ ವಿಜ್ಞಾನವೈಭವ | ೧೦೪೫ | ಸತ್ಯದೀಪಿಕೆ | ೧೦೮೫ |
| ಶ್ರೀಕೃಷ್ಣ ಸಂದೇಶ (ಬಾಗಲಕೋಟೆ) | ೧೦೪೬ | ಸತ್ಯವ್ರತ (ಗದಗ) | ೧೦೮೬ |
| ಶ್ರೀಕೃಷ್ಣ ಸಂದೇಶ (ಬೆಂಗಳೂರು) | ೧೦೪೭ | ಸತ್ಯವ್ರತ (ಮಂಗಳೂರು) | ೧೦೮೭ |
| ಶ್ರೀಕೃಷ್ಣ ಸಂದೇಶ (ಉಡುಪಿ) | ೧೦೪೮ | ಸತ್ಯವಾಣಿ | ೧೦೮೮ |
| ಶ್ರೀಕೃಷ್ಣ ಸೂಕ್ತಿ | ೧೦೪೯ | ಸತ್ಯವಾದಿ | ೧೦೮೯ |
| ಶ್ರೀ ಧನ್ವಂತರಿ | ೧೦೫೦ | ಸತ್ಯಶಿಕ್ಷಣ | ೧೦೯೦ |
| ಶ್ರೀಧರ ಸಂದೇಶ | ೧೦೫೧ | ಸತ್ಯಸಾಯಿ ಸುಧಾ | ೧೦೯೧ |
| ಶ್ರೀಪೂರ್ಣಬೋಧ | ೧೦೫೨ | ಸತ್ಸಂಪ್ರದಾಯ ದೀಪಿಕಾ | ೧೦೯೨ |
| ಶ್ರೀಮದ್ಧರ್ಮನಿಧಾನಂ | ೧೦೫೩ | ಸತ್ಯಾಗ್ರಹ | ೧೦೯೩ |
| ಶ್ರೀಮದ್ವೀರಶೈವ | ೧೦೫೪ | ಸತ್ಯಾಗ್ರಹೀ | ೧೦೯೪ |
| ಶ್ರೀಶಂಕರಕೃಪಾ | ೧೦೫೫ | ಸತ್ಯಾರ್ಥಿ | ೧೦೯೫ |
| ಶ್ರೀಶಂಕರನಿಜಗು | ೧೦೫೬ | ಸದಾನಂದ | ೧೦೯೬ |
| ಶ್ರೀ ಶಾರದಾ | ೧೦೫೭ | ಸದ್ಗುರು | ೧೦೯೭ |
| ಶ್ರೀಶೈಲಜ್ಯೋತಿ | ೧೦೫೮ | ಸದ್ಗುರು ಪಾದಸೇವೆ | ೧೦೯೮ |
| ಶ್ರೀಸುಧಾ | ೧೦೫೯ | ಸದ್ಧರ್ಮ ದೀಪಿಕೆ | ೧೦೯೯ |
| ಸಂಕ್ರಮಣ | ೧೦೬೦ | ಸದ್ಧರ್ಮ ಪ್ರಚಾರಕ | ೧೧೦೦ |
| ಸಂಕ್ರಾಂತಿ | ೧೦೬೧ | ಸದ್ಧರ್ಮ ಪ್ರಭಾ | ೧೧೦೧ |

| | |
|---|---|
| ಸದ್ಭಕ್ತಿ ಚಂದ್ರಿಕೆ | ೧೧೦೨ |
| ಸದ್ಬೋಧ ಚಂದ್ರಿಕೆ | ೧೧೦೩ |
| ಸದ್ವಿಪ | ೧೧೦೪ |
| ಸದ್ವೈದ್ಯ | ೧೧೦೫ |
| ಸನಾತನ | ೧೧೦೬ |
| ಸನಾತನ ಜೈನ | ೧೧೦೭ |
| ಸನಾತನ ಧರ್ಮ ಪತ್ರಿಕಾ | ೧೧೦೮ |
| ಸನಾತನ ಸಾರಥಿ | ೧೧೦೯ |
| ಸನ್ಮತಿ | ೧೧೧೦ |
| ಸನ್ಮಾರ್ಗದರ್ಶಿ | ೧೧೧೧ |
| ಸಭಾಪತ್ರ | ೧೧೧೨ |
| ಸಮತಾ | ೧೧೧೩ |
| ಸಮದರ್ಶಿ (ಮಂಗಳೂರು) | ೧೧೧೪ |
| ಸಮದರ್ಶಿ (ಮುಂಬಯಿ) | ೧೧೧೫ |
| ಸಮದರ್ಶಿ (ಗೋಕಾಕ್) | ೧೧೧೬ |
| ಸಮದರ್ಶಿ (ಬೆಂಗಳೂರು) | ೧೧೧೭ |
| ಸಮನ್ವಯ | ೧೧೧೮ |
| ಸಮಾಚಾರ | ೧೧೧೯ |
| ಸಮಾಚಾರ ಪತ್ರಿಕೆ | ೧೧೨೦ |
| ಸಮಾಚಾರ ಸಂಗ್ರಹ | ೧೧೨೧ |
| ಸಮಾಜ (ಧಾರವಾಡ) | ೧೧೨೨ |
| ಸಮಾಜ (ಹುಬ್ಬಳ್ಳಿ) | ೧೧೨೩ |
| ಸಮಾಜ ಕಲ್ಯಾಣ | ೧೧೨೪ |
| ಸಮಾಜ ಜ್ಯೋತಿ | ೧೧೨೫ |
| ಸಮಾಜ ವಾಣಿ | ೧೧೨೬ |
| ಸಮಾಜ ವಾದಿ | ೧೧೨೭ |
| ಸಮಾಜ ವಿಕಾಸ | ೧೧೨೮ |
| ಸಮಾಜ ಸಂಘಟನಾ | ೧೧೨೯ |
| ಸಮಾನತೆ | ೧೧೩೦ |
| ಸಮೀಕ್ಷಕ | ೧೧೩೧ |
| ಸರಸ್ವತಿ (ಬೆಂಗಳೂರು) | ೧೧೩೨ |
| ಸರಸ್ವತೀ | ೧೧೩೩ |
| ಸರ್ವಜನ ಹಿತೋಪಕಾರಿಣಿ | ೧೧೩೪ |
| ಸರ್ವಜ್ಞ ಸಂದೇಶ | ೧೧೩೫ |
| ಸರ್ವಮಂಗಳಾ | ೧೧೩೬ |
| ಸರ್ವರ ಮಿತ್ರ | ೧೧೩೭ |
| ಸರ್ವಾರ್ಥ ಸಿದ್ಧಿ | ೧೧೩೮ |
| ಸರ್ವೋದಯ (ಬೆಳಗಾವಿ) | ೧೧೩೯ |
| ಸರ್ವೋದಯ (ಮಂಗಳೂರು) | ೧೧೪೦ |
| ಸರ್ವೋದಯ (ಬೆಂಗಳೂರು) | ೧೧೪೧ |
| ಸರ್ವೋದಯ (ಹುಬ್ಬಳ್ಳಿ) | ೧೧೪೨ |
| ಸರ್ವೋದಯ ಶಾಲಾಪತ್ರಿಕೆ | ೧೧೪೩ |
| ಸರ್ವೋದ್ಧಾರ | ೧೧೪೪ |
| ಸವಿಗಾರ | ೧೧೪೫ |
| ಸವಿನುಡಿ | ೧೧೪೬ |
| ಸಹಕಾರ (ಧಾರವಾಡ) | ೧೧೪೭ |
| ಸಹಕಾರ (ಬೆಂಗಳೂರು) | ೧೧೪೮ |
| ಸಹಕಾರ ಜ್ಯೋತಿ | ೧೧೪೯ |
| ಸಹಕಾರಪತ್ರಿಕೆ | ೧೧೫೦ |
| ಸಹಕಾರ ಸಮಾಚಾರ | ೧೧೫೧ |
| ಸಹಚರ | ೧೧೫೨ |
| ಸಹಧರ್ಮಿಣಿ | ೧೧೫೩ |
| ಸಹ್ಯಾದ್ರಿ | ೧೧೫೪ |
| ಸಾಕ್ಷಿ | ೧೧೫೫ |
| ಸಾಧನ (ಕರ್ಕಿ) | ೧೧೫೬ |
| ಸಾಧನ (ಹೊನ್ನಾವರ) | ೧೧೫೭ |
| ಸಾಧನ (ಮುಂಬಯಿ) | ೧೧೫೮ |
| ಸಾಧನಾ (ರಾಯಚೂರ) | ೧೧೫೯ |
| ಸಾಧನಾ (ಉಡುಪಿ) | ೧೧೬೦ |
| ಸಾಧನೆ | ೧೧೬೧ |
| ಸಾಧ್ವಿ | ೧೧೬೨ |
| ಸಾಧ್ವೀ ಹಾಗೂ ಸಂಪದಭ್ಯುದಯ | ೧೧೬೩ |
| ಸಾರಥಿ | ೧೧೬೪ |
| ಸಾವಧಾನ | ೧೧೬೫ |
| ಸಾಹಿತ್ಯ | ೧೧೬೬ |
| ಸಾಹಿತ್ಯ (ಬೆಂಗಳೂರು) | ೧೧೬೭ |
| ಸಾಹಿತ್ಯದರ್ಶನ | ೧೧೬೮ |
| ಸಾಹಿತ್ಯಪ್ರಗತಿ | ೧೧೬೯ |
| ಸಾಹಿತ್ಯಮಂದಾರ | ೧೧೭೦ |
| ಸಿಂಹವಾಣಿ | ೧೧೭೧ |
| ಸಿ.ಐ.ಡಿ | ೧೧೭೨ |
| ಸಿಟಿ | ೧೧೭೩ |
| ಸಿಡಿಲಮರಿ | ೧೧೭೪ |
| ಸಿಡಿಲು | ೧೧೭೫ |
| ಸಿದ್ಧಗಂಗಾ | ೧೧೭೬ |
| ಸಿನಿಪ್ರಭ | ೧೧೭೭ |
| ಸಿನಿಮಾ | ೧೧೭೮ |
| ಸಿನಿಮಾ | ೧೧೭೯ |
| ಸಿರಿಗನ್ನಡಂ ಗೆಲ್ಗೆ -ಬಾಳ್ಗೆ | ೧೧೮೦ |
| ಸುಕುಮಾರ | ೧೧೮೧ |

| | |
|---|---|
| ಹಿತಚಿಂತಕ | ೧೨೬೧ |
| ಹಿತಬೋಧಿನಿ | ೧೨೬೨ |
| ಹಿತವಾಣಿ | ೧೨೬೩ |
| ಹಿತವಾದಿ (ಬೆಂಗಳೂರು) | ೧೨೬೪ |
| ಹಿತವಾದಿ (ಮೈಸೂರು) | ೧೨೬೫ |
| ಹಿತೋಪದೇಶ | ೧೨೬೬ |
| ಹಿಮಾಲಯ | ೧೨೬೭ |
| ಹಿಲಾಲ್ | ೧೨೬೮ |
| ಹುಬ್ಬಳ್ಳಿ ಗೆಝೆಟ್ | ೧೨೬೯ |
| ಹುಬ್ಬಳ್ಳಿ ಪತ್ರ | ೧೨೭೦ |
| ಹೂರಣ | ೧೨೭೧ |
| ಹೂವಿನ ಕೋಲು | ೧೨೭೨ |
| ಹೈದರಾಬಾದ್ ಸಮಾಚಾರ | ೧೨೭೩ |
| ಹೊಂಬೆಳಗು | ೧೨೭೪ |
| ಹೊಯ್ಸಳ | ೧೨೭೫ |
| ಹೊಸ ಬಾಳು | ೧೨೭೬ |
| ಹೊಸ ಯುಗ | ೧೨೭೭ |
| ಹೊಸ ಹಾದಿ | ೧೨೭೮ |

## ಕನ್ನಡ ಸಹಿತ ಅನ್ಯಭಾಷಾ ಪತ್ರಿಕೆಗಳು

| | |
|---|---|
| ಅರುಣೋದಯ | ೧೨೭೯ |
| ಅವರ್ ಲೇಡೀಸ್ ಸ್ಟಾರ್ | ೧೨೮೦ |
| ಆತ್ಮಾನಂದ | ೧೨೮೧ |
| ಆನಂದ ಚಂದ್ರಿಕೆ | ೧೨೮೨ |
| ಆರ್ಯ ವಿದ್ಯಾ ಸಂಜೀವಿನಿ | ೧೨೮೩ |
| ಇಂಡಿಪೆಂಡೆಂಟ್ | ೧೨೮೪ |
| ಇಂಡಿಯಾ ಮತ್ತು ಅಂನ್ಯದೇಶದ ವಾರ್ತಿಕ | ೧೨೮೫ |
| ಉದಯ | ೧೨೮೬ |
| ಒಕ್ಕಲಿಗರ ಪತ್ರಿಕೆ | ೧೨೮೭ |
| ಒಕ್ಕಲುತನವೂ ಒಕ್ಕಲಿಗನೂ | ೧೨೮೮ |
| ಕನ್ನಡ ವಾರ್ತಿಕ | ೧೨೮೯ |
| ಕನ್ನಡ ಜ್ಯೋತಿ | ೧೨೯೦ |
| ಕರ್ನಾಟಕ ಕಾರ್ಮಿಕ ಪತ್ರಿಕೆ | ೧೨೯೧ |
| ಕರ್ನಾಟಕ ಪ್ರಕಾಶಿಕಾ | ೧೨೯೨ |
| ಕರ್ನಾಟಕ ಮಿತ್ರ | ೧೨೯೩ |
| ಕರ್ನಾಟಕ ವಿದ್ಯಾಲಯ ಪತ್ರಿಕೆ | ೧೨೯೪ |
| ಕರ್ನಾಟಕ ವೈಶ್ಯ ಪತ್ರಿಕೆ | ೧೨೯೫ |
| ಕರ್ನಾಟಕ ಸ್ಪೋರ್ಟ್ ಮತ್ತು ಗ್ರೈಡ್ | ೧೨೯೬ |
| ಕರುಣಾ | ೧೨೯೭ |
| ಕಾಯಕ | ೧೨೯೮ |
| ಕಾಲೇಜು ಮ್ಯಾಗಝಿನ್ | ೧೨೯೯ |
| ಕಾವ್ಯಕಲ್ಪದ್ರುಮ | ೧೩೦೦ |
| ಕುರುಬ ಕುಲಕೀರ್ತಿ | ೧೩೦೧ |
| ಕುರುಬರ ಪತ್ರಿಕೆ | ೧೩೦೨ |
| ಕೈಫಿಯತ್ | ೧೩೦೩ |
| ಗ್ರಾಮಾಧಿಕಾರಿ | ೧೩೦೪ |
| ಗುರುದೇವ | ೧೩೦೫ |
| ಗೋಪಾಲ | ೧೩೦೬ |
| ಚಿತ್ರಗುಪ್ತ | ೧೩೦೭ |
| ಚಿತ್ರ ಸಮಾಚಾರ್ | ೧೩೦೮ |
| ಚೆನ್ನಬಸವೇಶ್ವರ | ೧೩೦೯ |
| ಜನಧ್ವನಿ | ೧೩೧೦ |
| ಜಾಗ್ರತ ಭಾರತ | ೧೩೧೧ |
| ಜಿನಮತ ಪ್ರಕಾಶಿಕಾ | ೧೩೧೨ |
| ಜ್ಯೋತಿ | ೧೩೧೩ |
| ಟ್ರೇಡ್ ರಿಪೋರ್ಟರ್ | ೧೩೧೪ |
| ತಂದೆನಾಡು | ೧೩೧೫ |
| ತಮಾಷ್ | ೧೩೧೬ |
| ದರ್ಶನ | ೧೩೧೭ |
| ದಾಂಡೇಲಿ ನ್ಯೂಸ್ | ೧೩೧೮ |
| ದಿ ಟ್ರೂತ್ | ೧೩೧೯ |
| ದಿವ್ಯಜ್ಯೋತಿ | ೧೩೨೦ |
| ದುರ್ಗವಾಣಿ | ೧೩೨೧ |
| ದೇವಾಂಗ ಪತ್ರಿಕೆ | ೧೩೨೨ |
| ದೇಶಬಂಧು | ೧೩೨೩ |
| ಧರ್ಮವಾಣಿ | ೧೩೨೪ |
| ಧರ್ಮವಿಚಾರ | ೧೩೨೫ |
| ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆ | ೧೩೨೬ |
| ಧಾರವಾಡ ವೃತ್ತ | ೧೩೨೭ |
| ನ್ಯೂ ಎರಾ | ೧೩೨೮ |
| ನೇಚರ್ ಕ್ಯೂರ್ | ೧೩೨೯ |
| ಪತ್ರಿಕೋದ್ಯಮಿ | ೧೩೩೦ |
| ಪರಮಾರ್ಥ ಚಂದ್ರೋದಯ | ೧೩೩೧ |
| ಪ್ರಕೃತಿ ಜೀವನ | ೧೩೩೨ |
| ಪ್ರಜಾಬಂಧು | ೧೩೩೩ |
| ಪ್ರದೀಪ | ೧೩೩೪ |
| ಪ್ರಭಾತ | ೧೩೩೫ |
| ಪ್ರೇಮ | ೧೩೩೬ |

# ಕನ್ನಡ ಪತ್ರಿಕಾ ಸೂಚಿ

## ಲೇಖನ ವಿಭಾಗ

# ಪರಿಚಯಾತ್ಮಕ

ಇಲ್ಲಿರುವ ಲೇಖನಗಳು ವೈವಿಧ್ಯಮಯವಾಗಿದ್ದು ಕನ್ನಡ ಪತ್ರಿಕಾ ಲೋಕದ ವಿವಿಧ ಮುಖಗಳನ್ನು ಪರಿಚಯಿಸುವ ದೃಷ್ಟಿಯಿಂದ ಆಯ್ಕೆಗೊಂಡಿವೆ. ಸಮಗ್ರ ಚಿತ್ರಣ ಕೊಡುವ ವಿಚಾರ ಇಲ್ಲಿ ಇಲ್ಲ. ಸೂಚಿಯ ಪ್ರಾರಂಭದಲ್ಲಿ ಪತ್ರಿಕಾ ಇತಿಹಾಸದ ಕುರಿತ ಸಮೀಕ್ಷೆ ಬಂದದ್ದೇ ಇದೆ.

ವಿವಿಧತೆಯ ಉದ್ದೇಶದಿಂದ ಲೇಖನಗಳನ್ನು ಈ ರೀತಿ ವರ್ಗೀಕರಿಸಲಾಗಿದೆ.

**ವಿಭಾಗ (ಅ)** ಸಮೀಕ್ಷಾ ಸ್ವರೂಪದವು. ಒಟ್ಟಿನ ಸಮೀಕ್ಷೆಯು ಸೂಚಿಯ ಆರಂಭದಲ್ಲಿಯೇ ಬಂದಿದೆ. ಇಲ್ಲಿ ಒಂದೊಂದು ನೋಟವನ್ನು (aspect) ಎತ್ತಿಕೊಂಡು ವಿವರಿಸಲಾಗಿದೆ. ಇದರಲ್ಲಿ ಕೊನೆಯದು ೧೯೦೮ರ ಮೈಸೂರಿನ ಪತ್ರಿಕಾ ಶಾಸನದ ಪಠ್ಯ. ಇದ್ದದ್ದು ಆರೇ ಕಲಮುಗಳು! ಅದರಿಂದಾದ ಅನರ್ಥ ಅಪಾರವಾದದ್ದು.

**ವಿಭಾಗ (ಆ)** ಕೆಲವು ಪತ್ರಿಕೆಗಳೊಂದೊಂದರ ಪರಿಚಯ ಇಲ್ಲಿದೆ. ಹಿಂದಿನ ಕಾಲದಲ್ಲಿ ಪತ್ರಿಕೆ ನಡೆಸುವುದು ಸಾಹಿತ್ಯಿಕ / ಲೇಖಕೀಯ ಕೈಂಕರ್ಯವಾಗಿತ್ತೆನ್ನುವುದನ್ನೂ, ಬೇರೆ ಬೇರೆ ಕಾರಣಗಳಿಂದ ಅವರು ಪಟ್ಟ ಕಷ್ಟ-ನಷ್ಟಗಳನ್ನೂ ಇಲ್ಲಿ ಕಾಣಬಹುದು.

**ವಿಭಾಗ** (ಇ) ಸಂಪಾದಕೀಯಗಳು ಹಾಗೂ ಸಂಪಾದಕರ ಇತರ ಕೆಲವು ಬರಹಗಳು ಇಲ್ಲಿವೆ. ಪತ್ರಿಕಾ ಸಂಚಾಲನದಲ್ಲಿಯ ಅವರ ನಿಷ್ಠೆ, ಘನವಾದ ಉದ್ದೇಶಗಳನ್ನು ಮನಗಾಣಬಹುದಾಗಿದೆ.

**ವಿಭಾಗ** (ಈ) ಕೆಲವು ಪ್ರಮುಖ ಪತ್ರಕರ್ತರ ಪರಿಚಯವನ್ನು ಇಲ್ಲಿ ಕೊಡಮಾಡಿದೆ. ಇನ್ನೂ ಅನೇಕ ಸಂಪಾದಕರು ಉಲ್ಲೇಖನೀಯರು. ಮೊದಲೇ ಹೇಳಿದಂತೆ ಇಲ್ಲಿ ಸಮಷ್ಟಿಯ ದೃಷ್ಟಿಯನ್ನು ಇಟ್ಟುಕೊಂಡಿಲ್ಲ.

– **ಸಂಪಾದಕರು**

# (ಅ) ಪತ್ರಿಕಾ ಲೋಕದ ಸಮೀಕ್ಷೆಗಳು

## ೧. ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆಗಳು

ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆ 'ಮಂಗಳೂರು ಸಮಾಚಾರ'ವು (೧೮೪೩) ಎಂಬುದನ್ನು ನೋಡಿದ್ದೇವೆ.

ಆದರೆ ೧೮೪೩ಕ್ಕೆ ಮೊದಲು ಕನ್ನಡವಲ್ಲಿ ಪತ್ರಿಕೆಗಳು ಇರಲೇ ಇಲ್ಲವೇ? ಇದನ್ನು ನಿರ್ಧರಿಸಬೇಕಾದರೆ, ಅಂತಹ ಪತ್ರಿಕೆಗಳು ಸಕೃದ್ಸ್ಪರ್ಶನಕ್ಕೆ ದೊರೆಯುವಂತಿರಬೇಕು. ಇಲ್ಲವೆ ನಿಶ್ಚಿತ ಪುರಾವೆ ಅಥವಾ ಮೂಲ ದಾಖಲೆ ಇರಬೇಕು. ಹಾಗೆ ಯಾವುವೂ ದೊರೆತಿಲ್ಲ. ಅರ್ಧಮರ್ಧ ಪುರಾವೆ ಅಥವಾ ಊಹೆಯ ಮೇಲಿಂದ ೧೮೪೩ಕ್ಕೆ ಮುಂಚೆ ಪತ್ರಿಕೋದ್ಯಮದ ಹಜ್ಜೆಗಳಿದ್ದುವೆಂದು ಅಲ್ಲಲ್ಲಿ ಅಭಿಪ್ರಾಯ ವ್ಯಕ್ತವಾಗಿದೆ. ಉದಾಹರಣೆಗೆ ೧೮೧೨ರಂದು ಬಳ್ಳಾರಿಯಲ್ಲಿ ಜರ್ಮನ್ ಪಾದ್ರಿಗಳು ಕಲ್ಲಚ್ಚಿನಲ್ಲಿ 'ಕಂನಡ ಸಮಾಚಾರ'-ವೆಂಬ ಪತ್ರಿಕೆಯನ್ನು ಹೊರಡಿಸುತ್ತಿದ್ದರೆಂದು ನಾಡಿಗ ಕೃಷ್ಣಮೂರ್ತಿಯವರ ಭಾರತೀಯ ಪತ್ರಿಕೋದ್ಯಮದ ಕುರಿತಾದ ಥೀಸಿಸ್‌ನಲ್ಲಿ ಬಂದಿದೆ. ಇದಕ್ಕೆ ಆಧಾರವೇನೆಂಬುದು ಸೂಚಿತವಾಗಿಲ್ಲ. ಇದೊಂದು ಅಸತ್ಯದ ಹೇಳಿಕೆ. ಜರ್ಮನ್ ಮಿಶನರಿಗಳು ನಮ್ಮ ನಾಡಿಗೆ ಬಂದದ್ದು ಅದಕ್ಕೂ ತಡವಾಗಿ – ಎಂದರೆ ೧೮೩೪ರಲ್ಲಿ. ಅಲ್ಲದೆ ಅವರ ಕಾರ್ಯಕ್ಷೇತ್ರವು ಉತ್ತರದ ಬಳ್ಳಾರಿ ಅಲ್ಲ; ದಕ್ಷಿಣ ಕರಾವಳಿಯ ಮಂಗಳೂರು – ಎಂಬುದು ಸರ್ವವಿದಿತ. ಅವರು ಕಲ್ಲಚ್ಚಿನ ಮುದ್ರಾಯಂತ್ರವನ್ನು ಸ್ಥಾಪಿಸಿದುದು ೧೮೪೨ರಷ್ಟು ತಡವಾಗಿ. ಇದೆಲ್ಲ ವಿವರ ಜರ್ಮನ್ (ಬಾಸೆಲ್) ಮಿಶನರಿಗಳ ವಿವಿಧ ವರದಿ / ಪುಸ್ತಕಗಳಲ್ಲಿ ಸ್ಪಷ್ಟವಾಗಿ ಬಂದದ್ದೇ ಇದೆ; ಇದಕ್ಕಿಂತ ಪ್ರಬಲ ವಿರೋಧವೆಂದರೆ, 'ಮಂಗಳೂರು ಸಮಾಚಾರ'ವೇ ಬಳ್ಳಾರಿಗೆ ಸ್ಥಳಾಂತರ ಹೊಂದಿ 'ಕಂನಡ ಸಮಾಚಾರ' ಎಂದಾದುದು. ಹಾಗೆಂದು 'ಮಂಗಳೂರು ಸಮಾಚಾರ'ದ ಕೊನೆಯ ಸಂಚಿಕೆಯಲ್ಲಿ ಉಕ್ತವಾಗಿದೆ.

ಇನ್ನು ೧೮೨೬ರ ಸುಮಾರಿಗೆ ಯಾವುದೋ ಒಂದು ಕನ್ನಡ ಪತ್ರಿಕೆ ಇತ್ತು ಎಂಬುದಾಗಿ ಓರ್ವ ಪತ್ರಿಕೋದ್ಯಮಿ ಭಾಷಣ ಮಾಡಿದ್ದರು. ಪತ್ರಿಕೆ ಹೊರಡಬೇಕಾದರೆ ಮುದ್ರಣಾಲಯ ಬೇಕು. ಕರ್ನಾಟಕದಲ್ಲಿ ಮುದ್ರಾಯಂತ್ರಗಳು ನೆಲೆಗೊಂಡದ್ದು ಅನಂತರವೇ. (ಬಳ್ಳಾರಿ – ೧೮೨೭; ಬೆಂಗಳೂರು – ೧೮೪೧; ಮಂಗಳೂರು – ೧೮೪೨; ಮೈಸೂರು – ೧೮೪೩; ಬೆಳಗಾಂವಿ – ೧೮೪೮) ಭಾರತದಲ್ಲಿ ಪತ್ರಿಕೆಗಳನ್ನು ಹೊರಡಿಸಲಾರಂಭಿಸಿದವರು ಮಿಶನರಿ ಜನರಷ್ಟೇ. ಬಳ್ಳಾರಿಯಲ್ಲಿ ನೆಲೆಗೊಂಡಿದ್ದ ಲಂಡನ್ ಮಿಶನ್‌ನವರು ಸ್ವತಃ ಪತ್ರಿಕೆಯನ್ನು ಹೊರಡಿಸಿದ್ದರ ಉಲ್ಲೇಖವು ಅವರ ಯಾವ ವಾರ್ಷಿಕ ವರದಿಗಳಲ್ಲಿಯೂ ಇಲ್ಲ.

ಕ್ರಿ.ಶ. ೧೮೪೦ರ ಸುಮಾರಿಗೆ ಧಾರವಾಡವಲ್ಲಿ 'ಭಾವಾ' ಎಂಬ ಪತ್ರಿಕೆ ಹೊರಡುತ್ತಿತ್ತೆಂಬುದಾಗಿ 'ಪತ್ರಿಕಾ ವ್ಯವಸಾಯ' ಪುಸ್ತಕದಲ್ಲಿ ಕಾಣಿಸಲಾಗಿದೆ. ಧಾರವಾಡವಲ್ಲಿ 'ಭಾವಾ' ಎಂಬ ಪತ್ರಿಕೆಯೇನೋ ಇದ್ದಿತು – ಆದರೆ ಮರಾಠಿಯಲ್ಲಿ! ಭಾವಾ- ಇದು ಕನ್ನಡ ಶಬ್ದವೂ ಅಲ್ಲ. ಮರಾಠಿಯಲ್ಲಿ ಅದರ ಅರ್ಥ ಆನೆಯ ಮರಿ ಎಂಬುದು. ಇನ್ನೊಂದೆಂದರೆ ಅದರ ಪ್ರಕಟನೆ ೧೮೮೩ರಿಂದ ಆರಂಭ. ಹಾಗೆಂದು ಮುಂಬಯಿ ಸರಕಾರದ Report on Native Papers ನಲ್ಲಿ ಹಾಗೂ ಹಳೆಯ ಧಾರವಾಡ ಜಿಲ್ಲಾ ಗೆಜೆಟಿಯರ್‌ನಲ್ಲಿ (ಪು. ೬೨೦) ಕಾಣಿಸಲಾಗಿದೆ.!*

ಅಂತೂ ೧೮೪೩ರ 'ಮಂಗಳೂರ ಸಮಾಚಾರ'ವೇ ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆಯೆಂಬುದು ಸದ್ಯಕ್ಕೆ ನೆಲೆಗೊಂಡಿದೆ. ಅದಕ್ಕಿಂತ ಪೂರ್ವದಲ್ಲಿ ಬೆಳಕು ಕಂಡ ಇತರ ಭಾರತೀಯ ಭಾಷಾ ಪತ್ರಿಕೆಗಳನ್ನು ನೋಡೋಣ: ಬಂಗಾಲೀ ಭಾಷೆಯ ಮೊದಲ ಪತ್ರಿಕೆ 'ಸಮಾಚಾರ ದರ್ಪಣ'ವು ೧೮೧೮ರಲ್ಲಿ ಜನ್ಮ ತಾಳಿತು. ಮರಾಠಿಯ ಮೊದಲ ಪತ್ರಿಕೆಯ ಹೆಸರು 'ಮುಂಬಾಪುರ ವರ್ತಮಾನ'ವೆಂಬುದು (೧೮೨೮), ತಮಿಳು ಪತ್ರಿಕೋದ್ಯಮದ ಮೊದಲ ವರ್ಷ ೧೮೩೧. ಕ್ರಿ.ಶ. ೧೮೩೬ರಲ್ಲಿ ಹೊರಬಂದ 'ಸತ್ಯದೂತ'ವು ತೆಲುಗಿನ ಪ್ರಥಮ ಪತ್ರಿಕೆಯಾಗಿದೆ.

---

* ಉತ್ತರ ಕರ್ನಾಟಕದಲ್ಲಿ ಆ ಕಾಲಕ್ಕೆ ಹೊರಡುತ್ತಿದ್ದ 'ಬೆಳಗಾಂವ ಸಮಾಚಾರ', 'ಹುಬಳೀ ವೈಭವ', 'ಧಾರವಾಡ ವೃತ್ತ' ಪತ್ರಿಕೆಗಳು ಮರಾಠಿಯಲ್ಲಿದ್ದುವು. ಇನ್ನೊಂದು ಪತ್ರಿಕೆಯ ಹೆಸರು 'ಕರ್ನಾಟಕ ವೃತ್ತ' ಅದರ ಬರೆವಣಿಗೆಯೆಲ್ಲ ಮರಾಠಿಯಲ್ಲಿ! ಅದರಂತೆ ೧೮೭೦ ರ 'ಹಿತೇಚ್ಛು' (ಕಲಾದಗಿ, ವಿಜಾಪುರ ಜಿಲ್ಲೆ) ಕೂಡ ಮರಾಠಿಯಲ್ಲೇ ಇದ್ದಿತೆಂದು ಸರಕಾರೀ ದಾಖಲೆಗಳಲ್ಲಿ ಉಕ್ತವಾಗಿದೆ. ಆ ಕಾಲಕ್ಕೆ ಈ ಭಾಗದ ವ್ಯವಹಾರ ಭಾಷೆ ಹೆಚ್ಚಾಗಿ ಮರಾಠಿಯಿದ್ದುದೇ ಅದಕ್ಕೆ ಕಾರಣವಾಗಿದೆ.

ಕನ್ನಡದ ಪ್ರಥಮ ಪತ್ರಿಕೆಯು ನಿಜವಾದ ಸಮಾಚಾರ ಪತ್ರಿಕೆಯಾಗಿದ್ದಿತು. ಅದರ ವಿವರಗಳನ್ನು ಜೊತೆಗಿನ ಲೇಖದಲ್ಲಿ ನೋಡಬಹುದು.

ಬೆಳಗಾಂವಿಯ 'ಸುಬುದ್ಧಿ ಪ್ರಕಾಶ' ವು (೧೮೪೯) ನಮ್ಮ ಪತ್ರಿಕೋದ್ಯಮದ ಮುಂದಿನ ಹೆಜ್ಜೆಯಾಗಿದೆ. ಮಿಶನರಿಗಳು ಮುದ್ರಣ ಸೌಲಭ್ಯವನ್ನು ಹೊಂದಿ, ಪತ್ರಿಕೆಯನ್ನು ಹೊರಡಿಸುತ್ತಿದ್ದರೆ ಅದು ಕ್ರಮಪ್ರಾಪ್ತವಾದುದು. ಆದರೆ ಮರಾಠಿಯ ಪ್ರಭಾವದಲ್ಲಿದ್ದುಕೊಂಡು ಕನ್ನಡ ವಾಚಕವೃಂದವೇ ಸೃಷ್ಟಿಯಾಗಿರದಿದ್ದ ಕಾಲದಲ್ಲಿ, ಅದರಂತೆ ದೇಶೀಯರ ಮುದ್ರಣವು ನೆಲೆಗೊಂಡಿರದಿದ್ದಾಗ, ಬೆಳಗಾಂವಿಯ ಕನ್ನಡಿಗರು ಈ 'ಸುಬುದ್ಧಿ ಪ್ರಕಾಶ'ದ ವಿಚಾರ ಮಾಡಿದುದು ಸಾಹಸದ ಮಾತಾಗಿದೆ. ಅಷ್ಟೇ ಅಲ್ಲ, ಅದನ್ನು ಆರೇಳು ವರ್ಷವಾದರೂ ಮುನ್ನಡೆಸಿದರು. ಇದರ ಒಂದೇ ಒಂದು ಸಂಚಿಕೆ ದೊರೆತಿದ್ದು, ಆ ಕುರಿತು ದಿ. ೧೯-೮-೧೯೩೭ರ 'ಸಂಯುಕ್ತ ಕರ್ನಾಟಕ'ದಲ್ಲಿ ಅದರ ವಿವರಗಳನ್ನು ಕೊಡಲಾಗಿದೆ. ದೊರೆತ ಆ ಸಂಚಿಕೆಯಲ್ಲಿ ಅಯೋಧ್ಯೆ, ಮನುಷ್ಯರ ದೀರ್ಘಾಯುಷ್ಯ, ಬಿಜಿಣದ ಮಾರ್ಗ (ರೇಲ್ವೆ), ಮುಲ್ಕೀಖಾತೆಯ ವೃತ್ತಾಂತ ಮುಂತಾದ ವಿಷಯಗಳಿವೆ. ಅದರ ಮೇಲೆ ೭ನೇ ಸಂವತ್ಸರದ ೨೩ನೇ ಸಂಚಿಕೆ, ಎಂದಿರುವುದರಿಂದ ಈ ಪತ್ರಿಕೆಯು ಪಕ್ಷಪತ್ರಿಕೆಯಾಗಿರಬೇಕು. ವಾರ್ಷಿಕ ಚಂದಾ ೭ ರೂ; ತಿಂಗಳಿಗೆ ೮ ಆಣೆ, ಆಗಿನ ದಿನಮಾನಕ್ಕೆ ಇದು ಹೆಚ್ಚೆನಿಸಬಹುದಾದರೂ ಮುದ್ರಣದ ಕಷ್ಟಸಾಧ್ಯತೆಯನ್ನು ಗಮನಕ್ಕೆ ತಂದುಕೊಳ್ಳತಕ್ಕುದು.

ಇತ್ತ 'ಕಂನಡ ಸಮಾಚಾರ'ವು ನಿಂತು ಹೋದ ಮುಂದಿನ ಹಲವು ವರ್ಷ, ಮಿಶನರಿಗಳ ಪತ್ರಿಕಾ ರಂಗವು ಸ್ತಬ್ಧವಾಗಿದ್ದಿತು. ಮೊಗ್ಲಿಂಗನೇ ಮುಂದೆ ಬಂದು 'ಕಂನಡ ವಾರ್ತಿಕ'ವನ್ನು ಹೊರಡಿಸತೊಡಗಿದನು (೧೮೫೭). ಸಿಪಾಯಿ ದಂಗೆಯೆದ್ದಾಗ ವಾರ್ತೆಗಳನ್ನು ಪೂರೈಸುವ ಅಗತ್ಯವನ್ನು ಮನಗಂಡು ಈ ಪಕ್ಷಪತ್ರಿಕೆ ಆರಂಭವಾಗಿರಬೇಕು. ದಂಗೆಯ ವಿಷಯವಾಗಿ ಅದರ ೭ನೇ ಸಂಚಿಕೆಯಲ್ಲಿ (೧೯ -೯-೧೮೫೭) ಬಂದ ವರ್ತಮಾನದ ಬಗೆಯನ್ನು ನೋಡಬಹುದು :

"ಕಾಟಕಾಯಿ ಹುಟ್ಟಿದ ಮೊದಲನೇ ತಿಂಗಳಲ್ಲಿ ಹಿಂದೂ ಜನರೂ ಮುಸಲ್ಮಾನರೂ ಆದ ಶಿಪಾಯಿಗಳು, ಕುಂಪನಿ ಸರಕಾರದವರು ತಂಮ ಜಾತಿಗಳನ್ನು ಕೆಡಿಸಿ ತಮ್ಮ ಪೂಜೆಗಳನ್ನು ನಿಲ್ಲಿಸಿ ತಂಮಂನು ಅಂಕೆಯಿಂದಾ ಕ್ರೈಸ್ತ ಮತದಲ್ಲಿ ಸೇರಿಸುವ ಆಲೋಚನೆಯಲ್ಲಿ ಇದ್ದಾರೆಂಬ ಭಯದಿಂದಾ ರಾಜದ್ರೋಹದಲ್ಲಿ ಶೇರಿದವರೆಂದು ಅನೇಕರು ನೆನಸಿದರು. ಕುಂಪನಿ ಸರಕಾರದವರು ಅಂಥಾ ಆಲೋಚನೆ ಮಾಡುತ್ತಾರೆಂಬ ಮಾತು ಸ್ವಸ್ಥ ಚಿತ್ತರಿಗೆಲ್ಲಾ ಬರೇ ಸುಳ್ಳೆಂದು ಗೊತ್ತದೆ."

'ಕಂನಡ ವಾರ್ತಿಕ'ದಲ್ಲಿ ಮಾತ್ರ ಕ್ರೈಸ್ತ ಮತಪ್ರಸಾರದ ಕೆಲವು ವಿವರಗಳು ಸೇರಿಕೊಂಡವು. ಈ ಪತ್ರಿಕೆಯೂ ಒಂದು ವರ್ಷಕ್ಕಿಂತ ಹೆಚ್ಚು ಕಾಲ ನಡೆಯಲಿಲ್ಲ. ಹಾಗೆಂದು ಮಿಶನ್ನಿನ ೧೮೫೮ರ ವರದಿಯಲ್ಲಿ ಪರೋಕ್ಷವಾಗಿ ಕಾಣಿಸಲಾಗಿದೆ. ಚಿಕ್ಕ ಆಕಾರದ ಈ ಪತ್ರಿಕೆಯು ಬಿಡಿ ಮೊಳೆಗಳ ಮುದ್ರಣದಿಂದ ಸೊಗಸಾಗಿ ಕಾಣುತ್ತಿತ್ತು. ಪತ್ರಿಕೆಯ ಭಾಷಾಶೈಲಿಯಲ್ಲಿಯೂ ಸುಧಾರಣೆ ಕಂಡು ಬಂದಿದ್ದಿತು. ಆದರೆ ಮೊಗ್ಲಿಂಗ್ ಬೇರೆ ಕೆಲಸಗಳಲ್ಲಿ ಮಗ್ನನಾಗಿದ್ದುದು ಇದರ ಪರಿಸಮಾಪ್ತಿಗೆ ಕಾರಣವಾಯಿತು.

ಮೇಲಿನ ಮೂರು ಪಕ್ಷಪತ್ರಿಕೆಗಳು ಬಿಡಿಯಾದ ಪ್ರಯತ್ನಗಳಷ್ಟೆ. ಕನ್ನಡ ಪತ್ರಿಕಾ ವ್ಯವಸಾಯವು ೧೮೬೦ರ ಒಳಹೊರಗೆ ನಿಯಮಿತವಾಗಿ ಆರಂಭವಾಯಿತೆನ್ನಬೇಕು. ಬೆಂಗಳೂರು, ಧಾರವಾಡ ಮತ್ತು ಮಂಗಳೂರು – ಈ ಮುಖ್ಯ ನಗರಗಳಿಂದ ಪತ್ರಿಕೆಗಳು ಹೊರಡಲಾರಂಭಿಸಿದುವು. ಜೂನ್ ೧೮೫೯ರಲ್ಲಿ ಹೊರಬಂದ 'ಮೈಸೂರು ವೃತ್ತಾಂತ ಬೋಧಿನಿ'ಯು ಪ್ರಥಮ ವಾರಪತ್ರಿಕೆಯಾಗಿದೆ. ಕ್ರಿ.ಶ. ೧೮೬೪ರ ವರೆಗೆ ಅದು ಬದುಕಿದ್ದಿತೆಂದು ಡಿ.ವಿ.ಜಿ. ತಮ್ಮ 'ಜ್ಞಾಪಕ ಚಿತ್ರಶಾಲೆ'ಯಲ್ಲಿ ಜ್ಞಾಪಿಸಿಕೊಂಡಿದ್ದಾರೆ. ಇದರ ಸಂಪಾದನ, ಪ್ರಕಾಶನದಲ್ಲಿ ತೊಡಗಿದ್ದ ಭಾಷ್ಯಂ ಮನೆತನದ ತಿರುಮಲಾಚಾರ್ಯ ಮತ್ತು ಭಾಷ್ಯಾಚಾರ್ಯ (ತಂದೆ-ಮಗ) – ಇವರು ಮುಂದೆ ೧೮೬೫ರ ಜುಲೈ ತಿಂಗಳಿನಿಂದ 'ಕರ್ನಾಟಕ ಪ್ರಕಾಶಿಕಾ' ಎಂಬ ಪಕ್ಷ ಪತ್ರಿಕೆಯನ್ನು ಹೊರಡಿಸಲಾರಂಭಿಸಿದರು. ಕ್ರಿ.ಶ. ೧೮೬೮ರಲ್ಲಿ ಅದೂ ನಿಂತಿತು. ಮುಂದೆ ಅವರು ೨೧ -೧೧-೧೮೭೩ರಲ್ಲಿ ಅದನ್ನು ವಾರಪತ್ರಿಕೆಯಾಗಿ ಪುನಃ ಆರಂಭಿಸಿದಾಗ ಮಾತ್ರ ಬಾಲಗ್ರಹಪೀಡಿತವಾಗದೇ ೧೮೯೬ರ ವರೆಗೂ ಬಾಳಿತು. ಮೊಗ್ಲಿಂಗನ ಅನಂತರ ಭಾಷ್ಯಂ ಪ್ರಭೃತಿಗಳೇ ಕನ್ನಡ ಪತ್ರಿಕೋದ್ಯಮದ ಆದ್ಯರೆಂಬುದನ್ನು ನೆನೆಯಬೇಕು.

ಇತ್ತ ಧಾರವಾಡದಲ್ಲಿ 'ಕನ್ನಡ ಜ್ಞಾನಬೋಧಕ'ವು ಉದಯಿಸಿತು. (ನವೆಂಬರ್ ೧೮೬೧). 'ಕಂನಡ ಭಾಷೆಯಲ್ಲಿ ಪುಸ್ತಕಗಳನ್ನು ಛಾಪಿಸಿ ಪ್ರಸಿದ್ಧಿ ಮಾಡುವ ಮಂಡಳಿ' ಎಂಬ ಸಂಸ್ಥೆಯು ಇದನ್ನು ಹೊರಡಿಸುತ್ತಿದ್ದಿತು. ಇದರ ಸಂಪಾದನ, ಪ್ರಕಾಶನ ಕಾರ್ಯವು ಬೆಳಗಾಂವಿಯ ಸರ್ದಾರ ಹೈಸ್ಕೂಲಿನಿಂದ ನಡೆಯುತ್ತಿದ್ದಿತಾದರೂ ಮುದ್ರಣಕ್ಕಾಗಿ ಧಾರವಾಡಕ್ಕೆ ಬರಬೇಕಾಗುತ್ತಿದ್ದಿತು. ಮರಾಠಿಯಲ್ಲಿಯೂ ಕೆಲವು ಲೇಖನಗಳು ಪ್ರಕಟವಾಗುತ್ತಿದ್ದುವು. ಇದು ಮೂಲತಃ ಶೈಕ್ಷಣಿಕ ಪತ್ರಿಕೆಯಾಗಿದ್ದು, ಸರಕಾರೀ ಸುದ್ದಿ ಹಾಗೂ ಪ್ರಕಟನೆಗಳಿಗೆ ಪ್ರಾಶಸ್ತ್ಯವಿದ್ದಿತು. ಸುದ್ದಿಗಳ ಮಾದರಿಯನ್ನು ಕೊಡುತ್ತಿದ್ದೇವೆ.

"ಉತ್ತರ ಕನ್ನಡ ಜಿಲ್ಲೆಯು ಮದ್ರಾಸ ಯಿಲಾಖೆಯೊಳಗಿಂದ ಮುಂಬಯಿ ಯಿಲಾಖೆಯೊಳಗೆ ಬರುವದದೆ. ಅದರ ಚಾರ್ಜು ತೆಗೆದುಕೊಳ್ಳುವುದಕ್ಕಾಗಿ ಮುಂಬಯಿ ಸರಕಾರದವರ ತರ್ಫಿನಿಂದ ಫ್ರಯರ್ ಸಾಹೇಬ

ಕೌನ್ಸಿಲದಾರರು ಹೋಗಿದ್ದರು. ಆದರೆ ಆ ವ್ಯಾಖ್ಯಾಕ್ಕೆ ಮದ್ರಾಸ ಸರಕಾರದವರು ಚ್ಯಾರ್ಜು ಕೊಡಲಿಲ್ಲವೆಂದು ಕೇಳುತ್ತೇವೆ.

"ಮುಂಬಯಿ ಯುನಿವರ್ಸಿಟಿ ಬಿ.ಎ. ಪ್ರಥಮ ಪರೀಕ್ಷೆ ಆಯಿತಂತೆ. ಅದರಲ್ಲಿ ೭ ಮಂದಿ ಇಳಿದರು. ೮ ಮಂದಿ ಇಳಿಯಲಿಲ್ಲ." (ಇಲ್ಲಿಯ 'ಇಳಿ'ಯುವಿಕೆ ಮರಾಠಿಯ 'ಉತರಲೇ' ಇದರ ನೇರ ಭಾಷಾಂತರದ ಪರಿಣಾಮ!)

ಇದೇ ಸಂಚಿಕೆಯಲ್ಲಿ ಹೈದರಾಬಾದದ ನವಾಬನಿಗೆ ಪುತ್ರಸಂತಾನವಾದುದೂ ಬಂಡಖೋರ ನಾನಾಸಾಹೇಬನು ಇನ್ನೂ ಸತ್ತಿಲ್ಲವೆಂಬುದೂ ವರದಿಯಾಗಿದೆ.

ಕ್ರಿ.ಶ. ೧೮೬೩ರ ಸುಮಾರಿಗೆ ಪತ್ರಿಕೆಯ ಮುದ್ರಣವು ಬೆಳಗಾಂವಿಗೇ ಹೋಯಿತು. ಆಗ ಪತ್ರಿಕೆಯು ಫ್ರೆಂಚ್ ಕ್ವಾರ್ಟೋ ಆಕಾರದಲ್ಲಿ ೨೮ ಪುಟಗಳನ್ನು ಒಳಗೊಂಡಿದ್ದು, ಎರಡು ಆಣೆಗೆ ದೊರೆಯುತ್ತಿತ್ತೆಂದು ಸರಕಾರೀ ವರದಿಯೊಂದು ತಿಳಿಸುತ್ತದೆ, ಅನಂತರ ಎಷ್ಟು ವರ್ಷ ಬದುಕಿದ್ದಿತೆಂಬುದು ತಿಳಿಯದು.

ಬೆಂಗಳೂರಿನಿಂದ ಇದೇ ಕಾಲಕ್ಕೆ 'ಅರುಣೋದಯ' ವೆಂಬ ಮಾಸಪತ್ರಿಕೆಯು ಪ್ರಕಟವಾಗತೊಡಗಿತು. (೧೮೬೨). ಲಂಡನ್ ಮಿಶನ್ನಿನ ಬಿ. ಹರ್ಮನ್ ರೈಸ್ ಅದರ ಸಂಪಾದಕನಿದ್ದನು. ಈ ವೇಳೆಗೆ ಮತಾಂತರ ಹೊಂದಿದ ದೇಶೀ ಕ್ರೈಸ್ತರ (ಪ್ರೊಟೆಸ್ಟಂಟ್) ಸಂಖ್ಯೆ ಹೆಚ್ಚಾಗಿದ್ದಿತು. ಅವರ ಜ್ಞಾನಾರ್ಜನೆಗಾಗಿ ಮತ್ತು ಅವರು ಕ್ರೈಸ್ತ ಮತದಲ್ಲಿ ನಿಷ್ಠರಾಗಿ ಉಳಿಯಬೇಕೆಂಬ ಹೇತುವಿನಿಂದ ರೈಸ್ ಇದನ್ನು ಹೊರಡಿಸತೊಡಗಿದನು. ಇದರಲ್ಲಿ ಹಲವು ಇಂಗ್ಲಿಷ್ ಲೇಖಗಳು ತಪ್ಪದೇ ಇರುತ್ತಿದ್ದವು. ಚಿತ್ರಗಳು ಇದ್ದುದು ಇದರ ಇನ್ನೊಂದು ವೈಶಿಷ್ಟ್ಯ. ಧಾರ್ಮಿಕ ವಿಚಾರ, ವಿಜ್ಞಾನ ಹಾಗೂ ಪ್ರಪಂಚದ ತಿಳಿವಳಿಕೆ, ಕಥೆ ಮತ್ತು ಜಾಣತನದ ನುಡಿಗಳು ಮತ್ತು ಎಳೆಯರಿಗೆ ಉಪದೇಶ - ಇವನ್ನು ಪ್ರತಿ ಸಂಚಿಕೆಯಲ್ಲಿ ತಪ್ಪದೇ ಕಾಣುತ್ತೇವೆ. ಧಾರ್ಮಿಕ ಬರಹಗಳಲ್ಲಿ ಹಿಂದೂ, ಇಸ್ಲಾಂ ಮತಗಳ ತೀವ್ರ ಖಂಡನೆ ಕಂಡುಬರುತ್ತದೆ. ವಿಜ್ಞಾನ, ಭೂಗೋಲ ಮುಂತಾದ ವಿಷಯಗಳನ್ನು ಕೊಡುವಲ್ಲಿ ಒಂದು ವ್ಯವಸ್ಥಿತ ಕ್ರಮವನ್ನು ಇಟ್ಟುಕೊಳ್ಳಲಾಗಿದ್ದಿತು.

"The publication... is designed to present a connected view of various important branches of knowledge. This will render the volumes, when bound, of permanent value to natives who have no access to other sources of information.

ರೈಸನ ಪ್ರಗತಿಪರ ಶೈಕ್ಷಣಿಕ ದೃಷ್ಟಿಯ ಪರಿಣಾಮವಿದು. ಅದರಿಂದಾಗಿ ಈ ಪತ್ರಿಕೆಯ ಮಟ್ಟ ಮೇಲಿನದಾಗಿತ್ತು. ಅಂದಿನ 'ಮೈಸೂರು ವೃತ್ತಾಂತ ಬೋಧಿನೀ' ಪತ್ರಿಕೆಯು ಇದನ್ನು ಸ್ವಾಗತಿಸಿತಾದರೂ ಅದು ಮಾಡುತ್ತಿದ್ದ ಹಿಂದೂ ಧರ್ಮದ ಟೀಕೆಯನ್ನೂ, ಭಾಷಾಸರಣಿಯನ್ನೂ ಖಂಡಿಸಿತು.

'ಅರುಣೋದಯ'ವು ಆರೇಳು ವರ್ಷ ನಡೆದು ನಿಂತಿತು. ಮತ್ತೆ ೧೮೮೬ರಲ್ಲಿ ಅದನ್ನು ಪುನರುಜ್ಜೀವನಗೊಳಿಸಿದರೂ, ಪತ್ರಿಕೆಯ ರೂಪ ಮತ್ತು ಧೋರಣೆ ಅದೇ ಆಗಿದ್ದಿತು. ಈ ವೇಳೆಗೆ ರೈಸ್ ತೀರಿಕೊಂಡನು. ಆಮೇಲೆ ಪತ್ರಿಕೆ ಹೆಚ್ಚು ಕಾಲ ಬಾಳಲಿಲ್ಲ.

ಮಂಗಳೂರಲ್ಲಿ ೧೮೬೨ರಲ್ಲಿ ಹೊರಟ ಪತ್ರಿಕೆಯ ಹೆಸರು 'ವಿಚಿತ್ರ ವರ್ತಮಾನ ಸಂಗ್ರಹ' ಇಲ್ಲವೆ 'Illustrated Canerese Journal' - ಎಂಬುದು. ಕನ್ನಡ, ಇಂಗ್ಲಿಷ್ ಎರಡೂ ಭಾಷೆಗಳ ಲೇಖನಗಳು ಅದರಲ್ಲಿದ್ದುವು. ಈ ಪಕ್ಷ ಪತ್ರಿಕೆಯ ಸಂಪಾದಕರೆಂದರೆ ಜೆ. ಮ್ಯಾಕ್ ಮತ್ತು ಸುಪ್ರಸಿದ್ಧ ಕಿಟೆಲ್. ಇದನ್ನು 'ಸಚಿತ್ರ' ಎನ್ನುವುದರ ಬದಲಿಗೆ 'ವಿಚಿತ್ರ' ಎಂದು ಕರೆದುದು ವಿಚಿತ್ರವೆನಿಸುತ್ತದಲ್ಲವೇ? ಮಿಶನರಿಗಳ ಕನ್ನಡವಿದು. ಇದಕ್ಕೆ ಪುರವಣಿಯಾಗಿ 'ಇಂಡಿಯ ಮತ್ತು ಅನ್ಯದೇಶವ ವಾರ್ತಿಕ' ಎಂಬುದೂ ಕೆಲ ಕಾಲ ಹೊರಡುತ್ತಿದ್ದಿತು. 'ವಿಚಿತ್ರ ವರ್ತಮಾನ ಸಂಗ್ರಹ'ವು ಮೂರು ನಾಲ್ಕು ವರ್ಷ ಮಾತ್ರ ಬಾಳಿತು.

ಪತ್ರಿಕೋದ್ಯಮದಲ್ಲಿ ಅನಂತರದ ನಡೆಯೆಂದರೆ 'ಕನ್ನಡ ಶಾಲಾ ಪತ್ರಕ'ವು. ಸುವಿಖ್ಯಾತಿಯ ಡೆಪ್ಯುಟಿ ಚೆನ್ನಬಸಪ್ಪನು ಅದನ್ನು ಆರಂಭಿಸಿದಾಗ (೧೮೬೫) ಅದರ ಹೆಸರು 'ಮಠ ಪತ್ರಿಕೆ' ಎಂದು ಇದ್ದಿತು. ಎಪ್ರಿಲ್ ೧೮೬೭ರಲ್ಲಿ 'ಶಾಲಾಪತ್ರಕ'ವೆಂದು ನಾಮಕರಣ ಹೊಂದಿ, ೧೮೭೧ರಲ್ಲಿ ಅದಕ್ಕೆ 'ಕನ್ನಡ' ಎಂಬ ಅಭಿಧಾನವು ಸೇರಿತು. ಮುಂಬಯಿ ಕರ್ನಾಟಕದ ಟ್ರೇನಿಂಗ್ ಕಾಲೇಜಿನ ಆವಾರದಲ್ಲಿ ದಾಂಗುಡಿ ಬಿಟ್ಟ ಈ ಪತ್ರಿಕೆಯು ಬೆಳಗಾಂವಿ - ಧಾರವಾಡಗಳ ನಡುವೆ ಓಡಾಡುತ್ತಿದ್ದು, ೧೮೭೭ರಿಂದ ನಿಯಮಿತವಾಗಿ ಧಾರವಾಡದಿಂದಲೇ ಪ್ರಕಟವಾಗತೊಡಗಿತು. ಕನ್ನಡ ನಿಷ್ಠೆಯ ಗಂಗೋತ್ರಿಯಂತಿದ್ದ ಟ್ರೇನಿಂಗ್ ಕಾಲೇಜಿನ ಆವಾರದಲ್ಲಿ ಅದು ಬೆಳೆದುದರಿಂದ ಅನೇಕ ಪ್ರೌಢ ಲೇಖನಗಳಿಗೆ ಈ ಪತ್ರಿಕೆ ಎಡೆ ಮಾಡಿಕೊಟ್ಟಿತು. ವಿಶೇಷತಃ ಕನ್ನಡ ಭಾಷೆ, ವಾಙ್ಮಯಗಳನ್ನು ಕುರಿತ ಪರಾಮರ್ಶೆಯು ಅದರ ಮೂಲಕ ನಡೆಯಿತು. ಮೇ ೧೮೬೮ರ ಒಂದು ಸಂಚಿಕೆಯಲ್ಲಿ 'ಶೈಕ್ಷಣಿಕ ಸೂಚನೆಗಳು', 'ಶಬ್ದಮಣಿದರ್ಪಣ', 'ಜೈಮಿನಿ ಭಾರತ ಪದ್ಯಗಳು', 'ನೋಟೀಸುಗಳು', 'ವಿದ್ಯುತ್ಶಕ್ತಿಯ ಯಂತ್ರಗಳು', 'ಹುಡುಗರ ವಿದ್ಯಾಭ್ಯಾಸ' ಎಂಬೀ ಬರಹಗಳಿದ್ದು, ಇವುಗಳ ಮೇಲಿಂದ ಪತ್ರಿಕೆಯ ಸ್ವರೂಪವನ್ನು ಅರಿಯಬಹುದು.

ಡೆಪ್ಯುಟಿ ಚೆನ್ನಬಸಪ್ಪನು ಕನ್ನಡಕ್ಕಾಗಿ ಮತ್ತು ಕನ್ನಡಿಗರ ಶೈಕ್ಷಣಿಕ ಉನ್ನತಿಗಾಗಿ ಕಳಕಳಿಯಿಂದ ಶ್ರಮಿಸುತ್ತಿದ್ದನೆಂಬ ಮಾತಿಗೆ ನಿದರ್ಶನವಾಗಿ, ಈ ಪತ್ರಿಕೆಯ ಎರಡು ಸಂಚಿಕೆಗಳಲ್ಲಿ ಬಂದ ಪ್ರಕಟನೆಗಳು ಇಲ್ಲಿ ಪ್ರಸ್ತುತವಾಗಿವೆ :

"ಸಂತೋಷದ ವರ್ತಮಾನ: ಬಹು ಸಂತೋಷದಿಂದ ಸಮಸ್ತ ಜನರಿಗೆ, ವಿಶೇಷವಾಗಿ ಲಿಂಗವಂತರಿಗೆ ತಿಳಿಸುವದೇನೆಂದರೆ, ಬೆಳಗಾಂವಿ ಜಿಲ್ಲೆಯ ಡೆಪಟಿ ಇನ್‌ಸ್ಪೆಕ್ಟರರಾದ ಚನಬಸವಪ್ಪನವರು ಹೇಳಿಕೊಂಡದ್ದರಿಂದ ಚಿತ್ರದುರ್ಗದ ಮುರಗಿ ಜಗದ್ಗುರು ಸ್ವಾಮಿಗಳವರು ಬಹು ದಯಾಳುಗಳಾಗಿ ಅನಾಥರಾದ ವಿದ್ಯಾರ್ಥಿಗಳಿಗೆ ಬೆಳಗಾಂವಿಯಲ್ಲಿ ಅನ್ನ ಕೊಡುವದಕ್ಕೋಸ್ಕರ ಪ್ರತಿ ತಿಂಗಳಿಗೆ ೩೦೦ ರೂಪಾಯಿ ಕೊಡುವದಕ್ಕೆ ಒಪ್ಪಿಕೊಂಡಿದ್ದಾರೆ. ಈ ಹಣದಿಂದ ಒಂದು ಮನೆಯನ್ನು ತೆಗೆದುಕೊಂಡು ಅಡಿಗೆಯವರು ಮೊದಲಾದ ಚಾಕರರನ್ನು ಇಟ್ಟು ಸುಮಾರು ೫೦ ಜನ ನಿರಾಶ್ರಿತರಾದ ವಿದ್ಯಾರ್ಥಿಗಳಿಗೆ ಎರಡು ಹೊತ್ತು ಊಟ, ಇರುವುದಕ್ಕೆ ಸ್ಥಳ ಕೊಡತಕ್ಕ ಬಗ್ಗೆ ಈಗ ತಜವೀಜು ನಡೆದಿದೆ. (ಆಗಸ್ಟ್ ೧೮೬೮ರ ಸಂಚಿಕೆ).

ಕರ್ನಾಟಕದಲ್ಲಿ ವೀರಶೈವರ ಮೊತ್ತ ಮೊದಲಿನ ಬೋರ್ಡಿಂಗ್ ಶಾಲೆಯಿದು. ಇಂದು ಊರೂರಿಗೆ ಕಾಣಸಿಗುವ ಇಂಥ ಛಾತ್ರಾಲಯಗಳಿಗೆ ಇದುವೆ ನಾಂದಿಯಾಯಿತು.

ಚೆನ್ನಬಸಪ್ಪನು ತನ್ನ ಅಧಿಕಾರಸ್ಥಾನದಿಂದ ಹೊರಡಿಸಿದ ಒಂದು ಪರಿಪತ್ರವನ್ನು ಅಕ್ಟೋಬರ್ ೧೮೬೮ರ ಸಂಚಿಕೆಯಲ್ಲಿ ಕಾಣಬಂದಂತೆ ಇಲ್ಲಿ ಕೊಡುತ್ತಿದ್ದೇವೆ:

"ನೋಟೀಸು: ಗೋಕಾಂವಿ, ಸವದತ್ತಿ ಮತ್ತು ಸಂಪಗಾಂವಿ ತಾಲೂಕಿನಲ್ಲಿರುವ ಯಾವತ್ತೂ ಮಾಸ್ತರರಿಗೆ ತಿಳಿಸುವದೇನಂದರೆ ನೀವು ನಿಮ್ಮ ದಫ್ತರಗಳನ್ನು ಕನ್ನಡಿನಲ್ಲಿ ಇಡ್ರಿ. ಇತ್ತ ಕಡೆಯಿಂದಾಗಲಿ ಅಥವಾ ಮತ್ಯಾವ ಕಡಿಯಿಂದಾಗಲಿ ನಿಮಗೆ 'ಅರೆ' [= ಮರಾಠಿ] ಬರಮು ಬಂದರು ಸಹಾ ನೀವು ಕನ್ನಡಿನಲ್ಲಿ ಉತ್ತರ ಕೊಡುತ್ತ ಬರ್‍ರಿ. ಇನ್ನು ಮೇಲೆ ನಮ್ಮ ಕಡಿಗೆ ಬರುವ ಕಾಗದಗಳು ಅರೇದಲ್ಲಿ ಬರಬಾರದು."

ದೀರ್ಘ ಕಾಲ ಬಾಳಿದ ಪತ್ರಿಕೆಯಿದು. ಇಷ್ಟೇ ಅಲ್ಲ, 'ಜೀವನ ಶಿಕ್ಷಣ' ಎಂಬ ಹೆಸರಿನಿಂದ ಈಗಲೂ ಹೊರಡುತ್ತಲಿದೆ. ಇಂದಿಗೂ ಬದುಕಿ ಇರುವ ಪ್ರಾಚೀನ ಕಾಲದ ಮೂರು ಪತ್ರಿಕೆಗಳಲ್ಲಿ ಇದು ಒಂದಾಗಿದೆ. ಎರಡನೆಯ ಇಂಥ ಪತ್ರಿಕೆಯೆಂದರೆ 'ಮೈಸೂರು ಗಜೆಟ್'. ಆದರೆ ಇಂದಿನ ಗೆಜೆಟಿಗೂ ಅಂದಿನದಕ್ಕೂ ತುಂಬಾ ವ್ಯತ್ಯಾಸವಿದೆ. ಇಂದಿನದು ಕೇವಲ ಸರಕಾರೀ ಪ್ರಕಟನೆಗಳಿಗೆ ಮೀಸಲು. ಅಂದಿನದು ಸಾಮಾನ್ಯ ಓದುಗನಿಗೂ ವಾಚನೀಯವೆನಿಸುವ ಸುದ್ದಿಗಳನ್ನು ಒಳಗೊಂಡಿರುತ್ತಿತ್ತು. ಇದರಿಂದಾಗಿ ಸಾಮಾನ್ಯ ಕನ್ನಡಿಗರು ತಾವಾಗಿ ಚಂದಾದಾರರಾಗಲು ಮುಂಬರುತ್ತಿದ್ದರು. ದಿ. ೭-೪-೧೮೬೬ ರಂದು ಆರಂಭವಾದ ಈ ಪತ್ರಿಕೆಯು ಇಂಗ್ಲಿಷ್-ಕನ್ನಡ ಎರಡೂ ಭಾಷೆಗಳಲ್ಲಿ ಹೊರಡುತ್ತಿದ್ದಿತು. ಆಗಿನ ಸಂಪಾದಕನ ಹೆಸರು ಎಲ್. ರಿಕೆಟ್ಸ್.

ಇತರ ಸುದ್ದಿಗಳಲ್ಲಿ ವಿದೇಶೀ ಸುದ್ದಿಗಳನ್ನೂ ಕೊಡುವ ಕ್ರಮವಿದ್ದಿತು. ಅವನ್ನು ತಂತಿಯ ಮೂಲಕ ತರಿಸಲಾಗುತ್ತಿತ್ತು. ೨೩ನೇ ಜೂನ್ ೧೮೬೬ರ ಸಂಚಿಕೆಯಲ್ಲಿ, ಯುರೋಪದಲ್ಲಿ ನಡೆದಿದ್ದ ಯುದ್ಧದ ವಾರ್ತೆಯಿದೆ. ಜಿಲ್ಲಾ ಮಟ್ಟದ ಸುದ್ದಿಗಳಿಗೂ ಅವಕಾಶವಿದ್ದಿತು. ಅಲ್ಲಲ್ಲಿಯ ಭೂಸುಧಾರಣೆ, ಸಾಂಸರ್ಗಿಕ ರೋಗಗಳು, ಮಹತ್ವದ ಘಟನೆಗಳು, ತಪ್ಪಿತಸ್ಥರಿಗೆ ಕೋರ್ಟು ವಿಧಿಸಿದ ಶಿಕ್ಷೆ - ಮುಂತಾದ ಸುದ್ದಿಗಳಿಗೂ ಪ್ರಾಶಸ್ತ್ಯವನ್ನು ಕೊಡಲಾಗುತ್ತಿತ್ತು. ಬರಗಾಲದ ಮತ್ತು ಕಾಲರಾದ ಹಾವಳಿಯ ದಿನಗಳವು. ಹೆದ್ದಾರಿಗಳಲ್ಲಿ ಕೂಳಿಲ್ಲದೆಯೂ, ರೋಗದಿಂದಲೂ ಸತ್ತು ಬಿದ್ದವರ ವಿವರಗಳನ್ನು ಓದಿದಾಗ, ಯಾರ ಮನವೂ ಕರಗುವುದು. ದೊಡ್ಡೇರಿ ಗ್ರಾಮದ ಓರ್ವ ಮುಸ್ಲಿಂ ಹೆಂಗಸು ತನ್ನ ಎರಡು ವರ್ಷದ ಕೂಸನ್ನು ಬುಡನ್‌ಖಾನ್ ಎಂಬವನಿಗೆ ಕೇವಲ ಎರಡು ರೂಪಾಯಿಗೆ ಮಾರಿ ಆಹಾರಧಾನ್ಯ ತಂದಳಂತೆ. ಇಂಥ ಸುದ್ದಿಗಳನ್ನು ಇಂದಿನ ಸರಕಾರ ತನ್ನ ಪತ್ರಿಕೆಗಳಲ್ಲಿ ಎಂದಾದರೂ ಪ್ರಕಟಿಸೀತೆ? ಬೇರೆ ಯಾರಾದರೂ ಪ್ರಕಟಿಸಿದ್ದರೆ ಅದನ್ನು ತನ್ನ ಪತ್ರಿಕಾ ಪ್ರಕಟನೆಗಳ ಮೂಲಕ ಅಲ್ಲಗಳೆಯಲು ಸರಕಾರವು ಮುಂದಾಗುತ್ತದೆ. ಇರಲಿ. ಬೇರೊಂದು ಊರಿನ ಬಣಜಿಗ ಹೆಣ್ಣು ಮಗಳೊಬ್ಬಳು ಇದೇ ರೀತಿ - ತನ್ನ ಮಗನನ್ನು ಮಾರಲೆಳಸಿದ್ದಾಗ ಊರ ಜನ ತಡೆದು, ಅವಳಿಗೆ ಎರಡು ಸೇರು ರಾಗಿ ಕೊಟ್ಟರಂತೆ. ಬರಗಾಲದ ದೆಸೆಯಿಂದಾಗಿ ಜನ ಆಹಾರವಸ್ತುಗಳನ್ನು ಕಳವು ಮಾಡಿದ್ದರ, ಇಲ್ಲವೆ ಅಂಗಡಿಗಳನ್ನು ಲೂಟಿ ಮಾಡಿದ್ದರ ವಿವರಗಳೂ ಆಗಿನ ಗೆಜೆಟಿನಲ್ಲಿ ಸಿಕ್ಕುತ್ತವೆ. ಪರಿಣಾಮವಾಗಿ ಅಂದಿನ ಮೈಸೂರು ಸಂಸ್ಥಾನದ ಜೀವನ ಚಿತ್ರಣವು ತುಸು ಮಟ್ಟಿಗೆ ದೊರೆಯುತ್ತದೆ.

ಕ್ರಿ.ಶ. ೧೮೬೮ರಲ್ಲಿ ಬಾಸೆಲ್ ಮಿಶನ್‌ದವರು 'ಸಭಾಪತ್ರ'ದ ಮೊದಲ ಸಂಚಿಕೆಯನ್ನು ಹೊರತಂದರು. ಪತ್ರಿಕೆಯನ್ನು ಹೊರಡಿಸುವಲ್ಲಿ ಇದು ಅವರ ನಾಲ್ಕನೆಯ ಹೆಜ್ಜೆಯಾಗಿದೆ. ಮೊದಲಿನ ಮೂರು ಬೇಗ ಅಳಿಸಿಹೋದುವು. (ಕ್ರೈಸ್ತ) 'ಸಭಾಪತ್ರವು' ಮಾತ್ರ ಹಲವು ದಶಕಗಳ ವರೆಗೆ ಮುಂದುವರಿಯಿತು. ಸುರುವಿಗೆ (೧೮೬೮-೬೯) 'ಬಾಲಪತ್ರ'ವೆಂಬ ಪುರವಣಿಯೂ ಸೇರಿದ್ದಿತು. ಮಕ್ಕಳಿಗೆಂದು ಮೀಸಲಾದ ಈ ಭಾಗವು ಅಪೂರ್ವವಾದುದು. ಆ ಮೂಲಕ ಬಾಲ ಸಾಹಿತ್ಯವು ಕನ್ನಡದಲ್ಲಿ ಕಾಣಿಸಿಕೊಳ್ಳಲಾರಂಭಿಸಿತು. 'ಸಭಾಪತ್ರ'ದ ಮುಖ್ಯ ಉದ್ದೇಶವು ಮತಪ್ರಸಾರವಾಗಿದ್ದರೂ ದೇಶವಿದೇಶಗಳ ಸುದ್ದಿಯನ್ನು 'ವೃತ್ತಾಂತ ಮಂಜರಿ' ಎಂಬ ಸದರಿನಲ್ಲಿ ಕೊಡಲಾಗುತ್ತಿತ್ತು.

ಅದೇ ವರ್ಷ ಮಂಗಳೂರಿನಿಂದ ಕಾನೂನಿನ ವಿಚಾರಗಳಿಗೆ ಸಂಬಂಧಿಸಿದ 'ನ್ಯಾಯ ಸಂಗ್ರಹ' ವೆಂಬ ಪಕ್ಷಪತ್ರಿಕೆ ಹೊರಟಿತು. ಕಾನೂನಿಗೆ ಸಂಬಂಧಿಸಿದ ಪ್ರಥಮ ಕನ್ನಡ ಪತ್ರಿಕೆಯಿದು. ಆದರೆ ವರ್ಷಾವಧಿಯಲ್ಲಿಯೇ ನಿಂತು ಹೋಯಿತು.

ಕ್ರಿ.ಶ. ೧೮೭೩-೭೪ರಲ್ಲಿ ಪುನರ್ಜನ್ಮ ತಾಳಿದ 'ಕರ್ನಾಟಕ ಪ್ರಕಾಶಿಕಾ' ಕನ್ನಡ-ಇಂಗ್ಲಿಷ್ ಎರಡೂ ಭಾಷೆಯ ಲೇಖನಗಳನ್ನು ಒಳಗೊಂಡಿದ್ದಿತು. ಅದರಲ್ಲಿ ತಂತೀ ವರ್ತಮಾನ ಸಂಗ್ರಹ, ಗೆಜೆಟ್ಟಿನ ಸಾರಾಂಶ, ಒಳದೇಶ ಮತ್ತು ತಾಲೂಕಿನ ವೃತ್ತಾಂತ, ನೈಮಿತ್ತಿಕ ವಿಷಯನ್ಯಾಸ (Occasional Notes) - ಇವೇ ಮೊದಲಾದ ವಿಷಯಗಳಿದ್ದುವು. ಅದರ ಬರವಣಿಗೆಯು ಪ್ರೌಢ ಸರಣಿಯಿಂದ ಕೂಡಿದ್ದು, ಪುರೋಗಾಮೀ ದೃಷ್ಟಿಯುಳ್ಳದ್ದಾಗಿತ್ತು. ಜೊತೆಗೆ ಅಂದಿನ ರಾಜ್ಯಾಡಳಿತವನ್ನು ಟೀಕಿಸುವ ಧೈರ್ಯವನ್ನೂ ತೋರಿತು. ಅದರ ಈ ರಾಜಕೀಯ ಧೋರಣೆಯಿಂದಾಗಿ ಮುಂದೆ ೧೮೯೭ರ ಸುಮಾರಿಗೆ ಅದು ನಿಂತುಹೋಯಿತು. ವಿಚಾರ ಸ್ವಾತಂತ್ರ್ಯವನ್ನು ತೋರಿದ ಆದ್ಯ ಪತ್ರಿಕೆಯಿದು.

ಹೀಗೆ ವಾರ್ತೆ ಮತ್ತು ಪ್ರಚಲಿತ ವಿಷಯಗಳಿಗೆ ಪ್ರಾಧಾನ್ಯವಿರುವ ಪತ್ರಿಕೆಗಳನ್ನು ಹೊರಡಿಸಬೇಕೆನ್ನುವ ಪ್ರಜ್ಞೆಯು ನಾಡಿನ ಇತರ ಭಾಗಗಳಲ್ಲಿಯೂ ಕಂಡುಬಂದಿತು. ಮಂಗಳೂರಿನ 'ಸುಬೋಧಿನಿ'ಯು (೧೮೭೧) A Chronicle of General News ಎಂಬ ಅಭಿಧಾನವನ್ನು ಹೊತ್ತಿತ್ತು. ಮೇಲ್ಕಂಡ 'ಶಾಲಾಪತ್ರಕ'ದ ೧೮೭೩ನೇ ವರ್ಷದ ಒಂದು ಸಂಚಿಕೆಯಲ್ಲಿ ಬೆಳಗಾಂವಿಯಿಂದ ಹೊರಡುವ 'ಸೊಬಗಿನ ಸುದ್ದಿ' ಎಂಬ ಪತ್ರಿಕೆಯ ಪ್ರಸ್ತಾಪವಿದ್ದು, ಅದನ್ನು ಮೊತ್ತಮೊದಲಿನ ವಾರ್ತಾಪತ್ರಿಕೆಯೆಂಬುದಾಗಿ ವಿಶ್ಲೇಷಿಸಲಾಗಿದೆ. ಆ ಮಾತು ಮುಂಬಯಿ ಕರ್ನಾಟಕಕ್ಕೆ ಮಾತ್ರ ಅನ್ವಯಿಸಬಹುದು. ಇವೆರಡೂ ಸುದ್ದಿ ಪತ್ರಿಕೆಗಳು ಬಹು ಕಾಲ ಬಾಳಿದವುಗಳಲ್ಲ.

ವೆಂಕಟ ರಂಗೋ ಕಟ್ಟಿಯವರ 'ಶೋಧಕ' ಮಾಸಪತ್ರಿಕೆಯನ್ನು ವಿಶೇಷವಾಗಿ ಹೆಸರಿಸಬೇಕು (೧೮೭೫-೭೮). ಮಿಶನರಿ ಜನರ, ಇತರರ ಹಿಂದಿನ ಪತ್ರಿಕೆಗಳಲ್ಲಿ ಲೋಕಶಿಕ್ಷಣ, ಇಲ್ಲವೆ ಜನತೆಯ ಜ್ಞಾನಾಭಿವೃದ್ಧಿಯ ದೃಷ್ಟಿಯು ತುಸುಮಟ್ಟಿಗೆ ಇದ್ದಿತಾದರೆ 'ಶೋಧಕ' ದಲ್ಲಿ ಅದು ಪ್ರಮುಖವಾಗಿ ಕಾಣಿಸಿಕೊಂಡಿತು. 'ಇತಿಹಾಸ ಶಾಸ್ತ್ರ ಕಲಾಕೌಶಲ್ಯಾದಿಗಳ ಸಂಗ್ರಹ'ವೆಂಬ ಅದರ ಉಪಶೀರ್ಷಿಕೆಯಲ್ಲಿ ಅದು ಸ್ವಯಂವ್ಯಕ್ತವಾಗಿದೆ. ಕನ್ನಡಿಗರು ಯಾವ ವಿಷಯದಲ್ಲಿಯೂ ತಲೆತಗ್ಗಿಸಬೇಕಾಗಿಲ್ಲ ಎಂಬ ಕನ್ನಡ ಜಾಗೃತಿಯ ಕಹಳೆಯನ್ನು ಈ ಪತ್ರಿಕೆ ಮೊಳಗಿಸಿತು. 'ಸ್ವದೇಶದ ಇತ್ಯಾದಿಗಳಿಗೆ ವಿಶೇಷ ಲಕ್ಷ್ಯವು ಕೊಡಲ್ಪಡುವುದು. ಇಂಥಾ ವಿಷಯಗಳನ್ನು ಬರೆದು ಕಳುಹಿದರೆ ಸಂತೋಷದಿಂದ ಅವುಗಳನ್ನು ಸ್ವೀಕರಿಸುವೆವು' ಎಂಬ ಪ್ರಕಟನೆಯ ಕರೆಯಲ್ಲಿ ವೆಂಕಟ ರಂಗೋ ಕಟ್ಟಿಯ ಕನ್ನಡಾಭಿಮಾನ ಚೆನ್ನಾಗಿ ವ್ಯಕ್ತವಾಗಿದೆ.

'ಶೋಧಕ'ದ ಮೊದಲ ಮೂರು ಸಂಚಿಕೆಗಳಲ್ಲಿ ಬಂದ ವಿಷಯಗಳ ಪರಿವಿಡಿಯು ಸಂಪಾದಕನ ಲೋಕಶಿಕ್ಷಣದ ಗುರಿಯನ್ನು ಸ್ಪಷ್ಟಗೊಳಿಸಬಲ್ಲುದು!

ಕರ್ನಾಟಕದ ಇತಿಹಾಸಾರಂಭ ಭೂಗರ್ಭ ಶಾಸ್ತ್ರ
ಜ್ಯೋತಿಶ್ಶಾಸ್ತ್ರದ ಇತಿಹಾಸ ಕಾಯದೆ
ರಸಹೃದಯ (ನಮ್ಮ ದೇಶದ ರಸಾಯನ ಶಾಸ್ತ್ರವು ಹೆಚ್ಚು ಶ್ರೇಷ್ಠ). ಪಾರಜದಿಂದ ಅಮರತ್ವ ಇ.
ಯಂತ್ರವಿದ್ಯೆ ತಿರುಪತಿ ಯಾತ್ರೆ
ಕಬ್ಬು ಅಂಜನಗಳು
ದ್ರವಿಡ ಭಾಷೆ.
ಸ್ತಂಭನ ತಂತ್ರ ಯಾಕೆಂಬುದರ ಕಾರಣಗಳು ಇ.

ಆದರ್ಶವೇ ಪ್ರಧಾನವಾದ ಯಾವ ಕಾರ್ಯವೂ ಈ ಪ್ರಪಂಚದಲ್ಲಿ ಬಹುಕಾಲ ನಿಲ್ಲದೇನೊ! ಈ ಪತ್ರಿಕೆ ೨-೩ ವರ್ಷಗಳಲ್ಲಿ ಅಸ್ತಂಗತವಾಯಿತು.

ಕ್ರಿ.ಶ. ೧೮೪೩ರಿಂದ ೧೮೮೧ರ ವರೆಗಿನ ಪತ್ರಿಕೆಗಳಿವು. ಇದುವೆ ಕನ್ನಡ ಪತ್ರಿಕೋದ್ಯಮದ ಮೊದಲ ಘಟ್ಟ. ಈ ಅವಧಿಯ ಯಾವುದೇ ವರ್ಷದಲ್ಲಿ ಒಂದು, ಅತಿ ಹೆಚ್ಚೆಂದರೆ ಮೂರು - ನಾಲ್ಕು, ಪತ್ರಿಕೆಗಳು ಬಾಳಿದ್ದುವು. ಆದರೆ ಪತ್ರಿಕೆಯ ಮಹತ್ವ, ಪ್ರಯೋಜನಗಳನ್ನು ಆಗಿನ ಕೆಲವರು ಚೆನ್ನಾಗಿ ಮನಗಂಡು ಆ ದಿಶೆಯಲ್ಲಿ ಪ್ರಯತ್ನಪಟ್ಟರು. ಯಾವ ಅನುಕೂಲತೆ ಮತ್ತು ಪ್ರೋತ್ಸಾಹಗಳಿಲ್ಲದಾಗ ನಡೆದ ಈ ಎತ್ತುಗಡೆಯು ಒಂದು ಸಾಹಸವೆನ್ನಬಹುದು.

ಆಗಿನ ಪತ್ರಿಕೆಗಳ ಪ್ರಸಾರವು ನೂರರಿಂದ ಹೆಚ್ಚೆಂದರೆ ಐನೂರರ ವರೆಗೆ ಮಾತ್ರ ಇದ್ದಿತು. ಪ್ರಕಟನಾವಧಿಯ ಮಾನದಿಂದ ಅಂದಿನವರು ಪಕ್ಷ(೧೫ ದಿನ)ವನ್ನು ಮೆಚ್ಚಿಕೊಂಡದ್ದು ಕಂಡುಬರುತ್ತದೆ. ಆ ಮೇಲೆ ಅದನ್ನು ವಾರಪತ್ರಿಕೆಯಾಗಿಯೊ, ಇಲ್ಲವೆ ಮಾಸಿಕವೊ ಆಗಿ ಮಾರ್ಪಡಿಸಿದುದೂ ಇದೆ. ಮುದ್ರಣಾಲಯ ಮತ್ತು ವಾರ್ತಾಸಂಸ್ಥೆ ಇಲ್ಲದ್ದರಿಂದ ವಾರ್ತಾಪತ್ರಿಕೆಗಳು ನಾಲ್ಕಾರು ಪುಟಗಳಿಗೆ ಸೀಮಿತವಾಗಿದ್ದುವು. ಇನ್ನು, ಲೇಖಕರು ತಾವಾಗಿ ಕವಿತೆ, ಕತೆ, ಇತರ ಬರಹಗಳನ್ನು ಕಳಿಸುವ ಇಂದಿನ ಪದ್ಧತಿಯು ಆಗ ರೂಢಿಯಲ್ಲಿರದ್ದರಿಂದ, ಹೆಚ್ಚಿನ ಬರೆವಣಿಗೆಯನ್ನು ಸಂಪಾದಕನೇ ಮಾಡಬೇಕಾಗುತ್ತಿತ್ತು. ಸಂಪಾದಕರಲ್ಲಾದರೊ ಮನರಂಜನೆಗೆ ಹೆಚ್ಚು

ಅವಕಾಶವಿತ್ತು ಸ್ತ್ರೀಯರ ಚಿತ್ರಗಳನ್ನು ಹಾಕಿ ಚಂದಾದಾರರನ್ನು ಒಲಿಸಿಕೊಳ್ಳುವ ವ್ಯವಹಾರಿಕ ಮನೋಭಾವ ಇರಲಿಲ್ಲ; ಬದಲಾಗಿ ಸಮುದ್ದೇಶದಿಂದ, ಆದರ್ಶ ದೃಷ್ಟಿಯಿಂದ ಪತ್ರಿಕೆಯನ್ನು ಹೊರತರಬೇಕೆಂದರು. ಪಾಶ್ಚಾತ್ಯ ಸಂಪರ್ಕದಿಂದಾಗಿ ತಿಳಿದುಬಂದ ಅನೇಕ ವೈಜ್ಞಾನಿಕ, ಔದ್ಯಮಿಕ ವಿಷಯಗಳನ್ನೂ, ಪ್ರಪಂಚ ಪರಿಚಯದ ಲೇಖನಗಳನ್ನೂ ಲೋಕಶಿಕ್ಷಣದ ಗುರಿಯನ್ನಿಟ್ಟುಕೊಂಡು ಪ್ರಕಟಿಸಬೇಕೆಂದರು.

ಕ್ರಿ.ಶ. ೧೮೮೦ನೆಯ ದಶಕವು ಹೊಸಗನ್ನಡ ಸಾಹಿತ್ಯದಲ್ಲಿ ನವೋದಯದ ಕಾಲವಾಗಿದೆ. ಇಷ್ಟು ವರ್ಷಗಳ ವರೆಗೆ ಅನುವಾದ, ಪರಿಷ್ಕರಣ, ಮತಪ್ರಸಾರ ಮುಂತಾದವುಗಳೇ ಸಾಹಿತ್ಯ ರಚನೆಗೆ ಪ್ರೇರಕವಾಗಿದ್ದವು. ೧೮೮೧ರಿಂದ ಮೊದಲಾಗಿ, ನಾಟಕ, ಕತೆ, ಕಾದಂಬರಿ, ಪ್ರಬಂಧ ಸಾಹಿತ್ಯಗಳಿಂದ ಸಾಹಿತ್ಯ ವಾಹಿನಿಯು ವಿಸ್ತಾರ ಹೊಂದಿತು. ಹೊಸಗನ್ನಡ ಗದ್ಯವು ನೆಲೆಗೊಂಡಿತು. ಮುಖ್ಯವಾಗಿ ಸ್ವತಂತ್ರ ವಿಚಾರಸರಣಿ ತಲೆಯೆತ್ತಿತು. ನವೋದಯದ ಈ ಕಾಲದಲ್ಲಿ ಪತ್ರಿಕೆಯು ಪ್ರಮುಖ ವಾಹಿನಿಯಾಯಿತು. ಈ ದೃಷ್ಟಿಯಿಂದ ಆ ಮುಂದಿನ 'ಹಿತಬೋಧಿನಿ' (ಬೆಂಗಳೂರು), 'ಚಂದ್ರೋದಯ' (ಧಾರವಾಡ), ಮತ್ತು 'ಕನ್ನಡ ಸುವಾರ್ತೆ' (ಮುಂಬಯಿ) ಇವನ್ನು ಹೆಸರಿಸಬೇಕು. ಅವುಗಳ ಮೂಲಕ ಕನ್ನಡ ಪತ್ರಿಕಾ ವ್ಯವಸಾಯವು ಹೊಸ ಮಾರ್ಗವನ್ನು ಹಿಡಿಯಿತು. ಆ ಮಾರ್ಗವೆಂದರೆ, ವಿಚಾರ ಜಾಗೃತಿ, ಸ್ವಂತ ಅಭಿಪ್ರಾಯಗಳ ಅಭಿವ್ಯಕ್ತಿ ಮತ್ತು ರಾಷ್ಟ್ರೀಯ ಮನೋವೃತ್ತಿ. ಅದಕ್ಕೂ ಹಿಂದೆ **'ಕರ್ನಾಟಕ ಪ್ರಕಾಶಿಕಾ'**, **'ಶೋಧಕ'** ಇವುಗಳ ಪತ್ರಿಕಾಕರ್ತರು ಹಾಗೆ ಮಾಡಿದ್ದರೇನೋ ನಿಜ. ಆದರೆ ಅದು ಒಬ್ಬಿಬ್ಬ ವ್ಯಕ್ತಿಗಳ ಎತ್ತುಗಡೆಯಾಗಿದ್ದಿತಲ್ಲದೆ ಒಂದು ಪ್ರಭಾವೀ ಪರಂಪರೆಯಾಗಿ ಕಂಡು ಬಂದದ್ದು ಮೇಲೆ ಕಾಣಿಸಿದ ಮೂರು ಪತ್ರಿಕೆಗಳ ಮೂಲಕ. ಅಂತೂ ಪತ್ರಿಕೋದ್ಯಮದ ದ್ವಿತೀಯ ಘಟ್ಟವು ೧೮೮೦ರ ದಶಕದಿಂದ ಮೊದಲಾಯಿತು. ಈ ನವೋದಯ ಕಾಲದ ಪತ್ರಿಕೋದ್ಯಮಕ್ಕೆ ಸೂಕ್ತವಾದ ಹಿನ್ನೆಲೆಯನ್ನು ಒದಗಿಸಿದ ಪ್ರಾರಂಭದ ಹದಿನೇಳು ಪತ್ರಿಕೆಗಳ, ಅವುಗಳ ನಿರ್ವಾಹಕರ ಕಾರ್ಯವನ್ನು ಸ್ಮರಿಸಿಕೊಳ್ಳುವುದು ಉಚಿತವೇ ಆಗಿದೆ. ◆

ಶ್ರೀ.ಹಾ.

## ಮೊದಲ ಹೆಜ್ಜೆಗಳು

| ಪತ್ರಿಕೆಯ ಹೆಸರು | ಪ್ರಕಟನಾವಧಿ | ವರ್ಷ | ಸಂಪಾದಕ / ನಿರ್ವಾಹಕ |
|---|---|---|---|
| ಮಂಗಳೂರು ಸಮಾಚಾರ | ಪಕ್ಷಪತ್ರಿಕೆ | ೧೮೪೩-೪೪ | ಹರ್ಮನ್ ಮೊಗ್ಲಿಂಗ್ |
| ಕಂನಡ ಸಮಾಚಾರ | " | ೧೮೪೪ | " |
| ಸುಬುದ್ಧಿ ಪ್ರಕಾಶ | " | ೧೮೪೯-೧೮೫೫ | – |
| ಕಂನಡ ವಾರ್ತಿಕ | ಪಕ್ಷಪತ್ರಿಕೆ | ೧೮೫೭-೫೮ | ಮೊಗ್ಲಿಂಗ್ |
| ಮೈಸೂರು ವೃತ್ತಾಂತ ಬೋಧಿನಿ | ವಾರಪತ್ರಿಕೆ | ೧೮೫೯-೬೪ | ಭಾಷ್ಯಂ ಮನೆತನ |
| ಕಂನಡ ಜ್ಞಾನಬೋಧಕವು | ಮಾಸಪತ್ರಿಕೆ | ೧೮೬೧-೬೨ | – |
| ಅರುಣೋದಯ | ಮಾಸಪತ್ರಿಕೆ | ೧೮೬೨-೬೯;<br>೧೮೮೬-೮೭ | ಬಿ.ಎಚ್.ರೈಸ್ |
| ವಿಚಿತ್ರ ವರ್ತಮಾನ ಸಂಗ್ರಹ | ಪಕ್ಷಪತ್ರಿಕೆ | ೧೮೬೨-೬೩ | ಮ್ಯಾಕ್/ಕಿಟೆಲ್ |
| ಮಠಪತ್ರಿಕೆ/ಕನ್ನಡ ಶಾಲಾಪತ್ರಕ | ಮಾಸಪತ್ರಿಕೆ | ೧೮೬೫- | ಚೆನ್ನಬಸಪ್ಪ ಇ.ಇ. |
| ಕರ್ನಾಟಕ ಪ್ರಕಾಶಿಕಾ | ಪಕ್ಷ/ವಾರಪತ್ರಿಕೆ | ೧೮೬೫-೬೮ | ಭಾಷ್ಯಂ |
| ಮೈಸೂರು ಗಜೆಟ್ | ವಾರಪತ್ರಿಕೆ | ೧೮೬೬- | ರಿಕೆಟ್ಸ್ ಇ.ಇ. |
| ಸಭಾಪತ್ರ (ಕ್ರೈಸ್ತ) | ಪಕ್ಷ/ಮಾಸಿಕ | ೧೮೬೮ | ಬಾಸೆಲ್ ಮಿಶನ್ |
| ನ್ಯಾಯಸಂಗ್ರಹ | ಮಾಸಿಕ | ೧೮೬೮ | – |
| ಸುಬೋಧಿನೀ | ಮಾಸಿಕ | ೧೮೭೧ | – |
| ಸೊಬಗಿನ ಸುದ್ದಿ | ವಾರಪತ್ರಿಕೆ | ೧೮೭೩ | – |
| ಶೋಧಕ | ಮಾಸಿಕ | ೧೮೭೫ -೭೮ | ವೆಂ. ರಂ.ಕಟ್ಟಿ |

# ೨. ಕನ್ನಡ ಮಾಸಪತ್ರಿಕೆಗಳ ಸದ್ಯಃಸ್ಥಿತಿ (೧೯೧೯)

✍ ನಾ. ಶ್ರೀ ರಾಜಪುರೋಹಿತರು

ಕ್ರಿ.ಶ. ೧೦೬೮ರಲ್ಲಿ ಜಗತ್ತಿನೊಳಗಿನ ಎಲ್ಲಕ್ಕೂ ಮೊದಲನೆಯ 'ವರ್ತಮಾನ ಪತ್ರಿಕೆ'ಯು ಚೀನದೇಶದಲ್ಲಿ ಹುಟ್ಟಿತೆಂಬುದು ಪೌರಸ್ತ್ಯರಾದ ನಮಗೆ ಗೌರವಾಸ್ಪದವಾಗಿದೆ. ಆದರೆ ವರ್ತಮಾನ ಪತ್ರಿಕೆಯ ಜತೆಯಲ್ಲಿಯೇ ಮಾಸಪತ್ರಿಕೆಯನ್ನೂ ಪ್ರಾರಂಭಿಸಿ, ಅವೆರಡನ್ನೂ ಸರ್ವಾಂಗ ಸುಂದರವಾಗುವಂತೆ ಸುಧಾರಿಸಿ, ಅವುಗಳಿಗೆ ಪ್ರಗಲ್ಭ ದಶೆಯನ್ನುಂಟುಮಾಡಿದ ಶ್ರೇಯಸ್ಸು ಮಾತ್ರ ಪಾಶ್ಚಾತ್ಯರಿಗೆ ಸಲ್ಲತಕ್ಕುದು ನ್ಯಾಯವಾಗಿದೆ. ಮಾಸಪತ್ರಿಕೆಯು ವರ್ತಮಾನ ಪತ್ರಿಕೆಯ ಪಶ್ಚಾತ್ ಹುಟ್ಟಿದ್ದರೂ, ಅಣ್ಣನಿಗಿಂತ ತಮ್ಮನ ಪ್ರಭಾವವೇ ಅಧಿಕವಾಗಿದೆ; ಏಕೆಂದರೆ, ವರ್ತಮಾನ ಪತ್ರಿಕೆಗಳಲ್ಲಿಯ ವಿಷಯಗಳು ಕ್ಷಣಿಕ ಮಹತ್ವವುಳ್ಳವುಗಳಾಗಿರುವುದರಿಂದ, ಈ ಪತ್ರಿಕೆಗಳು ಪ್ರಾಯಶಃ ಹುಟ್ಟಿದ ಲಾಗಾಯಿತು ೨೪ ಗಂಟೆಗಳ ಒಳಗಾಗಿಯೇ ಕಿರಾಣಿ ಅಂಗಡಿಗಳಲ್ಲಿ ಸಕ್ಕರೆ ಮಿಠಾಯಿಗಳನ್ನು ತಿನ್ನುತ್ತ ಬಿದ್ದಿರುವುದನ್ನು ಎಲ್ಲರೂ ನೋಡಿರಬಹುದು. ಆದರೆ ಮಾಸಪತ್ರಿಕೆಗಳ ಸ್ಥಿತಿಯು ಹೀಗಿರುವುದಿಲ್ಲ. ಗ್ರಂಥಗಳಷ್ಟು ಯೋಗ್ಯತೆಯು ಇವುಗಳಿಗೆ ಇಲ್ಲದಿದ್ದರೂ ಇವುಗಳಲ್ಲಿಯ ವಿಷಯಗಳ ಮಹತ್ವವು, ಅಥವಾ ರುಚಿಯು, ಕೇವಲ ಕಾಲಮಹಿಮೆಯಿಂದ ಕಡಿಮೆಯಾಗಲಾರದು; ಆದುದರಿಂದ ಮಾಸಪತ್ರಿಕೆಗಳು ಗ್ರಂಥಗಳಂತೆ ಸ್ಥಿರವಾಗಿ ರಕ್ಷಿಸಲ್ಪಡುತ್ತವೆ; ಅತ ಏವ, ಚಿರಂಜೀವಿಗಳಾಗಿರುತ್ತವೆ. ಇನ್ನೊಂದು ಅಂಶವೇನೆಂದರೆ, ವರ್ತಮಾನ ಪತ್ರಿಕೆಗಳು ಪ್ರಾತಃಕಾಲ, ಸಾಯಂಕಾಲ ಹೊರಡುವ ದಿನಚರಿಯ ಅಥವಾ ವಾರಪತ್ರಿಕೆಗಳಾಗಿರುತ್ತವೆ; ಆದರೆ ಮಾಸಪತ್ರಿಕೆಗಳು ಪಾಕ್ಷಿಕ, ಮಾಸಿಕ, ತ್ರೈಮಾಸಿಕ, ಷಾಣ್ಮಾಸಿಕ – ಇಷ್ಟೇ ಅಲ್ಲ – ವಾರ್ಷಿಕವಾಗಿ ಸಹ ಇರುತ್ತವೆ. ತಾತ್ಪರ್ಯವೇನೆಂದರೆ, ವರ್ತಮಾನ ಪತ್ರಿಕೆಗಳಿಗಿಂತ ಮಾಸಪತ್ರಿಕೆಗಳು ಪ್ರಕಟವಾಗುವ ಕಾಲಾವಧಿಯು ಹೆಚ್ಚಾಗಿರುವುದರಿಂದ ಮಾಸಪತ್ರಿಕೆಗಳಲ್ಲಿಯ ಲೇಖನಗಳು ಪರಿಪಕ್ವವಾದ ವಿಚಾರಗಳಿಂದ ಯುಕ್ತವಾಗಿರುತ್ತವೆ. ಮತ್ತೊಂದು ಅಂಶವೇನೆಂದರೆ, ವರ್ತಮಾನಪತ್ರಿಕೆಯು ಬಿಡಿ ಕಾಗದಗಳ ರೂಪದಿಂದ ಸಂಚಾರ ಮಾಡುತ್ತದೆ. ಮಾಸಪತ್ರಿಕೆಯು ಪುಸ್ತಕ ರೂಪದಿಂದ ಹೊರಡುತ್ತದೆ. ಆದರೆ ಇದೇನೂ ಅಂತಹ ದೊಡ್ಡ ವ್ಯತ್ಯಾಸವಲ್ಲ; ಮುಖ್ಯವಾಗಿ, ಇವೆರಡರಲ್ಲಿರುವ ವಿಷಯ ವಿವೇಚನಾ ಭೇದವೇ ಸರಿ. ಒಮ್ಮೊಮ್ಮೆ ವರ್ತಮಾನ ಪತ್ರಿಕೆಯಲ್ಲಿಯೂ ಚಿರಕಾಲಿಕ ವಿಷಯ ವಿವೇಚನೆಯಿರುತ್ತದೆ; ಈ ದೃಷ್ಟಿಯಿಂದ ನೋಡಿದರೆ, 'ಅರ್ಥಸಾಧಕ ಪತ್ರಿಕೆ'ಯು ಈಚೆಗೆ ೨–೩ ವರ್ಷಗಳಿಂದ ವಾರಪತ್ರಿಕೆಯಾಗಿದ್ದರೂ, ಬಿಡಿ ಕಾಗದಗಳ ರೂಪದಿಂದ ಸಂಚಾರ ಮಾಡುತ್ತಿದ್ದರೂ, ಅದು 'ಮಾಸಪತ್ರಿಕೆ'ಯೇ ಎಂದು ಹೇಳಬಹುದು. ಏಕೆಂದರೆ, ಅದರಲ್ಲಿಯ ವಿಷಯಗಳು ಮಾಸಪತ್ರಿಕೆಗೆ ಒಪ್ಪುವಂಥವು – ಎಂದರೆ, ಚಿರಕಾಲಿಕವಾಗಿವೆ.

ಇನ್ನು, ಸಾಹಿತ್ಯಾಭಿವೃದ್ಧಿಗೆ ಮಾಸಪತ್ರಿಕೆಗಳು ಎಷ್ಟರಮಟ್ಟಿಗೆ ಪ್ರಯೋಜನಕರವಾಗಿರುವುವೆಂಬುವನ್ನು ಸ್ವಲ್ಪ ವಿವೇಚಿಸಿ, ಕನ್ನಡ ಮಾಸಪತ್ರಿಕೆಗಳ ಸದ್ಯಃಸ್ಥಿತಿಯ ಕಡೆಗೆ ತಿರುಗುವ. ಗ್ರಂಥಭಂಡಾರದ ಅಭಿವೃದ್ಧಿಗೆ ಮಾಸಪತ್ರಿಕೆಗಳು ಸರ್ವೋತ್ಕೃಷ್ಟವಾದ ಸಾಧನಗಳಾಗಿವೆ. ಏಕೆಂದರೆ, ಪ್ರತಿವರ್ಷ ನೂರಾರು ನೂತನ ಗ್ರಂಥಗಳು ಮಾಸಪತ್ರಿಕೆಗಳ ದ್ವಾರದಿಂದ ಹೊರಬಿದ್ದು, ವಾಚಕರ ಕೈಸೇರುವುದಕ್ಕೆ ಅನಾಯಾಸವಾಗಿ ಸಂಧಿಯು ದೊರೆಯುತ್ತದೆ. ಇದಲ್ಲದೆ, ಮಾಸಪತ್ರಿಕೆಗಳಿಂದ ಇನ್ನೊಂದು ವಿಶೇಷವಾದ ಪ್ರಯೋಜನವುಂಟು; ಅದೇನೆಂದರೆ, ಪುಸ್ತಕ ಭಂಡಾರದೊಳಗಿನ ದೊಡ್ಡ ದೊಡ್ಡ ಗ್ರಂಥಗಳನ್ನು ಓದುವುದಕ್ಕೆ ಸಾಮಾನ್ಯ ವಾಚಕರಿಗೆ ಮನಸ್ಸು ಹೋಗುವುದಿಲ್ಲ; ಸಾಮಾನ್ಯ ಜನಸಮೂಹವು ಕೇವಲ ತಮ್ಮ ತಮ್ಮ ಹೊಟ್ಟೆಯ ಪಾಡಿನ ವಿಷಯಗಳಲ್ಲಿಯೇ ಯಾವಾಗಲೂ ಮಗ್ನವಾಗಿರುತ್ತದೆ; ಬಹು ಜನರಿಗೆ ವಾಚನಾಭಿರುಚಿಯೇ ಇರುವುದಿಲ್ಲ. ಇಷ್ಟಕ್ಕೂ ಅವರಿಗೆ ಓದುವುದಕ್ಕೆ ವಿರಾಮವು ಇರುವುದಿಲ್ಲ. ಗ್ರಂಥಗಳನ್ನು ಮನನಪೂರ್ವಕ ಪರಿಶೀಲನ ಮಾಡುವ ವಿದ್ಯಾವ್ಯಾಸಂಗಿಯು ಸಾವಿರಕ್ಕೊಬ್ಬನು ಸಹ ದೊರೆಯುವುದು ದುರ್ಲಭ. ಸಾರಾಂಶ, ಸಾಮಾನ್ಯ ಜನ ಸಮೂಹವು ವಿದ್ಯಾಪರಾಙ್ಮುಖವಾಗಿರುತ್ತದೆ. ಆದುದರಿಂದ, ಮಗುವು ಬೆಳೆದು ದೊಡ್ಡ ದೊಡ್ಡ ತಂಬಿಗೆಯ ತುಂಬ ಹಾಲನ್ನು ಕುಡಿಯುವ ಸಾಮರ್ಥ್ಯವು ಬರುವುದಕ್ಕಾಗಿ ಬಾಲ್ಯದಲ್ಲಿ ಅದಕ್ಕೆ ತೀರ್ಥದ ಸವಟಿನಿಂದ ಹೇಗೆ ಹಾಲನ್ನೆರೆದು ಶಕ್ತಿವಂತನನ್ನಾಗಿ ಮಾಡಬೇಕಾಗುತ್ತದೆಯೋ, ಹಾಗೆಯೇ ದೊಡ್ಡ ದೊಡ್ಡ ಗ್ರಂಥಗಳಲ್ಲಿಯ ವಿಷಯಗಳನ್ನು ಸಾರರೂಪದಿಂದಲೂ, ಮನೋರಂಜಕವಾಗಿಯೂ 'ಮಾಸಿಕ ಪುಸ್ತಕ'ಗಳ ದ್ವಾರಾ ಅಜ್ಞರಿಗೆ ನಿವೇದಿಸಿ ಅವರನ್ನು ಮೆಲ್ಲ ಮೆಲ್ಲನೆ ಜ್ಞಾನಸಂಪನ್ನರನ್ನಾಗಿ ಮಾಡಬೇಕಾಗಿದೆ.

ಈಗ ನಮ್ಮ ಕರ್ನಾಟಕದಲ್ಲಿ ಸುಮಾರು ೪೦–೪೨ ಕನ್ನಡ ಮಾಸಪತ್ರಿಕೆಗಳು ಪ್ರಚಾರದಲ್ಲಿವೆ. ಇವುಗಳನ್ನು ಪ್ರಾಂತ್ಯವಾರು ವಿಂಗಡಿಸಿದರೆ, – ಮೈಸೂರು ಪ್ರಾಂತದಲ್ಲಿ ೨೦, ಧಾರವಾಡ ಪ್ರಾಂತದಲ್ಲಿ ೧೮, ಮಂಗಳೂರು ಪ್ರಾಂತದಲ್ಲಿ ೪ – ಈ ಪ್ರಕಾರ ಇವೆ. ಇನ್ನು, ಇವುಗಳನ್ನು ಕಾಲದೃಷ್ಟಿಯಿಂದ ವಿಂಗಡಿಸಿದರೆ, ಮಾಸಿಕಗಳು ೩೭, ತ್ರೈಮಾಸಿಕಗಳು ೪, ಷಾಣ್ಮಾಸಿಕ ೧,

– ಈ ರೀತಿ ಇವೆ. ವಿಷಯ ದೃಷ್ಟಿಯಿಂದ ವಿಂಗಡಿಸಿದರೆ, ಶಿಕ್ಷಣ ವಿಷಯಕ ಮಾಸಪತ್ರಿಕೆಗಳು ೫ (ಶಾಲಾ ಪತ್ರಕ, ವಿದ್ಯಾದಾಯಿನಿ, ಬೋಧಿನಿ, ಉಪಾಧ್ಯಾಯ ಸರ್ವಸ್ವ, ಪ್ರಾಥಮಿಕ ಶಿಕ್ಷಕ); ಕಾವ್ಯವಿಷಯಕ ಮಾಸಪತ್ರಿಕೆಗಳು ೨ (ಕರ್ನಾಟಕ ಕಾವ್ಯಕಲಾನಿಧಿ, ಪ್ರಭಾತ); ಭಾಷಾವಿಷಯಕ ಮಾಸಪತ್ರಿಕೆ ೧ (ಸಾಹಿತ್ಯ ಪರಿಷತ್ಪತ್ರಿಕೆ); ವಿಜ್ಞಾನ ವಿಷಯಕ ಮಾಸಪತ್ರಿಕೆ ೧ (ವಿಜ್ಞಾನ); ಸಾಮಾಜಿಕ ಮಾಸಪತ್ರಿಕೆ ೧ (ಪೌರ ಮತ್ತು ಸಾಮಾಜಿಕ ಪತ್ರಿಕೆ); ಕಾನೂನು ವಿಷಯಕ ಮಾಸಪತ್ರಿಕೆ ೧ (ಲಾ ಗೆಜೆಟ್); ಧಾರ್ಮಿಕ ಮಾಸಪತ್ರಿಕೆಗಳು ೫ (ಜಿನವಿಜಯ, ವೀರಶೈವ ಧರ್ಮತರಂಗಿಣಿ, ಪರಮಾರ್ಥ, ವಿವೇಕೋದಯ, ಸುಪಂಥ); ವೈದ್ಯವಿಷಯಕ ಮಾಸಪತ್ರಿಕೆ ೧ (ವೈದ್ಯಸಿಂಧು); ವಿನೋದವಿಷಯಕ ಮಾಸಪತ್ರಿಕೆ ೧ (ವಿಕಟಪ್ರತಾಪ); ಕೃಷಿಕರ್ಮ ಮತ್ತು ಸಹಕಾರ ವಿಷಯಕ ಮಾಸಪತ್ರಿಕೆಗಳು ೨ (ಒಕ್ಕಲುತನವೂ ಸಹಕಾರತನವೂ, ಕನ್ನಡ ಸಹಕಾರ); ವಿವಿಧ ವಿಷಯಕ ಮಾಸಪತ್ರಿಕೆಗಳು ೧೮ (ವಾಗ್ಭೂಷಣ, ಸಚಿತ್ರ ಭಾರತ, ಕರ್ನಾಟಕ ಗ್ರಂಥಮಾಲೆ, ಪ್ರಬುದ್ಧ ಕರ್ನಾಟಕ, ವಾಗ್ದೇವಿ, ಪ್ರಬೋಧ, ಆನಂದಚಂದ್ರಿಕೆ, ಸದ್ಬೋಧಚಂದ್ರಿಕೆ, ಮಧುರವಾಣಿ, ಕರ್ನಾಟಕ ಚಂದ್ರಿಕೆ, ಶ್ರೀಕೃಷ್ಣಸೂಕ್ತಿ, ಆನಂದ, ಕೋಗಿಲೆ, ಮಲೆನಾಡು ಸಮಾಚಾರ, ಹಿತಚಿಂತಕ, ಜ್ಞಾನಾಂಜನ, ಡೆಕ್ಕನ ಕಾಲೇಜ ಕ್ವಾರ್ಟರ್ಲಿ, ಕರ್ನಾಟಕ ಕಾಲೇಜ ಕ್ವಾರ್ಟರ್ಲಿ); ಸ್ತ್ರೀಯರಿಗೋಸ್ಕರ ಮಾಸಪತ್ರಿಕೆಗಳು ೨ (ನಂದಿನಿ, ಮಹಿಳಾಸಖಿ); ಬಾಲಕರಿಗೋಸ್ಕರ ಮಾಸಪತ್ರಿಕೆ ೧ (ವಿದ್ಯಾರ್ಥಿ) – ಈ ಪ್ರಕಾರ ಇರುತ್ತವೆ. ಆದರೆ ವ್ಯಾಪಾರ, ಔದ್ಯೋಗಿಕ (ಕೈಗಾರಿಕೆ), ರಾಜಕೀಯ, ಮಾನಸಿಕ ಶೋಧ (Spiritualism), ಆಟ, ಅಂಗಸಾಧನೆ, ನಾಟ್ಯ, ಸಮಾಲೋಚಕ (Review) ಮೊದಲಾದ ವಿಷಯಗಳನ್ನು ಸ್ವತಂತ್ರವಾಗಿ ವಹಿಸಿರುವ ಮಾಸಪತ್ರಿಕೆಗಳು ನಮ್ಮ ಕನ್ನಡದಲ್ಲಿ ಇಲ್ಲವೆಂದು ಹೇಳುವುದಕ್ಕೆ ವಿಷಾದವಾಗುತ್ತದೆ.

ಇಂಗ್ಲೆಂಡ್ ಮತ್ತು ಸ್ಕಾಟ್‌ಲೆಂಡ್ ದೇಶಗಳಲ್ಲಿ ಒಟ್ಟು ೨,೭೯೫ ಮಾಸಪತ್ರಿಕೆಗಳು ಇವೆ. ಅವುಗಳಲ್ಲಿ ಕೇವಲ ವ್ಯಾಪಾರ ವಿಷಯಕವಾದ ಮಾಸಪತ್ರಿಕೆಗಳು ೩೩೮, ಬೇರೆ ಬೇರೆ ಕಸಬು ಕೈಗಾರಿಕೆಗಳ ಮಾಸಪತ್ರಿಕೆಗಳು ೬೯೧ ಇರುತ್ತವೆ. ಇದೇ ಮೇರೆಗೆ ಪ್ರತಿಯೊಂದು ವಿಷಯಕ್ಕೂ ನೂರುಗಟ್ಟಲೆ ಮಾಸಪತ್ರಿಕೆಗಳಿರುವುದಲ್ಲದೆ ವಿವಿಧ ವಿಷಯಕ ಮಾಸಪತ್ರಿಕೆಗಳೂ ಹೇರಳವಾಗಿವೆ. ಇಂಗ್ಲೆಂಡ್ ಮತ್ತು ಸ್ಕಾಟ್‌ಲೆಂಡ್ ದೇಶಗಳೆರಡರಲ್ಲಿಯೂ ಸೇರಿ ೩ ಕೋಟಿ ಜನಸಂಖ್ಯೆಯಿದೆ. ಕರ್ನಾಟಕದಲ್ಲಿ ೧ ಕೋಟಿ ಜನ ಸಂಖ್ಯೆಯಿದೆ. ಈ ಜನಸಂಖ್ಯೆಯ ದೃಷ್ಟಿಯಿಂದ ನೋಡಿದರೆ, ಕರ್ನಾಟಕದಲ್ಲಿ ೯೦೦ ಮಾಸಪತ್ರಿಕೆಗಳು ಇರಬೇಕಾದುದು ನ್ಯಾಯವಾಗಿದೆ. ಆದರೆ ೯೦೦ ಒತ್ತಟ್ಟಿಗಿರಲಿ, ನೂರು ಸಹ ಇಲ್ಲ! ಹರಕು ಮುರುಕು ಯಾವತ್ತೂ ಕನ್ನಡ ಮಾಸಪತ್ರಿಕೆಗಳನ್ನೆಣಿಸಿದರೂ ೫೦ ಕೂಡ ಆಗುವುದಿಲ್ಲ!!

ಇನ್ನು ವಿಷಯವಾರ, ಕನ್ನಡ ಮಾಸಪತ್ರಿಕೆಗಳ ಗುಣದೋಷಗಳನ್ನು ನಿರೂಪಿಸುವ.

(೧) **ಕೃಷಿಕರ್ಮ ಮತ್ತು ಸಹಕಾರವಿಷಯಕ ಮಾಸಪತ್ರಿಕೆಗಳು**:– ಭಾರತೀಯರಾದ ನಾವು ಕೃಷಿಯಿಂದಲೇ ಜೀವಿಸುವವರು; ಶೇಕಡ ಆರರಷ್ಟು ಜನರು ನಮ್ಮ ದೇಶದಲ್ಲಿ ಬೇಸಾಯವನ್ನು ಮಾಡುತ್ತಾರೆ – ಎಂದು ಗರ್ವದಿಂದ ನಾವು ಹೇಳುತ್ತಿರುವೆವು. ಆದರೆ ಕೃಷಿಶಾಸ್ತ್ರದ ಸೋಪಪತ್ತಿಕ ಜ್ಞಾನವನ್ನು ನಮ್ಮ ದೇಶದ ರೈತರಲ್ಲಿ ಹರಡಿ, ಅದರಿಂದ ಅವರ ಆದಾಯವನ್ನು ಹೆಚ್ಚಿಸಿ, ದೇಶದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಬೇಕೆಂಬ ಇಚ್ಛೆಯು ನಮ್ಮ ಕರ್ನಾಟಕ ದೇಶೋದ್ಧಾರಕರ ಹೃದಯದಲ್ಲಿ ಇನ್ನೂ ಉದಯವಾಗಿಲ್ಲವೆಂದು ದುಃಖದಿಂದ ಹೇಳಬೇಕಾಗಿದೆ. ಏಕೆಂದರೆ, ಧಾರವಾಡ ಪ್ರಾಂತದಲ್ಲಿ, "ಒಕ್ಕಲತನವೂ ಸಹಕಾರತನವೂ", ಮೈಸೂರು ಪ್ರಾಂತದಲ್ಲಿ, "ಅರ್ಥಸಾಧಕ ಪತ್ರಿಕೆ' ಎಂಬೆರಡು ಸರಕಾರೀ ಪತ್ರಿಕೆಗಳ ಹೊರತು ಕನ್ನಡದಲ್ಲಿ ಇನ್ನಾವ ಕೃಷಿಕರ್ಮ ವಿಷಯಕ ಮಾಸಪತ್ರಿಕೆಯೂ ಇರುವುದಿಲ್ಲ. ಕನ್ನಡದಲ್ಲಿ, ಸಹಕಾರವಿಷಯಕ ತ್ರೈಮಾಸಿಕ ಪತ್ರಿಕೆಯೊಂದು ಸಹಕಾರಿಯಾಗಿ ಮೈಸೂರು ಪ್ರಾಂತದಲ್ಲಿ ಹೊರಡುತ್ತದೆ. ಆದರೆ ಈ ಸಹಕಾರ ವಿಷಯದ ಮಹಿಮೆಯನ್ನರಿತು ಪುತ್ತೂರು ಮತ್ತು ಧಾರವಾಡದ ಮುಂದಾಳುಗಳು ಶೀಘ್ರವಾಗಿಯೇ "ಕನ್ನಡ ಸಹಕಾರ" ಎಂಬ ಮಾಸಪತ್ರಿಕೆಯನ್ನು ಹೊರಡಿಸುವರೆಂದು ತಿಳಿಸಲು ಆನಂದವಾಗುತ್ತದೆ.

(೨) **ಶಿಕ್ಷಣ ವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ಕನ್ನಡದಲ್ಲಿ ೫ ಮಾಸಪತ್ರಿಕೆಗಳಿರುತ್ತವೆಂದು ಹಿಂದೆಯೇ ಹೇಳಿದ್ದೇವೆ. ಇವುಗಳಲ್ಲಿ ಶಾಲಾಪತ್ರಕ, ವಿದ್ಯಾದಾಯಿನಿ – ಇವೆರಡೂ ಸರಕಾರೀ ಪತ್ರಿಕೆಗಳಾಗಿವೆ. "ಪ್ರಾಥಮಿಕ ಶಿಕ್ಷಕ" ಎಂಬ ನೂತನ ಮಾಸಪತ್ರಿಕೆಯ ಸಂಪಾದಕತ್ವವನ್ನು ಶಿಕ್ಷಣ ವಿಷಯದಲ್ಲಿ ಚೆನ್ನಾಗಿ ಅನುಭವವುಳ್ಳ ಶಿಕ್ಷಕರೇ ವಹಿಸಿರುವುದರಿಂದ ಅಲ್ಪಾವಧಿಯಲ್ಲಿಯೇ ಇದು ಲೋಕಪ್ರಿಯವಾಗಬಹುದೆಂದು ತೋರುತ್ತದೆ.

(೩) **ಕಾವ್ಯವಿಷಯಕ ಮಾಸಪತ್ರಿಕೆಗಳು** – ಈ ವಿಷಯದಲ್ಲಿ 'ಕರ್ನಾಟಕ ಕಾವ್ಯಕಲಾನಿಧಿ'ಯನ್ನು ಎಷ್ಟು ಹೊಗಳಿದರೂ ತೀರದು. ಈ ಮಾಸಪತ್ರಿಕೆಯ ಸಂಪಾದಕರು ಪ್ರಾಚೀನ ಕಾವ್ಯಗ್ರಂಥಗಳನ್ನು ಪರಿಶೋಧಿಸಿ, ಮುದ್ರಿಸಿ, ಕನ್ನಡ ವಾಙ್ಮಯಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಈಚೆಗೆ ಧಾರವಾಡದಲ್ಲಿ 'ಪ್ರಭಾತ' ಎಂಬುದೊಂದು ನೂತನ ಕಾವ್ಯ ಮಾಸಪತ್ರಿಕೆಯು ಹೊರಟಿದೆ. ಇದರಲ್ಲಿ ಆಧುನಿಕ ಕವಿಗಳ ಕವಿತೆಗಳು ಪ್ರಕಟವಾಗುತ್ತಿವೆ.

(೪) **ಭಾಷಾವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ಕರ್ನಾಟಕದಲ್ಲಿರುವುದು "ಸಾಹಿತ್ಯ ಪರಿಷತ್ಪತ್ರಿಕೆ"ಯೊಂದೇ. ಇದು ತನ್ನ ವಿಶಾಲವಾದ ಮತ್ತು ಗಂಭೀರವಾದ ಕಾರ್ಯಕ್ಷೇತ್ರವನ್ನು ಜ್ಞಾಪಕದಲ್ಲಿಟ್ಟುಕೊಂಡು, ಕನ್ನಡದ ಏಕೀಕರಣಕ್ಕನುರೂಪವಾದ ವ್ಯಾಕರಣ ರಚನೆ, ಕೋಶ, ಪಾರಿಭಾಷಿಕ ಶಬ್ದಗಳ ನಿರ್ಣಯ, ಕರ್ನಾಟಕದ ಬೇರೆಬೇರೆ ಭಾಗಗಳಲ್ಲಿ ರೂಢವಾಗಿರುವ

ವಾಕ್ಪ್ರಚಾರಗಳ ಮತ್ತು ನಾಣ್ಣುಡಿಗಳ ಸಂಗ್ರಹ, ಗದ್ಯರಚನಾ ಶಾಸ್ತ್ರದ ಅಧ್ಯಯನ, ಪದ್ಯದಲ್ಲಿ ಸುಧಾರಣೆ, ಕನ್ನಡಗ್ರಂಥ ಪರೀಕ್ಷಣ – ಮುಂತಾದ ವಿಷಯಗಳನ್ನು ಮಾತ್ರ ಕೈಕೊಂಡು ಕಾರ್ಯ ಮಾಡುವುದು ಅತ್ಯವಶ್ಯವಾಗಿದೆ.

(೫) **ವಿಜ್ಞಾನ ವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ಕರ್ನಾಟಕದಲ್ಲಿ, ಬೆಂಗಳೂರು 'ವಿಜ್ಞಾನ ಸಮಿತಿ'ಯಿಂದ ಹೊರಡುವ 'ವಿಜ್ಞಾನ' ಎಂಬುದೊಂದೇ ಮಾಸಪತ್ರಿಕೆಯಿದೆ. ಈ ಪತ್ರಿಕೆಯು ತನ್ನ ಧ್ಯೇಯವನ್ನು ಎದುರಿನಲ್ಲಿಟ್ಟುಕೊಂಡು, ಅದಕ್ಕನುರೂಪವಾಗಿ ಕೇವಲ ಕರ್ತವ್ಯಬುದ್ಧಿಯಿಂದಲೂ ಶ್ರದ್ಧೆಯಿಂದಲೂ ಕನ್ನಡಿಗರ ಸೇವೆಯನ್ನು ಮಾಡುತ್ತಿದೆ. ಇಡೀ ಕರ್ನಾಟಕದಲ್ಲಿ ಇಂತಹ ಸರ್ವಾಂಗ ಸುಂದರವಾದ ಮಾಸಪತ್ರಿಕೆಯೆಂದರೆ, ಇದೊಂದೇ ಸರಿ!

(೬) **ಸಾಮಾಜಿಕ ಮಾಸಪತ್ರಿಕೆಗಳು** – ಈ ವಿಷಯವಾಗಿ "ಪೌರ ಮತ್ತು ಸಾಮಾಜಿಕ ಪತ್ರಿಕೆ" ಎಂಬುದೊಂದು ಮಾಸಿಕ ಪುಸ್ತಕವು ಮೈಸೂರಲ್ಲಿ ಹೊರಡುತ್ತಿದೆ. ಇದರೊಳಗಿನ ವಿಷಯ ವಿವೇಚನೆಯನ್ನು ನೋಡಿದರೆ, ಇದು ತನ್ನ ಕರ್ತವ್ಯವನ್ನು ಅಂಜುತ್ತ ಅಂಜುತ್ತ ಮಾಡುತ್ತದೆಂದು ಹೇಳಬೇಕಾಗುತ್ತದೆ. ಸಾಮಾಜಿಕ ವಿಷಯಗಳನ್ನು ನಿರ್ಭೀತಿಯಿಂದಲೂ, ಖಂಡಿತವಾಗಿಯೂ, ಸಯುಕ್ತಿಕವಾಗಿಯೂ ಪ್ರತಿಪಾದಿಸಿದರೇನೇ ಈ ಪತ್ರಿಕೆಯ ಜನ್ಮವು ಸಾಫಲ್ಯವಾಗುವುದು; ಇಲ್ಲದಿದ್ದರೆ ಈ ಪತ್ರಿಕೆಯಿಂದ ಏನೂ ಪ್ರಯೋಜನವಾಗಲಾರದು.

(೭) **ಕಾನೂನು ವಿಷಯಕ ಮಾಸಪತ್ರಿಕೆಗಳು** – ಕಾಯಿದೆ ಕಾನೂನುಗಳ ಅಜ್ಞಾನದಿಂದ ಸಮಾಜದಲ್ಲಿ ಅನೇಕ ಪ್ರಮಾದಗಳುಂಟಾಗುತ್ತವೆ. ಆದುದರಿಂದ ಈ ವಿಷಯವಾಗಿ ಮಾಸಪತ್ರಿಕೆಗಳಿರುವುದು ಅತ್ಯಾವಶ್ಯಕವಾಗಿದೆ. ಬೆಂಗಳೂರಲ್ಲಿ "ಲಾ ಗೆಜೆಟ್" ಎಂಬುದೊಂದು ಮಾಸಪತ್ರಿಕೆಯು ಹೊರಡುತ್ತಿದ್ದಿತು. ಅದು ಈಗ ಬದುಕಿದೆಯೋ, ಇಲ್ಲವೋ ನಮಗೆ ಗೊತ್ತಿಲ್ಲ.

(೮) **ಧಾರ್ಮಿಕ ಮಾಸಪತ್ರಿಕೆಗಳು** – ಈ ವಿಷಯವಾಗಿ ಕನ್ನಡದಲ್ಲಿ ೫ ಮಾಸಪತ್ರಿಕೆಗಳಿವೆ. ವೀರಶೈವ ಧರ್ಮತರಂಗಿಣಿ, ಜಿನವಿಜಯ – ಈ ಮಾಸಪತ್ರಿಕೆಗಳ ಸಂಪಾದಕರು ವೀರಶೈವ, ಜೈನಮತಗಳ ತತ್ವಜ್ಞಾನವನ್ನೂ ಆಚಾರಗಳನ್ನೂ ಸಯುಕ್ತಿಕವಾಗಿ ವಿವರಿಸಿದರೆ, ನಮ್ಮ ವೀರಶೈವ, ಜೈನಬಂಧುಗಳಿಗೆ ಮಾತ್ರವೇ ಅಲ್ಲದೆ ಇತರರಿಗೂ ಪ್ರಯೋಜನವಾಗುವುದು. ಪರಮಾರ್ಥ, ಸುಪಂಥ, ವಿವೇಕೋದಯ – ಈ ಪತ್ರಿಕಾಕರ್ತರು ವೇದಾಂತ ವಿಷಯವನ್ನು ಸ್ವಾಮಿ ವಿವೇಕಾನಂದ, ರಾಮತೀರ್ಥರಂತೆ ಸುಲಭವಾದ ಶೈಲಿಯಿಂದ ಪ್ರತಿಪಾದಿಸುವ ಚಾತುರ್ಯವನ್ನು ಸಂಪಾದಿಸಬೇಕು.

(೯) **ಕಾದಂಬರೀ ವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ೨ ಪತ್ರಿಕೆಗಳಿವೆ. "ಸುರಸ ಗ್ರಂಥಮಾಲೆ"ಯು ಸುಪ್ರಸಿದ್ಧ ಕನ್ನಡ ಕಾದಂಬರೀಕಾರರಾದ ಶ್ರೀಯುತ ಗಳಗನಾಥರವರಿಂದ ಹೊರಡುತ್ತಿದೆಯೆಂದು ಹೇಳಿದರೆ ಸಾಕು. ಇದರ ಮನೋಹರತ್ವವನ್ನು ಬೇರೆ ವರ್ಣಿಸಬೇಕಾದುದಿಲ್ಲ. "ಕಾದಂಬರೀ ಸಂಗ್ರಹ" ಎಂಬ ಮಾಸಪತ್ರಿಕೆಯು ಮೈಸೂರು ಪ್ರಾಂತದಲ್ಲಿ ಹೊರಡುತ್ತಿದೆ. ಈ ಮಾಸ ಪತ್ರಿಕೆಗಳೆರಡರ ಸಂಪಾದಕರೂ ಇನ್ನು ಮುಂದಾದರೂ ಚಾಲುಕ್ಯ, ರಾಷ್ಟ್ರಕೂಟ, ಕಾಲಚೂರ್ಯ, ಹೊಯ್ಸಳಬಳ್ಳಾಳ, ದೇವಗಿರಿ ಯಾದವ, ವಿಜಯನಗರ, ಮೈಸೂರು – ಮುಂತಾದ ಕರ್ನಾಟಕ ರಾಜಮನೆತನಗಳ ಇತಿಹಾಸದ ಆಧಾರದಿಂದ ಐತಿಹಾಸಿಕ ಕಾದಂಬರಿಗಳನ್ನು ಬರೆಯುವುದು ಅವರ ಕರ್ತವ್ಯವಾಗಿದೆ.

(೧೦) **ವೈದ್ಯವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ಕರ್ನಾಟಕದಲ್ಲಿ "ವೈದ್ಯಸಿಂಧು" ಎಂಬುದೊಂದೇ ಮಾಸಪತ್ರಿಕೆಯಿದೆ. ಈ ಪತ್ರಿಕೆಯು ತನ್ನ ಕರ್ತವ್ಯವನ್ನು ಇನ್ನೂ ಶ್ರದ್ಧೆಯಿಂದ ಮಾಡಿದರೆ, ಅಲ್ಪಾವಧಿಯಲ್ಲಿಯೇ ಇದು ಲೋಕಪ್ರಿಯವಾಗಬಹುದು. ಈ ವಿಷಯವು ಎಲ್ಲರಿಗೂ ಅವಶ್ಯವಾದುದರಿಂದ, ವೈದ್ಯವಿಷಯಕವಾಗಿ ಕನ್ನಡದಲ್ಲಿ ಇನ್ನೂ ಅನೇಕ ಮಾಸಪತ್ರಿಕೆಗಳು ಹೊರಡುವುದು ಅಗತ್ಯವಾಗಿದೆ.

(೧೧) **ವಿನೋದ ವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ 'ವಿಕಟಪ್ರತಾಪ' ಎಂಬುದೊಂದು ಇದೆ. ಈ ಪತ್ರಿಕೆಯು ಇನ್ನು ಮುಂದಾದರೂ ಶ್ರೇಷ್ಠತರದ – ಎಂದರೆ, ಸಾತ್ವಿಕ ವಿನೋದಗಳನ್ನು ವ್ಯಕ್ತಮಾಡಲಾರಂಭಿಸಿದರೆ, ಲೋಕಮಾನ್ಯವಾಗಬಹುದು.

(೧೨) **ವಿವಿಧ ವಿಷಯಕ ಮಾಸಪತ್ರಿಕೆಗಳು** – ಈ ವಿಷಯವಾಗಿ ೧೭ ಮಾಸಪತ್ರಿಕೆಗಳಿರುತ್ತವೆಂದು ಹಿಂದೆಯೇ ಹೇಳಿದ್ದೇವೆ. ವಿವಿಧ ವಿಷಯಕ ಮಾಸಪತ್ರಿಕೆಗಳ ಕಾರ್ಯಕ್ಷೇತ್ರದಲ್ಲಿ, ಕಾದಂಬರಿ, ಕಾವ್ಯ, ಚರಿತ್ರ, ಆಖ್ಯಾಯಿಕೆ, ವಾಙ್ಮಯಾತ್ಮಕ ಚರ್ಚೆ, ಐತಿಹಾಸಿಕ ನಿರೂಪಣ, ಸಾಮಾಜಿಕ ನಿಬಂಧ, ಶಾಸ್ತ್ರೀಯ (ವಿಜ್ಞಾನ) ವಿಷಯ ನಿವೇದನ, ಪ್ರವಾಸ ವರ್ಣನ, ಪಾಶ್ಚಾತ್ಯ ದೇಶಗಳಲ್ಲಿಯ ಸಮಾಜ ಮತ್ತು ಸಂಘಗಳ ವೃತ್ತಾಂತ, ಭಿನ್ನಪ್ರಾಂತೀಯ ವಾಙ್ಮಯ, ಸದ್ಯಃಸ್ಥಿತಿಯ ನಿರೂಪಣ – ಮುಂತಾದ ವಿಷಯಗಳು ಅಂತರ್ಭೂತವಾಗುತ್ತವೆ. ಈ ದೃಷ್ಟಿಯಿಂದ ನೋಡಿದರೆ, ವಾಗ್ಭೂಷಣ, ಕರ್ನಾಟಕ ಗ್ರಂಥಮಾಲೆ, ಸಚಿತ್ರ ಭಾರತ, ಪ್ರಬುದ್ಧ ಕರ್ನಾಟಕ, ವಾಗ್ದೇವಿ, ಪ್ರಬೋಧ, ಶ್ರೀಕೃಷ್ಣಸೂಕ್ತಿ, ಮಧುರವಾಣಿ – ಇವು ಚೆನ್ನಾಗಿ ಕೆಲಸ ಮಾಡಿವೆ, ಈಗಲೂ ಮಾಡುತ್ತಿವೆ. ಇವುಗಳಲ್ಲಿಯೂ 'ಪ್ರಬುದ್ಧ ಕರ್ನಾಟಕ' ಎಂಬ ನೂತನ ಮಾಸಪತ್ರಿಕೆಯನ್ನು ನೋಡಿ, ನಮ್ಮ ಮನಸ್ಸಿಗೆ ಬಹು ಸಂತೋಷವಾಗಿದೆ. ಇದರ ಮೊದಲನೆಯ ಸಂಚಿಕೆಯಿಂದ ವ್ಯಕ್ತವಾಗುವುದೇನೆಂದರೆ – ಈಗ ಜಗತ್ತಿನಲ್ಲಿ ಕನ್ನಡಿಗರಾದ ನಮ್ಮ ಸ್ಥಿತಿಯೇನು? ನಮಗೆ ಎಷ್ಟರ ಮಟ್ಟಿಗೆ ಮಾನವಿದೆ? ನಮ್ಮ ಅವಸ್ಥೆಯು ಸ್ಪೃಹಣೀಯವಾಗಿದೆಯೇ? ಇಂತಹ ಸ್ಥಿತಿಯು ನಮಗೊದಗುವುದಕ್ಕೆ ಕಾರಣವೇನು? ಈ ನಮ್ಮ ದುಃಸ್ಥಿತಿಯ ನಿವಾರಣೆಗೋಸ್ಕರ ಯೋಚಿಸುವ ಉಪಾಯಗಳಿಂದ ಎಷ್ಟರಮಟ್ಟಿಗೆ

ಕಾರ್ಯತಃ ಕೆಲಸವಾಗುತ್ತಿದೆ? - ಎಂಬಿವೇ ಮೊದಲಾದ ಪ್ರಶ್ನೆಗಳನ್ನು ಕುರಿತು ಈ "ಪ್ರಬುದ್ಧ ಕರ್ಣಾಟಕ" ಪತ್ರಿಕೆಯು ಚರ್ಚಿಸುವುದಾಗಿ ತೋರುತ್ತದೆ. ಈ ವಿಧದ ಸದ್ಯಃಸ್ಥಿತಿಯ ಚರ್ಚೆಯು ಪ್ರತಿಯೊಂದು ವಿವಿಧ ವಿಷಯಕ ಮಾಸಪತ್ರಿಕೆಯಲ್ಲಿಯೂ ಇದ್ದೇ ತೀರಬೇಕು.

(೧೩) **ಸ್ತ್ರೀಯರಿಗೋಸ್ಕರ ಮಾಸಪತ್ರಿಕೆಗಳು** - ಈ ವಿಷಯವಾಗಿ ನಂದಿನಿ, ಮಹಿಳಾಸಖಿ ಎಂಬೆರಡು ಪತ್ರಿಕೆಗಳಿರುತ್ತವೆ. ಇವುಗಳಲ್ಲಿ "ನಂದಿನಿ" ಪತ್ರಿಕೆಯೊಂದು ತನ್ನ ಧ್ಯೇಯಕ್ಕನುರೂಪವಾಗಿ ಚೆನ್ನಾಗಿ ಕೆಲಸ ಮಾಡುತ್ತಿದೆ.

(೧೪) **ಬಾಲಕರಿಗೋಸ್ಕರ ಮಾಸಪತ್ರಿಕೆಗಳು** - ಈ ವಿಷಯವಾಗಿ ಕರ್ಣಾಟಕದಲ್ಲಿ ಮಾಸಪತ್ರಿಕೆಗಳೇ ಇಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಧಾರವಾಡದಲ್ಲಿ ಮೊನ್ನೆ ಉತ್ಸಾಹಶಾಲಿಗಳಾದ ತರುಣರೊಬ್ಬರು ಬಾಲಕರಿಗೋಸ್ಕರ ' ವಿದ್ಯಾರ್ಥಿ' ಎಂಬುದೊಂದು ಮಾಸಪತ್ರಿಕೆಯನ್ನು ಹೊರಡಿಸಿದ್ದಾರೆ.

ವ್ಯಾಪಾರ ವಿಷಯಕ, ಔದ್ಯೋಗಿಕ, ರಾಜಕೀಯ, ಮಾನಸಿಕ ಶೋಧ ವಿಷಯಕ, ಸಮಾಲೋಚಕ, ಆಟ, ಅಂಗಸಾಧನೆ ವಿಷಯಕ, ನಾಟ್ಯ ವಿಷಯಕ ಮಾಸ ಪತ್ರಿಕೆಗಳು ಕರ್ಣಾಟಕದಲ್ಲಿ ಇಲ್ಲವೇ ಇಲ್ಲವೆಂದು ಪದೇ ಪದೇ ಹೇಳುವ ಕಾರಣವಿಲ್ಲ.

ಕರ್ಣಾಟಕದಲ್ಲಿಯ ಮಾಸಪತ್ರಿಕೆಗಳ ಕೊರತೆಯನ್ನು ಹೋಗಲಾಡಿಸಬೇಕಾದರೆ ಸಂಘಶಕ್ತಿಯಿಂದ ಕೆಲಸ ಮಾಡುವುದು ಅವಶ್ಯಕವಾಗಿದೆ. ಷೇರುಗಳಿಂದ ಬಂಡವಾಳವನ್ನು ಶೇಖರಿಸಿಕೊಂಡ ರೆಜಿಸ್ಟರ್ಡ್ ಕಂಪೆನಿಯಿಂದ ಕನ್ನಡದಲ್ಲಿ ಮಾಸಪತ್ರಿಕೆಯು ಒಂದಾದರೂ ಹೊರಟಿಲ್ಲ. ಇವುಗಳ ಪ್ರಚಾರಕ್ಕೋಸ್ಕರ ದೊಡ್ಡ ದೊಡ್ಡ ಪ್ರಕಟನೆಗಳನ್ನು ಕೊಡುವುದಕ್ಕೂ, ತಿರುಗುವ ಏಜೆಂಟರನ್ನು ನೇಮಿಸುವುದಕ್ಕೂ, ರೈಲ್ವೆ ಸ್ಟೇಷನ್ನುಗಳಲ್ಲಿ 'ವ್ಹೀಲರ್' ಕಂಪೆನಿಯಂತೆ ಅಂಗಡಿಗಳನ್ನು ಸ್ಥಾಪಿಸುವುದಕ್ಕೂ, ಕರ್ಣಾಟಕದ ದೊಡ್ಡದೊಡ್ಡ ಪಟ್ಟಣಗಳಲ್ಲಿ ಮಾಸಪತ್ರಿಕೆಯ ಸ್ಥಾನಿಕ ವಿಕ್ರಯ ಶಾಖೆಗಳನ್ನು ಏರ್ಪಡಿಸುವುದಕ್ಕೂ, ಮಾಸಪತ್ರಿಕೆಯ ಅಂತರಂಗ ಬಹಿರಂಗಗಳನ್ನು ಪ್ರಕಟಿಸುವುದಕ್ಕೋಸ್ಕರ ಉತ್ಸಾಹಶಾಲಿಗಳೂ ದಕ್ಷರೂ ಆದ ಪ್ರವಾಸಿಗಳನ್ನು 'ಕ್ಯಾಮೆರಾ' ಕೊಟ್ಟು, ಪ್ರವಾಸಕ್ಕೆ ಕಳುಹಿಸುವುದಕ್ಕೂ ಹಣವನ್ನು ನೀರಿನಂತೆ ಖರ್ಚು ಮಾಡಬೇಕಾಗುತ್ತದೆ. ಆದುದರಿಂದ ದೊಡ್ಡ ಬಂಡವಾಳವನ್ನುಂಟುಮಾಡಿಕೊಳ್ಳುವುದು ಮೊದಲನೆಯ ಕೆಲಸ. ಇದಲ್ಲದೆ ಮಾಸಪತ್ರಿಕೆಯ ಸಂಪಾದಕರು ಮಹಾಬುದ್ಧಿಶಾಲಿಗಳೂ, ಮರ್ಮಜ್ಞರೂ, ಗುಣದೋಷಜ್ಞರೂ, ಕುಶಲ ಲೇಖಕರೂ, ಇತಿಹಾಸಜ್ಞರೂ, ತತ್ತ್ವಜ್ಞಾನಿಗಳೂ, ಮನುಷ್ಯ ಸ್ವಭಾವವನ್ನು ಬಲ್ಲವರೂ ಇರಬೇಕು. ಈ ಇಪ್ಪತ್ತನೆಯ ಶತಮಾನದಲ್ಲಿ ನಿಜವಾದ 'ಜಗದ್ಗುರು' ಗಳೆಂದರೆ, ಪತ್ರಿಕೆಯ ಸಂಪಾದಕರೇ ಸರಿ. ಈಗಿನ ಕಾಲದಲ್ಲಿ ಸಮಾಜ ನಿಯಮನ ಕಾರ್ಯವು ಇವರ ವಶಕ್ಕೆ ಬಂದಿದೆ. ಆದುದರಿಂದ ಈ ಜಗದ್ಗುರುಗಳು ತಮ್ಮ ಲೋಕೋದ್ಧಾರದ ಕಾರ್ಯಪ್ರೀತ್ಯರ್ಥವಾಗಿ, ವರ್ಷಾನುವರ್ಷ "ವಾಙ್ಮಯಸೇವಾ" ರೂಪವಾದ ಉಗ್ರ ತಪಶ್ಚರ್ಯವನ್ನು ಮಾಡುವುದಕ್ಕೆ ಸಿದ್ಧರಾಗಿರಬೇಕು. ಇಂತಹ ಅಧಿಕಾರಯುಕ್ತ ಪ್ರತಿಭಾ ಸಂಪನ್ನರ ಲೆಕ್ಕಣಿಕೆಯಿಂದ ಹೊರಡುವ ಜ್ಞಾನಾಮೃತವನ್ನು ಪ್ರತಿನಿತ್ಯವೂ ಹೊಟ್ಟೆಯ ಪಾಡಿನ ಹೋರಾಟದಿಂದ  ಬೇಸರಗೊಂಡ ವಾಚಕ ಸಮೂಹವು ಆನಂದದಿಂದ ಸೇವಿಸುವುದು.

ಇನ್ನು, ಮಾಸಪತ್ರಿಕೆಯ ಭಾಷೆಯು ಕನ್ನಡದ ಏಕೀಕರಣಕ್ಕನುರೂಪವಾಗಿಯೂ ಸುಲಭವಾಗಿಯೂ ಇರಬೇಕು. ಭಾಷಾಶೈಲಿಯು ಸುಂದರವಾಗಿರಬೇಕು; ಹಳೆಯ ಪೌರಾಣಿಕ ಭಾಷೆಯಿಂದ ಬರೆಯಕೂಡದು. ಇಲ್ಲಿ ಹೇಳತಕ್ಕ ಇನ್ನೊಂದು ಮುಖ್ಯವಾದ ಅಂಶವೇನೆಂದರೆ, ಯಾವಾಗಲೂ ಸಂಪಾದಕನು ಭಾಷಾಸೌಷ್ಠವಕ್ಕಿಂತಲೂ ವಿಚಾರಗಾಂಭೀರ್ಯದ ಕಡೆಗೆ ಹೆಚ್ಚು ಗಮನ ಕೊಡಬೇಕು.

ಹೋಗಹೋಗುತ್ತ ಇನ್ನೊಂದು ಅಂಶವನ್ನು ಹೇಳಿ, ಈ ಪ್ರಬಂಧವನ್ನು ಮುಗಿಸುತ್ತೇನೆ. ಸಮಸ್ತ ಕನ್ನಡ ಮಾಸಪತ್ರಿಕಾಕಾರರೆಲ್ಲರೂ ಸೇರಿ, ಒಂದು ಸಂಯುಕ್ತ ಸಂಸ್ಥೆಯನ್ನು ನಿರ್ಮಿಸಿಕೊಂಡು, ಪ್ರತಿವರ್ಷವೂ ಎಲ್ಲ ಕನ್ನಡ ಮಾಸಪತ್ರಿಕೆಗಳಲ್ಲಿ ಪ್ರಸಿದ್ಧವಾಗುವ ಲೇಖನಗಳ ಸೂಚೀಪತ್ರಿಕೆಯನ್ನು ವಿಷಯಾನುಕ್ರಮವಾಗಿ ತಯಾರಿಸಬೇಕು. ಈ ಸೂಚೀಪತ್ರಿಕೆಯಿಂದ ಕೋಶದಂತೆ ಕನ್ನಡವಾಚಕರಿಗೆ ಬೇಕಾದ ವಿಷಯಗಳನ್ನು ಸುಲಭವಾಗಿ ತೆಗೆದು ಓದುವುದಕ್ಕೆ ಅನುಕೂಲವಾಗುವುದಲ್ಲದೆ, ಈಗ ಕನ್ನಡ ಮಾಸಪತ್ರಿಕೆಗಳಲ್ಲಿ ಕಾಣಬರುವ ಚರ್ವಿತ ಚರ್ವಣದೋಷವು ನಿವಾರಣೆಯಾಗುವುದು. ಧಾರವಾಡದಲ್ಲಿ ಹೊರಡುತ್ತಿದ್ದ "ವಾಗ್ದೇವಿ" ಎಂಬ ಮಾಸಪತ್ರಿಕೆಯಲ್ಲಿ ಪ್ರಸಿದ್ಧವಾದ "ಇತ್ಯಾದಿಯ ಆತ್ಮವೃತ್ತ" ಎಂಬ ಲೇಖನವು ಪುನಃ ಶ್ರೀಕೃಷ್ಣಸೂಕ್ತಿಯಲ್ಲಿ ಪ್ರಕಟವಾಗುವುದನ್ನು ನೋಡಿದರೆ, ಯಾವ ಕನ್ನಡಿಗನಿಗೆ ವ್ಯಸನವಾಗಲಿಕ್ಕಿಲ್ಲ? ಇದೇ ಮೇರೆಗೆ "ವಾಲ್ಮೀಕಿ ವಿಜಯ" ಎಂಬ ಬಂಗಾಲಿ ಕಾದಂಬರಿಯ ಭಾಷಾಂತರವು, ಸಚಿತ್ರಭಾರತ, ಮಧುರವಾಣಿ, ಪರಮಾರ್ಥ - ಈ ಮೂರು ಪತ್ರಿಕೆಗಳಲ್ಲಿ ಪ್ರಕಟವಾಗಿ ಅದೂ ಚರ್ವಿತ ಚರ್ವಣದೋಷಕ್ಕೆ ಗುರಿಯಾಗಿದೆ. ಆದುದರಿಂದ ಮಾಸಪತ್ರಿಕೆಗಳಲ್ಲಿಯ ಲೇಖನಗಳ ವಿಷಯಾನುಕ್ರಮವಾದ ಸೂಚೀಪತ್ರಿಕೆಯು ಇರುವುದು ಅತ್ಯಗತ್ಯವಾಗಿದೆ.

◆

**(ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಿಂದ)**

# ೩. ಸ್ವಾತಂತ್ರ್ಯಪೂರ್ವದ ಪತ್ರಿಕೋದ್ಯಮ ವೈಖರಿ

ಸ್ವಾತಂತ್ರ್ಯಾನಂತರದ ಪತ್ರಿಕಾ ಪ್ರಪಂಚ ಎಣಿಕೆ ಮೀರಿ ವಿಸ್ತಾರಗೊಂಡಿದೆ. ಅದರ ಹಿಂದೆ ವ್ಯಾವಹಾರಿಕ ದೃಷ್ಟಿಯೂ ಇದೆ ಎನ್ನಿರಿ. ಆದರೆ ಸ್ವಾತಂತ್ರ್ಯಪೂರ್ವ ಪತ್ರಿಕೆಗಳ ಸ್ವರೂಪವು ಈಗಿನವರ ಗಮನಕ್ಕೆ ಬಂದಿರದಷ್ಟು ಅಪೂರ್ವವಾಗಿದೆ. ಅವುಗಳ ಧ್ಯೇಯೋದ್ದೇಶ, ಹೆಸರಿಡುವಿಕೆ, ವಿಷಯ ವೈವಿಧ್ಯ, ಸಂಪಾದಕ – ಚಂದಾದಾರರ ನೇರ ಸಂಬಂಧ, ಮುಂತಾದ ಅಂಶಗಳು ಉದ್ಬೋಧಕವಾಗಿವೆ. ಅವುಗಳ ಬಗೆಗಿನ ಹಾರುನೋಟ ಇಲ್ಲಿದೆ.

ಗತಕಾಲದಲ್ಲಿ ಪತ್ರಿಕೆ ಹೊರಡಿಸುವ ಉದ್ದೇಶ ಸ್ಪಷ್ಟವೇ ಇರುತ್ತಿತ್ತು. ಸುದ್ದಿ ಕೊಡುವುದೇ ಇರಲಿ, ಅನ್ಯ ವಿಷಯಗಳ ಬಗ್ಗೆ ಬರೆಯುವುದೇ ಇರಲಿ, ಅದರ ಹಿಂದಿನ ಉದ್ದೇಶ ಆಪಾತತಃ ಜನತಾ ಶಿಕ್ಷಣ. ಜನಸಾಮಾನ್ಯರಿಗೆ ತಿಳಿವಳಿಕೆ ಕೊಡಬೇಕು, ಅವರುಗಳಿಗೆ ಹೊಸ ಹೊಸ ವಿಷಯಗಳ ಪರಿಚಯ ಮಾಡಿಕೊಡಬೇಕು ಎಂಬ ಆಶಯವೇ ಅವರಲ್ಲಿ ಎದ್ದುಕಾಣುವಂತಿತ್ತು. ಮನರಂಜನೆ? ಇತ್ತು. ಆದರೆ ಅದಕ್ಕೆ ಗೌಣಸ್ಥಾನ. ಯಾವುದೇ ಇರಲಿ, ತಾವು ಕನ್ನಡ ಸೇವೆ ಮಾಡಿದ್ದೇವೆ ಎಂದೇ ತಿಳಿಯುತ್ತಿದ್ದರು. ಇನ್ನೊಂದು ಘನ ಉದ್ದೇಶ ರಾಷ್ಟ್ರಾಭಿಮಾನದ ಹಾಗೂ ಕನ್ನಡಾಭಿಮಾನದ ಉದ್ದೀಪನ. ಮತ್ತೊಂದು, ಸ್ವಧರ್ಮದ ಹೆಗ್ಗಳಿಕೆ. ಅಂತೂ ಯಾವುದೇ ಉದ್ದೇಶ ಇರಲಿ, ಅದೊಂದು ಉದಾತ್ತ ಭಾವದ ಲಕ್ಷಣವನ್ನು ಹೊಂದಿದ್ದಿತು.

ಆಗಿನ ಪತ್ರಿಕೆಗಳ ಇನ್ನೊಂದು ವೈಶಿಷ್ಟ್ಯವೆಂದರೆ, ಅವೆಲ್ಲ ಕಡಿಮೆ, ಇಲ್ಲವೆ ಬಂಡವಾಳವೇ ಇದ್ದಿರದ ಸ್ವಾಂತಸ್ಸುಖಾಯದ ವೈಯಕ್ತಿಕ ಪ್ರಯತ್ನಗಳಾಗಿದ್ದುವು. ಅವುಗಳ ಸ್ಥಾಪಕರು, ಪ್ರಕಾಶಕರು, ವಿತರಕರು ಎಲ್ಲ ಒಬ್ಬರಲ್ಲೇ ಕೇಂದ್ರೀಕೃತ. ಒಂದೊಂದೂ ಪ್ರತ್ಯೇಕವಾದ, ಸ್ವೋಪಜ್ಞತೆಯ ಪ್ರಯತ್ನಗಳು; ಅಂತೆಯೇ ಕಲ್ಪಕತೆಯಿಂದ ಕೂಡಿದ ಪ್ರಯೋಗಗಳೆನಿಸಿದವು. ಇದರ ಒಂದು ಅನಿಷ್ಟ ಪರಿಣಾಮವೆಂದರೆ ಈ ರೀತಿ ಹೊರಟ ಎಷ್ಟೋ ಪತ್ರಿಕೆಗಳು ಕೆಲ ಕಾಲ ಮಾತ್ರ ನಡೆದು ನಿಂತು ಹೋದದ್ದು. ಇಂಥ ಸ್ಥಿತಿಗತಿಗೆ ಇನ್ನೊಂದು ಕಾರಣವೆಂದರೆ ಲೇಖಕರ – ಪಡೆಯೆಂಬುದು ನಿರ್ಮಾಣವಾಗಿರಲಿಲ್ಲ. ಲೇಖನಕ್ಕೆ ಸಂಭಾವನೆ ಕೊಡುವುದಂತೂ ಸುತರಾಂ ಇರಲಿಲ್ಲ. ಸಂಪಾದಕರ ಹಾಗೇನೆ ಬರೆಯುವವರೂ ತಮ್ಮದು 'ಕನ್ನಡಮ್ಮನ ಸೇವೆ'ಯೆಂದೇ ಬಗೆಯುತ್ತಿದ್ದರು.

## ಉದ್ದೇಶ

ಪತ್ರಿಕೆಯೊಂದನ್ನು ಹೊರಡಿಸುವುದರ ಬಗ್ಗೆ ಕೆಲವು ಸಂಪಾದಕರು ತಮ್ಮ ಮೊದಲ ಸಂಚಿಕೆಯಲ್ಲಿ ಏನೇನು ಹೇಳುವರೋ ನೋಡೋಣ.

**ಸುಬೋಧಿನೀ (೧ ಮಾರ್ಚ್ ೧೮೭೧)**

"ಸುಬೋಧಿನೀ ಎಂಬ ನಾಮವನ್ನು ಧರಿಸಿಕೊಂಡು ನಮ್ಮ ಕನ್ನಡ ದೇಶಸ್ಥರ ಮುಂದೆ ಪ್ರಕಟಿಸಿಕೊಳ್ಳುವರೆ ನಮ್ಮ ಉದ್ದೇಶವೇನೆಂದು ವಿವರಿಸುವುದು ಯುಕ್ತವೆಂದು ನೆನಸುತ್ತೇವೆ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯು ಪೂರ್ವಚರಿತ್ರೆದಲ್ಲಿ ಪ್ರಖ್ಯಾತಿ ಹೊಂದಿದ್ದಾಗಿ, ಪ್ರಕೃತಕ್ಕೂ ವ್ಯಾಪಾರದಲ್ಲಾಗಲೀ ವಿದ್ಯಾಕೌಶಲಾದಿ ಇತರ ಸೌಕರ್ಯಗಳಲ್ಲಿಯಾಗಲೀ ದಕ್ಷಿಣ ಹಿಂದೂಸ್ಥಾನದ ಇತರ ಶೀಮೆಯೊಳಗೆ ಅಪ್ರಶಸ್ತವಾಗಿರದೇ ಇದ್ದರೂ, ಲೋಕದ ಅಷ್ಟು ಪ್ರಶಂಸೆಯಲ್ಲಿ ಇಲ್ಲ. ಯಾಕೆಂದರೆ ನಮ್ಮ ದೇಶದ ವೃತ್ತಾಂತಗಳು ಲಿಖಿತವಾಗಿರಿಸೋಣಾಗಲಿಲ್ಲ. ಅದು ಹೊರ್ತು ವಿದ್ಯೆಯಿಂದ ದೊಡ್ಡ ಮಾರ್ಪು ಬಂದಿದೆ; ವಿದ್ಯೆಯು ಪ್ರಕಾಶವು ಯಾವ್ಯಾವ ವರ್ಗಗಳಲ್ಲಿ ಪ್ರವೇಶವಾಗಿರುತ್ತದೋ, ಅಲ್ಲಲ್ಲಿ ಅವರ ಜ್ಞಾನವೂ ಪ್ರಬಲವಾಗಿ ಎಲ್ಲಾ ವಿಷಯಗಳಲ್ಲಿ ನೂತನ ಪ್ರವರ್ತನೆ ಉಂಟಾಗಿ, ಜನರ ಸ್ಥಿತಿಯು ಅಭಿವೃದ್ಧಿಯಾಗುತ್ತಾ ಬರುತ್ತದೆ. ಇದೆಲ್ಲಾ ಚಂದವೇ ಸರಿ. ಆದರೆ ಈ ಎಲ್ಲಾ ವೃತ್ತಾಂತ ಬರಪದಲ್ಲಿ ಉಂಟೆ?"

ಇದು ಅವರು ಪತ್ರಿಕೆಯನ್ನು ಹೊರಡಿಸಬೇಕೆನ್ನುವುದರ ಉದ್ದೇಶ. 'ಜನತಾ ಶಿಕ್ಷಣ'ವೆಂದರೆ ಈ ಬಗೆಯದು.

ಇದೇ ಮಂಗಳೂರಿನಿಂದ ಜನವರಿ ೧೮೭೭ರಲ್ಲಿ ಕಾನೂನು ವಿಷಯಕವಾದ 'ನ್ಯಾಯಾಧಿಕರಣ' ಎಂಬ ಮಾಸಿಕವು ಆರಂಭವಾಯಿತು. ಆ ವೇಳೆಗೆ 'ಸುಬೋಧಿನೀ' ನಿಂತು ಹೋಗಿತ್ತು! ಇವರ 'ಪ್ರಸ್ತಾವನೆ' ಹೀಗಿದೆ:

"ಈ ಊರಲ್ಲಿ ವರ್ತಮಾನ ಪತ್ರಗಳಾಗಲೀ, ನ್ಯಾಯಪತ್ರಗಳಾಗಲೀ ದೀರ್ಘಾಯುಷ್ಯ ಬಾಳುವದಿಲ್ಲಾ. 'ಕನ್ನಡ ವಾರ್ತಿಕ'ವಾಯಿತು. 'ವಿಚಿತ್ರ ವರ್ತಮಾನ ಸಂಗ್ರಹ'ವಾಯಿತು, 'ನ್ಯಾಯಸಂಗ್ರಹ'ವಾಯಿತು, 'ಸುಬೋಧಿನೀ'

ಆಯಿತು; ಇವೆಲ್ಲಾ ಬಾಲ್ಯದಲ್ಲೇ ತೀರಿಹೋದವು. ಒಂದು ಪ್ರಶಸ್ತವಾದ ಪತ್ರವನ್ನು ದೀರ್ಘಕಾಲ ನಡಿಸುವ ಯೋಗ್ಯತೆ ಈ ಊರಿಗೆ ಇನ್ನೂ ಬರಲಿಲ್ಲ. ಆದರೂ ಈ ಊರಲ್ಲಿ ಒಂದು ಪತ್ರವಿರಬೇಕೆಂಬ ಆಶೆ ಪದೇ ಪದೇ ಹುಟ್ಟುತ್ತಿರುತ್ತದೆ ಎಂಬುದೂ, ಒಂದು ಪತ್ರವಿಲ್ಲದಿರುವುದು ಈ ಊರಿಗೆ ಮಾತ್ರವಲ್ಲ, ಕನ್ನಡ ಭಾಷೆಗೇನೆ ಕುಂದು ಎಂಬುದೂ, ಹಿಂದಿನ ಅನುಭವದಿಂದಲೂ ಪ್ರಕೃತ ಸ್ಥಿತಿಯಿಂದಲೂ ಸಿದ್ಧಾಂತವಾಗುತ್ತದೆ. ವಿದ್ಯೆಯು ದಿವಸದಿಂದ ದಿವಸಕ್ಕೆ ವಿಕಾಸವಾಗುತ್ತದೆ. ಹೀಗಿರುತ್ತ ಈ ವಿದ್ಯೆಯ ಪ್ರವರ್ತನೆಗೆ ಅನುಕೂಲವಾಗಿ ಪತ್ರಕರ್ತನು ಸಹ ತಲೆಯೆತ್ತಿ ವಿದ್ಯಾಲಂಬನೆಯಲ್ಲಿ ಕೈ ನೀಡುವುದು ಉಚಿತವಲ್ಲವೆ?"

'ಕರ್ನಾಟಕ ವಾಣೀವಿಲಾಸ' ಎಂಬ ಪತ್ರಿಕೆಯು ಫೆಬ್ರುವರಿ ೧೮೮೮ ರಿಂದ ಆರಂಭವಾಯಿತು. ಅದರ ಪೂರಕ ಶೀರ್ಷಿಕೆಯಿದು; A Pictorial magazine for Gid's Schools and Home Reading, ಅವರ ಮೊದಲ ಸಂಪಾದಕೀಯವು ವಿಶಿಷ್ಟ ಹಾಗೂ ಮೋಜಿನದಾಗಿದೆ.

"ನೂತನವಾಗಿ ಗ್ರಂಥಗಳನ್ನು ಲೋಕೋಪಕಾರಾರ್ಥವಾಗಿ ರಚಿಸಿ ಪ್ರಸಿದ್ಧಿಪಡಿಸುವ ಮಹಾತ್ಮರು ಪರಮೋತ್ತಮರು. ಇಷ್ಟು ವಿಶೇಷ ಶಕ್ತಿಯಿಲ್ಲದಿರುವವರು ತಮಗೆ ತಿಳಿದ ಮಟ್ಟಿಗೆ ಅಲ್ಲಲ್ಲಿರುವ ಸಾರವಾದ ಸಂಗತಿಗಳನ್ನು ಸಂಗ್ರಹಿಸಿ ಪರರ ತಿಳುವಳಿಕೆಗೆ ತರುವುದು ಅವರ ಕರ್ತವ್ಯ. ನಾವು ಈ ಎರಡನೇ ಮಾರ್ಗದಲ್ಲಿ ನಡಿಯುವವರಾಗಿದ್ದೇವೆ."

ಅಲ್ಲಿಂದ ಮುಂದೆ ಸಂಪಾದಕರು ಸ್ತ್ರೀಶಿಕ್ಷಣಕ್ಕೆ ಒತ್ತು ಕೊಟ್ಟು, ತಮ್ಮ ಪತ್ರಿಕೆಯ ಉದ್ದೇಶವನ್ನು ವಿಶದಗೊಳಿಸಿದ್ದಾರೆ.

ಆಗಿನ ಕಾಲದ ಅನೇಕ ಪತ್ರಿಕೆಗಳವರು 'ಧ್ಯೇಯವಾಕ್ಯ' ವೊಂದನ್ನು ವಿಶೇಷತಃ ಪದ್ಯರೂಪದಲ್ಲಿ ಕೊಡುತ್ತಿದ್ದರು. ವಿದ್ಯಾರ್ಥಿಗಳಿಗೆಂದು ಹೊರಟ 'ವಿಜ್ಞಾನ ದೀಪಿಕೆ' (೧೮೯೨)' ಎಂಬ ಶೀರ್ಷಿಕೆಯ ಕೆಳಗೆ ಈ ಧ್ಯೇಯ ವಾಕ್ಯವಿದೆ :

ಅಜ್ಞಾನವೆಂಬ ಕತ್ತಲೆ
ವಿಜ್ಞಾನದ ಬೆಳಕಿನಿಂದ ಪೋಗೀ ನಾಡೊಳ್ ।
ಪ್ರಜ್ಞಾಶಾಲಿಗಳಾಗಲಿ
ಸುಜ್ಞಾನಾಪೇಕ್ಷೆಯುಳ್ಳ ಬಾಲಕರನಿಶಮ್ ॥

ಆಗಿನ ಕಾಲದ ಅನೇಕ ಪತ್ರಿಕೆಗಳು ದ್ವಿಭಾಷಾ ಪತ್ರಿಕೆಗಳಾಗಿ ಹೊರಡುತ್ತಿದ್ದುವು. ವಿಶೇಷತಃ ಮರಾಠೀ-ಕನ್ನಡ; ಕನ್ನಡ-ಇಂಗ್ಲೀಷ್. ಒಮ್ಮೊಮ್ಮೆ ಆ ಅನ್ಯಭಾಷೆಯಲ್ಲಿಯೇ, ಆದರೆ ಕರ್ನಾಟಕಕ್ಕೆ ಸಂಬಂಧಿಸಿದ ವಿಷಯಗಳಿರುತ್ತಿದ್ದವು. ಉದಾ: ಬೆಳಗಾಂವ ಸಮಾಚಾರ (ಕ+ಮ), ಅರುಣೋದಯ – ಬೆಂಗಳೂರು (ಇಂ+ಕ) NAVASHAKTI ಎಂಬುದು ಇನ್ನೊಂದು ಪತ್ರಿಕೆ (ಹುಬ್ಬಳ್ಳಿಯಲ್ಲಿ ೧೯೨೩ ರಿಂದ ಆರಂಭ). ಹೆಸರು ದೇಸೀಯದು. ಆದರೆ ಅದು "AN All – Karnatak English Weekly, Published Every Tuesday" ಎಂಬುದಾಗಿತ್ತು. ಸಂಪಾದಕರು? ಯಾರೋ ಒಬ್ಬ ಅಪ್ಪಟ ಆಂಗ್ಲಭಾಷಾ ಪ್ರೇಮಿ ಎನ್ನುತ್ತೀರಾ? ಊಂಹು. ಅವರು ನಮ್ಮ ಆರ್. ಆರ್. ದಿವಾಕರರು. ಅಂದ ಹಾಗೆ ಇದಕ್ಕೂ ಧ್ಯೇಯವಾಕ್ಯವಿದೆ, In Faith is our Power and in His Will our Peace.

## ನಾಮಕರಣ

ಪತ್ರಿಕೆಯೊಂದನ್ನು ಹುಟ್ಟು ಹಾಕುವುದೆಂದರೆ ಒಂದು ಮಗುವನ್ನು ಹಡೆದ ಹಾಗೆ. ಜನಿಸಿದ ಮಗುವಿಗೆ ಹೆಸರಿಡುವಾಗ ತಂದೆತಾಯಿಗಳು ತುಂಬಾ ಯೋಚಿಸುತ್ತಾರೆ. ಅದು ನವೀನವೂ, ಕಲ್ಪಕತೆಯಿಂದ ಕೂಡಿದ್ದೂ ಆಗಿರಬೇಕೆಂದು ಲಕ್ಷ್ಯ ಕೊಡುತ್ತಾರೆ. ಆಯ್ದ ಹೆಸರಿಗೂ ಮುಂದಿನ ಮಗುವಿನ ಬದುಕಿಗೂ ಹೊಂದಿಕೆ ಆಗದೇ ಇರಬಹುದು. 'ನಮ್ರತಾ' ಎಂಬ ಹೆಸರಿನ ಮಗು ಆ ಮುಂದೆ ಪ್ರಚಂಡಳಾಗಿ ಬಾಳಬಹುದು! ಪತ್ರಿಕೆಗಳ ವಿಷಯ ಹಾಗಲ್ಲ. ಆ ಹೆಸರು ತಮ್ಮ ಧ್ಯೇಯೋದ್ದೇಶವನ್ನು ನಿದರ್ಶಿಸಬೇಕೆಂದು ಯೋಚಿಸುತ್ತಾರೆ. ಹೀಗಾಗಿ ಪತ್ರಿಕೆಯ ಹೆಸರಿನಿಂದ ಅದರಲ್ಲಿ ಬಂದಿರುವ, ಬರಲಿರುವ ವಿಷಯಗಳ ಸ್ವರೂಪವನ್ನೇ ಅರಿಯಬಹುದು. ಅಲ್ಲದೆ ವೈವಿಧ್ಯದ ಮೋಜೂ ಇದೆ – ಈ ನಾಮಧೇಯಗಳಲ್ಲಿ.

ಕೆಲವು ಪತ್ರಿಕೆಗಳವರಿಗೆ ಎರಡೇ ಅಕ್ಷರಗಳು ಸಾಕು. ಕಿಡಿ (ಬೆಂಗಳೂರು) ನುಡಿ (ಮುಂಬಯಿ). ಇನ್ನು ಕೆಲವಕ್ಕೆ ಅದೇ ಹೆಸರು, ಆದರೆ ಬೇರೆ ಬೇರೆ ಊರುಗಳಿಂದ ಮತ್ತೆ ಮತ್ತೆ ಕಾಣಿಸಿಕೊಂಡಿವೆ. ಅರುಣ, ದರ್ಶನ, ದೀಪ್ತಿ, ನಂದಿನಿ, ನವಜೀವನ, ನವನೀತಗಳು. ಕೆಲವಂತೂ ಐದೈದು ಬಾರಿ ಮರುಕಳಿಸಿವೆ. ಭಾರತಿ, ವಿಜಯ, ಮಕ್ಕಳ ಪುಸ್ತಕ. ಅದರಂತೆ ಬೆಂಗಳೂರು, ಉಡುಪಿ ಮುಂತಾದ ಸ್ಥಳಗಳಿಂದ ಬೇರೆ ಬೇರೆ ಕಾಲದಲ್ಲಿ ಪ್ರಕಟವಾದ 'ಸುದರ್ಶನ'ಕ್ಕೆ ೬ ಜನ್ಮಗಳು!

ನಾವೀನ್ಯ ಎಂದೆನಷ್ಟೇ. ಅದನ್ನು ಗಮನಿಸಿಕೊಂಡು ಹೊರಟ ಕೆಲವು ಪತ್ರಿಕೆಗಳ ನಾಮಕರಣ ಈ ಬಗೆಯದು.

'ಇಳಿದು ಬಾ ತಾಯೆ', 'ಆತ್ಮಗಳ ಬೆಲೆ', 'ನಾರದ', 'ಸಿರಿಗನ್ನಡಂ ಗೆಲ್-ಬಾಳ್ಗೆ', 'ಹೂವಿನ ಕೋಲು', 'ಕ್ಷೇಮಸಮಾಚಾರ', ಇತ್ಯಾದಿ. 'ಕಂಕಣ' ಎನ್ನುವುದೊಂದು ಪತ್ರಿಕೆ. (ಹುಬ್ಬಳ್ಳಿ) ವಧು-ವರ ಜೋಡಣೆಯದೆಂದು ಅನಿಸೀತು. ಇಲ್ಲ, ಅದೊಂದು ಸಾಮಾನ್ಯ ಸುದ್ದಿ ಪತ್ರಿಕೆ ಮಾತ್ರ. 'ಗ್ರಾಮ ಸೇವಕ' ಎಂಬುದೇನೋ ಸರಿಯೇ, ಆದರೆ 'ಗ್ರಾಮಾಧಿಪತಿ'ಯೂ ಜೊತೆಗಿದ್ದಾನೆ! 'ಸುಧಾಕರ', 'ಸುಧಾರಕ' ಎಂಬ ಹೆಸರುಗಳು ಅಕ್ಷರಿಕೆಯ ತಪ್ಪು ಎಂದು ತಿಳಿಯಬೇಡಿರಿ. ಅವೆರಡೂ ಪ್ರತ್ಯೇಕ ಪತ್ರಿಕೆಗಳೇ. ಹಾಂ. 'ಶೃಂಕೋನ' ಎಂಬ ಪತ್ರಿಕೆಯ ಹೆಸರಿನ ಕಿಂಚಿತ್ತಾದರೂ ಹೊಲಬಾಗದು. ಅದು ಶೃಂಗೇರಿ - ಕೊಪ್ಪ - ನರಸಿಂಹರಾಜ ಎಂಬ ತ್ರಿ-ಪುರಗಳ ಮುಪ್ಪುರಿ! 'ಕುಟ್ಯೋಶನಿ' (ಬೆಂಗಳೂರು) ಎಂಬೊಂದು ಪತ್ರಿಕೆ ಏನೆಂದು ಅರ್ಥವಾಯಿತೆ? ನನಗೂ ಆಗಿಲ್ಲ.

ಕ್ಷಾತ್ರವೃತ್ತಿಯನ್ನು ಅಳವಡಿಸಿಕೊಂಡು ಅದೇ ರೀತಿಯ ಹೆಸರನ್ನಿಟ್ಟುಕೊಂಡು ಕೆಲ ಪತ್ರಿಕೆಗಳು ಬೆಳಕು ಕಂಡವು. ಗುಡುಗು ('ಕಿಡಿ'ಯ ಶೇಷಪ್ಪನವರ ಶಿಷ್ಯ - ಇದರ ಸಂಪಾದಕ), ಛಲದಂಕಮಲ್ಲ, ಬಿರುಗಾಳಿ, ವೀರ ಮುಸ್ಲಿಮ್ (ಶೈವರು ಮಾತ್ರ 'ವೀರ' ಪದಯುಕ್ತರಲ್ಲ!) ಸಿಂಹನು ಸಿಡಿಲ ಮರಿ! ಇಷ್ಟು ಸಾಕು.

ಭಾರತ--, ಪ್ರಜಾ-, ಮೈಸೂರು --, ರೈತ--, ಲೋಕ --, ಸತ್ಯ--, ಜನ-- ಇವೇ ಮೊದಲಾದುವನ್ನು ಪೂರ್ವಪದವಾಗಿ ಇಟ್ಟುಕೊಂಡ ಅನೇಕ ಪತ್ರಿಕೆಗಳು ಕಂಗೊಳಿಸುತ್ತವೆ. ಮಲೆನಾಡು - ಮಲೆನಾಡು ವಿಜಯ, ಎಂಬುದು ಇಂಥವಕ್ಕೆ ಮಾದರಿ. ಇನ್ನು ಕನ್ನಡ, ಕರ್ನಾಟಕ ಎಂಬುದನ್ನು ಭೂಷಣವಾಗಿ ಇಟ್ಟುಕೊಂಡ ಪತ್ರಿಕೆಗಳಂತೂ ಎಪ್ಪತ್ತಕ್ಕೂ ಮೀರಿವೆ. 'ಕರ್ನಾಟಕ - ಹೋಮಿಯೋಪತಿ ಬಂಧು' ಎಂಬ ಹೆಸರೂ ಇದೆ.

ಆದರೆ ಮಹಿಳೆಯರಿಗೆ ಮೀಸಲಾದ ಪತ್ರಿಕೆಗಳಲ್ಲಿ ಹೆಚ್ಚಿನವು 'ಸ' ಕಾರಾರಂಭವಾಗಿರುವುದು ಒಂದು ಸೋಜಿಗ. ಸರಸ್ವತಿ ಸಹಧರ್ಮಿಣಿ, ಸಾಧ್ವಿ, ಸುಧೇನು, ಸುವಾಸಿನಿ, ಸೋದರಿ. ಹಾಗೆಂದು ಈ ಪತ್ರಿಕೆಗಳಲ್ಲಿ ಮಹಿಳಾ ಲೇಖಕರು, ಮಹಿಳಾ ವಿಷಯಗಳು ಮಾತ್ರವೇ ಇರುತ್ತಿದ್ದವೆಂದೇನೂ ಅಲ್ಲ.

ತಂತಮ್ಮ ಮತ ಧರ್ಮಗಳನ್ನು ಎತ್ತಿ ಹಿಡಿಯುವುದಕ್ಕೆಂದು ಪತ್ರಿಕೆ ಹೊರಡಿಸುವಲ್ಲಿ ವೀರಶೈವರು ಅತೀವ ಉತ್ಸಾಹಿಗಳೆಂದು ತೋರುತ್ತದೆ. ಯಜಮಾನ ವೀರಬಸಯ್ಯನವರು ಹೊರಡಿಸುತ್ತಿದ್ದ 'ಮೈಸೂರು ಸ್ಟಾರ್' ಎಂಬುದು ಮೊದಲ ಪತ್ರಿಕೆ ಎನ್ನಬಹುದು. ಅನಂತರದ ಪತ್ರಿಕೆಗಳು ವೀರಶೈವ --ಶರಣ--, ಶಿವ-- ಮುಂತಾದ ಪೂರ್ವಪದಗಳನ್ನೊಳಗೊಂಡು ಮತಪ್ರಚಾರ ಕಾರ್ಯದಲ್ಲಿ ತೊಡಗಿದ್ದುವು. ಅವುಗಳಲ್ಲಿ ಹಳಕಟ್ಟಿಯವರ 'ಶಿವಾನುಭವ'ವು ಧ್ರುವನಕ್ಷತ್ರದಂತೆ ಬೆಳಗಿತು. ಕ್ರೈಸ್ತರ ಪ್ರಸರಣ ಪತ್ರಿಕೆಗಳ ಒಂದು ವೈಶಿಷ್ಟ್ಯವೆಂದರೆ ನವೀನ ರೀತಿಯಲ್ಲಿ ನಾಮಕರಣ ಮಾಡುವುದು. 'ಕ್ರಿಸ್ತ ಆಗಮನ ದೂತ' ಎಂದರಾಗಲೀ, 'ಜೇಸುದಾಸರ ತಿರುಹೃದಯದ ದೂತ' ಎಂದರೂ ಸರಿಯೇ ಅರ್ಥವಾಗಬಲ್ಲುದು. ಆದರೆ 'ಆತ್ಮಗಳ ಬೆಲೆ' 'ಕಾವಲಿನ ಬುರುಜು' ಕ್ರೈಸ್ತೀಯವೆಂದು ಒಮ್ಮೆಲೆ ತಿಳಿಯುವುದಿಲ್ಲ. 'ಜೀವಜಲ'ವು ಮಳವಳ್ಳಿ, ಬೆಂಗಳೂರುಗಳಿಂದ ಪ್ರಕಟವಾಗುತ್ತಿತ್ತು. (೧೯೫೦). ಆದರೆ ಅದನ್ನು ಪೋಷಿಸುವ ಸಂಸ್ಥೆ ಸಂಕೇಶ್ವರದಲ್ಲಿಯ ಮಿಶನ್ ಆಸ್ಪತ್ರೆ! ಕನ್ನಡ ಮಾತ್ರವಲ್ಲ, ಜಗತ್ತಿನ ೬೫ ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು ಎಂಬ ಉಲ್ಲೇಖವಿದೆ.

ಅಲ್ಪಸಂಖ್ಯಾತ ಹಾಗೂ ನಿಮ್ನ ವರ್ಗದವರು ತಂತಮ್ಮ ಪಂಗಡಗಳ ಹೆಚ್ಚುಗಾರಿಕೆಯನ್ನು ಪ್ರದರ್ಶಿಸಲೆಂದು ಪತ್ರಿಕೋದ್ಯಮದತ್ತ ತಿರುಗಿದರು. ಈಡಿಗರು, ದೇವಾಂಗರು, ದೇವಾಡಿಗರು, ಕುಂಚಟಿಗರು, ಹವ್ಯಕರು, ಒಬ್ಬೊಬ್ಬರದೂ ಒಂದೋ ಎರಡೋ ಪತ್ರಿಕೆಗಳು ಹೊಮ್ಮಿದವು. 'ಅಲ್ಪಸಂಖ್ಯಾತರ ವಾಣಿ' (ಮಂಡ್ಯ) ಎಂದೇ ಒಂದು ಪತ್ರಿಕೆ ಕೆಲಕಾಲ ನಡೆಯಿತು. ದ.ಕ. ಜಿಲ್ಲೆಯ ಅಳಿಕೆಯಿಂದ ಹೊರಡುತ್ತಿದ್ದ 'ಹಿಲಾಲ್' ಮುಸ್ಲಿಮ್ ವಾಣಿಯಾಗಿದ್ದಿತೆ? ತಿಳಿಯದು.

ವೈದಿಕ ಧರ್ಮ ಪ್ರಸಾರಕ್ಕೆಂದೇ ಹಲವಾರು ಪತ್ರಿಕೆಗಳು ಪ್ರಕಟವಾಗಿವೆ. ಕೆಲವು, ಸಂಸ್ಕೃತ ಶಾಸ್ತ್ರಗಳ ಗ್ರಂಥಗಳ ಅನುವಾದಕ್ಕೆ ಮನಗೊಟ್ಟವುಗಳು. 'ಧರ್ಮಾದಿ ಪುರುಷಾರ್ಥ' (ಬೆಳಗಾಂವಿ) ಎಂಬುದು ಇಂಥವುಗಳಲ್ಲಿ ಒಂದು, ಆದರೆ ಈ ವಿಷಯಕ ಪತ್ರಿಕೆಗಳು ಅಲ್ಪಾಯುಷ್ಯದವು. ಧರ್ಮದಂತೆ, ಆರೋಗ್ಯ ವಿಷಯಕ ಪತ್ರಿಕೆಗಳು ಕೆಲವು ಕಂಡುಬರುತ್ತವೆ. (ಉದಾ: ಭಿಷಗ್ವರ - ಬೆಳಗಾಂವಿ). ನಮ್ಮ ಆರ್ಯ ಪರಂಪರೆಯಲ್ಲಿ ಜ್ಯೋತಿಷ್ಯ ಶಾಸ್ತ್ರವೂ ಪುರಸ್ಕೃತವಾದದ್ದು. ಈ ರೀತಿ ಹೊರಟ ಪತ್ರಿಕೆಯೊಂದು 'ನಮ್ಮ ವಾರ ಭವಿಷ್ಯ' ಎಂದೇ ಮುಕ್ತವಾಗಿ ಹೆಸರಿಟ್ಟುಕೊಂಡಿದ್ದಿತು.

ಇನ್ನು ಮನರಂಜನೆಯ ವಿಚಾರ. ಸಣ್ಣ ಕತೆಗಳಿಗೇ ಮೀಸಲಾದ ೧೫-೨೦ ಪತ್ರಿಕೆಗಳ ಹೆಸರುಗಳು ನನ್ನ ಗಮನದಲ್ಲಿವೆ. ಈ ಕ್ಷೇತ್ರದಲ್ಲಿ ಅ. ನ. ಕೃಷ್ಣರಾಯರ 'ಕಥಾಂಜಲಿ', ನರಸಿಂಹ ಮೂರ್ತಿಗಳ 'ಕತೆಗಾರ' ಹೆಸರುವಾಸಿಯಾದವುಗಳು. ಬಸವರಾಜ ಕಟ್ಟೀಮನಿಯವರೂ ಕಥಾ ಪತ್ರಿಕೋದ್ಯಮದಲ್ಲಿ ಕೈಯಾಡಿಸಿದವರು.

ಹಾಸ್ಯ ಯಾರಿಗೆ ಬೇಡ? ಹಾಸ್ಯ ಪತ್ರಿಕೆಗಳು ಕೆಲವಾದರೂ ರಂಜಿಸಿವೆ. ಆದರೆ ಅವಕ್ಕೆ ಸಿಗಬೇಕಾದಷ್ಟು ಮೆಚ್ಚುಗೆ ವಾಚಕ ವರ್ಗದಿಂದ ಬರಲಿಲ್ಲವೆಂದೇ ಅನಿಸುತ್ತದೆ. ರಾ. ಶಿ. ಅವರ ಕೊರವಂಜಿ! ಈ ಪತ್ರಿಕೆಯ ನೆನಪೇ ನವಿರೇಳಿಸುವಂಥದ್ದು. ಎರಡು ದಶಕಗಳಿಗೂ ಮಿಕ್ಕಿ ರಾರಾಜಿಸಿತು. ಆದರೇನು, ಅದನ್ನು ನಾವು ಉಳಿಸಿಕೊಳ್ಳಲಾಗಲಿಲ್ಲ. (ಈಗೇನೊ 'ಅಪರಂಜಿ' ಪತ್ರಿಕೆಯು ಅದರ

ಬದಲಿಗೆ ಎಂಬಂತೆ ಹೊರಬರುತ್ತಾ ಇದೆ). ಅದು ಬಿಡಿರಿ. ಜಿ. ನಾರಾಯಣರಂತಹ ಗಂಭೀರ ವ್ಯಕ್ತಿ 'ವಿನೋದ' ಎಂಬ ಪತ್ರಿಕೆಯನ್ನು ಹೊರಡಿಸುವುದೆಂದರೆ! ಕಾಲರಾಯನ ವೈಪರೀತ್ಯ ಎನ್ನೋಣವೆ? ನಿಜವೆಂದರೆ ಇವೆರಡೂ ಸ್ವಾತಂತ್ರ್ಯೋತ್ತರ ಕಾಲದ ಪತ್ರಿಕೆಗಳು. ಆದರೂ ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾದವುಗಳು.

ತತ್ಪೂರ್ವದ 'ವಿಕಟ ಪ್ರತಾಪ' ಎಂಬ ಸಚಿತ್ರವೂ ವಿಚಿತ್ರವೂ ಆದ ಮಾಸಪತ್ರಿಕೆ'ಯನ್ನು ಇಲ್ಲಿ ಹೆಸರಿಸಲೇಬೇಕು. The Canarese Punch ಎನ್ನುವ ವಿಶೇಷಣ ಬೇರೆ ಇಟ್ಟುಕೊಂಡಿದ್ದಿತು. ಹೊರಡುತ್ತಿದ್ದದ್ದು ಉತ್ತರ ಆರ್ಕಾಟದ ಕುಪ್ಪಮ್ ಎಂಬ ಊರಿನಿಂದ. (೧೯೦೬). ಅದರಲ್ಲಿ ಎಲ್ಲವೂ ವಿಕಟಮಯ! ವಿಕಟವಾರ್ತಾರಂಗ, ವಿಕಟರಂಭಾನರ್ತನೆ, ಮುಂತಾಗಿ. ಇನ್ನು ಪತ್ರಿಕೆಯಲ್ಲಿ ಕಾಣಿಸಿಕೊಂಡ ಕೆಲವು ಕಾಲ್ಪನಿಕ ವ್ಯಕ್ತಿಗಳ ಅಭಿಧಾನಗಳಿವು. 'ಅವಲಕ್ಕಿ ಅಮ್ಮಣ್ಣಮ್ಮ', 'ಮೊಸರವಲಕ್ಕಿ ಶೀತಮ್ಮ', 'ಸಂಡಿಗೆ ಗುಂಡಕ್ಕ', 'ದೋಸೆ ವೆಂಕೂಬಾಯಿ', 'ತಿಂಡಿಪೋತ ಅವಿವೇಕಾವಧಾನಿ'.

ಮಕ್ಕಳ ಪತ್ರಿಕೆಗಳ ಬಗ್ಗೆ ಒಂದೆರಡು ಮಾತು. ಕರ್ನಾಟಕದ ಪ್ರತಿಯೊಂದು ಭಾಗದಿಂದ ಮಕ್ಕಳಿಗಾಗಿ ಪತ್ರಿಕೆಗಳು ಪ್ರಕಟವಾಗಿವೆ. ಒಂದೊಂದು ಸಂಚಿಕೆಯೂ ಸೃಜನಾತ್ಮಕವಾಗಿರುತ್ತಿತ್ತು. ಹೊಯ್ಸಳ, ರಾಜರತ್ನಂ ಇವರುಗಳ ಸೇವೆ ಈ ವಿಷಯದಲ್ಲಿಯೂ ಮನನೀಯವಾದದ್ದು. ದೇವುಡು ಅವರ ಕೆಲಸ ಮಾತ್ರ ವಿಶಿಷ್ಟವಾದದ್ದಿತ್ತು. 'ನಮ್ಮ ಪುಸ್ತಕ' ಎನ್ನುವುದು ಅವರು ಹೊರಡಿಸುತ್ತಿದ್ದ ಪತ್ರಿಕೆಯ ಹೆಸರು. (೧೯೨೬) ಮಾಮೂಲಿಯ ಬಾಲಸಾಹಿತ್ಯದ ಲೇಖನ, ಒಂದಿಷ್ಟು ಚಿತ್ರ ಇರುವ ಪತ್ರಿಕೆ ಅದಾಗಿದ್ದಿಲ್ಲ. ಮಕ್ಕಳ ವಿವಿಧ ವಯೋಮಾನಕ್ಕೆ ಎಂದರೆ ನರ್ಸರಿ, ಕೆ.ಜಿ., ಪ್ರೈಮರಿ, ಮಿಡಲ್ ಸ್ಕೂಲ್, ಹೈಸ್ಕೂಲ್ – ಈ ವಿವಿಧ ಸ್ತರಗಳಿಗೆ ಅನುಗುಣವಾಗಿ ಲೇಖನಗಳನ್ನು ಬರೆಯಿಸುತ್ತಿದ್ದರು. ಆ ರೀತಿ ವಿಭಾಗಿಸಿಯೆ ಪ್ರಕಟಿಸುತ್ತಿದ್ದರು.

ಜೀವನದಲ್ಲಿ ಕಾಮ–ಪ್ರೇಮಗಳಿದ್ದಾಗ ಪತ್ರಿಕಾರಂಗದಲ್ಲಿ ಏಕೆ ಬೇಡ? ಅಂತೆಯೇ 'ಕಾಮಕಲಾ', 'ರತಿರಂಗ', 'ಶೃಂಗಾರ' ಇವೇ ಮೊದಲಾದ ಪತ್ರಿಕೆಗಳು ಬೆಳಕು ಕಂಡವು. ಸಿನೆಮಾ ಪತ್ರಿಕೆಗಳದ್ದು ಮಾತ್ರ ಆಗ ಎದ್ದು ಕಾಣುವ ನಿಲುವೇನೂ ಆಗಿರಲಿಲ್ಲ. 'ವಾಕ್ಚಿತ್ರ', 'ಚಲನಚಿತ್ರ' ಎಂಬ ನೇರ ಹೆಸರನ್ನೆ ಇಟ್ಟುಕೊಂಡ ಅಂಥ ಪತ್ರಿಕೆಗಳು ಬಹಳ ವರ್ಷ ಬದುಕಿರಲಿಲ್ಲ. ಅಂದಹಾಗೆ ಚಂದಮಾಮದವರ, 'ಸಿನಿಮಾ' ಮಾಸಿಕದ ಹೆಸರು ಹೇಗೆ ಹುಟ್ಟಿತೆಂಬುದನ್ನು ನೀವೇ ಊಹಿಸಿರಿ. 'ಹಾಲಿವುಡ್' ಅನುಸರಿಸಿ ಬಾಲಿವುಡ್ ಆದ ಹಾಗೇನೆ, ಇದು.

ಕೊನೆಯದಾಗಿ, ವೃತ್ತಿಪರ ಪತ್ರಿಕೆಗಳ ಕೆಲ ಹೆಸರನ್ನಾದರೂ ಹೇಳಬೇಕು. 'ಅಂಚೆವಾಣಿ', 'ಅಡಿಕೆ ಸೂಚಿಕೆ', 'ಏಲಕ್ಕಿ', 'ಮೀನುಗಾರ', 'ಉಕ್ಕಿನ ವಾರ್ತೆ' – ಏನೆಲ್ಲ. ಆ ಪತ್ರಕರ್ತರ ಆಶಯ ಮೆಚ್ಚಬೇಕಾದದ್ದು. ಸ್ವಾತಂತ್ರ್ಯೋತ್ತರ ಕಾಲದ್ದಾದರೂ, ಎಂಜಿನಿಯರಿಂಗ್ ವಿಷಯಕ 'ಅಭಿಯಂತ ವಾಣಿ' ಎಂಬುದು ಕೆಲವು ಕಾಲ ಕೇಳಬಂತು. ಅದರ ಒಂದು ಸಂಚಿಕೆಯಲ್ಲಿ ಸಾಹಿತ್ಯ ಸಮ್ಮೇಳನದ ವಿವರ ವರದಿ ಪ್ರಕಟವಾದದ್ದುಂಟು! ಸಂಪಾದಕರ ಹೆಸರು ಹೇಳಲೆ? ಸುಲೇಮಾನ್ ಯತ್ನಟ್ಟಿ!

## ಪತ್ರಿಕಾ ಸೂಚಿಗಳು

ಈಗಿನ ದಿನಮಾನದಿಂದ ಆ ಕಾಲಕ್ಕೆ ಕಡಿಮೆ ಪತ್ರಿಕೆಗಳು ಕಾಣಿಸಿಕೊಂಡರೂ ಅವುಗಳ ಸಮೀಕ್ಷೆ, ಸೂಚಿಗಳು ಸಿದ್ಧವಾದದ್ದು ಆಶ್ಚರ್ಯಕರವಾದದ್ದು. ಸ್ವಾತಂತ್ರ್ಯ ಬಂದೊಡನೆ ಆಗಿನ ಪ್ರಾಂತ ಸರಕಾರಗಳು ತಂತಮ್ಮ ವಾರ್ತಾ ಮಾಸಿಕಗಳನ್ನು ಪ್ರಕಟಿಸುತ್ತಿದ್ದುದು ಕ್ರಮಪ್ರಾಪ್ತವಾದದ್ದೇ. ೧೯೪೮ರ 'ಮದ್ರಾಸು ಸಮಾಚಾರ'ದ ಕೆಲವು ಸಂಚಿಕೆಗಳಲ್ಲಿ, ಕನ್ನಡ ಪತ್ರಿಕೆಗಳ ಕುಲಗೋತ್ರದೊಂದಿಗೆ (ಊರು, ಸಂಪಾದಕರ ಹೆಸರು, ಕಾಲಾವಧಿ ಇ) ವಿವರಗಳು ಬಂದುವು. ೬೦ರಷ್ಟು ಪತ್ರಿಕೆಗಳ ಮಾಹಿತಿ – ಕಲೆ ಹಾಕಿ ಪ್ರಕಟಿಸಿದವರು ಕೆ. ವಿಠ್ಠಲ ಶೆಣೈ ಎಂಬವರು. ಅದೊಂದು ಅಪೂರ್ವ ದಾಖಲೆ.

ಅದಕ್ಕೂ ಸಾಕಷ್ಟು ಪೂರ್ವದಲ್ಲಿ (ಅಕ್ಟೋಬರ್ ೧೯೧೯), ನಾ. ಶ್ರೀ ರಾಜಪುರೋಹಿತರು '**ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**'ಯಲ್ಲಿ, 'ಕನ್ನಡ ಮಾಸಪತ್ರಿಕೆಗಳ ಸದ್ಯಃ ಸ್ಥಿತಿಯು' ಎಂಬ ಮಾಹಿತಿ ಪೂರ್ಣವಾದ ಸಮೀಕ್ಷೆಯನ್ನು ಬರೆದರಷ್ಟೆ. ಅದರಲ್ಲಿ ಮೃತಪಟ್ಟ, ಜೀವಂತವಿರುವ ಎಂಬ ವಿಭಾಗ ಮಾಡಿದ್ದು ಯುಕ್ತಿಯುಕ್ತವಾದದ್ದಾಗಿದೆ. ಅದೇ ಸುಮಾರಿಗೆ ಮೇಷ್ಪುಂಡಿ ಮಲ್ಲಾರಿಯವರು ಕನ್ನಡ ಪತ್ರಿಕೆಗಳ ಪ್ರದರ್ಶನವೊಂದು ಧಾರವಾಡದಲ್ಲಿ ಏರ್ಪಟ್ಟಾಗ 'ಜಯಕರ್ನಾಟಕ'ದಲ್ಲಿ ಅವುಗಳ ಯಾದಿಯನ್ನು ವಿವರ ಪ್ರಸ್ತಾವನೆಯೊಂದಿಗೆ ಪ್ರಕಟಿಸಿದ್ದಾರೆ.

ಈ ಸಂಬಂಧವಾಗಿ ಉಡುಪಿಯ 'ಅಂತರಂಗ'ವು ಒಂದು ಸ್ಪರ್ಧೆಯನ್ನೇ ಏರ್ಪಡಿಸಿದ್ದಿತು! (೧೯೪೧). ಸ್ಪರ್ಧೆಯ ನಿಯಮ ಇದು: ೧೮೪೩ರಿಂದ ೧೯೨೦ರ ವರೆಗೆ ಹುಟ್ಟಿ, ಅಳಿದ ಕನಿಷ್ಠ ಐವತ್ತು ಪತ್ರಿಕೆಗಳ ಬಗ್ಗೆ ಮಾಹಿತಿ ಕೊಡಬೇಕು. ಅದರಂತೆ ಅತ್ಯಂತ ಹಳೆಯ ಪತ್ರಿಕಾ–ಸಂಚಿಕೆಗಳನ್ನು ಕಳಿಸಬೇಕು. ಯಾರು ಅತಿ ಹೆಚ್ಚು ಸಂಖ್ಯೆಯಲ್ಲಿ ಹೆಸರುಗಳನ್ನೂ, ಹಳೆಯ ಸಂಚಿಕೆಗಳನ್ನೂ ಖಿದ್ದಾಗಿ ಕಳಿಸುವರೋ ಅವರಿಗೆ ರೂ. ೧೦ + ರೂ. ೧೫ ಬಹುಮಾನ. ಸ್ಪರ್ಧೆಯ ಎರಡರಲ್ಲಿಯೂ ವಿಜೇತರಾದವರು ಆಗಿನ ಧಾರವಾಡ ನಿವಾಸಿ ಟಿ. ಆರ್. ಭಾಗವತ ಎನ್ನುವವರು! ಅವರು ೫೯ ಪತ್ರಿಕೆಗಳ ಮಾಹಿತಿ – ಒದಗಿಸಿದ್ದರು. ಕೆಲವು ಗತಕಾಲದ

ಸಂಚಿಕೆಗಳನ್ನು ಅವರು ಕಳಿಸಿದ್ದರಲ್ಲಿ ಗತಕಾಲ ಪ್ರಸಿದ್ಧ 'ಜ್ಞಾನ-ಬೋಧಕ'ದ (೧೮೯೮) ಒಂದು ಪ್ರತಿಯೂ ಇದ್ದಿತು. ಹೀಗೆ ಸಂಗ್ರಹಿಸಲಾದ ಒಂದೊಂದು ಪತ್ರಿಕೆಯ ಬಗ್ಗೆ ಮಾಹಿತಿಯನ್ನು 'ಅಂತರಂಗ'ದವರು ಬಹಿರಂಗಗೊಳಿಸುವುದಾಗಿ ಹೇಳಿದ್ದರು. ಮುಂದೆ ಎಷ್ಟರ ಮಟ್ಟಿಗೆ ಹಾಗೆ ಮಾಡಿದರೋ ತಿಳಿಯದು.

## ವಾಚಕರೊಡನೆ ಸಂಬಂಧ

ಈಗಿನ ದಿನಗಳಲ್ಲಿ ಸಂಪಾದಕರ-ವಾಚಕರ ಸಂಬಂಧ ಶುಷ್ಕವಾದದ್ದೆಂಬುದು ನನ್ನ ಸ್ಪಷ್ಟ ಅಭಿಮತ. ಪ್ರತಿ ಸಂಚಿಕೆಯಲ್ಲಿ ವಾಚಕರ ಪತ್ರಗಳನ್ನು ಪ್ರಕಟಿಸುತ್ತಿದ್ದರೂ, ಹಿಂದಿನ ಸಂಚಿಕೆಯಲ್ಲಿ ಬಂದ ಲೇಖನಗಳ ಬಗ್ಗೆ ಅಷ್ಟಿಷ್ಟು ಮರುದನಿಯಲ್ಲದೇ ಬೇರೆ ಮಹತ್ವದ್ದೇನಿದೆ, ಹೇಳಿರಿ. ಗತಕಾಲದಲ್ಲಿ ಮಾತ್ರ ಅವರ ನಡುವಿನ ಸಂಬಂಧವು ನೇರ ಹಾಗೂ ಸ್ಪಷ್ಟವಾಗಿದ್ದಿತು. ಎಷ್ಟೆಂದರೂ ಅವರಿಗೆ ಚಂದಾದಾರರೇ (ವಾಚಕರೆಂಬುದಂತಿರಲಿ) ಮೂಲಾಧಾರ. ಅವರಿಂದ ಸೂಕ್ತ ಪ್ರೋತ್ಸಾಹ ದೊರೆತೇ ತೀರುವುದೆಂಬ ಆಸೆ-ಭರವಸೆ ಸಂಪಾದಕರದು. ಹೀಗಾಗಿ ಚಂದಾದಾರರನ್ನು ಹೊಗಳುವುದು, ರಮಿಸುವುದು, ಜೊತೆಗೆ ಅಂಗಲಾಚುವುದೂ, ಪ್ರೋತ್ಸಾಹ ಬಾರದಿದ್ದಾಗ ಕಟುವಾಗಿ ಬೈಯುವುದೂ ಸಹ - ಈ ಎಲ್ಲ ಪ್ರಕಾರಗಳನ್ನು ನಾವು ಗತಕಾಲದ ಪತ್ರಿಕಾರಂಗದಲ್ಲಿ ಕಾಣುತ್ತೇವೆ. ಒಂದು ಮಾತು, ಒಟ್ಟಿನಲ್ಲಿ ಹೊಗಳುವುದಕ್ಕಿಂತ, ಚಂದಾದಾರರನ್ನು ತೆಗಳುವುದೇ ಜಾಸ್ತಿಯಾಗಿ ಕಂಡು ಬರುತ್ತದೆ.

ಹೊಗಳಿಸಿಕೊಂಡವರಲ್ಲಿ ಗಳಗನಾಥರದು ಬಹು ದೊಡ್ಡ ಸಾಧನೆ. ಅವರು ಸಣ್ಣ ಹಳ್ಳಿಯಿಂದ ಹೊರಡಿಸುತ್ತಿದ್ದ ತಮ್ಮ 'ಸದ್ಬೋಧ ಚಂದ್ರಿಕೆ'ಯಲ್ಲಿ ಮೇಲಿಂದ ಮೇಲೆ 'ಚಂದ್ರಿಕೆಯನ್ನು ಎತ್ತಿ ಮುದ್ದಾಡಿಸಿದ ಚಂದಾದಾರರು' ಎಂಬ ಧರತಿಯ ಸಂಪಾದಕೀಯವನ್ನು ಬರೆಯುತ್ತಿದ್ದರು. ಮೊದಲ ವರ್ಷ ಸಾವಿರಕ್ಕೂ ಕಡಿಮೆ ಚಂದಾದಾರರಿದ್ದದ್ದು, ಮೂರನೆಯ ವರ್ಷಕ್ಕೇ ೨೫೦೦ ಜನ ಚಂದಾದಾರರಾದರೆ ಇನ್ನೇನು ಬೇಕು? ಎತ್ತಿ ಮುದ್ದಾಡಿಸಿದ - ಎಂಬ ಮಾತಿಗನುಗುಣವಾಗಿ ತಮ್ಮ ಪತ್ರಿಕೆ ಓರ್ವ 'ಬಾಲಿಕೆ' ಎಂಬರ್ಥದಲ್ಲಿ ನಿವೇದಿಸುತ್ತಿದ್ದರು.

> "ಮೊರದಲ್ಲಿ ಕೇವಲ ಪರಾಧೀನೆಯಾಗಿ ಮಲಗಿದ್ದ ಚಂದ್ರಿಕೆಯು ಈಗ ಕರ್ನಾಟಕ ಪ್ರಾಂತದಲ್ಲಿ ದುಡುದುಡು ಓಡಹತ್ತಿದ್ದಾಳೆ. ಧಾರವಾಡ, ವಿಜಾಪುರ, ಬೆಳಗಾಂವಿ ಜಿಲ್ಲೆಗಳಲ್ಲಿ ನಡಿಗೆಯ ವೇಗ, ಮೈಸೂರಲ್ಲಿ ನಡಿಗೆಯ ಗಾಂಭೀರ್ಯ, ಕಾರವಾರ, ಹೈದರಾಬಾದ, ಮದ್ರಾಸಗಳಲ್ಲಿ ನಡಿಗೆಯ ಮಂದತ್ವ, ಇತ್ತ ಹೊರಗೆ ಬಹುದೂರ ಇದ್ದ ಕನ್ನಡಿಗರು ಕರೆದರೂ ಚಂದ್ರಿಕೆಯು ಬೆದರದೆ ತಟ್ಟನೆ ಹೋಗುತ್ತಿರುವಳು. ಕರೆದವರ ಕೈಯೊಳಗಿನ ಕೂಸು ಆಕೆ!"

ಸ್ವಾತಂತ್ರ್ಯ ಸಂಗ್ರಾಮದ ಗಾಂಧೀ ಆಂದೋಲನದ ಕಾಲಕ್ಕೆ ಸುದ್ದಿ ಕೊಟ್ಟು, ಸರಕಾರವನ್ನು ತರಾಟೆಗೆ ತಗೊಳ್ಳುತ್ತಿದ್ದ ಕಾಲಕ್ಕೆ, ಕೆಲವು ವಾರ ಹಾಗೂ ದಿನಪತ್ರಿಕೆಗಳ, ಚಂದಾದಾರ - ವಾಚಕರಲ್ಲಿ ಈ ಹೆಚ್ಚಳ ಕಂಡುಬಂದಿತೇನೊ ನಿಜ. ಆದರೆ ಈ ರೀತಿಯ ಪ್ರೋತ್ಸಾಹ ಅನೇಕಾನೇಕರಿಗೆ ದೊರೆಯಲಿಲ್ಲ.

'ಪೆನ್ಶನರ್' ಎಂಬೊಂದು ಮಾಸಪತ್ರಿಕೆ. ಅದರಲ್ಲಿ ಹೀಗೊಂದು ನೋವಿನ ಸಂಪಾದಕೀಯವಿದೆ :

> "ಪತ್ರಿಕೆಯ ಮೂಲ ಉದ್ದೇಶವು ಜನಸೇವೆ ಆಗಿರುವುದರಿಂದ ಜನಸಾಮಾನ್ಯರು ಪತ್ರಿಕೆಗೆ ಮಂದಾರ ಪರ್ವತದ ಅಡಿಯ ಕೂರ್ಮನಂತೆ ಆಧಾರವಾದರೆ ಮಾತ್ರ ಸಮಾಜದ ಚರ್ವಣವು ಸರಿಯಾಗಿ ನಡೆದು ಮಧುರ ಬಾಂಧವ್ಯದ ಅಮೃತಪ್ರಾಪ್ತಿ ಆಗುವುದರಲ್ಲಿ ಸಂದೇಹವಿಲ್ಲ... ಹಿಂದೆ ನಮಗಿಂತ ಸಾವಿರ ಪಾಲು ಈ ವ್ಯವಸಾಯದಲ್ಲಿ ಉಚ್ಚಮಟ್ಟದ ಕಾರ್ಯ ಮಾಡಿ ಸೋತಿದ್ದಾರೆ. ನಮ್ಮದೂ ಅದೇ ಗತಿಯಾದರೆ ದ್ವೇಷವೂ ಇಲ್ಲ; ಆಶ್ಚರ್ಯವೂ ಇಲ್ಲ."

ಚಂದಾದಾರರಿಂದ ಪ್ರೋತ್ಸಾಹ ದೊರೆಯದಿದ್ದಾಗ ಸಂಪಾದಕರನೇಕರು ವಿವಿಧ ಬಗೆಯಾಗಿ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. 'ಚಂದ್ರೋದಯ' ಎನ್ನುವುದು ಧಾರವಾಡದಿಂದ ಹೊರಡುತ್ತಿದ್ದ ವಾರಪತ್ರಿಕೆ. ಚಂದಾದಾರರ ಸಂಖ್ಯೆ ಕೇವಲ ೨೦೦ ಇದ್ದಾಗ ಹೊರಬಂದ ಸಂಪಾದಕೀಯವಿದು :

> "ನಾವು ಹಣ ಕೊಯ್ದು ಮಣಿ ಮಾಡಿದರೂ ಚಂದಾದಾರರ ಸಂಖ್ಯೆ ಸಾಕಷ್ಟು ಹೆಚ್ಚಾಗಲಿಲ್ಲವೆಂದು ನೋಡಿ ನಮಗೆ ವ್ಯಸನವಾಗುತ್ತದೆ. ಕನ್ನಡಿಗರು ಈ ಪ್ರಕಾರ ನಮ್ಮ ಮೇಲೆ ಯಾಕೆ ಅವಕೃಪಾ ದೃಷ್ಟಿಯಿಂದ ನೋಡುತ್ತಾರೆ ಎಂಬುವದು ನಮಗೆ ತಿಳಿಯವಲ್ಲದು. ಇನ್ನು ಮುಂದಾದರೂ ನಮ್ಮ ಕನ್ನಡಿಗರ ಮೈಯಲ್ಲಿ ಅಭಿಮಾನದ ಗಾಳಿಯು ಶೇರಿ ಅವರು ನಮಗೆ ಸಹಾಯ ಮಾಡಬೇಕೆಂದು ವಿನಯಾನ್ವಿತ ಸೂಚನೆ ಮಾಡುತ್ತೇವೆ. ಮುಂದಿನ ವರ್ಷದೊಳಗಾಗಿ ನಮ್ಮ ಎಲ್ಲ ವಾಚಕರ ಸಂತೋಷಕ್ಕೆ ಪಾತ್ರವಾಗುವಂಥ ಸುಧಾರಣೆಗಳನ್ನು ಮಾಡುವ ವಚನವೀಯುತ್ತೇವೆ."

ಆದರೂ ಚಂದಾದಾರರಲ್ಲಿ ಅಭಿಮಾನದ ಗಾಳಿಯು ಒಳಸೇರಿದಂತೆ ಕಾಣಲಿಲ್ಲ. ಐದು ವರ್ಷಗಳ ಅನಂತರ(೧೮೯೭) ಸಂಪಾದಕರು ಹೀಗೆ ಕಟುವಾಗಿ ಬರೆದರು. "ಪತ್ರಿಕೆ ಬೇಡಾದವರು ಆದಷ್ಟು ಎಲ್ಲಾ ವರ್ಗಣಿ ಹಣ ಪೇಡ್ ಮಾಡದ ಹೊರತು ನಿಲ್ಲಿಸಲ್ಪಡಲಾರದು. ಪತ್ರಿಕೆಯನ್ನು ಹಾಗೇ ತಿರುಗಿ ಕಳಿಸಿದರೆ ಅದನ್ನು ಸ್ವೀಕರಿಸಲಾರೆವು."

ಏನೊಂದು ನೈತಿಕ ಧೈರ್ಯ! ಚಂದಾ ಹಣವನ್ನು ಪಡೆಯುವುದಕ್ಕೆ ಇಂದಿನವರು ಈ ವಿಧಾನವನ್ನು ಅನುಸರಿಸಲು ಸಾಧ್ಯವೆ? "ಪತ್ರಿಕೆಯನ್ನು ಕಳಿಸುತ್ತ ಹೋದರೆ ಹೋಗಲಿ. ನಮಗೇನಂತೆ" ಎಂದು ನಿರ್ಭಿಡೆಯಿಂದ ಅಲಕ್ಷ್ಯ ಮಾಡುವ ಓದುಗರಿರುವ ದಿನಗಳಿವು.

'ಹಿಂದೂ ಮತಾಭಿಮಾನಿ' ಪತ್ರಿಕೆಯು ತನ್ನೀ ಅಳಲನ್ನು ಬೇರೊಂದು ರೀತಿಯಲ್ಲಿ ತೋಡಿಕೊಂಡಿತು:

"ಮಾರ್ಚಿ ಅಖೈರೆಂಬುದು ಜನರಿಗೆ ವರ್ಷಾಂತ್ಯವಾಗಿರುವಂತೆ ಸರ್ವರೂ ಈ ಕಾಲದಲ್ಲಿ ತಮ್ಮ ಆಶ್ರಯಗಳಾದ ಕಂದಾಯಗಳನ್ನು ಕೊಟ್ಟು ತಮ್ಮ ಸಾಲವನ್ನೂ ಬಗೆಹರಿಸಿಕೊಂಡು ಇರುವಂತೆ, ನಮ್ಮ ಪತ್ರಿಕೆಯ ಸಮ್ಮಂಧವಾಗಿ ನಾವು ಪದೇ ಪದೇ ಪತ್ರಿಕೆಯಲ್ಲಿ ಬರೆಯುವ 'ಚಂದಾದಾರರಿಗೆ ವಿಜ್ಞಾಪನೆ' ಎಂಬುದು ಒಂದೆರಡು ಪೇಜುಗಳನ್ನು ತಿನ್ನದಂತೆ ಆಗಬೇಕು. ಒಂದು ವೇಳೆ ಬೇಡವಾಗಿರುವ ಸಂಚಿಕೆಗಳನ್ನು ತಮ್ಮಲ್ಲಿ ಇಟ್ಟುಕೊಂಡು ಲುಕ್ಸಾನು ಪಡಿಸದೇ ವಾಪ್ಸು ಮಾಡಿಬಿಡುವದು.

- ಎಂದು ಬೇಡುವ ವಿಧೇಯ. ಎಡಿಟರ್ ಹಿ.ಮ.

ಕ್ರಿ.ಶ. ೧೯೩೩ರಲ್ಲಿ ಖ್ಯಾತನಾಮ ಪಂ. ತಾರಾನಾಥರು 'ಪ್ರೇಮ' ಎನ್ನುವ, ಮೌಲಿಕವಾದ ಪತ್ರಿಕೆಯೊಂದನ್ನು ಆರಂಭಿಸಿದರು. ಶ್ರೀರಂಗ, ಕುವೆಂಪು, ಬೇಂದ್ರೆ ಮೊದಲಾದ ಮಹನೀಯರ ಲೇಖನಗಳು ಅದರಲ್ಲಿ ಪ್ರಕಟಗೊಳ್ಳುತ್ತಿದ್ದವು. ಕೆಲವು ವರ್ಷಗಳಾದ ಮೇಲೆ ಚಂದಾದಾರರು ಪ್ರೋತ್ಸಾಹಿಸಿದಂತೆ ಕಾಣಲಿಲ್ಲ. ವರ್ಷಾಂತ್ಯದ ಒಂದು ಸಂಚಿಕೆಯಲ್ಲಿ, ಪತ್ರಿಕೆ ಬೇಡವಾಗಿದ್ದವರು ಅದನ್ನು ಮರಳಿ ಕಳಿಸಬೇಕೆಂದು ವಿನಂತಿಸಿದರು. ಜೊತೆಗೆ ಅದಕ್ಕೆ ಅನುವಾಗಲೆಂದು ಹೊಸ ವರ್ಷದ ಆ ಮೊದಲ ಸಂಚಿಕೆಯಲ್ಲಿ ಒಂದು ರಿಪ್ಲೈ ಪೋಸ್ಟ್ ಕಾರ್ಡ್! ಅದರ ನಕಲು ಒಕ್ಕಣಿಕೆ ಪತ್ರಿಕೆಯವರದ್ದೇ.

"ಮಾನ್ಯ ಸಂಪಾದಕರೇ,

ನಾನು ಇನ್ನು ಮುಂದೆ 'ಪ್ರೇಮ'ಕ್ಕೆ ವರ್ಗಣಿದಾರನಾಗಿರಲಾರೆನು. ಆದುದರಿಂದ ದಯ ಮಾಡಿ ನನಗೆ ಪತ್ರಿಕೆಯನ್ನು ಕಳಿಸಬೇಡಿರಿ.... ಇತಿ ನಿಮ್ಮ....... (ವರ್ಗಣಿದಾರನ ಸಹಿ)"

ಈ ವಿಷಯದಲ್ಲಿ ಚಂದಾದಾರ/ವಾಚಕರು ಎಷ್ಟರಮಟ್ಟಿಗೆ ದೋಷಾರ್ಹರು? "ಹಣ ನಮ್ಮದು. ನಾವು ಓದಬೇಕೆನ್ನುವಂಥ ಆಸಕ್ತಿಯ ವಿಷಯ ಇಲ್ಲದಿದ್ದರೆ ನಾವ್ಯಾಕೆ ಚಂದಾದಾರರಾಗಬೇಕು" ಎಂದು ಯಾರಾದರೂ ಕೇಳಿದ್ದಾದರೆ? ಎಷ್ಟೋ ಬಾರಿ ಪತ್ರಕರ್ತರು ಹಿಂದು ಮುಂದಿನ ವಾಸ್ತವಿಕ ಯೋಚನೆ ಇಲ್ಲದೆ ಪತ್ರಿಕೆ ಹೊರಡಿಸಲು ಮುಂದಾಗುತ್ತಿದ್ದರೇನೋ. ಇದರ ಅತಿರೇಕದ ನಿದರ್ಶನವೆಂಬಂತೆ ೧೯೩೫ನೆಯ ವರ್ಷದಲ್ಲಿ, 'ಕೊಡಗು ಬೋಧಿನಿ'ಯು ಅಲ್ಲಿಯ ಅಮ್ಮತ್ತಿಯಿಂದಲೂ, 'ಆಯುರ್ವೇದ'ವು ತೀರ್ಥಹಳ್ಳಿಯಿಂದಲೂ ಆರಂಭವಾಗಿ ಎರಡನೆಯ ಸಂಚಿಕೆಗೇ ಮಂಗಳ ಹಾಡಿದವು.

## ಪತ್ರಿಕೆಗಳ ಪರಸ್ಪರ ಸಂಬಂಧ

ಸಂಪಾದಕ - ವಾಚಕರುಗಳ ನಡುವಿನ ನೇರ ಸಂಬಂಧ ಹೇಗಿದ್ದಿತೆಂಬುದನ್ನು ನೋಡಿದೆವು. ಪತ್ರಿಕೆ - ಪತ್ರಿಕೆಗಳ ನಡುವೆಯೂ ಇದೇ ನೇರ ಸಂಬಂಧವಿದ್ದಿತು. ಪರಸ್ಪರ ಟೀಕಿಸುವಲ್ಲಿಯೂ! ಗಾಜಿನ ಮನೆಯವರು ಎದುರಿಗಿನ ಗಾಜಿನ ಕಿಟಕಿಯ ಮೇಲೆ ಕಲ್ಲು ತೂರಬಾರದು - ಎಂಬಂತೆ ಈಗಿನ ಪತ್ರಿಕೆಗಳ ಧೋರಣೆ. ಎಲ್ಲೋ ಅಪರೂಪಕ್ಕೆ ಒಂದು ಪತ್ರಿಕೆಯ ಸಂಪಾದಕನು ಇನ್ನೊಬ್ಬನನ್ನು ಟೀಕಿಸಿದ್ದು ಕಂಡುಬಂದೀತು. ಗತಕಾಲದ ಪತ್ರಿಕಾ ಸಂಪಾದಕರು ನಿರ್ಭಿಡೆಯಿಲ್ಲದೆ ಇನ್ನೊಬ್ಬ ಪತ್ರಕರ್ತರ ಹೆಸರು ತಗೊಳ್ಳುತ್ತಿದ್ದರು. 'ಸದ್ಬೋಧ ಚಂದ್ರಿಕೆ'ಯ ಜನಪ್ರಿಯತೆಯನ್ನು ಕಂಡು ಮೈಸೂರ ಕಡೆಯ 'ಕರ್ನಾಟಕ ಕಾದಂಬರೀ ಸಂಗ್ರಹ'ದ ಸಂಪಾದಕರು ತಮ್ಮದನ್ನು ಬದಿಗಿರಿಸಿ, ಚಂದಾದಾರರನ್ನು ಒದಗಿಸಿದರು - ಎಂದರೆ ನಂಬಿರಿ.

ತಾತ್ವಿಕವಾಗಿ ವಿರುದ್ಧ ದೃಷ್ಟಿಕೋನದ ಪತ್ರಿಕೆಗಳು ಪರಸ್ಪರ ಟೀಕೆ ಮಾಡುವಲ್ಲಿ ಸಂಕೋಚ ತೋರುತ್ತಿರಲಿಲ್ಲ. ಕ್ರಿಸ್ತೀಯ ಪತ್ರಿಕೆಗೆ ಹಿಂದೂ ಧರ್ಮವನ್ನು, ಹಾಗೂ ಶ್ರೀ ಕೃಷ್ಣ ಮೊದಲಾದ ದೇವತೆಗಳನ್ನು ನಿಂದಿಸದೇನೆ ಸ್ವಮತ ಪ್ರಚಾರ ಸಾಧ್ಯವಾಗದು. ಇದನ್ನು ವಿರೋಧಿಸಲೆಂದೇ ಕೆಲವು ಪತ್ರಿಕೆಗಳು ಹೊರಬಂದುವು. 'ಹಿಂದೂ ಮತಾಭಿಮಾನಿ'ಯು ನೇರವಾಗಿಯೇ ಈ ಕಣಕ್ಕೆ ಇಳಿಯಿತು. ತನ್ನ ಮೊದಲ ಸಂಚಿಕೆಯಲ್ಲಿಯೆ 'ಬೈಬಲ್ಲಿನಲ್ಲಿ ಸಂದೇಹಗಳು' ಎಂಬುದನ್ನೆತ್ತಿಕೊಂಡು, ಅದಕ್ಕೆ ಸಮರ್ಪಕ ಉತ್ತರ ಕೊಡುವಿರಾ' ಎಂದು ಮಿಶನರಿ ಜನರನ್ನು ಕೇಳಿದಾಗ ಯಾರೂ ಉತ್ತರ ಕಳಿಸಲಿಲ್ಲವಂತೆ. ಇದಕ್ಕೆ ಪ್ರತಿಯಾಗಿ 'ಕ್ರೈಸ್ತ ಸಭಾಪತ್ರ'ವು ಲೇವಡಿ ಮಾಡಿದ ಬಗೆ ನೋಡುವ ಹಾಗಿದೆ. (ಸೆಪ್ಟೆಂಬರ್ ೧೮೮೯)

"ಹಿಂದೂ ಮತಾಭಿಮಾನಿ, 'ಹ.ಸು.' ಎಂಬೀ ಮೊದಲಾದ ಹಿಂದೂ ಮತಾಭಿಮಾನ ಪ್ರಸಾರಕ ಪತ್ರಗಳ ಕೃತಿಭರ್ತರಿಗೂ ಪಠಕರಿಗೂ ಬೈಬಲಿಂದ ಬಹಳ ಬಹಳೇ ಉಪಪತ್ತಿಯಾಗುವದುಂಟು. ಬೇರೆ ಪ್ರಸ್ತಾಪಗಳು ಇಲ್ಲದ ಸಮಯದಲ್ಲಿ ಅಂಥ ನೇಟಿವ್ ಪತ್ರರಚಕರು ಬೈಬಲಿನ ವೃತ್ತಾಂತಗಳನ್ನು ಮೆಲಕು ಹಾಕಿ ಹಾಸ್ಯಕ್ಕೆ ಗುರಿಯಿಟ್ಟು, ಗೇಲಿ ಎಬ್ಬಿಸುವವರು ಸಾಂಪತ್ರದಲ್ಲಿ ಬಹು ವಾಡಿಕೆಯಾಗಿದೆ. ಬೈಬಲಿಲ್ಲದಿದ್ದರೆ ಅಂಥಾ ಪತ್ರಗಳು ನಸಿಪುಡಿ (ನಸ್ಯ) ಇಲ್ಲದ ಬುರುಡೆಯಂತಾಗಿ ಹೋದಾವು. ಈ ಕಾರಣದಿಂದಲಾದರೂ ಈ ನೇಟಿವ್ ಪತ್ರಗಳ ರಚಕರೂ ವಾಚಕರೂ ಬೈಬಲಿಗೆ ಉಪಕಾರಬದ್ಧರಾಗಿರುತ್ತಾರೆ."

## ಸ್ವಾತಂತ್ರ್ಯ ಚಳುವಳಿ

ಸ್ವಾತಂತ್ರ್ಯ ಚಳುವಳಿಯ ಸುದ್ದಿಗಳು, ಕೌತುಕಮಯ ವಿಷಯಗಳು, ಕವಿತಾ ರೂಪದ ಜಾಹೀರಾತುಗಳು, ನೇರ ಸರಳ ಸಣ್ಣಕತೆಗಳು ಪ್ರಾಮಾಣಿಕ ಹಾಗೂ ಬಿಚ್ಚುಮನದ ಸಂಪಾದಕೀಯ ಟೀಕೆ-ಟಿಪ್ಪಣಿಗಳು - ಯಾವದೊಂದು ಹಳೆಯ ಪತ್ರಿಕಾ ಸಂಚಿಕೆ ದೊರೆತದ್ದಾದರೆ ಇವುಗಳಲ್ಲಿ ಒಂದಾದರೂ ಅಂಶ ತೋರದೇ ಇರದು. ಈ ಲೇಖನದ ಮಟ್ಟಿಗೆ ಕೈಗೆಟಕಿದ ಕೆಲವನ್ನು ಯಾವುದೇ ಕ್ರಮವನ್ನನುಸರಿಸದೇ ಕೊಡುತ್ತಿದ್ದೇವೆ.

ಕ್ವಿಟ್ ಇಂಡಿಯಾ ಚಳುವಳಿ. ೧೯೪೨ರ ಆಗಸ್ಟ್ ೯ರಂದು ನಸುಕಿನಲ್ಲಿ ಗಾಂಧೀಜಿಯ ಸೆರೆ. ಅದರ ವರ್ಣನೆ 'ಹರಿಜನ'ದಲ್ಲಿ ಎಷ್ಟೊಂದು ಸೊಗಸಾಗಿ ಬಂದಿದೆ! ಆದರೆ ಇದು ಕನ್ನಡ ಹರಿಜನ ಪತ್ರಿಕೆ. ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಸಂಪಾದಿಸುತ್ತಿದ್ದರು. ಮೂಲ ಹರಿಜನದಿಂದ ಲೇಖನಗಳನ್ನು ಅನುವಾದಿಸುತ್ತಿದ್ದರು. ಮಹಾತ್ಮರು ಬಂಧಿತರಾದಾಗಿನ ಪ್ರಸಂಗ ಅವರಲ್ಲಿದ್ದು, ಕಣ್ಣಿಗೆ ಕಟ್ಟುವಂತಿದೆ.

> "ಎಂದಿನಂತೆ ಬೆಳಗಿನ ೪ ಗಂಟೆಗೆ ಪ್ರಾರ್ಥನೆಗಾಗಿ ಗಾಂಧೀಜಿ ಎದ್ದರು. ಪ್ರಾರ್ಥನೆ ಮುಗಿದು ಇನ್ನೇನು ತಮ್ಮ ದಿನಚರಿಯ ಕೆಲಸಗಳನ್ನು ಮೊದಲಿಡಬೇಕು. ಪೋಲೀಸ್ ಕಮೀಶನರ್ ಹೊರಬಾಗಿಲಲ್ಲಿ ಬಂದು ನಿಂತಿದ್ದಾನೆ. ಗಾಂಧೀಜಿಯ ಕಾರ್ಯದರ್ಶಿ ಮಹದೇವ ದೇಸಾಯರನ್ನು ನೋಡಬಯಸುತ್ತಾನೆ. ಅವರ ಕೈಸೆರೆ ಹುಕುಮನ್ನು ಆತ ತಂದಿದ್ದಾನೆ.
>
> ಗಾಂಧೀಜಿ ವಿಚಾರಿಸಿದ್ದಕ್ಕೆ ಅರ್ಧ ಗಂಟೆ ಕಾಲ ವಿರಾಮವಿದೆ ಎಂದರು; ದಿನಚರಿಯಂತೆ ಗಾಂಧೀಜಿ ಹಣ್ಣಿನ ರಸ, ಮೇಕೆ ಹಾಲು ತೆಗೆದುಕೊಂಡರು. ಅನಂತರ ಅವರ ಪರಿವಾರವೂ ಬಿರ್ಲಾ ಕುಟುಂಬದ ಜನರೂ ಕಲೆತು, ಗಾಂಧೀಜಿಗೆ ಬಹು ಇಷ್ಟವಾದ ವೈಷ್ಣವ ಜನತೋ ಎಂಬ ಗೀತವನ್ನು ಹಾಡಿದರು. ಸೇವಾ ಗ್ರಾಮದ ಮುಸ್ಲಿಂ ಆಶ್ರಮವಾಸಿ ಅಮ್ತುಲ್ಸಲಾಮ್ ಕೊರಾನಿನ ಶ್ಲೋಕ ಹೇಳಿದಳು. ಆಮೇಲೆ ತಮ್ಮ ಗೀತೆಯ ಪುಸ್ತಕ, ಆಶ್ರಮ ಭಜನಾವಲಿ, ಕೊರಾನ್, ಒಂದು ಉರ್ದು ಪ್ರಥಮ ಪುಸ್ತಕ, ನೂಲಲಿಕ್ಕೆ ಧನುಷ್ ತಕಲಿ, ಇವಿಷ್ಟನ್ನು ತೆಗೆದುಕೊಂಡು ಪೊಲೀಸ್ ಕಮೀಶನರರ ಜೊತೆ, ಒಂದು ಮೋಟಾರಿನಲ್ಲಿ ಮೀರಾಬೇನ್ ಮತ್ತು ಗಾಂಧೀಜಿ ಹೊರಟರು. ಪಯಣವಾಗುವ ಮುನ್ನ, ಉಪವಾಸ ಮಾಡಲು ಅವಸರಪಡಬೇಡಿರೆಂದು ಅವರನ್ನು ಘನಶ್ಯಾಮದಾಸ ಬಿರ್ಲಾ ಕೇಳಿಕೊಂಡರು. ಅದಕ್ಕೆ ಗಾಂಧೀಜಿ, "ಅವಸರ ಪಡುವುದಿಲ್ಲ. ಆದರೆ ಒಳಗಿನಿಂದ ಸ್ಪಷ್ಟವಾಗಿ ಆದೇಶ ಬಂತೋ, ತಮಗದನ್ನು ತಡೆಯಲಾಗಲಿಕ್ಕಿಲ್ಲ, ಎಂದರು."

ಹೀಗಿದ್ದರು ಗಾಂಧೀಜಿ - ಈಗಿನವರಿಗೆ ಅವರ ಕಲ್ಪನೆಯೂ ಬಾರದಂತೆ.

ಇನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಅಖಂಡವಾಗಿ ಹೋರಾಡಿದ ಕರ್ನಾಟಕ ವೈಭವ, ಕರ್ಮವೀರ, ವಿಶ್ವಕರ್ನಾಟಕ, ಪ್ರಜಾಮತ, ವೀರಕೇಸರಿ, ತಾಯಿನಾಡು, ಸಂಯುಕ್ತ ಕರ್ನಾಟಕ ಇವು ಪತ್ರಿಕೋದ್ಯಮದ ಉಜ್ವಲ ಪ್ರಕರಣಗಳಾಗಿವೆ. ಇವು ಒಂದೊಂದರ ಬಗ್ಗೆಯೂ ಗ್ರಂಥವನ್ನು ರಚಿಸುವಷ್ಟು ಉದ್ಬೋಧಕ ಅಂಶಗಳಿವೆ.

## ಸ್ತ್ರೀಯರ ಏಳ್ಗೆ

ಸಾಮಾಜಿಕ ವಿಷಯಗಳತ್ತ ತುಸು ಗಮನ ಕೊಡೋಣವೆ? ಈಗೆಲ್ಲ ಸ್ತ್ರೀವಾದಿ ಲೇಖನಗಳು ಮೇಲಿಂದ ಮೇಲೆ ಬರುತ್ತಿವೆ. ಇವುಗಳ ಪ್ರಮಾಣವನ್ನು ಮೀರಿಸುವಷ್ಟು, ಸ್ತ್ರೀಯರ ಏಳ್ಗೆಯ ಕುರಿತು ತುಂಬಾ ಬರಹಗಳು ಆಗಿನ ದಿನಗಳಲ್ಲಿ ಪ್ರಕಟವಾದುವು. ವಿಧವಾ ವಿವಾಹ, ಬಾಲ್ಯ ವಿವಾಹ ನಿಷೇಧ, ಶಾಲಾ ಶಿಕ್ಷಣ, ಇವು ಒಂದೊಂದರ ಕುರಿತು ಪತ್ರಿಕೆಗಳಲ್ಲಿ ವಿಶೇಷವಾಗಿ ಇಂಬು ದೊರೆಯಿತು. ವೆಂಕಟ ರಂಗೋ ಕಟ್ಟಿಯವರು, ವಿಧವಾ ವಿವಾಹ ನಿಷಿದ್ಧವೆಂದು ತೋರಿಸಿದವರಿಗೆ, ಅದರಂತೆ ವಿಧವಾ ಕೇಶಮುಂಡನವು ಶಾಸ್ತ್ರದಲ್ಲಿ ಹೇಳಿಲ್ಲವೆಂದು ತೋರಿಸಿ ಬರೆದವರಿಗೆ, ಬಹುಮಾನ ಕೊಡುವುದಾಗಿ ಸಾರಿದ್ದರು. ಸಾರಸ್ವತ ಸಮಾಜದವರೂ ಈ ವಿಷಯದಲ್ಲಿ ಪ್ರಗತಿಪರ ನಿಲುವನ್ನು ತಳೆದವರು. ಉಡುಪಿಯ 'ಸುದರ್ಶನ' ಪತ್ರಿಕೆಯಲ್ಲಿ ಸ್ತ್ರೀಶಿಕ್ಷಣದ ಕುರಿತು ಒಂದು ಲೇಖ

ಬಂದಿಪ್ಪು (ಫೆಬ್ರು. ೧೮೯೬) ಅವರ ಕೆಲವು ಅವತರಣಿಕೆಗಳಿವು:

'ಸ್ತ್ರೀವಿದ್ಯಾ ಕುರಿತು ನಮ್ಮ ಜಿಲ್ಲೆಯಲ್ಲಿ ತಕ್ಕಮಟ್ಟಿಗೆ ಅಲಕ್ಷ್ಯ ಕೊಡೋಣವಾಗುತ್ತದೆ. ಮಂಗಳೂರಿನ ಓರ್ವ ವಕೀಲರ ಮಗಳು ಪಾರ್ವತಿ ಮಿಡ್ಲ್ ಸ್ಕೂಲ್ ಪರೀಕ್ಷೆಯನ್ನೇನೋ ಪಾಸಾದಳು. ಆಮೇಲೆ ಶ್ರೀಮಂತ ಗಂಡನ ಕೈಹಿಡಿದು ವಿದ್ಯಾಭ್ಯಾಸ ಬಿಟ್ಟುಬಿಟ್ಟಳು. "ಸ್ತ್ರೀಯರು ವಿದ್ಯಾಲಂಕೃತರಾದರೆ ಅವರ ಒಡಹುಟ್ಟಿದವರಿಗೂ ಒಡೆಯಿರುವವರಿಗೂ ಆನಂದಕರ ಮತ್ತು ಶ್ರೇಯಸ್ಕರ. ಈ ಮಾತಿಗೆ ವಿರೋಧವಾಗಿ ಕನ್ನಡದಲ್ಲಿ ಒಂದು ಉಪನ್ಯಾಸವನ್ನು ತಯಾರಿಸಿ ಕಳುಹಿಸಿದವರಿಗೆ ಬರುವ ಎಪ್ರಿಲ್ ತಿಂಗಳಲ್ಲಿ ೫ ರೂ. ಬಹುಮಾನ ಕೊಡುವೆವು. ಅದರಲ್ಲಿ ಸ್ತ್ರೀಯರು ವಿದ್ಯೆ ಕಲಿಯಲಿಕ್ಕೆ ಏನೂ ಯೋಗ್ಯರಲ್ಲವೆಂತ ಕಾರಣಗಳೂ ಉದಾಹರಣೆಗಳೂ ಕೊಟ್ಟು ತೋರಿಸಬೇಕು."

## ಜನತಾ ಶಿಕ್ಷಣ

ಆಗಿನ ಪತ್ರಕರ್ತರ ಜನತಾ ಶಿಕ್ಷಣ ದೃಷ್ಟಿಯನ್ನು ಮತ್ತೆ ನೆನಪಿಗೆ ತಂದುಕೊಳ್ಳಬೇಕು. ಎಲ್ಲೆಲ್ಲಿಯವೊ ಸುದ್ದಿಗಳನ್ನು ವಿಶೇಷತಃ ನಾಗರಿಕ ಜಗತ್ತಿನ ಹೊಸ ಆವಿಷ್ಕಾರಗಳನ್ನು ಮೊದಲ ಪುಟದಲ್ಲೇ ಕಾಣಿಸುವುದಕ್ಕೆ ಇಷ್ಟಪಡುತ್ತಿದ್ದರು.

ಉತ್ತರ ಕರ್ನಾಟಕ ಪ್ರದೇಶದಲ್ಲಿ ಮೊದಲ ಬಾರಿಗೆ ರೇಲ್ವೆ ಲೈನ್ ಹಾಕಿದಾಗ 'ಕನ್ನಡ ಜ್ಞಾನ ಬೋಧಕ'ವು ರೇಲ್ವೆ ಎಂಬುದನ್ನು ಹೀಗೆ ಪರಿಚಯಿಸಿ ಕೊಟ್ಟಿತು. (ಎಪ್ರಿಲ್ ೧೮೮೨)

**ಲೋಹ ಮಾರ್ಗಗಳು:** ಇಂದಿಗೆ ಮುನ್ನೂರು ವರ್ಷಗಳ ಹಿಂದೆ ಅಂದರೆ ಭರತಖಂಡದೊಳಗಿನ ಜನರಿಗೆ ಹೊಸ ಶೋಧ ಮಾಡುವುದೇನು ಉಳಿದಿಲ್ಲವೆಂದು ತಿಳಿಯುತ್ತಿದ್ದಾಗ್ಗೆ ಪಶ್ಚಿಮ ದ್ವೀಪಸ್ಥರು ಯಂತ್ರದ ಸಹಾಯದಿಂದಲೂ, ವಾಯು, ಉದಕ, ಹವೆ ಮೊದಲಾದ ನಿರ್ಜೀವ ಪದಾರ್ಥಗಳಿಂದಲೂ ಸಜೀವ ಪದಾರ್ಥಗಳಿಗಿಂತ ಹೆಚ್ಚೆಚ್ಚಿಗೆ ಶೋಧ ಮಾಡುತ್ತ ಹೋದಂತೆ ಅವರ ಕಾರ್ಯವು ಸಿದ್ಧಿಗೆ ಹೋಗಿ, ಅವರು ಈಗ ಪೃಥ್ವಿಯೊಳಗಿನ ಸಕಲ ಜನರೊಳಗೆ ಬುದ್ಧಿಶಾಲಿಗಳಾಗಿಯೂ ಧನವಂತರಾಗಿಯೂ ಇದ್ದಾರೆ... ಇತ್ಯಾದಿ.."

**'ಕನ್ನಡ ಶಾಲಾಪತ್ರಕ'**ದ ಫೆಬ್ರುವರಿ ೧೮೯೮ರಲ್ಲಿ ಬಂದ ಇದೊಂದು ಮಾಹಿತಿ : ಸಜೀವ ಹಾಗೂ ನಿರ್ಜೀವ ಪದಾರ್ಥಗಳು ೧ ಸೆಕೆಂಡಿನಲ್ಲಿ ಎಷ್ಟು ಗಮಿಸುವವೆಂಬುದರ ತಪಶೀಲು :

ಬಸವನ ಹುಳ ೧/೨ ಇಂಚು; ನಡಿಯುವ ಮನುಷ್ಯ ೪ ಫೂಟು; ಓಡುವ ಮನುಷ್ಯ ೨೩ ಫೂಟು; ನೊಣ ೨೪ ಫೂಟು; ಸಮುದ್ರದ ತೆರೆ ೭೦ ಫೂಟು; ಬಾಣಕ್ಕೆ ೨೨೦ ಫೂಟು; ಬಿರುಗಾಳಿ ೩೮೦ ಫೂಟು; ಧ್ವನಿ ೧೦೯೫ ಫೂಟು; ಚಂದ್ರ ೩೨೫೦  ಫೂಟು; ಸೂರ್ಯ ಒಂದು ಸೆಕೆಂಡಿಗೆ ಐದೂವರೆ ಮೈಲು! ಇತ್ಯಾದಿ.

## ವಾಚಕರ ಪ್ರಶ್ನೋತ್ತರ

ಇಂದಿನ ವಾರಪತ್ರಿಕೆಗಳಲ್ಲಿ ಪ್ರಶ್ನೋತ್ತರ ತಪ್ಪದೇ ಇರುತ್ತದೆ. ಆಗಲೂ ಕೂಡ ಇದಕ್ಕೆ ಪ್ರಾಶಸ್ತ್ಯ ಇದ್ದಿತು. ಒಂದರ ಉದಾಹರಣೆಯನ್ನು ಮಾತ್ರ ಕೊಡುವೆ. 'ಅಂತರಂಗ' ಸಾಪ್ತಾಹಿಕವು 'ನಿಮ್ಮ ಪ್ರಶ್ನೆಗೆ ನಮ್ಮ ಉತ್ತರ' ಎಂಬ ಸದರಿನಲ್ಲಿ ಈ ಅಂಕಣವನ್ನು ನಡೆಸುತ್ತಿತ್ತು. ವಿಶೇಷವೆಂದರೆ 'ಗಡಿ ಮೀರಿದ ಪ್ರಶ್ನೆಗಳಿಗೆ ಗುಟ್ಟಿನ ಉತ್ತರ' ಎಂಬುದು. ಅದರಲ್ಲಿ ಪ್ರಶ್ನೆಯನ್ನು ಪ್ರಕಟಿಸದೇ ಉತ್ತರ ಮಾತ್ರ ಹೇಳುವುದು. ಅದಕ್ಕೆ ಬೊಂಬಾಯಿಯ ಓರ್ವ ಪ್ರಶ್ನಾರ್ಥಿಯು ಈ ರೀತಿ ಪ್ರತಿಕ್ರಿಯಿಸಿದ.

**ಪ್ರಶ್ನೆ:** ನಿಮಗೆ ಕಳುಹಿಸುವ ಪ್ರಶ್ನೆಗಳಲ್ಲಿ ಕೆಲವಕ್ಕೆ ನೀವು ಉತ್ತರವನ್ನೇ ಕೊಡುವುದಿಲ್ಲ. ಇನ್ನು ಕೆಲವಕ್ಕೆ ತಿದ್ದುಪಡಿ ಮಾಡುತ್ತೀರಿ. ಬೇರೆ ಕೆಲವನ್ನು ಗಡಿ ಮೀರಿದ ಪ್ರಶ್ನೆಗಳ ವರ್ಗಕ್ಕೆ ಸೇರಿಸಿ ಅಪಹಾಸ್ಯ ಮಾಡುತ್ತೀರಿ, ಈ ಕುರಿತು ನೀವೆನ್ನುವುದೇನು?

**ಉತ್ತರ:** ಹೌದೆನ್ನುತ್ತೇವೆ. ಮಾದರಿಗಾಗಿ "ನೆರೆಮನೆಯ..... ಮ್ಮ ಹೆರುವುದು ಹೆಣ್ಣೊ ಗಂಡೊ ಹೇಳಬಲ್ಲಿರಾ?" ಅಂಥ ಪ್ರಶ್ನೆ ಕೇಳಿದರೆ ಉತ್ತರವನ್ನೇ ಕೊಡುವುದಿಲ್ಲ. "ಮಹಮ್ಮದ ಕಣ್ಣಾನ್‌ರವರು ವಾಯಿಸರಾಯರೊಡನೆ ಕುಳಿತಾಗ ಯಾರೋ ಅವರನ್ನು ಚೂರಿಯಿಂದ ಇರಿದರಂತೆ. ಆದಾಗ ವಾಯಿಸರೇಕೆ ತಡೆಯಲಿಲ್ಲ?" ಎಂಬಂತಹ ಪ್ರಶ್ನೆಯನ್ನು ತಿದ್ದುತ್ತೇವೆ. "ಕಾಲ್ಚೆಂಡುಗಳ ಅಭಾವವಿರುವಾಗ ತಲೆಯನ್ನೊಂದಿಷ್ಟು ಎರವಲಾಗಿ ಕೊಡಬಹುದೆ?" ಎಂಬಂತಹ ಪ್ರಶ್ನೆ ಬಂದರೆ ಗುಟ್ಟಿನ ಉತ್ತರ ಕೊಡುತ್ತೇವೆ.

## ಕವಿತೆಯೋ? ಗಪದ್ಯವೋ?

ಹಿಂದಿನ ದಿನಗಳಲ್ಲಿ ಕವಿತೆಗೂ ಪತ್ರಿಕೆಗೂ ತುಸು ಮಟ್ಟಿಗೆ ಆತ್ಮೀಯ ಸಂಬಂಧವಿತ್ತು. ಈಗಿನವರು ಅನಿವಾರ್ಯವೆಂಬಂತೆ, ಬಿಪದ ಕರ್ಮ ಎಂಬಂತೆ ಅರೆಮನಸ್ಸಿನಿಂದ ಕವಿತೆ ಪ್ರಕಟ ಮಾಡುತ್ತಾರೆ. ಅದನ್ನು ಓದುವವರು ಇನ್ನೂ ಕಡಿಮೆ. ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗುವವಂತೂ ಹೋತಿನ ಮೊಲೆಯ ನೆನಪನ್ನು ತಂದುಕೊಡುತ್ತವೆ. ಹಾಗೆಂದು ಹಿಂದಿನವರು ಬರೆಯುತ್ತಿದ್ದುದು ಮೇಲ್ಮಟ್ಟದ ಕವಿತೆಯೇನೂ ಅಲ್ಲ. ಷಟ್ಪದಿ ಮುಂತಾದ ನಡುಗನ್ನಡ ಕಾವ್ಯ ಪ್ರಕಾರದ ಅನುಕರಣ. ಹಾಗೆ ನೋಡಿದರೆ ಅದು ಕವಿತೆಯಲ್ಲ; ಪದ್ಯ. ಅದರಲ್ಲಿಯೂ 'ಗಪದ್ಯ' ಅರ್ಥಾತ್ ಪದ್ಯರೂಪೀ ಗದ್ಯ. ಅಂತೂ ಪದ್ಯರೂಪೀ ಬರವಣಿಗೆ ಗತಕಾಲದ ಪತ್ರಿಕೆಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತಿತ್ತು.

ಮೋಜೆಂದರೆ ಬ್ರಿಟಿಶ್ ಅಧಿಕಾರಿಗಳ ಸ್ತುತಿಪರ ಪದ್ಯರಚನೆಗಳು ಯಥೇಚ್ಛವಾಗಿ ಕಂಡುಬರುತ್ತವೆ. ಆ ಸಾಹೇಬೀ ಮಂದಿಗೆ ಅದೇನೂ ಅರ್ಥವಾಗುತ್ತಿದ್ದಿಲ್ಲ, ಆ ವಿಷಯ ಬೇರೆ. ಇದೇ ಬಗೆಯಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರ ಮೇಲೆ ಒಂದು ಕವಿತೆ ಪ್ರಕಟವಾಗಿದೆ. ಕವಿ ಎಂ. ಕೆ. ತಿಮ್ಮೇಶ ಪ್ರಭು. ಆದರೆ ಪ್ರಕಟವಾದದ್ದು 'ವಿಕಟ ವಿನೋದಿನಿ' ಎಂಬ ಹೆಸರಿನ ಪತ್ರಿಕೆಯಲ್ಲಿ! ಆ ಪದ್ಯದಲ್ಲಿ ಇವು ಕೆಲವು ಅವರ ವಿಶೇಷಣಗಳು:

ಮೋಕ್ಷಗುಂಡಮ್ ಪೂಜ್ಯ ವಿಶ್ವೇಶ್ವರನೆ ನೀ ಧನ್ಯನೊ
ಬರಡು ಭೂಮಿಗೆ ನೀರನೀಯುವ ಕೃಷ್ಣರಾಜನ ಸಾಗರ
ಹಳ್ಳಿಹಳ್ಳಿಗೆ ನೀರನೋಡಿಸಿ ಹಂಚಿ ತಣಿಸಿದೆ. ರೈತರ
ಕಬ್ಬಿಣದ ಕಾರ್ಖಾನೆಯೊಂದನು ಕಟ್ಟಿ ಭದ್ರಾವತಿಯಲಿ
ಇಂತೆನಿತೊ ಹಿತ ಕಾರ್ಯ ಸಾಧಿಸಿ ಪಡೆದೆ ಭಾರತರತ್ನವ
ಕನ್ನಡದ ಮತಿವಂತನೆ ನಿನಗಿದೋ ಶತವಂದನೆ.

ಚರ್ಚಿನಲ್ಲಿ ಪ್ರಾರ್ಥನೆ ಮಾಡುವುದಕ್ಕೆ ಕ್ರಿಸ್ತೀಯರಿಗೆ ಹಾಡುಗಳು ಬೇಕು. ಮೊದಮೊದಲಿಗೆ ಪಾಶ್ಚಾತ್ಯ ಟ್ಯೂನ್‌ನಲ್ಲಿಯೆ ಹಾಡುತ್ತಿದ್ದರು. ಆದರೆ ಕನ್ನಡದ ಕಾವ್ಯ ಧಾಟಿಯಲ್ಲಿಯೇ ಅದನ್ನು ರಚಿಸುವುದು ಅಗತ್ಯವೆನ್ನಿಸಿತು. ಬಿ.ಎಚ್. ರೈಸ್ ಎಂಬ ಪಾದ್ರಿಯು (ಶಾಸನತಜ್ಞ ಬಿ.ಎಲ್. ರೈಸರ ತಂದೆ) ತನ್ನ ಸಂಪಾದಕತ್ವದ 'ಅರುಣೋದಯ' ಪತ್ರಿಕೆಯಲ್ಲಿ ಇಂಥ ಅನೇಕ ಪದ್ಯಗಳನ್ನು ಪ್ರಕಟಿಸಿದ್ದಾನೆ. 'ಮೇಘಾರೂಢನಾಗಿ ಯೇಸು ಬಂದ' ಎಂಬುದು ಅವನದೊಂದು ಜನಪ್ರಿಯ ಹಾಡು. ಆ ಮುಂದೆ ಹರಿದಾಸರ ಧರತಿಯಲ್ಲಿ ರಚಿಸಿದವುಗಳು ಸಾಕಷ್ಟು ಪ್ರಕಟವಾಗಿವೆ. 'ಶಂಕರಾಭರಣ, ಆದಿತಾಳ'ದಲ್ಲಿ ತಾನು ರಚಿಸಿದ್ದಾಗಿ ಇದೊಂದನ್ನು ಪ್ರಕಟಿಸಿದ್ದಾನೆ.

ಕೇಳು ನೀ ಮನವೆ ಹೇಳುವೆ ನಿನಗೆ
ಬಾಳು ಸೌಖ್ಯದೊಳು ನಿತ್ಯವೇ
ಮಾನಸವೆ, ದೇಹ ನಿತ್ಯವಲ್ಲ, ನಾಳೆ
ಶೂನ್ಯವಾಗುವದೆಂದರಿಯಪ್ಪಾ
ಏನು ಹೇಳಲಿ ನಿನ್ನ ಆಯುಷ್ಯ ದಿನಗಳು
ಶಾನೆಯಲ್ಲವೆಂದು ತಿಳಿಯಪ್ಪಾ
ಪ್ರಾಣ ಬಿಡುವುದಕ್ಕೆ ಮುಂಚೆ ದ್ವ... ತವಾಗಿ
ಸುಖ ಸ್ಥಾನದೊಳ್ ನೀ ಶೇರಪ್ಪಾ!

ಮಿಶನರಿ ಪದ್ಯವಿದು, ಎಂಬುದಾಗಿ ಸುಲಭವಾಗಿ ಗೊತ್ತಾಗುತ್ತದಲ್ಲವೆ.

ಕರ್ನಾಟಕದಲ್ಲಿ ಕನ್ನಡಕ್ಕೆ ಸ್ಥಾನವಿಲ್ಲ; ಇಂಗ್ಲಿಶ್ ವ್ಯಾಮೋಹದಿಂದಾಗಿ; ಮುಂತಾದ ಅಂಶಗಳು ಪ್ರಚಲಿತವಾಗಿ ಇವೆಯಷ್ಟೇ. ೭೦-೮೦ ವರ್ಷಗಳ ಹಿಂದೆಯೂ ಅದೇ ಪರಿಸ್ಥಿತಿ. ಆಗೂ ಈ ಕುರಿತು ಬರೆಯುವವರಿದ್ದರು. ಪದ್ಯರೂಪದಲ್ಲಿ ಸಹ.

ಹೊಟ್ಟೆಪಾಡಿನ ಮೇಲೆ ಇಂಗ್ರಜಿ
ಮಟ್ಟ ಹತ್ತುವರೆಲ್ಲ ಮಕ್ಕಳು
ಬಟ್ಟೆಯಿಲ್ಲದ ನಿನ್ನ ನೋಡುವರಿಲ್ಲದಾಯ್ತಲ್ಲಾ
ಹೊಟ್ಟೆಯುರಿಯುವದಮಮ ಈ ದುರ -
ದೃಷ್ಟವನು ನೆನಸಿದರೆ ಯಮ್ಮಾ

ಬಿಟ್ಟು ಹೋಗಲು ಕಾಲು ಬಾರದು
ಮಾಡತೀನಿದಕೆ

'ಗಪದ್ಯ'ಕ್ಕೆ ಇದೊಂದು ಉತ್ತಮ ಉದಾಹರಣೆಯಲ್ಲವೆ !

ಪದ್ಯರೂಪದ ಒಂದು ಪತ್ರಿಕೆಯೇ ಧಾರವಾಡದಿಂದ ಹೊರಡುತ್ತಿತ್ತು – ೧೯೧೮ರಿಂದ. ಮೊದಲ ಪುಟದಿಂದ ಕಡೆಯ ವರೆಗೂ ಪದ್ಯಗಳೇ. ಅದರ ಸಂಪಾದಕೀಯ ಹೀಗಿದ್ದಿತು, ವರ್ಷಾಂತ್ಯದಲ್ಲಿ :

ತರತರದ ಹೊಸ ಕವಿತೆಗಳನ್ನು
ಮಾಸಕ್ಕೊಂದು
ಸರತಿ ವಾಚಕರಿಗೀಯುವ 'ಪ್ರಭಾತ'ಕ್ಕೊಂದು
ವರುಷ ತುಂಬುತ ಬಂದುದೆಚ್ಚರಿಕೆ
ವಾಚಕರೆ ಹೊಸ ವರ್ಗಣಿಯನೆತ್ತಲು!
ಬರುವುದೆರಡನೆ ವರ್ಷದಾದಿಯಲಿ
ವ್ಹೀ.ಪಿ.ಯದ
ನಿರದೆ ಮೊದಲಿನ ತೆರದೆ ಸ್ವೀಕರಿಸಿ
ಪ್ರೋತ್ಸಾಹಿ -
ಸಿರಿ; ಹೊಸಬರನು ಕೂಡಿಸಿರಿ; ನಿಮಗೆ
ಬೇಡಾದರೊಂದು ಕಾರ್ಡನು ಬರೆಯಿರಿ.

ಇವರಲ್ಲಿ ಬೇಂದ್ರೆಯವರ ಆದಿಮ ಭಾವಗೀತೆಗಳು ಪ್ರಕಟವಾಗಿವೆ. ಇತರರೂ ಹಾಗೆ ಕವಿತೆಗಳನ್ನು ಪ್ರಕಟಿಸುತ್ತಿದ್ದರು.

ಆದರೆ ಜಾಹೀರಾತುಗಳು? ಅವೂ ಕವಿತೆಯಲ್ಲಿ ಇರುತ್ತಿದ್ದವೆಂದರೆ ನಂಬಿರಿ. ಭಾರತ ವನೌಷಧಿ ಸಂಗ್ರಾಹಾಲಯವೆಂಬ ಆಯುರ್ವೇದೀಯ ಅಂಗಡಿ ಕಿತ್ತೂರಿನಲ್ಲಿದ್ದಿತು. ಮಹಾಬಳೇಶ್ವರ ಮುತ್ತೂರರು ಅದರ ಮಾಲೀಕರು. ಅವರ ಜಾಹೀರಾತು ಹೀಗಿದ್ದಿತು:

ಭೂಭಾಗದಲೆಲ್ಲ ಮಹಾ ಪ್ರಸಿದ್ಧವು
ಈ ಭಾಗ ಚೆನ್ನಪ್ಪನ ದೇಸಗತ್ತಿನಿಂ
ಶ್ರೀ ಭಾರತ ಔಷಧಿ ಸಂಗ್ರಹಾಲಯಂ
ಶೋಭಾವಹಂ ಪೇಟೆಗೆ ಸೋಮವಾರದ
ಮುತ್ತೂರ ಮಹಾಬಳೇಶ್ವರ ಮತ್ತಾತನ
ಬಂಧು ವರ್ಗ ಪ್ರೊಪ್ರಾಯ್ಟರರು"

ಪತ್ರಿಕೆ ಒಂದು ಅಲಕ್ಷಿತ ಸಾಹಿತ್ಯ ಪ್ರಕಾರವೆಂಬ ಬೇಸರದ ಅನಿಸಿಕೆಯಿಂದ ಇಷ್ಟೆಲ್ಲ ವಿವರಿಸಬೇಕಾಯಿತು. ಒಂದು ಮಾತು ನಿಜ; ಕನ್ನಡ ಭಾಷೆ- ಸಾಹಿತ್ಯದ ಹಾಗೂ ಕನ್ನಡಿಗರ ಜೀವದ ವಿಕಾಸ - ಈ ಅಂಶಗಳಲ್ಲಿ ಪತ್ರಿಕೆಯದ್ದು ಸಿಂಹಪಾಲು. ◆

ಶ್ರೀ. ಹಾ.

*ಈ ಲೇಖನದಲ್ಲಿಯ ಅನೇಕ ವಿವರಗಳನ್ನು ಶ್ರೀ ಮೋಹನ ಹೆಗಡೆ ಒದಗಿಸಿದ್ದಾರೆ.*

# ೪. ಕೊಡಗಿನ ಪತ್ರಿಕೋದ್ಯಮ
## (೧೯೯೦ರ ವರೆಗೆ)

ಸುಮಾರು ೧೮೮೩ ರಿಂದ ಈ ಜಿಲ್ಲೆಯಲ್ಲಿ ಪತ್ರಿಕೋದ್ಯಮ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ತಮ್ಮ ಪರಿಮಿತಿಯಲ್ಲಿಯೇ ಈ ಜಿಲ್ಲೆಯ ವೃತ್ತಪತ್ರಿಕೆಗಳು ಇಲ್ಲಿಯ ನಾಡು, ನುಡಿ, ಜನಾಂಗ ಮೊದಲಾದವುಗಳ ಬಗೆಗೆ ಹೆಚ್ಚಿನ ಒಲವು ಮತ್ತು ಕಾಳಜಿಗಳನ್ನು  ಹೊಂದಿ ಅವುಗಳ ಪ್ರಗತಿ ಹಾಗೂ ಸುಧಾರಣೆಗಾಗಿ ಶ್ರಮಿಸುತ್ತಲೇ ಬಂದಿವೆ. ಸುಮಾರು ೧೯೨೦ ರಿಂದೀಚೆಗೆ ಬ್ರಿಟಿಷರ ವಿರುದ್ಧ ಹೋರಾಡುವಲ್ಲಿ ಈ ಪತ್ರಿಕೆಗಳು ತಳೆದ ನಿಲುವು ಹಾಗೂ ನೀಡಿದ ನೆರವುಗಳು ಅಮೂಲ್ಯವಾದವು. ಗಡಿನಾಡಿನ ಪ್ರದೇಶವಾದುದರಿಂದ ಈ ಜಿಲ್ಲೆಯ ಭಾಷಾಸಮಸ್ಯೆ, ಜನಾಂಗಿಕ ಸಮಸ್ಯೆ, ಇತ್ಯಾದಿಗಳನ್ನು ಸೂಕ್ಷ್ಮವಾಗಿ ನಿಭಾಯಿಸುವಲ್ಲಿಯೂ ಇಲ್ಲಿಯ ಪತ್ರಿಕೆಗಳು ವ್ಯಕ್ತಪಡಿಸಿರುವ ಸಹನೆ ಮತ್ತು ಭಾವೈಕ್ಯ ಧೋರಣೆಗಳು ಪ್ರಶಂಸನೀಯವಾದುವೆನ್ನಬಹುದು. ಮುಖ್ಯವಾಗಿ, ಕೊಡಗಿನ ಬಹುಪಾಲು ಉದಯೋನ್ಮುಖರ ಬರವಣಿಗೆ, ಕವನ, ಇತ್ಯಾದಿಗಳನ್ನು ಬೆಳಕಿಗೆ ತರುವಲ್ಲಿ ಈ ಸ್ಥಳೀಯ ಪತ್ರಿಕೆಗಳು ಮುಖ್ಯ ಪಾತ್ರ ವಹಿಸಿವೆ. ಸ್ಥೂಲವಾಗಿ ಹೇಳುವುದಾದರೆ, ಇಲ್ಲಿ ನೆಲಸಿರುವ ವಿವಿಧ ಭಾಷಾವರ್ಗಗಳ ಅಗತ್ಯಕ್ಕೆ ತಕ್ಕಂತೆ ಕನ್ನಡ, ಕೊಡವ, ಮಲಯಾಳಂ, ಇಂಗ್ಲಿಷ್ ಮೊದಲಾದ ಭಾಷಾ ಪತ್ರಿಕೆಗಳು ಕಾಲಕಾಲಕ್ಕೆ ಹುಟ್ಟಿಕೊಂಡು ತಮ್ಮದೇ ಆದ ವಿಧದಲ್ಲಿ ಸೇವೆ ಸಲ್ಲಿಸಿವೆ

### ಪ್ರಥಮ ಪತ್ರಿಕೆ

'ಕೊಡಗು ಚಂದ್ರಿಕೆ' ಕನ್ನಡ ಸಾಪ್ತಾಹಿಕವು ಈ ಜಿಲ್ಲೆಯ ಮೊಟ್ಟ ಮೊದಲ ಪತ್ರಿಕೆಯೆಂದು ಪರಿಗಣಿಸಲ್ಪಟ್ಟದ್ದು, ೧೮೮೪ ರಲ್ಲಿ ಸೋಮವಾರಪೇಟೆ ತಾಲೂಕು ಶನಿವಾರಸಂತೆಯಿಂದ ಇದು ತನ್ನ ಪ್ರಕಟಣೆಯನ್ನಾರಂಭಿಸಿತು. ಮೈಸೂರು ರಂಗರಾಯರು ಇದರ ಸಂಪಾದಕರಾಗಿದ್ದು, ಎರಡು ವರುಷಗಳವರೆಗೆ ಇದನ್ನು ನಡೆಸಿದರು.

ಅನಂತರ ಕೊಡಗಿನಲ್ಲಿ ಪತ್ರಿಕೆಗಳೇ ಇಲ್ಲದ ಕಾಲದಲ್ಲಿ ಮಡಿಕೇರಿಯಲ್ಲಿ ೧೯೨೧ರಲ್ಲಿ ಕೊಡಗು ಕಂಪೆನಿಯು ಸ್ಥಾಪಿಸಲ್ಪಟ್ಟು, ಇದರ ವತಿಯಿಂದ ಕೆ. ಪಿ. ಚಿಣ್ಣಪ್ಪ ಅವರ ಪ್ರಯತ್ನದಿಂದಾಗಿ 'ಕೊಡಗು' ಎಂಬ ಕನ್ನಡ ವಾರಪತ್ರಿಕೆಯು ಆರಂಭಗೊಂಡಿತು. ೧೯೨೧ರ ಜೂನ್ ೩ರಿಂದ ಮೈಸೂರಿನಲ್ಲಿ ಅಚ್ಚಾಗಿ ಮಡಿಕೇರಿಯಲ್ಲಿ ಪ್ರಕಟಗೊಂಡಿತು. ೧೯೯೦ರ ಸುಮಾರಿನಲ್ಲಿ ಆರಂಭಿಸಿದ ಕೊಡಗು ಜಮೀನ್ದಾರರ ಸಂಘದ ಧ್ಯೇಯೋದ್ದೇಶ ಮತ್ತು ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಪ್ರತಿಪಾದಿಸಲೋಸುಗ ಈ ಪತ್ರಿಕೆಯು ಅಸ್ತಿತ್ವಕ್ಕೆ ಬಂದಿತು. ಈ ಪತ್ರಿಕೆಯು ತನ್ನ ಪ್ರಥಮ ಸಂಚಿಕೆಯಲ್ಲಿ "... ಈ ಪತ್ರಿಕೆಯ ನೀತಿ ಮತ್ತು ಉದ್ದೇಶಗಳಾವುವೆಂದರೆ ದೇಶಕ್ಕೆ ಸಂಬಂಧಿಸುವ ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳನ್ನು ಚರ್ಚಿಸಿ ಜನರಿಗೆ ತಿಳುವಳಿಕೆ ಕೊಟ್ಟು ದೇಶದ ಸ್ಥಿತಿಯನ್ನು ಅಭಿವೃದ್ಧಿಗೊಳಿಸುವುದು" ಎಂದು ಸಾರಿತು. ೧೯೨೩ರಲ್ಲಿ ಕೊಡಗು ಜಿಲ್ಲಾ ಸರಕಾರಿ ಪ್ರೆಸ್ಸಿನ ಯಂತ್ರೋಪಕರಣಗಳನ್ನು ಕ್ರಯಕ್ಕೆ ಪಡೆದ ನಂತರ ಇದು ಮಡಿಕೇರಿಯಲ್ಲಿ ಅಚ್ಚಾಗತೊಡಗಿತು. ಪಂದ್ಯಂಡ ಬೆಳ್ಯಪ್ಪ ಅವರು ೧೯೬೫ರ ವರೆಗೂ ಈ ಪತ್ರಿಕೆಯ ಸಂಪಾದಕರಾಗಿದ್ದು, ಇದನ್ನು ಯಶಸ್ವಿಯಾಗಿ ನಡೆಸಿದರು. ಸಿ. ಎಂ. ಪೂಣಚ್ಚ ಅವರೂ ಇದರ ಸಂಪಾದಕ ವರ್ಗದಲ್ಲಿ ಇದ್ದರು. ಬಹು ವರುಷಗಳಿಂದ ಇದರ ಉಪಸಂಪಾದಕರಾಗಿದ್ದ ಬಿ.ಡಿ. ಗಣಪತಿ ಅವರು ಅನಂತರ ಇದರ ಸಂಪಾದಕರಾಗಿ ೧೯೭೦ ರಿಂದೀಚೆಗೆ ನಿವೃತ್ತರಾದರು. ಇವರ ತರುವಾಯ ಬಿ. ಡಿ. ಸುಬ್ಬಯ್ಯ (ಕಾಕೆಮಾನಿ) ಮತ್ತು ಕೆ. ಬಿ. ಕಾಳಪ್ಪ ಅವರುಗಳು ಕ್ರಮವಾಗಿ ಈ ಪತ್ರಿಕೆಯ ಸಂಪಾದಕರಾದರು. ೧೯೭೧ರಲ್ಲಿ ಈ ಪತ್ರಿಕೆಗೆ ೫೦ ವರುಷಗಳು ತುಂಬಿತಲ್ಲದೆ, ೧೯೭೩ರಲ್ಲಿ ಸುವರ್ಣೋತ್ಸವವನ್ನು ಆಚರಿಸುವುದರೊಡನೆ ಚಿನ್ನದ ಹಬ್ಬದ ವಿಶೇಷ ಸಂಚಿಕೆಯನ್ನೂ ಹೊರತಂದಿತು. ಈ ಪತ್ರಿಕೆಯು ಇಂದಿಗೂ ಪ್ರಚಲಿತವಿದೆ. ಇಷ್ಟಲ್ಲದೆ,  ಕೊಡಗು ಕಂಪೆನಿಯ ನಿರ್ಣಯದ ಪ್ರಕಾರ ೧೯೭೫ರಲ್ಲಿ 'ಕೊಡಗು ದೈನಿಕ' ಪತ್ರಿಕೆ ಪ್ರಾರಂಭಿಸಲ್ಪಟ್ಟಿತು. ಕೊಡಗು – ಸಾಪ್ತಾಹಿಕ ಮತ್ತು ಕೊಡಗು ದೈನಿಕಗಳು ಈಗ ಮಡಿಕೇರಿಯಿಂದ ಪ್ರಕಟಗೊಳ್ಳುತ್ತಿವೆ. ಯಂ. ಯು. ಕಾಳಪ್ಪ ಕೊಡಗು – ದೈನಿಕದ ಈಗಿನ ಸಂಪಾದಕರಾಗಿರುವರು.

### ಕೊಡಗು ಸಭೆ

ಜಮೀನ್ದಾರ್ ಸಂಘದ ನೀತಿ–ಧೋರಣೆಗಳನ್ನು ಖಂಡಿಸಲು ಮತ್ತು ಕೊಡಗನ್ನು ಪ್ರತ್ಯೇಕವಾಗಿಯೇ ಉಳಿಸಿಕೊಳ್ಳಬೇಕೆಂಬ ಕೊಡಗು ಸರಕಾರದ ಧೋರಣೆಯನ್ನು ಬೆಂಬಲಿಸಲು 'ಕೊಡಗು ಸಭಾ' ಎಂಬ ಸಂಘವು ಹುಟ್ಟಿಕೊಂಡಿತು. ಇದನ್ನು ಸಮರ್ಥಿಸಲೋಸುಗ

ಬಲ್ಲಚಂಡ ಬೆಳ್ಯಪ್ಪ ಅವರು ೧೯೩೭ರಲ್ಲಿ 'ಲೋಕಪಾವನ' ಕನ್ನಡ ಸಾಪ್ತಾಹಿಕವನ್ನು ಹೊರಡಿಸಿದರು. ಕೊಡಗು ಸಭಾಕ್ಕೆ ಬಹುಪಾಲು ಕೊಡವರ ಪ್ರೋತ್ಸಾಹ ದೊರೆತದ್ದರಿಂದ ಅದು ಪ್ರಬಲ ಶಕ್ತಿಯಾಗಿ ಬೆಳೆಯಿತು; ತನ್ನ ವಿರೋಧಿ ಸಂಸ್ಥೆಯಾದ ಜಮೀನ್ದಾರ್ ಸಂಘದ ಪ್ರಾಬಲ್ಯವನ್ನು ಕುಗ್ಗಿಸಿತು. ಈ ಸಭಾದ ನೀತಿ ಧೋರಣೆಗಳನ್ನು 'ಲೋಕಪಾವನ' ಪತ್ರಿಕೆಯು ಚೆನ್ನಾಗಿ ಪ್ರತಿಬಿಂಬಿಸಿತು. ಅಲ್ಲದೆ, ವ್ಯಕ್ತಿಗತವಾದ ಟೀಕೆ-ಟಿಪ್ಪಣಿಗಳೂ ಈ ಪತ್ರಿಕೆಯಲ್ಲಿ ಧಾರಾಳವಾಗಿ ಕಂಡುಬಂದವು. ಕೊಡಗರಲ್ಲಿ ರಾಜಕೀಯವಾಗಿ ಜಾಗೃತಿಯನ್ನುಂಟು ಮಾಡುವಲ್ಲಿ ಇದು 'ಕೊಡಗು' ಪತ್ರಿಕೆಯಷ್ಟೇ ಪ್ರಭಾವಶಾಲಿ ಪಾತ್ರ ವಹಿಸಿತೆನ್ನಬಹುದು. ಬಲ್ಲಚಂಡ ಬೆಳ್ಯಪ್ಪ ಅವರ ತರುವಾಯ ಬೊಳಕಾರಂಡ ಕಾರ್ಯಪ್ಪ ಅವರು ಇದರ ಸಂಪಾದಕರಾಗಿದ್ದರು. ಇದು ಒಟ್ಟು ಎಂಟು ವರುಷಗಳ ಕಾಲ ಪ್ರಚಲಿತವಲ್ಲಿದ್ದಿತು.

ಅಬ್ದುಲ್ ಗಫೂರ್‌ಖಾನ್ ಅವರು ೧೯೩೫ರಲ್ಲೇ 'ಕೊಡಗು ಬೋಧಿನಿ' ಎಂಬ ಕನ್ನಡ ಮಾಸಿಕವನ್ನು ಅಮ್ಮತ್ತಿಯಿಂದ ಹೊರಡಿಸಿದರು. ಬ್ರಿಟಿಷ್ ಸರಕಾರದ ನೀತಿಯನ್ನು ಟೀಕಿಸುವ ಧೈರ್ಯ ಇವರದಾಗಿದ್ದಿತು. ಸರಕಾರದ ಪತ್ರಿಕಾ ದಮನ ನೀತಿಯನ್ನು ಎದುರಿಸಿ ಸೆಕ್ಯೂರಿಟಿ ಹಣ ಕಟ್ಟದೆ ಈ ಪತ್ರಿಕೆಯನ್ನು ನಿಲ್ಲಿಸಲಾಯಿತು. ಅದೇ ವರುಷದಲ್ಲಿ ಕೆ. ನಾರಾಯಣರಾಯರ ಸಂಪಾದಕತ್ವದ 'ಲೋಕರಹಸ್ಯ' ಎಂಬ ಮಾಸಿಕವು ವೀರರಾಜಪೇಟೆಯಿಂದ ಹೊರಬಿದ್ದಿತು. ಜಿ. ಹೆಚ್. ಹೌಸಿನ ರಾಮಕೃಷ್ಣರು ಇದನ್ನು ಹೊರಡಿಸಿದ್ದರು. ಹಲವು ವೈವಿಧ್ಯಮಯ ಲೇಖನ, ಕಥೆ-ಕಾದಂಬರಿ, ಇತ್ಯಾದಿಗಳಿಂದ ಕೂಡಿದ ಈ ಪತ್ರಿಕೆಯು ಕರ್ನಾಟಕದಲ್ಲೇ ಪ್ರಸಿದ್ಧಿ ಪಡೆದಿದ್ದಿತು. ಇದು ಎಂಟು ವರುಷಗಳ ಕಾಲ ನಡೆಯಿತು. ಗಮನಾರ್ಹ ಸಂಗತಿಯೆಂದರೆ, ೧೯೩೭ರಲ್ಲಿ ಮಡಿಕೇರಿಯಿಂದ ಪ್ರಕಟಗೊಳ್ಳತೊಡಗಿದ 'ಜನ್ಮಭೂಮಿ' ಕನ್ನಡ ಸಾಪ್ತಾಹಿಕವು ೧೯೬೭ರ ವರೆಗೆ ನಡೆಯಿತು. 'ಲೋಕಪಾವನ' ಪತ್ರಿಕೆಯನ್ನು ಸಂಪಾದಿಸಿದ ಬಲ್ಲಚಂಡ ಬೆಳ್ಯಪ್ಪ ಅವರೇ ಅಲ್ಲದೆ, ಅವರ ನಂತರ ಮಕ್ಕಿ ಸುಬ್ರಾಯರೂ ಈ ಪತ್ರಿಕೆಯ ಸಂಪಾದಕರುಗಳಾಗಿದ್ದರು. ೧೯೬೧ರ ವೇಳೆಗೆ ಈ ಪತ್ರಿಕೆಯನ್ನು ವಹಿಸಿಕೊಂಡ ಕೋಟೇರ ಎ. ಸೋಮಣ್ಣ ಅವರು ೧೯೬೭ರ ಡಿಸೆಂಬರ್‌ವರೆಗೆ ಇದನ್ನು ನಡೆಸಿದರು.

ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿದ್ದು ದ್ವಿಭಾಷಾ ಪತ್ರಿಕೆಯೆನಿಸಿದ 'ಉದಯ' ('ಡಾನ್') ಸಾಪ್ತಾಹಿಕವು ಬೊಳಕಾರಂಡ ಕಾರ್ಯಪ್ಪ ಅವರ ಸಂಪಾದಕತ್ವದಲ್ಲಿ ೧೯೩೬ರಲ್ಲಿ ಆರಂಭವಾಗಿ ಮೂರು ವರ್ಷಗಳ ಕಾಲ ನಡೆಯಿತು. ೧೯೪೮ರಲ್ಲಿ ಒಂದು ವರುಷದ ಮಟ್ಟಿಗೆ ನಡೆದ 'ಪ್ರಭಾತ' ಕನ್ನಡ ಮಾಸಪತ್ರಿಕೆಯು ಐ. ಮಾ. ಮುತ್ತಣ್ಣ ಅವರ ಸಂಪಾದಕತ್ವದಲ್ಲಿ ಆರಂಭಗೊಂಡಿತು. ಇದು ಸಾಹಿತ್ಯ ಪತ್ರಿಕೆಯಾಗಿದ್ದು, ೧೯೪೭ರ ಅಕ್ಟೋಬರ್‌ನಲ್ಲಿ ಐ. ಮಾ. ಮುತ್ತಣ್ಣ ಅವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲ್ಪಟ್ಟ ಪ್ರಗತಿಪರ ಸಾಹಿತ್ಯ ಸಂಘದ ವತಿಯಿಂದ ಇದು ಹೊರಟಿತು. ಕೊಡವ ಮತ್ತು ಕನ್ನಡ ಭಾಷೆಗಳ ಅಭಿವೃದ್ಧಿಗಾಗಿ ಕೊಡಗಿನಲ್ಲಿ ಇವರು ಕೈಗೊಂಡ ಸೇವೆಯನ್ನು ಈ ಪತ್ರಿಕೆಯು ದಾಖಲಿಸಿದೆ. ೧೯೪೯ರಲ್ಲಿ ಪೊನ್ನಂಪೇಟೆಯಿಂದ 'ಸತ್ಯಾರ್ಥಿ' ಎಂಬ ಇನ್ನೊಂದು ಕನ್ನಡ ಮಾಸಪತ್ರಿಕೆ ಹೊರಟಿತು. ಎಂ. ಬಿ. ಮುತ್ತಣ್ಣ ಅವರು ಸಂಪಾದಕರಾಗಿದ್ದ ಈ ಪತ್ರಿಕೆಯು ನಾಲ್ಕು ವರುಷಗಳ ಕಾಲ ನಡೆಯಿತು. ಬಿ. ಕೆ. ಎಸ್. ಮೂರ್ತಿ ಅವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳತೊಡಗಿದ 'ಕೊಡಗು ಸಮಾಚಾರ' ಕನ್ನಡ ಸಾಪ್ತಾಹಿಕವು ಮೂರು ವರುಷಗಳ ಕಾಲ ಪ್ರಚಲಿತವಲ್ಲಿದ್ದಿತು.

## ಬಿ.ಎಸ್. ಗೋಪಾಲಕೃಷ್ಣರ ಪತ್ರಿಕೋದ್ಯಮ

ಪತ್ರಿಕೋದ್ಯಮದಲ್ಲಿ ಸಾಹಸಮಯ ಹಾಗೂ ವೈವಿಧ್ಯಮಯ ಪ್ರಯೋಗಗಳನ್ನು ಕೈಗೊಳ್ಳುವುದರ ಮೂಲಕ ದಿನಪತ್ರಿಕೆ, ಸಂಜೆ ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಪತ್ರಿಕೆಗಳನ್ನು ಕನ್ನಡದಲ್ಲಿ ಪ್ರಕಟಿಸಿದವರು ಸಾಹಿತಿ ಮತ್ತು ಪ್ರಸಿದ್ಧ ಪತ್ರಕರ್ತರಾದ ಬಿ. ಎಸ್. ಗೋಪಾಲಕೃಷ್ಣ ಅವರು. ೧೯೫೪ರಲ್ಲಿ 'ಸಂದಾದೀಪ' ಮಾಸಿಕವನ್ನೂ ೧೯೫೭ರಲ್ಲಿ '**ಶಕ್ತಿ**' ದೈನಿಕವನ್ನೂ ೧೯೭೦ರಲ್ಲಿ '**ಸಂಧ್ಯಾ**' ಎಂಬ ಸಂಜೆ ದಿನಪತ್ರಿಕೆ ಮತ್ತು '**ಚೇತನ**' ಸಾಪ್ತಾಹಿಕಗಳನ್ನೂ ಆರಂಭಿಸಿದುದು ಇವರ ಹೆಗ್ಗಳಿಕೆ. ಇವುಗಳಲ್ಲಿ 'ಸಂದಾದೀಪ'ವು ಉತ್ಕೃಷ್ಟ ಸಾಹಿತ್ಯ ಪತ್ರಿಕೆಯೆನಿಸಿದ್ದು, ನಾಲ್ಕು ವರುಷಗಳ ಕಾಲ ನಡೆಯಿತು. 'ಸಂಧ್ಯಾ' ಮತ್ತು 'ಚೇತನ'ಗಳು ಒಂದು ವರುಷ ಮಾತ್ರವೇ ನಡೆದವು. '**ಶಕ್ತಿ**' ದೈನಿಕವು ಕೊಡಗಿನ ಪ್ರಪ್ರಥಮ ಕನ್ನಡ ದಿನಪತ್ರಿಕೆಯೆಂಬ ಕೀರ್ತಿಗೆ ಪಾತ್ರವಾಗಿದ್ದು, ಇಂದಿಗೂ ಅತ್ಯಧಿಕ ಪ್ರಸಾರದೊಡನೆ ಪ್ರಕಟಗೊಳ್ಳುತ್ತಿದೆ.

ಆರಂಭದಲ್ಲಿ ಬಿ. ಎಸ್. ಗೋಪಾಲಕೃಷ್ಣ ಅವರೇ ಸಂಪಾದಕರಾಗಿದ್ದು, ಈಗ ಇವರ ಪುತ್ರ ಜಿ. ಚಿದ್ವಿಲಾಸ್ ಅವರು ಇದರ ಸಂಪಾದಕರಾಗಿದ್ದಾರೆ. ಬಿ. ಎಸ್. ಗೋಪಾಲಕೃಷ್ಣ ಅವರು '**ಸಂಯುಕ್ತ ಕರ್ನಾಟಕ**'ದ ಸಂಪಾದಕರಾಗಿಯೂ ಸೇವೆ ಸಲ್ಲಿಸಿರುವರು. '**ಚೇತನ**' ಸಾಪ್ತಾಹಿಕವನ್ನು ಮಗ್ಗುಲದ ಸಿ. ಎಂ. ಚರಮಣ್ಣ ಅವರು ಕೊಂಡು ತಾವೂ ಸ್ವಲ್ಪ ಕಾಲ ಅದರ ಸಂಪಾದಕರಾಗಿದ್ದರು. '**ಶಕ್ತಿ**' ಪತ್ರಿಕೆಗೆ ದುಡಿದ ಹಲವಾರು ಉಪ ಸಂಪಾದಕರುಗಳಲ್ಲಿ ಆ ನಂತರ 'ನವಶಕ್ತಿ' ದೈನಿಕವನ್ನು ಆರಂಭಿಸಿದ ಟಿ. ಎ. ಮದುರೆ ಸೆಟ್ಟಿ ಅವರು ಒಬ್ಬರು.

ಎಂ. ಎಸ್. ಸುಬ್ರಾಯ ಅವರ ಸಂಪಾದಕತ್ವದ 'ಪರಿಮಳ' ಕನ್ನಡ ಮಾಸಿಕವು ೧೯೬೦ರಲ್ಲಿ ಹುಟ್ಟಿ ಅಲ್ಪಾವಧಿಯಲ್ಲೆ ಸ್ಥಗಿತಗೊಂಡಿತು. ೧೯೬೧ರಲ್ಲಿ ಆರಂಭವಾಗಿ ಇಂದಿಗೂ ಪ್ರಕಟಗೊಳ್ಳುತ್ತಿರುವ 'ಹಿತವಾಣಿ' ಕನ್ನಡ ದೈನಿಕವು ಮೊದಲು ಮಡಿಕೇರಿಯಿಂದಲೂ ಅನಂತರ ವೀರರಾಜಪೇಟೆಯಿಂದಲೂ ಪ್ರಕಟಗೊಳ್ಳತೊಡಗಿದೆ. ಪ್ರಾರಂಭದಲ್ಲಿ ಹೆಚ್. ವಿ. ಪಾರ್ಥಸಾರಥಿ, ಕೆ. ಗೋವಿಂದರಾವ್, ಸಿ. ಪಿ. ಭರತನ್, ಎ. ಕೆ. ಸುಬ್ಬಯ್ಯ ಮತ್ತು ಕೆ. ಸಿ. ಉತ್ತಯ್ಯ ಅವರುಗಳು ಕ್ರಮವಾಗಿ ಈ ಪತ್ರಿಕೆಯ ಸಂಪಾದಕರಾಗಿದ್ದರು. ಬಿರುನಾಣಿಯ ಎ.ಕೆ. ಸುಬ್ಬಯ್ಯ ಅವರು ಈ ಪತ್ರಿಕೆಯು ದಕ್ಷಿಣ ಕೊಡಗಿನಲ್ಲಿ ವಿಶೇಷ ಪ್ರಚಾರ ಹೊಂದಲು ಕಾರಣರಾದರು. ೧೯೭೫ರಲ್ಲಿ ದೇಶದಲ್ಲಿ ಘೋಷಿಸಲ್ಪಟ್ಟ ತುರ್ತು ಪರಿಸ್ಥಿತಿಯ ಹಿನ್ನೆಲೆಯಲ್ಲಿ ಇದು ತನ್ನ ಪ್ರಕಟಣೆಯನ್ನು ನಿಲ್ಲಿಸಿದ್ದು, ಆ ನಂತರ ಪುನಾರಂಭಗೊಂಡಿತು. ಇದರ ಈಗಿನ ಸಂಪಾದಕರು ಪಿ. ನಾರಾಯಣ ಶೆಟ್ಟಿ ಅವರು. ಹಿಂದೆ ಮಂಗಳೂರಿನಲ್ಲಿ ಪ್ರಸಿದ್ಧ ಸಾಹಿತಿ ಕಡೆಂಗೋಡ್ಲು ಶಂಕರಭಟ್ಟರು ನಡೆಸುತ್ತಿದ್ದ 'ರಾಷ್ಟ್ರಬಂಧು' ಮತ್ತು 'ರಾಷ್ಟ್ರಮತ' ಕನ್ನಡ ಪತ್ರಿಕೆಗಳ ಒಡೆತನವನ್ನು ಪಡೆದ ವೀರರಾಜಪೇಟೆಯ ಕೃಷ್ಣಗಿರಿ ಗೋವಿಂದರಾವ್ ಅವರು ೧೯೬೫ರಿಂದ ತಮ್ಮ ಸಂಪಾದಕತ್ವದಲ್ಲಿ 'ರಾಷ್ಟ್ರಬಂಧು' ದಿನಪತ್ರಿಕೆಯನ್ನೂ ತಮ್ಮ ಪತ್ನಿ ಕೆ. ಜಯಲಕ್ಷ್ಮೀ ಅವರ ಸಂಪಾದಕತ್ವದಲ್ಲಿ 'ರಾಷ್ಟ್ರಮತ' ವಾರಪತ್ರಿಕೆಯನ್ನೂ ಹೊರಡಿಸಿದರು. ಈ ಎರಡು ಪತ್ರಿಕೆಗಳಿಗೆ ಕೆ. ಜಿ. ಅರುಣ್‌ಕುಮಾರ್ ಮತ್ತು ಜಿ. ಜಯಲಕ್ಷ್ಮಿ ಅವರುಗಳು ಕ್ರಮವಾಗಿ ಸಂಪಾದಕರಾದರು. 'ರಾಷ್ಟ್ರಮತ'ವು ಕೊಡಗಿನ ಪ್ರಥಮ ಮಹಿಳಾ ಸಾಪ್ತಾಹಿಕವೆನಿಸಿದೆ.

ಕೆ. ಕೆ. ಪುಟ್ಟರಾಜು ಅವರು ೧೯೬೫ರಲ್ಲಿ ಮಡಿಕೇರಿಯಿಂದ ಆರಂಭಿಸಿದ 'ರವಿ' ಮತ್ತು ಟಿ. ಎ. ಮದುರೆಸೆಟ್ಟಿ ಅವರು ೧೯೭೨ರಲ್ಲಿ ಆರಂಭಿಸಿದ 'ನವಶಕ್ತಿ' – ಈ ಎರಡೂ ಕನ್ನಡ ಪತ್ರಿಕೆಗಳು. ಎಂ. ಪಿ. ಕೃಷ್ಣರಾಜು ಮತ್ತು ಟಿ. ಎಂ. ಚಂದ್ರಶೇಖರ ಅವರುಗಳು ಕ್ರಮವಾಗಿ ಈ ಪತ್ರಿಕೆಗಳ ಸಂಪಾದಕರಾಗಿದ್ದರು. ೧೯೭೨ರಲ್ಲಿ ಮಡಿಕೇರಿಯಿಂದ ಪ್ರಕಟಣೆಯನ್ನಾರಂಭಿಸಿದ, ಕೆ. ಸಿ. ರಾಮಮೂರ್ತಿ, ಮುಂದೆ ಬಿ. ಜಿ. ಮೋಹನದಾಸ್ ಭಂಡಾರ್ಕರ್ ಅವರುಗಳು ಸಂಪಾದಕರಾಗಿದ್ದ 'ತ್ರಿವಿಕ್ರಮ' ಕನ್ನಡ ಸಾಪ್ತಾಹಿಕ, ೧೯೭೩ರಲ್ಲಿ ಸಿದ್ದಾಪುರದಿಂದ ಆರಂಭಗೊಂಡ ಸಿ. ಎಚ್. ಕೆ. ನಂಬಿಯಾರ್ ಅವರ ಸಂಪಾದಕತ್ವದ 'ಸಂಹಾರಂ' ಎಂಬ ಮಲಯಾಳ ಪಾಕ್ಷಿಕ – ಇವುಗಳು ಅಲ್ಪಾವಧಿಯವು. ಟಿ. ಪಿ. ರಮೇಶ್ ಅವರು ಮಡಿಕೇರಿಯಿಂದ ಹೊರಡಿಸುತ್ತಿರುವ **'ಗಡಿನಾಡ ಸಂಚಾರಿ'**ಯು ಕನ್ನಡ ವಾರಪತ್ರಿಕೆಯಾಗಿದೆ. ಸದ್ಯಕ್ಕೆ ಕೊಡಗಿನ ಏಕೈಕ ಸಂಜೆ ದೈನಿಕವಾಗಿ ಪಿ. ವಿ. ಸುರೇಶ್ ಅವರ – 'ಪರಾಕ್ರಮ' (೧೯೮೦) ಕನ್ನಡ ಪತ್ರಿಕೆಯು ಮಡಿಕೇರಿಯಿಂದ ಪ್ರಕಟಗೊಳ್ಳುತ್ತಿದೆ.

## ಕೊಡವ ಭಾಷೆಯಲ್ಲಿ

ಕೊಡವ ಭಾಷೆಯ ಪ್ರಥಮ ವಾರಪತ್ರಿಕೆಯೆನಿಸಿರುವ 'ಬ್ರಹ್ಮಗಿರಿ'ಯು ೧೯೮೦ರಲ್ಲಿ ಆರಂಭಗೊಂಡು ಯು. ಎಂ. ಪೂವಯ್ಯ ಅವರ ಸಂಪಾದತ್ವದಲ್ಲಿ ಮಡಿಕೇರಿಯಿಂದ ಹೊರಡುತ್ತಿದೆ. ಕನ್ನಡವೂ ಸೇರಿದಂತೆ ಇತರ ಯಾವುದೇ ಭಾಷೆಯಲ್ಲಿ ಇರಬಹುದಾದ ಪತ್ರಿಕೋದ್ಯಮದ ಪ್ರಕಾರಗಳೆಲ್ಲವನ್ನೂ ಈ ಪತ್ರಿಕೆಯಲ್ಲಿ ಅಳವಡಿಸಲೆತ್ನಿಸಲಾಗಿದೆ. ಹುತ್ತರಿ ವಾರ್ಷಿಕ ವಿಶೇಷ ಸಂಚಿಕೆಯನ್ನು ಪ್ರತೀ ವರುಷವೂ ಪ್ರಕಟಿಸುತ್ತಿರುವ ಈ ಪತ್ರಿಕೆಯ ಹಲವಾರು ಸಂಚಿಕೆಗಳನ್ನು ಅಮೆರಿಕಾದ ಯು. ಎಸ್. ಲೈಬ್ರರಿ ಆಫ್ ಕಾಂಗ್ರೆಸ್ ಸಂಸ್ಥೆಯವರು ಮೈಕ್ರೊಫಿಲ್ಮ್ ಮಾಡಿ ದಾಖಲಿಸಿರುವರು. ೧೯೮೩ರಲ್ಲಿ ಬಲ್ಲಚಂಡ ಮು.ಚಂಗಪ್ಪ ಅವರ 'ತೂಕಬೊಳಕ್' ಎಂಬ ಇನ್ನೊಂದು ಕೊಡವ ಭಾಷಾ ವಾರಪತ್ರಿಕೆಯು ವೀರರಾಜಪೇಟೆಯಿಂದ ಪ್ರಕಟವಾಯಿತು. ಹಾಗೆಯೇ, ಅದೇ ವರುಷದಲ್ಲಿ 'ಜಮ್ಮನಗಂಡ' ಎಂಬ ಇನ್ನೊಂದು ವಾರಪತ್ರಿಕೆಯೂ ಗೋಣಿಕೊಪ್ಪಲಿನಿಂದ ಹೊರಡಲಾರಂಭಿಸಿತು. ಕೊಡವರ ಕ್ರಾಂತಿಕಾರಿ ವಾರಪತ್ರಿಕೆಯೆಂದು ಗುರುತಿಸಿಕೊಂಡ 'ಜಮ್ಮನಂಗಡ'ದ ಮೊದಲ ಸಂಪಾದಕರು ಪಾಲಂದಿರ ಎ. ಪೊನ್ನಣ್ಣ ಅವರು. ಇದು ಕೆಲಕಾಲ ನಿಂತುಹೋಗಿದ್ದು, ೧೯೮೬ರಲ್ಲಿ ಪುನರಾರಂಭಗೊಂಡು ಮೂರ್ನಾಡಿನಿಂದ ಪ್ರಕಟಗೊಳ್ಳತೊಡಗಿತು. ಇದರ ಈಗಿನ ಸಂಪಾದಕರು ಪಾಲಂದಿರ ರಮೇಶ್ ಪೊನ್ನಣ್ಣ ಅವರು. ಕೊಡವ ಭಾಷೆ, ಜನಾಂಗ, ಸಂಸ್ಕೃತಿ, ಇತ್ಯಾದಿಗಳ ಬಗೆಗೆ ಜನ ಜಾಗೃತಿಯನ್ನು ಉಂಟುಮಾಡುವುದರೊಡನೆ, ಸೋದರ ಸಂಸ್ಕೃತಿಯ ಮೇಲ್ಮೆಯನ್ನೂ ಕೊಡವರಿಗೆ ಪರಿಚಯಿಸುವ ಹಿರಿಯ ಉದ್ದೇಶವನ್ನು ಈ ಪತ್ರಿಕೆಗಳು ಇಟ್ಟುಕೊಂಡಿವೆ.

## ಆಂಗ್ಲ ಭಾಷಾ ಪತ್ರಿಕೆಗಳು

ಕೊಡಗಿನ ಮೊದಲ ಇಂಗ್ಲಿಷ್ ಸಾಪ್ತಾಹಿಕವಾಗಿ 'ಆತ್ಮೀಯ'ವು ೧೯೮೪ರಲ್ಲಿ ಅರವಿಂದ ಆರ್ಯ ಅವರ ಸಂಪಾದಕತ್ವದಲ್ಲಿ ಮಡಿಕೇರಿಯಿಂದ ಒಂದು ವರುಷ ಪ್ರಕಟವಾಯಿತು. ೧೯೮೭ರಲ್ಲಿ ಎ. ಕೆ. ಫಾಲಾಕ್ಷ ಅವರು 'ಸೂಜಿ' ಎಂಬ ಕನ್ನಡ ಸಾಪ್ತಾಹಿಕವನ್ನು ಸಿದ್ದಾಪುರದಿಂದ ಹೊರತಂದರು. ಆ ನಂತರ ಅವರು ಇದನ್ನು ದೈನಿಕವಾಗಿ ಪರಿವರ್ತಿಸಿ ಮಡಿಕೇರಿಯಿಂದ ಪ್ರಕಟಿಸತೊಡಗಿದರು. ಈ ಪತ್ರಿಕೆಯು ಸ್ವಲ್ಪಕಾಲ ಮಾತ್ರ ನಡೆಯಿತು. ಹಾಗೆಯೇ, ಮಡಿಕೇರಿಯ ಬಿ.ಎ. ಷಂಶುದ್ದೀನ್ ೧೯೮೮ರಲ್ಲಿ ಆರಂಭಿಸಿದ

**'ಕೊಡಗು ಕೇಸರಿ'** ಕನ್ನಡ ಪತ್ರಿಕೆಯು ಮೊದಲಿಗೆ ದೈನಿಕವಾಗಿದ್ದು, ಆನಂತರ ಸಾಪ್ತಾಹಿಕವೆನಿಸಿತು. ಇದು ಎರಡು ವರುಷಗಳ ಕಾಲ ಪ್ರಚಲಿತದಲ್ಲಿದ್ದಿತು. ೧೯೮೫ರಲ್ಲಿ ಮಡಿಕೇರಿಯಿಂದ **'ಕೊಡಗಿನ ಅಕ್ಷಿ'** ಎಂಬ ಕನ್ನಡ ಸಾಪ್ತಾಹಿಕವನ್ನು ಕೆ. ಯು. ಮಾಚಯ್ಯ ಹೊರಡಿಸಿದ್ದರಾದರೂ, ಇದು ಅಲ್ಪಾವಧಿಯಲ್ಲಿಯೇ ಸ್ಥಗಿತವಾಯಿತು. ೧೯೮೯ರಲ್ಲಿ ಆರಂಭವಾದ 'ಸಿಡಿಲು' ಕನ್ನಡ ವಾರಪತ್ರಿಕೆಯನ್ನು ಡಿ. ಚಿಣ್ಣಪ್ಪ ಅವರು ಸೋಮವಾರಪೇಟೆ ಯಿಂದ ಸಂಪಾದಿಸಿ ಪ್ರಕಟಿಸುತ್ತಿರುವರು.

ಇವಲ್ಲದೆ, ವೀರರಾಜಪೇಟೆಯಿಂದ ಹೊರಡಿಸಲಾದ ಇಂಗ್ಲಿಷ್ ಸಾಪ್ತಾಹಿಕ 'ಸ್ಟಾರ್ ಆಫ್ ಕೊಡಗು'ವಿನ ಸಂಪಾದಕರಾಗಿದ್ದವರು ಎಸ್. ಎಚ್. ಅಬೂಬಕರ್. ಹಾಗೆಯೇ, ಬಿ.ಎಂ. ಚೆಂಗಪ್ಪ (ಶೆರ್ರಿ) ಅವರು ಸಹಾ ೧೯೯೦ರಲ್ಲಿ ಬೇಟೋಳಿ - ವೀರರಾಜಪೇಟೆಯಿಂದ 'ವಾಯ್ಸ್ ಆಫ್ ಕೊಡಗು' ಎಂಬ ಇಂಗ್ಲಿಷ್ ಬೈ - ವೀಕ್ಲಿಯನ್ನು ಆರಂಭಿಸಿದರು. ಈ ಪತ್ರಿಕೆಯು ಪ್ರಚಲಿತವಿದೆ. ಕುಶಾಲನಗರದಿಂದ ಹೊರಡಿಸಲಾದ 'ಪೋಕ್ಸ್ ಕೂರ್ಗ್' ಎಂಬ ಇನ್ನೊಂದು ಇಂಗ್ಲಿಷ್ ಸಾಪ್ತಾಹಿಕವು ಬಿ. ಆರ್. ನಾರಾಯಣರಿಂದ ಸಂಪಾದಿಸಲ್ಪಟ್ಟು ಹೊರಬರುತ್ತಿದೆ.

ಶೈಕ್ಷಣಿಕ ಸಂಘಟನೆಗಾಗಿ ಈ ಜಿಲ್ಲೆಯಲ್ಲಿ ಪ್ರಕಟವಾದ ಕೆಲವಾರು ಪತ್ರಿಕೆಗಳಲ್ಲಿ, ೧೯೨೬ ರಲ್ಲಿ ಡಿ. ಎಂ. ಸಿದ್ದಲಿಂಗಯ್ಯ ಅವರ ಸಂಪಾದಕತ್ವದಲ್ಲಿ ಮಡಿಕೇರಿಯಿಂದ ಹೊರಟ 'ವಿದ್ಯಾರ್ಥಿ' ಎಂಬ ಕನ್ನಡ ದ್ವೈಮಾಸಿಕ ಪತ್ರಿಕೆಯು ಮೊದಲನೆಯದು. ಮರುವರುಷವೇ, ಅಂದರೆ ೧೯೨೭ರಲ್ಲಿ ಮಡಿಕೇರಿಯ ಅಖಿಲ ಕೊಡಗು ಅಧ್ಯಾಪಕರ ಸಂಘದ ಪತ್ರಿಕೆಯಾಗಿ 'ಶಾರದಾ' ಎಂಬ ಇನ್ನೊಂದು ಕನ್ನಡ ದ್ವಿಮಾಸಿಕವು ಪ್ರಕಟಿಸಲ್ಪಟ್ಟಿತಲ್ಲದೆ, ಬಿ. ಎಸ್. ಕುಶಾಲಪ್ಪ ಅವರು ಇದರ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು. ಕೊಡಗು ಶಿಕ್ಷಣ ಇಲಾಖೆಯ ಪತ್ರಿಕೆಯಾಗಿ ಸುಮಾರು ೧೯೪೮ ರಲ್ಲಿ ಮಡಿಕೇರಿಯಿಂದ ಪ್ರಕಟಗೊಂಡುದು 'ನವೀನ ಶಿಕ್ಷಕ' ಎಂಬ ಕನ್ನಡ ಮಾಸಿಕ. ಜಿ. ಎಸ್. ಕೇಶವಾಚಾರ್ಯರು ಇದರ ಸಂಪಾದಕರಾಗಿದ್ದರು. ಹಾಗೆಯೇ, ೧೯೭೩ರಲ್ಲಿ ಅಖಿಲ ಕೊಡಗು ಅಧ್ಯಾಪಕರ ಸಂಘದ ಮುಖಪತ್ರಿಕೆಯಾಗಿ ಆರಂಭಗೊಂಡ **'ಕೊಡಗು ಗುರುವಾಣಿ'** ಕನ್ನಡ ಮಾಸಿಕವು 'ಭಾರತೀಸುತ'ರ ಸಂಪಾದಕತ್ವದಲ್ಲಿ ನಡೆಯಿತು. ಇದು ಇಂದಿಗೂ ಪ್ರಸಾರದಲ್ಲಿದೆ. ಗಮನಾರ್ಹ ಅಂಶವೆಂದರೆ, ಬಿ. ಎಸ್. ಕುಶಾಲಪ್ಪ ಅವರು ಸಂಪಾದಕರಾಗಿ ಪ್ರಕಟಿಸಿದ, ಮಡಿಕೇರಿ ಸೆಂಟ್ರಲ್ ಹೈಸ್ಕೂಲ್ ಹಳೆಯ ವಿದ್ಯಾರ್ಥಿ ಸಂಘದ ಕನ್ನಡ ತ್ರೈಮಾಸಿಕದಲ್ಲಿ ಖ್ಯಾತ ಕವಿ ಪಂಜೆ ಮಂಗೇಶರಾಯರು ರಚಿಸಿದ 'ಹುತ್ತರಿ ಹಾಡು' ಮೊದಲ ಬಾರಿಗೆ ಬೆಳಕು ಕಂಡಿತು.

ಜಿಲ್ಲಾಧಿಕಾರಿಗಳು ಸಂಪಾದಕರಾಗಿರುವ ಕೊಡಗು ಜಿಲ್ಲಾ ಅಭಿವೃದ್ಧಿ ವಾರ್ತಾ ಪಾಕ್ಷಿಕ - 'ಕರ್ನಾಟಕ ಮುನ್ನಡೆ' ಪ್ರಕಟಗೊಳ್ಳುತ್ತಿದೆ. **'ಕೊಡಗು ಸಹಕಾರ ಬಂಧು'** ಎಂಬ ಕನ್ನಡ ಮಾಸಿಕವು ೧೯೪೧ರಲ್ಲಿ ಮಡಿಕೇರಿಯಿಂದ ಹೊರಡುತ್ತಿತ್ತಲ್ಲದೆ, ಪಿ. ಪಿ. ಬೆಳ್ಯಪ್ಪ ಅವರು ಇದರ ಸಂಪಾದಕರಾಗಿದ್ದರು.

ಕೊಡಗಿನ ಪತ್ರಕರ್ತರು ಇತರೆಡೆಗಳಲ್ಲಿಯೂ ಪತ್ರಿಕೆಗಳನ್ನು ಆರಂಭಿಸುವುದರೊಡನೆ ವೃತ್ತಪತ್ರಿಕಾ ರಂಗಕ್ಕೆ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವರು. ಮೈಸೂರಿನಲ್ಲಿ ಕೆ. ಬಿ. ಗಣಪತಿ ಅವರು ಹೊರಡಿಸುತ್ತಿರುವ ಕನ್ನಡ ದೈನಿಕ 'ಮೈಸೂರು ಮಿತ್ರ' ಮತ್ತು ಇಂಗ್ಲಿಷ್ ದೈನಿಕ **'ಸ್ಟಾರ್ ಆಫ್ ಮೈಸೂರ್'** ಪತ್ರಿಕೆಗಳು ಗಮನಾರ್ಹವಾದುವು. ಹಾಗೆಯೇ, ಮೈಸೂರಿನ ಇಂಗ್ಲಿಷ್ ದೈನಿಕ **'ಮೈಸೂರು ಮಾನಿಟರ್'** ಹಾಗೂ ಬೆಂಗಳೂರಿನ ಕನ್ನಡ ಸಾಪ್ತಾಹಿಕ **'ಕಿತ್ತಳೆನಾಡು'** - ಇವೆಲ್ಲವೂ ಕೊಡಗರಿಂದ ಪ್ರಕಾಶಿತಗೊಂಡವು. ದೇಶ-ವಿದೇಶಗಳಲ್ಲಿ ಪತ್ರಕರ್ತರಾಗಿ ಕೆಲಸ ಮಾಡಿರುವ ಎನ್. ಎಸ್. ಮುತ್ತಣ್ಣ, ಪತ್ರಕರ್ತ ಪಿ. ಆರ್. ನಾರಾಯಣರಾವ್ ಮೊದಲಾದವರೂ ಈ ಜಿಲ್ಲೆಯವರು.

◆

(ಗಜೆಟಿಯರ್‌ದಿಂದ)

## ೫. ದಕ್ಷಿಣ ಕನ್ನಡ ಜಿಲ್ಲೆಯ ಪತ್ರಿಕೋದ್ಯಮ – ಒಂದು ಆತ್ಮಾವಲೋಕನ
### (ಜುಲೈ ೧೯೪೭ರಲ್ಲಿ ಬರೆದದ್ದು)

✍ ಪ್ರೊ. ಕು. ಶಿ. ಹರಿದಾಸ ಭಟ್ಟ

ನಮ್ಮ ಜಿಲ್ಲೆಯ ಪತ್ರಿಕೋದ್ಯಮ ನಿನ್ನೆ ಮೊನ್ನೆಯದಲ್ಲ. ನುಡಿಯ ಏಳ್ಗೆಗೆ ಹೆಣಗಿದ ಮಹನೀಯರಿಗೆಲ್ಲ ಅದು ಉಪಯುಕ್ತ ಉಪಕರಣವಾಗಿದ್ದ ಕಾಲವೊಂದಿತ್ತು. ಅದು ಇಪ್ಪತ್ತನೆಯ ಶತಮಾನದ ಮೊದಲೆರಡು ದಶಕದಲ್ಲಿ. ಆಗ ನಮ್ಮ ಜಿಲ್ಲೆಯೇ ನಾಡಿನ ಪತ್ರಿಕೆಗಳ ತವರುಮನೆಯಾಗಿತ್ತು. ಧಾರವಾಡ, ಮೈಸೂರು ಕಡೆಯ ಬರಹಗಾರರಿಗೆ ಆಸ್ಪದ ದೊರೆತದ್ದು 'ಶ್ರೀಕೃಷ್ಣಸೂಕ್ತಿ', 'ಭಾರತಿ' ಮುಂತಾದ ಪತ್ರಿಕೆಗಳಲ್ಲಿ. ಶ್ರೀ ಮಾಸ್ತಿಯವರ ಮೊದಲ ಲೇಖನವೊಂದು ಕೃಷ್ಣಸೂಕ್ತಿಯಲ್ಲಿ ಅಚ್ಚಾಗಿತ್ತೆಂದು ಮಾಸ್ತಿಯವರೇ ಒಂದು ಕಡೆ ಹೇಳಿದ ಹಾಗೆ ನೆನಪು. ಪತ್ರಿಕೋದ್ಯಮದ ಮೊದಲಿಗರಾದ ಪಂಜೆ, ಕಡೇಕಾರು, ಹುರುಳಿ ಮೊದಲಾದವರ ನೇತೃತ್ವದಲ್ಲಿ ಆಗಿನ ಕಾಲಕ್ಕೆ ತಕ್ಕುದಾದ ಬರವಣಿಗೆಗಳು ಪ್ರಕಟವಾಗುತ್ತಿದ್ದವು. ಸುಮಾರು ಮೂರನೆಯ ದಶಕದಲ್ಲಿ ಕಾರಂತರ 'ವಸಂತ' ಎಲ್ಲೆಲ್ಲೂ ಹಬ್ಬಿ ನಲಿದಾಡಿತು. ಆದರೆ ನಾಡು ಅಂಥ ಉಚ್ಚ ತರದ ಸಾಹಿತ್ಯ ರಸಾಯನವನ್ನುಣ್ಣಲು ಇನ್ನೂ ಸಿದ್ಧವಾಗಿರಲಿಲ್ಲ. ಆದ್ದರಿಂದ ಹಿಂದಿನ ಎಲ್ಲ ಪತ್ರಿಕೆಗಳಂತೆ ಇದೂ ಅದೃಶ್ಯವಾಯಿತು.

ಇದೇ ಕಾಲಕ್ಕೆ ಅಥವಾ ತುಸು ಮೊದಲು ಕೆಲವು ವಾರಪತ್ರಿಕೆಗಳು ತಲೆಯೆತ್ತಿದುವು. ಉದಾ. ರಾಷ್ಟ್ರಬಂಧು, ನವಯುಗ, ಕಂಠೀರವ, ಸ್ವದೇಶಾಭಿಮಾನಿ. ತಮ್ಮ ಹೊಸದರಲ್ಲಿ ಈ ಎಲ್ಲ ಪತ್ರಿಕೆಗಳಲ್ಲಿಯೂ ಒಂದು ಹೊಸತನ, ಒಂದು ಹುಮ್ಮಸ್ಸು, ಒಂದು ವೈವಿಧ್ಯ, ಒಂದು ಸಾಹಸ ಬುದ್ಧಿ ತುಂಬಿ ತುಳುಕುತ್ತಿತ್ತು. ಪರಭಾಷೆಯ ಪತ್ರಿಕೆಗಳ ಮಾದರಿಯ ಮೇಲೆಯೋ ಅಥವಾ ಸ್ವಂತ ಆವಿಷ್ಕಾರದಿಂದಲೋ ಜನ ಮೆಚ್ಚುವಂತಹ ಉಣಿಸು ದೊರೆಯುತ್ತಿತ್ತು. ಹಸುಳೆಯ ಹುಸಿ ಹುಮ್ಮಸವೋ, ಭೋಳೆತನವೋ ಏನೋ. ಆ ಭೋಳೆತನದೊಳಗೂ ಜನರನ್ನಾಕರ್ಷಿಸುವ ಗುಣ ಇರುತ್ತಿತ್ತು. ಅಂದಿನ ದಸರಾ ಸಂಚಿಕೆಗಳೆಂದರೆ ಒಂದು ಜ್ಞಾನಕೋಶದಂತಿದ್ದವು. ಕಾಲ ಕಳೆದಂತೆ ಆ ಹಿರಿಯ ಮಟ್ಟ ಕುಂದಿತು. ಈಗ ಇವುಗಳ ಮಟ್ಟವನ್ನು ಅಳೆಯಬೇಕೆಂದರೆ ಅಳತೆಗೋಲೇ ಸಿಗಲೊಲ್ಲದು. ಅಂದಿನ ಪತ್ರಿಕಾ ಗತವೈಭವವನ್ನು ಇಂದಾದರೂ ನೆನೆದರೆ ಸ್ಫೂರ್ತಿಯುದಿಸೀತು. ಈಗಿನ ಸಂಪಾದಕ ಮಹನೀಯರಿಗೆ, "ವಿಶ್ವಜ್ಞಾನವನ್ನೇ ಕನ್ನಡ ನುಡಿಯಲ್ಲಿ ಜನತೆಗೆ ಅರುಹುತ್ತೇವೆಂಬ ಅಂದಿನ ಆಕಾಂಕ್ಷೆಯೆಲ್ಲಿ? ನಿಸ್ಪೃಹವಾದ ವಿಮರ್ಶಾಧೋರಣೆಯೆಲ್ಲಿ? ಒಳಗೂ ಹೊರಗೂ ನಯನಮನೋಹರವಾದ ಚಿತ್ರಪಟಗಳೆಲ್ಲಿ?" ಎಂದು ಕೇಳಿದ್ದಾದರೆ, "ಇಲ್ಲ, ಸ್ವಾಮೀ, ಇಲ್ಲ. ಆ ಕಾಲ ಹೋಯಿತು." ಎಂಬುದೇ ಮಾರುತ್ತರ. ಇಂಥ ಪರಿಸ್ಥಿತಿಯುಂಟಾಗಲು ಕಾರಣವೇನು? ಬರಿಯ ಹೊರಸುತ್ತಿನ ಪರಿಶೀಲನವೇ ಸಾಲದು; ಒಳಗೂ ಕಣ್ಣು ಹರಿಯಿಸಬೇಕು.

ಮಹಾಯುದ್ಧದ ಬಿರುಗಾಳಿ ಹಲವಾರು ಪುಟಗಳನ್ನು ಹರಿದೊಗೆದು ಪತ್ರಿಕೆಗಳ ಎಲುವುಗೂಡನ್ನು ಬಿಟ್ಟಿತು, ನಿಜ. ಇದ್ದು ಬಿದ್ದ ಜಾಹೀರಾತಿನಿಂದ ಸಂಪಾದನೆಯಾಗುವ ಕಾಸು ಕೂಡ ಹೋಯಿತು. ಆದರೆ ಯುದ್ಧಕಾಲದಲ್ಲಿ ಜನತೆಯಲ್ಲಿ ವೃತ್ತಪತ್ರಿಕೆಗಳನ್ನು ಓದುವ ಕುತೂಹಲ ಅಸಾಮಾನ್ಯವಾಗಿ ಬೆಳೆಯಿತು. ಅಂತೆಯೇ 'ಸ್ವತಂತ್ರ', 'ನವಭಾರತ' ಎಂಬ ದೊಡ್ಡ ದೊಡ್ಡ ಹೆಸರಿನ ಚಿಕ್ಕ ಪತ್ರಿಕೆಗಳು ಜನ್ಮ ತಾಳಿದುವು. ಹುಟ್ಟಿದ ಕೆಲವೇ ತಿಂಗಳುಗಳಲ್ಲಿ 'ಸ್ವತಂತ್ರ'ವು ಯಾರದೋ ಸ್ವಾತಂತ್ರ್ಯಕ್ಕಾಗಿ ಎಲ್ಲೋ ನಡೆಯುತ್ತಿದ್ದ ಯುದ್ಧಕ್ಕೆ ಸಹಾಯ ಮಾಡುವ 'ಯುದ್ಧ ಮುಖ ಪತ್ರಿಕೆ'ಯಾಗಿ ಬದುಕಿತು. ನವಭಾರತವು ಮಾತ್ರ 'ಸ್ವತಂತ್ರ'ವನ್ನು ಹಿಂದೆ ಹಾಕಿ ಮುಂದುವರಿದು ಕನ್ನಡ ಜಿಲ್ಲೆಯ ಏಕಮಾತ್ರ 'ನಕಲೀ' ದಿನಪತ್ರಿಕೆಯಾಗಿ (ನಕಲು ತೆಗೆದ ಪತ್ರಿಕೆ) ಉಳಿಯಿತು.

ಇದು ದಿನಪತ್ರಿಕೆಗಳ ಗತಿಯಾದರೆ ಕಾಲ ಸಂದಂತೆ ಕ್ಷೀಣವಾಗುತ್ತಲಿದ್ದ ಯುದ್ಧಕಾಲದ ವಾರಪತ್ರಿಕೆಗಳ ಸ್ಥಿತಿ ಬೇರೊಂದು ತೆರನಾಯಿತು. ಅವುಗಳಲ್ಲಿ ಕೆಲವಂತೂ 'ಸ್ವತಂತ್ರ'ದಂತೆ ಪ್ರತ್ಯಕ್ಷವಾಗಿ ಅಚ್ಚು ರಾಷ್ಟ್ರಗಳೊಡನೆ ಹೋರಾಟಕ್ಕೆ ನಿಂತು ತಮ್ಮ ಕುತ್ತಿಗೆಯ ಮೇಲೆ ಯೂನಿಯನ್ ಜಾಕ್ ಧಾರಣೆ ಮಾಡುವುದಕ್ಕೂ ನಾಚಲಿಲ್ಲ. ಇನ್ನುಳಿದುವು ಯಥಾಶಕ್ತಿ ಪ್ರಕಟಿ ದೊರೆಯುವ ಪಡಿಯಚ್ಚುಗಳನ್ನು ಮುಖಪುಟದಿಂದ ಬೆನ್ನುಪುಟದ ವರೆಗೆ ಅಂಟಿಸಿಕೊಂಡು ಉಜ್ವಲ ರಾಷ್ಟ್ರೀಯ ಪತ್ರಿಕೆಗಳೆಂಬ ಕರಿಹಲಗೆ ತೂಗಿಸಿಕೊಂಡು ಮೆರೆದಾಡಿದುವು. ವಾರಭವಿಷ್ಯಕ್ಕೊಂದು ಪುಟ, ಜಿಲ್ಲಾ ಗಜೆಟು ಸಮಾಚಾರಕ್ಕೆರಡು, ಜಾಹೀರಾತಿಗೆ ಮೂರು, ಬಾಕಿ ಸಂಗ್ತಿಗಳಿಗೆ ಎರಡು – ಹೀಗೆ ಅತೀ ಕಡಿಮೆಯೆಂದರೂ ಎಂಟು ಪುಟ ತುಂಬುತ್ತಿತ್ತು.

ಇವೆಲ್ಲ ಅನಿವಾರ್ಯ ಕುತ್ತುಗಳೆಂದು ಒಪ್ಪಿಕೊಂಡರೂ ಒಳಗಿಂದೊಳಗೆ ಕೊರೆವ ಮಿದುಳು ಹುಳ ಒಂದಲ್ಲ ಒಂದು ಸಲ ಈ ಪತ್ರಿಕೆಗಳಿಗೆ ಪೀಡೆ ಕೊಡುತ್ತಿತ್ತು. ಕೆಲಗಾಲ ಸ್ವಲ್ಪ ಕಡಿಮೆ, ಇನ್ನು ಕೆಲಗಾಲ ಹೆಚ್ಚು ಅಷ್ಟೇ. ಈ ಬಾಧೆ ಏನೆಂದು ಸ್ಪಷ್ಟ

ಹೇಳುವುದಾದರೆ ಪರಸ್ಪರ ಬೈದಾಡಿಕೊಳ್ಳುವುದು. ಈ ಬೈದಾಡುವುದರಲ್ಲಿ ತಮ್ಮ ಪ್ರತಿಭೆ ವೆಚ್ಚ ಮಾಡುವುದು, ಒಂದು ಶಾಲೆಯಲ್ಲಿ ಇಬ್ಬರು ಅಧ್ಯಾಪಕರೊಳಗೆ ಏನೋ ಮನಸ್ತಾಪವಿದ್ದರೆ, ಸರಿ ಅದಕ್ಕೂ ಎಡೆಯಿದೆ. ಸಂಪಾದಕರಿಗೋ ಅವರ ಬಾದರಾಯಣ ನಂಟಿನ ಯಾರಿಗೋ ಒಬ್ಬನನ್ನು ಕಂಡರಾಗುವುದಿಲ್ಲ ಎಂದು ಇಟ್ಟುಕೊಳ್ಳಿ. ಸರಿ; ಆತನ ಮೇಲೆ ಟೀಕೆಗಳ ಸುರಿಮಳೆ. ಆತ ಅದಕ್ಕೆ ಪ್ರತಿಯಾಗಿ ಸೇಡು ತೀರಿಸಲೆಂದು ಬೇರೊಂದು ಪತ್ರಿಕೆಯ ಮೊರೆ ಹೋಗುವುದು. ಆ ಎರಡು ಪತ್ರಿಕೆಗಳು ಬರಬರುತ್ತಾ ತಮ್ಮ ಕೊಳೆಯನ್ನು ಸಮಾಜದೆದುರಿಗೆ ತೊಳೆದುಕೊಳ್ಳುವುದು, ಎಲ್ಲರ ನಗೆಗೀಡಾಗುವುದು. ಇದು ಒಂದು ಅಂಟುರೋಗ. ವ್ಯಕ್ತಿಗಳ ನಡತೆಗಳನ್ನು ವ್ಯಂಗ್ಯವಾಗಿ ತಿಳಿಸುವುದೆಂದರೆ ದೊಡ್ಡ ಸಾಹಸವೆಂದು ತಿಳಿದವರು ಕೆಲವರಿದ್ದಾರು. ಹಾಗೆಯೇ ನಂಜು ಕಾರುವುದಕ್ಕೆ ತಮ್ಮ ಪತ್ರಿಕೆಯನ್ನು ಪೀಕದಾನಿಯಾಗಿ ಎರವಲು ಕೊಡುವವರೂ ಇಲ್ಲದಿರರು! ಅವರಿಗೆ ಇವರು; ಇವರಿಗೆ ಅವರು. ಆದರೆ ಈ ನಡುವೆ ಪತ್ರಿಕೋದ್ಯಮದ ಉನ್ನತ ಆದರ್ಶವೆಲ್ಲಿ? ಎಂದರೆ ಮುಗಿಲ ಕಡೆ ನಿಟ್ಟುಸಿರು ಬಿಡಬೇಕು.

ಇತ್ತೀಚೆಗಿನ ಒಂದು ಉದಾಹರಣೆ ಕೊಡುವೆ. ಪ್ರಗತಿಶೀಲ ಲೇಖಕರಲ್ಲಿ ಒಬ್ಬರಾದ ಸೇವ ನೇಮಿರಾಜ ಮಲ್ಲರು ಒಂದು ಚಿಕ್ಕ ವ್ಯಂಗ್ಯ ಲೇವಡಿಯಲ್ಲಿ ನಮ್ಮ ಜಿಲ್ಲೆಯ ಎಲ್ಲ ಪತ್ರಿಕೆಗಳನ್ನು ಟೀಕಿಸಿದರು. ಟೀಕೆಯದು ವಿಚಾರಶೀಲರಿಗೆ ಅಹುದೆನಿಸುವಂಥದ್ದೇ. ಅಪಾಯರಹಿತವಾದದ್ದು. ಆದರೆ 'ಕಂಠೀರವ' ನೊಬ್ಬ ಮಾತ್ರ ರೊಚ್ಚಿಗೆದ್ದು ಬಿಟ್ಟ. ಮರ್ಯಾದೆಯ ಮೇರೆಯನ್ನು ಬಿಟ್ಟು ಬೀದಿವರಿದ ಬೈಗುಳನ್ನು ಸುರಿದ. ಅದನ್ನೇ ಬುದ್ಧಿವಂತಿಕೆಯೆಂದು ಹಾರಾಡಿದ. ಕನ್ನಡ ನಾಡು ಸಮೀಪ ಭವಿಷ್ಯದಲ್ಲಿ ತನ್ನ ಹೆಮ್ಮೆಯ ಬಾಲಕನೆಂದು ಕೊಂಡಾಡುವ ಒಬ್ಬ ಬರೆಹಗಾರನ ಮೇಲೆ ಕೋಳಿಯೆಸೆದ. ಇದರ ನಡುವೆ ತನ್ನ ಯೋಗ್ಯತೆಯನ್ನೇ ಮರೆತ.

ಇಂಥ ಅವಿಚಾರ ಹಲವು ವರುಷಗಳಿಂದ ನಡೆದುಕೊಂಡು ಬಂದ ವಯೋವೃದ್ಧ ಪತ್ರಿಕೆಗಳಿಗೆ ಅಂಟಬೇಕಾದರೆ, ಇದರ ಮೂಲ ಕಾರಣ ಏನಾದರೂ ಇದ್ದಿರಬೇಕು. ಮೊದಲ ಕಾರಣ ಮುಖ್ಯ ಕಾರಣ. – ಏಕೆ, ಎಲ್ಲ ಕಾರಣ ಎನ್ನಬಹುದು – ಸ್ವಲ್ಪ ಶಿಕ್ಷಣ. ಹೀಗೆಂದೊಡನೆ ಸಂಪಾದಕ ಮಂಡಲಿ ಕಾಲೇಜಿನಲ್ಲಿ ೪ –೫ ವರ್ಷ ಆಯುಷ್ಯ ಹಾಳು ಮಾಡಿಕೊಂಡಿರಬೇಕು ಎಂಬ 'ಬಾಲ ತುಂಡಾದ ನರಿಯ ಹೇಳಿಕೆಯಲ್ಲವಿದು. ಪರದೇಶದ, ಪರಭಾಷೆಯ ಪತ್ರಿಕೆಗಳ ಮಟ್ಟವೇನು? ಸ್ವಂತ ಸತತಾಧ್ಯಯನದ ಫಲವೇನು? ರಾಜಕೀಯ ಜಾಗೃತಿಯ ಲಕ್ಷಣವೇನು? ಜನತೆಯ ನಿಜವಾದ ಬೇಡಿಕೆಯೇನು? ಎಂಬುದನ್ನು ಅರಿಯಲು ಮುಂದೆ ಓಡದ ಆಲಸ್ಯವೇರಿದ ಜನರ ಹೆಚ್ಚಳ ಈ ಕ್ಷೇತ್ರದಲ್ಲಿ ಆದದ್ದು, ಎನ್ನದೆ ಗತ್ಯಂತರವಿಲ್ಲ. ಅಖಿಲ ಕರ್ನಾಟಕಕ್ಕೆ ಬೇಕಾದ ವಿಷಯಗಳ ಸಂಚಯ ಇಲ್ಲದಿರುವುದು ಈ ಪತ್ರಿಕೆಗಳು ಪಶ್ಚಿಮ ಘಟ್ಟವನ್ನು ದಾಟಲು ಅಶಕ್ತವಾಗಿರುವುದರ ಕಾರಣ. ◆

---

ಟಿಪ್ಪಣಿ – ಮಣಿಪಾಲದ ಉದಯವಾಣಿ, ತರಂಗ ಮುಂತಾದ ಪೈ ಬಂಧುಗಳ ಪತ್ರಿಕೋದ್ಯಮವು ಪಶ್ಚಿಮ ಘಟ್ಟವನ್ನು ದಾಟಿ, ಕರ್ನಾಟಕದಲ್ಲೆಲ್ಲ ಪ್ರಸಾರಗೊಂಡಿದೆ. ಮೇಲ್ಕಂಡ ಲೇಖವು ಅದಕ್ಕೂ ಮುಂಚೆ ಬರೆದದ್ದು.

ಶ್ರೀ. ಹಾ.

# ೬. ವೀರಶೈವ ಪತ್ರಿಕೆಗಳು

ವೀರಶೈವ ಪತ್ರಿಕೆಗಳು - ಇದರರ್ಥ ವೀರಶೈವ ತತ್ವದ ಪ್ರಸರಣದ ಉದ್ದೇಶದಿಂದ ಹೊರಟಂತಹವು. ಇನ್ನು ಕೆಲವು ಭಾಗಶಃ ಈ ಮತದ ಬಗ್ಗೆ ಲೇಖನಗಳನ್ನು ಪ್ರಕಟಿಸಿವೆ. ವೀರಶೈವರು ಸಾಹಿತ್ಯ ಮತ್ತು ಶಿಕ್ಷಣ ರಂಗಗಳಲ್ಲಿ ಎದ್ದು ಕಾಣುವಂತೆ ಕಾರ್ಯವೆಸಗಿದ್ದಾರೆ, ನಿಜ. ಪತ್ರಿಕಾರಂಗದಲ್ಲಿ? ಕೆಳಗಿನ ವಿವರಗಳಿಂದ ಈ ಅಂಶವು ತುಸು ಮಟ್ಟಿಗೆ ವೇದ್ಯವಾಗಬಲ್ಲುದು.

ಸ್ವಮತ ಪ್ರಚಾರಕ್ಕಾಗಿ ಪತ್ರಿಕೆ ಎಂಬ ಮಾಧ್ಯಮವನ್ನು ಬಳಸಿಕೊಳ್ಳಲು ಮೊದಲು ಮಾಡಿದವರು ಕ್ರೈಸ್ತರು. ವೈದಿಕ ಸನಾತನ ಪಂಥವವರ ಸೇವೆಯೂ ಈ ವಿಷಯವಾಗಿ ಗಣನೀಯವಾದದ್ದು. ಅದರಂತೆಯೇ, ಜೈನ, ಕುರುಬ ಜನಾಂಗದವರನ್ನು ಗಣಿಸಬೇಕು. ಇತರ ಅಲ್ಪ ಸಂಖ್ಯಾಕರೂ, ಉದಾಹರಣೆಗೆ ಈಡಿಗರು, ಕುಂಚಿಟಗರು ಮುಂತಾದವರು ಈ ಸಮೂಹ ಮಾಧ್ಯಮವನ್ನು ಅವಲಂಬಿಸಿದ್ದಾರೆ.

## ಪ್ರಾರಂಭದಲ್ಲಿ

ಈ ಹಿನ್ನೆಲೆಯಲ್ಲಿ ವೀರಶೈವರ ಪತ್ರಿಕಾ ಪಾತ್ರವೇನೆಂಬುದನ್ನು ನೋಡೋಣ. ಮೊತ್ತ ಮೊದಲಿನ ಪತ್ರಿಕೆ - ನನ್ನ ಗಮನಕ್ಕೆ ಬಂದದ್ದರ ಪ್ರಕಾರ 'ವೀರಶೈವ ಮತ ಪ್ರಕಾಶಿಕೆ'. ೧೮೯೧ರಲ್ಲಿ ಮೈಸೂರಿನಿಂದ ಪ್ರಕಟವಾಯಿತು. ಅದರ ಸಂಪಾದಕರು - ಪಿ. ವಿ. ರುದ್ರಪ್ಪ. ಈ ಪತ್ರಿಕೆಯಲ್ಲಿ 'ಸಟೀಕ ಬಸವೇಶ ವಿಜಯ' ವು ಧಾರಾವಾಹಿಯಾಗಿ ಬಂತು.

ಎರಡನೆಯ ಪತ್ರಿಕೆಯ ಹೆಸರು 'ವೀರಶೈವ ಮತಾದರ್ಶ'. ಬೆಂಗಳೂರಿನ ಬಿ. ಮುನಿಯಪ್ಪ ಎನ್ನುವವರು ೧೮೯೬ರಲ್ಲಿ ಪ್ರಥಮ ಸಂಚಿಕೆಯನ್ನು ಹೊರತಂದರು. ಇವೆರಡೂ ಮಾಸಿಕಗಳು ಎಷ್ಟು ಕಾಲ ಬಾಳಿದವೆಂಬುದು ತಿಳಿಯದು.

ಆದರೆ ಇವಕ್ಕಿಂತ ಮುಂಚೆ ಆರಂಭವಾದದ್ದು ಸುಪ್ರಸಿದ್ಧ 'ಮೈಸೂರ್ ಸ್ಟಾರ್' (೧೮೮೭ರಿಂದ). ಇದೇನೂ ವೀರಶೈವ ಪ್ರಸಾರಕ್ಕಾಗಿ - ಎಂದು ಆರಂಭವಾಗಿರಲಿಲ್ಲ. ಆದರೆ ೧೮೯೧ರ ವೀರಶೈವರನ್ನು 'ಶೂದ್ರರು' ಎಂದು ಜನಗಣತಿಯಲ್ಲಿ ವರ್ಗೀಕರಿಸಿದ್ದರಿಂದ ಸಂಪಾದಕರಾದ ಯಜಮಾನ್ ಜಿ. ವೀರಸಂಗಪ್ಪ ಸಿಡಿದೆದ್ದರು. ಈ ಕುರಿತು ಪರ-ವಿರೋಧಿ ಅಭಿಪ್ರಾಯಗಳು ಬಹು ದಿನಗಳ ವರೆಗೆ ಹೊರಹೊಮ್ಮಿದವು. ವೀರಶೈವರು ಶೂದ್ರರಲ್ಲ - ಎನ್ನುವುದಕ್ಕೆ ಪಂಡಿತ ಎಸ್. ಆರ್. ಕರಿಬಸವಶಾಸ್ತ್ರಿಗಳು ಶಾಸ್ತ್ರಾಧಾರ ಒದಗಿಸಿದರು. ಅದಕ್ಕೆ ಪ್ರತಿವಾದ ಹೂಡಿದವರು ಪ್ರಾಸಂಗಿಕವಾಗಿ ಬ್ರಾಹ್ಮಣರೇ ಆದ್ದರಿಂದ 'ಬ್ರಾಹ್ಮಣೇತರ' ಎಂಬ ಪ್ರಥೆಯು ಮೇಲ್ವಾಯ್ದು ಬಂತು. 'ಮೈಸೂರ ಸ್ಟಾರ್' ಹೀಗೆ ವೀರಶೈವರ ಸಮರ್ಥನೆಗಾಗಿ ನಿಂತದ್ದಲ್ಲದೆ, ಇತರ ಕೆಳವರ್ಗಗಳ ಹಕ್ಕು ಬಾಧ್ಯತೆಗಳಿಗೂ ಹೋರಾಡಿತು. ಆ ಮುಂದೆ ಸಂಪಾದಕರಾಗಿ ಬಂದ ಜಿ. ವಿರೂಪಾಕ್ಷಯ್ಯನವರು ಇದೇ ಧೋರಣೆಯನ್ನು ಹೆಚ್ಚು ಕಡಿಮೆ ಮುಂದುವರಿಸಿದರು.

ಈ ಸಮೀಕ್ಷೆಯ ನಿಮಿತ್ತದಿಂದ ನನ್ನ ಗಮನಕ್ಕೆ ಬಂದ ವೀರಶೈವ ಮತ ಪತ್ರಿಕೆಗಳು ೬೦ನ್ನು ಮಿಕ್ಕಿವೆ. ನಾಡಿನ ಬೆಂಗಳೂರು, ಮೈಸೂರುಗಳಿಗಿಂತ ಉತ್ತರ ಕರ್ನಾಟಕದಲ್ಲಿಯ ಸಣ್ಣ ಊರು, ತಾಲೂಕುಗಳ ಸ್ಥಳದಲ್ಲಿಯೂ ಈ ಪತ್ರಿಕೆಗಳು ಜನ್ಮತಾಳಿದ್ದೊಂದು ವಿಶೇಷ. ಅವೆಂದರೆ ಆಲಮಟ್ಟಿ, ಕಮತನೂರ, ಮಾಗಡಿ, ಹಿರೇಬಾಗೇವಾಡಿ, ಜಮನಾಳ, ಮುಂಡರಗಿ, ಹರಪನಹಳ್ಳಿ ಮುಂತಾದವು. ನಾಡಿನ ಉತ್ತರಕ್ಕೆ ಹಾಗೂ ಮಹಾರಾಷ್ಟ್ರದ ಗಡಿಯಲ್ಲಿರುವ ವೀರಶೈವರಿಗಾಗಿ ಕನ್ನಡ-ಮರಾಠೀ ಈ ಎರಡೂ ಭಾಷೆಗಳಲ್ಲಿ ಪತ್ರಿಕೆಗಳು ಹೊರಟದ್ದು ಇನ್ನೊಂದು ವಿಶೇಷ. ಉದಾಹರಣೆಗೆ ವೀರಶೈವ ಗರ್ಜನಾ (ಲಾತೂರು), ವೀರಶೈವೋತ್ಕರ್ಷಮಾಲಾ (ಕೊಲ್ಹಾಪುರ).

ಮೇಲೆ ಕಾಣಿಸಿದ ಎಲ್ಲ ಪತ್ರಿಕೆಗಳು 'ವೀರಶೈವ' ಶಬ್ದವನ್ನು ಪೂರ್ವಪದವಾಗಿ ಬಳಸಿವೆಯಲ್ಲವೆ. ಇನ್ನೂ ಹತ್ತಾರು ಪತ್ರಕರ್ತರು ಹಾಗೆ ಮಾಡಿದ್ದಾರೆ. ಅದೇಕೋ ಲಿಂಗಾಯತ ಶಬ್ದವನ್ನು ಗಣನೆಗೆ ತೆಗೆದುಕೊಂಡಿಲ್ಲ. (ಒಂದೇ ಪತ್ರಿಕೆ ಆ ಶಬ್ದವನ್ನು ಬಳಸಿದೆ).

ಈ ಸಮೀಕ್ಷೆಯಲ್ಲಿ ಪತ್ರಿಕೆಗಳನ್ನು ಕಾಲುಶತಮಾನದ ಅವಧಿಯಾಗಿ, ಎಂದರೆ ಆರಂಭದಿಂದ ೧೯೨೫ರ ವರೆಗೆ; ೧೯೨೫ರಿಂದ ೧೯೫೦; ೧೯೫೦ - ೧೯೭೫ ಮತ್ತು ೧೯೭೫ರಿಂದ ಈಚೆಗೆ ಎಂದು ವಿಭಾಗಿಸಿ ವಿವರಗಳನ್ನು ಕೊಡಬಯಸಿದೆ. ಪತ್ರಿಕೆಗಳ ಹಾಗೂ ಆ ಸಂಪಾದಕರುಗಳ ನಾಮ ನಿರ್ದೇಶನ ಮಾತ್ರವೇ ಈ ಪರಿಮಿತ ಪುಟಸಂಖ್ಯೆಯಲ್ಲಿ ಸಾಧ್ಯವಾಗಿದೆ.

## ೧೮೮೫ - ೧೯೨೫

ಈ ಆರಂಭದ ಪತ್ರಿಕೆಗಳಲ್ಲಿ ಒಂದು ಮದ್ರಾಸದಿಂದ ಪ್ರಕಟವಾಗುತ್ತಿದ್ದದ್ದು ಆಶ್ಚರ್ಯದ ಮಾತಾಗಿದೆ. ಅದರ ಹೆಸರು 'ವೀರಶೈವ ಪ್ರಭಾಕರ' (೧೯೦೭). ಎನ್.ಸಿ. ಚೆನ್ನವೀರಪ್ಪ ಎಂಬವರು ಅಲ್ಲಿಯ ಡಿವೈನ್ ಪ್ರೆಸ್‌ನಲ್ಲಿ ಕನ್ನಡ ಲಿಪಿಯಲ್ಲಿಯೇ ಮುದ್ರಿಸುತ್ತಿದ್ದರು. ಅಂದ ಹಾಗೆ ಅದರಲ್ಲಿ 'ವೀರಾಗಮ ಕಾವ್ಯ' ಎಂಬುದು ಪ್ರಕಟವಾಗಿದೆ. ಇದರ ಮೂಲ ತಿಳಿಯದು.

ಇನ್ನೀಗ ಧಾರವಾಡದ ಕಡೆಗೆ ತಿರುಗೋಣ. ೧೯೧೧ರಲ್ಲಿ ಎಚ್. ಎಸ್. ಶಿವಲಿಂಗಪ್ಪ ಶಾಸ್ತ್ರಿ ಎನ್ನುವವರು 'ವೀರಶೈವ ಧರ್ಮ ತರಂಗಿಣಿ' ಎಂಬ ಮಾಸಿಕವನ್ನು 'ಶಿವಯೋಗ ಮಂದಿರ'ದ ಧರ್ಮೋತ್ತೇಜಕ ಸಭಾದಿಂದ ಪ್ರಾರಂಭಿಸಿದರು. ಸಂಪಾದಕರು ಶಾಸ್ತ್ರವೇತ್ತರೆಂದು ಹೆಸರು ಮಾಡಿದವರು. ಅದರಿಂದಾಗಿ ಆಗಿನ ಗಣ್ಯವ್ಯಕ್ತಿಗಳಾದ ಶಾಂತವೀರ ರಾ.ಕಿತ್ತೂರ, ಮೈಸೂರು ಗವಿಮಠದ ಸ್ವಾಮಿಗಳು, ಸಿದ್ರಾಮಪ್ಪ ಪಾವಟೆ, ಮುಂತಾದವರು ಅದರ ಲೇಖಕವರ್ಗದಲ್ಲಿದ್ದರು. ಸುಮಾರು ೧೫ ವರ್ಷದ ವರೆಗಂತೂ ಪತ್ರಿಕೆ ಜೀವಂತ ಇತ್ತು.

ಇದೇ ಕಾಲಕ್ಕೆ ಹಿರೇಬಾಗೇವಾಡಿ (ಬೆಳಗಾಂವ ಜಿಲ್ಲೆ) ಮತ್ತು ಜಮನಾಳ (ವಿಜಾಪುರ ಜಿಲ್ಲೆ) ಈ ಸಣ್ಣ ಊರುಗಳಿಂದ 'ನೀಲಕಂಠ ವಿಜಯ' ಮತ್ತು 'ಶ್ರೀಮದ್ವೀರಶೈವ' ಎಂಬೆರಡು ಪತ್ರಿಕೆಗಳು ಹೊರಬಂದುದು ಮೆಚ್ಚಬೇಕಾದ ಸಂಗತಿಯಾಗಿದೆ. ಹೆಚ್ಚು ಕಾಲ ಬಾಳಲಿಲ್ಲವೆಂದು ಊಹಿಸಿದರೆ ತಪ್ಪಿಲ್ಲ.

## ೧೯೨೫ - ೧೯೫೦

ಈ ಅವಧಿಯೆಂದರೆ ವೀರಶೈವ ಪತ್ರಿಕೋದ್ಯಮದ ಉಚ್ಛ್ರಾಯ ಕಾಲ. ಸಂಖ್ಯಾಬಲ ಹಾಗಿರಲಿ, ಗುಣಮಟ್ಟದಲ್ಲಿಯೂ ಬೆಳಗಿದ ನಾಲ್ಕು ಪತ್ರಿಕೆಗಳಂತೂ ಇವೆ.

ಮೇಲ್ಕಾಣಿಸಿದ ಶಿವಲಿಂಗಶಾಸ್ತ್ರಿಗಳು ಮೈಸೂರಿಗೆ ಬಂದು ನೆಲಸಿದರೆಂದು ಕಾಣುತ್ತದೆ. ಅಲ್ಲಿಂದ 'ವೀರಶೈವ ದರ್ಪಣ' ಎನ್ನುವ ಪತ್ರಿಕೆಯನ್ನು ಆರಂಭಿಸಿದರು (೧೯೨೪). ಮೈಸೂರಿನಲ್ಲಿ ಇದೇ ಸುಮಾರಿಗೆ 'ಆರಾಧ್ಯ ಧರ್ಮೋಜ್ಜೀವಿನಿ' ಹೊರಹೊಮ್ಮಿತು. ಪತ್ರಿಕೆಯ ಉದ್ದೇಶ ಸ್ಪಷ್ಟವೇ ಇದೆ. ಸಂಪಾದಕರೂ ಒಬ್ಬ ಆರಾಧ್ಯರೇ. (ಕೆ. ಸಿ. ನಂಜುಂಡಾರಾಧ್ಯರು). ಆರಾಧ್ಯ ಧರ್ಮೋಜ್ಜೀವಿನೀ ಸಭಾ - ಎಂಬ ಸಂಸ್ಥೆಯೇ ಇದ್ದಿತು. ೧೯೨೭ರಲ್ಲಿ ಪತ್ರಿಕೆ ಚಾಮರಾಜನಗರಕ್ಕೆ ಸ್ಥಳಾಂತರ ಹೊಂದಿತು. ಅದೇನೇ ಇರಲಿ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬಂದ 'ಶ್ರೀಕರಭಾಷ್ಯ', 'ಆರಾಧ್ಯ ಚರಿತ್ರೆ' ಮುಂತಾದವು ಅದರ ಘನತೆಯನ್ನು ಹೆಚ್ಚಿಸಿದುವು. ಇತ್ತ ಹಾವೇರಿಯಲ್ಲಿ ವಕೀಲರೆಂದು ಹೆಸರು ಪಡೆದಿದ್ದ ವಿ.ಸಿ. ಯಗಟಿ 'ಬಸವರಾಜ' ಹೆಸರಿನ ವಾರಪತ್ರಿಕೆಯನ್ನು ಸ್ಥಾಪಿಸಿದರಾದರೂ, ಚಂದಾದಾರರ ಕೊರತೆಯಿಂದಾಗಿ ಮಾಸಪತ್ರಿಕೆಯಾಗಿ ಮಾಡಿದರು. ಚೆನಬಸಪ್ಪ ಹಾಲಪ್ಪನವರು ೧೯೩೫ರಲ್ಲಿ ಸಂಪಾದಕರಿದ್ದರೆಂಬ ದಾಖಲೆಯಿರುವುದರಿಂದ ಪತ್ರಿಕೆಯು ೧೦-೧೫ ವರ್ಷ ಪ್ರಸಾರದಲ್ಲಿದ್ದಿತೆನ್ನಬಹುದು. ಬೆಳಗಾಂವಿಯ ವೀರಶೈವ ತರುಣ ಸಂಘದವರು ಪತ್ರಿಕೋದ್ಯಮ ಸಾಹಸಕ್ಕೆ ತೊಡಗಿ 'ಪ್ರಬೋಧ' ಎನ್ನುವ ಮಾಸಿಕವನ್ನು ೧೦-೧೨ ವರ್ಷಗಳವರೆಗಾದರೂ ನಡೆಸಿಕೊಂಡು ಬಂದರು (೧೯೧೮-೧೯೩೦). ಇದು ಕೂಡ ಅವಾಗಲೋ ಧಾರವಾಡಕ್ಕೆ ಸ್ಥಾನಾಂತರ ಮಾಡಿತು. ಶಿ.ಶಿ. ಬಸವನಾಳ ಮತ್ತು ಎಚ್.ಎಫ್. ಕಟ್ಟೀಮನಿಯಂತಹ ಗಣ್ಯವ್ಯಕ್ತಿಗಳ ಪಾತ್ರ ಅದರಲ್ಲಿದ್ದರೂ ಬೇಗ ಕಣ್ಮರೆಯಾಯಿತು.

ಪ್ರಬೋಧವನ್ನು ಹೊರಡಿಸುವುದರ ಸಲಹೆ ಮಾಡಿದ್ದವರು ಹರ್ಡೇಕರ ಮಂಜಪ್ಪನವರು. ಅವರು ಮುಂದೆ ವಿಜಾಪುರ ಜಿಲ್ಲೆಯ ಆಲಮಟ್ಟಿಯಲ್ಲಿ ನೆಲೆನಿಂತ ಮೇಲೆ ತಾವೇ ಒಂದು ಪತ್ರಿಕೆಯನ್ನು ಹುಟ್ಟುಹಾಕಿದರು. ಅದುವೆ 'ಶರಣ ಸಂದೇಶ'. 'ಸೆಟ್ಟಿ ಇಳಿದಲ್ಲಿ ಪಟ್ಟಣ' ಎಂಬ ಗಾದೆಗೆ ಅನುಗುಣವಾಗಿ, ಆಲಮಟ್ಟಿಯು ಹರ್ಡೇಕರ ಮಂಜಪ್ಪನವರಿಂದಾಗಿ ಪ್ರಸಿದ್ಧಿಯನ್ನು ಪಡೆಯಿತು. ಹಾಗೆಯೇ ಈ ಪತ್ರಿಕೆಯೂ ಅವರ ಹೆಸರಿನಿಂದಾಗಿ ಬಹುಬೇಗ ಮತ್ತು ಬಹುಕಾಲದ ವರೆಗೆ ಹೆಸರು ಮಾಡಿತು. (೧೯೩೧ -) ಈ ಪತ್ರಿಕೆಯನ್ನು ಹೊರಡಿಸುವುದರ ಉದ್ದೇಶ ಮೂರು ಬಗೆಯದು. ಒಂದಂತೂ ಶರಣರ ತತ್ವಗಳ ಪ್ರಸಾರ. ಮತ್ತೊಂದು ಸಮಕಾಲೀನ ವಾತಾವರಣದಲ್ಲಿಯ ರಾಜಕೀಯ ಮಹತ್ವವನ್ನು ಕಡಿಮೆ ಮಾಡಿ ಸಾಮಾಜಿಕ ಚಟುವಟಿಕೆಗೆ ಒತ್ತು ಕೊಡುವುದು. ಮೂರನೆಯದಾಗಿ ತಾವು ಸ್ಥಾಪಿಸಿದ ವಿದ್ಯಾಲಯದ ವಿದ್ಯಾರ್ಥಿಗಳ ತಿಳಿವಳಿಕೆಯನ್ನು ಹೆಚ್ಚಿಸುವುದು. ಅವರು ಪ್ರಕಟಿಸಿದ ಕೆಲವು ವಿಷಯಗಳಿವು:

ಗಣೇಶೋತ್ಸವ ಹೇಗೆ ಆಚರಿಸಬೇಕು?
ವಿವಾಹ ವಿಚಾರದಲ್ಲಿ ವಧೂವರರಿಗೆ ಕೊಡಬೇಕಾದ ಸ್ವಾತಂತ್ರ್ಯ.
ಮುದ್ರಣ ಕಲೆ, ಪತ್ರಿಕಾ ವ್ಯವಸಾಯ ಮುಂತಾದವುಗಳ ತಿಳಿವಳಿಕೆ.

ಇವಕ್ಕಿಂತ ಮುಖ್ಯವಾಗಿ ಪತ್ರಿಕೆಯು ಸಮಕಾಲೀನ ರಾಜಕೀಯ ಘಟನೆಗಳಿಗೆ ಸ್ಪಂದಿಸುತ್ತಿತ್ತು. ಅವರು ಮೊದಲಿಗೆ ಗಾಂಧೀಜಿಯ ಕಟ್ಟಾ ಅನುಯಾಯಿಗಳಿದ್ದರು. ಆದರೆ ಅವರ ವಿಚಾರಸರಣಿ ಒಪ್ಪದೇ, ಮಂಜಪ್ಪನವರು ಆಗಾಗ ಟೀಕೆ ಮಾಡುತ್ತಿದ್ದರು. ಅವರ ಒಂದು ಲೇಖ 'ಹಿಂದೂ ಜನಾಂಗಕ್ಕೆ ಭಯಂಕರವಾದ ಆಘಾತ' ಎಂಬುದು ಗಾಂಧೀಜಿಯ ನೇರ ಟೀಕೆಯೇ ಆಗಿತ್ತು. ಪತ್ರಿಕೆಯು

ತನ್ನ ಜನಪ್ರಿಯತೆಯನ್ನು ಹೆಚ್ಚಿಸಿಕೊಂಡಿದ್ದಾಗಲೇ ಮಂಜಪ್ಪನವರು ಅಸು ನೀಗಿದರು.

ಇತ್ತ ಆಲಮಟ್ಟಿಯ ಜಿಲ್ಲಾ ಸ್ಥಳವಾದ ವಿಜಾಪುರದಲ್ಲಿ ಫ. ಗು. ಹಳಕಟ್ಟಿಯವರು 'ಶಿವಾನುಭವ'ವನ್ನು ಪ್ರಾರಂಭಿಸಿದರು (೧೯೨೬ –). ವಚನಕಾರರನ್ನು, ವಚನಗಳನ್ನು, ಶಿವಶರಣರನ್ನು ಬೆಳಕಿಗೆ ತರುವ ವ್ರತನಿಷ್ಠ ಕಾಯಕದಲ್ಲಿ ತೊಡಗಿದ ಶಿವಾನುಭವವು ಗಳಿಸಿಕೊಂಡ ಗೌರವವು ಅನನ್ಯಿತವಾದದ್ದು. ಎರಡು ನೂರಕ್ಕೂ ಮೇಲ್ಪಟ್ಟು ವಚನಕಾರರನ್ನು ಬೆಳಕಿಗೆ ತಂದು ಅವರ ಚರಿತ್ರೆಗಳನ್ನೂ ಪ್ರಕಟಿಸಿದರು. ಬಸವಣ್ಣನ ಕಾಲ ನಿರ್ಣಯಕ್ಕೆ ನಿರ್ಣಾಯಕವಾದ ಅರ್ಜುನವಾಡದ ಶಿಲಾಶಾಸನವು ಮೊದಲು ಪ್ರಕಟವಾದದ್ದು ಶಿವಾನುಭವದಲ್ಲಿ. ಆಗಿನ ಕಾಲದ ಹಿರಿಯ ಲೇಖಕರೆನಿಸಿದ್ದ ನಂದೀಮಠ, ಬಸವನಾಳ, ಕುಂದಣಗಾರ, ಮಾಳವಾಡ ಮುಂತಾದ ಪ್ರಭೃತಿಗಳು ಲೇಖನಗಳನ್ನು ಈ ಪತ್ರಿಕೆಗೆ ತಾವಾಗಿ ಕಳಿಸುತ್ತಿದ್ದರು – ಪ್ರಕಟನೆಗಾಗಿ.

ಮೂರನೆಯ ಮಹತ್ವಪೂರ್ಣ ಪತ್ರಿಕೆ 'ಪಂಚಾಚಾರ್ಯ ಪ್ರಭಾ'. ಮೈಸೂರಲ್ಲಿ ಅದರ ಆರಂಭ. (೧೯೨೭–೧೯೭೭). ಸ್ಥಾಪಕ –ಸಂಪಾದಕರು ಕಾಶೀನಾಥ ಶಾಸ್ತ್ರಿಗಳು. ಅದಕ್ಕಾಗಿ ಖರೀದಿಸಿದ ಪ್ರೆಸ್ಸಿಗೆ ಪಂಚಾಚಾರ್ಯ ಎಂದೇ ಹೆಸರಿತ್ತರು. ಶಾಸ್ತ್ರಿಗಳು ಮಹಾಪಂಡಿತರು. ಎಪ್ಪತ್ತಕ್ಕೂ ಮಿಕ್ಕಿ ವೀರಶೈವ ಮಾರ್ಗಕೃತಿಗಳನ್ನು (classics) ಹೊರತಂದಿದ್ದು ಅವುಗಳಲ್ಲಿ ಹೆಚ್ಚಿನವು ಪಂ. ಪ್ರ. ದಲ್ಲಿ ಧಾರಾವಾಹಿಯಾಗಿ ಬಂದವುಗಳು. ಅಂತೆಯೇ ಬಹುಕಾಲ ಪತ್ರಿಕೆ ಬಾಳಿತು. ಶಾಸ್ತ್ರಿಗಳು ೧೯೫೦ರಲ್ಲಿ ತೀರಿಹೋದ ಮೇಲೆ ಅವರ ಬಂಧು ಮಹಾದೇವಶಾಸ್ತ್ರಿಗಳು ಮುಂದುವರಿಸಿದರು. ಅಂತೂ ಅರ್ಧ ಶತಮಾನ ದಾಟಿದ ಕೆಲವೇ ವೀರಶೈವ ಪತ್ರಿಕೆಗಳಲ್ಲಿ ಇದೊಂದು.

ಬಿ. ಶಿವಮೂರ್ತಿ ಶಾಸ್ತ್ರಿಗಳ 'ಶರಣ ಸಾಹಿತ್ಯ' ವನ್ನು ಇಲ್ಲಿಯೇ ಕಾಣಿಸಬೇಕು. ಅವರ ವ್ಯಕ್ತಿತ್ವ ಮತ್ತು ಪತ್ರಿಕೆಯ ಬಗ್ಗೆ ಅವರು ಕೈಕೊಂಡ ಸಂಚಾರದ ಪ್ರಸಾರದಿಂದಾಗಿ ಶರಣ ಸಾಹಿತ್ಯವನ್ನು ಕರ್ನಾಟಕದ ಎಲ್ಲೆಲ್ಲಿಯೂ ಕಾಣುವಂತಾಯಿತು. ಬೇರೆ ಸಾಹಿತ್ಯಿಕ ಲೇಖನಗಳಿಗೂ – ವಿಶೇಷತಃ ಗೋವಿಂದ ಪೈ ಮುಂತಾದವರ, ಸಂಶೋಧನ ಬರಹಗಳಿಗೂ ಅವಕಾಶವಿದ್ದಿತು. ಅಖಂಡ ೩೫ ವರ್ಷ ಪತ್ರಿಕೆಯನ್ನು ನಡೆಸಿ, ಶಾಸ್ತ್ರಿಗಳು ವೃದ್ಧಾಪ್ಯದ ಕಾರಣದಿಂದ ಬಿಡುಗಡೆ ಹೊಂದಿದ್ದರು.

ಉತ್ತರ ಕರ್ನಾಟಕದ ಆಗಿನ ಇವು ಮೂರು ಪತ್ರಿಕೆಗಳನ್ನು ಕಾಣಿಸಬೇಕು. 'ಲಿಂಗಾಯತ' ಹೆಸರಿನ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಪತ್ರಿಕೆ (೧೯೪೨). ಲಿಂಗಾಯತ ಶಬ್ದದ ಬಳಕೆಯ ಪತ್ರಿಕೆ ಇದೊಂದೇ. ಬೆಳಗಾಂವಿಯಲ್ಲಿ ಪ್ರಾರಂಭವಾದ ಸಂಸ್ಥೆ ಧಾರವಾಡಕ್ಕೆ ಬಂದಿತಾದ್ದರಿಂದ ಪತ್ರಿಕೆಯೂ ಸಾಗಿಬಂತು. ಬಹಳ ದಿನ ಬದುಕಿದಂತೆ ಕಾಣಲಿಲ್ಲ. ಸಂಸ್ಥೆಯವರು 'ಸಾಹಿತ್ಯ ಸಮಿತಿ'ಯನ್ನು ರೂಪಿಸಿ ಅದರ ಮೂಲಕ ಸಂಶೋಧನ, ಇತಿಹಾಸಗಳ ಲೇಖನಗಳುಳ್ಳ ಬೇರೊಂದು ತ್ರೈಮಾಸಿಕವನ್ನು ಹೊರಡಿಸಿದರು. ವೀರಶೈವ ಒಲವಿನ ಲೇಖಗಳು ಇರುತ್ತಿದ್ದುವೆಂದು ಬೇರೆ ಹೇಳಬೇಕಿಲ್ಲ.

'ವೀರಶೈವ' ಎಂದಷ್ಟೆ ಹೆಸರಿಟ್ಟುಕೊಂಡ ಒಂದು ಮಾಸಿಕವು ಬೆಂಗಳೂರಿನಿಂದ ಹೊರಡುತ್ತಿತ್ತು. (೧೯೩೬ – ೪೨) ಸಿ.ಸಂಗಯ್ಯ ಅದರ ಸಂಪಾದಕ ಪ್ರಕಾಶಕರು. ಅಷ್ಟೋ ಹಳೆಯ ಕಾಲದ ಕೆಲವು ಪತ್ರಿಕೆಗಳು ಧ್ಯೇಯ ವಾಕ್ಯವನ್ನು ಕವರ್ ಮೇಲೆ ಕಾಣಿಸುತ್ತಿದ್ದರು. ಈ ಪತ್ರಿಕೆಯ ಧ್ಯೇಯದ ಒಕ್ಕಣೆ ಸೊಗಸಾಗಿ ಬಂದಿದೆ:

ಶ್ರೀರಜತಗಿರೀಶನ ದಯದಲ್ಲಿ
ವೀರಶೈವ ಸುನಾಮ ಪತ್ರಿಕೆ
ಭೂರಿ ವಿಷಯಗಳಿಂದ ತುಂಬಿ ತುಳುಕುತೆ ವಿವಿಧ ವಾರ್ತೆಗಳಾ।
ಬೀರುವುದು ಸದ್ಧರ್ಮಬೋಧೆಯ
ಸಾರುವುದು ಸನ್ಮಾರ್ಗವನು ಸಲೆ
ತೋರುವುದು ಸುಜನಾಳಿ ಸಂತಸಬಡುವ ಪರಿಯಂತೆ.

ಉತ್ತರದ ಗಡಿನಾಡು–ಹೊರನಾಡಿನಲ್ಲಿ ಮರಾಠೀ ಕನ್ನಡಿಗರನ್ನುದ್ದೇಶಿಸಿ ಪತ್ರಿಕೆಗಳು ಹೊರಡುತ್ತಿದ್ದುವೆಂದು ಮೇಲೆ ಹೇಳಿದೆಯಷ್ಟೆ. ಸಂಕೇಶ್ವರದ ಹತ್ತಿರದ ಕಮತನೂರ ಎಂಬ ಗ್ರಾಮದಿಂದ 'ವೀರಶೈವ ಧರ್ಮಸಾಮ್ರಾಜ್ಯ' ಹೊರಡುತ್ತಿತ್ತು – ೧೯೨೬ರಿಂದ. ರಾಚಯ್ಯಸ್ವಾಮಿ ಲಿಂಗಯ್ಯಸ್ವಾಮಿ ಹಿರೇಮಠರು ಅದರ ಸಂಪಾದಕರು. 'ಸುದರ್ಶನ' ಎನ್ನುವ ಹೆಸರು ಶ್ರೀಕೃಷ್ಣಭಕ್ತರಾದ ವೈದಿಕರಿಗೆ ಪ್ರಿಯವಾದದ್ದು. ಉಡುಪಿಯಲ್ಲಿ ಆ ಹೆಸರಿನ ಪತ್ರಿಕೆಯೂ ಹೊರಡುತ್ತಿತ್ತು. ಹೀಗಿರುತ್ತ ಸೊಲ್ಲಾಪುರದ ಎಂ. ಎಸ್. ಕಲ್ಯಾಣ ಶೆಟ್ಟಿಯವರು ತಮ್ಮ ವೀರಶೈವ ಮತ ಪ್ರಸಾರ ಪತ್ರಿಕೆಗೆ ಆ ಹೆಸರನ್ನೇಕೆ ಇಟ್ಟರೊ! ದುರ್ದೈವಕ್ಕೆ ಅದರ ಒಂದು ಸಂಚಿಕೆಯೂ ನೋಡ ದೊರೆತಿಲ್ಲ.

೧೯೪೩ರಲ್ಲಿ ಪ್ರಕಟನೆಯನ್ನು ಆರಂಭಿಸಿದ ಹಾವೇರಿಯ 'ಸದ್ಧರ್ಮ ದೀಪಿಕೆ'ಯನ್ನೂ ಇಲ್ಲಿಯೇ ಕಾಣಿಸಬೇಕು. ಸಂಪಾದಕರಾದ ಚೆನ್ನಮಲ್ಲಿಕಾರ್ಜುನ ಶಾಸ್ತ್ರಿ ಪ್ರತಿಭಾಸ್ಪಿತ ವ್ಯಕ್ತಿಗಳು. ಪತ್ರಿಕೆಯಲ್ಲಿ – ವೀರಶೈವರಿಗೆ ಅಷ್ಟಾವರಣದ ಆವಶ್ಯಕತೆ, ಪಾಲ್ಕುರಿಕೆ ಸೋಮನಾಥ, ಪಂಚಾಚಾರ್ಯರು – ಇವೇ ಮೊದಲಾದುವನ್ನು ಪ್ರಕಟಿಸಿ ಪತ್ರಿಕೆಯ ಹೆಸರನ್ನು ಸಾರ್ಥಕ

ಮಾಡಿಕೊಂಡವರೇನೋ ನಿಜ. ಆದರೆ ಸಾಮಾಜಿಕ – ರಾಜಕೀಯ ವಿಷಯಗಳಿಗೂ ಭಾಗಶಃ ಮಹತ್ವ ಕೊಟ್ಟಿದ್ದಾರೆ. ಉದಾ. ಗೆ ಅಮೆರಿಕೆಯಲ್ಲಿ ವೀರಶೈವ ಧರ್ಮಪ್ರಸಾರ; ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಮೇಲೆ ಸಂಸ್ಥಾನಗಳಿಗೆ ಏನು ಅನುಕೂಲವಾಗಿದೆ?

ಸ್ವಾತಂತ್ರ್ಯಾನಂತರ ರಾಯಚೂರಿನಿಂದ 'ಅಮರವಾಣಿ'ಯನ್ನು ಬಿ. ಎಂ. ವೀರೇಶ್ವರ ಶಾಸ್ತ್ರಿ, ಎಸ್. ಎಂ, ಹುಣಶ್ಯಾಳ, ಎಸ್. ಶಿವಾನಂದ – ಇವರುಗಳು ಸೇರಿ ಪ್ರಕಟಿಸತೊಡಗಿದರು. ಭಾಗಶಃ ಇದು ವೀರಶೈವ ಪ್ರಸಾರಕವಾಗಿತ್ತು. ಆರೋಗ್ಯ, ನಿಸರ್ಗವಾಣಿ – ಮುಂತಾದ ಅದರ ಸ್ಥಿರ ಶೀರ್ಷಿಕೆಗಳಿಂದ ಹೀಗೆ ಹೇಳುತ್ತಿದ್ದೇವೆ.

೧೯೫೦-೭೫

ಈ ಅವಧಿಯಲ್ಲಿ ವಿಜಾಪುರ ಮುಂತಾದ ಉತ್ತರ ಕರ್ನಾಟಕದ ಭಾಗಗಳಲ್ಲಿಂದ ಕೆಲವೇ, ಆದರೆ ಮಹತ್ವದ, ಪತ್ರಿಕೆಗಳು ಮೂಡಿಬಂದಿವೆ. ಹಾಗೆ 'ಶರಣಮಾರ್ಗ' ಎನ್ನುವ ತ್ರೈಮಾಸಿಕವು ವಿಜಾಪುರದಲ್ಲಿ ಕಾಣಿಸಿಕೊಂಡದ್ದು ೧೯೫೭ರಲ್ಲಿ. ಶಿವಾನಂದ ಲಿಂಗರಾಜ ಬರಗೂರು ಮತ್ತು ಆರುಬೆರಳಿನ ವೀರಪ್ಪಶಾಸ್ತ್ರಿಗಳು, ಸಂಪಾದಕರಿದ್ದರೆಂದು ಕಾಣುತ್ತದೆ. 'ನೀಲಕಂಠ ವಿಜಯ', 'ಶರಣತತ್ವ' ಎಂಬವುಗಳೂ ವಿಜಾಪುರದಿಂದಲೇ ಈ ಸುಮಾರಿಗೆ ಉದ್ಭವವಾದುವು. ಇನ್ನೊಂದು ಪತ್ರಿಕೆ ಮಾತ್ರ ಸಾಂಕೇತಿಕವಾದ ಹೆಸರನ್ನಿಟ್ಟುಕೊಂಡು – 'ಅನುಭವ ಮಂಟಪ' ಕಾಣಿಸಿಕೊಂಡಿತು. ಎಚ್. ಟಿ. ಸಾಸನೂರ, ಪಿ. ವಿ. ವಜ್ರಮಟ್ಟಿ ಎಂಬ ಅನುಭವಸ್ಥ ಸಂಪಾದಕರೇ ಇದ್ದರು. ಆದರೆ ಆರಂಭದ ೧೯೬೮ರಿಂದ ಮುಂದೆ ಅದೆಷ್ಟು ಕಾಲ ಬಾಳಿತೋ!

ಶ್ರೀಶೈಲ ಜ್ಯೋತಿ! ಹೆಸರೇ ಸೂಚಿಸುವಂತೆ ಈ ಪತ್ರಿಕೆ ಶ್ರೀಶೈಲದಿಂದಲೇ ಪ್ರಕಟವಾಗುತ್ತಿತ್ತು. (೧೯೬೨) ಅಲ್ಲಿರುವ ಶ್ರೀಶೈಲ ವೀರಸಂಘ ಎಂಬುದು ಇದಕ್ಕೆ ನಿಮಿತ್ತವಾಯಿತು. ಸಂಪಾದಕರ ಹೆಸರು ಜಾಗಪ್ಪ ಭೋಗಿ ಶೆಟ್ಟಿ ನನಗಂತೂ ಇವರದು ಅಪರಿಚಿತ ಹೆಸರು.

ಮುಂಡರಗಿಯ (ಗದಗ ಜಿಲ್ಲೆ) 'ಮೃಡವಾಣಿ' ಯೂ ಗಮನಿಸ ಯೋಗ್ಯವಾದದ್ದು. (೧೯೬೪). ಸಂಪಾದಕ / ಪ್ರಕಾಶಕರಾದ ಸಿ. ಎಮ್. ಚುರ್ಚಿಹಾಳಮಠ ಮತ್ತು ಮಹಾಲಿಂಗ ಯಾಳಗಿ ಎಂಬವರು ಪ್ರಯತ್ನ ಪಟ್ಟು ಪರಿಣತರಿಂದ (ಉದಾ.ಗೆ ಡಿ. ಎಸ್. ಕರ್ಕಿ, ಮಹದೇವ ಬಣಕಾರ, ದೇವೇಂದ್ರಕುಮಾರ ಹಕಾರಿ ಇ.) ಲೇಖನಗಳನ್ನೇನೊ ತರಿಸಿದ್ದರು. ಆದರೆ ಪತ್ರಿಕೆ ಅಲ್ಪಾಯುಷಿಯಾಯಿತು.

ಬೆಳಗಾಂವಿಯಲ್ಲಿ ಅಖಿಲ ಭಾರತ ವೀರಶೈವ ಸಂಘವು ಇದೆಯಷ್ಟೆ. ಅದರ ವತಿಯಿಂದ 'ಜ್ಞಾನ ಪ್ರಸಾದ' ಪ್ರಾರಂಭವಾಯಿತು. (೧೯೬೭ – ). ಶಿ.ಚೆ. ನಂದಿಮಠರು ಅದರ ಸಂಪಾದಕತ್ವವನ್ನು ವಹಿಸಿದ್ದರು. ಆದರೆ ಪತ್ರಿಕೆ ನಡೆದದ್ದು ಮೂರು ವರ್ಷ ಮಾತ್ರ.

ಶಿಕ್ಷಣವೇತ್ತ ವಿ. ಕೆ. ಜವಳಿಯವರೂ ವೀರಶೈವ ಪ್ರಸರಣದ ಉದ್ದೇಶದಿಂದ ಪತ್ರಿಕಾರಂಗಕ್ಕೆ ಕಾಲಿಟ್ಟರು. ಧಾರವಾಡದಲ್ಲಿ ಇದ್ದಾಗ ೧೯೬೭ರಲ್ಲಿ 'ಕಾಯಕ' ಎಂಬುದನ್ನು ಪ್ರಕಟಿಸತೊಡಗಿದರು. ನಿವೃತ್ತರಾದ ಮೇಲೆ ಇರಬೇಕು, ಬೆಂಗಳೂರಲ್ಲಿ ನೆಲೆಸಿದರು. ಆ 'ಕಾಯಕ'ವನ್ನು ಪೂರ್ಣ ಬಿಡದೆ 'ಮಾಮನೆ' ಎಂಬುದನ್ನು ಹೊರಡಿಸಿದರು (೧೯೭೨). ( ಮಾಮನೆ – ಎಂದರೆ ಬಸವಣ್ಣನ ಮನೆ). ಈಚೆಗೆ. ತೀರ ಈಚೆಗೆ 'ಮಹಾಮನೆ' ಎಂಬ ಪತ್ರಿಕೆಯನ್ನು ಶರಣ ಸಾಹಿತ್ಯ ಪರಿಷತ್ತಿನವರು ಹೊರತರುತ್ತಾ ಇದ್ದಾರೆ. ಇದು ಬೇರೆ ಪತ್ರಿಕೆ.

## ಮಠಗಳ ಪೋಷಣೆಯಲ್ಲಿ

ಮೈಸೂರಿನ ಶ್ರೀ ಸುತ್ತೂರು ಮಠದ ಸ್ವಾಮಿಗಳ ಆಶ್ರಯದಲ್ಲಿ ಎರಡು ಪತ್ರಿಕೆಗಳು ಹೊರಟವು. ಒಂದರ ಹೆಸರು 'ಶರಣವಾಣಿ: ಕೆ. ಎಸ್. ಎಸ್. ಶಾಲಾವಿದ್ಯಾರ್ಥಿ ಸಂಘದವರು ೧೩-೧೪ ವರ್ಷ ನಡೆಸಿದರು. ಆಮೇಲೆ ಸ್ಥಗಿತವಾಗಿರಬೇಕು. ಪ್ರಕೃತದಲ್ಲಿ 'ಪ್ರಸಾದ' ಎಂಬ ಹೆಸರಿನ ಪತ್ರಿಕೆ ೧೯೬೮ರಿಂದ ನಿಯಮಿತವಾಗಿ ಹೊರಬರುತ್ತಿದೆ. ಎಚ್. ಗಂಗಾಧರಯ್ಯ ಕೆಲಕಾಲ ಸಂಪಾದಕರಾಗಿದ್ದರು.

ಇನ್ನೆರಡು ಮಠಗಳು ಇದೇ ರೀತಿ – ಪತ್ರಿಕೆಗಳನ್ನು ಪೋಷಿಸಿವೆ. ಉಜ್ಜನಿಮಠ(ಚಿತ್ರದುರ್ಗ)ದ ಶ್ರೀ ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳವರು, ಜಿ.ಪಿ. ತಿಪ್ಪೇಸ್ವಾಮಿಯವರ ಸಂಪಾದಕತ್ವದ 'ಸದ್ಧರ್ಮ ಪ್ರಭಾ' ಎಂಬುದಕ್ಕೆ ಪ್ರೋತ್ಸಾಹ ನೀಡಿದ್ದಾರೆ. ೧೯೬೪ರಿಂದ ಕೆಲ ವರ್ಷವಾದರೂ ಸಾಗಿ ಬಂದಿದೆ – ಈ ಪತ್ರಿಕೆ. ಬಿನಂತರ ತೀರ ಈಚೆಗೆ, ಬಿ. ರಾಜಶೇಖರಪ್ಪ ಅವರು ಸಂಪಾದಿಸುತ್ತಿದ್ದ 'ಸತ್ಯಶುದ್ಧಕಾಯಕ'ಕ್ಕೂ ಮಠಾಧೀಶರ ಆಶ್ರಯವಿದೆ.

ಧಾರವಾಡದ ಶ್ರೀ ಮುರಘಾ ಮಠದ ಆಶ್ರಯ ಹೊಂದಿದ 'ಸಾವಧಾನ' ೧೯೪೮ ರಷ್ಟು ಹಳೆಯದು; ರಜತ ಮಹೋತ್ಸವವನ್ನು ಆಚರಿಸಿದ ಹೆಮ್ಮೆಯುಳ್ಳದ್ದು. ಸುರುವಿಗೆ ನಾಗಭೂಷಣ ಶಾಸ್ತ್ರಿ ಎಂಬ ಪಂಡಿತರು ಸಂಪಾದಕರಾಗಿ ಶ್ರಮಿಸಿದ್ದರು.

೧೯೬೦ರ ದಶಕದಲ್ಲಿ ಮಠಗಳ ಪ್ರೇರಣೆಯನ್ನು ಹೊಂದಿದ್ದ ಇನ್ನೆರಡು ಪತ್ರಿಕೆಗಳು ನಮಗೆ ಕಾಣಸಿಕೊಂಡಿವೆ. **'ಸಿದ್ಧಗಂಗಾ'** ಎಂಬ ತ್ರೈಮಾಸಿಕವು (೧೯೬೫) ಹೆಸರೇ ಹೇಳುವಂತೆ ಸುಪ್ರಸಿದ್ಧವಾದ ಶ್ರೀ ಸಿದ್ಧಗಂಗಾಮಠದ್ದು (ತುಮಕೂರು). ಇದರ ಸಂಪಾದಕರೆಂದು ದೊರೆತ ಹೆಸರು ಚೆನ್ನಪ್ಪ ಎರೇಸೀಮಿಯವರದು. ಇನ್ನೊಂದು, **'ಮಠೀಯ ಪರಂಜ್ಯೋತಿ'** ಎಂಬುದು. ೧೯೬೫ರಿಂದ ಇಂದಿಗೂ ಹೊರಡುತ್ತಿದೆ. ಸ್ಥಾಪಕ – ಪ್ರಕಾಶಕರು ಮೂರು ಸಾವಿರ ಮಠದ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಲದವರು. ಪತ್ರಿಕೆ ಆರಂಭವಾದಾಗ ಸಿದ್ಧಯ್ಯ ಪುರಾಣಿಕ, ಡಿ.ಎಸ್. ಕರ್ಕಿ, ಈಶ್ವರ ಸಣಕಲ್ ಮುಂತಾದ ಗಣ್ಯರು ಲೇಖನ ಕೊಡುತ್ತಿದ್ದರು. ಆಮೇಲೆಯೂ ವಿಚಾರಪೂರ್ಣವಾದ ಲೇಖನಗಳು ಬಂದುವು. ಶ್ರೀ ಶೈಲ ನಿಡುಮಾಮಿಡಿ ಪೀಠದವರು 'ಮಾಮಿಡಿ' ಎಂಬ ಹೆಸರಿನ ಪತ್ರಿಕೆಯನ್ನು ೧೯೮೦ರ ಸುಮಾರಿಗೆ ಆರಂಭಿಸಿ ೧೫-೧೬ ವರ್ಷದವರೆಗೂ ಪ್ರಕಟಿಸಿದರು. ಸುರುವಿಗೆ ಶ್ರೀ ಸಂಗಮೇಶ ಹಂಡಿಗಿಯವರು ಸಂಪಾದಕರಿದ್ದರೆಂದು ಕಾಣುತ್ತದೆ. ದೀರ್ಘಕಾಲ ಅದನ್ನು ಸಂಪಾದಿಸಿಕೊಂಡು ಬಂದವರು ಎಂ. ಜಿ. ನಾಗರಾಜ ಅವರು.

ಮಠಗಳವರನ್ನು ಬಿಡೋಣ, ಓರ್ವ ಗಾನಕಲಾ ಸಂಸ್ಥೆಯೂ ವೀರಶೈವ ಮತಪ್ರಸಾರದ ಪತ್ರಿಕೆ ಹೊರಡಿಸಿದ ಅಪೂರ್ವ ಪ್ರಸಂಗವಿದೆ. ಆ ಗಾಯಕರು ಗದುಗಿನ ಸುಪ್ರಸಿದ್ಧ ಪುಟ್ಟರಾಜ ಗವಯಿಗಳು. ಪತ್ರಿಕೆಗೆ ಕೊಟ್ಟ ಹೆಸರು ಅರ್ಥಪೂರ್ಣವಾದದ್ದು. **'ಪಂಚಾಕ್ಷರ ಪ್ರಕಾಶ'** (ನಮಃ ಶಿವಾಯ). ಅದರ ವಿವರಣೆಯನ್ನು ಈ ರೀತಿ ಕೊಡುತ್ತಾರೆ.

ಬೀಜಾದೇವ ಯಥಾವೃಕ್ಷ
ಪ್ರಕಾಶತೋಽಿ ದೃಶ್ಯತೇ
ಪಂಚಾಕ್ಷರತಾ ಜಗತ್ಸರ್ವಂ
ಪ್ರಕಾಶಿತಾ ಚರಾಚರಂ ॥

ಶಿವಶರಣರ ಮತ ತತ್ವದ ಪ್ರಸಾರಕ್ಕಾಗಿ ದಿನಪತ್ರಿಕೆಯನ್ನೂ ಹೊರಡಿಸಬಹುದೆ? ಯಾಕೆ ಬೇಡ? ಪ್ರಯತ್ನ ಮಾಡಬಹುದಲ್ಲ! ಶ್ರೀ ಕೆ. ಪಿ. ಮಲ್ಲೇಶ್ ಎಂಬ ಸಂಪಾದಕ – ನಾಮವಿದ್ದು **'ನಿಜಗುಣ'** ಎನ್ನುವ ದಿನಪತ್ರಿಕೆ (ಎರಡೇ ಪುಟದ್ದು) ೧೯೭೨ರಲ್ಲಿ ಆರಂಭವಾಯಿತೆಂದು ತಿಳಿದುಬಂದಿದೆ. ಕೆಲ ವರ್ಷಗಳಾದರೂ ನಡೆದಿರಬೇಕು. ಪ್ರಾಯಶಃ ಬೆಂಗಳೂರಲ್ಲಿ (ಹನುಮಂತನಗರ) ಇರುವ ನಿಜಗುಣ ಶ್ರೀಮಠದ ಆಶ್ರಯ ಇದ್ದಿರಬೇಕು; ನಿಶ್ಚಿತವಾಗಿ ಗೊತ್ತಿಲ್ಲ.

## ಸಮಾರೋಪ

ಇಂತಿದು ವೀರಶೈವ ಪತ್ರಿಕೆಗಳ ಅತಿ ಸ್ಥೂಲವಾದ ನೋಟ. ಅದರ ಕಲ್ಪನೆ ಬರುವ ಮಟ್ಟಿಗೆ ಮಾತ್ರ ವಿವರಗಳನ್ನು ಕೊಡಲಾಗಿದೆ. ಇನ್ನು ಕೆಲವು ಪತ್ರಿಕೆಗಳ ಹೆಸರು ಉಲ್ಲೇಖವಾಗದೆ ಉಳಿದಿರಬಹುದು. ಅಲ್ಲದೆ ಇಲ್ಲಿ ಕೊಟ್ಟಿರುವ ಕೆಲ ಪತ್ರಿಕೆಗಳ ಬಗೆಗಿನ ಮಾಹಿತಿ ಅರೆಬರೆಯಾಗಿರಬಹುದು. ಹಾಗೆ ಗೊತ್ತಿದ್ದವರು ದಯಮಾಡಿ ತಿಳಿಸುವುದು.

ಈ ಪತ್ರಿಕಾರಂಗದಲ್ಲಿ ಎದ್ದು ಕಾಣುವ ಅಂಶವೆಂದರೆ ಸ್ವಮತದ ಬಗ್ಗೆ ಇದ್ದ ಅತೀವ ಶ್ರದ್ಧೆ ಹಾಗೂ ಅದನ್ನು ಹೊರಹೊಮ್ಮಿಸಬೇಕೆನ್ನುವ ತೀವ್ರ ಉತ್ಸುಕತೆ. ಹೀಗಿರುತ್ತ ಸ್ವಂತ ಹಣ ಹಾಕಿ ಕೈಸುಟ್ಟುಕೊಂಡ ಪ್ರಕಾಶಕ – ಸಂಪಾದಕರೇ ಹೆಚ್ಚು ಜನರಿದ್ದಾರೆ. ಇಂಥ ಪತ್ರಿಕೆಗಳನ್ನು ಯಾವ ಪತ್ರಿಕೆ ಏಜೆಂಟನೂ ತಂದು ಮಾರಾಟಕ್ಕಿಡುವ ಪರಿಸ್ಥಿತಿ ಈಗಲೂ ಇಲ್ಲವಷ್ಟೆ. ಏನಿದ್ದರೂ ಅವು ವೈಯಕ್ತಿಕ ಚಂದಾದಾರರಿಗೆ ಅಂಚೆಯ ಮೂಲಕವೇ ವಿತರಣೆಯಾಗಬೇಕು.

ಇನ್ನೊಂದು ವಿಷಯ. ಈ ೬೦ ಪತ್ರಿಕೆಗಳು ಸರಾಸರಿಯಾಗಿ ೭ –೮ ವರ್ಷ ನಿಯಮಿತವಾಗಿ ಹೊರಟಿವೆ ಎಂದು ಭಾವಿಸೋಣ. ಅಂದಾಗ ಅವುಗಳಲ್ಲಿ ಪ್ರಕಟವಾದ ಲೇಖನಗಳ ಸಂಖ್ಯೆ ೩೦,೦೦೦ ಎನ್ನೋಣವೆ? ಇದು ಒರಟು ಅಂದಾಜೇ(rough estimate) ಆಗಿರಲಿ, ಅವುಗಳ ಮೂಲಕ ಎಷ್ಟೊಂದು ಅಪೂರ್ವವಾದ, ಅಮೂಲ್ಯವಾದ ವಿಚಾರಗಳು ಹೊರಹೊಮ್ಮಿರಬೇಕು! ಅದರ ಬಗೆಯನ್ನು ಊಹಿಸುವುದೂ ಅಸಾಧ್ಯ. ಯಾಕೆಂದರೆ ಹಳೆಯ ಪತ್ರಿಕೆಗಳು ಒಂದೆಡೆ ಅದೆಲ್ಲಿ ಸಿಗುತ್ತವೆ? ಪತ್ರಿಕಾಂತರ್ಗತ ವೀರಶೈವ ತತ್ವಪ್ರಣಾಲಿಗೆ ನಾವು ಬಹಳಷ್ಟು ಎರವಾಗಿದ್ದೇವೆ. ◆

✍ ಶ್ರೀ. ಹಾ.

# ೭. ಸಾಹಿತ್ಯ ಪತ್ರಿಕೆಗಳು ಮತ್ತು ವಿದ್ವತ್ಪತ್ರಿಕೆಗಳು

## (೧೯೧೫ ರಿಂದ ೧೯೭೦ರ ವರೆಗಿನವು)

✍ ಎಂ. ವಿ. ಸೀತಾರಾಮಯ್ಯ

ಕಥೆ, ಕವನ, ಹರಟೆ, ಪ್ರಬಂಧ, ಸಾಹಿತ್ಯ ವಿಮರ್ಶೆ ಮುಂತಾದ ಸಾಹಿತ್ಯ ವಿಷಯಗಳಿಗೇ ಮೀಸಲಾದ ಪತ್ರಿಕೆಗಳನ್ನು 'ಸಾಹಿತ್ಯ ಪತ್ರಿಕೆ' ಎಂದು ಇಲ್ಲಿ ಪರಿಗಣಿಸಿದೆ. ಸೃಷ್ಟ್ಯಾತ್ಮಕ ಬರಹ(creative writing) ವನ್ನು ಹೊರತುಪಡಿಸಿ, ಕರ್ನಾಟಕದ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಕಲೆ ಮುಂತಾದ ಸಂಶೋಧನಾತ್ಮಕ ಹಾಗೂ ವಿಚಾರಪರ ಲೇಖನಗಳಿಗೆ ಮೀಸಲಾದ ಪತ್ರಿಕೆಗಳನ್ನು 'ವಿದ್ವತ್ ಪತ್ರಿಕೆ' ಎಂದು ಭಾವಿಸಿದೆ. ಸಾಹಿತ್ಯಕ್ಕೆ ಎಡೆಗೊಟ್ಟಿರುವ ಕೆಲವು ಸುದ್ದಿ ಪತ್ರಿಕೆಗಳನ್ನೂ ಗಮನಿಸಿದೆ. ಈ ಎಲ್ಲ ನಿಯತಕಾಲಿಕಗಳ ಮೂಲಕ ಹೊರಬಂದ ಬರಹವೆಲ್ಲ ಸಾಹಿತ್ಯದ ವಿವಿಧ ಪ್ರಕಾರಗಳ ಬೆಳಸನ್ನು ಹೆಚ್ಚಿಸಿವೆ.

ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕರ್ನಾಟಕದ ಅರಸು ಮನೆತನಗಳು ಎಂದಿನಿಂದಲೂ ಆಶ್ರಯ ಕೊಟ್ಟಿವೆ. ರಾಷ್ಟ್ರಕೂಟರ ಕಾಲದಿಂದ ಹಿಡಿದು ಚಿಕ್ಕದೇವರಾಜ ಒಡೆಯರ ಕಾಲದ ವರೆಗೆ (೧೬೭೨ - ೧೭೦೪) ರಾಜಾಶ್ರಯ ಬಿಟ್ಟು, ಬಿಟ್ಟು, ನಡೆದುಬಂದಿತು. ಚಿಕ್ಕದೇವರಾಜ ಒಡೆಯರು ಸ್ವತಃ ಕವಿಗಳಾಗಿದ್ದರು. ಅವರ ಹಾಗೂ ಅವರ ಅನಂತರ ಮುಮ್ಮಡಿ ಕೃಷ್ಣರಾಜ ಒಡೆಯರ (೧೭೯೪ - ೧೮೬೮) ಕಾಲದಲ್ಲಿ, ಮೊದಲ ಬಾರಿಗೆ ಅನೇಕ ಗದ್ಯಗ್ರಂಥಗಳ ಒಳ್ಳೆಯ ಬೆಳೆ ಬಂದಿತು. ಕನ್ನಡ ಗದ್ಯಶೈಲಿ ರೂಪಗೊಂಡು, ಪತ್ರಿಕಾ ಗದ್ಯಶೈಲಿಗೆ ತಳಹದಿಯಾಯಿತು.

ಹೀಗೆ ಪತ್ರಿಕಾ ಲೇಖನಗಳಿಗೆ ಸಿದ್ಧ ಶೈಲಿ ಇದ್ದರೂ, ಭಾರತದ ಇತರ ಕಡೆ ಹೇಗೋ ಹಾಗೆ ಕರ್ನಾಟಕದಲ್ಲಿಯೂ ಪತ್ರಿಕಾ ವ್ಯವಸಾಯವನ್ನು ರೂಢಿಸಿದ್ದು, ಪಾಶ್ಚಾತ್ಯ ಪ್ರಭಾವ. ಅದಕ್ಕೆ ಅಗತ್ಯವಾದ ಭೂಮಿಕೆಯನ್ನು ಒದಗಿಸಿದ್ದು, ಆ ಕಾಲದ ಐತಿಹಾಸಿಕ ಘಟನೆಗಳು. ಟಿಪ್ಪುವಿನ ಪತನವಾದ ಮೇಲೆ, ಈಗಿನ ಹಳೆಯ ಮೈಸೂರು ಪ್ರಾಂತವನ್ನು ಮೈಸೂರು ಒಡೆಯರ ವಂಶಕ್ಕೆ ಒಪ್ಪಿಸಿ, ಕರ್ನಾಟಕದ ಉಳಿದ ಭಾಗಗಳನ್ನು ಬೇರೆ ಬೇರೆ ಆಡಳಿತಗಳಲ್ಲಿ, ಬ್ರಿಟಿಷರು ಹರಿದು ಹಂಚಿಬಿಟ್ಟರು. ಹೀಗಾಗಿ ಆ ಭಾಗಗಳಲ್ಲಿ ಕನ್ನಡ ಸಾಹಿತ್ಯ ಹಾಗೂ ಭಾಷೆಯ ಬೆಳವಣಿಗೆ ಸ್ಥಗಿತವಾಯಿತು. ಆದರೆ ಕನ್ನಡಿಗರು ತಮಗಾದ ಅನ್ಯಾಯವನ್ನು ಬಹು ಬೇಗ ಕಂಡುಕೊಂಡರು; ತಾವೆಲ್ಲ ಒಂದಾಗಬೇಕೆಂಬ ಸಹಜವೂ, ತೀವ್ರವೂ ಆದ ಹಂಬಲ ಕನ್ನಡಿಗರಲ್ಲಿ ತಲೆಯೆತ್ತಿತು. 'ಕರ್ನಾಟಕ ಪ್ರಕಾಶಿಕೆ', 'ಸಂಯುಕ್ತ ಕರ್ನಾಟಕ' 'ವಿಶ್ವಕರ್ನಾಟಕ', 'ಕರ್ನಾಟಕ ವೈಭವ', 'ಜಯಕರ್ನಾಟಕ', 'ಪ್ರಬುದ್ಧ ಕರ್ನಾಟಕ' - ಈ ಹೆಸರುಗಳೆ ಕನ್ನಡಿಗರ ಆಕಾಂಕ್ಷೆಗಳನ್ನು ಎತ್ತಿ ತೋರಿಸುತ್ತವೆ. ಈ ಪತ್ರಿಕೆಗಳಲ್ಲಿ ಕೆಲವು ಏಕೀಕರಣಕ್ಕಾಗಿ ಸತತ ಹೋರಾಟವನ್ನು ಹೂಡಿದುವು. ಈ 'ಪ್ರಾಂತೀಯ' ಪ್ರಜ್ಞೆ ಆಗ ಜನರಲ್ಲಿ ಮೂಡಿದ್ದ 'ರಾಷ್ಟ್ರೀಯ' ಭಾವನೆಯೊಂದಿಗೆ ಸಮರಸವಾಗಿ ಬೆರೆತುಕೊಂಡಿತು. ಆ ತರುಣದಲ್ಲಿ ಹುಟ್ಟಿದ ಅನೇಕ ಪತ್ರಿಕೆಗಳು, ವಿಶಾಲವಾದ ರಾಷ್ಟ್ರೀಯ ಮನೋಭಾವದ ಜೊತೆಗೆ, ಕನ್ನಡ ನಾಡಿನ ಏಕೀಕರಣ ಹಾಗೂ ಕನ್ನಡ ಭಾಷೆ, ಸಾಹಿತ್ಯಗಳ ಪುನರುಜ್ಜೀವನವನ್ನು ತಮ್ಮ ಗುರಿಯಾಗಿ ಇಟ್ಟುಕೊಂಡವು. ಈ ಪತ್ರಿಕೆಗಳು ಪ್ರಮುಖವಾಗಿ ಸುದ್ದಿ ಪ್ರಸಾರಕ್ಕೆ ಮೀಸಲಾಗಿದ್ದರೂ ಸಾಹಿತ್ಯವನ್ನು ಕಡೆಗಣಿಸಲಿಲ್ಲ. ಡಿ.ವಿ. ಗುಂಡಪ್ಪನವರು ಸಂಪಾದಿಸಿ ಪ್ರಕಟಿಸುತ್ತಿದ್ದ 'ಕರ್ನಾಟಕ ಜನಜೀವನ' (೧೯೨೪), ಬಿ.ಎಂ.ಶ್ರೀ. ಅವರು ಕನ್ನಡಕ್ಕೆ ಅನುವಾದಿಸಿದ ಇಂಗ್ಲಿಷ್ ಭಾವಗೀತೆಗಳನ್ನು ಪ್ರಕಟಿಸುತ್ತಿತ್ತು. ಕನ್ನಡ ಪತ್ರಿಕೋದ್ಯಮದ ಮುಂಚೂಣಿಗರಲ್ಲಿ ಒಬ್ಬರಾದ, ಪತ್ರಿಕೋದ್ಯಮ ಪಿತಾಮಹರು ಎನ್ನಿಸಿಕೊಂಡಿರುವ ಶ್ರೀ ತಿ.ತಾ. ಶರ್ಮ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ವಿಶ್ವಕರ್ನಾಟಕ' ಸಾಹಿತ್ಯಕ್ಕೇ ಮೀಸಲಾದ 'ಸಾಹಿತ್ಯ ಸಂಚಿಕೆ'ಯನ್ನು ಹೊರಡಿಸತೊಡಗಿ, ಸುದ್ದಿಪತ್ರಿಕೆಗಳು ಸಾಹಿತ್ಯದ ಪುರವಣಿಯನ್ನು ಪ್ರಕಟಿಸುವ ಸತ್ಸಂಪ್ರದಾಯಕ್ಕೆ ಮಾರ್ಗದರ್ಶನ ಮಾಡಿತು. ಕಡೆಂಗೋಡ್ಲು ಶಂಕರಭಟ್ಟರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ರಾಷ್ಟ್ರಬಂಧು' (ಪ್ರಾರಂಭ ೧೯೨೮) ಈ ದಿಸೆಯಲ್ಲಿ ಕೆಲವು ಕಾಲ 'ವಿಶ್ವ ಕರ್ನಾಟಕ'ಕ್ಕೆ ಸರಿದೊರೆಯೆನಿಸಿ ದುಡಿಯಿತು. ಅನಂತರ ಈ ಪದ್ಧತಿಯನ್ನು ಎಲ್ಲ ದಿನಪತ್ರಿಕೆಗಳೂ ಆರಂಭಿಸಿದುವು. ಜೊತೆಗೆ ವಾರಪತ್ರಿಕೆಗಳು 'ವಾರದ ಕಥೆ' ವಿಭಾಗವನ್ನು ಆರಂಭಿಸಿದುವು; ಕ್ರಮವಾಗಿ ಪುಸ್ತಕ ವಿಮರ್ಶೆ, ಹರಟೆ ಮೊದಲಾದ ಇತರ ಸಾಹಿತ್ಯ ಪ್ರಕಾರಗಳಿಗೂ ಅವುಗಳಲ್ಲಿ ಎಡೆ ದೊರೆಯಿತು. ಕೆಲವು ಪ್ರಮುಖ ಪತ್ರಿಕೆಗಳು ಕಾದಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುತ್ತಿವೆ. ಹೀಗೆ ದಿನಪತ್ರಿಕೆಗಳೂ ಸಾಪ್ತಾಹಿಕಗಳೂ ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿವೆ. ಈಚೆಗೆ 'ಪ್ರಜಾವಾಣಿ' ದಿನಪತ್ರಿಕೆ, 'ಸುಧಾ' ಮಾಸಪತ್ರಿಕೆ ಮೊದಲಾದುವು ಸಣ್ಣ ಕಥೆ, ನಾಟಕ, ಕಾದಂಬರಿ ಸ್ಪರ್ಧೆಗಳನ್ನು ನಡೆಸುತ್ತಿರುವುದು ಆ ಪ್ರಕಾರಗಳಲ್ಲಿ ಉತ್ತಮ ಕೃತಿರಚನೆಗೆ ಉತ್ತೇಜಕವಾಗಿದೆ. ಇದಿಷ್ಟು ದೈನಿಕ, ಸಾಪ್ತಾಹಿಕ ಪತ್ರಿಕೆಗಳ ಸಾಹಿತ್ಯಸೇವೆಯ ಒಂದು ಮುಖ. ಇನ್ನೊಂದು ಮುಖ, ಹೊಸ ಹೊಸ ನುಡಿ ನಾಣ್ಯಗಳನ್ನು ಟಂಕಿಸಿ ಕನ್ನಡ ನುಡಿ ಬೊಕ್ಕಸವನ್ನು ಬೆಳೆಸುತ್ತಿರುವುದು.

ಕನ್ನಡ ಸಾಹಿತ್ಯದ ಬೆಳವಣಿಗೆಗೆ ನೇರವಾಗಿ ನೆರವಾಗಿರುವುವು ಮಾಸಪತ್ರಿಕೆಗಳು, ತ್ರೈಮಾಸಿಕ ಪತ್ರಿಕೆಗಳು. ಇವು ಸಾಹಿತ್ಯಕ್ಕೇ ಮೀಸಲಾದ ಪತ್ರಿಕೆಗಳು. ಈ ನಿಟ್ಟಿನಲ್ಲಿ ಧಾರವಾಡದ 'ವಾಗ್ಭೂಷಣ' (೧೮೯೬) ಮೊತ್ತಮೊದಲಿನದು. ಈ ಪತ್ರಿಕೆ ಅಲ್ಲಿನ ಕರ್ನಾಟಕ ವಿದ್ಯಾವರ್ಧಕ ಸಂಘದ ಮಾಸಿಕವಾಗಿ ೧೮೯೬ರಲ್ಲಿ ಪ್ರಾರಂಭವಾಗಿ, ಹಲವು ವರ್ಷ ಸೇವೆ ಸಲ್ಲಿಸಿ ನಿಂತುಹೋಗಿತ್ತು; ಮತ್ತೆ ೧೯೩೮ರಲ್ಲಿ ಪುನರಾರಂಭವಾಯಿತು. ಈ ಪತ್ರಿಕೆಯ ಮೂಲಕ ಸುಮಾರು ೮೫ ಗ್ರಂಥಗಳು ಪ್ರಕಟವಾಗಿರುವುದು ಅಭಿಮಾನಾಸ್ಪದ ಸಂಗತಿ. ಈ ಮೇಲ್ಪಂಕ್ತಿಯನ್ನು ಇತರರು ಬೇಗ ಅನುಸರಿಸಿದರು. ೧೯೦೦ರಲ್ಲಿ ಶ್ರೀ ಪಂಜೆ ಮಂಗೇಶರಾವ್, ಉಲ್ಲಾಳ ಮಂಗೇಶರಾವ್ ಮತ್ತು ಬೋಳಾರ ವಿಠ್ಠಲರಾವ್ ಅವರ ನೇತೃತ್ವದಲ್ಲಿ 'ಸುವಾಸಿನಿ' ಪ್ರಕಟವಾಗತೊಡಗಿತು. ಬೆನಗಲ್ ರಾಮರಾಯರು ಇದರ ಸಂಪಾದಕರಾಗಿದ್ದರು. ಪತ್ರಿಕೆ ಮಹಿಳೆಯರ ಹಾಗೂ ಮಕ್ಕಳ ಹಿತಸಾಧನೆಗಾಗಿ ಮೀಸಲಾಗಿತ್ತು. ಧಾರವಾಡದ **'ಸುದರ್ಶನ'**, ಮೈಸೂರಿನ **'ವಿದ್ಯಾದಾಯಿನಿ'** ಮತ್ತು **'ಮಧುರವಾಣಿ'**, ಉಡುಪಿಯ **'ಶ್ರೀ ಕೃಷ್ಣಸೂಕ್ತಿ'**, ಮದರಾಸಿನ **'ಕನ್ನಡ ನುಡಿಗನ್ನಡಿ'** – ಈ ಪತ್ರಿಕೆಗಳು, ಸಾಹಿತ್ಯದ ಹೊಸ ಪ್ರಕಾರಗಳಾದ ಸಣ್ಣಕಥೆ ಹಾಗೂ ಭಾವಗೀತೆಗಳ ಪ್ರಕಟನೆಗೆ ಇಂಬುಗೊಟ್ಟವು. ಇವು ಸಾಹಿತ್ಯದ ಗುಣಮಟ್ಟವನ್ನು ಕಾಯ್ದುಕೊಂಡು ಬರುವಲ್ಲಿಯೂ ನೆರವಾದುವು. ಆಗ ಬಿ.ಎಂ.ಶ್ರೀ., ಪಂಜೆ ಮಂಗೇಶರಾವ್, ಮಾಸ್ತಿ ಮತ್ತು ಎಂ. ಎನ್. ಕಾಮತ್ ಮುಂತಾದವರು ಹೊಸ ಸಾಹಿತ್ಯ ಪ್ರಕಾರಗಳಲ್ಲಿ ನಡೆಸುತ್ತಿದ್ದ ಪ್ರಯೋಗಗಳಿಗೆ ಕಾರ್ಯಕ್ಷೇತ್ರವನ್ನು ಒದಗಿಸಿ, ಈ ಪ್ರಕಾರಗಳಲ್ಲಿ ಅನಂತರ ಬಂದ ಹುಲುಸಾದ ಬೆಳೆಗೆ ಅಗತ್ಯವಾದ ಕೃಷಿ ನಡೆಸಿದವು.

೧೮೯೨ ರಿಂದ ೯೭ರವರೆಗೆ ಪ್ರಕಟವಾದ **'ಕಾವ್ಯಮಂಜರಿ'** ಮತ್ತು ೧೮೯೯ರಲ್ಲಿ ಪ್ರಕಟವಾಗತೊಡಗಿದ **'ಕಾವ್ಯಕಲಾನಿಧಿ'** – ಈ ಎರಡೂ ಮಾಸ ಪತ್ರಿಕೆಗಳು ಸಂಪೂರ್ಣವಾಗಿ ಪತ್ರಿಕೆಗಳಲ್ಲದಿದ್ದರೂ, ನಿಯತಕಾಲಿಕ ಪ್ರಕಟನೆಗಳಾಗಿದ್ದು ಪ್ರಾಚೀನ ಕಾವ್ಯಗಳನ್ನು ಭಾಗ-ಭಾಗವಾಗಿ ಪ್ರಕಟಿಸುತ್ತಿದ್ದವು. ಸಂಪಾದಕರುಗಳಾದ ಎಂ.ಎ. ರಾಮಾನುಜ ಅಯ್ಯಂಗಾರ್ ಹಾಗೂ ಎಸ್. ಜಿ. ನರಸಿಂಹಾಚಾರ್ ಅವರುಗಳ ಅವಿರತ ಶ್ರಮದ ಫಲವಾಗಿ ರನ್ನ, ಜನ್ನ, ನಾಗವರ್ಮ ಮೊದಲಾದ ಪ್ರಮುಖ ಕವಿಗಳೂ, ಅನೇಕ ಜನ ಸಣ್ಣ ಪುಟ್ಟ ಕವಿಗಳೂ ಇವುಗಳ ಮೂಲಕ ಬೆಳಕು ಕಂಡರು. ಸ್ವಲ್ಪ ಕಾಲಾನಂತರ ಬಿ. ಕೃಷ್ಣಪ್ಪನವರ ಸಂಪಾದಕತ್ವದಲ್ಲಿ ಪ್ರಾರಂಭವಾದ 'ಕರ್ನಾಟಕ ಗ್ರಂಥಮಾಲೆ' ಕೂಡ (ಮೈಸೂರು) ಇದೇ ರೀತಿಯದು. ೧೯೨೦ರ ಸುಮಾರಿಗೆ ಉತ್ತರ ಕರ್ನಾಟಕದ ಅಗಡಿಯ ಆನಂದವನದಿಂದ 'ಸದ್ಬೋಧ ಚಂದ್ರಿಕೆ' ಪತ್ರಿಕೆಯಾಗಿ ಪ್ರಕಟವಾದರೂ, ವಿಶೇಷವಾಗಿ, ಗಳಗನಾಥರ ಕಾದಂಬರಿಗಳ ಪ್ರಕಟನೆಗೆ (ಧಾರಾವಾಹಿ) ಮೀಸಲಾಗಿದ್ದಿತು. ಈ ಸಂದರ್ಭದಲ್ಲಿ, ಚಾಮರಾಜನಗರದಿಂದ ದಿ|| ಸಿ. ವೆಂಕಟರಮಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಹಲವು ವರ್ಷ ನಡೆದ **'ಕಾದಂಬರೀ ಸಂಗ್ರಹ'**ವನ್ನು ಸ್ಮರಿಸಬಹುದು. ಮೇಲಿನ ಪತ್ರಿಕೆಗಳಲ್ಲಿ ಕೆಲವು ಹೆಚ್ಚು ದಿನ ಬಾಳಲಿಲ್ಲ; ಮತ್ತೆ ಕೆಲವು ಕೊಂಚ ಹೆಚ್ಚು ಕಾಲ ಬದುಕಿದ್ದು, ಉಪಯುಕ್ತ ಸೇವೆಯನ್ನು ಸಲ್ಲಿಸಿ ನಿಂತು ಹೋದುವು. ಬಹು ಹಿಂದೆಯೇ ಪ್ರಾರಂಭವಾಗಿ ಇಂದಿಗೂ ನಡೆದುಕೊಂಡು ಬರುತ್ತಿರುವ ಮೂರು ನಾಲ್ಕು ಪತ್ರಿಕೆಗಳು ತಮ್ಮ ಪ್ರೌಢವಾದ ಸಾಹಿತ್ಯ ಮಟ್ಟವನ್ನು ಕಾಯ್ದುಕೊಂಡು ಬಂದಿವೆ.

ಈ ಪತ್ರಿಕೆಗಳಲ್ಲಿ, ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿರುವ ತ್ರೈಮಾಸಿಕ **'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'** ಪ್ರಮುಖವಾದದ್ದು. ಈಗ ಇದು ಷಾಣ್ಮಾಸಿಕವಾಗಿದೆ. ಕನ್ನಡದಲ್ಲಿ ಪಾಂಡಿತ್ಯ ಸಂಶೋಧನೆಗಳು ಹೆಚ್ಚುವ ಸಂದರ್ಭಗಳು ಇರುವಲ್ಲಿ, ಇದು ಮತ್ತೆ ತ್ರೈಮಾಸಿಕವಾಗಿ ಪ್ರಕಟವಾಗಬೇಕಾದದ್ದು ಅಪೇಕ್ಷಣೀಯ. ೧೯೧೫ರಲ್ಲಿ ಆರಂಭವಾದ ಈ ಪತ್ರಿಕೆ ಕನ್ನಡ ಭಾಷೆ, ಸಾಹಿತ್ಯ, ಇತಿಹಾಸ, ವ್ಯಾಕರಣ, ಛಂದಸ್ಸು ಇತ್ಯಾದಿ ಶಾಸ್ತ್ರ ವಿಚಾರಗಳಿಗೆ ಸಂಬಂಧಿಸಿದ ವಿವಿಧ ವಿಷಯಗಳ ಅಧ್ಯಯನ ಮತ್ತು ಸಂಶೋಧನ ಲೇಖನಗಳಿಗೇ ಮೀಸಲಾಗಿರುವ ವಿದ್ವತ್ ಪತ್ರಿಕೆ. ಅಖಿಲ ಕರ್ನಾಟಕ ವ್ಯಾಪ್ತಿಯ ಇಂಥ ಪತ್ರಿಕೆ ಕನ್ನಡದಲ್ಲಿ ಇದೊಂದೇ.

ಕ್ರಮೇಣ ಈ ಪತ್ರಿಕೆ ಭಾರತದ ಪ್ರಮುಖ ವಿದ್ವತ್ ಸಂಸ್ಥೆಗಳಿಗೂ ಇಂಗ್ಲಂಡ್, ಜರ್ಮನಿ, ಅಮೆರಿಕ ಮುಂತಾದ ಪಾಶ್ಚಾತ್ಯ ರಾಷ್ಟ್ರಗಳ ಪ್ರಾಚ್ಯ ವಿದ್ಯಾಭಿಮಾನಿ ಕೇಂದ್ರಗಳಿಗೂ ಹೋಗತೊಡಗಿತು. ಪತ್ರಿಕೆಯ ಲೇಖನಗಳ ಸಾರವನ್ನು ಪರಿಚಯ ಮಾಡಿಕೊಡುವ ಆಂಗ್ಲ ವಿಷಯಸೂಚಿಕೆಯೊಂದು ಪ್ರಾರಂಭದ ಸಂಚಿಕೆಯಲ್ಲೇ ಪ್ರಕಟವಾಗತೊಡಗಿದ್ದು ಗಮನಾರ್ಹ. ಎ. ಆರ್. ಕೃಷ್ಣಶಾಸ್ತ್ರಿಗಳು ಇದರ ಸಂಪಾದಕರಾದಾಗ, ಈ ಆಂಗ್ಲ ವಿಷಯಸೂಚಿಕೆ ಪುನರಾರಂಭವಾಯಿತು. ಇದರ ಜೊತೆಗೆ, ದೇಶ ವಿದೇಶಗಳ – ಬೇರೆ ಬೇರೆ ಭಾಷೆಗಳ – ವಿದ್ವತ್ ಪತ್ರಿಕೆಗಳ ಲೇಖನಗಳ ಸ್ವರೂಪವನ್ನು ಪರಿಚಯ ಮಾಡಿಕೊಡುವ 'ಪ್ರಾಚ್ಯ ಲೇಖನಮಾಲೆ' ಸಂಶೋಧಕರಿಗೆ ಎಷ್ಟು ಉಪಯುಕ್ತ ಎಂದು ಬೇರೆ ಹೇಳಬೇಕಾಗಿಲ್ಲ. ಸಮ್ಮೇಳನಗಳಲ್ಲಿ ಓದುತ್ತಿದ್ದ ಪ್ರೌಢ ನಿಬಂಧಗಳನ್ನು ಪ್ರಕಟಿಸುವುದು ಈ ಪತ್ರಿಕೆಯ ವೈಶಿಷ್ಟ್ಯವಾಗಿತ್ತು. 'ವಡ್ಡಾರಾಧನೆ' ಮೊದಲು ಪ್ರಕಟವಾದದ್ದು ಇದರಲ್ಲಿ. ಆರ್. ರಘುನಾಥರಾಯರ 'ವ್ಯಾಕರಣೋಪನ್ಯಾಸ ಮಂಜರಿ', 'ಜೈಮಿನಿ ಭಾರತದ ಗದ್ಯಾನುವಾದ', 'ಚಾವುಂಡರಾಯ ಪುರಾಣ', ದೇವುಡು ಅವರ 'ಕರ್ನಾಟಕ ಸಂಸ್ಕೃತಿ' – ಇವು ಪರಿಷತ್ಪತ್ರಿಕೆಯ ಮೂಲಕ ಬೆಳಕು ಕಂಡ ವಿದ್ವತ್ ಪ್ರಕಟನೆಗಳಲ್ಲಿ ಕೆಲವು.

ಕನ್ನಡಿಗರ ಮನಸ್ಸಿನಲ್ಲಿ ಅಚ್ಚಳಿಯದ ಸ್ಥಾನ ಪಡೆದಿರುವ ಮತ್ತೆರಡು ಪ್ರೌಢ ಪತ್ರಿಕೆಗಳು, 'ಪ್ರಬುದ್ಧ ಕರ್ನಾಟಕ' ಮತ್ತು 'ಜಯ ಕರ್ನಾಟಕ'. ಕನ್ನಡದ ಅಶ್ವಿನೀದೇವತೆಗಳಲ್ಲಿ ಒಬ್ಬರಾದ ಕೀರ್ತಿಶೇಷ ಡಾ|| ಎ.ಆರ್. ಕೃಷ್ಣಶಾಸ್ತ್ರಿಗಳು ತ್ರೈಮಾಸಿಕವಾಗಿ ಆರಂಭಿಸಿದ 'ಪ್ರಬುದ್ಧ ಕರ್ನಾಟಕ' ೧೯೧೮-೧೯ರಲ್ಲಿ ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಪ್ರಕಟನೆಯಾಗಿ ಹೊರಬಂದಿತು.

ಪತ್ರಿಕೆ ಹುಟ್ಟಿದಾಗ, "ಅದು ಸಾಹಿತ್ಯ ಪತ್ರಿಕೆಯಾಗಿರಬೇಕೆಂದೂ ಮುಖ್ಯವಾಗಿ ವಿಮರ್ಶಾತ್ಮಕವಾಗಿರಬೇಕೆಂದೂ ನಿರ್ಧಾರವಾಗಿತ್ತು"; ಅದರ ಉದ್ದೇಶ, ವಿದ್ಯಾರ್ಥಿಗಳ ಅಭಿವ್ಯಕ್ತಿಗೆ ಒಂದು ವೇದಿಕೆ ಸಿದ್ಧಮಾಡಿಕೊಡುವುದಾಗಿತ್ತು. ಆದರೆ ಪತ್ರಿಕೆ ಬೆಳೆದಂತೆ ನಾಡಿನ ಅನೇಕ ಲೇಖಕರು 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯನ್ನು ಪ್ರಬುದ್ಧವಾಗಿಸಿದರು. ಸುಮಾರು ಐವತ್ತು ಮೌಲಿಕ ಸಾಹಿತ್ಯ ಕೃತಿಗಳು ಈ ಏಕಮೇವಾದ್ವಿತೀಯ ಸಾಹಿತ್ಯ ಪತ್ರಿಕೆಯ ಪುಟಗಳಿಂದ ಜನ್ಮಧಾರಣೆ ಮಾಡಿದವು ಎಂದ ಮೇಲೆ, ಕನ್ನಡ ನವೋದಯ ಸಾಹಿತ್ಯದ ಬೆಳವಣಿಗೆಯಲ್ಲಿ ಈ ಪತ್ರಿಕೆ ವಹಿಸಿದ ಪಾತ್ರವನ್ನು ಯಾರೂ ಸುಲಭವಾಗಿ ಊಹಿಸಬಹುದು. ೧೯೩೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವಶಕ್ಕೆ ಹೋದ ಈ ಪತ್ರಿಕೆ ತನ್ನ ಕ್ಷೇತ್ರವನ್ನು ವಿಸ್ತಾರ ಪಡಿಸಿಕೊಂಡು, ವಿಜ್ಞಾನ ಲೇಖನಗಳ ಪ್ರಕಟನೆಗೂ ಎಡೆಗೊಡುತ್ತ ಬಂತು. ವಿಜ್ಞಾನ ಸಾಹಿತ್ಯ ಬೆಳೆದಂತೆ, ಅದಕ್ಕೇ ಒಂದು ಪ್ರತ್ಯೇಕ ಪತ್ರಿಕೆಯ ಅಗತ್ಯ ಕಂಡು ಬಂದು, ಮೈಸೂರು ವಿಶ್ವವಿದ್ಯಾನಿಲಯ 'ವಿಜ್ಞಾನ ಕರ್ಣಾಟಕ'ವನ್ನು ಆರಂಭಿಸಿರುವುದರಿಂದ 'ಪ್ರಬುದ್ಧ ಕರ್ಣಾಟಕ' ಸಾಹಿತ್ಯ ಪತ್ರಿಕೆಯಾಗಿಯೇ ಮುಂದುವರಿದು, ತನ್ನ ಮೂಲೋದ್ದೇಶವನ್ನು ಕಾಯ್ದುಕೊಳ್ಳಲು ಅವಕಾಶವಾಗಿದೆ. ಇದು ಸ್ವಾಗತಾರ್ಹ ಬೆಳವಣಿಗೆ.

ಕರ್ಣಾಟಕ ವಿಶ್ವವಿದ್ಯಾಲಯ ಸ್ಥಾಪನೆಯಾಗುವುದಕ್ಕೆ ಮುಂಚೆ ಕರ್ನಾಟಕ ಕಾಲೇಜು ಪತ್ರಿಕೆ ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಸಾಹಿತ್ಯಾಭಿವ್ಯಕ್ತಿಯನ್ನೂ ಸಂಶೋಧನ ಕಾರ್ಯವನ್ನೂ ಬೆಳಸುವ ಸಾಧನವಾಗಿತ್ತು. ವಿಶ್ವವಿದ್ಯಾಲಯ ಸ್ಥಾಪನೆಯಾದ ಮೇಲೆ ಅದು ತನ್ನದೇ ಆದ ಕನ್ನಡ ಪತ್ರಿಕೆ ಯಾವುದನ್ನೂ ಹೊರಡಿಸಿಲ್ಲ. ನವೆಂಬರ್ ೧೯೬೮ರಲ್ಲಿ, ಅದು ಹೊರಡಿಸಿದ 'ಕರ್ನಾಟಕ ಭಾರತಿ' ಎಂಬ ವಿದ್ವತ್‌ಪೂರ್ಣ 'ಅಯನ' ಪತ್ರಿಕೆ ಈಗ ತ್ರೈಮಾಸಿಕವಾಗಿದೆ. ಅದರ ಹೆಸರು ತುಂಬ ಅರ್ಥಪೂರ್ಣವಾಗಿದ್ದು, ಈವರೆಗಿನ ಸಂಚಿಕೆಗಳು ಘನತೆಯನ್ನು ಎತ್ತಿಹಿಡಿದಿವೆ.

ಏಕೀಕರಣಕ್ಕಾಗಿ ಅವಿರತವಾಗಿ ದುಡಿದು, 'ಕರ್ನಾಟಕ ಕುಲಪುರೋಹಿತ' ಎಂದು ಖ್ಯಾತರಾದ ಆಲೂರ ವೆಂಕಟರಾಯರು 'ಜಯಕರ್ನಾಟಕ'ದ ಸಂಸ್ಥಾಪಕರು. ಮೂರನೆಯ ದಶಕದ ಮೊದಲ ಭಾಗದಲ್ಲಿ ಪ್ರಕಟವಾಗತೊಡಗಿದ ಈ ಪತ್ರಿಕೆ, ಧಾರವಾಡದ 'ಗೆಳೆಯರ ಗುಂಪನ್ನು' (ಬೇಂದ್ರೆ, ವಿ.ಕೆ. ಗೋಕಾಕ್, ರಂ.ಶ್ರೀ. ಮುಗಳಿ, ಸಾಲಿ ರಾಮಚಂದ್ರರಾವ್, ಪ್ರಹ್ಲಾದ ನರೇಗಲ್ಲ, ನಾರಾಯಣ ಸಂಗಮ, ಮುಂತಾದವರು) ಕಟ್ಟಿತು; 'ಗೆಳೆಯರ ಗುಂಪು' ಜಯಕರ್ನಾಟಕವನ್ನು ಹೊಯ್ದೀರೆರೆದು ಬೆಳಸಿತು. ಗೆಳೆಯರ ಗುಂಪಿನ ಅನೇಕ ಸದಸ್ಯರು ಕನ್ನಡ ಸಾಹಿತ್ಯಕ್ಕೆ ಚಿರಕಾಲ ನಿಲ್ಲಬಲ್ಲ ಕಾಣಿಕೆ ನೀಡಿದ್ದಾರೆ. ಇದರ ಹಿಂದೆ ಜಯಕರ್ನಾಟಕದ ಪರೋಕ್ಷ ಪ್ರಭಾವವೂ ಇದೆ. ಬಹಳ ಕಾಲದ ವರೆಗೆ ಈ ಪತ್ರಿಕೆ ಕರ್ನಾಟಕದ 'ಮಾಡರ್ನ್ ರೆವ್ಯೂ' (Modern Review) ಎನ್ನಿಸಿಕೊಂಡಿತ್ತು. ಇದರ ಪುಟ ಪುಟಗಳಲ್ಲೂ 'ರೆವ್ಯೂ'ನ ಹೋರಾಟದ ಮನೋಭಾವವೇ ತುಂಬಿತ್ತು. ಜನಪದ ಸಾಹಿತ್ಯ ಸಂಗ್ರಹ ಪ್ರಕಟನೆಗಳಿಗೆ ನಾಂದಿಯನ್ನು ಹಾಡಿ ಇಂಬುಗೊಟ್ಟದ್ದು ಈ ಪತ್ರಿಕೆಯ ವಿಶೇಷ ಕಾಣಿಕೆ.

'ಜೀವನ' ತನ್ನ ಉನ್ನತ ಮಟ್ಟದ ಸಾಹಿತ್ಯಗುಣಕ್ಕೆ ಹೆಸರಾದ ಇನ್ನೊಂದು ಸಾಹಿತ್ಯ ಪತ್ರಿಕೆ. ಧಾರವಾಡದಲ್ಲಿ ಹುಟ್ಟಿ, ಅಲ್ಲಿ ಒಂದೆರಡು ವರ್ಷ ಬದುಕಿ, ಕರ್ನಾಟಕದ ಒಂದುತನದ ಕುರುಹು ಎಂಬಂತೆ ಬೆಂಗಳೂರಿಗೆ ನಡೆದುಬಂದ 'ಜೀವನ', ಮಾಸ್ತಿ ವೆಂಕಟೇಶ ಅಯ್ಯಂಗಾರರ ಔದಾರ್ಯದ ನೆರಳಲ್ಲಿ ಬೆಳೆದು ನಿಂತ. ತನ್ನ ಶುಚಿ-ರುಚಿಯಾದ ಸಾಹಿತ್ಯಕ್ಕೆ ಪ್ರಖ್ಯಾತವಾಗಿ ಬೆಳೆದ ಈ ಮಾಸಿಕ, ಮಾಸ್ತಿಯವರ ವ್ಯಕ್ತಿತ್ವದ – 'ಸರಳ ಜೀವನ, ಉದಾತ್ತ ಚಿಂತನ'ದ – ಪ್ರತೀಕವಾಗಿ ಬೆಳೆದುಬಂತು; ಸ್ವಂತವಾಗಿ ನಡಸುತ್ತಿದ್ದ ಈ ಪತ್ರಿಕೆಯಲ್ಲಿ ಅವರ ಸ್ವಂತ ಬರಹವೂ ಬೆಳಕು ಕಂಡದ್ದು ಸಹಜವಾಗಿಯೆ ಇದೆ. ರಾಜಕೀಯ ಆದಿಯಾಗಿ ಸಮಸಾಮಯಿಕ ಸಾಹಿತ್ಯ ಸಂಸ್ಕೃತಿ ವಿಚಾರಗಳ ಮೇಲೆ ಅವರು ಬರೆಯುತ್ತಿದ್ದ ನಿರ್ದಾಕ್ಷಿಣ್ಯವಾದರೂ ನೋಯಿಸದ, ನಯವಾದ, ಸಂಪಾದಕೀಯ ಬರಹದ ಸವಿಕಟ್ಟು ಅದನ್ನು ಸಾಹಿತ್ಯದ ಮಟ್ಟಕ್ಕೇರಿಸಿತ್ತು. ಈ ಸಂಪಾದಕೀಯಗಳೆಲ್ಲ ಈಚೆಗೆ ಗ್ರಂಥರೂಪದಲ್ಲಿ ಪ್ರಕಟವಾಗಿ, 'ಸಂಪಾದಕೀಯ ಸಾಹಿತ್ಯ' ಪ್ರಕಾರಕ್ಕೆ ಮಾದರಿಯಾಗಿ ನಿಂತಿದೆ. 'ಜೀವನ' ಕೆಲವು ವರ್ಷ ಡಿ| ಕೆ. ಗೋಪಾಲಕೃಷ್ಣ ರಾಯರ ಸಂಪಾದಕತ್ವದಲ್ಲಿ ನಡೆದು, ಸಿದ್ದವ್ವನಹಳ್ಳಿ ಕೃಷ್ಣಶರ್ಮರ ಸೇವೆಯನ್ನೂ ಕೈಗೊಂಡು, ಅವರೇ ಕಟ್ಟಿ ಬೆಳಸಿದ ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಿಂದ, ಶ್ರೀ ಹಂಪ ನಾಗರಾಜಯ್ಯನವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದೆ.

ಡಿ|| ಬಿ. ಎಂ. ಶ್ರೀಕಂಠಯ್ಯನವರು ಪರಿಷತ್ತಿನ ಉಪಾಧ್ಯಕ್ಷರಾದಾಗ (೧೯೩೮) 'ಕನ್ನಡ ಬಾವುಟ'ವನ್ನು ಕೈಲಿ ಹಿಡಿದು, ಕನ್ನಡದ ಪ್ರಚಾರ ಕಾರ್ಯದ ದೀಕ್ಷೆ ವಹಿಸಿದರು. ಪರಿಷತ್ತಿನ ವಿಚಾರವನ್ನೂ ಕನ್ನಡ ವಿಚಾರವನ್ನೂ ಸಮಸ್ತ ಕನ್ನಡ ಜನಕ್ಕೆ ತಿಳಿಸುವ ಉದ್ದೇಶದಿಂದ 'ಕನ್ನಡ ನುಡಿ'ಯನ್ನು ಪರಿಷತ್ತಿನ ಮುಖಪತ್ರಿಕೆಯಾಗಿ ಹೊರಡಿಸಿದರು; ಈ ಕೆಲಸಕ್ಕೆಂದೇ ಪರಿಷತ್ತಿಗೊಂದು ಅಚ್ಚುಕೂಟವನ್ನೂ ದಾನ ಮಾಡಿದರು. ಪರಿಷತ್ತಿನ ಸುದ್ದಿ, ಕನ್ನಡ ಸುದ್ದಿ ಇವನ್ನು ಪ್ರಸಾರ ಮಾಡುವುದೇ ಅದರ ಮುಖ್ಯ ಉದ್ದೇಶವಾಗಿದ್ದರೂ, ಪ್ರಥಮ ಸಂಪಾದಕರಾದ ಅ.ನ.ಕೃ. ಅವರ ನೇತೃತ್ವದಲ್ಲಿ ಅದೊಂದು ಉತ್ತಮ ಸಾಂಸ್ಕೃತಿಕ ಸಾಹಿತ್ಯ 'ವಾರಪತ್ರಿಕೆ'ಯಾಗಿ ರೂಪಗೊಂಡಿತು. ಸಮಕಾಲೀನ ಗ್ರಂಥ ಪ್ರಕಾಶನವನ್ನು ಕನ್ನಡಿಸುವ ಗ್ರಂಥ ಸ್ವೀಕಾರ –ಗ್ರಂಥ ವಿಮರ್ಶಾಭಾಗವೂ ಅದರ ವ್ಯಾಪ್ತಿಯಲ್ಲಿ ಸೇರಿತು. ಆ ಕಾಲದಲ್ಲಿ ದ.ಕೃ. ಭಾರದ್ವಾಜರು ಬರೆದ 'ಕನ್ನಡ ನುಡಿ ಭಕ್ತರು' ಎಂಬ ಲೇಖನ ಮಾಲೆ ಅಮೂಲ್ಯವಾಗಿದ್ದು, ಪುಸ್ತಕ ರೂಪದಲ್ಲಿ ಹೊರಬಿದ್ದರೆ ತುಂಬ ಉಪಯುಕ್ತವಾದೀತು. ಕೆಲ ಕಾಲವಾದ ಮೇಲೆ ಮಾಸಪತ್ರಿಕೆಯಾಗಿ,

ಈಗ ಪಾಕ್ಷಿಕವಾಗಿ ರೂಪಗೊಂಡಿವೆ; 'ಶ್ರೀ'ಯವರು ಯಾವ ಉದ್ದೇಶದಿಂದ ಹೊರಡಿಸಿದರೋ ಆ ಮುಖ್ಯ 'ಪ್ರಚಾರದ' ಉದ್ದೇಶ ಈಗಲೂ ಇದರ ಮೂಲಕ ನೆರವೇರುತ್ತಿದೆ; ಅದರ ಸಾಹಿತ್ಯದ ಬಣ್ಣ ಮಾತ್ರ ತೆಳುವಾಗಿಬಿಟ್ಟಿದೆ.

ಧಾರವಾಡದ 'ಜಯಂತಿ' ಪತ್ರಿಕೆ ಆನಂದಕಂದರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿತ್ತು. 'ವಿಹಾರಿ' ನಾಮಾಂಕಿತದಲ್ಲಿ ಬರುತ್ತಿದ್ದ ಇದರ ಸಾಹಿತ್ಯ ಸಮಾಲೋಚನೆಯು ಬರಹ ಚುರುಕಾಗಿರುತ್ತಿತ್ತು. ಸುಮಾರು ಮೂವತ್ತು ವರ್ಷಗಳ ಹಿಂದೆಯೇ ಆರ್. ಕಲ್ಯಾಣಮ್ಮನವರು ಪ್ರಾರಂಭಿಸಿದ 'ಸರಸ್ವತಿ' ಪ್ರಾಯಶಃ ಮಹಿಳೆಯೊಬ್ಬರು ಸಂಪಾದಕಿಯಾಗಿ ಮಹಿಳೆಯರಿಗಾಗಿಯೇ ಪ್ರಕಟಿಸುತ್ತಿದ್ದ ಏಕೈಕ ಪತ್ರಿಕೆ. ಇಪ್ಪತ್ತರ ದಶಕದಲ್ಲಿ ಪ್ರಕಟನೆ ಆರಂಭಿಸಿದ 'ರಂಗಭೂಮಿ' ರಂಗಭೂಮಿ ಹಾಗೂ ನಾಟಕದ ಬೆಳವಣಿಗೆಗಾಗಿಯೇ ಮೀಸಲಾಗಿದ್ದ ಏಕೈಕ ಪತ್ರಿಕೆ. ಅದರ ಪ್ರಕಾಶಕ ಸಂಸ್ಥೆಯಾಗಿದ್ದ ಅಮೆಚೂರು ನಾಟಕ ಸಂಘ ನಿಂತುಹೋದ ಮೇಲೆ, ಅದೂ ನಿಂತುಹೋಯಿತು. ಸುಬೋಧ ರಾಮರಾಯರ 'ಸುಬೋಧ' ಅನ್ವರ್ಥಕವಾಗಿ ನೈತಿಕ ಧಾರ್ಮಿಕ ಮೌಲ್ಯಗಳ ಸಾಹಿತ್ಯವನ್ನು ಪ್ರಕಟಿಸುತ್ತ ಬಂದಿದೆ. ಬಿಜಾಪುರದ 'ಶಿವಾನುಭವ' ದಿ|| ಫ. ಗು. ಹಳಕಟ್ಟಿ ಅವರ ಸಂಪಾದಕತ್ವದಲ್ಲಿ ವೀರಶೈವ ಸಾಹಿತ್ಯದ ಪ್ರಕಟನೆಗೆ ಅಮೋಘ ಸೇವೆ ಸಲ್ಲಿಸಿದೆ; ವಚನ ಸಾಹಿತ್ಯವನ್ನೂ ಹರಿಹರನ ರಗಳೆಗಳನ್ನೂ ಮೊತ್ತಮೊದಲು ಸಂಪಾದಿಸಿ ಪ್ರಕಟಿಸಿದ ಕೀರ್ತಿ ಈ ಮಾಸಿಕದ್ದು. ಇದೇ ರೀತಿ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ಶರಣ ಸಾಹಿತ್ಯ' ವೀರಶೈವ ಸಾಹಿತ್ಯ ಪ್ರಕಟನೆಗೆ ಮರೆಯಲಾಗದ ಸೇವೆ ಸಲ್ಲಿಸಿ, ಬೆಳ್ಳಿಯ ಹಬ್ಬವನ್ನು ಕಂಡಿದೆ. ಈ ಕ್ಷೇತ್ರದಲ್ಲಿ ಗಣ್ಯಸೇವೆ ಸಲ್ಲಿಸಿದ ಇನ್ನೊಂದು ಪತ್ರಿಕೆ, ದಿ|| ಹರ್ಡೇಕರ ಮಂಜಪ್ಪನವರ 'ಶರಣ ಸಂದೇಶ'. ಹೊಳೇನರಸೀಪುರದ 'ಅಧ್ಯಾತ್ಮ ಪ್ರಕಾಶ' ಅದ್ವೈತ ವೇದಾಂತಸಂಬಂಧವಾದ ವಿಪುಲ ಸಾಹಿತ್ಯವನ್ನು ಪ್ರಕಟಿಸುತ್ತ ಸಾಗಿದೆ. ಅತ್ಯುತ್ತಮ ಮಟ್ಟವನ್ನು ಕಾಯ್ದುಕೊಂಡು ಬಂದ ಹಾಸ್ಯ ಪತ್ರಿಕೆ 'ಕೊರವಂಜಿ'. ರಾ.ಶಿ. ಅವರ ಸಂಪಾದಕತ್ವದಲ್ಲಿ ೨೫ ವರ್ಷ ಕನ್ನಡಿಗರನ್ನು ನಗಿಸಿ ನಲಿಸಿ, ಕೊರವಂಜಿ ನಿಷ್ಕ್ರಮಿಸಬೇಕಾಗಿ ಬಂದದ್ದು ವಿಷಾದದ ಸಂಗತಿ. ದೀರ್ಘಾಯುವಾದ ಪ್ರಪ್ರಥಮ ಕನ್ನಡ ಹಾಸ್ಯ ಪತ್ರಿಕೆ 'ವಿಕಟ ವಿನೋದಿನಿ'. ಶ್ರೀ ಜಿ. ನಾರಾಯಣರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ವಿನೋದ' ಈಗ 'ಕೊರವಂಜಿ' ಬಿಟ್ಟ ತೆರಪನ್ನು ತುಂಬುತ್ತಿದೆ. 'ಕಸ್ತೂರಿ' ಅಮೆರಿಕದ 'ರೀಡರ್ಸ್ ಡೈಜೆಸ್ಟ್' ಮಾದರಿಯ ಕನ್ನಡದ ಶ್ರೇಷ್ಠ ಡೈಜೆಸ್ಟು; ಉತ್ತಮ ಮಟ್ಟವನ್ನು ಕಾಯ್ದುಕೊಂಡು, ಜನಪ್ರಿಯವಾಗಿದೆ. 'ಮಲ್ಲಿಗೆ', 'ಮಯೂರ' ಮಾಸಪತ್ರಿಕೆಗಳು ಪ್ರಕಟನೆಗೆ ಮೀಸಲಾಗಿದ್ದು ಜನಪ್ರಿಯವಾಗುತ್ತಿವೆ. ಜನಪ್ರಿಯತೆಯಲ್ಲಿ ದಾಖಲೆಯನ್ನು ಸ್ಥಾಪಿಸಿರುವ ಪತ್ರಿಕೆ ಎಂದರೆ, ಸಂಕೀರ್ಣ ಬರಹಗಳ 'ಸುಧಾ'. ಸಣ್ಣಕಥೆಗಳ ಪ್ರಕಟನೆಗೆಂದೇ ಜನ್ಮತಾಳಿದ ಪತ್ರಿಕೆಗಳೆಂದರೆ – 'ಕಥಾಂಜಲಿ', 'ಕತೆಗಾರ' ಮತ್ತು 'ಕಥಾವಳಿ'. ೧೯೪೫ರಲ್ಲೇ ಶ್ರೀ ಅ.ನ. ಕೃಷ್ಣರಾಯರ ಸಂಪಾದಕತ್ವದಲ್ಲಿ ಪ್ರಾರಂಭವಾದ 'ಕಥಾಂಜಲಿ' ಅಗ್ರಗಣ್ಯವಾದರೂ ಕೆಲವು ವರ್ಷ ಮಾತ್ರ ಉಜ್ವಲವಾಗಿ ಬಾಳಿ ನಿಂತುಹೋಯಿತು.

ಇನ್ನು ಕೆಲವು ಹಳಗಾಲದ ಪತ್ರಿಕೆಗಳ ಸೇವೆಯನ್ನು ಇಲ್ಲಿ ಸ್ಮರಿಸಬಹುದು. ದಿ|| ಚಂದ್ರಶೇಖರ ಶರ್ಮರು (ಕವಿ ರಾಮಚಂದ್ರ ಶರ್ಮರ ತಂದೆ) ೧೯೩೦ ರ ಸುಮಾರಿನಲ್ಲಿ 'ಪ್ರಬೋಧಕ' ಎಂಬ ಉತ್ತಮ ವೈಚಾರಿಕ ಮಾಸಪತ್ರಿಕೆಯನ್ನು ಬೊಂಬಾಯಿಯಿಂದ ಹೊರಡಿಸಿ, ಎರಡು ವರ್ಷ ನಡೆಸಿ, ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿ ನಿಲ್ಲಿಸಿಬಿಟ್ಟರು. ಕಾವ್ಯಾಲಯದ ಶ್ರೀ ಕೂಡಲಿ ಚಿದಂಬರಂ ಅವರೂ ಅದೇ ಸುಮಾರಿನಲ್ಲಿ 'ವಿಚಾರವಾಹಿನಿ' ಎಂಬ ಪತ್ರಿಕೆಯನ್ನು ತೀರ್ಥಹಳ್ಳಿಯಿಂದ ಹೊರಡಿಸಿ, ಅದೇ ಕಾರಣಕ್ಕಾಗಿ ನಿಲ್ಲಿಸಿಬಿಟ್ಟರು. ಶ್ರೀ ಎಸ್. ವೆಂಕಟರಾಯರು ನಂಜನಗೂಡಿನಿಂದ ಹೊರಡಿಸಿದ 'ಬೆಳಕು'; ಅ.ನ.ಕೃ. ಆಶಾದಾಯಕವಾಗಿ ಪ್ರಾರಂಭಿಸಿದ 'ವಿಶ್ವವಾಣಿ'; ಶಾರದಾ ಪ್ರಕಟನಾಲಯದ ಶ್ರೀ ಜಿ. ಬಸವರಾಜು ತೊಡಗಿಸಿದ 'ಸಾಹಿತ್ಯ ಸಮಾಲೋಚನೆ' – ಇವು ಉತ್ತಮವಾಗಿ ಪ್ರಾರಂಭವಾಗಿ, ಮೊಳಕೆಯಲ್ಲೆ ಮುರಿದುಬಿದ್ದ ಹಲವಾರು ಪತ್ರಿಕೆಗಳಲ್ಲಿ ಪ್ರಮುಖವಾದ ಕೆಲವು. ಬಹಳ ಹಿಂದಿನಿಂದಲೂ ಉಡುಪಿಯಿಂದ ಪ್ರಕಟವಾಗುತ್ತಿರುವ 'ಪ್ರಭಾತ' ವಾರಪತ್ರಿಕೆ ತನ್ನ ವಾರ್ಷಿಕ ವಿಶೇಷ ಸಂಚಿಕೆಗಳಲ್ಲಿ ವಿದ್ವತ್‌ಪೂರ್ಣವೂ ಸಂಶೋಧನಾತ್ಮಕವೂ ಆದ ಲೇಖನಗಳನ್ನು ಪ್ರಕಟಿಸಿಕೊಂಡು ಬಂದಿತು. ಅನೇಕ ಸಾಪ್ತಾಹಿಕಗಳೂ ಮಾಸಿಕಗಳೂ ತಮ್ಮ ಪುಟಗಳಲ್ಲಿ ಮಕ್ಕಳ ಸಾಹಿತ್ಯಕ್ಕೆ ಎಡೆಯಿತ್ತಿದ್ದರೂ, ಸಿ. ಅಶ್ವತ್ಥ ನಾರಾಯಣರಾಯರ 'ಮಕ್ಕಳ ಪುಸ್ತಕ', ದೇವುಡು ಅವರ 'ನಮ್ಮ ಪುಸ್ತಕ' – ಇವುಗಳ ಬಾಲಗೋಪಾಲ ಸೇವೆ ಸ್ಮರಣಾರ್ಹ.

ಈಚಿನ ಪ್ರಭಾವಶಾಲಿ ಸಾಹಿತ್ಯ ಪತ್ರಿಕೆಗಳಲ್ಲಿ, 'ಸಾಕ್ಷಿ', 'ಸಂಕ್ರಮಣ', 'ಸಮೀಕ್ಷಕ', 'ಮನ್ವಂತರ', 'ಸಮನ್ವಯ' ಇವು ಬಹುತೇಕ 'ನವ್ಯ' ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆಗಳು. ಇತ್ತೀಚೆಗೆ ಈ ಗುಂಪಿಗೆ 'ಸಂಕೀರ್ಣ' ಕೂಡ ಸೇರಿದೆ. ಇವುಗಳ ಪೈಕಿ, ೧೯೬೨ರಲ್ಲಿ ಅನಿಯತಕಾಲಿಕವಾಗಿ ಪ್ರಕಟನೆ ಆರಂಭಿಸಿ ಅರವತ್ತೇಳರಲ್ಲಿ ತ್ರೈಮಾಸಿಕವಾಗಿ, ಈಗ ನಿಯತಕಾಲಿಕವಾಗಿರುವ 'ಸಾಕ್ಷಿ'; ಶ್ರೀ ಗೋಪಾಲಕೃಷ್ಣ ಅಡಿಗರ ಸಂಪಾದಕತ್ವದಲ್ಲಿ 'ನವ್ಯ' ಸಾಹಿತ್ಯದ ದೃಷ್ಟಿಕೋಣವನ್ನೂ, ಸತ್ವಸಂಪನ್ನತೆಯನ್ನೂ ತಿಳಿಸಿಕೊಡುವ ಕಾರ್ಯದಲ್ಲಿ ಪ್ರತಿಷ್ಠೆಯ ಗಾಂಭೀರ್ಯದಿಂದ ಕಾರ್ಯನಿರತವಾಗಿದೆ. ಕವಿತೆಗಳ ಪ್ರಕಟನೆಗೆಂದೇ ಕೆಲವು ವರ್ಷಗಳ ಹಿಂದೆ ಹೊರಟ 'ಕವಿತಾ' ನಡುವೆ ನಿಂತು ಹೋಗಿದ್ದು, ಈಗ ಇದರಲ್ಲಿ ಅಡಕವಾಗಿದೆ. 'ಸಂಕ್ರಮಣ' ಗಿರಡ್ಡಿ ಗೋವಿಂದರಾಜ, ಚಂದ್ರಶೇಖರ ಪಾಟೀಲ, ಹಾಗೂ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರುಗಳಿಂದ ಸಂಪಾದಿತವಾಗಿ, ಧಾರವಾಡದಿಂದ ಪ್ರಕಟವಾಗತೊಡಗಿತು. ಈಗ ಒಳ್ಳೆಯ ಲೇಖಕರೆಂದು

ಪರಿಗಣಿತರಾಗಿರುವ ಅನೇಕರನ್ನು ಬೆಳಕಿಗೆ ತಂದ ಶ್ರೇಯಸ್ಸು ಈ ಪತ್ರಿಕೆಯದು. ಈಗ ಪತ್ರಿಕೆಗೆ ಚಂ.ಪಾ. ಒಬ್ಬರೇ ಸಂಪಾದಕರು.

ವಿ.ಕೃ. ಗೋಕಾಕ್, ಜಿ.ಎಸ್. ಶಿವರುದ್ರಪ್ಪ, ಹೇಮಂತ ಕುಲಕರ್ಣಿ ಮೊದಲಾದವರ ನೇತೃತ್ವದಲ್ಲಿ ಪ್ರಕಟವಾಗುತ್ತಿರುವ **'ಸಮನ್ವಯ'** – ಸಾಹಿತ್ಯ ಸಮಾಲೋಚನೆಯಲ್ಲಿಯೂ, ಸಾಹಿತ್ಯ ಸೃಷ್ಟಿಯಲ್ಲಿಯೂ, ಪ್ರಚಾರಿಕ ಪ್ರಣಾಳಿಕೆಯಲ್ಲಿಯೂ – ಹಳೆಯದನ್ನು ಹೀಯಾಳಿಸದೆ ಹೊಸತನ್ನು ಕೈವಾರಿಸದೆ – ಸಮನ್ವಯ ದೃಷ್ಟಿಯನ್ನು ಎತ್ತಿ ಹಿಡಿಯುವ ಸ್ತುತ್ಯ ಧ್ಯೇಯವನ್ನು ಹೊಂದಿತ್ತು.

ಸೆಂಟ್ರಲ್ ಕಾಲೇಜಿನ ಕನ್ನಡ ವಿಭಾಗದ ವಿದ್ಯಾರ್ಥಿಗಳ ಶ್ರಮದ ಫಲವಾಗಿ, ಶ್ರೀ ಜಿ. ಎ. ವಿಶ್ವೇಶ್ವರ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ **'ಸಂಕೀರ್ಣ'**, ನಿರ್ಭಯವಾಗಿ ಎಲ್ಲವನ್ನೂ ಪ್ರಶ್ನಿಸುವ ಇಂದಿನ ಯುವ ಜನಾಂಗದ ಪ್ರತಿನಿಧಿಯಾಗಿ ಬೆಳೆಯುವ ಆಶೆ ಹೊಂದಿದೆ. ಈ ಸಂದರ್ಭದಲ್ಲಿ ಆಗಿನ ಕಾಲಕ್ಕೆ ಇದೇ ಗುರಿಯಿಂದ ಪ್ರಾರಂಭವಾದ ಬೆಂಗಳೂರಿನ 'ದೇಶೀಯ ವಿದ್ಯಾಶಾಲಾ ಪತ್ರಿಕೆ', 'ತುಮಕೂರು ಪ್ರೌಢಶಾಲೆಯ 'ಸ್ಕೂಲ್ ಫೋಕ್' (School Folk), ಸೇಂಟ್ ಜೋಸೆಫ್ ಕಾಲೇಜಿನ 'ಕನ್ನಡಿಗ' – ಇವನ್ನು ನೆನೆಯಬಹುದು. ಶಾಲಾ, ಕಾಲೇಜುಗಳ ವಾರ್ಷಿಕ ಪತ್ರಿಕೆಗಳು ಎಷ್ಟೋ ಸಂಖ್ಯೆಯವು ವಿದ್ಯಾರ್ಥಿಗಳ ಬರಹಕ್ಕೆ ಪುಟಿ ಕೊಟ್ಟಿವೆ; ಲೇಖಕರನ್ನು ಸೃಷ್ಟಿಸಿವೆ.

ಹೊಸದಾಗಿ ಸ್ಥಾಪಿತವಾಗಿರುವ ಜಾನಪದ ಪರಿಷತ್ತು (೧೯೮೮ರಲ್ಲಿ) **'ಜಾನಪದ'** ಎಂಬ ಪತ್ರಿಕೆಯನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹ. ಜನಪದ ಸಾಹಿತ್ಯವನ್ನು ಕುರಿತು 'ಪರಿಚಯಾತ್ಮಕ ವಿಮರ್ಶಾತ್ಮಕ ಲೇಖನಗಳ ಪ್ರಕಟನೆಯ ಜೊತೆಯಲ್ಲಿಯೇ, ಸಂಗ್ರಹಿತ ಜನಪದ ಸಾಹಿತ್ಯವನ್ನು ಪ್ರಕಟಿಸುವುದು 'ಜಾನಪದ'ದ ಉದ್ದೇಶಗಳಲ್ಲೊಂದು. ಜನಪದ ಸಾಹಿತ್ಯಕ್ಕೆ ಪ್ರಾಮುಖ್ಯ ದೊರಕುತ್ತಿರುವ ಈ ದಿನಗಳಲ್ಲಿ ಈ ಅರ್ಧವಾರ್ಷಿಕ ಪತ್ರಿಕೆ ತ್ರೈಮಾಸಿಕವಾಗಿಯಾದರೂ ಪ್ರಕಟವಾಗಬೇಕಾದದ್ದು ಅಗತ್ಯ.

೧೯೭೯ರಲ್ಲಿ ಪ್ರಾರಂಭವಾದ 'ಕನ್ನಡ ನಿಯತಕಾಲಿಕ ಬರಹಗಳ ಸೂಚಿ' ಇನ್ನೊಂದು ಸ್ವಾಗತಾರ್ಹ ಪ್ರಕಟನೆ. ಕನ್ನಡ ಭಾಷಾ ಸಾಹಿತ್ಯಾಭ್ಯಾಸಿಗಳಿಗೆ ತಮ್ಮ ತಮ್ಮ ಸಂಶೋಧನೆ, ಆಸಕ್ತಿಗಳಿಗೆ ಅನುಗುಣವಾದ ಬರಹಗಳು ನಿಯತಕಾಲಿಕ ವಾಙ್ಮಯದಲ್ಲಿ ಎಲ್ಲೆಲ್ಲಿ ಪ್ರಕಟವಾಗಿವೆ ಎಂಬುದನ್ನು ಕಂಡುಕೊಳ್ಳಲು ನೆರವಾಗುವುದು, ಈ ಪ್ರಕಟನೆಯ ಸ್ತುತ್ಯ ಧ್ಯೇಯ. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯದಿಂದ ಹೊರಟಿರುವ ಈ ಪತ್ರಿಕೆ ಕನ್ನಡ ಸಾಹಿತ್ಯ ಪತ್ರಿಕೆಗಳೆಲ್ಲವುಗಳ ಕೈಗನ್ನಡಿಯಾಗಿ ಬೆಳಗುವುದರಲ್ಲಿ ಸಂದೇಹವಿಲ್ಲ. ಇದು ಸಾರೋದ್ಧಾರವಾಗಿ ನಡೆದುಕೊಂಡು ಬಂದರೆ, ಇನ್ನು ಮುಂದೆ ಇಂತಹ ಸಮೀಕ್ಷಾ ಲೇಖನಗಳ ಅಗತ್ಯ ಕೂಡ ಇರುವುದಿಲ್ಲ!

ಕಡೆಯದಾಗಿ, ಒಂದು ಮಾತನ್ನು ಇಲ್ಲಿ ಹೇಳಲೇಬೇಕು: ಸಾಹಿತ್ಯಪತ್ರಿಕೆಗಳು ಸುದ್ದಿ-ಸಮಾಚಾರಗಳನ್ನೂ ಒದಗಿಸವೆ, ಕೀಳು ಅಭಿರುಚಿಗೂ ಸೊಪ್ಪು ಹಾಕವೆ, ತಮ್ಮ ಗುಣಮಟ್ಟವನ್ನು ಕಾಯ್ದುಕೊಳ್ಳಲು ಹೆಣಗುವುದರಿಂದ ಅವಕ್ಕೆ ಬೇಡಿಕೆ ಕಡಮೆ; ಆದ್ದರಿಂದ ವ್ಯಾಪಾರ ಪ್ರಕಟನೆಗಳು ದೊರೆಯವು. ಹೀಗಾಗಿ ನಾಡಿನ ಪ್ರಜೆಗಳಿಂದ ಈ ಪತ್ರಿಕೆಗಳಿಗೆ ಹೇಳಿಕೊಳ್ಳುವ ಮಟ್ಟಿಗೆ ಪ್ರೋತ್ಸಾಹ ಸಿಕ್ಕುತ್ತಿಲ್ಲ. ಬಹುತೇಕ ಎಲ್ಲ ಪತ್ರಿಕೆಗಳೂ ಆರ್ಥಿಕ ತೊಂದರೆಗಳ ನಡುವೆ ಹೇಗೋ ಜೀವ ಹಿಡಿದಿವೆ; ಹಲವು ಹುಟ್ಟಿ ಸತ್ತಿವೆ; ಕೆಲವು 'ಅಪವಾದ' ರೂಪದ ಜನಪ್ರಿಯ ಪತ್ರಿಕಗಳನ್ನು ಬಿಟ್ಟರೆ ಅವು ತಮ್ಮ ಲೇಖಕರಿಗೆ ಸಂಭಾವನೆ ಸಲ್ಲಿಸಲಾರವು. ಆದರೆ ಸಾಹಿತ್ಯಕ್ಕೇ ಮೀಸಲಾದ ಪತ್ರಿಕೆಗಳನ್ನು ನಡೆಸುವವರು ಸೇವಾ ಮನೋಭಾವದಿಂದಲೇ ಪತ್ರಿಕೆಗಳನ್ನು ನಡೆಸಬೇಕಾಗಿದೆ. ಈ ಪರಿಸ್ಥಿತಿ ಸಾಹಿತ್ಯದ ಬೆಳವಣಿಗೆಗೆ ಈಗಂತೂ ಆರೋಗ್ಯಕರವಲ್ಲ.



---

*ಕನ್ನಡ ಪತ್ರಿಕೋದ್ಯಮ ಚರಿತ್ರೆಯಲ್ಲಿ ದ.ಕೃ. ಭಾರದ್ವಾಜರದು ದಾಖಲಾಗಬೇಕಾದ ಸಾಹಸ. ೧೮೯೧ರ ಡಿಸೆಂಬರ್ ೨೯ರಂದು ಹುಟ್ಟಿದ ಭಾರದ್ವಾಜರು ೧೯೧೫ರಲ್ಲಿ 'ಒಕ್ಕಲಿಗ' ಮಾಸಿಕದ ಉಪಸಂಪಾದಕರಾಗಿದ್ದರು. ನಂತರ 'Sanskrit Research' ಎಂಬ ದ್ವಿಭಾಷಾ ತ್ರೈಮಾಸಿಕವನ್ನು ಹೊರತಂದರು. ೧೯೧೮ರಲ್ಲಿ 'ಭಕ್ತಿಸಂದೇಶ'ವನ್ನೂ, ೧೯೨೦ ರಲ್ಲಿ 'ತಿಲಕ ಸಂದೇಶ'ವನ್ನೂ ಹೊರಡಿಸಿದರು. ಈ ನಡುವೆ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ 'ಅಸಹಕಾರ' ಪತ್ರಿಕೆಯನ್ನು ಹುಟ್ಟುಹಾಕಿದರು. ಅವರ 'ಮಕ್ಕಳ ಪುಸ್ತಕ'ವು (೧೯೨೬ – ೧೯೪೮) ಮಕ್ಕಳಿಗಾಗಿ ಮೀಸಲಾದುದು.

# ೮. ಲಲಿತಕಲೆಗೆ ಮೀಸಲಾದ ಪತ್ರಿಕೆಗಳು

✍ ಡಾ. ನಿರಂಜನ ವಾನಳ್ಳಿ

ಲಲಿತ ಕಲೆ ಎಂಬಲ್ಲಿ ಆಧುನಿಕ ಅಭಿವ್ಯಕ್ತಿ ಮಾಧ್ಯಮಗಳಾದ ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನಾಟಕ ಹಾಗೂ ರಂಗದ ಮೇಲೆ ಅಭಿನಯಿಸುವ ಇತರ ನಾಟ್ಯ ಪ್ರಕಾರಗಳೂ ಸೇರಿಕೊಳ್ಳುತ್ತದೆ. ಕನ್ನಡದಲ್ಲಿ ಇವುಗಳಿಗೆ ಮೀಸಲಾದ ಮೊದಲ ಪತ್ರಿಕೆಯೆಂದು ಗುರುತಿಸಬಹುದಾದದ್ದು, ದ. ಕೃ. ಭಾರದ್ವಾಜರ 'ರಂಗಭೂಮಿ'. ನಾಟಕ ಕಲೆಗೆಂದೇ ಮೀಸಲಾಗಿ ಭಾರದ್ವಾಜರು ೧೯೨೫ ರಲ್ಲಿ ಈ ಮಾಸಿಕವನ್ನು ಹೊರಡಿಸಿದರು. ಹಿರಿಯ ನಾಟಕಕಾರರು ಹಾಗೂ ಗರೂಡ ಕಂಪನಿಯ ಮಾಲಿಕರಾದ ಗರೂಡ ಸದಾಶಿವರಾಯರು ಅದಕ್ಕೆ ಆರ್ಥಿಕ ಸಹಾಯ ಮಾಡಿದರು.

'ರಂಗಭೂಮಿ'ಯು 'ನೂರಕ್ಕೂ ಮಿಗಿಲಾದ ಪುಟಗಳನ್ನು ಹೊತ್ತು ಕೃತಿರಚನೆ ಹಾಗೂ ರಂಗಪ್ರಯೋಗ, ವಿಮರ್ಶೆ, ರಂಗ ಸಂಶೋಧನೆ, ವ್ಯಕ್ತಿ ಪರಿಚಯ - ಸಂದರ್ಶನ ಮೊದಲಾದ ಎಲ್ಲ ರಂಗ ಪ್ರಕಾರಗಳನ್ನೊಳಗೊಂಡು ಜನಾದರಣೀಯವಾಗಿ ಮೆರೆಯಿತು. ಅಲ್ಲದೆ ಸಮಕಾಲೀನ ಕನ್ನಡ ವೃತ್ತಿ ಮತ್ತು ಹವ್ಯಾಸಿ ರಂಗೇತಿಹಾಸದ ಆಧಾರ ಭಂಡಾರವಾಗಿದ್ದಿತು.

'ರಂಗಭೂಮಿ'ಯನ್ನು 'ಲಲಿತಕಲೆ ಸಾಹಿತ್ಯ ಸಂಬಂಧವಾದ ಸಚಿತ್ರ ಮಾಸಿಕ ಪಹಿ' ಎಂಬುದಾಗಿ ಕರೆಯಲಾಗಿತ್ತು. ಸಪ್ಟೆಂಬರ್ ೧೯೨೫ರಲ್ಲಿ ಮೊದಲ ಸಂಪುಟದ ಮೊದಲ ಸಂಚಿಕೆ ಪ್ರಕಟಗೊಂಡಿತು. ವಾರ್ಷಿಕ ವರ್ಗಣಿ ರೂ. ೩-೮-೦ ಎಂದು ಕರೆಯಲಾಗಿದ್ದು, ಸಪ್ಟೆಂಬರ್ ೧೯೨೫ರಿಂದ ಆಗಸ್ಟ್ ೧೯೨೬ರವರೆಗಿನ ಒಂದು ವರ್ಷದ ಬೈಂಡಾದ ಸಂಪುಟವನ್ನು ಮಾರಾಟಕ್ಕೆ ಬಿಡಲಾಗಿದ್ದು ಅದರ ಬೆಲೆಯನ್ನು ರೂ. ೪-೦-೦ ಎಂದು ನಮೂದಿಸಲಾಗಿತ್ತು.

ಪತ್ರಿಕೆಯ ಮೊದಲ ಪುಟದಲ್ಲಿ 'ನಾಟ್ಯಂ ಭಿನ್ನರುಚೇರ್ಜನಸ್ಯಬಹುಧಾಪ್ಯೇಕಂ ಸಮಾರಾಧನಮ್' ಎಂಬ ಕಾಳಿದಾಸನ ಉಕ್ತಿಯನ್ನು ಪ್ರತೀ ಸಂಚಿಕೆಯಲ್ಲಿ ಉದ್ಧರಿಸಲಾಗುತ್ತಿತ್ತು. ಮೊದಲ ಸಂಚಿಕೆಯ ಎರಡನೇ ಪುಟದಲ್ಲಿ 'ರಂಗಭೂಮಿಯ ಆತ್ಮನಿವೇದನ' ಎಂಬ ಪ್ರಥಮ ಪುರುಷ ಏಕವಚನದ ಮನವಿಯೊಂದು ಇಂತಿದೆ.

'ವಾಚಕ ಮಹಾಶಯ, ನಾನು ತಿಂಗಳಿಗೊಂದು ಬಾರಿ ನಿಮ್ಮ ಭೇಟಿಗಾಗಿ ಬರಲು ನಿಶ್ಚಯಿಸಿರುವೆನು. ಬಂದಾಗ ನನಗೊದಗಿರುವ ದುಸ್ಥಿತಿಯ ನಿವಾರಣೆಯ ಉಪಾಯ ಸೂಚಿಸುವೆನು. ನಾನು ಸರ್ವ ವಿಧದಲ್ಲಿಯೂ ನಿಮ್ಮ ಅಂತಃಕರಣವಾಸಿಯಾಗಿ ನಿಮ್ಮ ಸೇವೆ ಮಾಡಬೇಕೆಂದು ಹೊರಟಿರುವೆನು. ಆದರೆ ನಾನು ಈಗಿನ ಮುದ್ದಾದ ಸ್ವರೂಪದಲ್ಲಿ ಪ್ರತಿ ತಿಂಗಳಲ್ಲಿಯೂ ನಿಮ್ಮ ಬಳಿಗೆ ಬಂದು ಸೇರಲು ನನ್ನ ವಸನಾದಿ ಅಲಂಕಾರಗಳಿಗೆ ಹೆಚ್ಚು ಬೆಲೆಯಾಗುವುದೆಂದು ನನ್ನನ್ನು ನೋಡಿದರೆ ನೀವು ತಿಳಿಯಬಹುದು. ಆದರೆ ಅದರಲ್ಲೊಂದು ಭಾಗವಾದ ಮೂರೇ ಮೂರು ರೂಪಾಯಿ ಖರ್ಚನ್ನು ನೀವು ಕೊಡುವುದು ಮಾತ್ರವಲ್ಲ, ನಿಮ್ಮ ಮಿತ್ರರಿಂದಲೂ ಬಂಧುಗಳಿಂದಲೂ ಸಹಾಯ ಮಾಡಿಸಬೇಕಾಗಿ ಪ್ರಾರ್ಥಿಸುವೆನು.

ಇಂತು ಬಿನ್ನವಿಸುವ

ಶ್ರೀ ರಂಗಭೂಮಿ.

ಮೊದಲ ಸಂಚಿಕೆಯ ೨೪ ಪುಟಗಳು, ಮುಂದೆಯೂ ರಂಗಭೂಮಿ ಅದಕ್ಕೆ ಮಾತ್ರವೇ ತನ್ನ ಆಸಕ್ತಿಯನ್ನು ಸೀಮಿತಗೊಳಿಸಿಕೊಳ್ಳದೇ ಎಲ್ಲ ಬಗೆಯ ಕಲಾ ಪ್ರಕಾರಗಳಿಗೆ ಸ್ಥಳ ನೀಡುತ್ತಿತ್ತು.

ಡಿ.ಕೆ. ಭಾರದ್ವಾಜರು ಏಕಾಂಗಿಯಾಗಿ ಈ ಪತ್ರಿಕೆ ನಡೆಸಿದ್ದು ೧೯೨೫-೨೬ ರಲ್ಲಿ. ಅಂದರೆ ಒಂದು ವರ್ಷ ಮಾತ್ರ. ನಂತರ ಅಮೆಚೂರ್ ಡ್ರಾಮಾ ಅಸೋಸಿಯೇಶನ್‌ನವರ ಪ್ರಯತ್ನದಿಂದ ೧೯೩೨ರಿಂದ ೧೯೩೪ರ ವರೆಗೆ ನಡೆಯಿತು. ಅಂದರೆ ಒಟ್ಟು 'ರಂಗಭೂಮಿಗೆ' ಹತ್ತು ವರ್ಷಗಳ ಜೀವಿತಾವಧಿಯಿದ್ದರೂ ಸತತವಾಗಿ ಅದು ಹೊರಬಂದದ್ದು ಎರಡು - ಮೂರು ವರ್ಷ ಮಾತ್ರ.

ಆದರೆ 'ರಂಗಭೂಮಿ' ಕನ್ನಡ ಪತ್ರಿಕೋದ್ಯಮದಲ್ಲಿ ಹೊಸ ದಾರಿ ತುಳಿಯುವ ಮೂಲಕ ಎಂದೆಂದಿಗೂ ಮಾದರಿಯಾಗಿರುವುದನ್ನು ಅಲ್ಲಗಳೆಯುವಂತಿಲ್ಲ. ಅದರೆಗೆ ಕನ್ನಡದಲ್ಲಿ ಕಲಾ ಪ್ರಕಾರಕ್ಕೆ, ಮುಖ್ಯವಾಗಿ ನಾಟಕ ಕಲೆಗೆ ಮೀಸಲಾಗಿ ಪತ್ರಿಕೆಯೇ ಬಂದುದಿಲ್ಲ.

'ರಂಗಭೂಮಿ'ಯಲ್ಲಿ ಪ್ರಕಟಗೊಂಡ ಲೇಖನಗಳ ಮೇಲೆ ಕಣ್ಣಾಡಿಸಿದರೂ ಅವುಗಳ ಮಹತ್ತ್ವವನ್ನು ತಿಳಿಯಬಹುದು. ೧೯೨೫ರ ಅಕ್ಟೋಬರ್-ನವೆಂಬರ್-ಡಿಸೆಂಬರ್ ಸಂಚಿಕೆಗಳಲ್ಲಿ ಶಾಂತಕವಿಗಳ ನಾಟಕ ಪ್ರೇಮದ ಕುರಿತು ಹುಯಿಲಗೋಳ ನಾರಾಯಣರಾಯರ ಲೇಖನವೂ, ಕೆರೋಡಿ ಸುಬ್ಬರಾಯ ಮತ್ತು ಎಂ.ಜಿ. ವೆಂಕಟೇಶಯ್ಯನವರ ಕನ್ನಡ ರಂಗಭೂಮಿಯ ಇತಿಹಾಸ ಲೇಖನಗಳೂ ಪ್ರಕಟಗೊಂಡಿವೆ. ಆ ಕಾಲದ ರಂಗನಟರಿಗೆ ಹಾಗೂ ರಂಗಭೂಮಿಯ ಸಂಬಂಧ ಇಟ್ಟುಕೊಂಡವರಿಗೆಲ್ಲ ರಂಗಭೂಮಿ ಪತ್ರಿಕೆ ಪ್ರಚಾರದಲ್ಲಿತ್ತು. ಆರ್ಥಿಕವಾಗಿ ಇದು ಯಶಸ್ವಿಯಾಗದಿದ್ದರೂ ದ.ಕೃ. ಭಾರದ್ವಾಜರ ಆಸಕ್ತಿಯ ಹರಹುಗಳನ್ನು ಗಮನಿಸಿದರೆ ರಂಗಭೂಮಿಗಾಗಿ ಅವರ ಕೊಡುಗೆ ಮಹತ್ತ್ವದ್ದೆನಿಸುತ್ತದೆ.

೧೯೨೬ರಲ್ಲೇ 'ಮೈಸೂರು ರಂಗಭೂಮಿ' ಪತ್ರಿಕೆಯೊಂದು ಇದ್ದುದಾಗಿ ಕಂಡು ಬರುತ್ತದೆ. ಆದರೆ ಬೇರೆಲ್ಲೂ ಇದು ದಾಖಲಾಗಿಲ್ಲ. ಯಾರು ಸಂಪಾದಕರಾಗಿದ್ದರು ಎಂಬುದೂ ತಿಳಿದಿಲ್ಲ. ಭಾರದ್ವಾಜರ ರಂಗಭೂಮಿ (೧೯೨೫)ಯಿಂದ ಪ್ರೇರಿತರಾಗಿ ರಂಗಾಸಕ್ತರು ಯಾರೋ ಈ ಪತ್ರಿಕೆಯ ಪ್ರಯತ್ನ ಮಾಡಿರಬಹುದೆಂದು ನಂಬಬಹುದು.

ಕನ್ನಡ ರಂಗಭೂಮಿಯಲ್ಲಿ, ಬಹುಕಾಲ ನಿಂತ ರಂಗಪತ್ರಿಕೆಗಳು ಕಡಿಮೆಯಾದರೂ ಅಲ್ಲಲ್ಲಿ ಆಗೀಗ ಬಂದು ಹೋದ ರಂಗಪತ್ರಿಕೆಗಳ ಪಟ್ಟಿ ದೀರ್ಘವಾಗಿಯೇ ಇದೆ. ಬಳ್ಳಾರಿಯ ಕನ್ನಡ ನಾಟಕ ಕಲಾ ಪರಿಷತ್ತಿನ 'ಕಲಾ' (೧೯೩೦) ಅಂಥ ಒಂದು ಪತ್ರಿಕೆ.

## ಇತರ ಕಲೆಗಳು

ಆದರೆ ಕನ್ನಡದಲ್ಲಿ ಬಂದ ವಿವಿಧ ಕಲಾ ವಿಷಯಕ ಪತ್ರಿಕೆಗಳ ಪೈಕಿ, ಗುಣಮಟ್ಟದ ದೃಷ್ಟಿಯಿಂದ ಹಾಗೂ ಚಾರಿತ್ರಿಕವಾಗಿ ಮಹತ್ತ್ವದ ಸ್ಥಾನ ಕಲಾ ಮಂದಿರದ ಅ.ನ. ಸುಬ್ಬರಾಯರು ಪ್ರಕಟಿಸಿದ 'ಕಲಾ' ಪತ್ರಿಕೆಗೆ. ಲಲಿತಕಲೆಗಳಿಗೆ ಮೀಸಲಾಗಿದ್ದ ಈ ಮಾಸಪತ್ರಿಕೆ ೧೯೩೦ರ ಮಾರ್ಚ್ ತಿಂಗಳಲ್ಲಿ ಆರಂಭವಾಗಿ ನಡುನಡುವೆ ನಿಯತವಾಗಿ ಪ್ರಕಟಗೊಳ್ಳದಿದ್ದರೂ ಒಟ್ಟಿನಲ್ಲಿ ೨೬ ವರ್ಷ ಬದುಕಿ ದಾಖಲೆ ಮಾಡಿದೆ.

ಈ ಪತ್ರಿಕೆಯ ಮೊದಲ ಸಂಚಿಕೆಯಲ್ಲಿ "ಕಲೆಯ ಖನಿಯಂತಿದ್ದ ಕರ್ನಾಟಕದಲ್ಲಿ ಕಲೆಗಳು ಗಳಿತಾವಸ್ಥೆಯಲ್ಲಿದ್ದು ತಕ್ಕ ವ್ಯವಸಾಯವಿಲ್ಲದೆ ಸೊರಗುತ್ತಿವೆ. ಜನಸಾಮಾನ್ಯರಲ್ಲಿ ಕಲಾಭಿಮಾನವೂ ಉದ್ಯೋಗತತ್ಪರತೆಯೂ ಅಳಿಸಿಹೋಗಿರುವುದು. ಇಂಥ ಪರಿಸ್ಥಿತಿಯಿಂದ ಪಾರಾಗಿ ಕರ್ನಾಟಕದ ಕೀರ್ತಿಯನ್ನುಳಿಸಲು ವಿದ್ಯಾವಂತರೂ ಕಲಾಭಿಮಾನಿಗಳೂ ನಡೆಸಬೇಕಾದ ಕಾರ್ಯಗಳು ಅನೇಕವಿವೆ ಎಂಬುದನ್ನು ಮನಗಂಡು, ಈ ಕ್ಷೇತ್ರದಲ್ಲಿ ಅಳಿಲು ಭಕ್ತಿ ಮಳಲು ಸೇವೆ ಮಾಡಲು ಈ ಪತ್ರಿಕೆಯನ್ನು ಸ್ಥಾಪಿಸುತ್ತಿದ್ದೇವೆ" ಎಂಬುದಾಗಿ ಸಂಪಾದಕ ಅ. ನ. ಸುಬ್ಬರಾಯರು ನುಡಿದಿದ್ದಾರೆ.

ಪತ್ರಿಕೆಯನ್ನು 'ವಿದ್ಯಾ, ಲಲಿತಕಲೆ, ರಂಗಭೂಮಿ ಮತ್ತು ಕುಶಲ ವಿದ್ಯೆಗಳ ಮಾಸಪತ್ರಿಕೆ' ಎಂದು ಕರೆಯಲಾಗಿತ್ತು. ಮೂಲತಃ ಅ. ನ. ಸುಬ್ಬರಾಯರು ಕಲಾವಿದರಾದ್ದರಿಂದ ಪತ್ರಿಕೆಯ ಒಲವು ಚಿತ್ರಕಲೆಯ ಕಡೆಗಿತ್ತು. ಆ ಕಾಲದ ಮಹಾನ್ ಲೇಖಕರೆಲ್ಲ ಕಲಾ ಪತ್ರಿಕೆಯ ಲೇಖಕರ ಬಳಗಕ್ಕೆ ಸೇರಿದವರಾಗಿದ್ದರು.

ಬಿ. ವಿ. ಕೃಷ್ಣಮೂರ್ತಿಯವರ ಸಂಪಾದಕತ್ವದಲ್ಲಿ 'ಕಲಾನಿವೇದನ' ಎಂಬ ಪತ್ರಿಕೆ ೧೯೨೯ ರಲ್ಲಿ ಪ್ರಕಟಗೊಂಡಿತು. ಆರ್. ಜಿ. ಶೆಣೈಯವರ ಸಂಪಾದಕತ್ವದಲ್ಲಿ 'ಕಲಾಚಂದ್ರ' ಎಂಬ ವಾರಪತ್ರಿಕೆ ಕಾರ್ಕಳದಿಂದ ೧೯೩೩ರಲ್ಲಿ ಪ್ರಕಟಗೊಂಡು, ಎರಡು ವರ್ಷ ಅಂದರೆ ೧೯೩೫ರವರೆಗೆ ಪ್ರಕಟಣೆಯಲ್ಲಿದ್ದುದಾಗಿ ತಿಳಿದುಬರುತ್ತದೆ. ೧೯೪೭ರಲ್ಲಿ ಮಂಗಳೂರಿನಿಂದ ಎಂ.ಎಸ್. ಶೆಟ್ಟಿಯವರ ಸಂಪಾದಕತ್ವದಲ್ಲಿ 'ಕಲಾವಿದ' ಎಂಬ ಮಾಸಪತ್ರಿಕೆ ಪ್ರಕಟಗೊಂಡಿತು. ಈ ಮೇಲಿನ ಮೂರು ಪತ್ರಿಕೆಗಳು 'ಕಲಾ' ಎಂಬ ಅಭಿದಾನವನ್ನು ಬಳಸಿಕೊಂಡಿದ್ದರೂ ವಾಸ್ತವವಾಗಿ ಇವು ಕಲೆಗೆ ಮೀಸಲಾದ ಪತ್ರಿಕೆಗಳೇ ಎಂಬ ಬಗ್ಗೆ ಸ್ಪಷ್ಟ ಮಾಹಿತಿಗಳಿಲ್ಲ. ಕರ್ನಾಟಕ ರಾಜ್ಯ ಗೆಜೆಟಿಯರಿನಲ್ಲಿ ಈ ಪತ್ರಿಕೆಗಳ ದಾಖಲೆ ಸಿಕ್ಕುವುದು ಬಿಟ್ಟರೆ ಹೆಚ್ಚಿನ ವಿಷಯಗಳು ದೊರೆಯುತ್ತಿಲ್ಲ.

## 'ತಮಾಷ್'

'ತಮಾಷಾ' ಮರಾಠಿಯಲ್ಲಿ ಜನಪ್ರಿಯ ನಾಟ್ಯರೂಪ. ಮರಾಠಿಯ ರಂಗಭೂಮಿಯ ಹಾಗೆ ತಮಾಷ್ ರಂಗಭೂಮಿಯೂ ಪ್ರಸಿದ್ಧವಾಗಿದೆ

'ತಮಾಷ್' ಎಂಬ ಹೆಸರು ಹೊತ್ತ ಮಾಸಪತ್ರಿಕೆಯೊಂದು ಕನ್ನಡದಲ್ಲಿ ೧೯೪೨ರಲ್ಲಿ ಪ್ರಕಟಗೊಂಡು, ಒಂದು ದಶಕಕ್ಕೂ ಹೆಚ್ಚು ಕಾಲ ನಡೆದು ೧೯೫೩ರಲ್ಲಿ ನಿಂತುಹೋಗಿದ್ದು ದಾಖಲಾಗಬೇಕು. 'ತಮಾಷ್' ಹಾಸ್ಯ ಪತ್ರಿಕೆಯಲ್ಲ. ಅಚ್ಚ ಕಲಾ ಪತ್ರಿಕೆ. ಲಲಿತ ಕಲೆಗೆ, ರಂಗಭೂಮಿಗೆ ಮೀಸಲಾದ ಏಕೈಕ ಮಾಸಪತ್ರಿಕೆಯೆಂದು ತನ್ನನ್ನು ಕರೆದುಕೊಂಡಿತ್ತು.

'ತಮಾಷ್' ಪತ್ರಿಕೆಯ ಸ್ಥಾಪಕರು ಹಾಗೂ ಸಂಪಾದಕರು ಎ.ಎಸ್. ಮಾಧವರಾಯರು. ಅವರು ವೃತ್ತಿರಂಗಭೂಮಿಯ ಹಿರಿಯ ನಟರು. ಹಾಸ್ಯ ನಟರಾದ ಮಹಮದ್ ಪೀರರ ಜೊತೆ ಪಾಲ್ಗೊಳ್ಳುತ್ತಿದ್ದ ಮಾಧವರಾಯರು ಸದಭಿರುಚಿಯ ಹಾಸ್ಯ ಪಾತ್ರಗಳಿಗೆ ಜೀವ ತುಂಬುತ್ತಿದ್ದರು.

ವೃತ್ತಿ ರಂಗಭೂಮಿಗೆ ಮೀಸಲಾಗಿಯೇ ಮಾಧವರಾಯರು 'ತಮಾಷ್' ಪತ್ರಿಕೆಯನ್ನು ೧೯೪೨ರ ಏಪ್ರಿಲ್‌ನಲ್ಲಿ ಹೊರತಂದರು. ಆಗ ಅದು ವಾರಪತ್ರಿಕೆಯಾಗಿದ್ದಿರಬೇಕು. ಆಗಿನ ಪತ್ರಿಕೆಯ ಬಗ್ಗೆ ಹೆಚ್ಚಿನ ವಿವರಗಳು ಅಲಭ್ಯ. ಮಾಧವರಾಯರು ಔಷಧ ಕಂಪನಿಯ ಪ್ರತಿನಿಧಿಯಾಗಿ ಬೆಂಗಳೂರಿಗೆ ಹೋದ ಮೇಲೆ ಪತ್ರಿಕೆಯೂ ಮೈಸೂರಿನಿಂದ ಬೆಂಗಳೂರಿಗೆ ವರ್ಗಾವಣೆಗೊಂಡು ಮಾಧವರಾಯರ ತಮ್ಮ ಅನಂತಪದ್ಮನಾಭರಿಂದ ನಡೆಸಲ್ಪಡುತ್ತಿತ್ತು. ೧೯೫೩ರವರೆಗೆ ಹೀಗೇ ನಡೆದುಕೊಂಡು ಬಂತು.

ನಂತರ ಮಾಧವರಾಯರು ಗದಗ ಸೇರಿದ ಮೇಲೆ ೧೯೬೧ರಲ್ಲಿ 'ತಮಾಷ್' ಮರುಹುಟ್ಟು ಪಡೆಯಿತು. ಆಗ ಅದು ಮಾಸಪತ್ರಿಕೆಯಾಗಿ ೧/೪ ಕ್ರೌನ್ ಆಕಾರದ ೩೦-೩೬ ಪುಟಗಳ ಸಂಚಿಕೆ. ಪ್ರತಿ ಸಂಚಿಕೆಯಲ್ಲೂ ಸಂಪಾದಕೀಯ, ಪ್ರಶ್ನೋತ್ತರ, 'ತಿಪ್ಪ ನೋಡಿದ ನಾಟಕ, ಬೆಪ್ಪನೂ ನಾಟಕ ನೋಡಿದ' ಹಾಗೂ 'ಮಾಸ ಭವಿಷ್ಯ'ಗಳು ಸ್ಥಿರಶೀರ್ಷಿಕೆಗಳಾಗಿದ್ದವು. ಶಿಲ್ಪ, ಸಂಗೀತ, ನಾಟ್ಯದ ಬಗ್ಗೆ ಲೇಖನಗಳು ವಿಮರ್ಶೆಗಳು ಪ್ರಕಟವಾಗಿವೆ. ಅಂದಿನ ವೃತ್ತಿ ನಾಟಕಗಳು ಕಂಪನಿಗಳು ಎಲ್ಲಿ ಮೊಕ್ಕಾಂ ಮಾಡಿವೆ? ಪ್ರದರ್ಶಿಸುತ್ತಿರುವ ನಾಟಕಗಳು ಯಾವುವು? ಎಂಬ ಸುದ್ದಿಯೂ ಇರುತ್ತಿತ್ತು. 'ತಿಪ್ಪ ನೋಡಿದ ನಾಟಕ' ಹಾಗೂ 'ಬೆಪ್ಪನೂ ನಾಟಕ ನೋಡಿದ' ಎಂಬ ಶೀರ್ಷಿಕೆಗಳ ಬರಹಗಳಲ್ಲಿ ಅಂದಿನ ನಾಟಕ ವಸ್ತು, ಪ್ರಯೋಗಾಂಶಗಳ ಲೋಪ ದೋಷಗಳ ವಿಡಂಬನೆಯನ್ನು ಕಾಣಬಹುದಾಗಿದೆ.

ಮಾಧವರಾಯರಿಗೆ ಜೀವನದ ಹಲವು ಕ್ಷೇತ್ರಗಳ ವ್ಯಕ್ತಿ, ಸಂಸ್ಥೆಗಳ ಸಂಪರ್ಕವಿತ್ತು. ಹೀಗಾಗಿ ಪುಸ್ತಕ ಮಾರಾಟಗಾರರು, ಚಲನಚಿತ್ರ ಸಂಸ್ಥೆಗಳವರು, ನಾಟಕ ಸೀನರಿಗಳ ಮಾಲೀಕರು ಮುಂತಾದವರು 'ತಮಾಷ್' ಪತ್ರಿಕೆಗೆ ಜಾಹೀರಾತು ನೀಡಿ ಪ್ರೋಪಿಸುತ್ತಿದ್ದರು. ಹೀಗಾಗಿ ಪತ್ರಿಕೆ ಲೇಖನ ಹಾಗೂ ಜಾಹೀರಾತುಗಳಿಂದ ಮೈದುಂಬಿ ಪ್ರಕಟಗೊಳ್ಳುತ್ತಿತ್ತು.

ಎರಡನೇ ಬಾರಿ 'ತಮಾಷ್' ಎಷ್ಟು ವರ್ಷ ಮುಂದುವರೆಯಿತೋ ಸ್ಪಷ್ಟವಾಗಿಲ್ಲ. ಕನಿಷ್ಠ ಎರಡು ಮೂರು ವರ್ಷ ಪ್ರಕಟಗೊಂಡಂತಿದೆ. ಪತ್ರಿಕೆಯಿಂದಾಗಿ ಮಾಧವರಾಯರು 'ತಮಾಷ್ ಮಾಧವರಾಯರು' ಎಂದೇ ಕನ್ನಡ ರಂಗಭೂಮಿಯಲ್ಲಿ ಹೆಸರು ಉಳಿಸಿಕೊಂಡರು.

## ಸಂಗೀತಪತ್ರಿಕೆಗಳು

ಕಲೆಯಲ್ಲಿ ಸಂಗೀತಕ್ಕೆ ಮಹತ್ತ್ವದ ಸ್ಥಾನ. ಮನಸ್ಸನ್ನು ಮುದಗೊಳಿಸಲು ಸಂಗೀತ ಬೇಕು. ಸಂಗೀತ ಶಬ್ದವೇ ಸೂಚಿಸುವಂತೆ ಮಧುರವಾದ ಹಾಡು. ಯಾವುದೇ ಭಾಷೆಯ ಹಂಗಿಲ್ಲದೇ, ಋಣವಿಲ್ಲದೇ ಸಂಗೀತ ಹೃದಯಗಳನ್ನು ಮುಟ್ಟಬಲ್ಲದು. ಲಲಿತಕಲೆಗಳ ಅವಿಭಾಜ್ಯ ಅಂಗವಾದ ಸಂಗೀತಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಸಾಹಿತ್ಯ ಸಮೃದ್ಧವಾಗಿದೆ. ಕರ್ನಾಟಕ ಸಂಗೀತ ಹಾಗೂ ಹಿಂದೂಸ್ಥಾನೀ ಸಂಗೀತಗಳೆರಡೂ ಪ್ರಚಲಿತವೂ ಜನಪ್ರಿಯವೂ ಆಗಿರುವ ಕರ್ನಾಟಕದಲ್ಲಿ ಈ ಪ್ರಕಾರಗಳ ಮೂಲ ಪಾಠಗಳೂ, ಮೀಮಾಂಸೆಗಳೂ, ಹಿರಿಯ ಕಲಾವಿದರುಗಳ ಜೀವನ ಚಿತ್ರಣಗಳೂ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ.

ಆದರೆ ಸಂಗೀತ ಪತ್ರಿಕೆಗಳ ದೃಷ್ಟಿಯಿಂದ ಕಳೆದ ೧೫೦ ವರ್ಷಗಳ ಕನ್ನಡ ಪತ್ರಿಕೋದ್ಯಮ ಚರಿತ್ರೆಯಲ್ಲಿ ಹೇಳಿಕೊಳ್ಳುವಂತಹ ಸಾಧನೆಯೇನೂ ಆಗಲಿಲ್ಲ. ೧೯೫೦ರಲ್ಲಿ ಮಂಡ್ಯದಿಂದ ಬಂದ 'ಗಾನವಾಹಿನಿ', ೧೯೫೪ರಲ್ಲಿ ಬೆಂಗಳೂರಿನಿಂದ ಬಂದ 'ಗಾಯನ ಗಂಗಾ' ಪತ್ರಿಕೆಗಳು ಸಂಗೀತ ಕಲೆಗೆ ಮೀಸಲಾಗಿ ಬಂದಿದ್ದ ಗಮನಾರ್ಹ ಪತ್ರಿಕೆಗಳು. 'ಗಾಯನ ಸಾಮ್ರಾಜ್ಯ' ಎಂಬ ಮಾಸಿಕವೊಂದು ಬೆಂಗಳೂರಿನಿಂದಲೂ ಬಂದುದಾಗಿ ರಾಜ್ಯ ಗೆಜೆಟಿಯರ್‌ನಲ್ಲಿ ಹೇಳಲಾಗಿದೆ.

## 'ಗಾನವಾಹಿನಿ'

'ಗಾಯನ ಗಂಗಾ' ಬಹುಕಾಲ ಬಾಳಿ ಬದುಕಿದ ಏಕೈಕ ಸಂಗೀತ ಪತ್ರಿಕೆಯಾದರೂ ಅದು ಸಂಗೀತಕ್ಕೆ ಮೀಸಲಾಗಿ ಕನ್ನಡದ ಮೊದಲ ಪ್ರಯತ್ನವೇನೂ ಅಲ್ಲ.

'ಗಾನವಾಹಿನಿ' ಎಂಬ ಹೆಸರಿನ ಪತ್ರಿಕೆಯೊಂದು 'ಗಾಯನ ಗಂಗಾ'ಕ್ಕಿಂತ ನಾಲ್ಕು ವರ್ಷ ಮೊದಲು, ಅಂದರೆ ೧೯೫೦ರಲ್ಲಿ ಮಂಡ್ಯದಿಂದ ಪ್ರಕಟವಾಗಿದೆ. ಇದು ಮಾಸಪತ್ರಿಕೆಯಾಗಿತ್ತು. ಕೆ. ಎಸ್. ಚಂದ್ರಶೇಖರಯ್ಯನವರು ಈ ಪತ್ರಿಕೆಯ ಸಂಪಾದಕರು. ಚಂದ್ರಶೇಖರಯ್ಯನವರು ಮಂಡ್ಯದ ಶ್ರೀ ಸದ್ಗುರು ಸಂಗೀತ ಪಾಠಶಾಲೆಯ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಪತ್ರಿಕೆ ೧/೮ ಡೆಮಿ ಆಕಾರದಲ್ಲಿದ್ದು ದ್ವೈಮಾಸಿಕವಾಗಿತ್ತು. ೩೨ ಪುಟಗಳಿರುತ್ತಿದ್ದವು. ಜುಲೈ-ಆಗಸ್ಟ್ ೧೯೫೭ರ ಸಂಚಿಕೆಯಲ್ಲಿ ಜಾಹೀರಾತು ದರಗಳನ್ನು ಘೋಷಿಸಿದ್ದು ಅದು ಇಂಗ್ಲೀಷಿನಲ್ಲಿದೆ.

'ಗಾನವಾಹಿನಿ' ಹೆಸರಿನ ಕೆಳಗೆ 'ತಾಳನೋ ಹರಿ! ಕೇಳನೋ! ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ' ಎಂಬ ಪುರಂದರದಾಸರ ವಾಣಿಯನ್ನು ಪ್ರತಿ ಸಾರಿಯೂ ಅಚ್ಚು ಮಾಡಲಾಗುತ್ತಿತ್ತು. ವಾರ್ಷಿಕ ಚಂದಾ ೧೯೫೭ರಲ್ಲಿ ಐದು ರೂಪಾಯಿ ಇದ್ದು,ಬಿಡಿ ಪತ್ರಿಕೆಗೆ

ಆರು ಆಣೆ ಎಂದು ಸಾರಲಾಗಿದೆ. ಡಿಸೆಂಬರ್ ೧೯೫೭ಕ್ಕೆ ಧನ್ವಂತರಿ ದೇವಿಯ ವಿಶೇಷ ವರ್ಣಚಿತ್ರವನ್ನು ಆ ತಿಂಗಳು ಪ್ರಕಟಿಸಲಾಗಿದೆ. ಗಾನವಾಹಿನಿಯ ವಿಶೇಷಾಂಕ ಹೊರತರುವ ಸಂದರ್ಭದಲ್ಲಿ (ಡಿಸೆಂಬರ್ ೧೯೫೭) ಸಂಗೀತ ಕಲೆಯ ಕುರಿತಾಗಿ ರಾಜ್ಯಮಟ್ಟದ ಲೇಖನಸ್ಪರ್ಧೆಯನ್ನು ನಡೆಸಿದ ಹೆಗ್ಗಳಿಕೆಯೂ 'ಗಾನವಾಹಿನಿ'ಗೆ ಇದೆ.

ಹತ್ತು ವರ್ಷ ನಿರಂತರವಾಗಿ ನಡೆದ ಗಾನವಾಹಿನಿ ನಂತರ ನಿಂತಿತು. ತನ್ನೆಲ್ಲಾ ಪ್ರಯತ್ನಗಳ ನಡುವೆಯೂ 'ಗಾನವಾಹಿನಿ' ಸ್ವಯಂ ಬಲದಿಂದ ನಡೆಯದಿರುವುದರ ಬಗ್ಗೆ ಚಂದ್ರಶೇಖರಯ್ಯನವರಿಗೆ ಅತೀವ ವಿಷಾದವಿತ್ತು. ಅದನ್ನು ಅವರು, ಪತ್ರಿಕೆಗೆ ಐದು ವರ್ಷವಾಗಿದ್ದಾಗಲೇ ಹೀಗೆ ತೋಡಿಕೊಂಡಿದ್ದಾರೆ :

> 'ಕೇವಲ ಸಾಂಸ್ಕೃತಿಕ ಜೀವನಕ್ಕೆ ಸಂಬಂಧ ಪಟ್ಟ ವಿಷಯಗಳನ್ನು ವಿಮರ್ಶಿಸಿ ಕಿವಿಗೆ ಕೇಳಿಸಿದರೂ, ಕಣ್ಣಿಗೆ ಕಾಣದ ಕಲೆಯ ಬಗ್ಗೆ ಟೀಕೆ ಟಿಪ್ಪಣಿಗಳೂ, ಸುದ್ದಿ ಸಂಗ್ರಹಗಳೂ ವಿಮರ್ಶೆ ವಿವರಗಳೂ, ಲೇಖನಗಳೂ ಇತ್ಯಾದಿಗಳ ಪ್ರಕಟಣೆಗಾಗಿ ಮೀಸಲಾಗಿರುವ ಗಾನವಾಹಿನಿಯು ಮಾರುಕಟ್ಟೆಯ ಮೂರುಕಾಸಿನ ಪತ್ರಿಕೆಯಂತೆ ಮಾರಾಟವಾಗುವ ಭಾಗ್ಯ ಪಡೆದಿಲ್ಲ. ಪತ್ರಿಕಾ ಪ್ರಪಂಚದ ಪರಿಪಾಟಲಿನ ಪಾಡನ್ನು ಪ್ರತ್ಯಕ್ಷವಾಗಿ ಅನುಭವಿಸಿದವರಿಗೆ ಮಾತ್ರ ಪ್ರಕಟಣೆಯ ಬವಣೆ ಅರ್ಥವಾದೀತು. ಪತ್ರಿಕಾ ಪ್ರಕಟಣೆಗೆ ಬೇಕಾದ ಮುದ್ರಣ ಸೌಕರ್ಯ, ಕಾಗದ ಇವೆರಡೂ ಪ್ರಕಾಶನ ಸಂಸಾರಕ್ಕೆ ಸೇರಿದ ಎರಡು ಆನೆಗಳು. ಈ ಆನೆಗಳಿಗೆ ಬೇಕಾದ ಆಹಾರ ಸಾಮಗ್ರಿ, ಕಾಲಕಾಲಕ್ಕೆ ಒದಗಿಸುವುದು ಮುಖ್ಯ ಸಮಸ್ಯೆ. ಇವೆಲ್ಲಕ್ಕೂ ಬೇಕಾದ ಹಣದ ಸೌಲಭ್ಯವೊಂದಿಲ್ಲದಿದ್ದರೆ ಕಾಲು ಮುರಿದ ಕುಂಟೆತ್ತಿನಂತೆ ಎಡವುತ್ತಾ ಬೀಳುತ್ತಾ ಕುಂಟಿಸಿಕೊಂಡು ನಡೆಯುವಂತಾಗುತ್ತದೆ.

'ಗಾನವಾಹಿನಿ'ಯ ಪ್ರತಿ ತಿಂಗಳ ಒಟ್ಟು ಖರ್ಚು ಸುಮಾರು ಒಂದು ನೂರಕ್ಕೆ ಕಮ್ಮಿ ಇಲ್ಲದಂತೆ ಆಗುತ್ತದೆ. ಈ ಖರ್ಚಿನ ಅರ್ಧಭಾಗ ಮಾತ್ರ ಸರ್ಕಾರಿ ಮತ್ತು ಇತರ ಖಾಸಗಿ ಜಾಹೀರಾತಿನಿಂದಲೂ, ಕೇವಲ ಹತ್ತಾರು ಮಂದಿ ಅಭಿಮಾನಶಾಲಿಗಳಾದ ಚಂದಾದಾರರಿಂದಲೂ ದೊರೆತು, ಉಳಿದ ಅರ್ಧ ಖರ್ಚು 'ಗಾನವಾಹಿನಿ' ಸಂಪಾದಕರ ಪಾಲಿಗೆ ಬೀಳುತ್ತದೆ. ಪ್ರತಿ ತಿಂಗಳು ಸರಾಸರಿ ೩೦ ರೂಪಾಯಿಗೆ ಕಮ್ಮಿ ಇಲ್ಲದೆ ಸಂಗೀತ ಮಾಸಪತ್ರಿಕೆಗೆ ತಮ್ಮ ತನು, ಮನದ ಜೊತೆಗೆ ಧನವನ್ನೂ ಕೊಟ್ಟು, ಸಂಗೀತ ಕಲಾ ಸೇವೆಯನ್ನೂ ಮಾಡುತ್ತಿರುವ ಕಲಾಭಿಮಾನದ ಹುಚ್ಚು ಎಲ್ಲಿಯವರೆಗೂ ಇರುತ್ತದೋ ಆ ವರೆಗೂ ಸಂಗೀತ ಮಾಸಪತ್ರಿಕೆ ನಡೆದು, ಹುಚ್ಚುಬಿಟ್ಟ ಮರುಘಳಿಗೆಯಲ್ಲಿ 'ಗಾನವಾಹಿನಿ'ಯ ಮಂಗಳ ಹಾಡುವಂತಾಗುವುದೋ ಎಂಬ ಭೀತಿಯುಂಟಾಗಿದೆ."

ಸಂಪಾದಕ ಚಂದ್ರಶೇಖರಯ್ಯನವರ ಆತಂಕವು ನಿಜವಾಗಿ ಪತ್ರಿಕೆಯು ನಿಂತಿತು. ಆದರೆ ಅವರು ಬರೆದ ಮೇಲಿನ ಸಂಪಾದಕೀಯ ಮಾತ್ರ ಈ ಮಾದರಿಯ ವಿಶೇಷಾಸಕ್ತಿ ಪತ್ರಿಕೆಗಳ ಸ್ಥಿತಿಗತಿ, ಪ್ರವೃತ್ತಿಪರತೆಗಳ ಮೇಲೆ ಬರೆದ ಭಾಷ್ಯದಂತಿದೆ.

## 'ಗಾಯನ ಗಂಗಾ'

'ಕನ್ನಡ ನಾಡಿನ ಏಕೈಕ ಸಂಗೀತ ಮಾಸಪತ್ರಿಕೆ' ಎಂಬ ಹೆಮ್ಮೆಯ **'ಗಾಯನ ಗಂಗಾ'** ಆರಂಭವಾದುದು ೧೯೫೪ರಲ್ಲಿ. ಅಂದರೆ **'ಗಾನವಾಹಿನಿ'** ಇನ್ನೂ ಪ್ರಕಟಣೆಯಲ್ಲಿರುವಾಗಲೇ. ಬೆಂಗಳೂರಿನ ಅರವಿಂದ ಸಂಗೀತ ವಿದ್ಯಾಲಯದ ವತಿಯಿಂದ ನಡೆಸಲ್ಪಡುವ ಈ ಪತ್ರಿಕೆಗೆ ಗವಾಯಿ ಪರಂಪರೆಯ ಹಿರಿಯ ಸಂಗೀತ ವಿದ್ವಾಂಸರಾದ ಪಂಡಿತ ಆರ್. ವಿ. ಶೇಷಾದ್ರಿ ಗವಾಯಿಗಳು ಸಂಪಾದಕ, ಪ್ರಕಾಶಕ ಹಾಗೂ ಮುದ್ರಕರು.

**'ಗಾಯನ ಗಂಗಾ'** ಸಂಗೀತ ಸಾಹಿತ್ಯ ಪತ್ರಿಕೆ. ಅಂದರೆ ಸಂಗೀತಕ್ಕೆ ಸಂಬಂಧಿಸಿದ ಸಾಹಿತ್ಯ ಸಾಮಗ್ರಿಗಳಿಗೆ ಈ ಪತ್ರಿಕೆಯಲ್ಲಿ ಆದ್ಯತೆ ನೀಡಿ ಪ್ರಕಟಿಸಲಾಗುತ್ತದೆ. ಕನ್ನಡ ನಾಡಿನ ಪ್ರಾಚೀನ ಹಾಗೂ ಅರ್ವಾಚೀನ ಸಂಗೀತ ವಿದ್ವಾಂಸರು ಹಾಗೂ ಹಿರಿ ಕಿರಿಯ ಕಲಾವಿದರ ಪರಿಚಯಗಳನ್ನೂ ಇದು ಒಳಗೊಂಡಿರುತ್ತದೆ. 'ಕನ್ನಡದಲ್ಲಿ ಸಂಗೀತ ಪತ್ರಿಕೆಯೊಂದರ ಕೊರತೆಯನ್ನು ಇದು ನೀಗಿಸಿದೆ' ಎಂಬುದಾಗಿ ಮೊದಲ ಸಂಚಿಕೆಯಲ್ಲಿ ಸಂಪಾದಕ ಗವಾಯಿಯವರು ಹೇಳಿಕೊಂಡಿದ್ದರು.

'ಗಾಯನ ಗಂಗಾ' ಸಂಗೀತದ ಅನನ್ಯ ಪತ್ರಿಕೆ ಮಾತ್ರವಲ್ಲ ಸಾಂಸ್ಕೃತಿಕ ರಂಗದಲ್ಲಿ ಅತಿ ಹೆಚ್ಚು ವರ್ಷ ತನ್ನ ಅಸ್ತಿತ್ವವನ್ನು ಉಳಿಸಿಕೊಂಡ ಪತ್ರಿಕೆ. ಸದ್ದಿಲ್ಲದೇ ತನ್ನ ಪಾಡಿಗೆ ತಾನು ಕನ್ನಡದ ಸೇವೆಯನ್ನು ಗೈದಿದೆ. ೧೯೮೨ರಲ್ಲಿ **'ಗಾಯನ ಗಂಗಾ'** ಪತ್ರಿಕೆಯ ರಜತೋತ್ಸವ ಸಂಚಿಕೆಯೂ ಹೊರಬಂದಿದೆ. ೫೪ ಪುಟಗಳ ೧/೮ ಡೆಮಿ ಆಕಾರದ ಗಾಯನ ಗಂಗಾ ಮುಖ್ಯವಾಗಿ ಬೆಂಗಳೂರಿನ ಹಾಗೂ ಸ್ಥೂಲವಾಗಿ ರಾಜ್ಯಾದ್ಯಂತದ ಸಂಗೀತ/ಸಾಂಸ್ಕೃತಿಕ ಮಹತ್ವದ ಸುದ್ದಿಗಳನ್ನು ಪ್ರಕಟಿಸುತ್ತದೆ. ಹಾಗಂತ ಕರ್ನಾಟಕ ಸಂಗೀತವನ್ನೇನೂ ಪತ್ರಿಕೆ ಕಡೆಗಣಿಸಿಲ್ಲ. ಹಾಗೆಯೇ ಕಲಾವಿದರ ಪರಿಚಯಗಳನ್ನೂ ಮಾಡಿಕೊಡುತ್ತದೆ. ೧೯೮೨ರಲ್ಲಿ ಗಾಯನ ಗಂಗಾದ ಬಿಡಿ ಪತ್ರಿಕೆಯ ಬೆಲೆ ೧.೫೦ ರೂಪಾಯಿ.

ಕಲಾ ಪತ್ರಿಕೆಗಳು ಕನ್ನಡ ಜನಮಾನಸದಲ್ಲಿ ಮರೆಯಲಾಗದ ಗುರುತು ಮಾಡತೊಡಗಿದ್ದು ಸ್ವಾತಂತ್ರ್ಯದ ಬಳಿಕವೇ. ೧೯೫೪ರಲ್ಲಿ ಧಾರವಾಡದ ಬಳಿಯ ಹಂಸಭಾವಿಯಿಂದ 'ನೃತ್ಯಭಾರತ' ವೆಂಬ ನೃತ್ಯಕ್ಕೆ ಮೀಸಲಾದ ಪತ್ರಿಕೆ ಪ್ರಕಟಗೊಂಡರೆ, ಅದೇ ಹೊತ್ತಿಗೆ ಧಾರವಾಡದಿಂದ 'ನೃತ್ಯಭಾರತಿ' ಪ್ರಕಟವಾಗಿದೆ.

'ನೃತ್ಯಭಾರತಿ'ಗೆ ನಾಟ್ಯಾಚಾರ್ಯ ಮಲ್ಲಾರಿ ಎಂ. ಕುಲಕರ್ಣಿಯವರು ಸಂಪಾದಕರಾಗಿದ್ದರು. 'ನೃತ್ಯಭಾರತ'ಕ್ಕೆ ನಾಟ್ಯಾಚಾರ್ಯ ಶ್ರೀನಿವಾಸ ಕುಲಕರ್ಣಿಯವರು ಕಾರಣರು. ಈ ಪತ್ರಿಕೆಗಳ ಬಗ್ಗೆ ಹೆಚ್ಚಿನ ಯಾವುದೇ ಮಾಹಿತಿ ದೊರೆಯುತ್ತಿಲ್ಲ. ಕರ್ನಾಟಕ ರಾಜ್ಯ ಗೆಜೆಟಿಯರ್‌ನಲ್ಲಿ ಮಾತ್ರ ಪ್ರತ್ಯೇಕವಾಗಿ ಈ ಪತ್ರಿಕೆಗಳ ಉಲ್ಲೇಖವಿದ್ದು ಬೇರೆಲ್ಲೂ ಈ ಪತ್ರಿಕೆಗಳ ಪ್ರಸ್ತಾಪ ದೊರೆಯುತ್ತಿಲ್ಲ.

## ಯಕ್ಷಗಾನ

ಯಕ್ಷಗಾನವು ಕರ್ನಾಟಕದ ಜನಪ್ರಿಯ ಜನಪದ ಕಲೆ ಎನಿಸಿಕೊಂಡಿದೆ. ದೇಶವಿದೇಶಗಳಲ್ಲಿ ಯಕ್ಷಗಾನ ಪ್ರದರ್ಶನಗಳು ನಡೆದು ಕರ್ನಾಟಕಕ್ಕೆ ಯಕ್ಷಗಾನದಿಂದಾಗಿ ವಿಶೇಷ ಗೌರವ ದಕ್ಕಿದೆ.

ಹೀಗೆ ಯಕ್ಷಗಾನವು ಜನಮನ್ನಣೆ ಪಡೆದ ಕಲೆಯೂ ಉದ್ಯಮವೂ ಆಗಿರುವುದರಿಂದ ಯಕ್ಷಗಾನಕ್ಕೇ ಮೀಸಲಾಗಿ ಕನ್ನಡದಲ್ಲಿ ಪತ್ರಿಕೆಗಳು ಬಂದಿವೆ. ಅವುಗಳಲ್ಲೆಲ್ಲಾ, ಹಿರಿಯ ಭಾಗವತ ಕಡತೋಕಾ ಮಂಜುನಾಥ ಭಾಗವತರ 'ಯಕ್ಷಗಾನ' ಪತ್ರಿಕೆ ಪ್ರಸಿದ್ಧವಾದುದು. ೧೯೫೬ರಲ್ಲಿ ಉತ್ತರ ಕನ್ನಡ ಜಿಲ್ಲೆಯ ತುಡಗುಣಿ ಎಂಬ ಹಳ್ಳಿಯಿಂದ ಸಂಪಾದಿಸಲ್ಪಟ್ಟ ಈ ಪತ್ರಿಕೆ ಎರಡನೇ ಸಂಚಿಕೆಯಿಂದಲೇ ಕೊಂಡು ಓದುವವರ ಬರವನ್ನೂ ಯಕ್ಷಗಾನಕ್ಕೆ ಸಂಬಂಧಿಸಿದಂತೆ ಒಳ್ಳೆಯ ಲೇಖನಗಳ ಕೊರತೆಯನ್ನೂ ಎದುರಿಸಿತು. ಕಷ್ಟಪಟ್ಟು ಮಂಜುನಾಥ ಭಾಗವತರು ಮೂರುವರೆ ವರ್ಷ ಪತ್ರಿಕೆಯನ್ನು ನಡೆಸಿದರು. ೧/೮ ಡೆಮಿ ಆಕಾರದ ಪತ್ರಿಕೆ ಯಕ್ಷಗಾನಕ್ಕೆ ಸಂಬಂಧಿಸಿದ ಲೇಖನಗಳನ್ನು ಆದ್ಯತೆ ಮೇರೆಗೆ ಪ್ರಕಟಿಸುತ್ತಿತ್ತು.

ವಿಶೇಷವೆಂದರೆ 'ಯಕ್ಷಗಾನ' ಮಾಸಪತ್ರಿಕೆ ನಿಂತುಹೋದ ೨೦ ವರ್ಷಗಳ ಬಳಿಕ ಮರುಹುಟ್ಟು ಪಡೆಯಿತು. ಸಾಹಿತ್ಯ ಕಲಾ ಪತ್ರಿಕೆಗಳು ಯಾವುದನ್ನೂ ಭೂತಕಾಲಕ್ಕೆ ಸೇರಿಸಲಾಗದೆಂಬುದಕ್ಕೆ 'ಯಕ್ಷಗಾನ'ದ ಉದಾಹರಣೆ ನಿದರ್ಶನವಾಗಬಲ್ಲದು. ಇಂದು ಪ್ರಕಟಣೆಯಲ್ಲಿದೆಯೆಂದು ಭಾವಿಸಿದ ಪತ್ರಿಕೆ ಮುಂದಿನ ತಿಂಗಳು ಏಕಾಏಕಿ ನಿಂತುಬಿಡುವುದು; ಹತ್ತಾರು ವರ್ಷಗಳಿಂದ ಪ್ರಕಟಣೆ ನಿಲ್ಲಿಸಿದ್ದ ಪತ್ರಿಕೆ ಥಟ್ಟನೇ ಪ್ರಕಟಗೊಳ್ಳುವುದೂ ಸಾಧ್ಯ.

ಎಪ್ಪತ್ತರ ದಶಕದಲ್ಲಿ ಮರುಹುಟ್ಟು ಪಡೆದ 'ಯಕ್ಷಗಾನ' ಪತ್ರಿಕೆಗೆ ಯಲ್ಲಾಪುರದ ಯುವಕ ಎ. ಎಂ. ವೈದ್ಯ ಸಂಪಾದಕರಾಗಿದ್ದರು. ವೈದ್ಯರು ಸ್ವತಃ ಯಕ್ಷಗಾನ ಕಲಾವಿದರು. ತಾಳ-ಮದ್ದಳೆಯ ಅರ್ಥಧಾರಿಗಳು. ಯಲ್ಲಾಪುರದಲ್ಲಿ ಸ್ವಂತ ಮುದ್ರಣಾಲಯವನ್ನು ಹೊಂದಿದ್ದು ಯಕ್ಷಗಾನ ಪತ್ರಿಕೆಗೆ ಮರುಜೀವ ಕೊಡಲು ಪ್ರೇರಣೆಯಾಯ್ತು.

ಆದರೂ ಓದುಗರ ಕೊರತೆ, ಜಾಹೀರಾತುದಾರರಿಲ್ಲದೇ ಪತ್ರಿಕೆ ಒಂದು ವರ್ಷ ಮಾತ್ರ ನಡೆದು ನಿಂತಿತು.

> "ಜಿಲ್ಲೆಯ ಹೆಮ್ಮೆಯ ಕಲೆಯಾದ 'ಯಕ್ಷಗಾನ' ರಂಗ ಪರಿಕರಗಳನ್ನು ಕುರಿತು ದಕ್ಷಿಣೋತ್ತರ ಕನ್ನಡ ಜಿಲ್ಲೆಯ ಯಕ್ಷಗಾನ ಪರಿಣತರು ಪತ್ರಿಕೆಯಲ್ಲಿ ಬರೆಯುತ್ತಿದ್ದರು. ಭಾವಗೀತೆ, ಯಕ್ಷಗಾನಕ್ಕೆ ಸಂಬಂಧಪಟ್ಟ ವಿವಿಧ ವಾರ್ತೆಗಳು, ಗ್ರಂಥ ಸಮೀಕ್ಷೆ, ಮಾಸಭವಿಷ್ಯ ಮುಂತಾದವುಗಳು ಪತ್ರಿಕೆಯ ಇನ್ನಿತರ ಆಕರ್ಷಕ ಅಂಶಗಳು. ಯಕ್ಷಗಾನ ಕಲಾವಿಮರ್ಶೆಗಾಗಿಯೇ ಮೀಸಲಾದ, ಅಪೂರ್ವವಾದ ಈ ಪತ್ರಿಕೆ ವಿರಮಿಸಿದ್ದು ಯಕ್ಷಗಾನ ಕಲಾಲೋಕಕ್ಕೆ ತುಂಬಲಾರದ ಹಾನಿಯೆಂದು ವ್ಯಸನದಿಂದ ಹೇಳಬೇಕಾಗುತ್ತದೆ. ಎಂಬ ಎನ್. ಆರ್. ನಾಯಕರ ಮಾತುಗಳು ಒಪ್ಪುವಂತದ್ದು.

## 'ಶೃಂಗಾರ'

ನಿರ್ದಿಷ್ಟವಾಗಿ ಒಂದೇ ಒಂದು ಕಲೆಗೆ ಸೀಮಿತಗೊಳಿಸಿಕೊಳ್ಳದೇ ವಿಶಾಲವಾದ ತಳಹದಿಯ ಮೇಲೆ ಲಲಿತಕಲೆಯ ಎಲ್ಲಾ ಪ್ರಕಾರಗಳನ್ನೂ ಒಳಗೊಂಡ ಪೂರ್ಣಪ್ರಮಾಣದ ಕನ್ನಡ ಕಲಾಪತ್ರಿಕೆಗಳು ಬಂದುದು ೬೦ರ ದಶಕದಲ್ಲಿ. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಿಂದ ೧೯೬೨ರ ಜನವರಿಯಲ್ಲಿ ಮೊದಲ ಸಂಚಿಕೆ ಹೊರಬಂದ 'ಶೃಂಗಾರ' ಪತ್ರಿಕೆ 'ಸಾಹಿತ್ಯ ಸಂಗೀತ' ಮುಂತಾದ ಲಲಿತಕಲೆಗಳಿಗಾಗಿ ಈ ತ್ರೈಮಾಸಿಕವೆಂದು ಮುಖಪುಟದಲ್ಲಿ ಘೋಷಿಸಿಕೊಂಡಿತು. ೧/೮ ಡೆಮಿ ಆಕಾರದ ಪತ್ರಿಕೆ ೬೬ ಪುಟಗಳನ್ನೊಳಗೊಂಡು ಮಾರಾಟದ ಬೆಲೆ ೬೦ ನಯಾ ಪೈಸೆಯೆಂದು ಹೇಳಲ್ಪಟ್ಟಿತ್ತು.

ಜನವರಿ ೨೬, ೧೯೬೨ರ ಸಂಚಿಕೆಯಲ್ಲಿ ಸಂಪಾದಕರು ಲಲಿತಕಲೆಗಳ ಈ ಪತ್ರಿಕೆಗೆ 'ಶೃಂಗಾರ'ವೆಂಬ ಹೆಸರನ್ನಿಟ್ಟಿದ್ದಕ್ಕೆ ಈ ಕೆಳಗಿನ ಸಮರ್ಥನೆ ನೀಡಿದ್ದಾರೆ.

ಇದಕ್ಕೆ 'ಶೃಂಗಾರ'ವೆಂಬ ಹೆಸರು ಸರಿಯಲ್ಲವೆಂದು ಕೆಲ ಮಡಿವಂತಿಕೆಯ ಅಭಿಪ್ರಾಯ ಅಲ್ಲಲ್ಲಿ ಕೇಳಿ ಬಂತು. ಅದಕ್ಕೆ ಕಾರಣವೆಂದರೆ ಶೃಂಗಾರವು ಅಶ್ಲೀಲವೆಂದು ತಿಳಿದಿದ್ದೇ ಆಗಿದೆ. ಆದರೆ ಶೃಂಗಾರವು ಅಶ್ಲೀಲವಲ್ಲ. "ಶೃಂಗಾರಶ್ಶುಚಿರುಜ್ವಲಃ' – ಶೃಂಗಾರವು ಶುಚಿಯುಳ್ಳದ್ದು, ಉಜ್ವಲವುಳ್ಳದ್ದು. ಇದಕ್ಕೆ ನಾವು ರುಚಿಯುಳ್ಳದ್ದು ಎಂಬುದನ್ನೂ ಧೈರ್ಯವಾಗಿ ಸೇರಿಸಬಹುದಷ್ಟೇ. ಶುಚಿ, ರುಚಿ, ಉಜ್ವಲ ಈ ಮೂರು ಶೃಂಗಾರದಲ್ಲಿದೆಯೆಂದ ಬಳಿಕ ಮತ್ತೇನು ಬೇಕು? ಇದು ರಸರಾಜ, ಶೋಭೆ, ಚೆಲುವುಗಳನ್ನೂ ಸೂಚಿಸುತ್ತದೆ. ಲಲಿತಕಲೆಗಳಿಗೆ ಸಂಬಂಧಿಸಿದ ಈ ಪತ್ರಿಕೆಗೆ ಈ ಕಾರಣದಿಂದ 'ಶೃಂಗಾರ'ವೆಂಬ ಹೆಸರು ಅತ್ಯಂತ ಶೋಭಿಸುತ್ತದೆಯೆಂಬುದೇ ನಮ್ಮ ಅಭಿಪ್ರಾಯ."

'ಶೃಂಗಾರ'ದ ಮೊದಲ ಸಂಚಿಕೆಯಲ್ಲಿ ಶೃಂಗಾರಕ್ಕೆ ದೇಣಿಗೆ ನೀಡಿದವರ ಪಟ್ಟಿ ಪ್ರಕಟಿಸಲಾಗಿದೆ. ಮಂಗಳೂರು ನಸ್ಯ, ಮೂವತ್ತು ಮಾರ್ಕಿನ ಬೀಡಿ, ರಾಣಿ ಬನಿಯನ್ನುಗಳು ಹಾಗೂ ಗರ್ಜನೆ, ಜನತಾ, ಮುಂತಾದ ಪತ್ರಿಕೆಗಳ ಜಾಹಿರಾತುಗಳಿವೆ. ಶೃಂಗಾರದ ವಾರ್ಷಿಕ ಚಂದಾ ಎರಡು ರೂಪಾಯಿ. ಮೊದಲ ಸಂಚಿಕೆಯ ಲೇಖನಗಳು ಶೃಂಗಾರದ ಘೋಷಣೆಗೆ ತಕ್ಕಂತೆ ಲಲಿತಕಲೆಗಳಿಗೆ ಸ್ಥಳ ಒದಗಿಸಿರುವ ಬಗ್ಗೆ ಪುರಾವೆ ನೀಡುತ್ತದೆ. ಸಂಪಾದಕರ ಮಾತು, ಕಲೆ, ಕವನ, ಸಂಗೀತ, ತಾಳಮದ್ದಳೆಗಳ ಬಗ್ಗೆ ಲೇಖನ, 'ಲಲಿತ ಸಾಹಿತ್ಯ ಮತ್ತು ಮಹಾಕಲ್ಪನೆಗಳು' ಮುಂತಾದ ಬರಹಗಳಿಗೆ 'ತ್ರೈಮಾಸಿಕ ರಾಶಿ ಭವಿಷ್ಯ'ವೂ ಆಕರ್ಷಣೆ ಹೆಚ್ಚಿಸಲು ಸೇರಿಕೊಂಡಿದೆ.

ಅದ್ದೂರಿಯಿಂದ ಆರಂಭವಾದ ಶೃಂಗಾರ ಮುಂದಿನ ಸಂಚಿಕೆಗಳಲ್ಲಿ ಹೆಸರಿಗೆ ಲಲಿತಕಲೆಗಳ ತ್ರೈಮಾಸಿಕವಾಗಿ ಉಳಿದು ಎರಡು ವರ್ಷಗಳಲ್ಲಿ ನಿಂತುಹೋಯಿತು.

## 'ಇಂದ್ರ ಧನುಸ್'

ಪತ್ರಿಕೆಗಳಲ್ಲಿ ವ್ಯಂಗ್ಯ ಚಿತ್ರಗಳು ಊಟದ ರುಚಿ ಹೆಚ್ಚಿಸುವ ಉಪ್ಪಿನಕಾಯಿಯಂತೆ. ವ್ಯಂಗ್ಯಚಿತ್ರಗಳು ಎಲ್ಲ ವಯಸ್ಸಿನ ಎಲ್ಲ ಆಸಕ್ತಿಯ ಓದುಗರನ್ನೂ ತಲುಪುವುದರಿಂದ ಎಲ್ಲ ರೀತಿಯ ಪತ್ರಿಕೆಗಳೂ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸುತ್ತವೆ.

ಆದರೆ ವ್ಯಂಗ್ಯಚಿತ್ರಕ್ಕಾಗಿಯೇ ಮೀಸಲಾಗಿ ಪತ್ರಿಕೆಗಳು ಬಂದ ಉದಾಹರಣೆಗಳೂ ಇವೆ. ಕನ್ನಡದಲ್ಲಿ ವ್ಯಂಗ್ಯ ಚಿತ್ರಕ್ಕೆ ಮೀಸಲಾಗಿ ಬಂದ ಮೊದಲ ಪತ್ರಿಕೆ 'ಇಂದ್ರಧನುಸ್'.

'ಇಂದ್ರಧನುಸ್'ನ ಸಂಪಾದಕರು ಕನ್ನಡ ಪತ್ರಿಕೆಗಳಲ್ಲಿ 'ಶಿಂಗಣ್ಣ' ಎಂದು ಪ್ರಖ್ಯಾತಿ ಪಡೆದಿದ್ದ ಕೆ. ರಾಮಕೃಷ್ಣನವರು. ರಾಮಕೃಷ್ಣನವರ ಪ್ರತಿಭೆ ಹೊರಬಂದಿದ್ದು ಅಂದಿನ ಮದ್ರಾಸಿನ 'ಕಲ್ಕಿ' ಪತ್ರಿಕೆಯಲ್ಲಿ ರಾಜಕೀಯ ವ್ಯಂಗ್ಯಚಿತ್ರಕಾರರಾಗಿದ್ದಾಗ. ಮದ್ರಾಸನ್ನು ಬಿಟ್ಟು ಹುಟ್ಟೂರಾದ ಪುತ್ತೂರಿಗೆ ಬಂದು ನೆಲೆಸಿದ ಕೆ. ರಾಮಕೃಷ್ಣರು ಮಂಗಳೂರಿನ ದಿನಪತ್ರಿಕೆ 'ನವಭಾರತ'ದಲ್ಲಿ ದೈನಂದಿನ ವ್ಯಂಗ್ಯಚಿತ್ರ 'ಶಿಂಗಣ್ಣ' ಬರೆಯಲಾರಂಭಿಸಿದರು. ಅದು ಅವರಿಗೆ ಕನ್ನಡ ಪತ್ರಿಕೋದ್ಯಮದಲ್ಲಿ ವಿಶೇಷ ಸ್ಥಾನ ಕಲ್ಪಿಸಿತು.

ನಂತರ ೧೯೬೮ರಲ್ಲಿ ಕೆ. ರಾಮಕೃಷ್ಣ 'ಇಂದ್ರಧನುಸ್' ಆರಂಭಿಸಿದರು. ಶಿವರಾಮ ಕಾರಂತರು 'ಇಂದ್ರ ಧನುಸ್' ಪತ್ರಿಕೆಗೆ ತಿಂಗಳಿಗೊಂದು ಲೇಖನ ಬರೆದು ಕೊಡುತ್ತಿದ್ದರು. ರೇಖಾಚಿತ್ರಗಳನ್ನು ಬ್ಲಾಕ್ ಮಾಡಿಸಿ ಪುತ್ತೂರಿನಲ್ಲಿಯೇ ಮುದ್ರಿಸಲಾಗುತ್ತಿತ್ತು. ಪತ್ರಿಕೆ ಜನಪ್ರಿಯವಾಯಿತಾದರೂ ಕೊಂಡು ಓದುವವರ ಸಂಖ್ಯೆ ಹೆಚ್ಚಿಲ್ಲದೆ 'ಪತ್ರಿಕೆ' ಒಂದೇ ವರ್ಷದಲ್ಲಿ ಸ್ಥಗಿತಗೊಂಡಿತು. ಬೇರೆ ಪತ್ರಿಕೆಗೆ 'ಕಾರ್ಟೂನ್' ಬರೆದುಕೊಟ್ಟು, ಸಂಭಾವನೆ ಪಡೆಯುವುದೇ ತಲೆಬಿಸಿಯಿಲ್ಲದ ಕೆಲಸವೆಂದು ಅರಿತ ರಾಮಕೃಷ್ಣನವರು ಮತ್ತೆ 'ಇಂದ್ರಧನುಸ್' ಎತ್ತುವ ಪ್ರಯತ್ನ ಮಾಡಲಿಲ್ಲ.

## 'ಸುಡಿಜೇನು'

ಜಾನಪದ ಕಲೆಗೆ ಮೀಸಲಾಗಿ ಕನ್ನಡದಲ್ಲಿ ಬಂದ ಬೆರಳೆಣಿಕೆಯ ಪತ್ರಿಕೆಗಳ ಸಾಲಿಗೆ 'ಸುಡಿಜೇನು' ಅರ್ಹ ಸೇರ್ಪಡೆ.

'ಜಾನಪದ ಸಾಹಿತ್ಯ ಪ್ರಕಟನೆಗೆ ಹೆಚ್ಚಿನ ಮಹತ್ವ ಕೊಟ್ಟು, ಅಳಿದು ಹೋಗುತ್ತಿರುವ ಜಾನಪದ ಸಾಹಿತ್ಯ ಕಲೆಗಳನ್ನು ಬದುಕಿಸಿಕೊಳ್ಳುವ ಹೇತುವಿನಿಂದ 'ಸುಡಿಜೇನು' ಮಾಸಪತ್ರಿಕೆಯನ್ನು ಭಾವಿಕೇರಿಯಿಂದ ಗಾಯಕರಾದ ಬಿ. ಹೊನ್ನಪ್ಪನವರು ೧೯೭೯ರಿಂದ ಹೊರಡಿಸುತ್ತ ಬಂದಿದ್ದಾರೆ. ಆರ್ಥಿಕ ಅಡಚಣೆಯಿಂದ ತತ್ತರಿಸುತ್ತಿದ್ದರೂ ಎದೆಗೆಡದೆ ಬಿ. ಹೊನ್ನಪ್ಪನವರು ಪತ್ರಿಕೆಯನ್ನು ಕಷ್ಟಪಟ್ಟು ನಡೆಸಿಕೊಂಡು ಬರುತ್ತಿದ್ದಾರೆ." ಎಂಬುದಾಗಿ ಎನ್. ಆರ್. ನಾಯಕರು ಅಭಿಪ್ರಾಯಪಡುತ್ತಾರೆ.

'ಸುಡಿಜೇನು' ಪತ್ರಿಕೆಯಲ್ಲಿ ಜಾನಪದ ಕತೆ ಕವನಗಳು, ಜಾನಪದ ವಿಚಾರಗಳಲ್ಲದೆ ಸುದ್ದಿ, ಸಮಾಚಾರ, ಚುಟುಕ, ಕವನ, ಚಿಕ್ಕ ಚಿಕ್ಕ ಪ್ರಬಂಧಗಳೂ ಪ್ರಕಟಗೊಳ್ಳುತ್ತವೆ.

## 'ನಾಟ್ಯ ಭಾರತೀ'

ಬೆಂಗಳೂರಿನ ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್ ಸಂಸ್ಥೆಯು ೧೯೬೯ರಲ್ಲಿ ಆರಂಭಿಸಿ, ನಾಕೈದು ವರ್ಷ ನಡೆಸಿದ ದ್ವೈಮಾಸಿಕ 'ನಾಟ್ಯ ಭಾರತೀ'. ನಾಟ್ಯ ಭಾರತೀಯ ಮೊದಲ ಸಂಚಿಕೆ ಫೆಬ್ರುವರಿ ೧೯೬೯ರಲ್ಲಿ ಪ್ರಕಟಗೊಂಡಿತು. ೧/೮ ಡೆಮಿ ಆಕಾರದ, ೩೮ ಪುಟಗಳ ಈ ಸಂಚಿಕೆಗೆ ಸಂಪಾದಕರನ್ನಾಗಿ ಸಂಸ್ಥೆಯು ಯಾರನ್ನೂ ಹೆಸರಿಸಿಲ್ಲ.

ಮೊದಲ ಸಂಚಿಕೆಯ ಹಿಂಬದಿ ಪುಟದಲ್ಲಿ 'ನಿವೇದನ' ಎಂಬ 'ನೃತ್ಯ ಭಾರತೀ' ಇದರ ಅಧ್ವರ್ಯುಗಳ ನಿವೇದನೆಯಲ್ಲಿ ಹೀಗೆ ಬರೆಯಲಾಗಿದೆ. '.......ನಾಟಕದ ಚಿಂತನೆಯ ಬಗ್ಗೆ ಉಪಯುಕ್ತ ಸ್ಪಷ್ಟ ಹೆಜ್ಜೆಯಾಗಿರುವ ಈ ಪ್ರಯತ್ನದ ಉಳಿವಿನ ಬಗ್ಗೆ ಸಹೃದಯರಾಗಿ, ಕ್ರಿಯಾಶೀಲರಾಗಿ, ನಾಟ್ಯ ಪ್ರೇಮಿಗಳೂ ಸಂಘ ಸಂಸ್ಥೆಗಳೂ ಚಂದಾದಾರರಾಗಿ ರಚನಾತ್ಮಕ ನೆರವನ್ನು ನೀಡುವರೆಂದು ನಂಬಿರುವ ನಾಟ್ಯ ಭಾರತೀ' ಎನ್ನಲಾಗಿದೆ.

ಮೊದಲ ಸಂಚಿಕೆಗೆ ಶ್ರೀರಂಗರು ಶುಭಹರಸಿ ಕಳಿಸಿರುವ ನುಡಿಗಳಿವೆ. ಅದರಲ್ಲಿ ಶ್ರೀರಂಗರು 'ಬೆಂಗಳೂರಿನ ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್ಸ್ ಸಂಸ್ಥೆಯು 'ನಾಟ್ಯಭಾರತೀ' ಎಂಬ ದ್ವೈಮಾಸಿಕವನ್ನು ಪ್ರಕಟಿಸುವುದು ಸ್ವಾಗತಾರ್ಹ ಪ್ರಯತ್ನವಾಗಿದೆ. ರಂಗಭೂಮಿಯ ಬಗ್ಗೆ ಅಭ್ಯಾಸ, ವಿಮರ್ಶೆ, ವಿಚಾರ ವಿನಿಮಯಕ್ಕೆ ಅವಕಾಶಗಳನ್ನು ಒದಗಿಸಿಕೊಟ್ಟು ಈ ದ್ವೈಮಾಸಿಕ ಕನ್ನಡ ರಂಗಭೂಮಿಯ ಬೆಳವಳಿಕ್ಕೆ ಪೋಷಕವಾಗಲಿ ಎಂದು ಹಾರೈಸುತ್ತೇನೆ.' ಎಂದಿದ್ದಾರೆ.

'ನಾಟ್ಯ ಭಾರತೀ' ರಂಗಭೂಮಿ ಹಾಗೂ ಒಟ್ಟಾರೆ ಕಲಾರಂಗಗಳ ಹಿಂದಿನ, ಇಂದಿನ ಸ್ಥಿತಿಗತಿಯ ಬಗ್ಗೆ ಲೇಖನಗಳನ್ನು ಪ್ರಕಟಿಸುತ್ತಿತ್ತು. ಈ ಕ್ಷೇತ್ರದ ಸಾಧಕರ ಪರಿಚಯ ಮಾಡಿಕೊಡುತ್ತಿತ್ತು. 'ನಾಟ್ಯ ಭಾರತೀ'ಯ ಮೊದಲ ಸಂಚಿಕೆಯ ಹೂರಣ ಪತ್ರಿಕೆಯ ಮೂಲೋದ್ದೇಶಗಳನ್ನು ಸ್ಪಷ್ಟಪಡಿಸುವಂತಿದೆ.

ಕನ್ನಡದ ಕಲಾ ಪತ್ರಿಕೆಗಳ ಪೈಕಿ 'ನಾಟ್ಯ ಭಾರತೀ'ಯ ಸೇವೆ ಸ್ಮರಣೀಯವಾದುದು. ನಾಕೈದು ವರ್ಷ ನಾಟ್ಯ ಭಾರತೀ ಪ್ರಕಟಣೆಯಲ್ಲಿತ್ತು. ಆಗ ಈ ಕ್ಷೇತ್ರದ ಆಸಕ್ತರು ಗಂಭೀರವಾಗಿ ಪರಿಗಣಿಸುವ ಪತ್ರಿಕೆಯಾಗಿತ್ತು.

ಬೆಂಗಳೂರಿನಿಂದ ರಂಗಭೂಮಿಯನ್ನು ಕುರಿತ 'ನಟನೆ' ಎಂಬ ಪತ್ರಿಕೆ ಹೊರಟಿತು (೧೯೭೨). ಸಂಪಾದಕರು ಬಿ.ವಿ. ಕಾರಂತ ಮತ್ತು 'ಬಾಕಿನಾ'. ಇದು ಹೆಚ್ಚು ದಿನ ಬಾಳಲಿಲ್ಲ.

## 'ಮೂಡಲಪಾಯ'

ಯಕ್ಷಗಾನದಲ್ಲಿ ಮೂಡಲಪಾಯ, ಪಡುವಲಪಾಯ ಎಂಬ ಎರಡು ಪ್ರಕಾರಗಳು. ಪಡುವಲಪಾಯ ಕರ್ನಾಟಕದ ಪಶ್ಚಿಮ ಭಾಗದ (ಉತ್ತರ ಕನ್ನಡ –ದಕ್ಷಿಣ ಕನ್ನಡ ಮುಂತಾಗಿ) ಯಕ್ಷಗಾನದ ಸಂಪ್ರದಾಯದ ಹೆಸರಾದರೆ, ಮೂಡಲಪಾಯದ ಕರ್ನಾಟಕದ ಪೂರ್ವ ಭಾಗದ ಅಂದರೆ ಕೋಲಾರ, ಬೆಂಗಳೂರು, ತುಮಕೂರು ಮುಂತಾದ ಪ್ರದೇಶಗಳಲ್ಲಿ ಪ್ರಚಲಿತವಾಗಿರುವ ಯಕ್ಷಗಾನ ಸಂಪ್ರದಾಯ.

ನಶಿಸಿಹೋಗುತ್ತಿದ್ದ ಮೂಡಲಪಾಯ ಯಕ್ಷಗಾನಕ್ಕೆ ಕಾಯಕಲ್ಪ ನೀಡಿದವರಾಗಿ ಡಾ. ಜೀ. ಶಂ. ಪರಮಶಿವಯ್ಯನವರನ್ನು ಹೆಸರಿಸಲಾಗುತ್ತಿದೆ. ೧೯೭೯ರಲ್ಲಿ ತುಮಕೂರು ಜಿಲ್ಲೆಯ ತಿಪಟೂರಿನ ಕೊನೇಹಳ್ಳಿಯಲ್ಲಿ 'ಮೂಡಲಪಾಯ ಯಕ್ಷಗಾನ ಟ್ರಸ್ಟ್' ಸ್ಥಾಪಿತವಾಗುವುದರಲ್ಲಿ ಜೀ. ಶಂ. ಪರಮಶಿವಯ್ಯನವರ ವಿಶೇಷ ಪರಿಶ್ರಮವಿತ್ತು. ಹೀಗೆ ಸ್ಥಾಪಿತವಾದ ಟ್ರಸ್ಟಿನ ವತಿಯಿಂದ 'ಮೂಡಲಪಾಯ' ಪತ್ರಿಕೆಯೊಂದು ಅನಿಯತಕಾಲಿಕವಾಗಿ ಸ್ಥಾಪನೆಗೊಂಡಿತು.

ಮುಖ್ಯವಾಗಿ ಮೂಡಲಪಾಯದ ವಿಚಾರವನ್ನು ನಾಡಿನ ವಿವಿಧ ಮೂಲೆಗಳಿಗೆ ಮುಟ್ಟಿಸುವಲ್ಲಿ ಹಾಗೂ ವಿದ್ವಾಂಸರ ಮತ್ತು ಆಸಕ್ತರ ಗಮನವನ್ನು ಅದರತ್ತ ಸೆಳೆಯುವಲ್ಲಿ ಈ ಪತ್ರಿಕೆ ಕೆಲಸ ಮಾಡಿದ ರೀತಿ ವಿಶಿಷ್ಟವಾದುದು. ಇದರ ಕೀರ್ತಿ ಮುಖ್ಯವಾಗಿ ಅದರ ಕೇಂದ್ರಶಕ್ತಿಯಾದ ಡಾ. ಜೀ. ಶಂ. ಪರಮಶಿವಯ್ಯನವರಿಗೆ ಸಲ್ಲುವಂತಹುದು. 'ಮೂಡಲಪಾಯ' ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಡಾ. ಜೀ. ಶಂ. ಪರಮಶಿವಯ್ಯವರು ಪ್ರಧಾನ ಸಂಪಾದಕರಾಗಿ, ಪಿ. ಆರ್. ತಿಪ್ಪೇಸ್ವಾಮಿ, ಹ.ಕ. ರಾಜೇಗೌಡ ಹಾಗೂ ಡಾ. ಡಿ. ಕೆ. ರಾಜೇಂದ್ರ ಅವರ ಸಂಪಾದಕತ್ವದಲ್ಲಿ ಮೊದಲ ಸಂಚಿಕೆಯು, ಎರಡನೆಯ ಸಂಚಿಕೆಯು ಹ.ಕ. ರಾಜೇಗೌಡ ಮತ್ತು ಡಿ.ಕೆ. ರಾಜೇಂದ್ರ ಅವರ ಸಂಪಾದಕತ್ವದಲ್ಲಿ ಹೊರ ಬಂದವು.

'ಮೂಡಲಪಾಯ' ಪತ್ರಿಕೆ ಎರಡು ಸಂಚಿಕೆಗಿಂತ ಮುಂದುವರೆಯಲಿಲ್ಲ. ನಶಿಸುತ್ತಿದ್ದ ಕಲಾ ಪ್ರಕಾರವೊಂದಕ್ಕೆ ಮರುಜೀವ ಕೊಡುವ ಯತ್ನವೊಂದರ ಭಾಗವಾಗಿ ಬಂದ 'ಮೂಡಲಪಾಯ'ಕ್ಕೆ ಮರುಜೀವ ಬರಲಿಲ್ಲ.

## 'ನಿಷಾದ' - 'ಕಲಾವಿಕಾಸ'

೭೦ರ ದಶಕದಲ್ಲಿ ಬಂದ ಎರಡು ಪತ್ರಿಕೆಗಳನ್ನು ಹೆಸರಿಸಬೇಕು. ಒಂದು - ೧೯೭೨ ರಲ್ಲಿ ರವೀಶ್ ಕಾಸರವಳ್ಳಿ ಹೊರತಂದ 'ನಿಷಾದ' ಮಾಸಿಕ. ವೃತ್ತಿಯಲ್ಲಿ ವೈದ್ಯರಾಗಿದ್ದು ಚಿತ್ರಕಲೆ, ಛಾಯಾಚಿತ್ರಕಲೆ, ಸಿನಿಮಾ, ಲೇಖನ ಮುಂತಾದವುಗಳ ಬಗ್ಗೆ ಅತೀವ ಒಲವು ಇರಿಸಿಕೊಂಡಿದ್ದ ರವೀಶ್ ಕಾಸರವಳ್ಳಿ 'ನಿಷಾದ' ಎಂಬ ಕಲಾಮಾಸಿಕ ಹೊರಡಿಸಿದರು. 'ನಿಷಾದ'ದ ಕೆಲವು ಸಂಚಿಕೆಗಳು ಮಾತ್ರ ಪ್ರಕಟವಾಗಿ ಸರಿಯಾದ ಪ್ರೋತ್ಸಾಹದ ಕೊರತೆಯಿಂದಾಗಿ ನಿಂತುಹೋಯಿತು.

ನಾಟಕ, ಚಿತ್ರಕಲೆ ಮುಂತಾಗಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸದಾ ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳುವ ಅ.ಲ. ನರಸಿಂಹನ್ ೧೯೭೯ರಲ್ಲಿ ಹೊರತಂದ ಪತ್ರಿಕೆ 'ಕಲಾ ವಿಕಾಸ'. ಬೆಂಗಳೂರಿನ ಕೆನ್ ಸ್ಕೂಲ್ ಆಫ್ ಆರ್ಟ್‌ನ ಅಧ್ಯಾಪಕರು ವಿದ್ಯಾರ್ಥಿಗಳು ಸೇರಿಕೊಂಡು ಅ.ಲ. ನರಸಿಂಹನ್‌ರವರ ನೇತೃತ್ವದಲ್ಲಿ 'ಕಲಾವಿಕಾಸ'ವನ್ನು ಹೊರತರುತ್ತಿದ್ದರು. ಪತ್ರಿಕೆ ಐದಾರು ವರ್ಷ ಪ್ರಕಟಣೆಯಲ್ಲಿತ್ತು. ಸಂಶೋಧಕನ ಗಮನಕ್ಕೆ ಬಂದಂತೆ ಕನ್ನಡದಲ್ಲಿ ಚಿತ್ರಕಲೆಯ ಜೊತೆ ಶಿಲ್ಪಕಲೆಗೂ ಮೀಸಲಾಗಿ ಬಂದ ಪತ್ರಿಕೆ ಇದೊಂದೇ.

ಮಡಿಕೇರಿಯಿಂದ ೧೯೭೮ರಲ್ಲಿ ಹೊರಬಂದ 'ಸ್ಪಂದನ' ಮುಖ್ಯವಾಗಿ ಸಾಂಸ್ಕೃತಿಕ ಪತ್ರಿಕೆಯಾದರೂ ಸ್ಪಂದನದ ಒಲವು ಕಲೆಗಳ ಕಡೆಗಿತ್ತು. ಎಸ್. ಆರ್. ರಮೇಶ್, ಎಂ. ಎಸ್. ಮಧ್ಯಸ್ಥ, ಡಿ.ಬಿ. ರಾಮಚಂದ್ರಾಚಾರ್ ಇವರುಗಳು ಈ ತ್ರೈಮಾಸಿಕ ಸಾಂಸ್ಕೃತಿಕ ಪತ್ರಿಕೆಯ ಕಾರಣಕರ್ತರಾಗಿದ್ದರು. ಕೆಲವು ಸಂಚಿಕೆಗಳಲ್ಲೇ ಪತ್ರಿಕೆ ನಿಂತಿತು.

## 'ಸಮುದಾಯ ವಾರ್ತಾಪತ್ರ'

ಸಮುದಾಯವು ಎಡಪಂಥೀಯ ವಿಚಾರಧಾರೆಗೆ ಒಪ್ಪಿಕೊಂಡ ನಾಟಕ ತಂಡ. ಸಮುದಾಯವು ತಂಡವೂ ಹೌದು; ಚಳವಳಿಯೂ ಹೌದು. ಸಮುದಾಯಕ್ಕೆ ಕೇಂದ್ರ ಮಂಡಳಿಯೊಂದಿರುವುದಲ್ಲದೇ ಜಿಲ್ಲೆ, ತಾಲೂಕುವಾರು ಸಮುದಾಯದ ಶಾಖೆಗಳಿದ್ದು ಸಮುದಾಯ ಸಂಘಟನೆ ಕರ್ನಾಟಕದಲ್ಲಿ ವಿಸ್ತೃತ ನೆಲೆಯನ್ನು ಹೊಂದಿದೆ.

ಸಮುದಾಯ ತಂಡದ ಕೇಂದ್ರ ಬೆಂಗಳೂರಿನಲ್ಲಿದೆ. ಮೈಸೂರು, ಮಂಗಳೂರು, ದಾವಣಗೆರೆ, ಶಿವಮೊಗ್ಗ, ಗುಲ್ಬರ್ಗಾ ಮುಂತಾದ ಕಡೆಗಳಲ್ಲೂ ಸಮುದಾಯ ತಂಡ ರಂಗಸಂಬಂಧೀ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತದೆ. ಆ ಚಟುವಟಿಕೆಗಳ ದಾಖಲೆಗಾಗಿ 'ಸಮುದಾಯ ವಾರ್ತಾಪತ್ರ'ವನ್ನು ೧೯೭೮ರಲ್ಲಿ ಆರಂಭಿಸಲಾಯಿತು. ಆಗ ಅದು ಸೈಕ್ಲೋಸ್ಟೈಲ್ ರೂಪದಲ್ಲಿದ್ದು ಪ್ರಸಿದ್ಧ ರಂಗನಿರ್ದೇಶಕ ಪ್ರಸನ್ನರು ವಾರ್ತಾಪತ್ರದ ಸಂಪಾದಕರಾಗಿದ್ದರು. ೧೯೭೯ರಲ್ಲಿ ಅದು ಮುದ್ರಣರೂಪಕ್ಕೆ ಬಂದಾಗ ಎಸ್. ಮಾಲತಿಯವರನ್ನು ಸಂಪಾದಕರನ್ನಾಗಿ ಹೆಸರಿಸಲಾಗಿತ್ತು. ಸಿ.ಜಿ. ಕೃಷ್ಣಸ್ವಾಮಿ ಈ ಪತ್ರಿಕೆಗೆ ಪ್ರಕಾಶಕರು. ರಂಗಭೂಮಿ ಕುರಿತಾದ ಲೇಖನಗಳು, ರಂಗಕೃತಿ ಹಾಗೂ ನಾಟಕಗಳ ವಿಮರ್ಶೆಗಳು, ಜನಪರ ಕಾಳಜಿಯ ಬರಹಗಳು, ಕಥೆ ಕವನ ಹೀಗೆ ಹತ್ತಾರು ವಿಷಯಗಳನ್ನು ಒಳಗೊಂಡು ಸಾಂಸ್ಕೃತಿಕ ವಲಯದ ಗಂಭೀರ ಪತ್ರಿಕೆಯಾಗಿ 'ಸಮುದಾಯ ವಾರ್ತಾಪತ್ರ' ರೂಪುಗೊಂಡಿತು. ಸುಮಾರು ೪೦೦ ಜನ ಚಂದಾದಾರರನ್ನು ಹೊಂದಿದ್ದ ಈ ಪತ್ರಿಕೆಗೆ ನಿರ್ದೇಶಕ ಜನಾರ್ದನ್, ಸಾಹಿತಿಗಳಾದ ಬರಗೂರು ರಾಮಚಂದ್ರಪ್ಪ, ರಾಮಚಂದ್ರದೇವ, ರಂಗತಜ್ಞ ಗಂಗಾಧರ ಮೂರ್ತಿ ಅನುಕ್ರಮವಾಗಿ ಪತ್ರಿಕೆಯ ಸಂಪಾದಕತ್ವದ ಜವಾಬ್ದಾರಿ ವಹಿಸಿಕೊಂಡರು. ಹೆಚ್ಚಿನ ಖರ್ಚು ಆದರೆ ಹೆಚ್ಚದ ಚಂದಾದಾರರಿಂದಾಗಿ ಪತ್ರಿಕೆ ಮುಗ್ಗರಿಸಿ ೧೯೮೫ರ ನಂತರ ನಿಂತು ಹೋಯಿತು.

## 'ರಂಗಮಂಟಪ'

ಮೈಸೂರು ಮಹಾರಾಜಾ ಕಾಲೇಜಿನ ಕಲಾ ಬಳಗದ ಶ್ರೇಷ್ಠ ನಟ ಸ್ತ್ರೀಪಾತ್ರ ಪ್ರವೀಣರಾದ ಬಿ. ಕೃಷ್ಣ (ತುಪ್ಪ) ಅವರ ಸಂಪಾದಕತ್ವದಲ್ಲಿ ಏಪ್ರಿಲ್ ೧೯೮೨ರಲ್ಲಿ 'ರಂಗಮಂಟಪ'ವೆಂಬ ತ್ರೈಮಾಸಿಕವು ಬೆಳಕು ಕಂಡು ರಂಗಪತ್ರಿಕೆಗಳ ಪರಂಪರೆಯಲ್ಲಿಯೇ ಓದುಗರ ಮನವನ್ನು ಸೂರೆಗೊಂಡು ದಶಕದ ಸಾಧನೆಯಾಗಿ ಮೆರೆಯಿತು.

ಪತ್ರಿಕೋದ್ಯಮದ ಆರಂಭದಿಂದ ೧೯೭೨ರ ವರೆಗೆ ನಾವು ಉಲ್ಲೇಖಿಸಿದ ಕಲಾಪತ್ರಿಕೆಗಳು ಬೆರಳೆಣಿಕೆಯನ್ನೂ ಪೂರ್ತಿ ಮಾಡಲಾರವು. ಆಮೇಲಾದರೂ ಹೊರಟ ಪತ್ರಿಕೆಗಳು ಇನ್ನೂ ಕಡಿಮೆ. ಒಟ್ಟಾರೆಯಾಗಿ ಗಮನಿಸಿದಾಗ ಸುದೀರ್ಘ ಕನ್ನಡ ಪತ್ರಿಕೋದ್ಯಮ ಚರಿತ್ರೆಯಲ್ಲಿ ಯಾವ ಕಲಾಪತ್ರಿಕೆಯೂ ಸ್ವಾವಲಂಬನ ಸ್ಥಿತಿಗೆ ಬರಲಿಲ್ಲ. ಅವುಗಳ ಸದ್ಯದ ಸ್ಥಿತಿ ಆಶಾದಾಯಕವಾಗಿಲ್ಲ.



# ೯. ಮಾಧ್ವ ಪತ್ರಿಕಾಲೋಕ
## ( – ಇತ್ತೀಚಿನ ವರೆಗೆ )

ಕನ್ನಡವಲ್ಲಿ ಮೊತ್ತಮೊದಲಿನ ಮಾಧ್ವ ಪತ್ರಿಕೆ ಯಾವುದು? ನನಗೆ ತಿಳಿದು ಬಂದ ಪ್ರಕಾರ, ೧೯೦೩ರಲ್ಲಿ ಸ್ಥಾಪಿತವಾದ 'ಮಧ್ವ ಸಿದ್ಧಾಂತ ದೀಪಿಕಾ' ಎಂದು ಆ ಪತ್ರಿಕೆಯ ಹೆಸರು. ಆದರೆ ಅದು ಮದ್ರಾಸದಿಂದ ಹೊರಡುತ್ತಿತ್ತು. ಅದರಲ್ಲಿ ಇಂಗ್ಲಿಷ್‌ನಲ್ಲಿಯೂ ಲೇಖನಗಳು ಪ್ರಕಟಗೊಂಡಿವೆ. ಈ ಮಾಸಪತ್ರಿಕೆಯ ಸಂಪಾದಕರಾರೆಂಬುದನ್ನು ಕಾಣಿಸಿಲ್ಲವಾದರೂ 'ಮಧ್ವ ಸಿದ್ಧಾಂತೋನ್ನಾಹಿನೀ ಸಭಾ' ಎಂಬ ಸಂಸ್ಥೆಯು ಅದನ್ನು ಪ್ರಕಟಿಸುತ್ತಿತ್ತು. ಆರಂಭದಿಂದ ಮುಂದೆ ಮೂರು ವರ್ಷಗಳ ವರೆಗಂತೂ ಅದು ಹೊರಬಂದಿದೆ. ಏಕೆಂದರೆ ಲಂಡನ್ನಿನ ಬ್ರಿಟಿಷ್ ಲೈಬ್ರರಿಯಲ್ಲಿ ೧೯೦೩ – ೧೯೦೬ರ ವರೆಗಿನ ಸಂಚಿಕೆಗಳಿವೆ.

'ಮಧ್ವ ಪ್ರಬಂಧಮಾಲಾ' ಎಂಬ ಎರಡನೆಯ ಪತ್ರಿಕೆಯೂ (೧೯೦೮) ಮದ್ರಾಸಿನಿಂದಲೇ ಬೆಳಕು ಕಂಡಿತು. ಈ ದ್ವೈಮಾಸಿಕದ ಸಂಪಾದಕರು ಕೆ. ಶೇಷಗಿರಿರಾವ್ ಎನ್ನುವವರು. ದ್ವೈತ ಮತೀಯ ಗ್ರಂಥಗಳ ಮೂಲ, ವ್ಯಾಖ್ಯಾನಗಳ ಅನುವಾದ ಕೊಡಬೇಕೆನ್ನುವ ಸ್ಪಷ್ಟ ಉದ್ದೇಶ ಅದರದು. ಉದಾಹರಣೆಗೆ, ಸುಮಧ್ವ ವಿಜಯ.

ನೂರು ವರ್ಷಗಳ ಹಿಂದೆ, ತಂತಮ್ಮ ಮತಪಂಥ ಇಲ್ಲವೆ ಕುಲಕಸುಬುಗಾರಿಕೆಯನ್ನು ಎತ್ತಿ ಹಿಡಿಯಲು ಪತ್ರಿಕೆಯೊಂದನ್ನು ಹೊರಡಿಸುವ ಎತ್ತುಗಡೆ, ವ್ಯಾಪಕವಾಗಿ ಕಂಡುಬರುತ್ತದೆ. ಇದರಲ್ಲಿ ಕ್ರಿಸ್ತೀಯರು ಹಾಗೂ ವೀರಶೈವರದು ವಿಶೇಷ ಉತ್ಸಾಹ. ಅವರಂತೆ ಈಡಿಗರು, ದೇವಾಡಿಗರು, ಹವ್ಯಕರೇ ಮೊದಲಾದವರ ಆಸಕ್ತಿಯೂ ಗಣನೀಯವಾಗಿತ್ತು. ವೈದಿಕ ಧರ್ಮದ ಪ್ರಸಾರಕ್ಕೆಂದೇ ಹತ್ತಾರು ಪತ್ರಿಕೆಗಳು ಜನ್ಮ ತಾಳಿದುವು. ಅವುಗಳ ಒಟ್ಟಿನ ನಿಲುವು ಸಂಸ್ಕೃತದಲ್ಲಿರುವ ಶಾಸ್ತ್ರಗ್ರಂಥಗಳನ್ನು ಕನ್ನಡದಲ್ಲಿ ಪ್ರಕಟಿಸಬೇಕೆಂಬುದಾಗಿತ್ತು. ಅಂಥ ಒಂದು ಪತ್ರಿಕೆಯ ಹೆಸರನ್ನು ಗಮನಿಸಬಹುದು; **'ಧರ್ಮಾದಿ ಪುರುಷಾರ್ಥ'** (ಬೆಳಗಾಂವಿ).

**'ತತ್ವಪ್ರಕಾಶಿಕಾ'** ಎನ್ನುವುದಾದರೂ ೧೯೦೮ರಷ್ಟು ಹಿಂದಿನ ಮಾಸಪತ್ರಿಕೆ. ಸ್ವಾಮಿರಾಮಾಚಾರ್ ಮತ್ತು ಕೆ. ಹನುಮಂತರಾವು ಎಂಬವರು ಕಾತಾಳ ಗ್ರಾಮದಿಂದ (ಈಗಿನ ಆಂಧ್ರಪ್ರದೇಶದ ಆದವಾನಿ ತಾ.) ಹೊರಡಿಸುತ್ತಿದ್ದರು. ೨೪ ಪುಟಗಳ ಮಿತಿಯಲ್ಲಿಯೆ ಬ್ರಹ್ಮಸೂತ್ರ ಭಾಷ್ಯ, ಪರಾಪರ ತತ್ವದೀಪಿಕೆ ಮುಂತಾದ ಕೃತಿಗಳ ಅನುವಾದವನ್ನು ಒದಗಿಸಿದರು.

ಮೇಲೆ ಕಾಣಿಸಿದ ಎರಡು ಮಧ್ವ ಪತ್ರಿಕೆಗಳ ನಂತರ ಹೆಸರಿಸಬೇಕಾದದ್ದು 'ಮಧ್ವ ಸಿದ್ಧಾಂತ ಪ್ರಕಾಶಿನೀ'. ಇದೇ ಹೆಸರಿನ 'ಸಭಾ' ಮೈಸೂರಲ್ಲಿದ್ದು ಅದರ ವತಿಯಿಂದ ಪ್ರತಿ ತಿಂಗಳು ನಿಯಮಿತವಾಗಿ ಹೊರ ಬರುತ್ತಿತ್ತು. ಸಂಸ್ಥೆಯ ಕಾರ್ಯದರ್ಶಿಗಳಾಗಿದ್ದ ಕೆ. ವ್ಯಾಸಾಚಾರ್ಯ ಮತ್ತು ವೈ. ಶ್ರೀನಿವಾಸರಾವ ಪತ್ರಿಕೆಯ ಆರ್ಥಿಕ ಜವಾಬ್ದಾರಿಯನ್ನು ಹೊತ್ತಿದ್ದರು. ಎಚ್. ನರಸಿಂಗರಾವ್ ಎಂಬ ಹೆಸರು ಸಂಪಾದಕರ ಸ್ಥಾನದಲ್ಲಿದೆ. ಆರಂಭದ ೧೯೧೭ರಿಂದ ಹತ್ತು – ಹನ್ನೆರಡು ವರ್ಷಗಳಾದರೂ ತನ್ನ ಕರ್ತವ್ಯವನ್ನು ಚೆನ್ನಾಗಿಯೇ ನಿರ್ವಹಿಸುತ್ತಿತ್ತೆಂದು ಹೇಳಬಹುದು. ಅದರಲ್ಲಿ ಗೀತಾ, ಷಟ್‌ಪ್ರಶ್ನೋಪನಿಷತ್, ಕಪಿಲರಹಸ್ಯ ಮೊದಲಾದುವು ಮೂಲದೊಡನೆ ವ್ಯಾಖ್ಯಾನಸಹಿತವಾಗಿ ಪ್ರಕಟವಾಗಿವೆ. ೧೯೨೩ನೆಯ ವರ್ಷದ ಒಂದು ಸಂಚಿಕೆಯಲ್ಲಿ ಕಾರ್ಯದರ್ಶಿಗಳು, ಚಂದಾದಾರರು ಕಡಿಮೆಯಾಗಿ ಆರ್ಥಿಕ ತೊಂದರೆಯಲ್ಲಿದ್ದುದನ್ನು ಕಾಣಿಸಿದ್ದಾರೆ. ಅಂಥ ತಾಪತ್ರಯದಲ್ಲಿಯೂ ಪತ್ರಿಕೆಯನ್ನು ಮುಂದುವರಿಸಿದ್ದರಲ್ಲಿಯ ಅವರ ನಿಷ್ಠೆ ಮೆಚ್ಚಬೇಕಾದದ್ದೇ.

ಕ್ರಿ.ಶ. ೧೯೨೦ರಿಂದ ನಮಗೆ, ನಾಡಿನ ವಿವಿಧ ಕಡೆಗಳಿಂದ ಮಾಧ್ವ ಪತ್ರಿಕೆಗಳು ಕಾಣಸಿಕೊಂಡಿವೆ. ಮೊದಲಿಗೆ ಹೆಸರಿಸಬೇಕಾದ್ದು ಹೆಸರಾಂತ 'ಶ್ರೀಕೃಷ್ಣ ಸಂದೇಶ'. ಅದರ ಆರಂಭ ಬೆಂಗಳೂರಿನ ಚಾಮರಾಜಪೇಟೆಯಲ್ಲಿ (೧೯೨೧ – ). ಅದು ಸಂಪಾದಕ ಮುದ್ರಾಡಿ ಜನಾರ್ದನಾಚಾರ್ಯರ ಸಾಪ್ತಾಹಿಕ ಪತ್ರಿಕೆ. ಅನಂತರ ತಮ್ಮ ಹುಟ್ಟೂರಾದ ಉಡುಪಿಗೇ ಕೊಂಡೊಯ್ದರು (೧೯೩೨). ಅಲ್ಲಿಯ ಪ್ರಕಾಶನದ ಹೊಣೆ ಹೊತ್ತವರು ಯು. ವೆಂಕಟರಮಣಾಚಾರ್ಯ ಹಾಗೂ ಕರಂಬಳ್ಳಿ ರಾಜಗೋಪಾಲಾಚಾರ್ಯರು. ಅವರು ನಡೆಸುತ್ತಿದ್ದ ವೈದಿಕ ಧರ್ಮವೀರ ಸಂಘವು ಮಧ್ವಮತ ಪ್ರಸಾರದ ಇನ್ನು ಹಲವು ಕಾರ್ಯಗಳನ್ನು ಕೈಕೊಂಡಿದ್ದಿತು. ದ್ವಿತೀಯ ಮಹಾಯುದ್ಧದ ಆರಂಭದಲ್ಲಿ ಪತ್ರಿಕೆ ನಿಂತು ಹೋಯಿತು.

ಈ ಸುಮಾರಿಗೆ, ಅದೇ ಶ್ರೀಕೃಷ್ಣ ಸಂದೇಶವೆಂಬ ಹೆಸರನ್ನಿಟ್ಟುಕೊಂಡು ಶ್ರೀನಿವಾಸಾಚಾರ್ಯ ಬುರ್ಲಿ ಎನ್ನುವವರು ಬಾಗಲಕೋಟೆಯಿಂದ ಪತ್ರಿಕೆಯನ್ನು ಹೊರಡಿಸಲೆತ್ನಿಸಿದರು. ಶ್ರೀನಿವಾಸರಾವ ಮಂಗಳವೇಢೆಯವರು ಅದರ ಮುದ್ರಕರು. ಆದರೆ ಪತ್ರಿಕೆ ಹೆಚ್ಚು ಕಾಲ ಬದುಕಿದಂತಿಲ್ಲ.

'ದ್ವೈತ ದುಂದುಭಿ'! ಎಂತಹ ಪ್ರಚೋದಕ ಹೆಸರು! ನನ್ನ ವಿದ್ಯಾರ್ಥಿ ದೆಸೆಯಲ್ಲಿ ಅದರ ಕೆಲ ಸಂಚಿಕೆಗಳನ್ನು ನೋಡಿ ಅಭಿಮಾನ ಪಟ್ಟಿದ್ದೆ. ಸಾಕಷ್ಟು ಸಮೃದ್ಧವಾದ ಸಾಹಿತ್ಯವನ್ನು ಅದು ಒದಗಿಸುತ್ತಿತ್ತು. ಸಂಸ್ಕೃತದಲ್ಲಿಯೂ ಲೇಖನಗಳಿದ್ದ ಹಾಗೆ ನೆನಪು. ೧೯೨೩ರಲ್ಲಿ ವಿಜಾಪುರದಿಂದ ಆರಂಭವಾದರೂ ಮುಂದೆ ತ್ರೈಮಾಸಿಕವಾದಾಗ ಬಾಗಲಕೋಟೆಗೆ ಸ್ಥಳಾಂತರ ಹೊಂದಿತು. ಸಂಪಾದಕರೆಂದು ದುಂದುಭಿಯನ್ನು ಮೊಳಗಿಸಿದವರು ಕಟಗೇರಿ ಅನಂತಾಚಾರ್ಯ ಮತ್ತು ರಾಮಾಚಾರ್ಯರು ಮಹಾಯುದ್ಧವು ಈ ಪತ್ರಿಕೆಯನ್ನು ಮೊಟಕುಗೊಳಿಸಿತು. ೨೪ ಪುಟಗಳ ಮಿತಿಯಲ್ಲಿಯೆ ಬ್ರಹ್ಮಸೂತ್ರ ಭಾಷ್ಯ, ಪರಾಪರ ತತ್ತ್ವದೀಪಿಕೆ, ಮುಂತಾದ ಕೃತಿಗಳ ಅನುವಾದವನ್ನು ಒದಗಿಸಿದರು.

ಜಯ! ಬರೀ ಎರಡಕ್ಷರದ ಒಂದು ಪತ್ರಿಕೆ. ಮೊದಲ ಸಂಚಿಕೆ ೧೯೨೮ರದು. ಶ್ರೀ ರಂಗಭೀಮಾಚಾರ್ಯರು ಅದರ ಸಂಪಾದಕರು. ಎಷ್ಟು ದಿನ ನಡೆಯಿತೊ ತಿಳಿಯದು.

ಯುದ್ಧವೆಂಬ ಕುತ್ತನ್ನು ನೀಗಿಕೊಂಡು ಬಹುಕಾಲ ಬಾಳಿದ ಪತ್ರಿಕೆ 'ಪರಮಾರ್ಥ ಚಂದ್ರೋದಯ' (೧೯೨೮ –), ಪತ್ರಿಕೆಗಳಿಗೆ ಯಾವುದೊಂದು ಸಂಸ್ಥೆಯ ಆಸರೆ ಬೇಕೇ ಬೇಕು ಎಂದು ಕಾಣುತ್ತದೆ. ಸುಪ್ರಸಿದ್ಧ ಗೆಜೆಟಿಯರ್ ರಚಯಿತ ಸಿ. ಹಯವದನರಾಯರು ಕಾರ್ಯದರ್ಶಿಗಳಾಗಿದ್ದ 'ದಾಸಕೂಟ ಸಭಾ' ಎನ್ನುವುದು ಈ ಪತ್ರಿಕೆಯ ಹಿನ್ನೆಲೆಯಾಗಿತ್ತು. ಸ್ಥಾಪಿಸಿದವರು ಮಹಾನುಭಾವರಾದ 'ಪರಮಪ್ರಿಯ ಸುಬ್ಬರಾಯದಾಸರು'. ಅವರ ಊರಾದ ದೇವರಾಯನದುರ್ಗದಲ್ಲಿ ಪತ್ರಿಕೆ ಜನ್ಮ ತಾಳಿದ್ದಾದರೂ, ಮುದ್ರಣಾನುಕೂಲತೆಯ ದೃಷ್ಟಿಯಿಂದ ತುಮಕೂರು, ಬೆಂಗಳೂರುಗಳಿಗೆ ಅಲೆದಾಡಿತು. ೧೯೬೫ರ ವರೆಗಂತೂ ಬದುಕಿದ್ದುದು ನಿಜ. ಅಂದರೆ ಸುಮಾರು ನಾಲ್ಕು ದಶಕಗಳ ವರೆಗೆ ಮತ ಪ್ರಸಾರದ ಜೊತೆಗೆ ದಾಸ ಸಾಹಿತ್ಯವನ್ನೂ ಪೋಷಿಸಿದ್ದುದು ಗಣನೀಯವಾದದ್ದು.

'ಹರಿದಾಸ' ಎಂಬ ಹೆಸರಿಟ್ಟುಕೊಂಡರೂ ಈ ಕೊಳ್ಳೆಗಾಲದ ಪತ್ರಿಕೆಯ ಧ್ಯೇಯ ದಾಸಸಾಹಿತ್ಯ ಎಂದೇನಿರಲಿಲ್ಲ. ಸಂಸ್ಕೃತ ತಿಳಿಯದವರಿಗಾಗಿ ಮಾಧ್ವ ಶಾಸ್ತ್ರೀಯ ಗ್ರಂಥಗಳ ಕನ್ನಡ ರೂಪಾಂತರಕ್ಕೆ ಹೆಚ್ಚು ಗಮನ ಕೊಡಲಾಯಿತು. ಉದಾಹರಣೆಗೆ ನರಹರಿತೀರ್ಥರ ಕೃತಿಸಂಪದ. ಸಂಪಾದಕರಾದ ಎನ್. ದೇವರಾಜರಾವ್ ಅದನ್ನು ಕೆಲಕಾಲ ಕೊಯಮತ್ತೂರಿಗೆ ಕೊಂಡೊಯ್ದುದ್ದೇಕೆಂಬುದು ತಿಳಿಯದು. ಅಂತೂ ೧೯೩೦ರಿಂದ ಆರಂಭವಾದ ಈ ಪತ್ರಿಕೆ ಹೆಚ್ಚು ಕಾಲ ಬಾಳಿದಂತಿಲ್ಲ.

ಮತ್ತೆ ಮೈಸೂರಿಗೆ ಬರೋಣ. ಅಲ್ಲಿಯ ಉತ್ತರಾದಿಮಠದ ಕಾರ್ಯಕರ್ತರು 'ಶ್ರೀಪೂರ್ಣಬೋಧ' ವೆಂಬ ಮಾಸಿಕವನ್ನು ೧೯೩೫ರಲ್ಲಿ ಕೈಗೆತ್ತಿಕೊಂಡರು. ಕಾಶಿ ಪ್ರಾಣೇಶಾಚಾರ್ಯ ಮತ್ತು ಕೆ. ರಾಮಚಂದ್ರಾಚಾರ್ಯರು ಸಂಪಾದಕರಾಗಿದ್ದರು. ಅದರ ಒಂದು ಸಂಚಿಕೆಯಲ್ಲಿ ಆಗಿನ ಮೈಸೂರು ಮಹಾರಾಜರು ಆರ್ಥಿಕ ಸಹಾಯ ('ಉದಾರಾಶ್ರಯ') ನೀಡಿದ್ದಾಗಿ ಉಲ್ಲೇಖವಿದೆ.

ಅದರ ಮರುವರ್ಷ ಇರಬೇಕು, ಬೆಳಗಾಂವಿಯ ತಾತಾಚಾರ್ಯ ಪಾಂಘ್ರಿ ಮತ್ತು ರಾಘವೇಂದ್ರಾಚಾರ್ಯ ಮುನವಳ್ಳಿ ಇವರು 'ಧರ್ಮಾದಿ ಪುರುಷಾರ್ಥ' ಎಂಬ ವಿಶಿಷ್ಟ ಹೆಸರಿನ ಪತ್ರಿಕೆಯಿಂದ ಸ್ವಮತ ಪ್ರಸಾರದಲ್ಲಿ ತೊಡಗಿದರು. ಆದರೆ ಒಂದೆರಡು ವರ್ಷ ಮಾತ್ರ. ಆಮೇಲೆ ಅವರು 'ಶ್ರೀ ವ್ಯಾಸಧರ್ಮ' ಎಂಬ ಪತ್ರಿಕೆ ಹೊರಡಿಸಿದುದಾಗಿ ತಿಳಿದು ಬರುತ್ತದೆ.

**ಭಾಗಶಃ ಮಧ್ವಪರ ಪತ್ರಿಕೆಗಳು:** ಕೆಲವು ಪತ್ರಿಕೆಗಳು ವಿಶೇಷತಃ ಉಡುಪಿ ಕಡೆಯವು. ಅನ್ಯವಿಷಯಕ ಲೇಖನ, ಸಣ್ಣಕತೆ, ಕವಿತೆ ಮುಂತಾದುವನ್ನು ಪ್ರಕಟಿಸುತ್ತಿದ್ದರೂ ತಮ್ಮ ಮತದತ್ತ ಹೆಚ್ಚು ಒಲವನ್ನು ತೋರಿದುದುಂಟು. ಮಾಧ್ವಮತಾನುಯಾಯಿಗಳು ಸಂಪಾದಕರಿದ್ದುದೇ ಅದರ ಕಾರಣ. ೧೮೮೪ರಲ್ಲಿ ಉಡುಪಿಯಿಂದ ಹೊರಡುತ್ತಿದ್ದ 'ಸುದರ್ಶನ' ಪತ್ರಿಕೆ ಒಂದು ಶ್ರೇಷ್ಠ ಮಾಸಪತ್ರಿಕೆಯಾಗಿ ಇಡೀ ಕರ್ನಾಟಕದಲ್ಲಿ ಹೆಸರು ಮಾಡಿದ್ದಿತು. ಕುಂಬಳೆ ಕೃಷ್ಣರಾವ ಮತ್ತು ಬೈಲೂರು ರಾಮರಾವ್ ಇವರುಗಳು ಸಂಪಾದಕರಾಗಿದ್ದ ಈ ಪತ್ರಿಕೆ ಉಡುಪಿಯ ಹಿಂದೂ ಮುದ್ರಣಾಲಯದಲ್ಲಿ ಪ್ರಕಟವಾಗುತ್ತಿತ್ತು. ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳೂ ಅದರಲ್ಲಿ ಪ್ರಕಟವಾಗಿವೆ. ಉದಾಹರಣೆಗೆ 'ವರಾಹತಿಮ್ಮಪ್ಪ' ಎಂಬ ಅಂಕಿತದವರ ಕೀರ್ತನೆಗಳು.

ಇಷ್ಟೇ ಪ್ರಸಿದ್ಧಿ ಉಡುಪಿಯಿಂದಲೇ ಹೊರಡುತ್ತಿದ್ದ 'ಶ್ರೀಕೃಷ್ಣಸೂಕ್ತಿ'ಗೂ ಇದ್ದಿತು. ಖ್ಯಾತ ಸಾಹಿತಿ ಕೆರೋಡಿ ಸುಬ್ಬರಾಯರು ಅದರ ಸಂಪಾದಕರು. ಏಳೆಂಟು ವರ್ಷಗಳಾದ ಮೇಲೆ ಪತ್ರಿಕೆ ನಿಂತಿತು. ೧೯೪೭ ರಲ್ಲಿ ಕಡೇಕಾರ ರಾಜಗೋಪಾಲಕೃಷ್ಣರಾವ್ ಎಂಬ ಇನ್ನೊಬ್ಬ ಮಾಧ್ವ ವಿದ್ವಾಂಸರು ಕೆಲಕಾಲ ನಡೆಸಿದರು. 'ಪ್ರಕಾಶಿನೀ' ಎಂಬ ಸುರತ್ಕಲ್ಲಿನ ಪತ್ರಿಕೆಯನ್ನು ಇದೇ ಸಾಲಿಗೆ ಸೇರಿಸಬೇಕೇನೋ. ೧೯೪೨ರಲ್ಲಿ ಎಂದರೆ ಸುರುವಿಗೆ ಶ್ರೀ ಟಿ. ಶ್ರೀಪತಿ ಎನ್ನುವವರು ಸಂಪಾದಕರಿದ್ದರು. ಮುಂದೆ ಅದು ಉಡುಪಿಗೆ ಸ್ಥಳಾಂತರವಾದ ಮೇಲೆ ಬನ್ನಂಜೆ ರಾಮಾಚಾರ್ಯರು ಮತ್ತು ವಿ. ವ್ಯಾಸರಾವ್ ಎನ್ನುವವರು ಸಂಪಾದಕರಾಗಿ ಶ್ರಮಿಸಿದರು. ಮಾಧ್ವ ಸಮ್ಮಿತದ ಲೇಖನಗಳಿದ್ದರೂ ಅವಕ್ಕೆ ಗೌಣ ಸ್ಥಾನ. ಅಲೆವೂರು ಶೇಷಪ್ಪಯ್ಯನವರ 'ಉದಯಭಾರತ' ಮಾತ್ರ ಹಾಗಿರಲಿಲ್ಲ. ಬೇರೆ ಕತೆ-ಲೇಖನಗಳಿದ್ದರೂ ಉಡುಪಿಯ ಮಠಗಳ ಕಾರ್ಯಕ್ರಮಗಳಿಗೆ ಪ್ರಾಶಸ್ತ್ಯವಿದ್ದಿತು. ೧೯೩೨ರ ಸುಮಾರಿಗೆ ಸುಪ್ರಸಿದ್ಧ ವಿದ್ಯಾಮಾನ್ಯತೀರ್ಥರು ಪರ್ಯಾಯಸ್ಥರಿದ್ದಾಗ ಅವರ ತರುಣ ವಯದ ಸೊಗಸಾದ ಚಿತ್ರವನ್ನೂ ಅವರ ವಿಶೇಷ ಸಾಧನೆಯನ್ನೂ ವಿವರವಾಗಿ ಪ್ರಕಟಿಸಿದ್ದರು. ಈ ಪತ್ರಿಕೆಯ ಪ್ರಕಾಶಕರಾಗಿ ವೈದಿಕ ಧರ್ಮ ಪರಿಷತ್ತಿನ ಕಾರ್ಯಕರ್ತ ಶ್ರೀನಿವಾಸ ಪುರುಷೋತ್ತಮ ಭಟ್ಟ ಇವರ ಹೆಸರನ್ನೂ ನೆನೆಯಬೇಕು.

ಪರ್ಯಾಯ ನಿಮಿತ್ತವಾಗಿ, ಪತ್ರಿಕೆಗಳ ಮೂಲಕ ನಡೆದ ಮಾಧ್ವ ಮತ ಪ್ರಸಾರವನ್ನು ವಿಶೇಷವಾಗಿ ಪ್ರಸ್ತಾಪಿಸತಕ್ಕದ್ದು, ದಕ್ಷಿಣಕನ್ನಡ ಪರಿಸರದ ಎಲ್ಲ ಪತ್ರಿಕೆಗಳೂ ಮಾಧ್ವಪರ ಲೇಖನಗಳನ್ನು ಪ್ರಕಟಿಸುವಲ್ಲಿ ವೈವಿಧ್ಯವನ್ನು ತೋರಿವೆ. ಪ್ರತಿ ಎರಡು ವರ್ಷಕ್ಕೂ ಈ ಲೇಖನ ಬಳುವಳಿ ಇಂದಿಗೂ ಕಾಣಿಸಿಕೊಂಡಿದೆ. ಕೃಷ್ಣಾಪುರ ಮಠದಿಂದ ' ಶ್ರೀಕೃಷ್ಣ ಪರ್ಯಾಯ ಪ್ರಕಾಶಿನೀ ' ಎಂಬ ನಿಯತಕಾಲಿಕವೇ ಕೆಲ ಸಮಯ (೧೯೪೨) ಹೊರಟಂತೆ ಕಾಣುತ್ತದೆ.

ಇತ್ತ ಬೆಂಗಳೂರಿನಿಂದ ಹೊರಡುತ್ತಿದ್ದ ಸುವಿಖ್ಯಾತ 'ಸುಬೋಧ'ವನ್ನೂ ಭಾಗಶಃ ಮಧ್ವಪರ ಪತ್ರಿಕೆಯೆಂದೇ ಹೇಳಬೇಕು. ಸಂಪಾದಕ ಎಂ. ರಾಮರಾಯರು ಅಪ್ಪಟ ಮಾಧ್ವರು. ಹರಿದಾಸ ಸಾಹಿತ್ಯಕ್ಕೆ ಅವರಿಂದ ಅನುಪಮ ಸೇವೆ ಸಂದಿದೆ.

## ಸ್ವಾತಂತ್ರ್ಯೋತ್ತರ ಕಾಲದಲ್ಲಿ

ಮೊದಲಿಗೆ ಹೆಸರಿಸಬೇಕಾದದ್ದು 'ಧರ್ಮಸಂದೇಶ', ಜಿ. ಎಸ್. ಕೃಷ್ಣರಾವ್ ಅದನ್ನು ಸಂಪಾದಿಸಿ ಚಾಮರಾಜ ಪೇಟೆಯ ಅದೇ ಶ್ರೀಕೃಷ್ಣಪ್ರೆಸ್ ನಲ್ಲಿ ಮುದ್ರಿಸುತ್ತಿದ್ದರು. ಆ ಮುಂದೆ ಪತ್ರಿಕೆಯು ದ್ವೈಮಾಸಿಕ, ತ್ರೈಮಾಸಿಕವಾಗಿ ತೆವಳುತ್ತ ಸಾಗಿತ್ತು. ಪತ್ರಿಕೆಯನ್ನು ಆ ಮುಂದೆ ಡಿ. ಎಸ್. ಕೃಷ್ಣಾಚಾರ್ಯರು ಮುನ್ನಡೆಸಿದರು. (೧೯೬೩ರಿಂದ) ಎಷ್ಟು ಕಾಲ? ತಿಳಿಯದು.

'ಸರ್ವಜ್ಞ ಸಂದೇಶ' ಎನ್ನುವುದು ಅದೇ ಬೆಂಗಳೂರಿನ ಚಾಮರಾಜಪೇಟೆಯಿಂದ ೧೯೪೮ರ ಮಧ್ಯದಲ್ಲಿ ತಲೆಯೆತ್ತಿತು. ಸಂಸ್ಥಾಪಕ ಸಂಪಾದಕರು, ಖ್ಯಾತಿವೆತ್ತ ಮಾಧ್ವಗ್ರಂಥಕಾರರಾದ ಚೀಮನಹಳ್ಳಿ ರಘುನಾಥಾಚಾರ್ಯ, ಪ್ರೌಢ ವಿಷಯಗಳ ಪತ್ರಿಕೆ. ಅದಕ್ಕಾಗಿಯೋ ಏನೋ ಕೆಲವೇ ವರ್ಷ ಬಾಳಿತು.

ಇದೇ ಸಂದರ್ಭದಲ್ಲಿ ಸುಪ್ರಸಿದ್ಧ 'ಪರಿಮಳ' ಪತ್ರಿಕೆಯನ್ನು ತುಸು ವಿವರವಾಗಿ ಪ್ರಸ್ತಾಪಿಸಬೇಕು(೧೯೫೩). "ಸ್ವಸ್ತಿಪಂಥಾಮನುಚರೇಮ" ಎಂಬ ಋಗ್ವೇದೀಯ ಧ್ಯೇಯವಾಕ್ಯವನ್ನು ಎದ್ದು ಕಾಣುವ ಹಾಗೆ ಮುದ್ರಿಸುತ್ತಿದ್ದರು. ನಂಜನಗೂಡಿನ ಪರಿಮಳ ಸಂಶೋಧನ ಪ್ರಕಾಶನ – ಎಂದೇ ಹೆಸರಿಟ್ಟುಕೊಂಡು ಗ್ರಂಥ ಪ್ರಕಟಣ ಕಾರ್ಯವನ್ನೂ ಕೈಗೊಂಡಿದ್ದರು. ಡಾ|| ಹುಲಿ ಕೆ. ವೇದವ್ಯಾಸಾಚಾರ್ಯ ಹಾಗೂ ರಾಜಾ ಎಸ್. ಗುರುರಾಜಾಚಾರ್ಯರ ಸಮರ್ಥ ನೇತೃತ್ವದಲ್ಲಿ ಹೊರಡುತ್ತಿದ್ದ ಈ ಪತ್ರಿಕೆಯು ಸ್ವಾಭಾವಿಕವಾಗಿಯೇ ಮೇಲ್ಮಟ್ಟದ್ದೆನಿಸಿತು. ಎರಡನೆಯವರ ಲೇಖನಗಳು ಸಾಲದಾದಾಗ ಶ್ರೀ ಗುರುರಾಜಾರ್ಯರು ಸ್ವಯಂ ಲೇಖನಗಳನ್ನು 'ಕಮಲೇಶ' ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದರು. ನಾಡಿನ ಬೇರೆ ಭಾಗಗಳಿಂದಲೂ ಲೇಖನಗಳು ಪ್ರಕಟಿಸಲ್ಪಟ್ಟಿವೆ. ೧೯೬೭ರ ಒಂದು ಸಂಚಿಕೆಯಲ್ಲಿ ಕುಮಾರಿ ಉಷಾ ಮಳಗಿ, ಅಸಿಸ್ಟೆಂಟ್ ಲೆಕ್ಚರರ್, ಸರಕಾರೀ ಮಹಿಳಾ ಪಾಲಿಟೆಕ್ನಿಕ್, ಹುಬ್ಬಳ್ಳಿ – ಎಂಬ ಉದಯೋನ್ಮುಖ ಮಹಿಳೆ ಬರೆದ ಲೇಖನವೂ ಇದೆ. ವಿಷಯ – ಬ್ರಾಹ್ಮಣರ ಮೇಲ್ಮೆ! ಈ ಪತ್ರಿಕೆಯಲ್ಲಿ ಕೆಲವು ಗ್ರಂಥಗಳೇ ಧಾರಾವಾಹಿಯಾಗಿ ಬಂದುವು. ಉದಾ: ಎಸ್. ವಿ. ಭೀಮಭಟ್ಟರು ಶ್ರೀ ರಾಘವೇಂದ್ರರ ವ್ಯಾಖ್ಯಾನವನ್ನನುಸರಿಸಿ ಕಾಠಕೋಪನಿಷತ್ತನ್ನು ವಿವರಿಸಿದುದು. ರಿತ್ತಿ ವೆಂಕಣ್ಣಾಚಾರ್ಯರ 'ನ್ಯಾಯ ಮುಕ್ತಾವಳಿ' ಲೇಖನ ಮಾಲೆಯು ಇದೇ ಸದರಿನಲ್ಲಿ ಬರುವಂತಹುದು. ಡಾ| ರಂಗನಾಥ ಮುಗಳಿಯವರು 'ಅತಿಥಿ ಸತ್ಕಾರ'ದ ಕುರಿತು ಬರೆದದ್ದು ಅಪೂರ್ವವೆನಿಸಿತು. ೧೯೭೭ರ ಒಂದು ಸಂಚಿಕೆಯಲ್ಲಿ ದಿಲ್ಲಿಯಲ್ಲಿ ಜರುಗಿದ ವಿಶ್ವಸಂಸ್ಕೃತ ಸಮ್ಮೇಳನದ ವಿಸ್ತೃತ ವರದಿ ಬಂದಿದೆ. ಹೀಗೆ ಪತ್ರಿಕೆಯು ವಿಶಾಲವೃಷ್ಟಿಯುಳ್ಳದ್ದಾಗಿದ್ದಿತು.

ವ್ಯಾಸರಾಯ ಮಠದಿಂದ ಹೊರಡುತ್ತಿರುವ 'ತತ್ತ್ವಚಂದ್ರಿಕಾ' ಪತ್ರಿಕೆಯನ್ನು ಇಲ್ಲಿಯೇ ಕಾಣಿಸಬೇಕು. ಹರಿದಾಸ ಸಾಹಿತ್ಯ ರಚಯಿತರೂ ಆಗಿದ್ದ ಶ್ರೀ ವಿದ್ಯಾಪ್ರಸನ್ನತೀರ್ಥರು ಇದರ ಸ್ಥಾಪಕರೆಂದು ಕೇಳಿದ್ದೇನೆ. ಶ್ರೀಗಳವರ ನಿರ್ಯಾಣದ ಅನಂತರ ಶ್ರೀಪಾದ ಪುತ್ರ ಶ್ರೀ ಜಯತೀರ್ಥಾಚಾರ್ಯರು ಅದನ್ನು ಮುಂದುವರಿಸಿದ್ದಾರೆ; ಈಗಿನ ಶ್ರೀ ವಿದ್ಯಾವಾಚಸ್ಪತಿತೀರ್ಥರ ಪೋಷಣೆಯಿಂದ.

'ವಾಸುದೇವಪದ ಸಂತತಿ ಸಂಗಿ' ಎಂಬ ಶ್ರೀ ಮಧ್ವಾಚಾರ್ಯರ ಉಕ್ತಿಯನ್ನೇ ಪತ್ರಿಕೆಯ ಹೆಸರನ್ನಾಗಿ ಇಟ್ಟುಕೊಂಡದ್ದು ಒಂದು ವಿಶೇಷವಲ್ಲವೆ! ಅದಕ್ಕೆ ಪ್ರೇರಕರು ಶ್ರೀ ಪಿ. ವಿಷ್ಣುತೀರ್ಥರು. ಮಧ್ವಶಾಸ್ತ್ರ ಪಂಡಿತರು; ಪರಮ ಸಾಧುಗಳು. ಅವರು ಬರೆದ ಗ್ರಂಥಗಳನ್ನಷ್ಟೆ ಪ್ರಕಟಿಸುವುದಕ್ಕೆಂದು ಈ ಪತ್ರಿಕೆ ೧೯೮೦ರ ದಶಕದಲ್ಲಿ ಜನ್ಮತಾಳಿತು. ಅವರ 'ನಖಸ್ತುತಿ', 'ಶ್ರೀಹರಿವಾಯುಸ್ತುತಿ', 'ಅಷ್ಟಮಹಾಮಂತ್ರ' ಮೊದಲಾದ ಕೃತಿಗಳು ಅಚ್ಚಾದುವು. ಆಮೇಲೆ ಪುಸ್ತಕ – ರೂಪದಲ್ಲಿಯೂ ಹೊರಬಂದಿವೆ. ಈಚೆಗೆ ಎಂದರೆ ೨೦೦೧ರಲ್ಲಿ ಪತ್ರಿಕೆ ಸ್ಥಗಿತವಾಯಿತು.

## ಹರಿದಾಸ ಸಾಹಿತ್ಯ

ದಾಸಸಾಹಿತ್ಯಕ್ಕೆ ಮೀಸಲಾದ ಕೆಲವೇ ಪತ್ರಿಕೆಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಮೊದಲಿಗೆ ಹೇಳಬಹುದಾದದ್ದು ಖ್ಯಾತಿವೆತ್ತ ಹರಿದಾಸರತ್ನಂ ಗೋಪಾಲದಾಸರ 'ಹರಿದಾಸ ಭಾರತೀ' (೧೯೫೦). ಬಸವನಗುಡಿ ಬೆಂಗಳೂರಿನ ಪ್ರಭಾ ಪ್ರೆಸ್ಸಿನಲ್ಲಿ ಅಚ್ಚಾಗುತ್ತಿತ್ತು. ಅವರ ೧೯೫೭ರ ಒಂದು ಸಂಚಿಕೆ ನನ್ನ ಬಳಿ ಇದೆ. ಆಮೇಲೆ ಅದೆಷ್ಟು ದಿನ ನಡೆಯಿತೋ ಗೊತ್ತಿಲ್ಲ.

ಇತ್ತ ಬಳ್ಳಾರಿಯಿಂದ 'ಹರಿದಾಸ ವಿಜಯ' ವೆಂಬ ಮಾಸಿಕವು ೧೯೬೧ರಿಂದ ಹೊರಬರತೊಡಗಿತು. ಮಾಧ್ವ ಗ್ರಂಥಗಳ ಧಾರಾವಾಹಿ ಇದರ ವೈಶಿಷ್ಟ್ಯ. ಹಾಗೆ ಬಂದವುಗಳಲ್ಲಿ ಜಗನ್ನಾಥದಾಸರ ಹರಿಕಥಾಮೃತಸಾರವೂ ಒಂದು. ಸಂಪಾದಕರು ಹರಿದಾಸ ಸಾಹಿತ್ಯದ ಪ್ರಸಾರ ಮಾಡುತ್ತೇವೆಂದು ಹೇಳಿಕೊಂಡು, ಸ್ವಪ್ರಚಾರವನ್ನೇ ಜಾಸ್ತಿಯಾಗಿ ಮಾಡಿಕೊಳ್ಳುವವರಿದ್ದಾಗ, ಇಲ್ಲಿಯ ಸಂಪಾದಕರು ತಮ್ಮ ಹೆಸರನ್ನು ಬಹು ದೊಡ್ಡದಾಗಿ ಈ ರೀತಿ ಕೊಟ್ಟಿದ್ದಾರೆ : "ಶ್ರೀ ಹರಿದಾಸ-ದಾಸ-ದಾಸಾನುದಾಸ"!

## ಇಂದಿಗೂ ಹೊರಡುತ್ತಿರುವ ಪತ್ರಿಕೆಗಳು

ಮಧ್ವಮತದ ಪತ್ರಿಕೆಗಳು ಹತ್ತಕ್ಕೂ ಮೇಲ್ಪಟ್ಟು ಇಂದು ಕಾಣಿಸಿಕೊಳ್ಳುತ್ತಿರುವುದು ಅಭಿಮಾನದ ಮಾತಾಗಿದೆ.

ಮೊದಲಲ್ಲಿ ಹೆಸರಿಸಬೇಕಾದದ್ದು 'ಯುಗಪುರುಷ' (೧೯೪೭). ದ.ಕ. ಜಿಲ್ಲೆಯ ಕಿನ್ನಿಗೋಳಿಯಂತಹ ಸಣ್ಣ ಊರಿನಿಂದ ಹೊರಡಿಸುವ ಸಾಹಸ ಮಾಡಿದವರು ಕೊಡತ್ತೂರು ಅನಂತಪದ್ಮನಾಭರಾಯರು. ಜಾಹೀರಾತಿನ ಬೆಂಬಲದಿಂದ ಮಾಧ್ವ ಪತ್ರಿಕೆ ಹೊರಡಿಸಬೇಕೆನ್ನುವ, ಅದಕ್ಕಾಗಿ ಧಡಪಡಿಸುತ್ತಿದ್ದವರಲ್ಲಿ ಅವರ ಸಾಹಸ ಕಂಡುಬರುತ್ತದೆ. ಅದಕ್ಕಾಗಿ ಅವರದು ಅಖಂಡ ತಿರುಗಾಟ. ನವರಾತ್ರಿ - ದೀಪಾವಳಿಗಳ ಸಂಯುಕ್ತ ಸಂಚಿಕೆ ತರುವುದು ಅವರ ಒಂದು ವೈಶಿಷ್ಟ್ಯ. ಪರ್ಯಾಯ ಕಾಲದಲ್ಲಂತೂ ಸರಿಯೇ ಉಳಿದ ಸಂದರ್ಭಗಳಲ್ಲೂ ವಿಶೇಷ ಸಂಚಿಕೆಗಳನ್ನು ತರುತ್ತಿದ್ದರು. ಪತ್ರಿಕೆಯು ಕುಂಠಿತವಾದ ಕಾಲದಲ್ಲಿ ಅವರ ಮಕ್ಕಳು ಕೈಗೆತ್ತಿಕೊಂಡಿದ್ದಾರೆ. ಆಗಿನಂತೆ ಈಗಲೂ ಮಧ್ವಮತೀಯ ವಿಷಯಗಳ ಪ್ರಕಟಣೆಗೆ ಪ್ರಾಶಸ್ತ್ಯ.

'ಶ್ರೀ ಗುರುಸಾರ್ವಭೌಮ' ಎನ್ನುವ ಪತ್ರಿಕೆ ಪರಿಮಳ ಪತ್ರಿಕೆ ಇದ್ದ ಕಾಲಕ್ಕೇನೇ ಆರಂಭವಾಯ್ತು (೧೯೭೧). ಆದರೆ ಇದರ ಪ್ರಕಟಣೆ ನೇರವಾಗಿ ಮಂತ್ರಾಲಯ ಮಠದಿಂದಲೇ ನಡೆಯಿತು. ಆಗ ವಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ ಎಂಬುವವರು ಸಂಪಾದಕರಿದ್ದರು. ಪರಿಮಳದಂತೆಯೇ ದೊಡ್ಡ ಆಕಾರದ ಪತ್ರಿಕೆ ಇದು. ನಡುವೆ ನಿಂತು ಹೋದದ್ದನ್ನು ಮತ್ತೆ, ಆದರೆ ತ್ರೈಮಾಸಿಕವಾಗಿ ಹೊರಡಿಸುತ್ತಿದ್ದಾರೆ.

೧೯೮೦ರ ದಶಕದ ಅಂದರೆ ಇಪ್ಪತ್ತು ವರ್ಷಗಳ ಹಿಂದೆ ಆರಂಭವಾದ ಪತ್ರಿಕೆಗಳೆಂದರೆ ಮುಂಬಯಿಯ 'ಧರ್ಮಸಂದೇಶ' ಮತ್ತು ಉಡುಪಿಯ 'ಸುಗುಣಮಾಲಾ'. ಧರ್ಮಸಂದೇಶವು ನಾಗರಹಳ್ಳಿ ಶ್ರೀನಿವಾಸಾಚಾರ್ಯರ ಏಕಾಂಗವೀರ ಸಾಹಸ. ಬೆಲೆಯುಳ್ಳ ಲೇಖನಗಳು ಇಂದಿಗೂ ಪ್ರಕಟವಾಗುತ್ತಿವೆ. ಮುಂಬಯಿಯಂತಹ ಊರಲ್ಲಿ ಮಧ್ವಪ್ರಸರಣವನ್ನು ನಿಷ್ಠೆಯಿಂದ ಮಾಡುತ್ತಿದೆ. 'ಸುಗುಣಮಾಲಾ' ಪುತ್ತಿಗೆ ಶ್ರೀಮಠದಿಂದ ಪ್ರಕಟವಾಗುತ್ತದೆ. ಎಂ. ರಾಜಗೋಪಾಲಾಚಾರ್ಯರು ಅದರ ಸಂಪಾದಕರಾಗಿ ಹತ್ತಾರು ವರ್ಷ ಶ್ರಮಿಸಿದರು. ಪುತ್ತಿಗೆ ಮಠದ ಶ್ರೀಗಳವರೇ ಆಸ್ಥೆ ವಹಿಸಿದ್ದರ ಫಲವಾಗಿ, ಅದರ ಚಂದಾದಾರರ ಸಂಖ್ಯೆ ಹತ್ತು ಸಾವಿರವನ್ನು ದಾಟಿದೆ.

ಬೆಂಗಳೂರಿನ ಶ್ರೀನಗರದ ಮಧ್ವಸಂಘದವರು ೧೯೯೬ರಿಂದ 'ಪವಮಾನ'ವೆಂಬ ತ್ರೈಮಾಸಿಕವನ್ನು ಹೊರತರುತ್ತಿದ್ದಾರೆ. ಗಮನಾರ್ಹ ಪತ್ರಿಕೆಗಳ ಸಾಲಿನಲ್ಲಿ ನಿಲ್ಲುವಂತಹದು.

ಕೇವಲ ಕಳೆದ ವರ್ಷದಿಂದ, 'ಶ್ರೀ ಮುಖ್ಯಪ್ರಾಣ', 'ಹರಿದಾಸವಾಹಿನಿ' ಮತ್ತು ಇಂಗ್ಲಿಷ್‌ನಲ್ಲಿ 'ತತ್ತ್ವವಾದ' ಪ್ರಕಟವಾಗತೊಡಗಿದ್ದು ಒಂದು ಶುಭ ಲಕ್ಷಣ. ಇತ್ತೀಚೆಗಿನವುಗಳಾಗಿ ಲಭ್ಯವಿರುವುದರಿಂದ ಇಲ್ಲಿ ಬರಿಯ ಪ್ರಸ್ತಾಪ ಮಾಡಿದ್ದೇನೆ.

## ಅರ್ಧ ಶತಮಾನ ಕಂಡ ಪತ್ರಿಕಾದ್ವಯ

ಕಳೆದ ೪೯-೫೦ ವರ್ಷಗಳಿಂದ ಮಾಧ್ವ ಪತ್ರಿಕೆಗಳು ಬೆಳಕು ಕಾಣುತ್ತಿರುವುದು ಒಂದು ಅಪೂರ್ವ ಸಾಧನೆ. ಇಡೀ ಕನ್ನಡ ಪತ್ರಿಕಾರಂಗದಲ್ಲಿಯೇ ಅರ್ಧ ಶತಮಾನವನ್ನು ತಲುಪಿದ, ತಲುಪುತ್ತಿರುವ ಪತ್ರಿಕೆಗಳು ಇಪ್ಪತ್ತಕ್ಕಿಂತ ಹೆಚ್ಚಿಲ್ಲ.

'ತತ್ತ್ವವಾದ' ಮಾಸಪತ್ರಿಕೆ ಪಂಢರಿನಾಥಾಚಾರ್ಯ ಗಲಗಲಿ ಅವರ ಮಾನಸ ಪುತ್ರ. ಅವರ ಕೈಗೂಸಾಗಿಯೇ ಭರದಿಂದ ಬೆಳೆಯಿತು. ಗದುಗಿನ ಕೆ. ನಾರಾಯಣರಾಯರು ಅದರ ಹೊಣೆ ಹೊತ್ತಿದ್ದರು. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸುರುವಿಗೆ ಕೆಲಕಾಲ ಪ್ರತ್ಯೇಕವಾಗಿ ಹೊರಡುತ್ತಿತ್ತು. ಆಚಾರ್ಯರು ಬೇರೆ ಬೇರೆ ಕಾವ್ಯನಾಮಗಳಿಂದ ಅವೆಷ್ಟೋ ಲೇಖನಗಳನ್ನು ತಾವೇ ಬರೆಯುತ್ತಿದ್ದರು.

ಇತ್ತ ಬೆಂಗಳೂರಲ್ಲಿ ಅಖಿಲ ಭಾರತ ಮಾಧ್ವ ಮಹಾಮಂಡಲದ ಮುಖವಾಣಿಯಾಗಿ ೧೯೫೭ರಲ್ಲಿ ಮಾಸಪತ್ರಿಕೆ ಆರಂಭವಾಗಿತ್ತು. ಕೆಲಕಾಲದ ನಂತರ ಇವೆರಡೂ ಪತ್ರಿಕೆಗಳ ಸೇರ್ಪಡೆಯಾಗಿ, ತತ್ತ್ವವಾದವು ಅ. ಭಾ. ಮ. ಮಂಡಲದ ಮುಖಪತ್ರವಾಗಿ, ವಿಜೃಂಭಿಸತೊಡಗಿತು. ಅದರ ಕಛೇರಿಯು ಬೆಂಗಳೂರಿಗೆ ಸ್ಥಳಾಂತರವಾಗಿ ಕಾರ್ಯವಾಹಕ ಸಂಪಾದಕರು

ಬೇರೆಯಾಗಿದ್ದರೂ, ಪತ್ರಿಕೆಗೆ ಗಲಗಲಿ ಆಚಾರ್ಯರ ಹಿರಿತನ ಇದ್ದೇ ಇದೆ. ಪೇಜಾವರ ಶ್ರೀಗಳವರ ಕಣ್ಣಾರಿಕೆಯಲ್ಲಿ ಪತ್ರಿಕೆ ಯಶಸ್ವಿಯಾಗಿ ತನ್ನ ಕಾರ್ಯ ನಿರ್ವಹಿಸುತ್ತ ಇದೆ.

ಇದೇ ಪೇಜಾವರ ಶ್ರೀಗಳವರ ಪರ್ಯಾಯ ೧೯೬೮ರಲ್ಲಿ ಆರಂಭವಾದಾಗ 'ತತ್ತ್ವವಾದ'ವು 'ನಿವೇದನಾ' ಎಂಬ ಹೆಸರಿನಲ್ಲಿ ಹೊರತಂದ ವಿಶೇಷಾಂಕವು ಅಭೂತಪೂರ್ವವೆನ್ನಿಸಿತು. ಅಸಂಖ್ಯ ಶುಭಸಂದೇಶಗಳು, ಇಂಗ್ಲೀಷ್, ಸಂಸ್ಕೃತ, ಹಿಂದೀ, ತಮಿಳು ಭಾಷೆಗಳಲ್ಲಿಯ ವೈವಿಧ್ಯಪೂರ್ಣ ಲೇಖನಗಳು ಇದರಲ್ಲಿ ಬಂದಿದೆ. ಶ್ರೀ ಪೇಜಾವರ ಶ್ರೀಗಳ ಮೇಲಿನ ಲೇಖನಗಳಂತೂ ಸರಿಯೇ, ಉಡುಪಿಯ ಹಿಂದಿನ ಯತಿವರ್ಯರ ಕುರಿತ ಸ್ತುತಿಪರ ಬರಹಗಳಿವೆ. ಮುಖ್ಯವಾಗಿ ಮಾಧ್ವತತ್ವದ ಎಲ್ಲ ಮಗ್ಗಲುಗಳನ್ನು ಪರಿಚಯಿಸುವ ಬರಹಗಳೂ ಯಥೇಚ್ಛವಾಗಿ ಬಂದಿದೆ. ಅತ್ಯಂತ ಸಂಗ್ರಾಹ್ಯ ಸಂಚಿಕೆ ಎನ್ನಬೇಕು.

ಇದೇ ರೀತಿ ವಿಶಿಷ್ಟ ಸಂದರ್ಭಗಳು ಬಂದಾಗಲೆಲ್ಲ ತತ್ತ್ವವಾದದ ವಿಶೇಷ ಪುರವಣಿಯನ್ನು ತುಂಬ ಮುತುವರ್ಜಿಯಿಂದ ಸಿದ್ಧಪಡಿಸಲಾಗುತ್ತಿತ್ತು. ಉದಾ: ಅಖಿಲ ಭಾರತ ಮಾಧ್ವ ತತ್ವಜ್ಞಾನ ಸಮ್ಮೇಳನಗಳು.

ಇಂದು ಪತ್ರಿಕೆಯ ಆಕಾರ ಕಿರಿದಾಗಿದ್ದರೂ ಈಗಿನ ಸಂಪಾದತಕರು ತತ್ತ್ವವಾದವನ್ನು ಸತ್ವಯುತವಾಗಿಯೇ ಮುಂದುವರಿಸಿದ್ದಾರೆ.

## ಶ್ರೀಸುಧಾ

'ಶ್ರೀಸುಧಾ' ಇನ್ನೆರಡು ವರ್ಷಗಳಿಗೆ ಅರ್ಧಶತಮಾನವನ್ನು ಕಾಣಲಿರುವುದೆಂಬುದು ತುಂಬ ಸಂತಸದ ವಿಷಯ. (೧೯೫೪). ಪ್ರಾರಂಭದಲ್ಲಿ ಎಚ್. ಕೆ. ರಂಗನಾಥಾಚಾರ್ಯರು ಇದರ ಸಂಪಾದಕರಾಗಿ ಅದರ ಬೆಳವಣಿಗೆಗೆ ಸಾಕಷ್ಟು ಶ್ರಮವಹಿಸಿದರು. ಬೆಂಗಳೂರಿನ ಶ್ರೀ ಮನ್ಮಧ್ವ ಸಿದ್ಧಾಂತಾಭಿವೃದ್ಧಿಕಾರಿಣೀ ಸಭಾದ ಮುಖಪತ್ರವೆಂಬಂತೆ ಬೆಳಗಿತು. ಕಾರಣಾಂತರದಿಂದ ೧೯೬೮ರಲ್ಲಿ ಶ್ರೀಸುಧಾ ಧಾರವಾಡಕ್ಕೆ ವರ್ಗಾವಣೆಯಾಯಿತು. ಆಗ ಜಯತೀರ್ಥ ಮಳಗಿಯವರು ಜಯಸತ್ಯಪ್ರಮೋದ ಟ್ರಸ್ಟಿನಿಂದ ಪತ್ರಿಕೆಯನ್ನು ಮುಂದುವರಿಸಿದರು. ಆದರೆ ಈಗಿನ ಪೂಜ್ಯ ಶ್ರೀ ಸತ್ಯಾತ್ಮತೀರ್ಥರ ಅಪೇಕ್ಷೆಯ ಮೇರೆಗೆ ಬೆಂಗಳೂರಿಗೇ ಮರಳಿ ಬಂದಿದೆ. ಎ.ಬಿ. ಶಾಮಾಚಾರ್ಯರ ಸಮರ್ಥ ಸಂಪಾದಕತ್ವದಿಂದಾಗಿ ಪತ್ರಿಕೆ ಪ್ರತಿ ತಿಂಗಳು ತಪ್ಪದೇ ನಮ್ಮ ಕೈ ಸೇರುತ್ತಲಿದೆ.

ಶ್ರೀ ಸುಧಾದ ಹಿಂದಿನ ಲೇಖನ ಸಂಪದ ಅಮೌಲ್ಯವಾದದ್ದು. ಅನೇಕ ಪಂಡಿತವರ್ಯರ ಲೇಖನಗಳನ್ನು ಅಲ್ಲಿ ಕಾಣುತ್ತೇವೆ. ವಿಶೇಷ ಸಂದರ್ಭದ ಪುರವಣಿಗಳೂ ಪ್ರಕಟವಾಗಿವೆ. ಉದಾ: ಶ್ರೀ ಜಯತೀರ್ಥರ ೬೦೦ನೆಯ ವರ್ಷದ ಆರಾಧನೆ. ಈ ಪತ್ರಿಕೆಯ ಸುವರ್ಣ ಮಹೋತ್ಸವ ಸಂಚಿಕೆಯನ್ನೂ ಕಾಯ್ದು ನೋಡೋಣ.

ಇದುವರೆಗೆ ಮೂವತ್ತು ಮಾಧ್ವ ಪತ್ರಿಕೆಗಳ ನಿರ್ದೇಶನವನ್ನು ಮಾಡಲಾಯಿತು. ಅವುಗಳ ಬಿಡಿ ಸಂಚಿಕೆಗಳನ್ನೂ, ಮತ್ತವುಗಳಲ್ಲಿ ಪ್ರಕಟವಾದ ಲೇಖನಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಲೇಖನ ಸಂಖ್ಯೆ ಹತ್ತು ಸಾವಿರವನ್ನು ಸರಾಗವಾಗಿ ದಾಟಬಹುದು. ಎಷ್ಟೊಂದು ಅಪೂರ್ವ ಸಾಮಗ್ರಿ ಅವುಗಳಲ್ಲಿ ಅಡಗಿರುವುದೆಂಬುದನ್ನು ಮನಗಂಡರೆ ಅತ್ಯಾಶ್ಚರ್ಯವೆನಿಸುವುದು.

ನಮ್ಮ ದುರ್ದೈವಕ್ಕೆ ಈ ವಿಶಾಲ ಸಂಪದದ ೧/೧೦ ಅಂಶ ಕೂಡಾ ಒಂದೆಡೆ ನೋಡಸಿಕ್ಕುವುದಿಲ್ಲ. ಆದ್ದರಿಂದ ಈ ಸಮುದಾಯದ ಒಂದೆರಡೇ ಸಂಚಿಕೆಗಳಿರಲಿ, ಬಹ್ವಂಶವಾಗೇ ಇರಲಿ, ಅವನ್ನು ಒಂದೆಡೆ ಸಂಕಲಿಸಿ ಇಡುವುದು ಅತ್ಯವಶ್ಯವಾಗಿದೆ.



## ೧೦. THE MYSORE NEWSPAPERS REGULATION

### *Regulation No. III of 1908*

Whereas it is expedient to provide for the efficient control of the publication of newspapers and other printed works containing public news;

His highness The Maharaja is pleased to enact as follows:-

(1) This Regulation may be called "The Mysore Newspapers Regulation, 1908."

(2) It extends to the whole of Mysore; and

(3) It shall come into force thirty days after its first publication in the official Gazette.

2. No newspaper or other printed work, whether periodical or other containing public news or comments upon public news, shall, without the written permission of the Government of

His Highness the Maharaja of Mysore, be edited, printed or published within the territories of Mysore.

3. Any written permission granted by the Government of His Highness the Maharaja for the editing, printing or publishing of any such newspaper or other work as aforesaid may at any time be withdrawn by the Government.

4. If any person shall, without such permission as aforesaid, or after such permission has been withdrawn by the Government, edit, print or publish any such newspaper or other work as aforesaid in the said territories of Mysore, the Government may, by an order in writing, signed by the Secretary to the Government in the General and Revenue Departments,

   (a) require such person to leave the territories of Mysore within seven days from the date of such order, and

   (b) Prohibit him from re-entering the said territories without the written permission of the Government, and

   (c) declare all printing presses, engines, machinery, types, lithographic stones, paper and other implements, utensils, plant and materials used or employed, or intended to be used or employed, in or for the purpose of printing or publishing such newspaper or other work as aforesaid, or found in or about any premises where such newspaper or other work as aforesaid is printed or published, and all copies of such newspaper or other work aforesaid whereever found, to be forfeited to the Government, and dispose of the same in such manner as it shall deem fit.

5. If any such order as mentioned in clauses (a) and (b) of the last preceeding section be disobeyed, the offender shall be liable to forcible expulsion from the territories of Mysore.

6. (1) No newspaper or other printed work, edited, printed or published beyond the limits of the territories of Mysore after being the subject of an order under Section 4, and

   (2) no newspaper in regard to which any such prohibition as is referred to the Section 7 of the Newspapers (Incitement to Offences) Act, 1908, has been notified and continues in force, in British India, shall be circulated within the territories of Mysore.

7. If any such newspaper or other printed work as is specified in Section 6 shall be circulated within the territories of Mysore.

   (i) the District Magistrate may declare all copies of such newspaper or other printed work whenever found to be forfeited to Government and may by warrant empower any Police officer not below the rank of Sub-Inspector to seize and carry away any copies of such newspaper or other printed work whenever found, and to enter upon and search for such copies in any premises where they may be kept for sale, distribution, publication or public exhibition, or reasonably suspected to be so kept; and

   (ii) any person who circulates or attempts to circulate, abets the circulation of, such newspaper or other printed work in the territories of Mysore, may be dealt with by the Government under clauses (a) and (b) of Section 4 and Section 5 as if such person had edited, printed or published any newspaper within the territories of Mysore without the written permission of the Government.

8. In this Regulation the expressions 'print' 'printed' and 'Printing', shall apply not only to printing but also to lithography, engraving and photography.



# (ಆ) ಕೆಲವು ಗಮನಾರ್ಹ ಪತ್ರಿಕೆಗಳು

## ೧೧. ಮಂಗಳೂರ ಸಮಾಚಾರ

೧೮೪೩–೪೪ರ ಸುಮಾರಿಗೆ ಪ್ರಕಟವಾಗಿದ್ದ 'ಕಂನಡ' ಅಥವಾ 'ಮಂಗಳೂರ ಸಮಾಚಾರ' ವೆಂಬುದೆ ಕನ್ನಡದ ಮೊತ್ತ ಮೊದಲಿನ ಪತ್ರಿಕೆಯಾಗಿರಬೇಕೆಂಬ ಬಗ್ಗೆ ಅಲ್ಲಿ ಇಲ್ಲಿ ಉಲ್ಲೇಖಗಳು ದೊರೆಯುತ್ತಿದ್ದುವು. ಅದರ ವಿಷಯವೇನು, ಲೇಖಕ / ಸಂಪಾದಕರು ಯಾರು, ಅದರ ಪ್ರಸಾರ ಹೇಗೆ ಆಗುತ್ತಿದ್ದಿತು – ಇವೇ ಮುಂತಾದ ಕುತೂಹಲಜನಕ ಅಂಶಗಳು ಏನೊಂದೂ ತಿಳಿದಿರಲಿಲ್ಲ. ೧೩೫ ವರ್ಷಗಳಷ್ಟು ಹಳೆಯದಾದ ಈ ಪತ್ರಿಕೆಯ ಪ್ರತಿಯು ಭಾರತದ ಎಲ್ಲಿಯೂ ಸಿಗುವಂತಿರಲಿಲ್ಲ. ಅದರ ಅವತರಣಿಕೆಗಳು ಯಾವ ಕನ್ನಡ ಗ್ರಂಥ/ಪತ್ರಿಕಾ ಲೇಖನಗಳಲ್ಲಿಯೂ ತೋರಿ ಬಂದಿಲ್ಲ. ಆ ಪತ್ರಿಕೆಯ ಲಭ್ಯತೆಯ ಬಗ್ಗೆ ಯುರೋಪಿನ ಪ್ರಾಚ್ಯ ಪುಸ್ತಕಾಲಯಗಳಲ್ಲಿ ವಿಚಾರಿಸುತ್ತಿದ್ದಾಗ, ಕೊನೆಗೊಮ್ಮೆ ದೊರಕಿತು. ಈ ಪತ್ರಿಕೆಯ ಸಂಪೂರ್ಣ ಸಂಪುಟದ ಮೈಕ್ರೋಫಿಲ್ಮ್‌ನ್ನು ಇಂಗ್ಲಂಡಿನಿಂದ ತರಿಸಿಕೊಂಡು ಅದರ ಪರಿಚಯ ಮಾಡಿಕೊಡುತ್ತಿದ್ದೇವೆ.

"ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತರ ಹೊರಗಿನ ದೇಶಸ್ವರ-ಸಮಾಚಾರ ಮಾರ್ಗ ಮರ್ಯಾದೆಗಳನು ತಿಳಿಯದೇ ಕಿಟಕಿಯಿಲ್ಲದ ಬಿಡಾರದಲ್ಲಿ ವುಳಕೊಳ್ಳುವವರ ಹಾಗೆ ಯಿರುತ್ತಾ ಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ವೊಳಗೆ ಸ್ವಲ್ಪ ಬೆಳಕು ಬೀಳುವ ಹಾಗೆಯೂ ನಾಲ್ಕು ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಕಕ್ಕೆ ವೊಂದು ಸಾರಿ ಶಿದ್ದಮಾಡಿ ಅದನ್ನು ಓದಬೇಕೆಂದಿರುವೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಾಗಿರುವದು. ಈ ಕಾಗದವನ್ನು ಬರೆಯುವವರಿಗೂ ಓದುವವರಿಗೂ ದೇವರು ಬುದ್ಧಿಯನ್ನು ಕೊಡಲಿ." (ಮೊದಲ ಸಂಚಿಕೆ)

ಹೀಗೆ ಪ್ರಪಂಚದ ಪರಿಚಯವನ್ನು, ನಿರ್ವ್ಯಾಜ ಬುದ್ಧಿಯಿಂದ ಮಾಡಿಕೊಡುವ ಉದ್ದೇಶದಿಂದ ಈ ಪತ್ರಿಕೆಯ ಉದಯವಾಯಿತು. ಜೊತೆಗೆ ಮಂಗಳೂರ ಜಿಲ್ಲೆಯ ಸುದ್ದಿಗಳೂ ಇರುತ್ತಿದ್ದುವು. ಈ ಪತ್ರಿಕೆ ಹೊರಡುವುದಕ್ಕೆ ಮುಂಚೆ ಅಲ್ಲಿಯ ಜನ ಸುದ್ದಿಯನ್ನು ಹಬ್ಬಿಸುವ ಬಗೆಯನ್ನು ನೋಡಿ:

"ಪೇಟೆಗ್ಗೆ ಬಂದ್ರದಲ್ಲ್ಯಾಗಲಿ ಕಚೇರಿ ಹತ್ತರವಾಗಲಿ ಒಬ್ಬನು ಬಾಯಿಗೆ ಬಂದ ಹಾಗೆ ಒಂದು ವರ್ತಮಾನದ ಹಾಗೆ ಮಾತಾಡಿದರೆ ಅದನ್ನು ಬೇರೊಬ್ಬನು ಆಶ್ಚರ್ಯದಿಂದ ಕೇಳಿ ಇನ್ನೊಬ್ಬನಿಗೆ ಹೇಳಿ ಸಾಯಂಕಾಲ ಪರಿಯಂತರ ಸುಳ್ಳು ಸುದ್ದಿಯಿಂದ ಊರೆಲ್ಲ ತುಂಬಿಸುತ್ತಾನೆ. ಮರುದಿವಸ ನಿನ್ನಿನ ವರ್ತಮಾನ ಸುಳ್ಳುಯಂತಾ ಕಾಣುವಷ್ಟರೊಳಗೆ ಎಮ್ಮೆ ಮೊಲೆಯಂತೆ [?] ಮತ್ತೊಂದು ಹುಟ್ಟಿ ಆಯಿತು. ಈ ಪ್ರಕಾರವಾಗಿ ಬಹಳ ಜನರು ಕಾಲಕ್ರಮೇಣ ಮಾಡುತ್ತಾರೆಂದು ಕೆಲವು ವರ್ಷದಿಂದ ಇಲ್ಲಿ ವಸ್ತಿಯಾಗಿದ್ದ ಕೆಲವರು ತಿಳುಕೊಂಡು ಇದರಲ್ಲಿ ಪ್ರಯೋಜನವಿಲ್ಲವೆಂದು ಈ ಮನುಷ್ಯರ ಸಮಾಚಾರ ಆಸರಕ್ಕೆ ಯೋಗ್ಯವಾಗಿ ಪೂರೈಸಬೇಕೆಂದು ಆಲೋಚನೆ ಮಾಡಿದ್ದರಿಂದ ನಿಜ ಸಮಾಚಾರದ ಸಂಗ್ರಹವನ್ನು ಕೂಡಿಶಿ ಪಕ್ಷಕ್ಕೆ ಒಂದು ಕಾಗದವನ್ನು ಛಾಪಿಸಿ ಸ್ವಲ್ಪ ಕ್ರಯಕ್ಕೆ ಜನರ ಕೈಯಲ್ಲಿ ಶೇರಿಸಬೇಕೆಂಬುದಾಗಿ ನಿಶ್ಚಯಿಸಿ ಅಧೆ" (ಮೊದಲ ಸಂಚಿಕೆ).

ಹಾರಿಕೆಯ ಸುದ್ದಿಯಿಂದ 'ಏನೂ ಪ್ರಯೋಜನವಿಲ್ಲ'ವೆಂದು 'ತಿಳುಕೊಂಡ' ಜನ ಇನ್ನಾರೂ ಅಲ್ಲ; ಜರ್ಮನ್ ಇವ್ಯಾಂಜೆಲಿಕಲ್ (ಬಾಸೆಲ್) ಮಿಶನ್‌ನವರು. ೧೮೩೪ರಂದು ಮಂಗಳೂರಲ್ಲಿ ಅವರು ಕಾಲಿರಿಸಿ, ಕೆಲವು ವರ್ಷಗಳು ಸಂದಿದ್ದುದು ನಿಜ. ಮುದ್ರಾಯಂತ್ರದ ಸ್ಥಾಪನೆಯಾದ ಮರುವರ್ಷವೆ, ಈ ನಾಲ್ಕು ಪುಟದ ಪಕ್ಷಪತ್ರಿಕೆಯ ಅಕ್ಷರಗಳನ್ನು ಕಲ್ಲಿನ ಮೇಲೆ ತಿರುವುಮುರುವಾಗಿ ಬರೆದು ಮುದ್ರಿಸತೊಡಗಿದರು. ಬಿಡಿ ಸಂಚಿಕೆಯ ಬೆಲೆ ಕೇವಲ ಒಂದು ದುಡ್ಡು – ಎಂದರೆ ಇಂದಿನ ೪ ಪೈಸೆ. ಇದರಲ್ಲಿ ಅಂಚೆ ವೆಚ್ಚವು ಸೇರಿದ್ದಿತು!

ಪತ್ರಿಕೆಯ ಸ್ವಾಮಿತ್ವವು ಬಾಸೆಲ್ ಮಿಶನ್‌ನವರಿಗೆ ಸೇರಿತ್ತಾದರೂ ಮಿಶನ್ನಿನ ಹೆಸರನ್ನು ಯಾವ ಸಂಚಿಕೆಯಲ್ಲಿಯೂ ಕೊಟ್ಟಿಲ್ಲ. ಮಿಶನ್ನಿನಲ್ಲಿ ಪ್ರಮುಖನಾಗಿದ್ದ ರೆವರೆಂಡ್ ಹರ್ಮನ್ ಮೊಗ್ಲಿಂಗನು ಮಾತ್ರ ಸಂಪಾದಕ / ಪ್ರಕಾಶಕನಾಗಿ ಕಾಣಿಸಿಕೊಂಡಿದ್ದಾನೆ. ಪತ್ರಿಕೆಯ ಸಮಗ್ರ ಬರವಣಿಗೆಯು ಅವನದೇ ಆಗಿದ್ದಿತು. ತಾನು ಕೊಡಬೇಕೆಂದಿದ್ದ ವಿವಿಧ ಸಮಾಚಾರಗಳ ಸ್ವರೂಪವನ್ನು ಹೀಗೆ ವಿವರಿಸಿದ್ದಾನೆ:

೧. 'ವೂರ ವರ್ತಮಾನ'ಗಳು – ಉದ್ದೇಶ; ಇತರ ಜನರ ಒಳ್ಳೆಯ ನಡತೆಗಳನ್ನು ಅನುಕರಿಸಬೇಕು. ಕೆಟ್ಟ ನಡತೆಗಳ ಕಾರಣದಿಂದ ಒದಗಿದ ಕೋರ್ಟಿನ ಶಿಕ್ಷೆಯನ್ನು ಕಂಡು, ಭಯಗೊಳ್ಳಬೇಕು.

೭. ಸರಕಾರೀ ನಿರೋಪಗಳು /ಕಾನೂನುಗಳು.

೩. ಸುಬುದ್ಧಿಯನ್ನು ಹೇಳುವ ಸಾಮತಿಗಳು, ಪದಗಳು.

೪. ಕಥೆಗಳು.

೫. 'ಸರ್ವರಾಜ್ಯ ವರ್ತಮಾನ'ಗಳು.

ಮೇಲಣವುಗಳಲ್ಲಿ ನಗರ ವರ್ತಮಾನಕ್ಕೆ ಸ್ವಾಭಾವಿಕವಾಗಿಯೇ ಮಹತ್ವ ಬಂದು, ಪ್ರತಿ ಸಂಚಿಕೆಯಲ್ಲಿಯೂ ಇಂಥ ಮೂರು – ನಾಲ್ಕು ಸುದ್ದಿಗಳು ತಪ್ಪದೇ ಪ್ರಕಟವಾಗುತ್ತ ನಡೆದುವು. ಆದರೆ ಊರ ಜನರ ಒಳ್ಳೆಯ ನಡತೆಗಳ ಯಾವೊಂದು ಅಂಶವೂ ಬಾರದೇ, ತಮ್ಮ ದುರ್ವರ್ತನೆಯಿಂದ ಕೋರ್ಟಿನಲ್ಲಿ ಶಿಕ್ಷೆಗೊಳಗಾದವರ ಸಮಾಚಾರಗಳು ಕಾಣಿಸಿಕೊಂಡವು. ಕೆಲವು ಮಾದರಿಗಳನ್ನು ಇಲ್ಲಿ ಕೊಡುತ್ತೇವೆ.

> ಮುದ್ರೆ ಮಂಗಳೂರ ಶಾಹಾರ ಪೈಕಿ ಲೈನ ಬಜಾರಿನಲ್ಲಿರುವ ಡಾಕ್ತರ ಸಾಹೇಬರ ಮೇಟಿ [?] ಯಾದವನ ಹೆಂಡತಿಯಾದ ಚಉರಂಮ[ಚೌರಮ್ಮ] ಎಂಬವಳಿಗೆ ತಾನು ಯಿಟ್ಟುಕೊಂಡಿದ್ದೇನೆ ಯಂತ ಮೇಜಖಾನೆಯಲ್ಲು ಚಾಕರನಾಗಿ ಯಿರುವ ಲಚುಮಾ ಯಂಬವನು ಸದರಿ ಹೆಂಗಸಿನ ಮೇಲೆ ಸುಳ್ಳು ಕೊರಾಮತಿ ಹಾಕಿದ ಸಂಮಂಧ ಈ ವಿಷಯ ದರ್ಯಾಸ್ತು ಮಾಡಿ ಈತಗೆ ೭ ರೂಪಾಯಿ ಜುರುಮಾನೆ ವಿಧಿಯಿಸಿರುತ್ತಾರೆ. (೩ನೇ ಸಂಚಿಕೆ)

ಬೇರೊಬ್ಬ ಹೆಂಗಸನ್ನು ಇಟ್ಟುಕೊಂಡಿದ್ದೇನೆಂದು ಸುಳ್ಳು ಹೇಳುತ್ತಿದ್ದುದಕ್ಕಾಗಿ ಈ ದಂಡನೆಯೆ? ಅವಳ ಗಂಡ ಅಷ್ಟರವರೆಗೆ ಏನು ಮಾಡುತ್ತಿದ್ದ? ಅದರ ಸತ್ಯ ಸಂಗತಿಯನ್ನು ಶಿಕ್ಷೆ ವಿಧಿಸಿದ್ದ ನ್ಯಾಯಾಧೀಶನೇ ಬಲ್ಲ!

> ಮಂಗಳೂರಲ್ಲಿರುವ ಪಟಾಲಮಿನ ಲಉಡನ್ ಸಾಹೇಬರವರ ಬೆಳ್ಳಿ ಗಡಿಯಾರವನ್ನು ಚೋರಿಯಾಗಿ ಅದೆ. ಆದ್ದರಿಂದ ಕಳ್ಳನಿಗೆ ಹಿಡಿದು ತಂದರೆ ಸದರಿ ಸಾಹೇಬರಿಂದ ೩೦ ರೂಪಾಯಿ ಇನಾಮ್ ಸಿಕ್ಕಿತೆಂತಾ ಇಸ್ತಿಹಾರು ಪ್ರಕಟವಾಗಿ ಅದೆ. (ಸಂಚಿಕೆ ೫) .

ಮರು ಸಂಚಿಕೆಯಲ್ಲಿ ಇನ್ನೊಬ್ಬ ಸಾಹೇಬನ ಗಡಿಯಾರವು ಕಳುವಾದ ಸಮಾಚಾರವು ಪ್ರಕಟವಾಯಿತು. ಗಡಿಯಾರಗಳು ಅಂದು ಅಪೂರ್ವ ವಸ್ತುಗಳಾಗಿದ್ದುದರಿಂದ, ಜನಕ್ಕೆ ಅದನ್ನು ಕದಿಯುವ ಆಸೆ ಹುಟ್ಟಿದುದು ಸಹಜ. ಗಡಿಯಾರವನ್ನು ತಮ್ಮ ಕೋಟಿನ ಜೇಬಿನಲ್ಲಿ ಸರಪಣಿಯಿಂದ 'ಬಂಧಿಸಿ' ಇಡುತ್ತಿದ್ದರೂ ಈ ಸ್ಥಿತಿ!

> ಶೆಷ್ಷಂ [ಶೆಶನ್ಸ್] ಜಡ್ಜರ ಕೋರ್ಟು ಸನ್ ೧೮೪೩ನೆ ಇಸವಿ ಕ್ರಿಮಿನಲ್ ನಂಬ್ರು ೩ನೆ ಮುದ್ದೆ ಸರಕಾರ ಬಂದಿವಾನ ಬಂಟವಾಳ ತಾಲೂಕು ಪುತ್ತೂರಲ್ಲಿರುವ ಸೂರಾ ಎಂಬವನು ರೂ. ೯, ಆಣೆ ೬ ಕ್ರಯದ ಸರಜುದಿ ತಂಬಾಕು ಮಣ ೧೦, ರಾತಲು ೨ ಚೋರಿಯಿಂದ ಆದುದ ಮಾಡಿದ ತಪ್ಪು ರುಜು ಆದದರಿಂದ ೨೮ ರೂಪಾಯಿ ೨ ಆಣೆ ಜುರುಮಾನೆ ಕೊಡಬೇಕು ಇಲ್ಲವೆ ೬ ತಿಂಗಳು ಬೇಡಿ ನಿಶಿ ಬಂಧನ ಕಷ್ಟ ಅನುಭವಿಸಬೇಕು ಯಂತ ಫಿತವೆ ವಿಧಿಯಿಸಿರುತ್ತಾರೆ (೯ನೇ ಸಂಚಿಕೆ).
>
> ಮಂಗಳೂರ ತಾಲೂಕಿನಲ್ಲಿರುವ ನಾರ್ಣಾಚಾರಿ ಬಂದಿವಾನ ಕ್ಷವರಿಗ ಪರಮೇಶ್ವರನು ದಸ್ತೈವಜಿನಲ್ಲಿ ಚಿತ್ತು ಮಾಡಿದಾ ಅಂತ ಫಿರ್ಯಾದಿ ಪಟ್ಟು ರುಜು ತೋರಿದರಿಂದ ೧೫೦ ಕೊರ್ಡೆ ಹೊಡಿಸಿ ೪ ವರ್ಷ ಬಂಧನ ಕಷ್ಟ ಮಾಡಬೇಕಂತ ಫಿತವೆ ವಿಧಿಯಿಸಿರುತ್ತಾರೆ. (೧೧ ನೇ ಸಂಚಿಕೆ)

ಅಂತೂ ಸರಕಾರೀ ರೆಕಾರ್ಡುಗಳನ್ನು, ಲಂಚ ತಿಂದು, ತಮಗೆ ಬೇಕಾದ ಹಾಗೆ ತಿದ್ದುವ ಮನೋವೃತ್ತಿಯು ಹಿಂದಣವರಿಂದ ಬಳುವಳಿಯಾಗಿ ಬಂದುದೆನ್ನಬೇಕು. ಅಂತರ ಇಷ್ಟೇ – ಆಗಿನವರು ಸಿಕ್ಕಿಬಿದ್ದು ಶಿಕ್ಷೆಗೆ ಒಳಗಾಗುತ್ತಿದ್ದರು – ಅದೂ ಉಗ್ರವಾದ ಶಿಕ್ಷೆ: ಚರ್ಮದ ಚಾಬೂಕಿನಿಂದ ೧೫೦ ಪೆಟ್ಟುಗಳು ಮಾತ್ರವಲ್ಲದೆ, ೪ ವರ್ಷದ ಸಶ್ರಮ ಜೇಲುವಾಸ!

> ಕ್ರಿಮಿನಲ್ ನಂಬ್ರ ೨೬ನೇ ಮುದ್ದೆ ಸರಕಾರ ಬಂದಿವಾನಳು ಸದರಿ ತಾಲೂಕಿನಲ್ಲಿರುವ ಬಿಲ್ಲವಾಣ ಹೆಂಗಸು ಯಿದೇ ಇಸವಿ ನವಂಬರ ತಾರೀಕು ೨೮ರಲ್ಲಿ ಕಾನೂನು ವ ಹುಕುಮಿಗೆ ವಿರೋಧವಾಗಿ ಬಟ್ಟೆಯಿಟ್ಟು, ೪ ಬಾಟ್ಲೆ ಶೆಂದಿ ಶರಾಬು ಪಕಾಯಿಸಿದ ತಪ್ಪು ರುಜು ಆದುದರಿಂದ ೩ ರೂಪಾಯಿ ರುಜುಮಾನೆ ಕೊಡಬೇಕು. ಆ ಪ್ರಕಾರ ಕೊಡದೇಯಿದ್ದರೆ ೧ ತಿಂಗಳು ಕೈದಿನಲ್ಲಿ ಕಾಮಗಿರಿ ಮಾಡಿಸುವಂತೆ ಫಿತವೆ ವಿಧಿಸಿರುತ್ತಾರೆ. (೧೨ ನೇ ಸಂಚಿಕೆ).

ಆಗಿನ ಇಂಗ್ಲಿಶ್ ಶಾಲೆಯಲ್ಲಿ ಓದುತ್ತಿದ್ದ ಮೂವರು ಬ್ರಾಹ್ಮಣರು, ಕ್ರೈಸ್ತ ಮತವನ್ನು ಅವಲಂಬಿಸಿದಾಗ, ಊರಲ್ಲಿ ವಿಶೇಷ ಗಲಾಟೆಯಾಯಿತು. ಬಾಸೆಲ್ ಮಿಶನ್ನಿನವರ ಪ್ರಥಮ ಮತಾಂತರ ಕಾರ್ಯವಿದು. ಅವರನ್ನು ಪುನಃ ಹಿಂದೂ ಧರ್ಮಕ್ಕೆ

ತಿರುಗಿಸಬೇಕೆಂದು ಊರವರು ತುಂಬಾ ಪ್ರಯತ್ನ ಮಾಡಿದರಾದರೂ ಮತಾಂತರ ಹೊಂದಿದ್ದ ಈ ತರುಣರು ವಿಮುಖರಾಗಲಿಲ್ಲವಂತೆ. ಆಗ ಈ 'ದುಷ್ಟ' ಜನರು ಊರಲ್ಲಿ ಏನಾದರೂ ಗುಬಾರು ಯೆಬ್ಬಿಸಬೇಕೆಂಬ ಉಮೇದಿಯಿಂದ ಮುಸಲಮಾನರ ಜುಂಮ್ಮಾ ಮಸಜೀದಿಯ ಕೆರೆಯಲ್ಲಿ ಮಹಂಮ್ಮದಿ ಮತದವರಿಗೆ ಅತಿ ವಿರೋಧವಾಗಿರುವಂಥ ಹಂದಿಯನ್ನು ರಾತ್ರಿ ಹೊತ್ತಿನಲ್ಲಿ ಕೊಂದುಹಾಕಿದರು. "ಆಗ ಜಿಲ್ಲಾ ಮೆಜಿಸ್ಟ್ರೇಟ್ ಸಾಹೇಬನು ಕೂಡಲೇ ಈ ರೀತಿಯ ಪ್ರಕಟನೆಯನ್ನು ಹೊರಡಿಸಿದನು:

> "ಮುಸಲಮಾನ ಜನರಿಗೆ ಚಾಳಿಸುವ ಇರ್ಯಾದೆಯಿಂದ ಈ ಕೆಟ್ಟ ಕೃತ್ಯಾ ಮಾಡಿರುತ್ತಾರೆ ಎಂಬುದರಲ್ಲಿ ಏನೂ ಅನುಮಾನವಿಲ್ಲ. ಈ ವಿಷಯದಲ್ಲಿ ಕುಲಂಕುಶ ತನಖಿ ಕುಡ್ಲೆ ಮಾಡಲಾದೀತು. ಈ ದುಸ್‌ಕೃತ್ಯಾ ನಡೆಸಿದ ವಾ ತಲಾಶಿಗೆ ಸಾಕಾಗುವ ವರ್ತಮಾನ ಯಾರಾದರೂ ಕೊಟ್ಟಿದ್ದಾದರೆ ಅಂಥ ಮನುಷ್ಯನಿಗೆ ಐದು ನೂರು ರುಪಾಯಿ ಕೊಡಲಾದೀತು. ಆದುದರಿಂದ ಮುಸಲ್ಮಾನ ಜಾತಿ ಯಾವತ್ತೂ ಜನರು ದುರಾಲೋಚನೆ ಜನರ ದಗೆ ಬೋಧನೆಗೆ ಒಳಗಾಗದೆ ನಿಧಾನದಲ್ಲಿ ಇರಬೇಕು ಯಂತ ಅಪೇಕ್ಷಿಸುತ್ತೇವೆ. ಆ ಪ್ರಕಾರ ಸಮಾಧಾನ ಮಾಡದೆ ತಂಟೆ ಏನಾದರೂ ನಡೆಸಿದ್ದಾದರೆ ವ್ಯರ್ಥ ಬಹಳ ದಣಕೊಳ್ಳಬೇಕಾದೀತು(!)

ಕಂಪನಿ ಸರಕಾರದ ಅಧಿಕಾರಿಗಳು ಜಾತೀಯ ಗಲಭೆಗಳಿಗೆ ವಿಶೇಷತಃ ಮುಸಲ್ಮಾನರಿಗೆ ಸಂಬಂಧಿಸಿದ್ದವುಗಳಿಗೆ ಬಹಳ ಹೆದರುತ್ತಿದ್ದುದಕ್ಕೆ ಇದೊಂದು ನಿದರ್ಶನ. ಮೆಜಿಸ್ಟ್ರೇಟ್ ಬ್ಲೆಅರ್ ಸಾಹೇಬರು ಅಷ್ಟಕ್ಕೆ ಮುಗಿಸದೆ, ಮುಸಲ್ಮಾನರ ಹಾಗೂ ಮಾಪಿಳ್ಳೆಯವರ ಮುಖಂಡರನ್ನು ಕರೆದು, ಅಪರಾಧಿಯನ್ನು ಎಂತಿದ್ದರೂ ಹುಡುಕುವುದಾಗಿಯೂ, ಆ ಕೆರೆಯನ್ನು ಸರಕಾರದ ವತಿಯಿಂದ 'ಸಾಫು'ಮಾಡಿಸಿಕೊಡುವುದಾಗಿಯೂ ಆಶ್ವಾಸನವಿತ್ತರೆಂಬ ಅಂಶವನ್ನು ತಿಳಿಸುತ್ತ ಸಂಪಾದಕನು ಹೀಗೆ ಮುಗಿಸಿದ್ದಾನೆ:

> ಆ ಮಾತುಗಳನ್ನು ಅವರು ಬುದ್ಧಿಯಾಗಿ ತಿಳುಕೊಂಡು ಅಂಗೀಕರಿಸಿ ಒಡಂಬಟ್ಟರು. ಆ ಹಂದಿ ಕಡದು ಹಾಕಿದ ಮನುಷ್ಯನು ಯೀಗ ಶಿಕ್ಕಿದ್ದಾನೆಂಬ ವರ್ತಮಾನಯಿರುತ್ತದೆ.

ಆದರೆ ಮೇಲಣ ಮತಾಂತರಗಳಿಂದ ಸಿಟ್ಟಿಗೆದ್ದ ಜನ ಅದಕ್ಕೆ ಪ್ರತಿಯಾಗಿ ಮುಸಲ್ಮಾನರನ್ನು ರೊಚ್ಚಿಗೇಳಿಸುವ ಉಜ್ಜುಗಕ್ಕೆ ತೊಡಗಿದುದೇಕೆ ಎಂಬುದು ನಮಗೆ ಅರ್ಥವಾಗುತ್ತಿಲ್ಲ. ಬ್ಲೆಅರ್ ಸಾಹೇಬನಂಥ ಅಧಿಕಾರಿಗಳು ಪರ್ಯಾಯವಾಗಿ ಮತಾಂತರಗಳಿಗೆ ಸಹಾನುಭೂತಿಪರರಾಗಿಯೆ ಇದ್ದರೆಂಬುದನ್ನು ಈ ಸಂದರ್ಭದಲ್ಲಿ ನಾವು ಗಮನಿಸತಕ್ಕುದಾಗಿದೆ.

ಹೀಗೆ, ಇವೆಲ್ಲ ಊರ ಸುದ್ದಿಗಳನ್ನು ಓದಿದಾಗ, ಆಗಿನ ದಕ್ಷಿಣ ಕನ್ನಡ ಜಿಲ್ಲೆಯ ಜನ ಜೀವನದ ಒಂದು ಪಾರ್ಶ್ವದ ಚಿತ್ರಣ ಕಣ್ಣಿಗೆ ಕಟ್ಟುತ್ತದೆ. ಇಂಥ ಸುದ್ದಿಗಳೆಲ್ಲ ಕೋರ್ಟು–ಕಚೇರಿಗಳಿಗೆ ಹೆಚ್ಚಾಗಿ ಸಂಬಂಧಿಸಿದವುಗಳು. ಆ ನಿಮಿತ್ತದಿಂದ ಕಾನೂನುಗಳ ಪರಿಚಯವನ್ನು ಪತ್ರಿಕೆಯಲ್ಲಿ ಮಾಡಿಕೊಡುವ ಪ್ರಯತ್ನವು ನಡೆಯಿತು. ವಿವಿಧ ಕೋರ್ಟುಗಳ ಪುನರ್ಘಟನೆಯ ಬಗ್ಗೆ ೧೮೪೨ರಲ್ಲಿ ಮದ್ರಾಸಿನಿಂದ ಪಾಸಾದ 'ಕೋರ್ಟ್ ಆ್ಯಕ್ಟ್'ನ ಸಾರವನ್ನು ಪತ್ರಿಕೆಯ ಮೊದಲ ಸಂಚಿಕೆಯಿಂದ ಆರಂಭಿಸಿ, ಕೊನೆಯದರ ವರೆಗೂ ಮುಂದುವರಿಸಲಾಯಿತು. ಅಲ್ಲದೆ, ಮದ್ರಾಸ್ ಪ್ರಾಂತದ ಗೆಜೆಟಿನಲ್ಲಿ ಬರುತ್ತಿದ್ದ ಸರಕಾರೀ ಅಧಿಕಾರಿಗಳ ವರ್ಗಾವರ್ಗಿಯನ್ನೂ ಕೊಡಲಾಗುತ್ತಿತ್ತು. ಮಹತ್ವದ ಸರಕಾರೀ ಹುಕುಮುಗಳನ್ನೂ ಚುಟುಕಿನಲ್ಲಿ ಕೊಡಲಾಗಿದೆ. ಸರಕಾರೀ ನೌಕರರು ಅದುವರೆಗೆ ಬೇರೆ ವ್ಯಾಪಾರ ವಹಿವಾಟುಗಳಲ್ಲಿಯೂ ತೊಡಗಿರುತ್ತಿದ್ದರೆಂದು ಕಾಣುತ್ತದೆ. ಅದನ್ನು ತಡೆಗಟ್ಟುವ 'ಇಸ್ತಿಹಾರು' ೧೩ನೆಯ ಸಂಚಿಕೆಯಲ್ಲಿ (ಜನವರಿ ೧, ೧೮೪೪) ಪ್ರಕಟವಾಗಿದ್ದು ಮಂಗಳೂರಿನಲ್ಲಿದ್ದ ಅನೇಕ ನೌಕರರ ಜೀವನಕ್ರಮವನ್ನು ವಿಪರ್ಯಸ್ತಗೊಳಿಸುವಂತಹದಾಗಿದೆ.

'ಮಂಗಳೂರ ಸಮಾಚಾರ'ದ ಬರವಣಿಗೆಯನ್ನೆಲ್ಲ ಒಬ್ಬರೇ ಮಾಡುತ್ತಿದ್ದರಾದರೂ ಓದುಗರು ತಮ್ಮ ಸ್ಥಳದ ಯಾವುದೊಂದು ವರ್ತಮಾನವನ್ನು ಕಳುಹಿಸುವುದಕ್ಕೆ ಸ್ವಾಗತವಿದ್ದಿತು.

> ಒಂದನೇ ವರ್ತಮಾನ ಕಾಗದದ ೮ನೇ ಕಲಮಿನಲ್ಲಿ ಯಾರಾದರೂ ಒಂದು ವರ್ತಮಾನವು ಸಮಾಚಾರ ಕಾಗದದಲ್ಲಿ ಸೇರಿಸಿ ಛಾಪಿಸಬೇಕಂತ ಬರದು ಕಳುಹಿಸಿದರೆ ಸೇರಿಸಬಹುದಾಗಿ ಮುಂಚೆ ಪ್ರಕಟಮಾಡಿದ ಪ್ರಕಾರ ಮೈಸೂರಿನಿಂದ ಒಂದು ಕಾಗದ ಬಂದದೆ. ಆದರೂ ಅದು ಇಂಥವರು ಬರದ್ದು ಎಂಬ ಹೆಸರು ಮುಂತಾಗಿರುವುದಿಲ್ಲವಾಗಿದ್ದಾಗ್ಯೂ ಈ ಕಾಗದವು ಮೊದಲು ಸೇರಿದಾದ ಕಾರಣ ಆ ವರ್ತಮಾನದ ಛಾಪಿಸಲಿಕ್ಕೆ ನಿಶ್ಚೈಸಿ ಆದೆ. ಇನ್ನು ಮುಂದೆ ಯಾರಾದರೂ ಒಂದು ವರ್ತಮಾನ ಸೇರಿಸಬೇಕೆಂತ ಬರದು ಕಳುಹಿಸುವುದಾದರೆ ಯಿಂಗ್ಲೀಷ್‌ನು ಸವಿವರ ಮರ್ಯಾದೆ ಪ್ರಕಾರ ಅವರ ಹೆಸರು ಊರು ಮುಂತಾಗಿ ನಮಗೆ ತಿಳಿಯುವ ಹಾಗೆ ಮಾತ್ರ ಬರದು ಟಪಾಲ ದಸ್ತೂರಿ ಕೊಟ್ಟು ಕಳಿಸಿದರೆ ಆ ಸಮಾಚಾರ ಛಾಪಿಸಬಹುದು. ಈ ವಿವರ ಸರ್ವರು ತಿಳಿದಿರತಕ್ಕದ್ದು. (೭ನೇ ಸಂಚಿಕೆ). ಹೆಸರಿಲ್ಲದ ಓದುಗರ ಪತ್ರಗಳಿಗೆ ಗಮನವೀಯಲಾಗುವುದಿಲ್ಲ. ಬಹಿರಂಗವಾಗಿ ತಮ್ಮ ಹೆಸರು ಬೇಡವೆನ್ನುವವರು.

ಸಂಪಾದಕರಿಗಾದರೂ ಹೆಸರು - ದೆಸೆಗಳನ್ನು ತಿಳಿಸಬೇಕು ಮತ್ತು ಸಂಪಾದಕರು ಆ ಗುಟ್ಟನ್ನು ಕಾಯ್ದುಕೊಳ್ಳಬೇಕು - ಎಂಬುದು ಇಂದಿನ ಪತ್ರಿಕಾಧರ್ಮವಷ್ಟೆ. ಅದನ್ನು ೧೨೫ ವರ್ಷಗಳ ಹಿಂದೆ, ಕನ್ನಡದ ಆದ್ಯ ಪತ್ರಿಕೆಯಲ್ಲಿ ನಡೆಸಲಾಗುತ್ತಿದ್ದಿತೆಂಬುದು ಗಮನಾರ್ಹವಾಗಿದೆ. ಅಂದು ಮೈಸೂರಿನಿಂದ ಸುದ್ದಿ ಕಳಿಸಿದವರು - 'ಕಣ್ಣಿಂದ ಕಂಡವರು'. ಯಾರದೇ ಟೀಕೆಯನ್ನು ಮಾಡಬೇಕೆಂದು ವಿನಾಮರಾಗಿ ಅವರು ಉಳಿದುವಲ್ಲ; ಅದು ಮೈಸೂರಿನ ಮುಮ್ಮಡಿ ಕೃಷ್ಣರಾಜರನ್ನು ಕುರಿತುದುದಾಗಿದೆ :

> 'ಜೂನ್ ತಿಂಗಳಲ್ಲಿ ಈ ಊರು ದೊರೆಗಳವರ ಮಕ್ಕಳ ವಿವಾಹ ಮಹೋತ್ಸವವು ಆಯಿತು. ಯೀ ಪ್ರಸ್ತದಲ್ಲಿ ಧೊರೆಗಳವರು ಬ್ರಾಂಹ್ಮರೇ ಮೊದಲಾದ ಸಮಸ್ತ ಜಾತಿಯವರಲ್ಲಿ ಅಬಾಲ ಉದ್ದರಿಗೆ ಭೋಜನವನ್ನು ಮಾಡಿಸಿ ಅವರವರ ಯೋಗ್ಯತಾನುಸಾರವಾಗಿ ಶಾಲು, ವಲ್ಲಿ, ಧೋತ್ರ ಮೊದಲಾದ ಉಡುಗೊರೆಗಳನ್ನು ಕೊಟ್ಟು, ಸಮಸ್ತರನ್ನು ತೃಪ್ತಿಪಡಿಸಿದರು. ಆ ಉಡುಗೊರೆಗಳು ಈ ಊರಲ್ಲಿ ಎಲ್ಲಾ ಕಡೆಯಲ್ಲಿಯೂ ಭರಿತವಾಗಿರುವ ಕಾರಣ ಯಾವ ಸ್ಥಳದಲ್ಲಿ ನೋಡಿದರೂ ಅವರ ಉದಾರ ಕ್ಷವಾ ಕೊಂಡಾಡಲ್ಪಟ್ಟಿದೆ. ಇದಲ್ಲದೆ ಅತ್ಯಂತ ಶ್ರಮೆಯನ್ನು ಅನುಭವಿಸುತ್ತಿದ್ದ ಕೆಲವು ಜನರಿಗೆ ಸಂಬಳವನ್ನು ಮಾಡಿಸಿಕೊಟ್ಟು, ಇನ್ನೂ ಕೆಲವರ ಸಂಬಳವನ್ನು ಹೆಚ್ಚು ಮಾಡಿಸಿದರು. ಯಿದೇ ಪ್ರಕಾರವಾಗಿ ಈ ಧೊರೆಯವರು ಅನೇಕರನ್ನು ಸಂರಕ್ಷಿಸಿ ಅವರ ಪುತ್ರ ಪೌತ್ರರು ಅವರ ಉಪಕಾರವನ್ನು ಸ್ಮರಿಸುವ ಹಾಗೆ ಮಾಡಿದ್ದಾರೆ. ಯಿವರ ದಾತೃತ ನಿದರ್ಶನಗಳು ಅನೇಕವಾಗಿವೆ - ಕಣ್ಣಿಂದ ಕಂಡವರು. (೬ನೇ ಸಂಚಿಕೆ).

ತನ್ನ ಹೆಸರನ್ನು ಹೇಳದೆ, ನಿರ್ಹೇತುಕ ಬುದ್ಧಿಯಿಂದ ಮುಮ್ಮಡಿಯವರ ಔದಾರ್ಯವನ್ನು ಕೊಂಡಾಡಿದ ಈ ಸಮಕಾಲೀನ ದಾಖಲೆಯು ವಿಶೇಷ ಐತಿಹಾಸಿಕ ಮಹತ್ವವುಳ್ಳದ್ದಾಗಿದೆ.

ಮಿಶನರಿಗಳು ಈ ಪತ್ರಿಕೆಯನ್ನು ಸ್ವಮತ ಪ್ರಸಾರಕ್ಕಾಗಿ ಬೇಕಾದ ಹಾಗೆ ಬಳಸಿಕೊಳ್ಳಬಹುದಿತ್ತು. ಹಾಗೆ ಮಾಡದ್ದರಿಂದ ಕನ್ನಡದ ಈ ಮೊದಲ ಪತ್ರಿಕೆಯು ಜಾತ್ಯತೀತವಾದ, (Secular) ಸಮಸ್ತ ಕನ್ನಡಿಗರನ್ನುದ್ದೇಶಿಸಿದ ಪತ್ರಿಕೆಯಾಗಿ ನಿಂತಿತು. ಕ್ರಿಶ್ಚಿಯನ್ ಮತ ವಿಚಾರಗಳು ವ್ಯಕ್ತವಾದ ಸಂದರ್ಭಗಳೆಂದರೆ ದಾಸರ ಪದ ಹಾಗೂ ಸಂಸ್ಕೃತ ಶ್ಲೋಕಗಳನ್ನು ಕೊಡುತ್ತ ಅದಕ್ಕೆ ಸಮನಾದ ಬೈಬಲ್ ಉಕ್ತಿಗಳನ್ನು ವಿವರಿಸಿದುದು. ಆ ನಿಮಿತ್ತದಿಂದ ಪುರಂದರದಾಸರ ಕೆಲವು ಹಾಡುಗಳು ಪ್ರಥಮತಃ ಮುದ್ರಣ ರೂಪದಲ್ಲಿ ಹೊರಬಂದುದು ಇಲ್ಲಿಯೇ.

'ಮರವು ತನ್ನನ್ನು ಕಡಿಯಬಂದವನ ಮೇಲೆ ಸಹ ನೆರಳನ್ನು ಕೊಡುವುವನ್ನು ಹೇಗೆ ನಿಲ್ಲಿಸುವುದಿಲ್ಲವೋ, ಹಾಗೆಯೇ ಸಜ್ಜನನು ಶತ್ರುವೆ ಆಗಲಿ ಮನೆಗೆ ಬಂದರೆ, ಆತಿಥ್ಯವನ್ನು ಕೊಡದೆ ಇರುವುದಿಲ್ಲ. ಚಂಡಾಲನ ಮನೆಯಾದರೇನಂತೆ, ಚಂದಿರನು ಅಲ್ಲಿಯ ಬೆಳಕನ್ನು ನೀಡುತ್ತಾನಷ್ಟೆ. ಹಾಗೆಯೇ ಸಾಧು ಜನರು ಗುಣರಹಿತರಲ್ಲಿಯೂ ದಯೆ ತೋರಿಸುತ್ತಾರೆ -- ಈ ಭಾವದ ಒಂದು ಪದ್ಯವು ಹಿತೋಪದೇಶದಲ್ಲಿ ಬರುತ್ತದೆ. ಆ ಮೂಲ ಶ್ಲೋಕವನ್ನು ಕೊಟ್ಟು, ಅದಕ್ಕೆ ಸಮನಾಗಿರುವ ಏಸುವಿನ ಈ ವಾಕ್ಯವನ್ನು ಉದ್ಧರಿಸಲಾಗಿದೆ.

ನಾನು ನಿಮಗೆ ಹೇಳುವುದೇನಂದರೆ ಶತ್ರುಗಳಿಗೆ ಪ್ರೀತಿ ಮಾಡಿರಿ; ನಿಮಗೆ ಶಪಿಸುವವರನ್ನು ಆಶೀರ್ವದಿಸಿರಿ. ನಿಮಗೆ ಹಗೆ ಮಾಡುವವರಿಗೆ ಉಪಕಾರ ಮಾಡಿರಿ, ನಿಮಗೆ ಹಿಂಸೆಯೂ ನಿಂದೆಯೂ ಮಾಡುವವರಿಗೋಸ್ಕರ ಪ್ರಾರ್ಥಿಸಿರಿ. (೯ ನೇ ಸಂಚಿಕೆ)

ವಾಚಕರ ಮನರಂಜನೆಗೆ ಸಂಪಾದಕರು ವಿಶೇಷ ಪ್ರಾಶಸ್ತ್ಯವನ್ನು ಕೊಟ್ಟಂತೆ ತೋರುವುದಿಲ್ಲ. ಪುಟಸಂಖ್ಯೆಯ ಮಿತಿಯಿಂದಾಗಿಯೂ ಕಥೆಗಳಿಗೆ ವಿಶೇಷ ಅವಕಾಶ ದೊರಯದೆ ಹೋಯಿತು. ಪರತಂತ್ರ ಬುದ್ಧಿಯ ತಂದೆ ಮಗನೊಂದಿಗೆ, ಕತ್ತೆಯೊಂದನ್ನು ಮಾರಾಟ ಮಾಡಹೊರಟು, ಮಂದಿಯ ಮಾತನ್ನು ಕೇಳಿ, ಅದನ್ನು ಕಳೆದುಕೊಂಡ ಕಥೆ ಇದೆ. ಈ ಕಥೆಯು ವಿದೇಶದಿಂದ ನಮ್ಮಲ್ಲಿ ಪ್ರಚುರವಾಯಿತೆಂಬುದಾಗಿ ಸಂಪಾದಕರ ಮಾತಿನಿಂದ ತಿಳಿಯುತ್ತದೆ. ಇನ್ನೊಂದು 'ಕುರುಬನ ಕಥೆ', 'ಜನ 'ಮರುಳೊ ಜಾತ್ರೆ ಮರುಳೊ', 'ಹತ್ತರ ಕೂಡ ಹನ್ನೊಂದು', 'ಪರಸೆ ಕೂಡ ಗೋವಿಂದ' ಎಂಬ ಪಡೆನುಡಿಯನ್ನು ಮಂತ್ರಿಯೊಬ್ಬನು ಕುರುಬನ ಮುನಿ ವೇಷದ ಮೂಲಕ, ತನ್ನ ರಾಜನಿಗೆ ಮನಗಾಣಿಸಿ ಕೊಟ್ಟ ಕಥೆಯಿದು.

ಪತ್ರಿಕೆಯ ಬಹುಭಾಗವನ್ನು ಪಡೆದುದೆಂದರೆ ವಿವಿಧ ಪ್ರದೇಶಗಳ ಹಿಂದಿನ ಮತ್ತು ಅಂದಿನ ಸಮಾಚಾರಗಳು. ಹಿಂದುಸ್ಥಾನದ ವಿವಿಧ ಸಂಸ್ಥಾನಗಳು ಬ್ರಿಟಿಶರೊಡನೆ ಹೋರಾಡಿ ಒಂದೊಂದಾಗಿ ಅಸ್ತಂಗತಗೊಳ್ಳುತ್ತಿದ್ದ ಕಾಲವದು. ಗ್ವಾಲಿಯರ್, ಲಾಹೋರ, ಸಿಂಧು ದೇಶ - ಇವುಗಳ ಆ ಕಾಲದ ಹೋರಾಟವನ್ನು 'ಮಂಗಳೂರ ಸಮಾಚಾರ'ವು ಚೊಕ್ಕಟವಾಗಿ ಚಿತ್ರಿಸಿದೆ. ಬರಿಯೆ ಸೈನಿಕ ಚಲನವಲನಗಳು, ಯುದ್ಧದಲ್ಲಿ ಮಡಿದ ರಾಜರ ಹೆಸರು ಕೊಟ್ಟರೆ ಸಾಕೆ? ಸಾಮಾನ್ಯ ಜನತೆಗೆ, ಆ ಹೋರಾಟದ ಹಿಂದಿನ ವೃತ್ತಾಂತವನ್ನೂ ಕೊಡುವುದು ಅಗತ್ಯವೆಂಬುದನ್ನು ಸಂಪಾದಕರು ಮನಗಂಡಿದ್ದರು:

> ಲಾಹೋರ ಸಂಸ್ಥಾನವನ್ನು ಸ್ಥಾಪಿಸಿದ ಪ್ರಖ್ಯಾತಿಯುಳ್ಳ, ಮಹಾರಾಜ ರಣಜಿತಶಿಂಗನು ೧೮೩೯ನೆ ವರ್ಷದ ಜೂನ್ ತಿಂಗಳ ೨೭ನೇ ತಾರೀಕಿನಲ್ಲಿ ತೀರಿಹೋದ ಮೇಲೆ ಅವನ ಮಗನಾದ ಕರಣ್‌ಶಿಂಗನು ಸುಮಾರು ೧ ವರ್ಷ ರಾಜ್ಯವನ್ನು ನಡಿಸಿ ೧೮೪೦ನೆ ವರ್ಷದ ನವಂಬರ್ ತಿಂಗಳ ೫ನೆ ತಾರಿಕಿನಲ್ಲಿ ವಿಲಾಯಿತಿನವರ ಅವುಷಧ ಏನೂ ಬೇಡೆಂದು ತನ್ನ ಸ್ವಂತ ವೈದ್ಯರ ಅಜ್ಞಾನದಿಂದ ಜ್ವರ ಹತ್ತಿ ಸತ್ತುಹೋದನು. ಮರುದಿವಸದಲ್ಲಿ ಇವನ ಶವವು ಸ್ಮಶಾನಕ್ಕೆ ಕೊಂಡು ಹೋಗಿ ತಿರುಗಾ ಬರುವಾಗ ಪಟ್ಟದ ಬಾಗಿಲಿಂದ ಒಂದು ಮರಬಿದ್ದು ತಾಗಿ ಅವನ ಮಗನಾದ ನವನಿಹಾಲ್‌ಶಿಂಗನು ಸತ್ತುಹೋದನು. ಮುಂಚೆ ಈ ರಣಜಿತ್ ಶಿಂಗನ ಹೆಂಡರಲ್ಲಿ ಒಬ್ಬಳು ತಾನು ಕ್ರಯಕ್ಕೆ ತೆಗೆದುಕೊಂಡಿದ್ದ ಶೇರ್‌ಶಿಂಗ ಎಂಬವನನ್ನು ನಿನ್ನಿಂದ ಹುಟ್ಟಲ್ಪಟ್ಟ ಮಗನೆಂದು ಗಂಡನಿಗೆ ಒಪ್ಪಿಸಿದಾಗ್ಯೆ ಅವನು ಈ ಮಾತು ನಂಬದಿದ್ದರೂ ಒಬ್ಬ ಸರದಾರನಾಗಿರಲೆಂದು ಕಾಶ್ಮೀರ ದೇಶದ ಅಧಿಕಾರವನ್ನು ಕೊಟ್ಟಿದ್ದನು. ಈ ಶೇರ್‌ಶಿಂಗನೂ ಇವನ ಮಗನಾದ ಪ್ರತಾಪಶಿಂಗನೂ ಕಳೆದ ಸೆಪ್ಟೆಂಬರ ತಿಂಗಳ ಸುಮಾರು ೧೫ನೇ ತಾರೀಕಿನಲ್ಲಿ ತನ್ನ ಪ್ರಧಾನಿಯಾದ ಧ್ಯಾನಸಿಂಗನ ಕೈಯಿಂದ ಕೊಲ್ಲಲ್ಪಟ್ಟನು. ಪ್ರಾಣವುಳ್ಳ ಸರದಾರನಾದ ಈ ಮಂತ್ರಿಯು ತನ್ನ ಸ್ವಜನರ ಕೈಯಿಂದ ಮರುದಿವಸದಲ್ಲಿಯೆ ಸಹಾ ಮರಣಹೊಂದಿದನೆಂಬ ವರ್ತಮಾನವುಂಟು. ಹಾಗಿರಲಿಕ್ಕಾಗಿ ಪೂರ್ವ ಅರಸರ ಸಂತಾನವೆಲ್ಲಾ ತೀರಿ ಹೋದದರಿಂದಲೂ ಈ ಬಲಾತ್ಕಾರ ಮಾಡಿದ ಪ್ರಧಾನಿ ಸಹಾ ಕ್ಷಣದಲ್ಲಿ ನಾಶವಾದ್ದರಿಂದಲೂ ಆ ಸಿಕ್ಕರ ಸಂಸ್ಥಾನದಲ್ಲಿ ಮಹಾ ಗಲಿಬಿಲಿವುಂಟಾಗದೆಂದು ಪ್ರಸಿದ್ಧಿಯಾಗಿದೆ. (೮ನೇ ಸಂಚಿಕೆ)

ಆಗಿನ ಮಂಗಳೂರು ಹಾಗೂ ಕನ್ನಡ ಜನರಿಗೆ ಸೀಖ್ ಜನಾಂಗದ ಪರಿಚಯ ಎಷ್ಟು ತಾನೇ ಇದ್ದೀತು? ಮೇಲಣ ಅವರ ವೃತ್ತಾಂತವು ಕನ್ನಡ ವಾಚಕರಿಗೆ ರುಚಿಕರವಾಗಿ ತೋರಿರಬೇಕು. ಇದರಲ್ಲಿ ಸಂಪಾದಕರ ವಾರ್ತಾಪ್ರಜ್ಞೆಯನ್ನೂ ಗಮನಿಸುವ ಹಾಗಿದೆ. ಇದೇ ವೃತ್ತಾಂತದ ಮುಕ್ತಾಯ ಭಾಗವನ್ನು ನೋಡಿ :

> ಅದರ ಅಂತ್ಯವು ಏನಾಗುವದೊ ತಿಳಿಯಕೂಡದು. ಆದಾಗ್ಯೂ ಪೇಶಾವರ ಸೀಮೆಯ ಮೇಲೆ ಅಪೇಕ್ಷಿತರಾಗಿರುವ ಕಾಬುಲ್ ಜನರು ಅದನ್ನು ತೆಗೆದುಕೊಳ್ಳಲಿಕ್ಕೆ ಬಂದಾರೆಂದೂ ಮತ್ತು ಇಂಗ್ಲಿಷ್ ಸರಕಾರದವರ ಪ್ರಾಂತ್ಯದಲ್ಲಿ ಆ ರಾಜ್ಯ ಇರುವುದರಿಂದ ಅವರು ಜಾಗ್ರತೆಯಾಗಿರುವರೆಂದೂ ಕಾಣುತ್ತದೆ (ಪು. ೨೯).

ಅಂತೂ ಇಂದಲ್ಲ ನಾಳೆ ಅದು ಕಂಪನಿಯವರ ಕೈವಶವಾಗುವುದು ಅನಿವಾರ್ಯ ಎಂಬ ಮುನ್ಸೂಚನೆಯನ್ನು ಸಂಪಾದಕರು ಕೊಟ್ಟುಬಿಟ್ಟಿದ್ದಾರೆ! ಇದರ ಕುರಿತು ಮುಂದಿನ ೨-೩ ಸಂಚಿಕೆಗಳಲ್ಲಿ ಏನೂ ವರ್ತಮಾನ ಬಾರದಿದ್ದಾಗ ಓದುಗರು ಪ್ರಶ್ನೆ ಮಾಡಿರಬೇಕು. ೧೧ನೆಯ ಸಂಚಿಕೆಯಲ್ಲಿ ಕೆಳಗಿನ ವರದಿ ಪ್ರಕಟವಾಯಿತು.

> ಗ್ವಾಲಿಯರ್ ದೇಶದಲ್ಲಿ ಮತ್ತು ಲಾಹೂರದಲ್ಲಿ ಸಹಾ ಉಂಟಾದ ಗಲಿಬಿಲಿ ಹಾಗೆಯೇ ಉಂಟು. ಅದರ ನಿಶ್ಚಯ ವರ್ತಮಾನ ಬಂದ ಮೇಲೆ ಪ್ರಕಟಮಾಡಬೇಕೆಂತ ನಿಶ್ಚಯಿಸಿ ಅದೆ. ಯಾತಕ್ಕೆಂದರೆ ಆರಂಭದ ಕಾಗದದಲ್ಲಿ ಸತ್ಯ ಮತ್ತು ಪ್ರಶಿದ್ಧಿಯಾದ ವಾರ್ತೆಯೇ ಬರಿಯೋಣಾದಿತ್ತಾಗಿ ತೋರಿಸಿರುವುದರಿಂದಾಗಿರುತ್ತದೆ.

ಇಂದಿನ ವರದಿಗಾರರು 'ವಿಶ್ವಸನೀಯವಾಗಿ ತಿಳಿದು ಬರುತ್ತದೆ' ಎಂದು ಹೇಳುವ ಕ್ರಮವನ್ನು ಕನ್ನಡದ ಈ ಪತ್ರಿಕೆಯಲ್ಲಿಯೂ ಅನುಸರಿಸಲಾಗುತ್ತಿದ್ದಿತು. ಗ್ವಾಲಿಯರ್ ದೇಶವನ್ನು ಕಂಪನಿಯವರು ೩೧ ಡಿಸೆಂಬರ್ ೧೮೪೩ರಂದು ವಶಪಡಿಸಿಕೊಂಡ ಅಧಿಕೃತ ವಿವರಗಳನ್ನು ೧-೨-೧೮೪೪ ರ ಸಂಚಿಕೆಯಲ್ಲಿ ಹೇಳಿಯಾದ ಮೇಲೆ ಅದನ್ನು ಈ ರೀತಿ ಸಮಾರೋಪ ಮಾಡಿದ್ದಾರೆ:

ಈ ಪ್ರಕಾರ ಪೂರ್ವದ ಮಹಾರಾಜ ಸಿಂಧ್ಯಾ ಸರಕಾರವು ಕುಂಪನಿಯವರು ಸ್ವಾಧೀನ ಮಾಡಿಕೊಂಡದರಿಂದ ಅದನು ಹ್ಯಾಗೆ ನಡೆಸ್ಯಾರು ಎಂದು ಈವರೆಗೂ ನಿಶ್ಚಯವಿಲ್ಲ. ಆದರೆ ಗೌರ್ನರ ಜನರಲ್ ಬಹಾದೂರವರು ಅದನ್ನು ಮುಂಚಿನ ರಾಣಿಗೂ ಅವಳ ಸಾಕು ಮಗನಿಗೂ ರಾಜ್ಯಾಧಿಕಾರವನ್ನು ತಿರುಗಿ ಒಪ್ಪಿಸಿ ಭದ್ರಪಡಿಸುವ ಬಗ್ಗೆ ತಕ್ಕವಾದ ಸೈನ್ಯವನ್ನು ಅದರಲ್ಲಿ ಇಟ್ಟಾರೆಂದು ಸಮಾಚಾರ ಇರುತ್ತದೆ. (೧೫ ನೇ ಸಂಚಿಕೆ)

ನಮ್ಮ ದೇಶದ ಸುದ್ದಿಗಳಲ್ಲದೆ ಕಾಬೂಲ, ಚೀನಾ ದೇಶಗಳಲ್ಲಿ ನಡೆದ ಯುದ್ಧದ ಮತ್ತು ಇತರ ಹಿನ್ನೆಲೆಯ ವಿವರಗಳನ್ನು ಮಂಗಳೂರ ವಾಚಕರಿಗೆ ಒದಗಿಸಲಾಯಿತು. ಇಂದಿನಂತೆ ಪಿ.ಟಿ.ಐ., ರಾಯಿಟರ್ ಸುದ್ದಿ ಸಂಸ್ಥೆಗಳಾಗಲೀ, ಸ್ವಂತ ಸುದ್ದಿಗಾರರಾಗಲೀ ಇಲ್ಲದಿದ್ದಾಗ ಇಷ್ಟೆಲ್ಲ ವಿವರಗಳನ್ನು ಕಲೆ ಹಾಕಿದ್ದುದು ಆಶ್ಚರ್ಯವೇ ಸೈ. ಆಗ ಅಂಚೆಯ ವ್ಯವಸ್ಥೆಯೂ ನಮ್ಮ ದೇಶದಲ್ಲಿ ವ್ಯಾಪಕವಾಗಿ, ವ್ಯವಸ್ಥಿತವಾಗಿ ರೂಪುಗೊಂಡಿರಲಿಲ್ಲ. ಈ ಸ್ಥಿತಿಯಲ್ಲಿ ಸುದ್ದಿಗಳನ್ನು ದೊರಕಿಸಲು ವಿಶೇಷ ಪರಿಶ್ರಮ ಪಡಬೇಕಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಈ ಅನ್ವೇಷಣೆಯಲ್ಲಿ ಒಮ್ಮೆ ಉತ್ತರ ಹಿಂದುಸ್ಥಾನದ ಮಿಡಿತೆಗಳೂ ಇವರ ಕೈಗೆ ಅಕಸ್ಮಾತ್ ಎಟುಕಿದುವು! "ಶಿಂಧು ದೇಶದಲ್ಲಿಯೂ ಮುಂಬೈಯ ಉತ್ತರ ಶೀಮೆಗಳಲ್ಲಿಯೂ ಸಿಮಲಾ ಎಂಬ ಊರಿನಲ್ಲಿ ಸಹಾ ಮಿಡಿತೆಗಳೆಂಬ ದೊಡ್ಡ ಪತಂಗ ಹುಳಗಳು ಆಕಾಶದ ಮೇಲೆ ಮೋಡಗಳ ಹಾಗೆ ಗುಂಪುಗುಂಪಾಗಿ ಕೆಳಗಿಳಿದುವಂತೆ."

ಇನ್ನೊಂದು ಸಂಚಿಕೆಯಲ್ಲಿ ಹಿಂದುಸ್ತಾನದ ಅಂದಿನ ಖಾನೆಸುಮಾರಿಯನ್ನು ಕೊಡಲಾಗಿದೆ. ಆ ಪ್ರಕಾರ, ಬ್ರಿಟಿಶರ ನೇರ ಆಡಳಿತದಲ್ಲಿದ್ದ ಪ್ರದೇಶಗಳ ಕ್ಷೇತ್ರ ಹಾಗೂ ಜನಸಂಖ್ಯೆ ಈ ರೀತಿಯಾಗಿ ಇದ್ದಿತು:

ಚಚೌಕ ಮೈಲು ಜನರು ಬಂಗಾಳ ಕೊಸ್ತ ೨೨೦೩೧೨ ೬೯೭೧೦೦೭೧ ಮದರಾಸ್, ೧೪೮೯೨೩ ೧೩೫೦೮೫೩೫ ಮುಂಬಯಿ, ೫೯೪೩೮ ೬೭೫೧೫೪೬.

ಈ ಅಂಕಿಗಳ ನಿಖರ ಸ್ವರೂಪವನ್ನು ಗಮನಿಸಬೇಕು. ಅಲ್ಲಿಂದ ಬೇರೇ ಅರಸುಗಳ ಶೀಮೆಗಳಲ್ಲಿರುವ ಜನರ ಲೆಖ್ಖವನ್ನು ಒಂದೊಂದಾಗಿ ಕೊಟ್ಟು, ಹಿಂದುಸ್ತಾನದ ಒಟ್ಟು ಜನಸಂಖ್ಯೆ ೧೪ ಕೋಟಿ ೧೦ ಲಕ್ಷ ಎಂಬುದಾಗಿ ಕಾಣಿಸಿದ್ದಾರೆ. ಅನೇಕ ಸಂಸ್ಥಾನಗಳು ಇನ್ನೂ ಕೈವಶವಾಗದಿದ್ದಾಗ, ಬೇರೆ ಆಕರಗಳಿಂದ ಈ ಅಂಕಿಗಳನ್ನು ದೊರಕಿಸಿದುದು ಗಣನೀಯವಾಗಿದೆ.

"ಹಿಂದೂ ಜನರಲ್ಲಿ ಅನೇಕರು ತಂಮ ದೇಶದ ಸರಕಾರದವರು ಮತ್ತು ಇಂಗ್ಲಾಂಡ್ ದೇಶದ ಸರಕಾರದವರು ಸಹಾ ಒಂದೇ ಎಂದು" ತಪ್ಪಾಗಿ ತಿಳಿದುದನ್ನು ಸರಿಪಡಿಸುವ ದೃಷ್ಟಿಯಿಂದ ಈಸ್ಟ್ ಇಂಡಿಯಾ ಕಂಪೆನಿಯ ಚರಿತ್ರೆಯನ್ನು ವಿವರವಾಗಿ ತಿಳಿಹೇಳುವುದು ಸಮಂಜಸವೇ ಆಗಿದ್ದಿತು. ೧೫೯೯ನೇ ವರ್ಷದಲ್ಲಿ ಇಂಗ್ಲಂಡ್ ದೇಶದಲ್ಲಿದ್ದ ದೊಡ್ಡ ದೊಡ್ಡ ಸಾ[ಪ]ಕಾರರು ಸುಮಾರು ೩೦ ಲಕ್ಷ ರೂಪಾಯಿ ಕೂಡಿಸಿ... ಹಿಂದೂ ದೇಶಕ್ಕೆ ಹೋಗಿ ವ್ಯಾಪಾರ ನಡೆಸುತ್ತೇವೆಂದೂ ಆಗೋಸ್ಕರ ೩ ಹಡಗುಗಳು ಸಿದ್ದ ಮಾಡಿ ಕಳಿಸುವ ಹಾಗೆ ಅಪ್ಪಣೆಯಾಗಬೇಕೆಂದು ಅರಸನಿಗೆ ಅರಿಕೆ ಮಾಡಿ'ದಂದಿನಿಂದ ಅವರ ಚರಿತ್ರೆಯು ಹಲವು ಸಂಚಿಕೆಗಳಲ್ಲಿ ಮುಂದುವರಿದಿದೆ. ಕೊನೆಯಲ್ಲಿ ಕಂಪನಿಯ ೧೮೪೯-೫೦ರ ಆದಾಯವನ್ನೂ ಕೊಡಲಾಗಿದೆ.

ಅದೇ ಸಂಚಿಕೆಯಲ್ಲಿ (ನಂ. ೧೦) ಇಂಗ್ಲಂಡ್ ದೇಶದ ಆದಾಯ ವೆಚ್ಚಗಳನ್ನೂ ಹೇಳುವಾಗ ಆ ದೇಶಕ್ಕೆ ದೊಡ್ಡ ಮೊತ್ತದ ಸಾಲವಿದೆಯೆಂಬ ಪ್ರಸಕ್ತಿ ಬಂತು. ಇಂಗ್ಲಂಡದಂಥ ಬಲಾಢ್ಯ ಸಾಮ್ರಾಜ್ಯವು ಬಡತನದ ಸ್ಥಿತಿಯಲ್ಲಿದೆಯೇ? ಎಂಬ ಕುತೂಹಲವು ವಾಚಕರಲ್ಲಿ ಮೂಡಿರಬಹುದೆಂದು ತಾವೇ ಊಹಿಸಿ, ಮರು ಸಂಚಿಕೆಯಲ್ಲಿ ಅದರ ವಿವರಣೆಯನ್ನು ಈ ರೀತಿಯಾಗಿ ಕೊಡಲಾಯಿತು.

೧೦ನೇ ಕಾಗದದಲ್ಲಿ ಇಂಗ್ಲಾಂಡ್ ರಾಜ್ಯದ ಮೇಲೆ ಸ್ವಲ್ಪ ಕಡಿಮೆ ಲ ನೂರು ಕೋಟಿ ರೂಪಾಯಿ ಸಾಲ ಇರುತ್ತದೆಯೆಂದು ಬರೆದಿದೆ. ಈ ಮಾತು ವೋದಿದವನು ಆ ರಾಜ್ಯದ ಐಶ್ವರ್ಯಕ್ಕೆ ಕುಂದತ್ವ ಯೋಚಿಸಲಿಕ್ಕೆ ಕಾರಣವಿಲ್ಲ. ಯಾತಕ್ಕೆಂದರೆ ಅಂಥಾ ಸಾಲ ಕೊಟ್ಟು ಅದರ ಬಡ್ಡಿ ಪಡಕೊಳ್ಳುವವರು ಅದೇ ದೇಶಸ್ಥರಾಗಿರುತ್ತಾರೆ. ಹೀಗಿರಲಾಗಿ ಇಷ್ಟು ಸಾಲ ಇರುವುದರಿಂದ ಅರಸ್ಥನಕ್ಕೆ ತ್ರಾಣ ಉಂಟಾಗುವುದು. ಹ್ಯಾಗೆಂದರೆ ರಾಜ್ಯದಲ್ಲಿ ಏನಾದರೂ ಗುಬಾರು ಎದ್ದರೆ ತಮ್ಮ ಜೀವನಕ್ಕೆ ಅಪೋಹ [?] ವಾಗುವದೆಂದೂ ಹಣವಂದಿಕರು ತಿಳುಕೊಂಡು ಪೂರ್ಣ ಮಮತೆಯಿಂದ ಆಧರಿಸಬೇಕು. ಆ ಸಾಲವಂನು ಕೊಟ್ಟವರು ಅರಸನಿಂದ ತಿರುಗ ಹೊಂದಲಿಕ್ಕೆ ಏನೇನು ಮನಸ್ಸಿಲ್ಲ. ಏನಂದರೆ ಸರಕಾರದವರ ಹಾಗೆ ಅಸಲಿಗೆ ಮೋಸವಿಲ್ಲದೆ ಬಡ್ಡಿ ಕೊಡುವವರು ಯಾರೂ ಇಲ್ಲ. ಆದಕಾರಣ ಆ ದೇಶವು ಐಶ್ವರ್ಯದಿಂದ ತುಂಬಿರುತ್ತದೆಯೆಂತ ತಿಳಕೊಳ್ಳಬೇಕು.

'ಮಂಗಳೂರ ಸಮಾಚಾರ'ವು ಆ ನಗರ ಅಥವಾ ಜಿಲ್ಲೆಗೆ ಮಾತ್ರ ಸೀಮಿತವಾಗದೆ ಎಲ್ಲ ಕನ್ನಡಿಗರನ್ನು ಉದ್ದೇಶಿಸಿ ಪ್ರಕಟವಾಗುತ್ತಿದ್ದಿತು. ಅದರ ಸುದ್ದಿಯ ಹರಹು ಅಖಿಲ ಭಾರತ ಮಟ್ಟದಲ್ಲಿದ್ದಿತೆಂಬುದು ಮಾತ್ರವಲ್ಲ, ಜಗತ್ತಿನ ಇತರ ಹಲವು ಭಾಗಗಳನ್ನು ಬಳಸಿಕೊಂಡು ಇಂದಿನ ವಾರ್ತಾಪತ್ರಿಕೆಗಳಲ್ಲಿ ಕಂಡುಬರುವ ಅನೇಕ ಆಧುನಿಕ ಲಕ್ಷಣಗಳನ್ನು ಒಳಗೊಂಡಿದ್ದಿತು. ದಿನಪತ್ರಿಕೆಗಳ ಕೊನೆಯಚ್ಚಿನ 'ಕಡೆಯ ಸುದ್ದಿ'ಯನ್ನು ಕೊಡುತ್ತಿದ್ದುದಕ್ಕೂ ಒಂದು ನಿದರ್ಶನವಿದೆ. ಕದಿರೆ ಗ್ರಾಮದ ಸಣ್ಣಪ್ಪ ಎಂಬವನ ಮೇಲೆ ಖೂನಿಯ ಆರೋಪದ ವಿಚಾರಣೆ ನಡೆದುದನ್ನು ಪ್ರಸ್ತಾಪಿಸಿದ ಬಳಿಕ ಅದೇ ಸಂಚಿಕೆಯ ಕೊನೆಯಲ್ಲಿ, 'ಮೇಲೆ ಬರೆದಿರುವ ಕಲಂದರ ನಂಬ್ರ ೭ನೇ ಬಂದಿವಾನ ಸಣಪ್ಪಗೆ ಕಳೆದ ನವಂಬರ್ ತಾರೀಖು ೨ರಲ್ಲಿ ಗಲ್ಲಿಗೆ ಹಾಕಿರುತ್ತಾರೆ." (೧೧ನೆಯ ಸಂಚಿಕೆ)

ಪತ್ರಿಕೆಯ ಭಾಷೆಯ ಬಗ್ಗೆ ಒಂದೆರಡು ಅಂಶಗಳನ್ನು ಪ್ರಸ್ತಾಪಿಸಬೇಕು. ಹೊಸಗನ್ನಡ ಗದ್ಯವೆಂಬುದು ಅದಾಗ ರೂಪುಗೊಳ್ಳುತ್ತಿದ್ದ ಕಾಲವದು. ನೇರವಾದ ನಿರೂಪಣೆಯ, ತಿಳಿಯಾದ ಗದ್ಯ ಸರಣಿಯು ೧೫೨ ವರ್ಷಗಳ ಹಿಂದೆ ಹುಟ್ಟಿರಲೇ ಇಲ್ಲವೆನ್ನಬಹುದು. ಮೈಸೂರಿನ ಆಗಿನ ಆಸ್ಥಾನದಲ್ಲಿದ್ದ ಕನ್ನಡ ಪಂಡಿತರು ಸಂಸ್ಕೃತ ಭೂಯಿಷ್ಠವಾದ, ಪ್ರೌಢ ಶೈಲಿಯಲ್ಲಿ ಬರೆಯುತ್ತಿದ್ದರು. ಜೊತೆಗೆ ಹಳಗನ್ನಡ ನಡುಗನ್ನಡಗಳ ಪದ್ಯ ಪರಂಪರೆಯೇ ಇನ್ನೂ ಪ್ರಬಲವಾಗಿತ್ತಲ್ಲದೆ, ಗದ್ಯದಲ್ಲಿ ಸಾಮಾನ್ಯ ಜನಕ್ಕೆ ತಿಳಿಯುವಂತೆ ಬರೆಯಬೇಕೆನ್ನುವ ಪ್ರವೃತ್ತಿಯು ೧೮೪೦ ದಶಕದ ದೇಶೀಯರಲ್ಲಿ ಹುಟ್ಟಿರಲಿಲ್ಲವೆನ್ನಬಹುದು. ಮಿಶನರಿಗಳೇ ತಮ್ಮ ಮತಪ್ರಸಾರದ ಪುಸ್ತಕಗಳಲ್ಲಿ ಇದನ್ನು ಆರಂಭಿಸಿದರು. ಈ ಪತ್ರಿಕೆಯ ಸಂಪಾದಕನು ಮಿಶನರಿಯಾದುದರಿಂದಲೂ, ಕೋರ್ಟು, ಕಚೇರಿ, ಮತ್ತಿತರ ವ್ಯವಹಾರಗಳಿಗೆ ಸಂಬಂಧಿಸಿದ ಸುದ್ದಿಗಳೇ ಪ್ರಾಧಾನ್ಯ ಪಡೆದುವಾದ್ದರಿಂದಲೂ, ಇಲ್ಲಿಯ ಬರವಣಿಗೆಯು

ವಿಚಿತ್ರವಾಗಿ ತೋರಬಹುದಾದರೂ, ಮೇಲೆ ಹೇಳಿದ ಗದ್ಯೋದಯದ ಹಿನ್ನೆಲೆಯಲ್ಲಿ ನೋಡಿದಾಗ, ಇದರ ಭಾಷೆಯ ಬಗ್ಗೆ ಆಕ್ಷೇಪಣೆ ನಿಲ್ಲಲಾರದು.

ಪತ್ರಿಕೆಯ ಸಂಚಾಲಕರ ವ್ಯಾವಹಾರಿಕ ಚೊಕ್ಕಟತನವನ್ನೂ ಗಮನಿಸಬೇಕು. ಪ್ರತಿ ಸಂಚಿಕೆಯಲ್ಲಿ, ಅದರ ಸಂಪುಟದ ಹಾಗೂ ಬಿಡಿ ಸಂಚಿಕೆಯ ನಂಬರು, ದಿನಾಂಕ ಇವನ್ನು ನಿಯಮಿತವಾಗಿ ಕೊಡಲಾಗುತ್ತಿದ್ದಿತು. ಕೊತ್ವಾಲ್ ಕಟ್ಟೆಯೆದುರು ಹಾಗೂ ತಾಲೂಕು ಕಚೇರಿಯ ಹತ್ತಿರ ಇದ್ದ ಅವರ ಇಂಗ್ಲೀಷ್ ಶಾಲೆ – ಈ ಸ್ಥಳಗಳಲ್ಲಿ ಮಾರಾಟಕ್ಕೆ ದೊರೆಯುತ್ತಿದ್ದುದನ್ನು ತಪ್ಪದೇ ಕಾಣಿಸುತ್ತಿದ್ದರು. ಪತ್ರಿಕೆಯು, ನಿರ್ದಿಷ್ಟ ತಾರೀಖಿಗೇ ಹೊರಡುತ್ತಿತ್ತೆಂದು ನಾವು ಊಹಿಸುತ್ತೇವೆ. ಯಾವದೊಂದು ಸಂಚಿಕೆ ತಡವಾದದ್ದಾದರೆ, ಆ ಕುರಿತು ವಿವರಣೆಯಿತ್ತು ವಾಚಕರ ಕ್ಷಮೆ ಕೇಳುವಷ್ಟು ಪ್ರಾಮಾಣಿಕತೆ ಅವರಲ್ಲಿದ್ದಿತ್ತು. ಪತ್ರಿಕೆಯು ಹೀಗೆ ವ್ಯವಸ್ಥಿತವಾಗಿ ಮುಂದುವರಿದಿದ್ದಾಗ, ಅದರ ಸಂಚಾಲಕರು, ಅದರ ಮುದ್ರಣ ಕಾರ್ಯವನ್ನು ಬಳ್ಳಾರಿಗೆ ಸಾಗಿಸಬೇಕೆಂದು ನಿರ್ಧರಿಸಿದರು. ಅವರ ಕಾರಣ ಹೀಗಿವೆ :

ಮಂಗಳೂರು, ಮೈಸೂರು, ತುಮ್ಕೂರು, ಬಳ್ಳಾರಿ, ಶಿವಮೊಗ್ಗೆ, ಹುಬ್ಬಳ್ಳಿ, ಶಿರಸಿ, ಹೊಂನಾವರ ಮೊದಲಾದ ಸ್ಥಳಗಳಲ್ಲಿ ಕೆಲವು ನೂರು ಮಂದಿ ಈ ಕಾಗದವನ್ನು ಈ ವರೆಗೆ ತೆಗೆದುಕೊಳ್ಳುತ್ತಾ ಬಂದರು. ಮೊದಲಿನ ನಂಬ್ರದ ಕಾಗದಗಳನ್ನು ಛಾಪಿಸಿ ಪ್ರಕಟಮಾಡುವಾಗ್ಯೆ ನಾವು ಮಾಡಿದ ಆಲೋಚನೆ ಈ ಕಾಲದಲ್ಲಿ ಈ ದೇಶಸ್ಥರೊಳಗೆ ನಡಿಯುವುದೋ ಏನೋ ಎಂದು ಸ್ವಲ್ಪ ಸಂದೇಹ ಪಡುತ್ತಿದ್ದೆವು. ಈಗ ಈ ದೇಶಸ್ಥರಲ್ಲಿ ಅನೇಕರಿಗೆ ಕನಡು ಭಾಷೆಯಲ್ಲಿ ಬರೆದ ಒಂದು ಸಮಾಚಾರ ಕಾಗದವನ್ನು ಓದುವುದರಲ್ಲಿ ಮತಿ ಆಗುವದೆಂದು ನೋಡಿ ಸಂತೋಷದಿಂದ ಅದನ್ನು ವೃದ್ಧಿ ಮಾಡುವ ಪ್ರಯತ್ನದಿಂದ ಇನ್ನು ಮುಂದೆ ಅದನ್ನು ಕಲ್ಲಿನಲ್ಲಿ ಛಾಪಿಸದೆ ಬಳ್ಳಾರಿಯಲ್ಲಿ ಇರುವ ಅಕ್ಷರ ಛಾಪಖಾನೆಯಲ್ಲಿ ಅಚ್ಚುಪಡಿ ಮಾಡಲಿಕ್ಕೆ ನಿಶ್ಚೈಸಿದ್ದೇವೆ. ಆಮೇಲೆ ಕನಡ ಶೀಮೆಯ ನಾಲ್ಕು ದಿಕ್ಕುಗಳಲ್ಲಿರುವವರು ಶುದ್ಧವಾದ ಮೊಳೆ ಅಚ್ಚುಗಳಿಂದ ಆಗುವ ಬರಹವನ್ನು ಶುಲಭವಾಗಿ ಓದಬಹುದು. ಇದಲ್ಲದೆ ಬಳ್ಳಾರಿಯಲ್ಲಿ ಆಗುವ ವರ್ತಮಾನದ ಒಂದು ಕಾಗದದಲ್ಲಿ.... ಮೊದಲಿನ ಎರಡು ಕಾಗದದಷ್ಟು ಬರಹ ಪಡಿಯುವುದರಿಂದ ಹೆಚ್ಚು ವರ್ತಮಾನವಂನೂ ಚರಿತ್ರೆಗಳಂನೂ ವಿದ್ಯಾ ಪಾಠಗಳಂನೂ ಬುದ್ಧಿ ಮಾತುಗಳಂನೂ ಬರಿಯುವುದಕ್ಕೆ ಸ್ಥಳ ಶಿಕ್ಕುವದು. ಈ ಹದಿನಾರನೆ ನಂಬ್ರದ ಕಾಗದವು ಮಂಗಳೂರಲ್ಲಿ ಛಾಪಿಸಿದ ತರುವಾಯ ಹದಿನೇಳನೆ ನಂಬ್ರದ ಕಾಗದವು ಮಾರ್ಚ್ ತಾರೀಕು ೧ರಲ್ಲು ದೇವರ ಚಿತ್ತವಾದರೆ ಬಳ್ಳಾರಿಯಲ್ಲಿ ಛಾಪಿಸಲ್ಪಡುವದು.

ಇಂತಿದು ಸ್ಥಳಾಂತರದ ಹಿನ್ನೆಲೆ. ಉತ್ತಮ ಮುದ್ರಣ, ಹೆಚ್ಚು ಮಾಹಿತಿ ಒದಗಿಸುವ ಕಾರಣದಿಂದ ಬಿಡಿ ಸಂಚಿಕೆಯ ಬೆಲೆಯನ್ನು ೨ ದುಡ್ಡಿಗೆ ಏರಿಸಬೇಕೆಂದಾಯ್ತು.

ಕನ್ನಡ ಪತ್ರಿಕಾರಂಗದ ಈ ಚೊಚ್ಚಲು ಕೃತಿಯು ಹಸಿಬಿಸಿಯಾದ, ಎತ್ತುಗಡೆಯಾಗಿರದೆ ಆಧುನಿಕ ಪತ್ರಿಕೋದ್ಯಮದ ಭದ್ರ ತಳಹದಿಯ ಮೇಲೆ ನಿಂತಿತ್ತೆಂಬುದು, ಮೇಲಿನ ವಿವೇಚನೆಯಿಂದ ವಾಚಕರಿಗೆ ಮನದಟ್ಟಾಗಿರಲು ಸಾಕು. ಅತ್ಯಂತ ಮಹತ್ವದ ಮಾತೆಂದರೆ ಸಂಪಾದಕರಲ್ಲಿದ್ದ ಕನ್ನಡ ಪ್ರಜ್ಞೆ. ಮೈಸೂರು ಸಂಸ್ಥಾನದ ಕನ್ನಡಿಗರಿಗೂ, ಮುಂಬಯಿ ಕರ್ನಾಟಕದವರಿಗೂ ಆ ಕಾಲದಲ್ಲಿ ಬಳಕೆಯೇ ಇದ್ದಿರದಿದ್ದಾಗ, ನಾವು ಒಂದೇ ಭಾಷೆಯ ಬಾಂಧವರು ಎಂಬ ಭಾವನೆ ರವಷ್ಟಾದರೂ ಪರಸ್ಪರರಲ್ಲಿ ಇದ್ದಿರಲಿಲ್ಲ. ಕನ್ನಡಿಗರು ಎಂಬ ಸಮಷ್ಟಿ ದೃಷ್ಟಿಯನ್ನು ಈ ಪತ್ರಿಕಾಕರ್ತರು ಮೊದಲಿನಿಂದ ಇಟ್ಟುಕೊಂಡಿದ್ದಲ್ಲದೇ, ಅದೇ ಭಾವನೆಯಿಂದ ಪತ್ರಿಕೆಯನ್ನು ವ್ಯಾಪಕವಾದ ರೀತಿಯಲ್ಲಿ ಹೊರತರಬೇಕೆಂದು ಬಯಸಿದರು. ಅಲ್ಲದೆ,

'ಮಂಗಳೂರು ಸಮಾಚಾರ ಎಂಬ ಹೆಸರನ್ನು ಬಿಟ್ಟು, ಈ ಕಾಗದವು ಕನ್ನಡ ಭಾಷೆಯನ್ನಾಡುವ ಸಕಲ ಜನರಲ್ಲಿ ಪ್ರಸಿದ್ಧಿಯಾಗಬೇಕೆಂಬ ಇಚ್ಛೆಯಿಂದ 'ಕಂನಡ ಸಮಾಚಾರ' ವೆಂಬ ಹೊಸ ಹೆಸರಿನಿಂದ ಪತ್ರಿಕೆ ಹೊರಡುವುದೆಂದು ಘೋಷಿಸಿದ್ದರಲ್ಲಿ, ಕನ್ನಡತ್ವಕ್ಕೆ ವೀಳ್ಯವನ್ನೆತ್ತಿದಂತಾಯ್ತೆಂದು ಹೇಳಬಹುದು.

ಇಂತು 'ಕನ್ನಡ ಸಮಾಚಾರವು' ಬಳ್ಳಾರಿಯಿಂದ ಪ್ರಕಟವಾಗತೊಡಗುವುದಕ್ಕೆ ದೇವರ ಚಿತ್ತವೇನೋ ಆಯಿತು. ಆದರೆ, ಸಂಪಾದಕರು ದೂರದ ಮಂಗಳೂರಲ್ಲಿ ಉಳಿದದ್ದರಿಂದಲೂ ಬಳ್ಳಾರಿಯಲ್ಲಿ ಕತೃತ್ವಶಕ್ತಿಯ ಮಿಶನರಿಯು ಇರದ್ದರಿಂದಲೂ ಪತ್ರಿಕೆಯು ೧೮೪೪ನೆಯ ವರ್ಷಾಂತ್ಯದ ವರೆಗೆ ಮಾತ್ರ ಮುಂದುವರಿದು, ಅಲ್ಲಿಗೆ ನಿಂತು ಹೋಯಿತು. ಕನ್ನಡದ ದ್ವಿತೀಯ ಪತ್ರಿಕೆಯನ್ನು ಹೊರಡಿಸುವಲ್ಲಿಯೂ ಈ ಪತ್ರಿಕೆಯ ಸಂಪಾದಕನಾಗಿದ್ದ ಮೊಗ್ಲಿಂಗನೇ ಮುಂದುವರಿದನು. ೧೮೫೭ರಂದು ಅವನ ಸಂಪಾದಕತ್ವದಲ್ಲಿ 'ಕಂನಡ ವಾರ್ತಿಕ'ವು ಮಂಗಳೂರಿನಿಂದಲೇ ಹೊರಬಂದಿತು. ◆

ಶ್ರೀ.ಹಾ.

# ೧೨. ಚಂದ್ರೋದಯ

ಕನ್ನಡ ಪತ್ರಿಕೋದ್ಯಮವು ೧೮೪೩ರಿಂದ ಆರಂಭವಾಗಿದ್ದರೂ ಸ್ವತಂತ್ರ ವಿಚಾರ ಸರಣಿಯುಳ್ಳ, ನವೋದಯ ಕಾಲವೆನ್ನಬಹುದಾದ ಪತ್ರಿಕೆಗಳು ಕಂಡು ಬಂದದ್ದು ೧೮೮೦ನೆಯ ದಶಕದಿಂದ; ಅಂಥ ಪತ್ರಿಕೆಗಳಲ್ಲಿ 'ಚಂದ್ರೋದಯ'ವೂ ಒಂದು ಎಂಬುದಾಗಿ 'ಹೊಸಗನ್ನಡ ಅರುಣೋದಯ' ಗ್ರಂಥವಲ್ಲಿ ಹೇಳಿದ್ದಾಗಿದೆ. * ದೇಶೀಯ ಪತ್ರಿಕೆಗಳಲ್ಲಿ ಬಂದ ಸರಕಾರೀ ಟೀಕೆ ಅಥವಾ ಮೆಚ್ಚುನುಡಿಗಳನ್ನು ವರದಿ ಮಾಡಲು ನಿಯುಕ್ತವಾದ Reports on Native Press ಎಂಬ ಮುಂಬಯಿ ಸರಕಾರದ ಗುಪ್ತ ದಾಖಲೆಗಳನ್ನು ಪರಿಶೀಲಿಸಿ ಮೇಲಿನಂತೆ ಅಭಿಪ್ರಾಯ ತಳೆಯಲಾಗಿತ್ತು. ಆಗ ಈ ವಾರಪತ್ರಿಕೆಯ ಒಂದು ಸಂಚಿಕೆಯೂ ದೊರೆತಿರಲಿಲ್ಲ. ಸುದೈವದಿಂದ ಅದರ ಮೂರು ಸಂಚಿಕೆಗಳು 'ಸಂಯುಕ್ತ ಕರ್ನಾಟಕ'ದ ಎಸ್. ಎಸ್. ಘಳಗಿಯವರಿಗೆ ಈಚೆಗೆ ದೊರೆತಿವೆ – ರದ್ದಿ ಅಂಗಡಿಯಲ್ಲಿ! ಈ ಕುರಿತು ಅವರು 'ಸಂಯುಕ್ತ ಕರ್ನಾಟಕ'ದ ೧೬-೨-೧೯೮೦ರ ಸಂಚಿಕೆಯಲ್ಲಿ ಲೇಖನವನ್ನೂ ಬರೆದಿದ್ದಾರೆ. ಅಲ್ಲದೆ ಹೇಮಾ ಪಟ್ಟಣಶೆಟ್ಟಿಯವರು 'ಚಂದ್ರೋದಯ' ಮಾಸಪತ್ರಿಕೆಯ ೧೯೧೬ರ ಎರಡು ಸಂಚಿಕೆಗಳನ್ನು ಪತ್ತೆ ಹಚ್ಚಿದ್ದಾರೆ. ಹೀಗಾಗಿ 'ಚಂದ್ರೋದಯ' ಪತ್ರಿಕೆಯ ಬಗ್ಗೆ ಇಷ್ಟಷ್ಟು ಮಾಹಿತಿಯನ್ನು ಇಲ್ಲಿ ಚಾರಿತ್ರಿಕ ಚೌಕಟ್ಟಿನಲ್ಲಿ ಕೊಡಲು ಸಾಧ್ಯವಾಗಿದೆ

ಯಾವದೊಂದು ಸಾಹಿತ್ಯ ಕೃತಿಯ ಚರಿತ್ರೆಯನ್ನು ರೂಪಿಸುವಾಗ, ಅದಕ್ಕೆ ತುಸು ಪೂರ್ವದ ಹಾಗೂ ತತ್ಕಾಲೀನ ಕೃತಿಗಳ ಹಿನ್ನೆಲೆಯನ್ನು ಅಗತ್ಯವಾಗಿ ಗಮನಕ್ಕೆ ತಂದುಕೊಳ್ಳತಕ್ಕುದು. ಅಂದಾಗಲೇ ಅದರ ಸ್ಥಾನಮಾನದ ಅರಿವಾಗುವುದು. ಚಂದ್ರೋದಯವು ಅಸ್ತಿತ್ವದಲ್ಲಿ ಬಂದದ್ದು ಸೆಪ್ಟೆಂಬರ್ ೧೮೭೬ರಲ್ಲಿ. ಒಂದೆರಡು ಮಾಸಿಕಗಳನ್ನು ಬಿಟ್ಟರೆ, ಮುಂಬಯಿ ಕರ್ನಾಟಕದಲ್ಲಿ ಯಾವದೇ ಕನ್ನಡ ವರ್ತಮಾನ ಪತ್ರ ಇರಲಿಲ್ಲ. 'ಸುಬುದ್ಧಿ ಪ್ರಕಾಶ' ವೆಂಬ ಪತ್ರಿಕೆ ಬೆಳಗಾಂವಿಯಿಂದ ಹೊರಡುತ್ತಿದ್ದದ್ದು ಕೆಲ ವರ್ಷಗಳ ಹಿಂದೆ ನಿಂತಿದ್ದಿತು.

ಕನ್ನಡ ಪತ್ರಿಕೆಗಳು ಇಲ್ಲವೆಂದಾಕ್ಷಣ, ಕರ್ನಾಟಕದ ಈ ಭಾಗದ ಸುದ್ದಿಗಳು ಬೆಳಕಿಗೆ ಬರುತ್ತಿರಲಿಲ್ಲ; ಕನ್ನಡಿಗರು ಪತ್ರಿಕೆಗಳನ್ನೇ ಓದುತ್ತಿರಲಿಲ್ಲ – ಎಂದಲ್ಲ. ಆಗಿನ 'ಶಹಾಣೇ' ಬ್ರಾಹ್ಮಣರೂ ವ್ಯಾಪಾರೀ ಲಿಂಗವಂತರೂ ಕಲಿತದ್ದು ವ್ಯವಹರಿಸುತ್ತಿದ್ದದ್ದು ಮರಾಠಿಯೇ ಆದ್ದರಿಂದ ಅವರೆಲ್ಲ 'ಮರಾಠೀ ಪತ್ರಿಕೆಗಳನ್ನು ಓದುತ್ತಿದ್ದರು. ಅವರಿಗಾಗಿ 'ಬೆಳಗಾಂವ ಸಮಾಚಾರ', 'ಧಾರವಾಡ ವೃತ್ತ' ಎಂಬ ಮರಾಠೀ ಪತ್ರಿಕೆಗಳು ಕನ್ನಡದ ಇಂದಿನ ಗಂಡುಮೆಟ್ಟಿನ ಸ್ಥಳಗಳ ಹೆಸರುಗಳನ್ನೇ ಇಟ್ಟುಕೊಂಡು ಮೆರೆಯುವಷ್ಟು ನಮ್ಮವರು ಮರಾಠೀಮಯರಾಗಿದ್ದರು.

ಇಂಥ ಸ್ಥಿತಿಯಲ್ಲಿ, ಎಂದರೆ ಕನ್ನಡ ಭಾಷೆಯಲ್ಲಿ ಒಂದೂ ವರ್ತಮಾನಪತ್ರ ಇಲ್ಲದಿದ್ದಾಗ 'ಚಂದ್ರೋದಯ'ವನ್ನು ಹೊರಡಿಸುವ ಹುಚ್ಚು ವಿಚಾರ, ಹೊನ್ನಾಪುರ ಮಠದ ಮನೆತನದವರಲ್ಲಿ ತಲೆದೋರಿತು. ಪತ್ರಿಕೆಯ ಕೊನೆಯಲ್ಲಿ ಕಾಣಿಸಲಾದ ನಮೂದಿನ ಪ್ರಕಾರ ಅವರ ಹೆಸರು 'ಹುಚ್ಚಯ್ಯಾ ಬಿನ್ ಸಂಗಪ್ಪಯ್ಯಾ ಇ. ಛಾ. ಪ್ರ. ಮಾ" (ಇ. ಛಾ. ಪ್ರ. ಮಾ – ಇದರ ಪೂರ್ಣ ರೂಪ! ಇಲ್ಲಿ ಛಾಪಿಸಿ ಪ್ರಕಟ ಮಾಡಲ್ಪಟ್ಟಿತು!). ಪತ್ರಿಕೆಯಲ್ಲಿ ಯಾರು ಸಂಪಾದಕರು ಎಂಬ ನಮೂದು ಇಲ್ಲ. ಆದರೆ ಹುಚ್ಚಯ್ಯನವರೇ ಸಂಪಾದಕರು. ಆಗಿನ ಪತ್ರಿಕೆಗಳಲ್ಲಿ ಈಗಿನಂತೆ ಢಾಳವಾಗಿ ಸಂಪಾದಕನ ಹೆಸರನ್ನು ಕಾಣಿಸುವ ಪ್ರಮೇಯವಿರಲಿಲ್ಲ. ಅದೇ ಮುದ್ರಕ, ಪ್ರಕಾಶಕರ ಹೆಸರು ತಪ್ಪದೆ ಇರುತ್ತಿದ್ದುದರ ಕಾರಣ – ೧೮೬೭ರ ಗ್ರಂಥ-ವಿಷಯದ ಕಾಯದೆಯ ಅಧಿನಿಯಮ, ಸಂಪಾದಕೀಯ ಬರೆಯುವದರಿಂದ ಮೊದಲ್ಗೊಂಡು, ಸೋಡಚೀಟಿ ಪತ್ರದ ಅನುವಾದದ ವರೆಗಿನ ಎಲ್ಲ ಕೆಲಸವನ್ನೂ ಹುಚ್ಚಯ್ಯನವರೇ ಮಾಡುತ್ತಿದ್ದರು. ಅಷ್ಟೇ ಏಕೆ ಕಲ್ಲಚ್ಚಿನಲ್ಲಿ ಮುದ್ರಣವಾಗುತ್ತಿದ್ದ ಆ ಪತ್ರಿಕೆಯನ್ನು ಮೊದಲಿಗೆ ಕಲ್ಲಿನ ಮೇಲೆ ಬರೆಯುವ ಕೆಲಸವನ್ನು ಸಹ ಅವರೇ ಮಾಡುತ್ತಿದ್ದಿರಲೂ ಸಾಕು.

ಹುಚ್ಚಯ್ಯನವರ ಜನ್ಮವರ್ಷ ನಿಶ್ಚಿತವಾಗಿ ತಿಳಿಯದು. ಕ್ರಿ.ಶ. ೧೯೦೧ರ R.N.P. ದಾಖಲೆಯಲ್ಲಿ ಅವರ ವಯಸ್ಸನ್ನು ೬೫ ಎಂದು ಕಾಣಿಸಿದೆಯಾದ್ದರಿಂದ ಅವರು ಹುಟ್ಟಿದ ವರ್ಷವನ್ನು ೧೮೩೬, ೧೮೩೭ ಎಂದು ತಿಳಿಯಬಹುದು. ಮುಲ್ಕೀ ಪರೀಕ್ಷೆ ಪಾಸಾದ ಮೇಲೆ ಅವರು ತುಸು ಇಂಗ್ಲಿಶ್‌ನ್ನೂ ಕಲಿತಿರಬೇಕು. ಬ್ರಿಟಿಶರು ಧಾರವಾಡ ವಿಭಾಗದ ರಾಜ್ಯಭಾರ ವಹಿಸಿ ೩೦ ವರ್ಷ ಸಂದಿದ್ದರೂ, ಜಮೀನಿನ ಸರ್ವೆ ಕೆಲಸ ಜೋರಾಗಿಯೇ ಸಾಗಿದ್ದಿತು. ಅದು ಹಳ್ಳಿಹಳ್ಳಿಗಳಲ್ಲಿ ವ್ಯಾಪಿಸಿದ್ದರಿಂದ ಆ ಕುರಿತ ಲಾವಣಿಯೂ ರಚಿತವಾದದ್ದಿದೆ. ಹುಚ್ಚಯ್ಯನವರು ಈ ಸರ್ವೆ ಖಾತೆಯಲ್ಲಿ ಕೆಲವು ವರ್ಷ ಕೆಲಸ ಮಾಡಿದರು. ಸ್ವತಂತ್ರ ವಿಚಾರ ಸರಣಿಯವರಾಗಿದ್ದ ಅವರಿಗೆ ಇದು ಒಗ್ಗಿದಂತೆ ಕಾಣಲಿಲ್ಲ. ನೌಕರಿಯನ್ನು ಬಿಟ್ಟು ಒಂದು ಕಲ್ಲಚ್ಚಿನ ಛಾಪಖಾನೆಯನ್ನು ಆರಂಭಿಸಿದರು.

*ಹೊಸಗನ್ನಡದ ಅರುಣೋದಯ – ಶ್ರೀನಿವಾಸ ಹಾವನೂರ, ದ್ವಿತೀಯ ಆವೃತ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೧.

ಈ ಛಾಪಖಾನೆಯ ಸ್ಥಾಪನೆಯಾದದ್ದು ಯಾವಾಗ? ೧೮೭೭ರ ಪುಸ್ತಕ ಸೂಚಿಯೊಂದರಲ್ಲಿ (ಮುಂಬಯಿ ಸರಕಾರದಿಂದ ಪ್ರಕಟಿತ) ಆ ಕಾಲದ ಕನ್ನಡ ಮುದ್ರಣಾಲಯಗಳೆಂದು, 'ಜ್ಞಾನವರ್ಧಕ', 'ಸನ್ಮಾರ್ಗದರ್ಶಕ', 'ಬೆಳಗಾಂವ ಸಮಾಚಾರ' ಮುಂತಾದ ಪ್ರೆಸ್‌ಗಳ ಉಲ್ಲೇಖವಿದೆ. ಮುಂದೆಯೂ ಕೂಡ, ಎಂದರೆ ೧೮೭೦ ನೆಯ ದಶಕದ ಆರಂಭದಲ್ಲಿ ಹಲವು ಮುದ್ರಣಾಲಯಗಳ ಹಾಗೂ ಅದರಲ್ಲಿ ತೊಡಗಿದ ವ್ಯಕ್ತಿಗಳ (ಗೋವಿಂದ ಪ್ರಭಾಕರ ಜೋಶಿ. ಕಲ್ಯಾಣಪ್ಪ ಮಾದನಶೆಟ್ಟಿ, ದುರ್ಗಾಪ್ರಸಾದ ಮಿಸರ, ಬಸಲಿಂಗಯ್ಯ ಕುಂದಗೋಳ ಇತ್ಯಾದಿ) ಹೆಸರುಗಳು ಅಲ್ಲಲ್ಲಿ ದೊರೆಯುತ್ತವೆ. ಚಂದ್ರೋದಯ ಪ್ರೆಸ್ಸಿನ ಇಲ್ಲವೆ ಹುಚ್ಚಯ್ಯನವರ ಹೆಸರು ಕಂಡು ಬಂದಿಲ್ಲ. ಕಾರಣ ಚಂದ್ರೋದಯ ಛಾಪಖಾನೆಯು, ಚಂದ್ರೋದಯ ಪತ್ರಿಕೆ ಆರಂಭವಾದಾಗಿನಿಂದಲೇ ಎಂದರೆ ೧೮೭೭ರಲ್ಲಿ ಅಸ್ತಿತ್ವದಲ್ಲಿ ಬಂದಿರಬಹುದು. (ಬೆಳಗಾಂವ ಸಮಾಚಾರ ಪತ್ರಿಕೆಯ ಪ್ರೆಸ್‌ನಂತೆ.)*

'ಚಂದ್ರೋದಯ'ವು ಬೆಳಕಿಗೆ ಬರತೊಡಗಿದ ಆರಂಭ ಕಾಲದಲ್ಲಿಯೇ ಧಾರವಾಡ ಜಿಲ್ಲೆಯ ಗಜೆಟಿಯರಿನ ಸಿದ್ಧತೆ ನಡೆದಿತ್ತು. ಅದರಲ್ಲಿ ಧಾರವಾಡದ ಆಗಿನ ಪತ್ರಿಕಾ ವ್ಯವಸಾಯದ ಬಗ್ಗೆ ಹೀಗೆ ಉಲ್ಲೇಖಿಸಲಾಗಿದೆ :

"The town of Dharwar has three local vernacular papers, the 'Dharwar Vritta' or Dharwar news Printed in Marathi and published on Tuesday; the 'Chandrodaya' or Moon Rise printed in Kanerese and published on Saturday; and the 'Chhava' or Elephant Calf published on Sunday. The Dharwar News is said to be a fairly ably managed Paper with about 400 Subscribers. The Moon Rise has only lately appeared and has about 150 Subscribers...'

ಈ ಒಕ್ಕಣೆಯಿಂದ, ಚಂದ್ರೋದಯವೇ ಧಾರವಾಡ ಜಿಲ್ಲೆಯ ಮೊತ್ತಮೊದಲಿನ ಕನ್ನಡ ವೃತ್ತಾಂತ ಪತ್ರಿಕೆ ಎಂಬುದು ಸಿದ್ಧವಾಗುತ್ತದೆ. ಮುಂದೆ ೧೮೮೦ನೆಯ ದಶಕದಲ್ಲಿ ಕನ್ನಡ ಸುವಾರ್ತೆ ಹಾಗೂ ಹವ್ಯಕ ಸುಬೋಧಗಳು ಮುಂಬಯಿಯಿಂದ ಪ್ರಕಟವಾಗತೊಡಗಿದುವು. ಇತ್ತ ಧಾರವಾಡ ಜಿಲ್ಲೆಯಲ್ಲಿ ವೃತ್ತಾಂತ ಮಂಜರಿ, ಕರ್ನಾಟಕ ಪತ್ರ, ಲೋಕಬಂಧು(ಗದಗ), ರಸಿಕರಂಜನಿ, ಸತ್ಯವೃತ್ತ, ಹುಬ್ಬಳ್ಳಿ ವೃತ್ತ ಮೊದಲಾದ ಪತ್ರಿಕೆಗಳು ಹೊರಡತೊಡಗಿದುವು. ಇವುಗಳಲ್ಲಿ ಮುಂಬಯಿಯಿಂದ ಹೊರಬರುತ್ತಿದ್ದವುಗಳನ್ನು ಬಿಟ್ಟರೆ ಉಳಿದವುಗಳ ಪ್ರಸಾರ ೧೫೦ ರಿಂದ ೫೦೦ ರವರೆಗೆ ಮಾತ್ರ ಸೀಮಿತವಾಗಿದ್ದಿತು.

ಚಂದ್ರೋದಯದ ವಿಷಯವ್ಯಾಪ್ತಿಯು ಧಾರವಾಡ ನಗರದಿಂದ ಮೊದಲ್ಗೊಂಡು, ಹಿಂದುಸ್ಥಾನದ ಸುದ್ದಿಗಳ ಸಹಿತವಾಗಿ, ಯುರೋಪದವರೆಗೂ ಹರಡಿದ್ದಿತು. ವಿದೇಶೀ ಸುದ್ದಿಗಳನ್ನು ಕೊಡುವಲ್ಲಿ ಯಾವ ಒಂದು ಕ್ರಮವೂ ಕಂಡು ಬರುವುದಿಲ್ಲ. ಇಂಗ್ಲಿಶ್ ಪತ್ರಿಕೆಗಳಿಂದ ಕೈಗೆ ದೊರೆತವುಗಳನ್ನು ಹಾಕುತ್ತಿದ್ದರೆಂದು ಕಾಣುತ್ತದೆ. ರಶಿಯದ ಝಾರನು ಇಂಗ್ಲಂಡಿನ ಡ್ಯೂಕ್ ಆಫ್ ಎಡಿನ್‌ಬರೋಗೆ ಬರೆದ ಪತ್ರದ ಸಾರ, ವ್ಹಿಕ್ಟೋರಿಯಾ ರಾಣಿಯ ಜರ್ಮನ್ ಪ್ರವಾಸ; ಕಲ್ಕತ್ತೆಯವರು ರಶಿಯನ್ ಭಾಷೆ ಕಲಿಯುತ್ತಿದ್ದ ವಿಚಾರ – ಇವುಗಳ ಔಚಿತ್ಯ ಅರ್ಥವಾಗುತ್ತಿಲ್ಲ. ( ಈ ಬಗೆಯ ಸುದ್ದಿ ಪ್ರಕಟನೆ ಆಗಿನ ಇತರ ವೃತ್ತಾಂತ ಪತ್ರಿಕೆಗಳಲ್ಲಿಯೂ ಇದ್ದುದೇ.) ಆದರೂ ನಿರೂಪಣೆಯಲ್ಲಿ ಆಗೀಗ ಮೋಜನ್ನು ಕಾಣಬಹುದು. ರಶಿಯನ್ –ಅಫಗಾನಿಸ್ಥಾನದ ಯುದ್ಧ ಪ್ರಸಂಗದ ವರ್ಣನೆಯೊಂದು ಹೀಗಿದೆ:

> "ಈ ಸ್ವಾರಿಯಲ್ಲಿ ಅಫಗಾಣ ಕಡೆಯ ಸುಮಾರು ೫೦೦ ಜನರು ನಾಶ ಹೊಂದಿದರು. ರಶಿಯನ್ ಕಡೆಯ ೧೦ /೧೫ ಜನ ಮರಣಪಟ್ಟರು. ಹೀಗೆ ಅಫಗಾಣರ ಪರಾಭವವಾದ ಬಳಿಕ, ಅವರ 'ರಶೀಲುಲ್ಲಾ' ಎಂಬ ದುಃಖೋದ್ಗಾರವೂ ರಶಿಯನ್ನರ 'ಹುರ್ರಾ' ಎಂಬ ಆನಂದೋದ್ಗಾರವೂ ಅಲ್ಲಲ್ಲಿ ಹೊರಬಿತ್ತು."
> (ದಿ. ೧೮-೪-೧೮೮೫ರ ಸಂಚಿಕೆ.)

ಇದು ಹಾಗಿದ್ದರೂ ಹಿಂದುಸ್ತಾನದ ವಾರ್ತೆಗಳನ್ನು ಕೊಡುವಾಗ ಮತ್ತು ಸಂಪಾದಕೀಯವನ್ನು ಬರೆಯುವಾಗ 'ಚಂದ್ರೋದಯ'ವು ರಾಷ್ಟ್ರೀಯತ್ವವನ್ನು ತೋರಿದೆ; ಸ್ವಂತಿಕೆಯನ್ನು ಮೆರೆದಿದೆ. ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಲಕತ್ತೆಯ ಅಧಿವೇಶನಕ್ಕೆ (೧೮೯೦) ಅಧ್ಯಕ್ಷರು ಯಾರಾಗಬೇಕು ಎಂಬುದರ ಪ್ರಸ್ತಾಪ ಬಂದಾಗ, ನಮ್ಮ ದೇಶದ ಹಿತವನ್ನು ಚಿಂತಿಸುವ ಇಂಗ್ಲಂಡವಾಸೀ ಸದ್ಗೃಹಸ್ಥರು ನಮಗೆ ಅಧ್ಯಕ್ಷರಾಗಿ ಇರಬೇಕು ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಮಹದೇವ ಗೋವಿಂದ ರಾನಡೆಯವರು ತೀರಿಕೊಂಡಾಗ ಬರೆದ ಸಂಪಾದಕೀಯವು ಆತ್ಮೀಯತೆಯಿಂದ ಕೂಡಿದೆ.

ಎರಡು ಮಹಾಯುದ್ಧಗಳ ಕಾಲದಲ್ಲಿ ಮಾತ್ರವಲ್ಲ, ಬ್ರಿಟಿಶರು ಯಾವುದೇ ಯುದ್ಧ ಬಂತೆಂದರೆ ನಮ್ಮ ದೇಶ ಜನ,

---

*'ಸರ್ವಜ್ಞನ ವಚನಗಳನ್ನು ಮೊದಲನೆಯ ಸಾರಿ ಮುದ್ರಿಸಿದವರು ಈಗ ಧಾರವಾಡದಲ್ಲಿರುವ ಶ್ರೀ ಗದಿಗೆಯ್ಯ ಹೊನ್ನಾಪುರಮಠರ ತಂದೆ ಹುಚ್ಚಯ್ಯ ಹೊನ್ನಾಪುರಮಠ ಎಂಬವರು. ಇವರು ತಮ್ಮ ಮುದ್ರಣಾಲಯದಲ್ಲಿ ಇದನ್ನು ಸನ್ ೧೮೭೭ರಲ್ಲಿ ಮುದ್ರಿಸಿರುವರು. ಇದು ಶಿಲಾಮುದ್ರಣವು...' ಎಂದು ಶ್ರೀ ಉತ್ತಂಗಿ ಚನ್ನಪ್ಪನವರು ತಮ್ಮ 'ಸರ್ವಜ್ಞನ ವಚನಗಳು' (೧೯೨೩) ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಆದುದರಿಂದ ಚಂದ್ರೋದಯ ಮುದ್ರಣಾಲಯವು ೧೮೭೭ಕ್ಕೂ ಮೊದಲೇ ಅಸ್ತಿತ್ವದಲ್ಲಿ ಬಂದಿರಬೇಕು. - **ಹೇಮಾ**

ಧನಬಲವನ್ನು ಕಿತ್ತುಕೊಳ್ಳುವುದು ಮೊದಲಿನಿಂದಲೂ ನಡೆದು ಬಂದಿದ್ದಿತು. ಇಂಗ್ಲಂಡ-ರಶಿಯಗಳ ನಡುವೆ ಯುದ್ಧ ನಡೆದಾಗ ಚಂದ್ರೋದಯಕರ್ತರು ಹೀಗೆ ಬರೆದರು:

"ಯುದ್ಧದ ಖರ್ಚು ಪೂರೈಸಿಕೊಡುವವಕ್ಕಾಗಿ ನಮ್ಮ ಸರಕಾರಕ್ಕೆ ದ್ರವ್ಯದ್ದೊಂದು ದೊಡ್ಡ ಕೊರತೆ ಇದೆ. ಆ ಕೊರತೆಯನ್ನು ದೂರುಪಡಿಸಲಿಕ್ಕೆ ನಮ್ಮ ಸರಕಾರದವರು ಎಲ್ಲ ಎಸ್ಟಾಬ್ಲಿಶ್ಮೆಂಟುಗಳಲ್ಲಿಯ ಖರ್ಚನ್ನು ಆದಷ್ಟು ಕಡಿಮೆ ಮಾಡಬೇಕೆಂದಿದ್ದಾರೆ. ಈ ಸಮಯಕ್ಕೆ ನಮ್ಮ ಮುಂಬಯಿ ಇಲಾಖೆಯವರು ಸಹ ೩೦/೩೫ ಲಕ್ಷ ರೂ.ಗಳನ್ನು ..... [ಇಲ್ಲಿ ಪತ್ರಿಕೆ ತುಸು ಹರಿದಿದೆ].... ತಲಾ ೨೦ ರೂ. ಯಂತೆ ಕಡಿಮೆ ಕೊಡಲಿಕ್ಕೆ ಇಲ್ಲಿಯ ಕೆಲ ಖಾತೆಗಳಲ್ಲಿಯ ಅಧಿಕಾರಿಗಳಿಗೆ ಬರೆದು ಬಂದಿರುತ್ತದೆ. ಸಣ್ಣ ಸಣ್ಣ ಪಗಾರದ ಸರಕಾರದ ಕಾರಕೂನರಾದರೂ ಪ್ರತಿ ತಿಂಗಳಿಗೆ ತಮ್ಮ ತಮ್ಮ ಪಗಾರದಿಂದ ಒಂದೆರಡು ಶುಭ್ರಗಳನ್ನು [ಅಂದರೆ, ರೂಪಾಯಿ ನಾಣ್ಯ!] ಮುಡುಪು ತೆಗೆದಿಡುವ ಪ್ರಸಂಗವು ಎಲ್ಲಿ ಒದಗುವದೋ ಏನೋ? ಆದಷ್ಟು ಖರ್ಚು ಕಡಿಮೆ ಮಾಡುವುದು ಎಂಥಾ ನ್ಯಾಯದ ಪ್ರಕಾರ ನಡೆಯುತ್ತದೋ ಇಲ್ಲೋ ಎಂಬುದನ್ನು ಶೋಧಿಸುವುದಕ್ಕೆ ನಿಷ್ಪಕ್ಷಪಾತಿಯೂ ವಿಶ್ವಾಸಿಕನೂ ಆಗಿರುವ ಒಬ್ಬಾನೊಬ್ಬ ಅಮಲದಾರನಿರಬೇಕಂತೆ ನೋಡಿ. ನಮ್ಮ ಸರಕಾರದವರು ಗೌರ ಕಾಯಸ್ಥನನ್ನು ನೇಮಿಸತಕ್ಕವರಿದ್ದಾರೆ... ಸಾವಿರಾರು ರುಪೈ ಪಗಾರ ಗೊತ್ತು ಮಾಡಿ ಇಂಥ ಜಡ ಹೊಟ್ಟೆಯ ಗೌರ ಕಾಯಸ್ಥರನ್ನು ನೇಮಿಸುವ ಬದಲು, ಅವರ ೧/೪ ಪಗಾರದ ಮೇಲೆ ಬರಲಿಕ್ಕೆ ಸಿದ್ಧವಿರುವ ನೇಟಿವ್ಹರನ್ನು ಯಾಕೆ ನೇಮಿಸಿಕೊಳ್ಳಬಾರದು! ಅವರಲ್ಲಿ ನಿಷ್ಪಕ್ಷಪಾತಿಗಳೂ ವಿಶ್ವಾಸಿಕರೂ ಯಾರೂ ಇಲ್ಲವೊ?... ಸಣ್ಣ ಸಣ್ಣ ಪಗಾರ ತೆಗೆದುಕೊಂಡು ಬಡತಿಯ ಆಶೆಯಿಂದ ಹಗಲು ಹನ್ನೆರಡು ತಾಸು ದುಡಿದು ಕಷ್ಟ ಬಡುವ ನೇಟಿವ್ಹರಿಗಿಂತಲೂ ಢೋಂಗಿನ ಈ ಗೌರವ ಕಾಯಸ್ಥರಿಂದ ಹೆಚ್ಚು ಕೆಲಸವಾಗುತ್ತಿರುವದಿಲ್ಲೆಂಬುವದಕ್ಕೆ ಅನೇಕ ಉದಾಹರಣೆಗಳು ಕಣ್ಣಿಗೆ ಬೀಳುತ್ತಲಿವೆ. ಆದ್ದರಿಂದ ಈ ಜಡ ಹೊಟ್ಟೆಯ ಅಮಲದಾರರಿಂದ ೧೦೦ ಕ್ಕೆ ೫೦ ರೂ. ತೆಗೆದುಕೊಂಡರೆ ಇಲ್ಲವೆ ಅನುಪಯೋಗಿ ಗೌರ ಕಾಮದಾರರ ಸ್ಥಳಗಳನ್ನು ತೆಗೆದು ಬಿಟ್ಟರೆ ಹಣವು ತಕ್ಕಮಟ್ಟಿಗೆ ಪುರವಠೆಯಾದೀತೆಂದು ನಮಗೆ ಖಾತ್ರಿಯಿದೆ. ಹಣಕ್ಕಾಗಿ ಸರಕಾರವು ಹೀಗೆ ತಿರುಕರಂತೆ ಭಿಕ್ಷೆ ಬೇಡುವುದರಕಿಂತಲೂ ಯುರೋಪಿಯನ್ ಕಾಮದಾರರ ಕೆಲ ಸ್ಥಳಗಳನ್ನು ಕಡಿಮೆ ಮಾಡಿ ಅವರಿಗೆ ಅವರವರ ಸ್ವದೇಶದ ಅಥವಾ ಯುದ್ಧವಾಗುವ ಕಡೆಯ ಮಾರ್ಗ ತೋರಿಸಿದರೆ ಒಳ್ಳೆತಾಗುವದು. "

– ಬ್ರಿಟಿಶ್ ಅಧಿಕಾರಿಗಳು ಇಲ್ಲಿಂದ ಹೋಗಬೇಕು! ಆಗಿನ ದಿನಗಳಲ್ಲಿ ಹೀಗೆ ಹೇಳುವುದಕ್ಕೆ ಎಂಟೆದೆಯೇ ಬೇಕಲ್ಲವೆ?

ಅಂದಿನ ಸಾಮಾಜಿಕ ನಡೆವಳಿಕೆಯನ್ನು ಚಂದ್ರೋದಯವು ತೆರದ ಕಣ್ಣಿನಿಂದ ಕಂಡಿದೆ. ತಪ್ಪು ಎಂದು ಕಂಡುಬಂದಲ್ಲಿ ಸ್ಪಷ್ಟವಾಗಿ ತೆಗಳಿದೆ. ಆಗಿನ ಕಾಲದಲ್ಲಿ 'ಪಾನಸುಪಾರಿ' ಎಂಬ ವಿಶೇಷ ಮರ್ಯಾದೆಯು ಅಧಿಕಾರಿಗಳಿಗೆ ಸಲ್ಲುತ್ತಿತ್ತು. ಅದಕ್ಕಾಗಿ ವಿದ್ಯಾಸಂಸ್ಥೆಗಳೂ, ಅರ್ಧ ಸರಕಾರೀ ಸಂಸ್ಥೆಗಳೂ ತುಂಬಾ ಹಣ ವೆಚ್ಚ ಮಾಡಬೇಕಾಗುತ್ತಿತ್ತು. ಉದಾಹರಣೆಗೆ ಆಗಿನ ಡಿಸ್ಟ್ರಿಕ್ಟ್ ಜಜ್ ಜಾನ್ಸನ್ ಸಾಹೇಬರು ರಜೆಯ ಮೇಲೆ ಹೋದಾಗಲೂ ಪಾನಸುಪಾರಿ ಆಗತಕ್ಕುದೇ! ಅದಕ್ಕಾಗಿ ಧಾರವಾಡದ ವಕೀಲರು ೨೦೦ ರೂ. ಜಮಾಯಿಸಿದ್ದರಂತೆ. ಈ ಪಿಡುಗಿನ ಕೃತ್ರಿಮತೆ, ಅವಾಢವ್ಯ ವೆಚ್ಚ ಚಂದ್ರೋದಯಕರ್ತರಿಗೆ ಸರಿತೋರಲಿಲ್ಲ. ಮದ್ರಾಸ ಸರಕಾರವು, ತಮ್ಮಲ್ಲಿಯ ಮುನಸೀಪಾಲಟಿಯವರು ಈ ಮುಂದು ವೆಚ್ಚ ಮಾಡಬಾರದೆಂದು ಅಜ್ಞೆಯನ್ನೇ ಹೊರಡಿಸಿದ್ದಂತೆ, ನಮ್ಮ ಕಡೆಯ ಮುನಸೀಪಾಲಟಿಗಳವರನ್ನೂ ಹಾಗೆ ಪ್ರತಿಬಂಧಿಸಬೇಕೆಂದು ಚಂದ್ರೋದಯದಲ್ಲಿ ಬರೆದರು.

ಸ್ಥಳೀಯ ಮತ್ತು ಪ್ರಾದೇಶಿಕವಾದ ಸುದ್ದಿಗಳಿಗೆ ಪತ್ರಿಕೆಯಲ್ಲಿ ಸಾಕಷ್ಟು ಪ್ರಾಶಸ್ತ್ಯ ಕೊಟ್ಟದ್ದು ಕಂಡು ಬರುತ್ತದೆ. ಕಾಲಸ್ಥಿತಿ ಎಂಬ ಸದರಿನಲ್ಲಿ ಸರಕಾರೀ ಗಜೆಟ್, ವರ್ಗಾವರ್ಗಿ, ಮಳೆ-ಬೆಳೆ, ವಾರದ ಪಂಚಾಂಗ (ರಾಶಿ ಭವಿಷ್ಯ ಅಲ್ಲ!), ಪೇಟೆಯ ಧಾರಣೆ ಕಾಣಸಿಗುತ್ತವೆ. ' ಇಂದು ಬಂಗಾರದ ಧಾರಣಿ ಒಂದೇ ಸಮನೆ ಏರುತ್ತ ನಡೆದಿದೆ, ೧೦೦ ನಂಬರಿನ ಭಂಗಾರಕ್ಕೆ ೧ ತೊಲಿಗೆ ರೂ. ೧೮ -೧೨-೦ ಎಂಬ ಸುದ್ದಿ ಚಂದ್ರೋದಯದ ೯-೮-೧೮೭೦ ರ ಸಂಚಿಕೆಯಲ್ಲಿದೆ. (ಇದನ್ನು ಓದಿ, ಇಂದಿನ ನಮ್ಮ ಅನೇಕ ಹೆಂಗಸರಿಗೆ 'ಅಯ್ಯೋ, ನಾವು ಆ ಕಾಲದಲ್ಲಿ ಹುಟ್ಟಬೇಕಿತ್ತು' ಎನಿಸೀತು!)

ಇಂಡಿಯನ್ ಪೀನಲ್ ಕೋಡದನ್ವಯ, ಕನ್ಯೆಯ ವಯಸ್ಸು ೧೦ ವರ್ಷಕ್ಕಿಂತ ಕಡಿಮೆ ಇರಬೇಕು – ಎಂಬ ಕಲಮು ಇದ್ದಾಗ, ಆ ಗಡುವನ್ನು ಏರಿಸಬೇಕೆನ್ನುವ ಬಗ್ಗೆ ಆಗಿನ ಧಾರವಾಡದ ಸಾರ್ವಜನಿಕರಲ್ಲಿ ಚರ್ಚೆ ನಡೆಯಿತು. ಧಾರವಾಡದ ವಕೀಲರು, ಇತರ ಪ್ರತಿಷ್ಠಿತರು ಸಭೆ ಸೇರಿದರು. ಅಂಥ ಒಂದು ಸಭೆಯ ಸುದ್ದಿಯನ್ನು ಕೊಡುತ್ತ "ವಿಚಾರಾಂತ್ಯದಲ್ಲಿ ೧೦ ವರ್ಷದ ವಯಸ್ಸನ್ನು ಹೆಚ್ಚಿಸುವ ಬಗ್ಗೆ ಸರಕಾರಕ್ಕೆ ಅರ್ಜಿಯನ್ನು ಮಾಡಬಾರದೆಂದು ನಿಶ್ಚಯವಾಯಿತು. ಇದು ಯೋಗ್ಯವೇ ಸೈ" ಎಂಬ ಅಭಿಪ್ರಾಯವನ್ನು ಚಂದ್ರೋದಯದವರು ಕೊಟ್ಟಿದ್ದಾರೆ!

ಶಿಕ್ಷಣದ ವಿಚಾರವಾಗಿಯೂ ಪತ್ರಿಕೆ ಆಗೀಗ ಮಿಣುಕು ಸುದ್ದಿಗಳನ್ನು ಕೊಟ್ಟಿದೆ. ಈ ಹಿಂದೆ ಮ್ಯಾಟ್ರಿಕ್ ಪರೀಕ್ಷೆಯನ್ನು ಮುಂಬಯಿ ವಿಶ್ವವಿದ್ಯಾಲಯದವರೇ ನಡೆಸುತ್ತಿದ್ದರು. ಕರ್ನಾಟಕಸ್ಥರಿಗಾಗಿ ಆಗ ಬೆಳಗಾಂವಿಯೊಂದೇ ಪರೀಕ್ಷಾ ಕೇಂದ್ರವಾಗಿದ್ದಿತು. ಆರ್ಥಿಕ ಅಡಚಣೆಯ ಕಾರಣ ಕೊಟ್ಟು, ವಿಶ್ವವಿದ್ಯಾಲಯದವರು ಅದನ್ನು ಮುಚ್ಚಬೇಕೆಂದರು. ಚಂದ್ರೋದಯವು ಅದನ್ನು ಬಲವಾಗಿ ವಿರೋಧಿಸಿ ಬರೆಯಿತು.

ಧಾರವಾಡದ ಆಗಿನ ಸರಕಾರೀ ಹೈಸ್ಕೂಲಿಗೆ 'ನ್ಯೂ ಇಂಗ್ಲಿಶ್ ಸ್ಕೂಲ್' ಎಂದು ಕರೆಯುತ್ತಿದ್ದರು. ಇನ್‌ಸ್ಪೆಕ್ಟರರು ಬಂದು ಪರೀಕ್ಷೆ ತೆಗೆದುಕೊಳ್ಳುತ್ತಿದ್ದ ಆ ದಿನಗಳಲ್ಲಿ ವಿದ್ಯಾರ್ಥಿಗಳಿಗೆ ಇನಾಮನ್ನು ಕೊಡಲಾಗುತ್ತಿತ್ತು. ಅದರ ವರ್ಣನೆಯಲ್ಲಿ 'ಈ ಶಹರದಲ್ಲಿ ಸಂಭವಿಸುವ ಪ್ರತಿ ಒಂದು ಮಂಗಲ ಕಾರ್ಯದಲ್ಲಿ ತಮ್ಮ ಹೆಚ್ಚಿಯನ್ನು ಮುಂದಿರಿಸುವ ರಾ. ರಾ. ಗೋವಿಂದರಾವ ವಕೀಲ ಇವರು ನಿತ್ಯ ನೇಮದಂತೆ ಆಗಮಿಸಿದ್ದರು." ಎಂಬೊಂದು ವಾಕ್ಯವಿದೆ. ಈ ವ್ಯಕ್ತಿ ಯಾರೆಂದು ತಿಳಿಯದು. ಪೆನ್ಶನರ್ ಜನರ ಊರೆಂದು ಹೆಸರಾದ ಧಾರವಾಡದಲ್ಲಿ ಇಂಥ ನಿತ್ಯ ನೇಮದಂತೆ ಸಭೆ ಮುಂತಾದ್ದರಲ್ಲಿ ಹಾಜರಾಗುವ ಜನರು ಆಗೂ ಇದ್ದರೆನ್ನಬೇಕು! ಸಭೆಯ ಅಧ್ಯಕ್ಷ ಪೀಠದಲ್ಲಿ ಸವಣೂರಿನ 'ಛಾವೀ' ನವಾಬರು ವಿರಾಜಮಾನರಾಗಿದ್ದರಂತೆ. "ನವಾಬರು ಸೌಮ್ಯ ಸ್ವಭಾವದವರೂ ನಿಗರ್ವಿಗಳೂ ಮೇಲಾದ ವಿಚಾರವಂತರೂ ಇರುವರೆಂದು ನೋಡಿ" ಚಂದ್ರೋದಯ ಕರ್ತರಿಗೆ ವಿಶೇಷ ಆನಂದ. ಅವರ ಬಗ್ಗೆ ವಿಶೇಷಾಭಿಮಾನವಿದ್ದುದರ ಇನ್ನೊಂದು ನಿದರ್ಶನವೆಂದರೆ, (ಈ ಸಮಾರಂಭ ನಡೆದು ೫ ವರ್ಷಗಳಾದ ಮೇಲೆ) ಅವರ ಹೆಸರನ್ನು ಮುಂಬಯಿ ಲೆಜಿಸ್ಲೇಟಿವ್ ಕೌನ್ಸಿಲ್‌ಗೆ ಶಿಫಾರಸು ಮಾಡಿದುದು. ಆ ಹಿಂದೆ ಗವರ್ನರರೂ ರಾ.ಬ. ಗಿಲಗಂಚಿಯವರನ್ನು ನೇಮಿಸಿದ್ದಂತೆ, ಈಗ ಕನ್ನಡಿಗರ ಪ್ರಾತಿನಿಧ್ಯವೆಂದು ಸವಣೂರ ನವಾಬರನ್ನು, ತೆರವಾದ ಕೌನ್ಸಿಲ್ ಸ್ಥಳಕ್ಕೆ ನೇಮಿಸಬೇಕೆಂದು ಅದರಲ್ಲಿ ಹೇಳಿದ್ದಾಗಿದೆ. (೧೩-೯-೧೮೯೦ರ ಸಂಚಿಕೆ.)

ವಿಚಿತ್ರ ವಿಶ್ವ – ಎಂಬ ಸದರಿನಲ್ಲಿ ಬರುತ್ತಿದ್ದ ಸುದ್ದಿಗಳಲ್ಲಿ ಕೆಲವು ಇಂದಿಗೂ ಮನೋರಂಜಕವಾಗಬಲ್ಲವು. ಇನ್ನು ಕೆಲವು ಆಗಿನ ಕಾಲಕ್ಕಷ್ಟೇ ಸೂಕ್ತ. ಗ್ರಾಮೋಫೋನ್ ಹೊಸತಾಗಿ ಶೋಧವಾದಾಗಿನ ವಿಶಿಷ್ಟ ನಿರೂಪಣೆ ಇದು:

'ಚಮತ್ಕಾರಿಕ ಶೋಧ :- ನಾಟಕಗಳನ್ನು ಆಡತಕ್ಕವರ ಪುಣ್ಯಕ್ಕೆ ಎಣೆಯೇ ಇಲ್ಲ! ಮಕ್ಕಳು ಅಳುವಂತೆ ನಾಟಕ - ಶಾಲೆಯಲ್ಲಿ ಮಾಡಲು ಇದುವರೆಗೂ ಸಾಧ್ಯವಾಗಿದ್ದಿಲ್ಲ. ಈಗೇನು? ಪ್ರತಿಯೊಂದು ಕಂಪನಿಯವರು ಮಿ. ಎಡಿಸನ್ ಸಾಹೇಬರ ಯಂತ್ರವನ್ನು ತಂದು ಮಧ್ಯಾಹ್ನದಲ್ಲಿ ಒಂದು ಮಗುವಿಗೆ ಅಳಿಸಿ, ಅದರ ರೋದನವನ್ನೆಲ್ಲಾ ಈ ಯಂತ್ರಕ್ಕೆ ತುಂಬಿಸಿದರೆ ರಾತ್ರಿ ನಾಟಕದಲ್ಲಿ ಈ ಯಂತ್ರವು ಅತ್ತಂತೆ ಧ್ವನಿಮಾಡಬಲ್ಲುದು!!' (ದಿ. ೬-೯-೧೮೯೦ರ ಸಂಚಿಕೆ).

ಇಂಥ ಮೋಜಿನ ಸುದ್ದಿಗಳು ಪ್ರತಿ ಸಂಚಿಕೆಯಲ್ಲೂ ಇದ್ದುವು. ವಾಯಿ ಗ್ರಾಮದಲ್ಲಿ ಸಯಾಮಿ ಅವಳಿ-ಜವಳಿಯಂತಹ ಜೋಡಿ ಜನಿಸಿತಂತೆ. ಅಮೇರಿಕೆಯ ಕಾಡುಗಳಲ್ಲಿಯ ಒಂದು ಪಕ್ಷಿಯನ್ನು ಕೊಂದು ಅದರ ಗಂಟಲಲ್ಲಿ ಬತ್ತಿಯನ್ನು ತುರುಕಿ ದೀಪ ಹತ್ತಿಸಿದರೆ ಒಂದು ತಾಸು ಉರಿಯಿತಂತೆ! ಅದರ ಹೆಸರು? ಚಂದ್ರೋದಯದವರೇ ಆ ಪಕ್ಷಿಗೆ 'ದೀಪಾಕ್ಷಿ' ಎಂಬ ಸೊಗಸಾದ ನಾಮಕರಣ ಮಾಡಿಬಿಟ್ಟಿದ್ದಾರೆ. ಐದು ವರ್ಷದ ಮಗುವಿನ ಎತ್ತರ, ತೂಕ ಸಾಮಾನ್ಯವಾಗಿ ಎಷ್ಟಿರಬಹುದು? ವೆಸ್ಟ್ ಕ್ಯಾಮೆಲ್ ಎಂಬಲ್ಲಿಯ ಹುಡುಗನ ಎತ್ತರ ४॥ ಫೂಟು; ತೂಕ ೩ ಮಣ; ತೋಳಿನ ಗಾತ್ರ ೧ ಫೂಟು! ಇದೊಂದು ಭೀಮಾವತಾರವಾಗಿ ಸಂಪಾದಕರಿಗೆ ಕಂಡಿತು. ರಶಮೀರ್ ಎಂಬ ೯೨ ವರ್ಷದ ವೃದ್ಧ ಸ್ತ್ರೀ ವಿಷಯ ಒಂದು ಸಂಚಿಕೆಯಲ್ಲಿದೆ. ಆಕೆಗೆ ೧೮ ಜನ ಮಕ್ಕಳು. ೫೯ ಜನ ಮೊಮ್ಮಕ್ಕಳು ಮತ್ತು ೮೧ ಜನ ಮರಿಮಕ್ಕಳು! ಸಂಪಾದಕರಿಗೆ ಇದು ಕೌತುಕದ ವಿಷಯವಾದರೂ ಇವಳಂಥ ದಂಪತಿಗಳು ಇಷ್ಟೊಂದು ಮಕ್ಕಳು-ಮರಿಗಳನ್ನು ಹಡೆಯದಿದ್ದರೆ ನಮಗೆ ಕುಟುಂಬಯೋಜನೆಯ ಪ್ರಸಂಗ ಬರುತ್ತಿದ್ದಲ್ಲ ಎಂದೆನಿಸುವುದು.

ಆ ಕಾಲದ ಪತ್ರಿಕೆಗಳ ಪ್ರಸಾರ ಕಡಿಮೆಯದು ಎಂದಿದ್ದರೂ, ಚಂದ್ರೋದಯದ್ದು ಅತೀವ ಕಡಿಮೆ ಇದ್ದಿತು – ೨೦೦ ಪ್ರತಿಗಳು. ಪತ್ರಿಕೆಯ ೧೫ನೆಯ ವರ್ಷದ ವರ್ಧಂತಿಯಲ್ಲಿ ಸಂಪಾದಕ ಹುಚ್ಚಯ್ಯನವರು ಈ ರೀತಿ ಬರೆದರು:

> 'ನಮ್ಮ ಇಲಾಖೆಯಲ್ಲಿರುವ ಬಹುತೇಕ ಎಲ್ಲ ಕನ್ನಡ ಪತ್ರಿಕೆಗಳು ಸರ್ವಸಾಧಾರಣವಾಗಿ ಮರಾಠೀ ಪತ್ರಿಕೆಗಳ ಎಂಜಲವನ್ನೇ ನೆಕ್ಕಿ 'ಈ ಎಂಜಲವು ಅಮೃತಕ್ಕಿಂತ ಹೆಚ್ಚು ರುಚಿಕರವಾಗಿದೆ' ಎಂದು ಹರ್ಷಘೋಷ ಮಾಡುವುದನ್ನು ನಮ್ಮ ಕನ್ನಡಿಗರು ಅನೇಕ ಸಾರೆ ಅವಲೋಕಿಸಿರಬಹುದು... ನಾವು ಹಣಿಕೊಯ್ದು ಮಣಿ ಮಾಡಿದರೂ ಚಂದಾದಾರರ ಸಂಖ್ಯೆ ಸಾಕಷ್ಟು ಹೆಚ್ಚಾಗಲಿಲ್ಲವೆಂದೂ ನೋಡಿ ನಮಗೆ ಕಿಂಚಿತ್ತು ವ್ಯಸನವಾಗುತ್ತದೆ. ಕನ್ನಡಿಗರು ಈ ಪ್ರಕಾರ ನಮ್ಮ ಮೇಲೆ ಯಾಕೆ ಅವಕೃಪಾ ದೃಷ್ಟಿಯಿಂದ ನೋಡುತ್ತಾರೆ – ಎಂಬುವದು ನಮಗೆ ತಿಳಿಯವಲ್ಲದು.... ಇನ್ನು ಮುಂದಾದರೂ ನಮ್ಮ ಕನ್ನಡಿಗರ ಮೈಯಲ್ಲಿ ಅಭಿಮಾನದ ಗಾಳಿಯು ಸೇರಿ... ಅವರು ನಮಗೆ ಸಹಾಯ ಮಾಡಬೇಕೆಂದು ವಿನಯಾನ್ವಿತ ಸೂಚನೆ ಮಾಡುತ್ತೇವೆ... ಮುಂದಿನ ವರ್ಷದೊಳಗಾಗಿ ನಮ್ಮ ಎಲ್ಲ ವಾಚಕರ ಸಂತೋಷಕ್ಕೆ ಪಾತ್ರವಾಗುವಂಥ ಸುಧಾರಣೆಗಳನ್ನು ಮಾಡುವ ವಚನವೀಯುತ್ತವೆ.'

ಆದರೂ ಅಂದಿನ ಕನ್ನಡ ವಾಚಕರಲ್ಲಿ ಅಭಿಮಾನದ ಗಾಳಿಯು ಒಳ ಸೇರಿದಂತೆ ಕಾಣಲಿಲ್ಲ! ಐದು ವರ್ಷಗಳ ಅನಂತರ (೧೮೯೬) ಸಂಪಾದಕರು ಹೀಗೆ ಕಟುವಾಗಿ ಬರೆದರು:

'ಪತ್ರಿಕೆ ಬೇಡಾದವರು ಆದಷ್ಟು ಎಲ್ಲಾ ವರ್ಗಣಿ ಹಣ ಪೇಡ್ ಮಾಡದ ಹೊರತು ನಿಲ್ಲಿಸಲ್ಪಡಲಾರದು. ಪತ್ರಿಕೆಯನ್ನು ಹಾಗೇ ತಿರುಗಿ ಕಳಿಸಿದರೆ ಅದನ್ನು ಸ್ವೀಕರಿಸಲಾರೆವು. *

ಇದಾಗಿ ಮತ್ತೆ ಐದು ವರ್ಷ ಕಳೆದ ಮೇಲೆ, ೧೯೦೨ ರಿಂದ R. N. P.ಯಲ್ಲಿ ಅದರ ಉಲ್ಲೇಖವಿಲ್ಲ. ಪತ್ರಿಕೆಯ ಆರ್ಥಿಕ ಮುಗ್ಗಟ್ಟಿನಿಂದಾಗಿಯೋ, ಹುಚ್ಚಯ್ಯನವರ ವೃದ್ಧಾಪ್ಯದಿಂದಾಗಿಯೋ ನಿಂತಿರಬೇಕು. ಅವರು ತೀರಿಕೊಂಡದ್ದು ೧೯೨೦ರ ಸುಮಾರಿಗೆ.

ಹುಚ್ಚಯ್ಯನವರು ಹೊರಡಿಸುತ್ತಿದ್ದ ಚಂದ್ರೋದಯ ವಾರಪತ್ರಿಕೆಯ ಸಾಧನೆಗಳು ಹಲವಾರು. ಮೊದಲಲ್ಲಿ, ಸಮಗ್ರ ಮುಂಬಯಿ ಕರ್ನಾಟಕದಲ್ಲಿ ಯಾವದೊಂದು ಸುದ್ದಿಪತ್ರಿಕೆ ಇದ್ದಿರದ ಕಾಲದಲ್ಲಿ ಅದು ಜನ್ಮ ತಾಳಿತು. ಅದಕ್ಕೆ ಧಾರವಾಡದಲ್ಲಿಯೇ ಮರಾಠೀ ಪತ್ರಿಕೆಗಳ ಪೈಪೋಟಿ ಬಲವಾಗಿದ್ದರೂ, ಚಂದ್ರೋದಯವೊಂದೇ ಕನ್ನಡತ್ವದ ಧ್ವಜವನ್ನು ಎತ್ತಿ ಹಿಡಿಯಿತು. ೧೫೦ – ೨೦೦ ಜನ ಮಾತ್ರವೇ ಚಂದಾದಾರರ ಆಸರೆಯಿಂದ ಪತ್ರಿಕೆಯು ಕಾಲು ಶತಮಾನದವರೆಗೆ (೧೮೭೬–೧೯೦೧) ಅವ್ಯಾಹತವಾಗಿ ಬಾಳಿದ್ದುದಕ್ಕೆ ಹುಚ್ಚಯ್ಯನವರಲ್ಲಿದ್ದ ಕನ್ನಡತ್ವದ ಛಲವೊಂದೇ ಕಾರಣವೆನ್ನಬಹುದು. ಜಾಹೀರಾತು ಹಾಗೂ ಬಿಡಿ ಸುದ್ದಿಗಳನ್ನು ಬಿಟ್ಟರೆ, ಅದರ ಆದ್ಯಂತ ಬರವಣಿಗೆಯು ಅವರದೇ ಆಗಿದ್ದುದರಿಂದ ಹುಚ್ಚಯ್ಯ ವಿಭೂತಿಮಠರನ್ನು ತತ್ಕಾಲೀನ ಗಣ್ಯ ಲೇಖಕರಲ್ಲಿ ಒಬ್ಬರೆಂದು ಗಣಿಸಬೇಕು.* ಜೊತೆಗೆ ರಾಷ್ಟ್ರೀಯತ್ವವನ್ನೂ, ಸ್ವತಂತ್ರ ವಿಚಾರ ಸರಣಿಯನ್ನೂ ಆತ್ಮಸಾತ್ ಮಾಡಿಕೊಂಡದ್ದರಿಂದ ಅವರನ್ನು ನವೋದಯ ಸಾಹಿತ್ಯದ ನಿರ್ಮಾಪಕರಲ್ಲಿ ಒಬ್ಬರೆಂದೂ ಪರಿಗಣಿಸತಕ್ಕುದು.

ಎಲ್ಲಕ್ಕಿಂತ ಹೆಚ್ಚಿನ ಅವರ ಸಾಧನೆ ಎಂದರೆ, ತಮ್ಮ ಏಕಮಾತ್ರ ಪುತ್ರ ಗದಿಗೆಯ್ಯನವರಿಗೆ ಮುದ್ರಣ, ಗ್ರಂಥೋದ್ಯಮ ಹಾಗೂ ಪತ್ರಿಕಾ ಸಂಚಾಲನದ ಬಳುವಳಿಯನ್ನು ಧಾರೆಯೆರೆದದ್ದು. ಗದಿಗೆಯ್ಯನವರು ಅವು ಮೂರನ್ನೂ ತಂದೆಗಿಂತ ಮಿಗಿಲಾಗಿ ಮುಂದುವರಿಸಿಕೊಂಡು ಹೋದ ವಿಷಯ ಸರ್ವಶ್ರುತ. ಪ್ರಕೃತ, ಚಂದ್ರೋದಯಕರ್ತರೆಂದು ಗದಿಗೆಯ್ಯನವರ ಕಾರ್ಯವನ್ನು ಪರಿಶೀಲಿಸುವ.

೧೯೦೨ ರಿಂದ ೧೯೦೭ರವರೆಗೆ ಪತ್ರಿಕೆ ಸ್ಥಗಿತವಾಗಿದ್ದಿತು. ೧೯೦೭ರಲ್ಲಿ 'ಕರ್ನಾಟಕ ಪತ್ರ' ದೊಡನೆ ಸಮಾವೇಶಗೊಂಡು ಹೊರಡತೊಡಗಿತು. ಈ ಜಂಟಿಪತ್ರಿಕೆಯ ಸಂಚಿಕೆಗಳು ಸದ್ಯಕ್ಕೆ ಅಲಭ್ಯ. ಕರ್ನಾಟಕ ಪತ್ರವನ್ನು ಹೊರಡಿಸುತ್ತಿದ್ದವರ ಹೆಸರು – ಮಲ್ಲಪ್ಪ ಗುರಪ್ಪ ಶಿರಹಟ್ಟಿ. ಚಂದ್ರೋದಯವು ಜೊತೆಗೂಡಿದಾಗ, ಅದಕ್ಕೆ ಮಾಧವ ಗೋಪಾಲ ಟೋಣಪಿಯವರೂ, ಕೆಲ ವರ್ಷದ ಮೇಲೆ ಕೆ.ಬಿ. ಅಂಕಲಗಿಯವರೂ ಸಂಪಾದಕ / ಪ್ರಕಾಶಕರೆಂದು R.N.P. ತಿಳಿಸುತ್ತದೆ. ಈ ಜೊತೆ ಪತ್ರಿಕೆಯಲ್ಲಿ, ಮರಾಠೀ ಮತ್ತು ಇಂಗ್ಲಿಶ್ ಭಾಷೆಯ ಲೇಖನಗಳೂ ಇದ್ದುವು. ಸುರುವಿಗೆ ಅದರ ಮುದ್ರಿತ ಪ್ರತಿಗಳ ಸಂಖ್ಯೆ ೨೫೦ ಇದ್ದದ್ದು ಎರಡು ವರ್ಷಗಳಲ್ಲಿ, ಅಂದರೆ ೧೯೦೯ರಲ್ಲಿ ೬೦೦ ರ ವರೆಗೂ ಏರಿತು. ಆದರೆ ೧೯೧೨ರಲ್ಲಿ ಈ ಜಂಟಿ ಪತ್ರಿಕೆ ಸ್ಥಗಿತಗೊಂಡಂತೆ ತೋರುತ್ತದೆ. ಏಕೆಂದರೆ ಆ ವರ್ಷದ R.N.P. ಯಲ್ಲಿ ಅದರ ಉಲ್ಲೇಖವಿಲ್ಲ.

ಚಂದ್ರೋದಯದ ಪುನರುದಯವಾದದ್ದು ೧೯೧೩ರಲ್ಲಿ – ಮಾಸಪತ್ರಿಕೆಯಾಗಿ! ಆಗ ಜಂಟಿ ಪತ್ರಿಕೆಯಾಗಿ. ಜೊತೆಗಿದ್ದ ಪತ್ರಿಕೆಯ ಹೆಸರು 'ವಾಗ್ದೇವಿ'. ಇದೂ ಹೊನ್ನಾಪುರಮಠ ಮನೆತನದವರದ್ದೇ ಪತ್ರಿಕೆ – ಗ್ರಂಥಮಾಲೆಯ ಸ್ವರೂಪದ್ದು. ಈ ವಾಗ್ದೇವಿ / ಚಂದ್ರೋದಯ ಮಾಸ ಪತ್ರಿಕೆಯು ಡೆಮಿ ೧ /೮ ಆಕಾರದಲ್ಲಿ ೩೨ ಪುಟಗಳದ್ದಾಗಿ ಹೊರಬರಲಾರಂಭಿಸಿತು. ಗಮನಿಸಬೇಕಾದ ಸಂಗತಿ ಎಂದರೆ, ಅದರ ಏರುತ್ತ ಸಾಗಿದ್ದ ಪ್ರಸಾರ. ೧೯೧೭ರಲ್ಲಿ ೨೦೦ ಇದ್ದದ್ದು ೧೯೧೮ರ ಸುಮಾರಿಗೆ ೬೦೦ಕ್ಕೂ, ೧೯೨೧ರಲ್ಲಿ ೮೦೦ ಕ್ಕೂ ಏರಿತು – R.N.P. ಪ್ರಕಾರ. ಪ್ರಾಯಶಃ ಅದರ ಕಾರಣವೆಂದರೆ ಪುಸ್ತಕಗಳನ್ನು ಅವಳಿಯಾಗಿ ಹೊರತರುತ್ತಿದ್ದುದು, ಮತ್ತು ಚಂದಾ ಹಣವನ್ನು ೨ ರೂ.ಗಿಂತಲೂ ಕಡಿಮೆ ಇರಿಸಿದ್ದುದು. ಜೊತೆಗೆ ಉತ್ಸಾಹೀ ತರುಣ ಗದಿಗೆಯ್ಯನವರ 'ಖಟಪಿಟ'ಯನ್ನೂ ಲೆಕ್ಕಕ್ಕೆ ಹಿಡಿಯಬೇಕು!

ಹೇಮಾ ದೊರಕಿಸಿದ ಎರಡು ಸಂಚಿಕೆಗಳ ಮೇಲಿಂದ (೧೯೧೭, ಆಗಸ್ಟ್, ಸೆಪ್ಟೆಂಬರ್) ಅದರ ಸ್ಥೂಲ ಕಲ್ಪನೆ ತಂದುಕೊಳ್ಳುವುದು ಸಾಧ್ಯ. ಅದು ಮಾಸಿಕವಾದ್ದರಿಂದ, ವಾರ್ತಾ ಹಾಗೂ ಬಿಡಿ ವಿಷಯಗಳು, ಜಾಹೀರಾತುಗಳು ನಾಲ್ಕಾರು ಪುಟಗಳಿಗೆ ಸೀಮಿತವಾಗಿದ್ದು ಉಳಿದುದೆಲ್ಲ ಲೇಖನಗಳು ಧಾರಾವಾಹೀ ಗ್ರಂಥಗಳಾಗಿವೆ. (ಉದಾ.ಗೆ ಗದಿಗೆಯ್ಯನವರ 'ಅದ್ಭುತ ಪ್ರೇಮ' ಕಾದಂಬರಿ ಮತ್ತು 'ನೀತಿಮಂಜರಿ'ಯಲ್ಲಿ ಬಂದ ಚರಿತ್ರ ಕಥನಗಳು.)

ಗದಿಗೆಯ್ಯನವರು ಬರೆಯುತ್ತಿದ್ದ ಬಿಡಿ ವಿಷಯಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಕೊಡಬೇಕೆನಿಸುವುದು. ಮೈಸೂರಿನ ಕೆಲವು ಉದ್ದಿಮೆದಾರರನ್ನು ಜಪಾನಕ್ಕೆ ಅನುಭವ ಪಡೆಯಲು ಕಳಿಸುವ ಎತ್ತುಗಡೆ ಇದ್ದಾಗ, ಸಮುದ್ರ ಪರ್ಯಟನ ಮಾಡಲು ಕೆಲವರು ಹಿಂಜರಿಯುವುದು ಕಂಡಿತು. ಆಗ ಗದಿಗೆಯ್ಯನವರು ಈ ರೀತಿ ಬರೆದರು:

* ಚಂದಾಹಣವನ್ನು ಪಡೆಯುವುದಕ್ಕೆ ಇಂದಿನವರು ಈ ವಿಧಾನವನ್ನು ಅನುಸರಿಸಲು ಸಾಧ್ಯವೆ? 'ಕಳಿಸಿದರೆ ಕಳಿಸಲೊಲ್ಲರು' ಎಂದು ನಿರ್ಭಿಡೆಯಿಂದ ಅಲಕ್ಷ್ಯ ಮಾಡುವ ಓದುಗರೇ ಕಂಡುಬಂದಾರು.

* ಅವರು ರಚಿಸಿದ ಗ್ರಂಥಗಳು ದೊರೆತಿಲ್ಲ – ಇದುವರೆಗೆ.

'ಈ ಪ್ರಸಂಗದಲ್ಲಿ ಮೈಸೂರ ಸರಕಾರದವರು ಬ್ರಾಹ್ಮಣ, ಲಿಂಗಾಯತ, ವೈಶ್ಯ ಮೊದಲಾದ ಧರ್ಮಗುರುಗಳ ಕಡೆಯಿಂದ ಸಮುದ್ರ ಪರ್ಯಟನಕ್ಕೆ ಅನುಕೂಲವಾದ ಆಜ್ಞೆಯನ್ನು ಕೊಡಿಸಿದಲ್ಲಿ, ಒಂದೇ ಪ್ರಸಂಗದಲ್ಲಿ ಎರಡು ಮಹತ್ಕಾರ್ಯಗಳನ್ನು ಸಾಧಿಸಿಕೊಟ್ಟ ಶ್ರೇಯಸ್ಸು ಅವರ ಪಾಲಿಗೆ ಬರುವದು. ಜಪಾನಕ್ಕೆ ಹೋಗಲಿಕ್ಕೆ ಆರಿಸುವುದನ್ನು ಸರಕಾರದವರು ತಮ್ಮ ಕೈಯಲ್ಲಿಟ್ಟುಕೊಂಡರೂ ಒತ್ತಾಯದಿಂದ ಬೇರೆ ಕಳಿಸುವದಿಲ್ಲವಷ್ಟೆ. ಅಂದ ಬಳಿಕ ನಾವು ಸೂಚಿಸಿದ ಪ್ರಕಾರ ಶ್ರೀ ಉತ್ತರಾದಿಮಠ, ಶ್ರೀ ಶೃಂಗೇರಿಮಠ, ಮತ್ತು ಚಿತ್ರಕಲ್ಲದುರ್ಗ ಮಠ – ಈ ಮೂರೂ ಮಠಗಳಿಗೆ ಮೈಸೂರ ಸರಕಾರದವರು ಬರೆದಲ್ಲಿ ಮೂರೂ ಮಠದಿಂದ ಸಮುದ್ರ ಪರ್ಯಟನಕ್ಕೆ ಅಪ್ಪಣೆಯು ದೊರಕಿದಂತಾಗುವುದು. ಇದನ್ನು ಕುರಿತು ಮೈಸೂರ ಸರಕಾರದ ಚತುರ ಮಂತ್ರಿಗಳು ವಿಚಾರ ಮಾಡುವರೋ?'

– ಈ ನಿಲುಮೆಗೆ ದೂರದ ಕಾಶಿಯಲ್ಲಿರುವ ಜಂಗಮವಾಡಿ ಮಠದಿಂದ ಬೇರೊಂದು ರೀತಿಯ ತಕರಾರು ಬಂತು! ವೀರಶೈವರ ಮಟ್ಟಿಗೆ ಚಿತ್ರಕಲ್ಲದುರ್ಗ ಮಠದ ಆದ್ಯತೆ ಏಕೆ? ವೀರಶೈವ ಸಮಾಜದ ಧರ್ಮಗುರುಗಳು ಪಂಚಪೀಠಾಚಾರ್ಯರ ಹೊರತು ಅನ್ಯರಾಗುವುದಿಲ್ಲ – ಎಂದು! ಅದಕ್ಕೆ ಗದಿಗೆಯ್ಯನವರ ಚುಟುಕಿನ ಉತ್ತರ ಈ ರೀತಿಯದು:

> 'ನಾವು ಆ ಲೇಖವನ್ನು ಬರೆದಾಗ್ಗೆ ಪಂಚಸಿಂಹಾಸನಾಧಿಪತಿಗಳ ಮತ್ತು ಚಿತ್ರಕಲ್ಲ ದುರ್ಗಮಠದವರ ಹಕ್ಕುಗಳ ಭೇದವನ್ನು ಕುರಿತು ವಿಚಾರ ಮಾಡಲಿಲ್ಲ. ಈಗಾದರೂ ಆ ಅಪೇಕ್ಷೆ ಇಲ್ಲ. ಜಾತಿಯಲ್ಲಿ ಈಗಲೇ ನೂರಾರು ಪ್ರಕಾರದ ಜಗಳಗಳಿದ್ದು, ಆ ಜಗಳಗಳನ್ನು ಮತ್ತಿಷ್ಟು ಹೆಚ್ಚಿಸುವದು ಬುದ್ಧಿವಂತಿಕೆಯೆಂದು ನಮಗೆ ಕಾಣುವದಿಲ್ಲ.'

ಜಾತಿಯ ಮಾತು ಬಂತೆಂದರೆ ನಮ್ಮಲ್ಲಿ ಅನೇಕರು ವೀರವೈಷ್ಣವ, ವೀರಲಿಂಗವಂತ ಇತ್ಯಾದಿ ಅವತಾರ ತಾಳಿ ಖಡ್ಗವನ್ನು ಝಳಪಿಸುತ್ತಾರೆ. ಗದಿಗೆಯ್ಯನವರು ಆ ಪ್ರವೃತ್ತಿಗೆ ಎಳಸದೇ ಉದಾರ ಮತವಾದಿಗಳಿದ್ದರೆನ್ನುವುದಕ್ಕೆ ಇದೊಂದಲ್ಲದೆ, ಇನ್ನೂ ಹಲವು ನಿದರ್ಶನಗಳು ಅವರ ಬರಹದಲ್ಲಿ ಕಾಣಿಸಿಕೊಂಡಿವೆ.

'**ಚಂದ್ರೋದಯ**'ವು ಮಾಸಪತ್ರಿಕೆಯಾಗಿ ೧೯೨೧ರ ವರೆಗಂತೂ ಸಾಗಿ ಬಂದುದರ ಬಗ್ಗೆ R.N.P. ಸಾಕ್ಷಿ ನುಡಿಯುತ್ತಿದೆ. ಅನಂತರದ ಅದರ ಚರಿತ್ರೆ ಮತ್ತೆ ಕಣ್ಮರೆಯಾಗಿದೆ. ◆

✍ ಶ್ರೀ .ಹಾ.

## ೧೩. ನೂರು ವರ್ಷ ಕಂಡ 'ಸಾಧ್ವಿ'

✍ ಶ್ರೀ ಗಣಪತಿ, ಶಿವಮೊಗ್ಗ

ನಾವು ಮೈಸೂರಲ್ಲಿ ಇದ್ದುದು ಸುಬ್ಬಯ್ಯ ರಸ್ತೆಯಲ್ಲಿ. ನಾವು ಎಂದರೆ ಒಂದಷ್ಟು ಜನ ಹುಡುಗರು. ಅಲ್ಲಿಯೇ ಒಂದು ರೂಮು ಮಾಡಿಕೊಂಡು ಇದ್ದೆವು. ನಮ್ಮ ರೂಮಿಗೆ ಎದುರಾಗಿ ಹಳೇ ಕಾಲದ ಒಂದು ಮನೆ. ಅಲ್ಲಿಯೇ 'ಸಾಧ್ವಿ' ಪತ್ರಿಕೆಯ ಆಫೀಸು.

ನಮಗೆ ಸಾಮಾನ್ಯವಾಗಿ ಮೂರು ಗಂಟೆಯೊಳಗೆ ಕ್ಲಾಸುಗಳು ಮುಗಿಯುತ್ತಿದ್ದವು. ಬಂದು ರೂಮಲ್ಲಿ ಮಲಗಿಕೊಂಡರೆ, ಎದುರಿನ ಆಫೀಸಲ್ಲಿ ಸಿಲಿಂಡರ್ ಪ್ರಿಂಟಿಂಗ್ ಮೆಷೀನು ಆರಂಭವಾಗಿ ಭಾರೀ ಸದ್ದು ಮಾಡುತ್ತಾ ತೊಂದರೆ ಮಾಡುತ್ತಿತ್ತು. ಆಗೆಲ್ಲ ನಾವು ಪತ್ರಿಕೆಯನ್ನು, ಅದರ ಸಂಪಾದಕರಾದ ಅಗರಂ ರಂಗಯ್ಯನವರನ್ನು ಬೈಯುತ್ತಾ ಗೇಲಿ ಮಾಡುತ್ತಾ ಸಮಾಧಾನ ಪಟ್ಟುಕೊಳ್ಳುತ್ತಾ ಇದ್ದೆವು. ಸಂಜೆಯ ನಮ್ಮ ನಿದ್ದೆ ಮುಗಿದು, ಎದ್ದು ಹೊರಗೆ ಹೋಗಲು ಅಣಿಯಾಗುವಾಗ ಟ್ಯಾಬ್ಲಾಯ್ಡ್ ಆಕಾರದ ಎರಡು ಪುಟದ ಪತ್ರಿಕೆ ನಾವಿದ್ದ ಮನೆಯ ಮುಂದಿನ ಬಾಗಿಲ ಕಿಂಡಿಯಿಂದ ಒಳಗೆ ಬಂದು ಬಿದ್ದಿರುತ್ತಿತ್ತು. ಮನೆಯ ಒಡತಿ, ತೀರಾ ವಯಸ್ಸಾದ ಹೆಂಗಸು ಆ ಪತ್ರಿಕೆಯನ್ನು ತರಿಸುತ್ತಾ ಇದ್ದರು. ನಾವು ಪತ್ರಿಕೆಯ ಮೇಲೆ ಕಣ್ಣಾಡಿಸಿ, ಅವರನ್ನು ಕರೆದು ಪತ್ರಿಕೆ ಕೈಗಿಟ್ಟರೆ 'ಓ! ಪೇಪರ್ ಬಂತಾ?' ಎಂದು ತೆಗೆದುಕೊಂಡು ಎಲ್ಲಿಯೋ ಇಟ್ಟಿರುತ್ತಿದ್ದ ಕನ್ನಡಕ ಹುಡುಕಿ, ಬಾಗಿಲು ತೆರೆದುಕೊಂಡು ಆ ಬೆಳಕಿನಲ್ಲಿ ಓದಲು ಕೂರುತ್ತಾ ಇದ್ದರು. ನಾವು ಐದಾರು ನಿಮಿಷದಲ್ಲಿ ಓದಿ ಮುಗಿಸಬಹುದಾಗಿದ್ದ ಪತ್ರಿಕೆಯನ್ನು ಅವರು ಗಂಟೆಗಟ್ಟಲೇ ಹಿಡಿದುಕೊಂಡು ಓದುತ್ತಾ ಇದ್ದುದು ಆಶ್ಚರ್ಯ ಎನಿಸುತ್ತಿತ್ತು. ಅವರು ಮಂಡ್ಯ ಕಡೆಯ ಬ್ರಾಹ್ಮಣ ಕುಟುಂಬದ ಹೆಂಗಸು. ಗಂಡ ತುಂಬಾ ಮುಂಚೆ ತೀರಿಕೊಂಡಿದ್ದರು. ಸುಬ್ಬಯ್ಯ ರಸ್ತೆಯ ಮನೆಯ ಮುಂದಿನ ರೂಮು, ಹಿಂದಿನ ಎರಡು ಮನೆಗಳಿಂದ ಹೇಗೋ ಅವರ ಜೀವನ ನಡೆಯುತ್ತಿತ್ತು.

"ಮೊದಲು ಇದು ವಾರಕ್ಕೆ ಒಂದು ಸಲ ಬರ್‍ತಾ ಇತ್ತು. ಮನೆಯವರು ಇದನ್ನು ತರಿಸಿಕೊಂಡು ಓದಿ ನನಗೂ ಹೇಳ್ತಾ ಇದ್ದರು. ಆಮೇಲೆ ಓದೋದು ಕಲಿತುಕೋ ಅಂತ ಬಲವಂತ. ಮನೆ ಕೆಲಸ ಬಿಟ್ಟು ಅಕ್ಷರ ಕಲೀತಾ ಕೂತರೆ ಅದೆಲ್ಲ ಮಾಡೋರು ಯಾರು? ಆದರೂ ಅವರ ಬಲವಂತಕ್ಕೆ ಅಕ್ಷರ ಕಲಿತು ರೂಢಿಸಿಕೊಂಡು ಓದ್ತಾ ಇದ್ದೆ. ಅದೇ ಈಗಲೂ ಅಭ್ಯಾಸ. ಬೇಗ ಓದೋದು ಕಷ್ಟ. ಕಣ್ಣು ಬೇರೆ ಸರಿಯಾಗಿ ಕಾಣಿಸೋದಿಲ್ಲ. ಅವತ್ತಿನ ಪೇಪರು ಓದದೇ ಹೋದರೆ ಏನೋ ಖಾಲಿ ಆದ ಹಾಗೆ ಅನ್ನಿಸುತ್ತೆ. ಮೊದಲಲ್ಲಿ ಇದನ್ನ ಮೂರುಕಾಸಿಗೆ ಮಾರ್‍ತಾ ಇದ್ದರು. ಅದೇಕೋ ಇದನ್ನು ಜನ ಮೂರುಕಾಸಿನ ಪೇಪರು ಅನ್ನೋದು. ಆಗ ಅದೇ ದೊಡ್ಡದು ಅಲ್ಲವೇ?" ಎಂದು ಹೇಳುತ್ತಾ ಇದ್ದರು. ಇತ್ತೀಚೆಗೆ ಮೈಸೂರಿಗೆ ಹೋಗಿದ್ದಾಗ ಮತ್ತೆ 'ಸಾಧ್ವಿ' ಕಣ್ಣಿಗೆ ಬಿತ್ತು. ಮೊದಲಿನ ಸಿಲಿಂಡರ್ ಪ್ರಿಂಟಿಂಗ್‌ಗೆ ಬದಲಾಗಿ ಈಗ ಅಫ್‌ಸೆಟ್‌ನಲ್ಲಿ ಮುದ್ರಣವಾಗುತ್ತಾ ಇದ್ದುದು ತಿಳಿಯಿತು. ನಾವು ಕಾಲೇಜು ಓದುತ್ತಿದ್ದ ಕಾಲದಲ್ಲಿ ಅಷ್ಟಾಗಿ ಮೈಸೂರಲ್ಲಿ ಪೇಪರುಗಳು ಇರಲಿಲ್ಲ. ಸಾಧ್ವಿಯನ್ನು ಆರಂಭಿಸಿದ 'ತಾತಯ್ಯ' ಎಂದೇ ಚಿರಪರಿಚಿತರಾಗಿದ್ದ ವೆಂಕಟಕೃಷ್ಣಯ್ಯ ಅವರು ಆರಂಭಿಸಿದ ಮೈಸೂರು ಪತ್ರಿಕೆ ಲ್ಯಾನ್ಸ್ ಡೌನ್ ಬಿಲ್ಡಿಂಗ್‌ನಿಂದ ಪ್ರಕಟವಾಗುತ್ತಿತ್ತು. ಆದರೆ ಬಸ್‌ಸ್ಟ್ಯಾಂಡ್ ಮುಂತಾದೆಡೆ ಹುಡುಗರು ಸಂಜೆ ಆದರೆ 'ಸಾಧ್ವಿ' ಪತ್ರಿಕೆಯನ್ನೇ ಹೆಚ್ಚಾಗಿ ಕೂಗಿ ಮಾರುತ್ತಾ ಇದ್ದರು.

ಮೈಸೂರಿನ ಹಳೆಯ ಭಾಗವಾದ ಅಗ್ರಹಾರ. ಚಿಕ್ಕ ಮಾರ್ಕೆಟ್ ಪ್ರದೇಶದಲ್ಲೆಲ್ಲ ಆ ಪತ್ರಿಕೆಯನ್ನು ಮನೆಗೇ ತರಿಸಿಕೊಳ್ಳುತ್ತಾ ಇದ್ದರು. ಆ ಪತ್ರಿಕೆ ಬರುವ ಹಾದಿಯನ್ನೇ ಕಾಯುತ್ತಾ ಇದ್ದ ವೃದ್ಧರೂ ಇದ್ದಿದ್ದನ್ನು ನಾವು ನೋಡಿದ್ದೇವೆ. 'ಸಾಧ್ವಿ' ಮೇಲುನೋಟಕ್ಕೆ ಸಣ್ಣದೊಂದು ಪತ್ರಿಕೆ ಆದರೂ ಅದು ಮೈಸೂರಿನ ಜನ ಜೀವನದ ಒಂದು ಭಾಗವಾಗಿತ್ತು. ತನ್ನ ಮಿತಿಯೊಳಗೆ, ಸ್ಪರ್ಧೆಯ ಯುಗದಲ್ಲಿಯೂ ಜನರ ವಿಶ್ವಾಸ ಮತ್ತು ಪ್ರೋತ್ಸಾಹವನ್ನೇ ನಂಬಿ ಅದು ಬದುಕುತ್ತಾ ಇದ್ದುದು ನಿಜ. ಒಂದು ಪತ್ರಿಕೆಯ ನಿಜವಾದ ಅಳಿವು, ಉಳಿವನ್ನು ಇಂಥ ಜನರ ವಿಶ್ವಾಸವೇ ನಿರ್ಧರಿಸುತ್ತದೆ ಎಂಬುದಕ್ಕೆ 'ಸಾಧ್ವಿ' ಇವತ್ತಿಗೂ ಜೀವಂತ ಉದಾಹರಣೆ. ೧೮೯೯ ರಲ್ಲಿ ವೆಂಕಟಕೃಷ್ಣಯ್ಯ ಅವರಿಂದ ಆರಂಭವಾದ 'ಸಾಧ್ವಿ' ಪತ್ರಿಕೆ ಮೈಸೂರು ಭಾಗದಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹುಮುಖ್ಯ ಪಾತ್ರ ವಹಿಸಿತ್ತು ಎಂಬುದನ್ನು ಮೈಸೂರಿನ ಹಳೆಯ ತಲೆಮಾರಿನ ಜನ ಈಗಲೂ ನೆನಪಿಸಿಕೊಳ್ಳುತ್ತಾರೆ.

'ರಾಜಾ ಪ್ರತ್ಯಕ್ಷ ದೇವತಾ' ಎಂಬ ನಂಬಿಕೆ ಇದ್ದ ಕಾಲಕ್ಕೆ ಹಳೇ ಮೈಸೂರಿನ ಜನರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು, ಜವಾಬ್ದಾರೀ ಸರ್ಕಾರದ ಮಹತ್ವವನ್ನು ಅರಿಯುವಂತೆ ಮಾಡಿದ್ದೇ 'ಸಾಧ್ವಿ'ಯ ಬಹುದೊಡ್ಡ ಸಾಧನೆ. ಆ ಕಾರಣಕ್ಕೇ 'ಸಾಧ್ವಿ' ಹಲವು ಬಾರಿ ಬ್ರಿಟಿಷ್ ಸರ್ಕಾರದಿಂದ ನಿಷೇಧಕ್ಕೆ ಒಳಗಾಗಬೇಕಾಯಿತು. ೧೮೯೯ರಲ್ಲಿ ಸಣ್ಣ ಮಟ್ಟದಲ್ಲಿ ಆರಂಭವಾದ ಪತ್ರಿಕೆ ೧೯೦೮ರಲ್ಲಿಯೇ ಸರ್ಕಾರದ ಪತ್ರಿಕಾ ಕಾಯ್ದೆ ಪ್ರತಿಭಟಿಸಿ ನಿಷೇಧಕ್ಕೆ ಒಳಗಾದರೂ ಮೂರು ವರ್ಷ ಮತ್ತೆ ಪ್ರಕಟ ಆಗಲಾರಂಭಿಸಿತು.

೧೯೨೮ರಲ್ಲಿ ಬೆಂಗಳೂರಿನ ಸುಲ್ತಾನ್ ಪೇಟೆಯ ಗಣಪತಿ ಗಲಾಟೆಯ ವರದಿಗಳನ್ನು ಪತ್ರಿಕೆ ಪ್ರಕಟಿಸಿತು ಎಂಬ ಕಾರಣಕ್ಕೆ ನಿಷೇಧಿಸಿದ ಮೇಲೆ ಮತ್ತೆ ಅದು ಪ್ರಕಟಣೆಗೆ ಸಜ್ಜಾಗಲು ಎಂಟು ವರ್ಷಗಳ ವರೆಗೆ ಕಾಯಬೇಕಾಯಿತು. ಆಗ ಅದನ್ನು ಪುನರಾರಂಭಿಸಿದವರು ಅಗರಂ ರಂಗಯ್ಯ. ಇವರು ಕೂಡ ಮೂರು ವರ್ಷ ಜವಾಬ್ದಾರಿ ಸರ್ಕಾರ ಕುರಿತಂತೆ ಬರೆದ ಲೇಖನಗಳಿಂದಾಗಿ ಬ್ರಿಟಿಷರ ಕೆಂಗಣ್ಣಿಗೆ ಬಿದ್ದು ಬಂಧನಕ್ಕೆ ಒಳಗಾಗಬೇಕಾಯಿತು. ೧೯೩೯ ರಲ್ಲಿ ಅವರು ಬಂಧಿತರಾದ ಮೇಲೆ ಮತ್ತೆ ಪತ್ರಿಕೆಗೆ ಪ್ರಕಟಣೆಯ ಯೋಗ ಬಂದಿದ್ದು ೧೯೪೧ರಲ್ಲಿ. ಆಗ ಪುನರಾರಂಭದ ಜವಾಬ್ದಾರಿ ವಹಿಸಿಕೊಂಡವರು ಎಸ್. ಸುಬ್ರಹ್ಮಣ್ಯ. ಜೈಲಿನಿಂದ ಬಂದು ಮತ್ತೆ ರಂಗಯ್ಯ ಅವರು ಪತ್ರಿಕೆ ಜವಾಬ್ದಾರಿ ವಹಿಸಿಕೊಳ್ಳುವ ವರೆಗೂ ಈ ತಾತ್ಕಾಲಿಕ ವ್ಯವಸ್ಥೆ ಮುಂದುವರಿಯಿತು. ಆಮೇಲೆ ಅವರು ೧೯೯೧ರ ವರೆಗೂ ಪತ್ರಿಕೆಯನ್ನು ನಡೆಸಿಕೊಂಡು ಬಂದರು. ಇದೆಲ್ಲ ಗಮನಿಸುವಾಗ ಉತ್ತರ ಕರ್ನಾಟಕದಲ್ಲಿ 'ಕರ್ಮವೀರ' ಮತ್ತು 'ಸಂಯುಕ್ತ ಕರ್ನಾಟಕ' ಪತ್ರಿಕೆಗಳು ನಿರ್ವಹಿಸಿದ ಪಾತ್ರವನ್ನೇ ಮೈಸೂರಿನ ಈ ಪತ್ರಿಕೆಯೂ ನಡೆಸಿತು ಎಂಬುದು ಸ್ಪಷ್ಟ.

ಮೈಸೂರಂಥ ಊರಲ್ಲಿ ಒಂದು ಕನ್ನಡ ಪತ್ರಿಕೆ ಹಲವು ಅಡೆತಡೆಗಳನ್ನು ದಾಟಿ ನೂರು ವರ್ಷ ಕಂಡಿರುವುದೇ ಒಂದು ದೊಡ್ಡ ಸಾಧನೆ. ಆ ಸಾಧನೆಯ ಗರಿ 'ಸಾಧ್ವಿ' ಪತ್ರಿಕೆಯ ಮುಡಿಗೇರಿದೆ.

◆

# ೧೪. 'ದೇಶಾಭಿಮಾನಿ'ಯ ಮೊಕದ್ದಮೆ

ಶ್ರೀ ಆರ್. ರಾಮಕೃಷ್ಣನ್, ಬೆಂಗಳೂರು.

ಕ್ರಿ.ಶ. ೧೮೯೩-೯೪ ರಲ್ಲಿ 'ದೇಶಾಭಿಮಾನಿ' ವೃತ್ತಪತ್ರಿಕೆಯು ಪ್ರಾರಂಭವಾಗಿ ಬಹಳ ಬೇಗ ಸರಕಾರದ ಅವಕೃಪೆ ಹೊಂದಿ ನಿಂತುಹೋಯಿತು. ಆ ಕಾಲದ ಹೆಚ್ಚಿನ ಪತ್ರಿಕೆಗಳು, ಪ್ರಚಲಿತ ವರ್ತಮಾನಗಳನ್ನು ಸೌಮ್ಯವಾಗಿ ಕಾಣಿಸಿ, ರಾಜ್ಯದೊಳಗಿನ ಹಾಗೂ ಬ್ರಿಟಿಷ್ ಭಾರತದೊಳಗಿನ ಮುಖ್ಯ ವೃತ್ತಾಂತಗಳನ್ನು ಟೀಕಿಸುತ್ತಿದ್ದವು. 'ಕರ್ನಾಟಕ ಪ್ರಕಾಶಿಕೆ' ಮತ್ತು 'ವೃತ್ತಾಂತ ಬೋಧಿನಿ'ಯಂತಹ ವೃತ್ತಪತ್ರಿಕೆಗಳಲ್ಲಿ ಬರುತ್ತಿದ್ದ ಲೇಖನಗಳು, ವಿಶೇಷವಾಗಿ ಸರ್ ಕೆ. ಶೇಷಾದ್ರಿ ಅಯ್ಯರ್ ಅವರ ಆಡಳಿತ, ರಾಜನೀತಿತಂತ್ರ, ಯುಕ್ತಿ ಮತ್ತು ಆಲೋಚಿಸುವ, ವರ್ತಿಸುವ ರೀತಿಗಳ ಬಗ್ಗೆ ವಿಮರ್ಶಾತ್ಮಕವಾಗಿದ್ದರೂ, ಸರಕಾರದ ಕ್ರೋಧಕ್ಕೆ ಗುರಿಯಾಗುವಂತಹ ಕಟುವಾದ, ಅಶ್ಲೀಲವಾದ ಭಾಷೆಯಲ್ಲಿರದೆ, ಪ್ರೌಢ ಹಾಗೂ ಮೆರಗು ಭಾಷೆಯಲ್ಲಿರುತ್ತಿತ್ತು. ಆದರೆ ಸರಕಾರದ ಕ್ರೋಧಕ್ಕೆ ಗುರಿಯಾದ ಮೊದಲನೆಯ ಬಲಿಯೆಂದರೆ 'ದೇಶಾಭಿಮಾನಿ'. ವಿಶೇಷವಾಗಿ ಮೈಸೂರಿನ ರಾಜಕೀಯ ವ್ಯವಹಾರದ ಜೊತೆ, ಸರ್ ಕೆ. ಶೇಷಾದ್ರಿ ಅಯ್ಯರ್ ಅವರ ಅವಿವೇಕದ ಆಡಳಿತದಿಂದ ಸಾರ್ವಜನಿಕರಿಗಾಗುತ್ತಿದ್ದ ಕಷ್ಟನಷ್ಟಗಳು, ಅನ್ಯಾಯ, ಅಸಮಾಧಾನಗಳ ವಿಷಯವನ್ನೇ ಹೊಂದಿದ್ದ ಈ ವೃತ್ತಪತ್ರಿಕೆಯನ್ನು ಬಿ.ಸಿ. ಶ್ರೀನಿವಾಸ ಅಯ್ಯಂಗಾರರು ೧೮೯೩-೯೪ ರಲ್ಲಿ ಶುರು ಮಾಡಿದರು. ಅವರು ಅನಾವಶ್ಯಕವಾಗಿ, ಮಹಾರಾಜರು ಅಪನಿಂದೆಗೆ ಗುರಿಯಾಗುವಂತೆ ವಿಷಯವನ್ನು ಪ್ರಕಟಿಸುತ್ತಿದ್ದರು. ೧೮೯೪ರ ೫ನೇ ಫೆಬ್ರವರಿಯಿಂದ ೧೦ನೇ ಮಾರ್ಚ್ ಒಳಗೆ 'ದೇಶಾಭಿಮಾನಿ'ಯಲ್ಲಿ ಪ್ರಕಟವಾದ ನಾಲ್ಕು ಲೇಖನಗಳು ಸರಕಾರದ ಗಮನವನ್ನು ವಿಶೇಷವಾಗಿ ಸೆಳೆದುವು. ಇವುಗಳಲ್ಲಿ ಮೊದಲನೆಯ ಲೇಖನವು 'ಸಂಪಾದಕ' ಹಾಗೂ 'ಕರಾಳ'ರ ನಡುವೆ ಆದ ಸಂಭಾಷಣೆಯ ರೂಪದಲ್ಲಿತ್ತು. ಇದು ವಾಸ್ತವವಾಗಿ ಸರಕಾರವನ್ನು ಉದ್ದೇಶಿಸಿಯೇ ಇದ್ದಿತು. ಈ ಸಂಭಾಷಣೆಯ ಮುಖ್ಯ ಸಾರಾಂಶ, ಸರಕಾರದ ಘೋರ ಕೃತ್ಯಗಳಿಂದಾಗಿ ಜನರು ದಂಗೆ ಏಳಬಹುದೆಂದು ಸಂಪಾದಕನು ಹೇಳಿದರೆ, ಆ ಎಲ್ಲಾ ಪ್ರಯತ್ನಗಳನ್ನೂ ನಿಷ್ಕರುಣವಾಗಿ ಅಡಗಿಸಲಾಗುವುದೆಂದು ಕರಾಳನು ಉತ್ತರಿಸುವನು. ಆಳುವ ಚಾಮರಾಜ ಒಡೆಯರನ್ನು ಚಾಮಯ್ಯನೆಂದೂ, ಬ್ರಿಟಿಷ್ ಸರಕಾರವನ್ನು ದಾಯಾದಿ ಎಂದೂ ಸಂಬೋಧಿಸಲಾಗಿತ್ತು. ಎರಡನೆಯ ಲೇಖನವು, ಪರಕಾಲ ಮಠದ ಸ್ವಾಮಿಗಳು, ತಮ್ಮ ಪೂರ್ವಾಶ್ರಮದ ಹೆಂಡತಿಯೊಡನೆ ಸಂಬಂಧವನ್ನು ಮುಂದುವರೆಸಿದ್ದಾರೆಂದು ಸೂಚಿಸಿತ್ತು. ಮೂರನೆಯ ಲೇಖನವು, ಸ್ತ್ರೀ ವಿದ್ಯಾಭ್ಯಾಸದ ಕುರಿತು ಇದ್ದರೆ ನಾಲ್ಕನೆಯದರಲ್ಲಿ, ಸಂಪಾದಕನು ಮಹಾರಾಜರಿಗೆ ದೈವೀಕೋಪದ ಬೆದರಿಕೆಯನ್ನು ಹುಟ್ಟಿಸಲು ಪ್ರಯತ್ನ ಪಟ್ಟಂತಿದೆ. 'ಒಟ್ಟಿನ ಸಾರಾಂಶದಲ್ಲಿ, ಅಶ್ಲೀಲ, ರಾಜದ್ರೋಹ, ಬೈಗಳು ಮತ್ತು ಶಾಪಗಳು ಭಾಷೆಯಲ್ಲಿ ಸಮೃದ್ಧಿಯಾಗಿರುವುದಲ್ಲದೆ, ಮಹಾರಾಜರು ಹಾಗೂ ಗುರುಗಳು, ಈ ಮುದ್ರಣಾಲಯದ ಅಲ್ಪ ವ್ಯಕ್ತಿಗೆ ಪೂಜನೀಯವಾಗಿಲ್ಲದಿರುವುದೂ, ಭಾಷೆಯಲ್ಲಿ ವ್ಯಂಗ್ಯೋಕ್ತಿಗಳನ್ನು ಅಪಾರವಾಗಿ ಬಳಸಿರುವುದೂ ಸರಕಾರದ ಗಮನವನ್ನು ಸೆಳೆದಿತ್ತು.

ಈ ಆಕ್ಷೇಪಕರವಾದ ಲೇಖನಗಳ ಸಂಬಂಧವಾಗಿ ವಿವರಣೆ ನೀಡಲು, ೧೫ನೇ ಮಾರ್ಚ್, ೧೮೯೪ ರಂದು ದಿವಾನರ ಎದುರಿಗೆ ಹಾಜರಿರಬೇಕೆಂದು 'ದೇಶಾಭಿಮಾನಿ'ಯ ಸಂಪಾದಕನಿಗೆ ಆಜ್ಞೆಯಾಯಿತು. ಯಾವ ರೀತಿಯ ವಿವರಣೆ ಬೇಕೆಂಬುದನ್ನು ಲಿಖಿತ ರೂಪದಲ್ಲಿ ಕೊಡಬೇಕೆಂದು ಶ್ರೀನಿವಾಸ ಅಯ್ಯಂಗಾರರು ಆಗ ಕೇಳಿಕೊಂಡಿದ್ದಲ್ಲದೆ, ಬಾಯಿಮಾತಿಗಿಂತ ಲಿಖಿತರೂಪದಲ್ಲಿ ವಿವರಣೆಯನ್ನು ತಾನು ಚೆನ್ನಾಗಿ ಕೊಡಬಲ್ಲೆನೆಂದೂ ಸೇರಿಸಿದರು. ಇದಕ್ಕೆ ಉತ್ತರವಾಗಿ ದಿವಾನರಿಗೆ ಯಾವುದೇ ರೀತಿಯ ಪತ್ರವ್ಯವಹಾರ ಮಾಡುವ ಇಷ್ಟವಿಲ್ಲವೆಂದೂ, ಹೇಳಿದ ದಿನ ಹಾಜರಿರದಿದ್ದರೆ ಅಂತಿಮ ತೀರ್ಮಾನ ತೆಗೆದುಕೊಳ್ಳಲಾಗುವುದೆಂದೂ ಅವರಿಗೆ ತಿಳಿಸಲಾಯಿತು. ಸಂಪಾದಕರು ಈ ಆಜ್ಞೆಯನ್ನು ಉಲ್ಲಂಘಿಸಿದ ಪರಿಣಾಮವಾಗಿ, ಒಂದು ವರ್ಷದವರೆಗೂ 'ದೇಶಾಭಿಮಾನಿ'ಯ ಪ್ರಕಟಣೆಯನ್ನು ನಿಲ್ಲಿಸಲು ಸರಕಾರವು ಆಜ್ಞೆಯನ್ನು ಹೊರಡಿಸಿತು. ಹೇಳಿರುವಂತೆ ಶಿಕ್ಷೆಯನ್ನು ತಕ್ಷಣ ಜ್ಯಾರಿಗೆ ತರಬೇಕೆಂದು ಮೈಸೂರಿನ ಡೆಪ್ಯುಟಿ ಕಮಿಷನರಿಗೆ ಅಪ್ಪಣೆ ಮಾಡಲಾಯಿತು. ಮುದ್ರಣಾಲಯವನ್ನು ಜಪ್ತಿ ಮಾಡಲು ಮತ್ತು ಅದರ ಮಾಲೀಕರಿಗೆ, ಮುದ್ರಣಕಾರರಿಗೆ, ಸಂಪಾದಕರಿಗೆ ಮತ್ತು ಚಂದಾದಾರರಿಗೆ ವೃತ್ತಪತ್ರಿಕೆಯನ್ನು (ಒಂದು ವರ್ಷದವರೆಗೂ) ನಿಲ್ಲಿಸಿರುವಂತೆ ಸೂಚನಾಪತ್ರವನ್ನು ಕಳುಹಿಸಿಕೊಡಬೇಕೆಂದು ಡೆಪ್ಯುಟಿ ಕಮೀಷನರಿಗೆ ಬೇರೆಯಾಗಿಯೇ ಅಪ್ಪಣೆ ಮಾಡಲಾಯಿತು.

ಕಾರ್ಯರೂಪಕ್ಕೆ ತಂದ ಸರಕಾರದ ಈ ವ್ಯವಹಾರವನ್ನು ಮೈಸೂರಿನ ಅನೇಕ ವೃತ್ತಪತ್ರಿಕೆಗಳು ಖಂಡಿಸಿದವು. ಮುದ್ರಣಾಲಯವನ್ನು ಸೀಲ್ ಮಾಡಿದ ನಂತರ, ಯಂತ್ರವನ್ನು ಸೀಲ್ ಮಾಡಿ ಇಟ್ಟಿರುವ ಜಾಗದಲ್ಲಿ ಛಾವಣಿಯು ಸೋರುವ ಕಾರಣ, ಯಂತ್ರವು ಹಾಳಾಗುವ ಸಂಭವವಿದೆ ಎಂದು ಡೆಪ್ಯುಟಿ ಕಮಿಷನರು ಸರಕಾರಕ್ಕೆ ವರದಿ ಮಾಡಿದರು. ವೃತ್ತಪತ್ರಿಕೆಯನ್ನು ಆಜ್ಞೆಯ ಪ್ರಕಾರ

ನಿಲ್ಲಿಸುವ ಭರವಸೆಯನ್ನು ನೀಡಿದ ಪಕ್ಷದಲ್ಲಿ ಮುದ್ರಣಾಲಯವನ್ನು ಮಾಲಿಕನಿಗೆ ಹಿಂದಿರುಗಿಸಬಹುದೆಂದು ಸರಕಾರವು ಆಗ ಅಪ್ಪಣೆ ಮಾಡಿತು. ಸಂಪಾದಕರು ಈ ಅಪ್ಪಣೆಯನ್ನು ತಿರಸ್ಕರಿಸುತ್ತ, ಸರಕಾರವು ಮುದ್ರಣಾಲಯವನ್ನು ಜಪ್ತಿಮಾಡಿ ಕಾನೂನಿಗೆ ವಿರುದ್ಧವಾಗಿ ನಡೆದುಕೊಂಡಿದೆ. ಆದ್ದರಿಂದ ಸರಕಾರದ ಅನ್ಯಾಯದಿಂದಾದ ಅನಾಹುತಕ್ಕಾಗಿ ರೂ. ೫೦೦ನ್ನು ಪರಿಹಾರ ಕೊಟ್ಟು, ಮುದ್ರಣಾಲಯವನ್ನು ಹಿಂದಿರುಗಿಸಬೇಕೆಂದು ಹೇಳಿದರು. ಅನಂತರ, ಲೇಖನ ಸಾಮಗ್ರಿಗಳನ್ನೂ ಮುದ್ರಣಾಲಯವನ್ನೂ ಸುರಕ್ಷಿತವಾದ ಸ್ಥಳಕ್ಕೆ ಸಾಗಿಸಲಾಯಿತು.

ಏಪ್ರಿಲ್ ೧೮೯೪ರಲ್ಲಿ, ಎರಡು ತಿಂಗಳೊಳಗೆ ಮುದ್ರಣಾಲಯ ಹಾಗೂ ಲೇಖನ ಸಾಮಗ್ರಿಗಳನ್ನು ರೂ. ೫೦೦ರ ರೊಂದಿಗೆ ಹಿಂದಿರುಗಿಸದಿದ್ದರೆ ನ್ಯಾಯಾಲಯದಲ್ಲಿ ದಾವೆ ಹಾಕದೆ ತನಗೆ ಬೇರೆ ಮಾರ್ಗವಿಲ್ಲವೆಂದು, ಶ್ರೀನಿವಾಸ ಅಯ್ಯಂಗಾರರು ಡೆಪ್ಯುಟಿ ಕಮಿಷನರಿಗೆ ಬೆದರಿಕೆಯ ಸೂಚನಾಪತ್ರವನ್ನು ಕಳುಹಿಸಿಕೊಟ್ಟರು. ಈ ಬೆದರಿಕೆ ಕೆಲಸ ಮಾಡಲಿಲ್ಲ. ಅಲ್ಲದೆ ಬಡತನದ ಕಾರಣದಿಂದಾಗಿ ಅವರು ನ್ಯಾಯಾಲಯದ ಮೆಟ್ಟಿಲನ್ನು ಹತ್ತಲಾಗಲಿಲ್ಲ. ಶ್ರೀನಿವಾಸ ಅಯ್ಯಂಗಾರರು, ಅದೇ ವರ್ಷದ ಅಕ್ಟೋಬರ್ ತಿಂಗಳಲ್ಲಿ, ಸರ್ ಕೆ. ಶೇಷಾದ್ರಿ ಅಯ್ಯರ್ ಹಾಗೂ ಮಹಾರಾಜರ ಆಡಳಿತವನ್ನು ನಿಂದಿಸುತ್ತ, ಪ್ರತಿನಿಧಿಗಳ ಸಭೆಗೆ (Representative Assembly) ಒಂದು ನೆನಪಿನೋಲೆಯನ್ನು ಬರೆದರು. ಈ ರೀತಿಯ ಪ್ರಶ್ನೆಗಳಿಗೆ ಉತ್ತರ ಕೊಡುವ ಅಥವಾ ಚರ್ಚಿಸುವ ಅವಶ್ಯವಾದ ಕ್ರಮವು ಆ ಸಭೆಗೆ ಇರದಿದ್ದ ಕಾರಣ, ದಿವಾನರು ಹಾಗೂ ಮಹಾರಾಜರು ಆ ನೆನಪಿನ ಪತ್ರವನ್ನು ಅಲಕ್ಷಿಸುವುದೇ ಸರಿಯೆಂದು ತಿಳಿದರು.

ಶಿಕ್ಷೆಯ ಕಾಲದ ವಾಯಿದೆ ಪೂರ್ಣವಾಯಿತೆಂದೂ, ಆದ್ದರಿಂದ ಸರಕಾರಕ್ಕೆ ಅರಿಕೆ ಮಾಡಿಕೊಂಡು ತನ್ನ ಆಸ್ತಿಯನ್ನು ಹಿಂದೆ ಪಡೆಯಬಹುದೆಂದೂ ಶ್ರೀನಿವಾಸ ಅಯ್ಯಂಗಾರರಿಗೆ ತಿಳಿಸಲಾಯಿತು. ಜಪ್ತಿ ಮಾಡಿದಾಗ ಯಾವ ಸ್ಥಿತಿಯಲ್ಲಿತ್ತೋ ಅದೇ ಸ್ಥಿತಿಯಲ್ಲಿ ಮತ್ತು ಅದೇ ಜಾಗದಲ್ಲಿ ಮುದ್ರಣದ ಯಂತ್ರವನ್ನು ತಲುಪಿಸಬೇಕೆಂದು ಅವರು ಪ್ರತ್ಯುತ್ತರ ಬರೆದರು. ಸರಕಾರವು ಅದನ್ನು ನಿರಾಕರಿಸಿತು. ಮುಂದಿನ ಐದು ವರ್ಷಗಳವರೆಗೆ ಈ ಮೊಕದ್ದಮೆ ತಡೆಹಿಡಿದಂತೆಯೇ ಆಗಿದ್ದಿತು. ಈ ವೃತ್ತಪತ್ರಿಕೆಯನ್ನು ನಿಲ್ಲಿಸಿದ ದಿವಾನರು ಹಾಗೂ ಮಹಾರಾಜರು ಮರಣ ಹೊಂದಿದ ನಂತರ ಮತ್ತೆ ಮೊಕದ್ದಮೆಯನ್ನು ಆರಂಭ ಮಾಡಲಾಯಿತು.

೧೯೦೩ನೇ ಅಕ್ಟೋಬರ್ ತಿಂಗಳಲ್ಲಿ, ಶ್ರೀನಿವಾಸ ಅಯ್ಯಂಗಾರರು, ಮಹಾರಾಜರಾದ ನಾಲ್ಕನೆಯ ಕೃಷ್ಣರಾಜ ಒಡೆಯರಿಗೂ, ಅವರ ಖಾಸಗೀ ಕಾರ್ಯದರ್ಶಿಯಾದ ಇ. ಮೆಕೊನೊಚಿ (Maconochie) ಗೂ ಮನವಿ ಪತ್ರವನ್ನು ಕಳುಹಿಸಿಕೊಟ್ಟರು. ಕೊನೆಗೆ ಕಳುಹಿಸಿದ ಪ್ರಮಾಣ ಪತ್ರದಲ್ಲಿ, ಆಗಿನ ದಿವಾನರು ತಮ್ಮ ಅವಿವೇಕದ ಆಡಳಿತದ ವಿಷಯವನ್ನು ಚರ್ಚಿಸುತ್ತಿದ್ದ ಹಾಗೂ ಅದರಿಂದ ತನ್ನ ಘೋರ ಕೃತ್ಯದ ಗುಟ್ಟುಗಳು ರಾಜನ ಕಿವಿಗೆ ಬೀಳಬಹುದೆಂದು, 'ದೇಶಾಭಿಮಾನ' ವೃತ್ತಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸುವ ಸಂಚನ್ನು ಹೂಡಿದ್ದರೆಂದು ವಿವರಿಸಿದರು. ಅಲ್ಲದೆ, "ವಾಸ್ತವವಾಗಿ ದಿವಾನರು ಸಂಪಾದಕನಿಗೆ ಮೊದಲು ಬೆದರಿಕೆ ಹಾಕಲು ಪ್ರಯತ್ನಪಟ್ಟು, ಅದು ನಡೆಯದಿರಲು, ಮತ್ತೆ ಸತ್ಯಾಂಶವನ್ನು ಮಹಾರಾಜರಿಗೆ ತಪ್ಪಾಗಿ ತಿಳಿಸಿ, ವೃತ್ತಪತ್ರಿಕೆಯನ್ನು ನಿಲ್ಲಿಸುವಂತೆ ಮಾಡಿದರು. "ದಯಾಮಯಿಯಾದ ಸ್ನೇಹಪರರಾದ ಸಾರ್ವಭೌಮರು"(!) ಪ್ರಕಟಣೆಯು ನಿಲ್ಲುವಂತೆ ಅಪ್ಪಣೆ ಕೊಟ್ಟಿದ್ದರೆ, ದಿವಾನರು ತಕ್ಷಣವೇ ಕಾರ್ಯ ಜಾರಿಗೆ ತರುವಂತೆ ಡೆಪ್ಯುಟಿ ಕಮಿಷನರನ್ನು ಪ್ರೇರೇಪಿಸಿದರು. ಮಹಾರಾಜರು ತಮ್ಮ ಆಜ್ಞೆಯಲ್ಲಿ ಹೇಳಿರದಿದ್ದರೂ, ತನ್ನ ಮೇಲಧಿಕಾರಿಯನ್ನು ಮೆಚ್ಚಿಸುವುದಕ್ಕೋಸ್ಕರ, ತನ್ನ ಅಧಿಕಾರದ ಮೇರೆಯನ್ನು ಮೀರಿ ಡೆಪ್ಯುಟಿ ಕಮೀಷನರು ಮುದ್ರಣಾಲಯವನ್ನು ಜಪ್ತಿ ಮಾಡಿಕೊಂಡರು. ಎಂಬುದಾಗಿ, ೧೮೯೪ನೇ ಡಿಸೆಂಬರ್ ತಿಂಗಳಲ್ಲಿ, ಶ್ರೀನಿವಾಸ ಅಯ್ಯಂಗಾರರು, ಮಹಾರಾಜರಿಗೆ ನೆನಪಿನೋಲೆಯನ್ನು ಕಳುಹಿಸಿಕೊಟ್ಟಂತೆ ಕಾಣುತ್ತದೆ. ಅದನ್ನು ಅವರು ಓದಿ, "ನಿಮಗಾಗಿರುವ ಅನ್ಯಾಯವು ನಮ್ಮ ಗಮನಕ್ಕೆ ಬಂದಿದೆ, ನಾವು ಕಲಕತ್ತಾದಿಂದ ಹಿಂದಿರುಗುವ ವರೆಗೂ ಸಮಾಧಾನದಿಂದ -- ಕಾಯಿರಿ. ದೇವರು ನಿಮಗೆ ಒಳ್ಳೆಯದನ್ನೇ ಮಾಡುವನು. ನಿಮಗಾಗಿರುವ ನಷ್ಟವನ್ನು ದೇವರೇ ವಹಿಸಿಕೊಳ್ಳುವನು." ಎಂದು ಆತನಿಗೆ ಬರೆದರು. ಮನವಿ ಪತ್ರದಲ್ಲಿ ಅರಿಕೆ ಮಾಡಿಕೊಂಡ ಮುದ್ದೆಗಳು ಕೆಳಕಂಡಂತಿವೆ –

೧. ದಿವಾನರ ಅಪ್ಪಣೆಗೆ ತಪ್ಪಾದ ಅರ್ಥವನ್ನು ಕೊಟ್ಟು, ಡೆಪ್ಯುಟಿ ಕಮೀಷನರರು, ಮುದ್ರಣಾಲಯವನ್ನು ಜಪ್ತಿ ಮಾಡಿ, ಸಂಪಾದಕನ ಮೇಲೆ ಶಿಕ್ಷೆಯನ್ನು ಹೇರಬಹುದೇ?

೨. ಎರಡು ಬೇರೆ ಬೇರೆ ಅಧಿಕಾರಿಗಳಿಂದ ಹೀಗೆ ಒಂದೇ ಕಾಲದಲ್ಲಿ ಅಧಿಕವಾದ ಶಿಕ್ಷೆಯನ್ನು ಕೊಡಬಹುದೆ?

೩. ವಿಚಾರಣೆ ನಡೆಸದೆ, ತೀರ್ಮಾನ ಕೊಡದೆ, ಡೆಪ್ಯೂಟಿ ಕಮೀಷನರು, ಶಿಕ್ಷೆ ಕೊಡಬಹುದೆ?

೪. ಸಂಪಾದಕನಿಗಾಗಿರುವ ವರಮಾನ ಹಾನಿಗೆ ಯಾರು ಹೊಣೆಗಾರರು?

೫. ಹಾಳಾಗಿರುವ ಮುದ್ರಣಾಲಯದ ಮುಖಬೆಲೆ, ಮುಂತಾದುವುಗಳಿಗೆ ಯಾರು ಹೊಣೆ?

೬. ಸರಕಾರದ ಒಂದು ಭಾಗ ಸಂಪಾದಕನಿಗೆ ಶಿಕ್ಷೆ ವಿಧಿಸಿದರೆ, ಅದರ ಮತ್ತೊಂದು ಭಾಗ ಅವನ ಆಸ್ತಿಯನ್ನು ಹಾಳು ಮಾಡಬಹುದೇ?

೭. ಕೊನೆಯ ತೀರ್ಮಾನವಿಲ್ಲದೆ, ಆಸ್ತಿಯು ವರ್ಷಗಳ ವರೆಗೆ ಜಪ್ತಿಯಾಗಿರಬಹುದೆ?

ಇವುಗಳ ಜೊತೆಗೆ ಇನ್ನೂ ಅನೇಕ ಇತರ ವಿಷಯಗಳನ್ನು ಕೂಲಂಕಶವಾಗಿ ವಿವರಿಸಿ, ಮನವಿಪತ್ರ ಕೊಟ್ಟು, ತನ್ನ ಮುದ್ರಣಾಲಯವನ್ನು ಕೆಲಸ ಮಾಡುವ ಸ್ಥಿತಿಯಲ್ಲಿ ಹಿಂದಿರುಗಿಸಬೇಕು, ಇಲ್ಲವೆ ರೂ. ೯,೦೦೦ಗಳ ಪರಿಹಾರ ದ್ರವ್ಯ ಕೊಡಬೇಕೆಂದು ಪ್ರಾರ್ಥಿಸಿದರು. ಸರಕಾರಕ್ಕೆ ಇದು ಹೆಚ್ಚೆನಿಸಿದರೆ, ಸಮಾಜದಲ್ಲಿ ತನಗಿರುವ ಸ್ಥಾನಕ್ಕನುಗುಣವಾಗಿ ಮತ್ತು ವೃತ್ತಿಗನುಗುಣವಾಗಿ ಸರಕಾರಿ ಉದ್ಯೋಗವನ್ನು ಕೊಡಬೇಕು; ಇಲ್ಲವೆ ಅರಮನೆಯಿಂದ ಜೀವನಾಂಶಕ್ಕೆ ಕೊಡಿಸಬೇಕು; ಇಲ್ಲವೆ ಶಾಲೆಯಲ್ಲಿ ಓದುತ್ತಿರುವ ತನ್ನ ಮೂವರು ಮಕ್ಕಳಿಗೂ ವಿದ್ಯಾರ್ಥಿವೇತನ ಅಥವಾ ಭತ್ಯ ಕೊಡಬೇಕು – ಎಂಬುದಾಗಿ ಪ್ರಾರ್ಥಿಸಿದರು. ಸಂಪಾದಕನ ಪರಿಹಾರ ದ್ರವ್ಯ ಕೇಳಿಕೆಯು ಅಸಂಬದ್ಧವಾದುದೆಂದು ಮಹಾರಾಜರು ಯೋಚಿಸಿದರು. ಮತ್ತು ಮುದ್ರಣದ ಯಂತ್ರ ಹಾಳಾಗುವುದಕ್ಕೆ, ಈ ಮನವಿ ಪತ್ರ ಕೊಟ್ಟವರ ಅವಿಧೇಯತೆಯೇ ಕಾರಣವೆಂದು ಹೇಳಿದರು. ವೃತ್ತಪತ್ರಿಕೆಯು ಮತ್ತೆ ಚಟುವಟಿಕೆಗೊಳ್ಳುವುದಿಲ್ಲವೆಂದು, ಸಂಪಾದಕನಿಂದ, ಆಶ್ವಾಸನೆಯನ್ನು ಪಡೆದು ಮುದ್ರಣಾಲಯವನ್ನು ಹಿಂದಿರುಗಿಸುವುದು ಸರಿಯಾಗಿರುವುದಿಲ್ಲವೇ ಎಂದು ದಿವಾನರ ಅಭಿಪ್ರಾಯವನ್ನು ಕೇಳಿ, ತರುವಾಯ, ಮನವಿಪತ್ರದಾರನ ಪರಿಹಾರದ್ರವ್ಯದ ಬೇಡಿಕೆಯನ್ನು ತಳ್ಳಿಹಾಕಿ, ಮುದ್ರಣಾಲಯವನ್ನು ಹಿಂದೆ ತೆಗೆದುಕೊಳ್ಳಬಹುದೆಂದು ತಿಳಿಸಿದರು. ದಿವಾನರ ಸಲಹೆಯ ಮೇರೆಗೆ ಆಶ್ವಾಸನೆಯ ಮುದ್ದತನ್ನು ಬಿಡಲಾಯಿತು.

ಶ್ರೀನಿವಾಸ ಅಯ್ಯಂಗಾರರು ತಮ್ಮ ಆಸ್ತಿಯನ್ನು ಹಿಂದೆ ತೆಗೆದುಕೊಳ್ಳಲಿಲ್ಲ. ಇದೇ ವೇಳೆಗೆ, ತನ್ನ ಮುದ್ರಣಾಲಯವನ್ನು ಒಳ್ಳೆಯ ಸ್ಥಿತಿಯಲ್ಲಿ ಇಟ್ಟಿಲ್ಲವೆಂದು, ಮೈಸೂರಿನ ಡೆಪ್ಯುಟಿ ಕಮೀಷನರಿಗೆ ದೂರು ಕೊಟ್ಟರು. ದಿವಾನರ ಅಪ್ಪಣೆಯ ಪ್ರಕಾರ, ಅದನ್ನು ಪರೀಕ್ಷಿಸಲು, 'ದೇಶಾಭಿಮಾನಿ'ಯ ಮುದ್ರಣಾಲಯ ಹಾಗೂ ಅದರ ವಸ್ತುಗಳ ಮೊತ್ತವು ಕೇವಲ ರೂ. ೭೩೧ ಆಗುವುದೆಂದೂ ಮತ್ತು ರೂ. ೨೦೦ರಷ್ಟು ಸರಿಪಡಿಸುವ ಖರ್ಚಾಗುವುದೆಂದೂ ವರದಿಯಾಯಿತು. ಈಗ ಶ್ರೀನಿವಾಸ ಅಯ್ಯಂಗಾರರು ತನಗೆ ಪರಿಹಾರ ದ್ರವ್ಯ ಕೊಡಬೇಕು, ಇಲ್ಲವೆ ಸರಕಾರಿ ಉದ್ಯೋಗ ಕೊಡಬೇಕೆಂದು, ಆಗ ದಿವಾನರಾಗಿದ್ದ ಕೆ. ಎಸ್. ಕೃಷ್ಣಮೂರ್ತಿಯವರಿಗೆ ಬೇರೊಂದು ಪ್ರಾರ್ಥನಾ ಪತ್ರವನ್ನು ಕಳುಹಿಸಿದರು. ಈ ವಿಷಯದಲ್ಲಿ ದಿವಾನರ ಪ್ರಯತ್ನ ವ್ಯರ್ಥವಾಯಿತು. ಅನಂತರ ಇದರ ವಿಷಯವಾಗಿ ಏನೂ ಹೊರಬರಲಿಲ್ಲ.

ತಮ್ಮ ಮುದ್ರಣಾಲಯವನ್ನು ಹಿಂದೆ ಪಡೆಯದೇನೆ ನಂಜನಗೂಡು ತಾಲ್ಲೂಕಿನಲ್ಲಿ ತಮಗೆ ಭೂಸ್ವಾಮ್ಯವನ್ನು ಕೊಡಬೇಕೆಂದು ಶ್ರೀನಿವಾಸ ಅಯ್ಯಂಗಾರರು ಮತ್ತೆ ಬಿನ್ನವಿಸಿಕೊಂಡರು. ಸರಕಾರವು ಮನಸ್ಸು ಬದಲಾಯಿಸಿ, ಅವರಿಗೆ ಹದಿನೈದು ಎಕರೆ ಭೂಮಿಯನ್ನು ದಯಪಾಲಿಸಿತು. ಆಶ್ಚರ್ಯವೆಂದರೆ, ತಮಗಾಗಿ ಬಿಟ್ಟುಕೊಟ್ಟ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳದೆ, ತಮ್ಮ ವೃತ್ತಪತ್ರಿಕೆಯ ಪ್ರಕಟಣೆಯನ್ನು ತಡೆಹಿಡಿದು, ಮುದ್ರಣಾಲಯವನ್ನು ಜಪ್ತಿ ಮಾಡಲಾಗಿದೆ ಎಂದು ೧೯೦೭ರ ಆಗಸ್ಟ್ ತಿಂಗಳಿನಲ್ಲಿ, ರೆಸಿಡೆಂಟರಿಗೆ ಪತ್ರ ಬರೆದರು. ರೆಸಿಡೆಂಟರು ದಿವಾನರಾದ ಪಿ. ವಿ. ಮಾಧವರಾಯರನ್ನು ಈ ಬಗ್ಗೆ ವಿಚಾರಿಸಲು, ಅವರು ರೆಸಿಡೆಂಟರಿಗೆ ಮೊಕದ್ದಮೆಯ ವಿವರವಾದ ವರದಿಯನ್ನು ಕೊಟ್ಟರು.

ಇಲ್ಲಿಗೆ ಮೊಕದ್ದಮೆಯು ಮುಕ್ತಾಯವಾಯಿತು. ಇದರ ಸಾರಾಂಶ: ೧೮೯೫ರಲ್ಲಿ ಮೈಸೂರಿನಲ್ಲಿ, ವೃತ್ತಪತ್ರಿಕೆಯ ಬರವಣಿಗೆಯನ್ನು ನಿಯಂತ್ರಿಸುವ ಮುದ್ರಣಾಲಯದ ಕಾನೂನು ಇರಲಿಲ್ಲ. ಇದರಿಂದಾಗಿ ಚಾಮರಾಜೇಂದ್ರ ಒಡೆಯರು ಹಾಗೂ ಸರ್ ಕೆ. ಶೇಷಾದ್ರಿ ಅಯ್ಯರ್ ಅವರಿಗೆ 'ದೇಶಾಭಿಮಾನಿ' ವಿರುದ್ಧ ಕಾರ್ಯಕಲಾಪ ಮಾಡಲು ಅನುಕೂಲವಾಯಿತು. ಈ ವ್ಯವಹಾರವನ್ನು "ಯಾವುದೇ ಕಾನೂನಿನಲ್ಲಿ ಅಸ್ತಿತ್ವವಿರುವ ಷರತ್ತಿನ ಸೂಚನೆಯನ್ನು ಕೊಡದ, ರಾಜ್ಯದ ವಿಶೇಷವಾದ ಕಾಯಿದೆ" ಎಂದು ಸರಕಾರವು ಗಣನೆಗೆ ತೆಗೆದುಕೊಂಡಿತು. "ಲೇಖನಗಳ ಬಗ್ಗೆ ಪ್ರಶ್ನೆ ಎದ್ದಾಗ, ಸಂಪಾದಕನ ವಿರುದ್ಧ ದೋಷಾತ್ಮಕ ನಡಾವಳಿ ಎಂದು ಬಗೆದರೆ ಯಾವ ನ್ಯಾಯಾಲಯವೂ ತಿರಸ್ಕರಿಸುತ್ತದೆ" ಎಂಬುದು ಸರಕಾರಕ್ಕೆ ಸ್ಪಷ್ಟವಾಗಿತ್ತು.

ಆಗಿನ ಮೈಸೂರಿನ ಸರಕಾರದ ಧೋರಣೆಯನ್ನು ತಿಳಿಯಬೇಕಿದ್ದರೆ, 'ಮೈಸೂರು ಸ್ಟ್ಯಾಂಡರ್ಡ್' ಎಂಬ ಆಂಗ್ಲ ವೃತ್ತಪತ್ರಿಕೆಯ ಮೊಕದ್ದಮೆಯನ್ನು ತಿಳಿಯಬೇಕು. ಇದನ್ನು ಎಂ. ಗೋಪಾಲಯಂಗಾರ್ ಎಂಬುವವರು, ೧೮೯೭ರಲ್ಲಿ ಸಂಪಾದಕರಾಗಿ ನಡೆಸುತ್ತಿದ್ದು, ಮೈಸೂರಿನ ಆಳುವ ರಾಣಿಯು ಅರಮನೆಯಲ್ಲಿ ದಕ್ಷಿಣ ಭಾರತದ ಕೆಲವು ನರ್ತಕಿಯರಿಗೆ ಆಶ್ರಯ ನೀಡಿದ್ದಾಳೆ, ಈ 'ಪತನ ಹೊಂದಿದ ದೇವತೆಗಳನ್ನು' ಅರಮನೆಯ ಆವರಣದೊಳಗೆ ಬಿಟ್ಟಿರದಿದ್ದರೆ ಅವರಿಗೆ ಕೀರ್ತಿ ಗೌರವಗಳಿರುತ್ತಿತ್ತು, ಎಂದು ಒಂದು ಸಣ್ಣ ಟಿಪ್ಪಣಿಯನ್ನು ಪ್ರಕಟಿಸಿದರು. ಇದರ ವಿಷಯವಾಗಿ, ಶೇಷಾದ್ರಿ ಅಯ್ಯರ್ ಅವರು, ನಿರಂಕುಶ ರಾಜ ಪ್ರಭುತ್ವವುಳ್ಳ ಮೈಸೂರಿನಂತಹ ರಾಜ್ಯದಲ್ಲಿ ರಾಜನು ಒಂದು ವೃತ್ತಪತ್ರಿಕೆಯನ್ನು ನಿಗ್ರಹಿಸಬಹುದು ಅಥವಾ ಸಂಪಾದಕನನ್ನು ರಾಜ್ಯದಿಂದ ಬಹಿಷ್ಕರಿಸಬಹುದು, ಆದರೆ ವರ್ತಮಾನದ ಸಂದರ್ಭದಲ್ಲಿ ಇದು ಉಚಿತವೇ ಎಂಬುದೇ ಪ್ರಶ್ನೆ, ಎಂದು ಶರಾ ಬರೆದರು. ರೆಸಿಡೆಂಟರೂ ಇದೇ ರೀತಿಯ ಸಲಹೆಯನ್ನು ಕೊಟ್ಟಿದ್ದಲ್ಲದೆ, ಅನಿವಾರ್ಯವಾಗುವ ವರೆಗೂ ಈ ರೀತಿಯ ಉಗ್ರವಾದ ಕಾರ್ಯವನ್ನು ಕೈಗೊಂಡರೆ, ಅದು ತೀಕ್ಷ್ಣವಾಗಬಹುದು ಮತ್ತು ಒಂದು ವೃತ್ತಪತ್ರಿಕೆಯನ್ನು ತಡೆಹಿಡಿಯುವುದೂ ಒಳ್ಳೆಯ ರಾಜನೀತಿಯಾಗಲಾರದು ಎಂದು ಸಲಹೆಯಿತ್ತರು. ಕೊನೆಗೆ, 'ಮೈಸೂರು ಸ್ಟ್ಯಾಂಡರ್ಡ್' ಸಂಪಾದಕನಿಂದ ಕರಾರು ರಹಿತವಾದ ಕ್ಷಮಾಯಾಚನೆಯ ಪತ್ರವನ್ನು ತೆಗೆದುಕೊಳ್ಳಲಾಯಿತು. ಮಹಾರಾಣಿಯು ನರ್ತಕಿಯರಿಗೆ ಆಶ್ರಯ ನೀಡಿದ್ದಳೆಂದಷ್ಟೇ 'ಮೈಸೂರು ಸ್ಟ್ಯಾಂಡರ್ಡ್' ಪ್ರಕಟಿಸಿದ್ದರೆ, ಆ ವಿಷಯವನ್ನು 'ದೇಶಾಭಿಮಾನಿ'ಯು ಉದ್ದೇಶಪೂರ್ವಕವಾಗಿಯೇ ದುರ್ಭಾಷೆಯನ್ನೂ ಅಸಹ್ಯಕರವಾದ ಅಶ್ಲೀಲ ಭಾಷೆಯನ್ನೂ ಬಳಸುವ ವರೆಗೂ ಹೋಗಿದ್ದಿತು.

ತಡೆಹಿಡಿದ ಕಾಲಾವಧಿಯ ನಂತರವೂ, ಅವರ ಬೇಡಿಕೆಯನ್ನು ಸರಕಾರವು ಮತ್ತೆ ಮತ್ತೆ ನಿರಾಕರಿಸುತ್ತಿದ್ದರೂ, ಶ್ರೀನಿವಾಸ ಅಯ್ಯಂಗಾರರು, ಪರಿಹಾರದ ಬೇಡಿಕೆಗಾಗಿ ಏಕೆ ಮೊಂಡುತನ ಮಾಡುತ್ತಿದ್ದರೋ ತಿಳಿಯದು. ಬಹುಶಃ ಉದಾತ್ತವಾದ ನೀತಿಗಾಗಿಯೋ ಅಥವಾ ನ್ಯಾಯಕ್ಕಾಗಿಯೋ ಅಥವಾ ಸ್ನೇಹಿತರ ಸಲಹೆಯಿಂದಾಗಿಯೋ ಅವರು ಪ್ರೇರೇಪಿತರಾಗಿರಬಹುದು. ಶೇಷಾದ್ರಿ ಅಯ್ಯರ್ ರನ್ನೇ ಮೊದಲಿನಿಂದ ಕೊನೆಯವರೆಗೂ ಉದ್ದೇಶಪೂರ್ವಕವಾಗಿಯೇ ಟೀಕಿಸುತ್ತಿದ್ದುದನ್ನು ನೋಡಿದರೆ, ಕೊನೆಯದೇ ಸರಿಯೆಂದೆನಿಸುವುದು. ದೊರೆಯು ವಿಶೇಷ ದಯೆಯಿಂದ ಶಿಕ್ಷೆಯನ್ನು ಕಡಿಮೆ ಮಾಡಿದ್ದರೂ, ಶ್ರೀನಿವಾಸ ಅಯ್ಯಂಗಾರರು, ಮತ್ತೆ ಮತ್ತೆ ಸರಕಾರವನ್ನೂ, ದಿವಾನರನ್ನೂ ತೆಗಳುತ್ತಾ, ತಮ್ಮ ಮೊಕದ್ದಮೆಯ ಪಕ್ಷವನ್ನು ಬಲಹೀನವಾಗಿ ಮಾಡಿಕೊಂಡಿದ್ದಲ್ಲದೆ, ಒಂದಲ್ಲ ಒಂದು ರೀತಿಯ ಪರಿಹಾರವನ್ನು ಕೇಳುತ್ತಿದ್ದರು. ಸರಕಾರವು ಕೊನೆಯದಾಗಿ, ೧೯೦೪ರಲ್ಲಿ ಆತನ ಎಲ್ಲಾ ಬೇಡಿಕೆಗಳನ್ನೂ ನಿರಾಕರಿಸಿ, ಮುದ್ರಣಾಲಯವನ್ನು ಹಿಂದೆ ಪಡೆಯಲು ಹೇಳಿದ್ದಿತಷ್ಟೇ. ಆಗ ಶ್ರೀನಿವಾಸ ಅಯ್ಯಂಗಾರರು, ವಿರೂಪಗೊಂಡಿರುವ ತಮ್ಮ ಮುದ್ರಣದ ಮೊಳೆಗಳನ್ನು ಮೈಸೂರಿನ ಸರಕಾರದ ಮುದ್ರಣಾಲಯದಲ್ಲಿ ಹೊಸರೂಪದಲ್ಲಿ ಹೊಂದಿಸಿ ಕೊಡಬೇಕು, ಇಲ್ಲವೆ ತಮ್ಮ ಜೀವನ ನಡೆಸುವುದಕ್ಕಾಗಿ, ಸರಕಾರದ ಮುದ್ರಣಾಲಯದಿಂದ ಎರಡನೆಯ ದರ್ಜೆಯ (second hand) ಮೊಳೆಗಳನ್ನಾದರೂ ತನಗೆ ಕೊಡಬೇಕು ಎಂದು ಮೈಸೂರಿನ ಡೆಪ್ಯುಟಿ ಕಮಿಷನರಿಗೆ ಬರೆದರು. ಆಶ್ಚರ್ಯಕರವಾದ ಮತ್ತೊಂದು ವಿಷಯವೆಂದರೆ ೧೯೦೪ರ ನಂತರ, ಬೆಂಗಳೂರಿನ ಸಿ. ಮತ್ತು ಎಂ. ಸ್ಥಳಗಳಲ್ಲಿ 'ದೇಶಾಭಿಮಾನಿ'ಯು ಮತ್ತೆ ಚಟುವಟಿಕೆಗಳನ್ನು ಮುಂದುವರೆಸಿ, ಸರಕಾರಕ್ಕೆ ತೊಂದರೆ ಕೊಟ್ಟಂತೆ ಕಾಣುತ್ತದೆ. ಅವರ ಹಟಮಾರಿತನದ ಸ್ವಭಾವವನ್ನು ಯಾರೂ ಅರಿಯಲಾರರು. ತನಗೆ ಕೊಟ್ಟ ಭೂಸ್ವತ್ತನ್ನು ಏಕೆ ಸ್ವಾಧೀನ ಪಡಿಸಿಕೊಳ್ಳಲಿಲ್ಲವೆನ್ನುವ ಪ್ರಶ್ನೆ, ಪ್ರಶ್ನೆಯಾಗಿಯೇ ಉಳಿಯಿತು. ಸ್ವಾಧೀನಕ್ಕೆ ಬಿಟ್ಟುಕೊಟ್ಟ ಆರಂಭದಲ್ಲಿ ಮೈಸೂರು ಸರಕಾರವು ಮುದ್ರಣಗಳಲ್ಲಿ ಬರುತ್ತಿದ್ದ ಸೌಮ್ಯವಾದ ಟೀಕೆಗಳನ್ನೂ ಗಮನಕ್ಕೆ ತಂದುಕೊಳ್ಳುತ್ತಿತ್ತು. 'ದೇಶಾಭಿಮಾನಿ' ವಿಷಯದಲ್ಲಿ ಅದುದೇನೂ ವಿಶೇಷವಲ್ಲ. ಏಕೆಂದರೆ ಇತರ ಕೆಲವು ವೃತ್ತಪತ್ರಿಕೆಗಳು ಸೂಕ್ಷ್ಮ ಮನೋಭಾವದ ಸರಕಾರವನ್ನು ಈ ರೀತಿಯ ಬಾಲಿಶವಾದ ಹೀನಾಯದ ನುಡಿಗಳನ್ನು ಮುದ್ರಿಸುವಲ್ಲಿ ತೃಪ್ತಿ ಪಡುತ್ತಿದ್ದುವು. ಸುಳ್ಳು ಲೇಖನಗಳನ್ನು ಮುದ್ರಿಸಿದುದಕ್ಕಾಗಿ ೧೯೦೦ರಲ್ಲಿ 'ಸೂರ್ಯೋದಯ ಪ್ರಕಾಶಿಕೆ'ಯ ಮತ್ತು ೧೯೦೭ರಲ್ಲಿ 'ಮೈಸೂರು ಸ್ಟಾಂಡರ್ಡ್' ದ ಸಂಪಾದಕರುಗಳಿಗೆ ಎಚ್ಚರಿಕೆ ಕೊಡಲಾಗಿತ್ತು. 'ಮೈಸೂರು ಸ್ಟಾಂಡರ್ಡ್' ಪ್ರತಿನಿಧಿಯನ್ನು 'ಪ್ರತಿನಿಧಿಗಳ ಸಭೆ'ಯ ಅಧಿವೇಶನಗಳಿಂದ ಹೊರಹಾಕಲ್ಪಟ್ಟಿತ್ತು.

ಕ್ರಿ.ಶ. ೧೯೦೮ರಲ್ಲಿ ಮೈಸೂರು ಸರಕಾರವು ಪತ್ರಿಕಾ ನಿರ್ಬಂಧದ ಕಾನೂನನ್ನು ಪಾಸು ಮಾಡಿತ್ತಷ್ಟೆ. 'ದೇಶಾಭಿಮಾನಿ'ಯ ಈ ಪ್ರಕರಣವೂ ಆ ಕಾನೂನಿಗೆ ಹಿನ್ನೆಲೆ - ಪ್ರೇರಣೆಯೊದಗಿಸಿರಬಹುದೆ? ◆

**(ಅನುವಾದ : ಶ್ರೀಮತಿ ಸಿ. ಆರ್. ಶ್ಯಾಮಲಾ)**

## ೧೫. 'ಚಂದ್ರಿಕೆ'ಯನ್ನು ಎತ್ತಿ ಮುದ್ದಾಡಿಸಿದ ಚಂದಾದಾರರು

ಈಗಿನ ದಿನಗಳಲ್ಲಿ, ರಂಜನೀಯ ಮಾಸಪತ್ರಿಕೆಯೊಂದರ ಪೋಷಕರೆಂದರೆ, ಬಂಡವಾಳದಾರರು, ಜಾಹೀರಾತುದಾರರು, ಸ್ಟಾಲ್‌ಗಳಲ್ಲಿ ಇಲ್ಲವೆ ಬೀಡಿ ಅಂಗಡಿಗಳಲ್ಲಿ ಬಿಡಿಬಿಡಿಯಾಗಿ ಮಾರಾಟ ಮಾಡುವವರು. ಅದೇ ಸಂಪಾದಕರು, ಲೇಖಕರು ಮತ್ತು ವಾರ್ಷಿಕ ಚಂದಾದಾರರು - ಇವರದು ಗೌಣ ಪಾತ್ರ! ೬೦-೭೦ ವರ್ಷಗಳ ಹಿಂದೆ ಈ ಸ್ಥಿತಿ ಇರಲಿಲ್ಲ. ವಾರ್ಷಿಕ ಚಂದಾದಾರರೇ ಮುಖ್ಯ ಪೋಷಕರಾಗಿರುತ್ತಿದ್ದರು. ಪತ್ರಿಕೆಯ ಅಳಿವು ಉಳಿವು ಅವರನ್ನೇ ಅವಲಂಬಿಸಿತ್ತು. ಅಂತೆಯೇ ಸದ್ಬೋಧ ಚಂದ್ರಿಕೆಯ ಆರಂಭದ ವರ್ಷಗಳಲ್ಲಿ, ಅದನ್ನು 'ಎತ್ತಿ ಮುದ್ದಾಡಿಸಿದ ಚಂದಾದಾರರು' ಎಂದು ಮೇಲಿಂದ ಮೇಲೆ ಸಂಪಾದಕೀಯ ಟಿಪ್ಪಣಿಗಳಲ್ಲಿ ಹೇಳಲಾಗುತ್ತಿತ್ತು. ಅದನ್ನೇ ಶೀರ್ಷಿಕೆಯಾಗಿ ಇಲ್ಲಿ ಕೊಟ್ಟದ್ದಿದೆ, ಮತ್ತು ಪತ್ರಿಕೆ-ಚಂದಾದಾರರ ಪರಸ್ಪರ ಸಹಯೋಗ ಹೇಗಿತ್ತು ಎಂಬುದನ್ನು ಸ್ಥಾಲೀಪುಲಾಕನ್ಯಾಯದಿಂದ ಈ ಲೇಖನದಲ್ಲಿ ತೋರಿಸಬಯಸಿದೆ.

ಪತ್ರಿಕೆಯ ಆರಂಭ ಹೇಗಾಯಿತು? ಸಂಪಾದಕರ ಮಾತಿನಲ್ಲಿಯೆ ನೋಡೋಣ. "ಧರ್ಮಜಾಗೃತಿ ಮಾಡಬೇಕೆಂದು ಚಂದ್ರಿಕೆಯ 'ಚಾಲಕ'ರು ಮುಂಚಿನಿಂದಲೂ ಯೋಚಿಸುತ್ತಿದ್ದರು. ಆನಂದವನಾಗ್ರಹಾರದಲ್ಲಿ ಆ ಪ್ರಯತ್ನ ನಡೆದಿರುವುದನ್ನು ಕಂಡು ಸಂತೋಷಪಟ್ಟು, ಹೆಚ್ಚು ಜೋರಿನಿಂದ ನಡಿಸಬೇಕೆಂದು ವೇದ ಮತ್ತು ಸಂಸ್ಕೃತದ ಶಾಲೆಗಳನ್ನು ಈಗ ಕೆಲವು ವರ್ಷಗಳ ಹಿಂದೆ ಶ್ರೀ ಸದ್ಗುರುವಿನ ಪ್ರೇರಣೆಯಿಂದ ಸ್ಥಾಪಿಸಿ ಅದರ ಭಾರವನ್ನು ವಹಿಸಿದರು. ಕೆಲವು ದಿನಗಳಾದ ಮೇಲೆ ಅಧ್ಯಾಪಕರ ಸಂಬಳ, ವಿದ್ಯಾರ್ಥಿಗಳ ಹೊಟ್ಟೆ ಬಟ್ಟೆ ಇವುಗಳನ್ನು ಸಾಗಿಸುವುದು ಕಠಿಣವಾಗಿ ಒಂದು ಮಾಸಪತ್ರಿಕೆಯನ್ನು ಹೊರಡಿಸಿ ಅದರ ಸಹಾಯದಿಂದ ಪಾಠಶಾಲೆಯ ವೆಚ್ಚ ಸಾಗಿಸಬೇಕೆಂದು ನಿರ್ಧರಿಸಿದರು. ಈ ನಿರ್ಧಾರವಾಗಲಿಕ್ಕೆ ಕನ್ನಡ ಭಾಷೆಯ ಬಗ್ಗೆ ಅವರಲ್ಲಿ ಉತ್ಕಟವಾಗಿ ನೆಲೆಗೊಂಡಿರುವ ಅಭಿಮಾನವೂ ಕಾರಣವಾಯಿತು. ನಿಶ್ಚಯ ಮಾಡುವುದು ಸುಲಭವು. ಅದಕ್ಕನುಸರಿಸಿ ಕಾರ್ಯವನ್ನು ನಿರ್ವಹಿಸುವುದು ಕಠಿಣ.

ಆರಂಭದಲ್ಲಿ ಶ್ರೀ ಸದ್ಗುರುವು ದ್ರವ್ಯಬಲವನ್ನು ಬೀಜರೂಪವಾಗಿ ನೆಲೆಗೊಳಿಸಿದನು. ಸಣ್ಣದೊಂದು ಮುದ್ರಣಯಂತ್ರವು ತರಿಸಲ್ಪಟ್ಟಿತು. ಪ್ರೆಸ್ಸಿನ ಅನುಭವವುಳ್ಳ ಭಿಕ್ಕಾಜಿ ಪಂತ ಕಾಳೆ, ಇಂಗ್ಲೀಷ ಭಾಷೆಯನ್ನು ಬಲ್ಲ ಯ.ಗು. ಕುಲಕರ್ಣಿ, ಕನ್ನಡ ಸಂಸ್ಕೃತ ಭಾಷಾಕೋವಿದರಾದ ವೇ. ರಾ. ಶ್ರೀಕಂಠಶಾಸ್ತ್ರಿಗಳು ಇವರೆಲ್ಲರೂ ಬೇರೆ ತರುಣರೂ ತಕ್ಕಮಟ್ಟಿಗೆ ಸ್ವಾರ್ಥತ್ಯಾಗ ಮಾಡಿ ನೆರವಾಗಲಿಕ್ಕೆ ಟೊಂಕ ಕಟ್ಟಿದರು. ಆದ್ದರಿಂದ ಸದ್ಗುರುವಿನ ಬೋಧದ ಫಲವಾಗಿ ಸದ್ಬೋಧ ಚಂದ್ರಿಕೆಯು ಕೀಲಕ ಸಂವತ್ಸರದ ಚೈತ್ರ ಬ. ೫ರಲ್ಲಿ ಜನ್ಮತಾಳಿತು."

ಅದು ೧೯೦೮ರ ಎಪ್ರೇಲ್ ತಿಂಗಳು. ಮೊದಲ ವರ್ಷ ೫೦೦ ರಿಂದ ೧೦೦೦ ದವರೆಗೆ ಪ್ರತಿಗಳನ್ನು ಮುದ್ರಿಸಲಾಗುತ್ತಿತ್ತು. ಪುಟ ಸಂಖ್ಯೆ ಪ್ರತಿ ಸಂಚಿಕೆಗೆ ೨೪ ಪುಟಗಳು; ವಾರ್ಷಿಕ ಚಂದಾ ರೂ. ೧-೬-೦ ಎರಡನೆಯ ವರ್ಷ ಎಂದರೆ ೧೯೦೯-೧೦ ರಲ್ಲಿ ಕಾದಂಬರಿಗಳನ್ನು ಧಾರಾವಾಹಿಯಾಗಿ ಕೊಡಲಾರಂಭಿಸಿದ್ದರಿಂದ ಮೂರನೆಯ ವರ್ಷದ ಕೊನೆಗೆ ಸು. ೨೩೦೦ ಜನ ಚಂದಾದಾರರು ಮುಂಬಂದರು. ಆಗ ಹೊರಬಂದ ಕಾದಂಬರಿಗಳೆಂದರೆ ಕಮಲಕುಮಾರಿ, ವೈಭವ ಮತ್ತು ಮೃಣಾಲಿನಿ.

ಚಂದಾದಾರರ ಈ ಏರಿಕೆಗೆ ಯಾರೂ ಸಂತೋಷಿಸಬೇಕಾಗಿದ್ದದ್ದೇ. ಆಗಿನ ದಿನಗಳಲ್ಲಿ. ಆದರೆ ಸಂಚಾಲಕರಿಗೆ (ಸಂಪಾದಕರೆಂದು ತಮ್ಮನ್ನು ಅವರು ಕರೆದುಕೊಳ್ಳುತ್ತಿದ್ದಿಲ್ಲ!) ಹೆಚ್ಚು ಹಣ ಬೇಕಾಗಿತ್ತು. ಮೇಲೆ ಹೇಳಿದ ಮೂಲೋದ್ದೇಶಕ್ಕಾಗಿ, ಅದಕ್ಕೆಂದು ತೋಚಿದ ಉಪಾಯ ಚಂದಾ ಹಣವನ್ನು ಇಳಿಸುವುದು ಪುಟಗಳನ್ನು ಹೆಚ್ಚಿಸುವುದು – ಆ ಮೂಲಕ ಚಂದಾದಾರರ ಸಂಖ್ಯೆಯನ್ನು ಏರಿಸುವುದು. ಈ ನಿರ್ಣಯ ಕೈಕೊಂಡದ್ದರ ಫಲವಾಗಿ ಕ್ರಿ.ಶ. ೧೯೧೧-೧೨ ರ ಸುಮಾರಿಗೆ ಚಂದಾಹಣ ೧ ರೂ.ಗೆ ಇಳಿಯಿತು. ಚಂದಾದಾರರ ಸಂಖ್ಯೆ ನಾಲ್ಕು ಸಾವಿರಕ್ಕೆ ಏರಿತು. ಆ ಸಂಖ್ಯೆ ಏರಿದರೇನಾಯಿತು? ವಾರ್ಷಿಕ ಚಂದಾ ಕಡಿಮೆಯಾಗಿತ್ತಲ್ಲ? ಚಂದಾದಾರರ ಸಂಖ್ಯೆ ಇನ್ನೂ ಏರಬೇಕು; ಏರಲೇಬೇಕು! ಹಾಗಿದ್ದರೆ ಇನ್ನಾವ ಉಪಾಯ? ಪತ್ರಿಕೆಯ ಪುಟಗಳನ್ನು ಹೆಚ್ಚಿಸುವುದು. ೨೪ ರಿಂದ ೩೨ಕ್ಕೆ ಈ ಮುಂಚೆ ಬೆಳೆಸಲಾಗಿದ್ದಿತು. ಈಗ ಐದನೆಯ ವರ್ಷದಿಂದ ೪೮ ಪುಟಗಳು! ಪರಿಣಾಮ? ಕರ್ನಾಟಕದ ಪತ್ರಿಕಾ ಪ್ರಪಂಚದಲ್ಲೇ ಆ ವರೆಗೆ ಆಗದಿದ್ದ ಪವಾಡವೊಂದು ನಡೆದು ಹೋಯಿತು. ಅದುವೆ ಚಂದಾದಾರರ ಸಂಖ್ಯೆ ಏಳು ಸಾವಿರದ ಗಡುವನ್ನು ದಾಟಿದುದು. (೧೯೧೪) ಇದು 'ಸದ್ಬೋಧ ಚಂದ್ರಿಕೆ'ಯ ಬಾಲ್ಯವರ್ಧನೆಯ ಸ್ಥೂಲ ನೋಟ.

ಪತ್ರಿಕೆಯ ಈ ಬೆಳವಣಿಗೆ ಹಂತಹಂತವಾಗಿ ನಡೆದದ್ದೇನಲ್ಲ. ಮೂರನೆಯ ವರ್ಷ 'ಪದ್ಮನಯನೆ' ಕಾದಂಬರಿಯನ್ನು ಧಾರಾವಾಹಿಯಾಗಿ ಕೊಟ್ಟಾಗ ಭರದಿಂದ ಏರತೊಡಗಿತು. ಸಂಚಾಲಕರು ತಮ್ಮ ಸಂಚಾಲನ ಕಾರ್ಯದ ಉದ್ದಕ್ಕೂ 'ಚಂದ್ರಿಕೆ ಒಬ್ಬ ಬಾಲಿಕೆ, ಚಂದಾದಾರರಾದ ನೀವೇ ಅದರ ಪೋಷಕರು, ಪ್ರೋತ್ಸಾಹಿಸುವವರು. ಪಾಲನೆ ಮಾಡುವವರು' ಎಂಬುದಾಗಿ ರೂಪಕಾಲಂಕಾರದಲ್ಲಿ ಹೇಳುತ್ತಲೇ ಇದ್ದರು. ಇದೊಂದು ಮಾದರಿ.

> "ಮರ (ಮೊರ)ದಲ್ಲಿ ಕೇವಲ ಪರಾಧೀನೆಯಾಗಿ ಮಲಗಿದ್ದ ಚಂದ್ರಿಕೆಯು ಈಗ ಕರ್ನಾಟಕ ಪ್ರಾಂತದಲ್ಲಿ ದುಡುದುಡು ಓಡಾಡಹತ್ತಿದ್ದಾಳೆ. ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ ನಡಿಗೆಯ ವೇಗ ಮೈಸೂರಲ್ಲಿ ನಡಿಗೆಯ ಗಾಂಭೀರ್ಯ, ಕಾರವಾರ, ಹೈದರಾಬಾದ, ಮದ್ರಾಸಗಳಲ್ಲಿ ನಡಿಗೆಯ ಮಂದತ್ವ. ಇನ್ನು ಕನ್ನಡ ಪ್ರಾಂತಗಳ ಹೊರಗೆ ಬಹುದೂರ ಇದ್ದ ಕನ್ನಡಿಗರು ಕರೆದರೂ ಚಂದ್ರಿಕೆಯು ಬೆದರದೇ ತಟ್ಟನೆ ಹೋಗುತ್ತಿರುವಳು. ಕರೆದವರ ಕೈಯೊಳಗಿನ ಕೂಸು ಆಕೆ."

ಮುಂದುವರಿದು, ಸಂಚಾಲಕರು ಪತ್ರಿಕೆಯ ಬಗ್ಗೆ ಓದುಗರ ಪ್ರತಿಕ್ರಿಯೆ ಹೇಗೆಂಬುದನ್ನು ವರ್ಣಿಸಿದ್ದಾರೆ. ಧಾರವಾಡ ಪ್ರಾಂತದವರದ್ದು ಪುರುಷ ಪ್ರಕೃತಿಯದಂತೆ, ಮೈಸೂರ ಕಡೆಯವರದ್ದು ಸ್ತ್ರೀ ಪ್ರಕೃತಿಯದಾದರೆ, ಉಳಿದವರದ್ದು ಪರಾಧೀನ ಪ್ರಕೃತಿಯದಂತೆ.

ಚಂದಾದಾರರ ಈ ಮನೋವೃತ್ತಿ ತಿಳಿದು ಬಂದದ್ದು ಹೇಗೆ? ಅವರುಗಳು ಪತ್ರ ಬರೆದದ್ದರ ಮೂಲಕ ಸಂಚಾಲಕರು ಇಂಥ ಅನೇಕ ಪತ್ರಗಳನ್ನು ಪ್ರಕಟಿಸುತ್ತಿದ್ದರು, ಈಗ ವಾಚಕರ ಓಲೆಗಳನ್ನು ಪ್ರಕಟಿಸುವ ಕ್ರಮ ಸಾಮಾನ್ಯವಾಗಿದ್ದರೂ ಆಗಿನ ವಾಚಕ-ಪತ್ರಿಕಾ ಸಂಬಂಧದ ತಾದಾತ್ಮ್ಯ ಈಗ ಕಂಡು ಬಾರದು.

> "ನನಗೆ ವಾಚನಾಭಿರುಚಿಯು ಏನೂ ಇದ್ದಿಲ್ಲವೆಂದರೂ ಅಡ್ಡಿಯಿಲ್ಲ. ನಿಮ್ಮ ಚಂದ್ರಿಕೆಯನ್ನು ಓದಹತ್ತಿದ್ದರಿಂದ ಬೆಳೆದ ವಾಚನಾಭಿರುಚಿಯು ನನ್ನನ್ನು ದಂಗುಬಡಿಸಿ ಬಿಟ್ಟಿದೆ." – ಶಂಕರರಾವ ಐರಣಿ (ಇರಿಗೇಶನ್ ಹೆಡ್ ಕ್ಲಾರ್ಕ)
>
> "ಚಂದ್ರಿಕೆಯನ್ನು ಓದೋದುತ್ತ ಕೆಲವು ವರ್ಗಣಿದಾರರನ್ನು ಕೂಡಿಸಿ ಕೊಡಬೇಕೆಂಬ ಇಚ್ಛೆಯು ನನಗುಂಟಾಯಿತು. ಸುದೈವದಿಂದ ಈಗ ಐದು ಜನರು ನನ್ನ ಮಾತಿಗೆ ಒಡಂಬಟ್ಟಿರುವರು ಮತ್ತೂ ಯತ್ನ ಮಾಡುವೆನು." – ಗದಿಗೆಪ್ಪ ಪೂಜಾರ, ಅಂದಲಗಿ.

"ತಮ್ಮ ಸದ್ಬೋಧ ಚಂದ್ರಿಕೆಯ ನಾಲ್ಕನೆಯ ವರ್ಷದ ಬಾಲಲೀಲೆಗಳನ್ನು ನೋಡಿ ಆದ ಆನಂದವನ್ನು ಬಾಯಿಂದ ವರ್ಣಿಸಲಿಕ್ಕೆ ಎಷ್ಟು ಪ್ರಯತ್ನ ಮಾಡಿದರೂ ಆಗದೆ ಹೋಯಿತು. ಚಿಕ್ಕ ಮಕ್ಕಳ ಲೀಲೆಯಿಂದಾಗುವ ಆನಂದವು ಇಂಥದೇ ಸರಿ. ಕೆಳಗಿನ ೧೧ ಜನರನ್ನು ನಿಮ್ಮ ವರ್ಗಣೆದಾರರ ಲಿಸ್ಟಿನಲ್ಲಿ ಸೇರಿಸಿಕೊಂಡು ಅವರಿಗೆ ಪತ್ರಿಕೆ ಕಳಿಸಬೇಕು." – ವ್ಯಾ. ಅ. ಹೆರಗಲ್ (ಶಾಲಾ ಮಾಸ್ತರ)

ಪತ್ರಿಕೆಯೊಂದನ್ನು ಶುದ್ಧಾಂಗವಾಗಿ ಮೆಚ್ಚಿಕೊಂಡು ಇತರ ಅನೇಕರಿಗೆ ಚಂದಾದಾರರಾಗಿರೆಂದು ಹೇಳುವುದೇ, ಅಲ್ಲದೆ, ಚಂದಾಹಣವನ್ನು, ತಾವಾಗಿ ಕೂಡಿಸಿ ಕಳಿಸುವುದು ಈಗಿನ ಕಾಲದ ಚಂದಾದಾರರಲ್ಲಿ ಕಾಣುವುದುಂಟೆ? ಕೆಲವರು ಚಂದ್ರಿಕೆಗೆ ೨೫ರ ವರೆಗೂ ಹೊಸ ಚಂದಾದಾರರನ್ನು ಮಾಡಿಕೊಟ್ಟರಂತೆ. ಮುಳಗುಂದದ ಇಬ್ಬಿಬ್ಬರು ಸೇರಿ ಒಂದು ರವಿವಾರ ಊರಲ್ಲಿ ತಿರುಗಾಡಿ ೫೦–೬೦ ಜನ ಹೊಸ ಚಂದಾದಾರರನ್ನು ಮಾಡಿದರಂತೆ!

ಇನ್ನು ಮೈಸೂರ ಸರಣಿಯ ವೈಶಿಷ್ಟ್ಯ ಬೇಕೆ? "ಚಂದ್ರಿಕೆಯು (ಬೆಳುದಿಂಗಳು) ಸದಾ ಆಶ್ರಿತಳು. ಚಂದ್ರನ ವೃದ್ಧಿ–ಕ್ಷಯವನ್ನನುಸರಿಸಿ ತನ್ನ ಶಕ್ತಿಯನ್ನು ತೋರಿಸುವಳು. ಈ ಸದ್ಬೋಧ ಚಂದ್ರಿಕೆಯಾದರೂ ವೃದ್ಧಿಯನ್ನು ಮಾತ್ರ ಹೊಂದುತ್ತಿರುವ ಗ್ರಂಥಕರ್ತರೆಂಬ ಶುಕ್ಲಪಕ್ಷದ ಚಂದ್ರನನ್ನೇ ಆಶ್ರಯಿಸಿರುವದರಿಂದ ನಿರಾತಂಕವಾಗಿ ತನ್ನ ಸಾಮರ್ಥ್ಯವನ್ನು ಪ್ರಕಟಿಸುವಳು. ಈ ಚಂದ್ರಿಕೆಗೆ ಮಾತ್ರ ಯಾವಾಗಲೂ ಶುಕ್ಲಪಕ್ಷದ ಪೌರ್ಣಿಮೆಯೇ ಇರಲಿ." – ವೈ. ಕೃಷ್ಣಶಾಸ್ತ್ರಿ, ಶೃಂಗೇರಿ

ಇದಲ್ಲವೆ ಸ್ತ್ರೀ ಪ್ರಕೃತಿಗೆ ಉದಾಹರಣೆ! ಇನ್ನೊಂದು, ಮೈಸೂರ ಕಡೆಯ ಪತ್ರ ಅದಕ್ಕೂ ಮುಂದೆ ಹೋಗಿದೆ. "ಚಂದ್ರಿಕೆ ಲೋಕಾನಂದಿನಿಯಹುದು. ಅದನ್ನಾದರಿಸದವನು ಪಶುತಲ್ಯನೇ ಸರಿ. ನಾನು ನನ್ನ ಪತ್ರಿಕೆಯೊಡನೆ ನನ್ನ ಆನಂದಪಾತ್ರಳಾದ ಚಂದ್ರಿಕೆಗೂ ಯಥೋಚಿತ ಸಹಾಯ ಮಾಡಲು ಸಂಕಲ್ಪಿಸಿರುವೆನು. ಸದ್ಯಕ್ಕೆ ಇಬ್ಬರು ವರ್ಗಣೆದಾರರನ್ನು ಮಾಡಿರುವೆನು."–

"ನನ್ನ ಪತ್ರಿಕೆಯೊಡನೆ" ಅಂದರೆ, ಇವರೂ ಒಂದು ಪತ್ರಿಕೆಯ ಸಂಚಾಲಕರೆ? ಹೌದು. ಅವರು ಇನ್ನಾರೂ ಅಲ್ಲ, ಚಾಮರಾಜನಗರದಿಂದ ಹೊರಡುತ್ತಿದ್ದ ಸುಪ್ರಸಿದ್ಧ ಪತ್ರಿಕೆ 'ಕರ್ಣಾಟಕ ಕಾದಂಬರೀ ಸಂಗ್ರಹ'ದ ಸಂಪಾದಕರು. ಇವೆಲ್ಲ ಪತ್ರಗಳನ್ನು ಮೀರಿಸುವಂತೆ ಒಬ್ಬರು ಬರೆದಿದ್ದಾರೆ.

"ಚಂದ್ರಿಕೆಯು ಹ್ಯಾಗೆ ಇರಲಿ, ಪದ್ಮನಯನಾ ಎಂಬುವ ಕೀರ್ತಿಶಾಲೀ ಮಗಳನ್ನು ಹಡೆದಿದ್ದಾಳೆ. ಈ ಉಭಯ ಸ್ತ್ರೀಯರನ್ನು ಪುರುಷರು ಸ್ತೋತ್ರ ಮಾಡಿ, ಸಹಾಯ ಮಾಡಲು ಮುಂದೆ ಬಂದವ್ವರಲ್ಲಿ ನನಗೇನೂ ಮಹತ್ವ ಕಾಣುವುದಿಲ್ಲ. ಸ್ತ್ರೀಯರು ಪುರುಷರನ್ನೂ ಪುರುಷರು ಸ್ತ್ರೀಯರನ್ನು ವರ್ಣನೆ ಮಾಡುವದು ಸಾಹಜಿಕವೇ. ಅದಿರಲಿ, ನನಗೆ ಎಂಥ ತ್ರಾಸವಿದ್ದರೂ ಅವರಿಬ್ಬರನ್ನು ನೆಸೆದರೆ ಸಾಕು. ಈ ಉಭಯತರನ್ನು ಕಳಿಸಿಕೊಡುವವರ ದೆಶೆಯಿಂದ ಪತ್ರಾ ಹಾಕಿದ್ದು ಇನ್ನೂ ಕಳಿಸಿಕೊಡಲಿಲ್ಲ. ನಮ್ಮ ತಂಗಿಯರಾದ ಚಂದ್ರಿಕೆ, ಪದ್ಮನಯನಾ ಇವರನ್ನು ಕೂಡ್ಲೇ ಕಳಿಸಿಕೊಡಬೇಕು." – ಯಮುನಾಸಾನಿ(!) ನಾಯ್ಕಿಣೆ, ಕಾಮನಕಟ್ಟೆ, ಧಾರವಾಡ.

ನಾಲ್ಕನೆಯ ವರ್ಷದ ಸುರುವಿಗೆ ೭೩೦೦ ಜನ ಚಂದಾದಾರರಿದ್ದರೆಂದು ಹೇಳಿತಷ್ಟೆ. ಅದಕ್ಕೂ ಹೆಚ್ಚಿನ ಸಂಖ್ಯೆಗೆ ಆಶಾದಾಯಕ ವಾತಾವರಣವೇನಿರಲಿಲ್ಲ. ವರ್ಷಾರಂಭಕ್ಕೆ ೨೦೭೬ ವಿ.ಪಿ. ಕಳಿಸಿದಾಗ ಅದರಲ್ಲಿ ೫೦೦ ಜನ ಹಿಂದಿನ ವರ್ಷದ ಚಂದಾದಾರರು ವಿ.ಪಿ.ಯನ್ನು ಮರಳು ಬಿಟ್ಟಿದ್ದರು. ಜೊತೆಗೆ ಪ್ಲೇಗಿನ ಹಾವಳಿ ಮತ್ತು ಬರಗಾಲದ ಕರಿ ಛಾಯೆ ಬೇರೆ. ಈ ಹಿಂದೆ ಧಾರಾವಾಹಿಯಾಗಿ ಪ್ರಕಟವಾದ ಮೂರು ಕಾದಂಬರಿಗಳನ್ನು ಪ್ರತ್ಯೇಕ ಪುಸ್ತಕರೂಪದಲ್ಲಿ ಮುದ್ರಿಸಿ ಹೊಸ ಚಂದಾದಾರರಿಗೆ ಸವಲತ್ತಿನ ದರದಲ್ಲಿ (ರೂ. ೧–೧೦–೦ ಬೆಲೆಯದು ರೂ. ೧ಕ್ಕೆ ಮಾತ್ರ) ಮಾರಾಟಮಾಡುವ ಇನಾಮಿನ ಯೋಜನೆ ಇದ್ದಿತು. ಅದರಿಂದೇನು ಹೆಚ್ಚಿನ ಆಮಿಷ ತೋರಿರಲಿಲ್ಲ.

ಆದರೂ ಹಳ್ಳಕ್ಕೆ ನೀರೇರಿ ಬಂದಂತಾಯಿತು! ಐದನೆಯ ವರ್ಷದಲ್ಲಿ ನೆಲೆಗೊಂಡ ಮೇಲೆ ಚಂದಾದಾರರ ಸಂಖ್ಯೆ ನಾಲ್ಕು ಸಾವಿರಕ್ಕೆ ಏರೀತು ಎಂಬ ಅಂದಾಜಿನಲ್ಲಿ ಸಂಚಾಲಕರು ಇದ್ದಾಗ, ನಾಲ್ಕನೆಯ ವರ್ಷದಲ್ಲಿಯೇ ೮ –೯ ತಿಂಗಳಲ್ಲಿ ಹಾಗಾಗಿ ಬಿಟ್ಟಿತು! ಆ ವರ್ಷದುದ್ದಕ್ಕೂ ಹೊಸ ಚಂದಾದಾರರಿಂದ ಮ. ಆ. ಬರುತ್ತಿದ್ದವು – ಪ್ರತಿದಿನವೂ, ಹಾಗೆ ಬಾರದ 'ಬಂಜೆ' ದಿನಗಳೆಂದರೆ ಆ ವರ್ಷದಲ್ಲಿ ೭ ಮಾತ್ರ ಎಂದು ವರದಿ ಮಾಡಿದ್ದಾರೆ. ಒಂದು ದಿನವಂತೂ ೪೬ ಮ. ಆ. ಬಂದಿದ್ದವಂತೆ! ಆ ಹಿಗ್ಗಿನಲ್ಲಿ "ಚಂದಾದಾರರು ಚಂದ್ರಿಕೆಯನ್ನು ಹೊಟ್ಟೆಯ ಮಗಳೆಂದು ತಿಳಿದು ಮನಮುಟ್ಟಿ ಆಕೆಯ ಸುಖದುಃಖಗಳನ್ನು ವಿಚಾರಿಸುತ್ತಿರುವರು. ಅಂತೆಯೇ ಹುಡಿಗೆಯು ವರ್ಗಣೆದಾರರೆಂದರೆ ಬಿದ್ದು ಸಾಯುತ್ತದೆ" ಎಂದು ಸಂಚಾಲಕರು ಪರಸ್ಪರ ಹೊಗಳಿಕೊಂಡರು.

ಇದಲ್ಲದೆ ಈ ಪ್ರಸಾರದ ಹೆಚ್ಚಳದ ಬಗ್ಗೆ ವಿಶಿಷ್ಟವಾದ ಅಂಕಿ ಸಂಖ್ಯೆಗಳನ್ನು ಕೊಟ್ಟಿದ್ದಾರೆ. ಆ ಪ್ರಕಾರ ಚಂದ್ರಿಕೆಯ ಪ್ರಸಾರವು ೨೭ ಜಿಲ್ಲೆಗಳಲ್ಲಿ ೧೬೦ ಸಬ್‌ಪೋಸ್ಟ್‌ಗಳಲ್ಲಿ, ೧೨೦೦ ಊರುಗಳಲ್ಲಿ ಇದ್ದಿತು. ಜಾತಿಯ ಪ್ರಕಾರ ಲೆಕ್ಕ ಬೇಕೆ? ಇಕೊಳ್ಳಿ; ೨೨೦೦ ಜನ ಬ್ರಾಹ್ಮಣರು; ೧೨೦೦ ಜನ ವೀರಶೈವರು; ೫೦ ಮುಸಲ್ಮಾನರು; ೨೫ ಕ್ರೈಸ್ತರು; ೫೨೫ ಜನ ಕುರುಬರು ಇತ್ಯಾದಿ. ಉದ್ಯೋಗದ ದೃಷ್ಟಿಯಿಂದ – ೧೬೦೦ ಜನ ನೌಕರರು; ೨೩೦೦ ಜನ ವ್ಯಾಪಾರ, ಕೃಷಿ ಮುಂತಾದ ಉದ್ಯೋಗದಲ್ಲಿದ್ದವರು,

ಗವಗುಟ್ಟಿ ನಡುಗುವ ಆ ಪುಟ್ಟ ಘುಡುಗೆಯ ತಡಮಾಡಿ ಹೋಗುವ ತನ್ನ ಕೆಟ್ಟ ಚಾಳಿಗಾಗಿ ಎಷ್ಟು ಅಸಮಾಧಾನ ಪಡುತ್ತಾಳೆಂದು ನಾವು ಬಲ್ಲೆವು."

ಇಂಥ ತಕರಾರುಗಳಿಗೆ ಉತ್ತರ ಕೊಡುವಾಗ, ಸಂಚಾಲಕ ಮಹಾಶಯರು ವ್ಯಕ್ತಪಡಿಸಿದ ವ್ಯಂಗ್ಯದ ಮಾದರಿ ಇಂತಿದೆ.

"ಇನ್ನು ಕೆಲವರು, ನೀವು ವೇಳೆಗೆ ಸರಿಯಾಗಿ ಕಳಿಸದಿದ್ದರೆ ಚಂದ್ರಿಕೆಯನ್ನೇ (ಚಂದ್ರಿಕೆಯ ಆಫೀಸನ್ನೋ ಏನೋ?) ಬಂದು ಮಾಡುವೆವೆಂದು ಹೆದರಿಕೆ ಹಾಕಿ ಬರೆಯುವರು! ಕೆಲವರು ಬಿಟ್ಟುಹೋದ ಹೆಂಡತಿಗೆ ವರ್ತಮಾನ ಪತ್ರಗಳಲ್ಲಿ ಕೊಡುವ ನೋಟೀಸಿನ ಭಾಷೆಯನ್ನುಪಯೋಗಿಸಿ ಪತ್ರ ಬರೆಯುವರು!! ಒಂದೇ ರೂಪಾಯಿಯಿಂದ ಚಂದ್ರಿಕೆಯ ಮೇಲೆ ಸ್ವಾಮಿತ್ವ ಸ್ಥಾಪಿಸುವ, ಅನುಭವ ಶೂನ್ಯವಾದ ಇಂಥ ಪತ್ರಗಳಿಂದ ಖೇದ ಸಂತಾಪಗಳುಂಟಾಗುವವು. ಕನ್ನಡಿಗರು ಚಂದ್ರಿಕೆಯ ಪಾಲಕರು ಸರಿ; ಆದರೆ ಅವರಲ್ಲಿ ಅತಿ ನಿಷ್ಠುರತೆಯೂ ಮರ್ಮೋದ್ಘಾಟನದ ಲೇಖನ ಕೌಶಲ್ಯವೂ ಯೋಗ್ಯವಲ್ಲೆಂದು ನಮಗೆ ತೋರುತ್ತದೆ."

ಹಾಗಿದ್ದರೂ ಚಂದಾದಾರರೇ ಚಂದ್ರಿಕೆಯನ್ನು ಮುದ್ದಾಡಿಸುವರೆಂಬ ಮೂಲ ಭಾವನೆ ಬಿಟ್ಟುಹೋಗಿಲ್ಲ. ಅದಕ್ಕೆಯೇ ಬೇರೊಂದು ಸಂದರ್ಭದಲ್ಲಿ "ಎಂಥ ಬಡ ತಂದೆ-ತಾಯಿಗಳಾದರೂ ಎಂಟು ದಿನಕ್ಕೊಂದು ಬಿಲ್ಲಿಯಂತೆ ತಮ್ಮ ಮಕ್ಕಳ ತಿನಿಸಿಗಾಗಿ ವೆಚ್ಚ ಮಾಡುತ್ತಾರೆ. ಚಂದ್ರಿಕೆಯು ತಮ್ಮದೇ ಇನ್ನೊಂದು ಕೂಸೆಂದು ತಿಳಿದು ಸಂತೆಗೊಂದು ಬಿಲ್ಲಿಯಂತೆ ಕೊಡುತ್ತ ಹೋಗಲಿ".

ಚಂದ್ರಿಕೆಗೆ ಬಾಹ್ಯಸೌಂದರ್ಯವಿಲ್ಲ ಎನ್ನುವುದಕ್ಕೆ ಸಮರ್ಥನೆ ಇಂತಿದೆ: "ಐದು ವರ್ಷದ ಈ ಮಗುವನ್ನು ಮುದ್ದಾಡಲಿಕ್ಕೆ ಮೂರುಸಾವಿರ ಜನ ಮುಗಿಬಿದ್ದರೆ ಅವಳೇನು ಮಾಡಿಯಾಳು!" ಏನಿದ್ದರೂ ಹೆಚ್ಚಿನ ಹಣವೆಲ್ಲ ಪಾಠಶಾಲೆಗೆ ಹೋಗಬೇಕಾದ ಸಂದರ್ಭವನ್ನು ಈ ಹಿಂದೆ ವಿವರಿಸಲಾಗಿದೆ; ಚಿತ್ರ ಮುಂತಾದ್ದನ್ನು ಹಾಕುವದಕ್ಕಾಗಿ ದುಡ್ಡು ಎಲ್ಲಿದೆ?

ಆಫೀಸಿನ ಅವ್ಯವಸ್ಥೆ ಎಂದರೆ - ಒಬ್ಬರ ಹೆಸರಿನಲ್ಲಿ ಎರಡೆರಡು ವ್ಹಿ.ಪಿ. ಹೋಗುವುದು, ಕಾದಂಬರಿಯ ಪುಟಗಳು ತಿರುವು ಮುರುವಾಗುವುದು, ಒಂದೇ ಊರಿನ ವರ್ಗಣಿದಾರರಿಗೆ ಪತ್ರಿಕೆ ೧೫-೨೦ ದಿನಗಳ ಅಂತರದಲ್ಲಿ ತಲುಪುವುದು ಇದಕ್ಕೆ ಉತ್ತರ ರೂಪವಾಗಿ ಸಂಚಾಲಕರು ಸೊಗಸಾದ ಉಪಮೆ ಕೊಟ್ಟಿದ್ದಾರೆ. "೪೦೦೦ ಜನರು ಊಟಕ್ಕೆ ಕುಳಿತಾಗ ಹತ್ತಕ್ಕಿಂತ ಕಡಿಮೆ ಜನರು ಬಡಿಸಲಿಕ್ಕೆ ಎದ್ದರೆ ಈ ಬಗೆಯ ಅವ್ಯವಸ್ಥೆ ಆಗೋದೇ". ಮುಂದುವರಿದು, "ಚಂದ್ರಿಕೆಯು ತೀರ ಸಣ್ಣ ಹಳ್ಳಿಯಲ್ಲಿ ಹುಟ್ಟಿರುವಳು. ಅದರ ಚಾಲಕರು ಅಷ್ಟೊಂದು ವಿದ್ವಾಂಸರಲ್ಲ. ರೇಲ್ವೆ ಮಾರ್ಗ, ಆಳು ಹೋಳು, ಅನುಭವಿಕ ನೌಕರರು ಮುಂತಾದ ಸಾಧನ ಸಂಪತ್ತು ಇಲ್ಲ. ಇನ್ನೂ ಎಷ್ಟೋ ತೊಂದರೆಗಳಿದ್ದರೂ ಚಂದ್ರಿಕೆಯು ಕಲ್ಲುಪಡಿಯೊಳಗಿನ ಕರಿಕೆಯಂತೆ ಗಟ್ಟಿಯಾಗಿ ಬೇರೂರಿ ಬೆಳೆಯುತ್ತಿದ್ದಾಳೆ" ಎಂದಿದ್ದಾರೆ.

ಚಂದಾದಾರರು ಪತ್ರಿಕೆಯನ್ನು ಈ ರೀತಿ ಮುದ್ದಾಡಿಸಿದಾಗ ಆಕೆಗೆ ನಾಲ್ಕು ವರ್ಷ ಮಾತ್ರ ತುಂಬಿದ್ದಿತು. ಮುಂದೆ ಸಂಚಾಲಕರು ಎಣಿಸಿದ್ದಂತೆ ಈ ಎತ್ತಿ ಮುದ್ದಾಡುವವರ ಸಂಖ್ಯೆ ಏರುತ್ತ ಏರುತ್ತ ೩೦೦೦ ದ ಅಂಕಿಯನ್ನು ಮುಟ್ಟಿಬಿಟ್ಟಿತು! (ಅದು ಚಂದ್ರಿಕೆಯ ಏಳನೆಯ ವರ್ಷ) ಅಷ್ಟು ಪ್ರತಿಗಳನ್ನು ಹ್ಯಾಂಡ್ ಪ್ರೆಸ್ಸಿನ ಮೇಲೆ ತಿಂಗಳು ತಿಂಗಳು ತೆಗೆಯುವುದು ಅದೆಂತು ಸಾಧ್ಯ? ಹೊಸ ದೊಡ್ಡ ಮುದ್ರಾಯಂತ್ರ, ಕೊರೆಯುವ ಯಂತ್ರಗಳನ್ನು ತರಿಸಬೇಕೆನ್ನುವ ವಿಚಾರ ಕಳೆದೆರಡು ವರ್ಷಗಳಿಂದಲೂ ಇದ್ದಿತು.

"೨೮೦೦ ರೂ. ಕೊಟ್ಟು ಒಮ್ಮೆ ಗಟ್ಟಿ ಮನಸ್ಸು ಮಾಡಿ ಚಂದ್ರಿಕೆಯು ಯಂತ್ರಗಳನ್ನು ಮೊನ್ನೆ ತರಿಸಿ ಬಿಟ್ಟಳು. " ನೀನು ಹೊತ್ತಿಗೆ ಸರಿಯಾಗಿ ಬರುವುದಿಲ್ಲ. ನಿನ್ನ ಮುದ್ರಣದ ಕೆಲಸವು ನೆಟ್ಟಗಾಗುವುದಿಲ್ಲ" ಎಂದು ಚಂದಾದಾರರ ಕಡೆಯಿಂದ ಅನಿಸಿಕೊಂಡು ಸಾಕಾಗಿದ್ದ ಚಂದ್ರಿಕೆಗೆ ಇತ್ತ ಬಿದ್ದರೆ ಕೆರೆ, ಅತ್ತ ಬಿದ್ದರೂ ಕೆರೆ ಎಂಬ ಗತಿಯಾಗಿತ್ತು. ಹೊಸ ಯಂತ್ರಗಳನ್ನು ತರಿಸಿಬಿಡಬೇಕೆಂದರೆ ಆಕೆಯ ಕೈಯಲ್ಲಿ ದುಡ್ಡು ಇದ್ದಿಲ್ಲ. "ದೇವರೇ, ಇಷ್ಟು ಜನ ಚಂದಾದಾರರಾದರೂ ಯಾಕೆ ಕೂಡಿದ್ದಾರು, ಎಷ್ಟಂತ ಅವರಿಗೆ ತ್ರಾಸ ಕೊಡಬೇಕು" ಎಂದು ಆಕೆ ಏನೂ ತೋಚದೆ ಸುಮ್ಮನೆ ಕೂತುಬಿಡುತ್ತಿದ್ದಳು."

ಆಗ ಶ್ರೀ ಶೇಷಾಚಲ ಸದ್ಗುರುಗಳು ಧೈರ್ಯ ತುಂಬಿ ಆಶೀರ್ವದಿಸಿದರಂತೆ. ಮುಂಬಯಿಗೆ ಹೋಗಿ ಮಶೀನ್ ತರಲು ಯ. ಗು. ಕುಲಕರ್ಣಿ, ಭಿ. ಪ. ಕಾಳೆ ಅವರನ್ನು ಕಳಿಸುವಾಗ ಗಾಡಿ ಹಾಸಲನ್ನು ಸಹ ಕೈಗಡ ಪಡೆಯುವ ದುಸ್ಥಿತಿ! ಆದರೂ ಹಾವೇರಿಯ ಬಾದಾಮಿಯ ನಾಯಕರು ಬರಿಯ ಪ್ರಾಮಿಸರಿ ನೋಟಿನ ಮೇಲೆ ದೊಡ್ಡ ಮೊತ್ತದ ಸಾಲ ಕೊಟ್ಟರು. 'ವ್ರತಸ್ಥ ಕುಮಾರಿಕೆಯು ಕೈಕೊಂಡಿದ್ದ ವೈದಿಕ ವಿದ್ಯಾದಾನದ ಮಹತ್ವವೇ ಗುರುತರವಾದದ್ದು. ಆ ಕೋಮಲೆಯ ಮೇಲಿದ್ದ ಶ್ರೀಗುರುವಿನ ಕೃಪಾದೃಷ್ಟಿಯೇ ಅಗಾಧವಾದದ್ದು. ಇಲ್ಲದಿದ್ದರೆ ಒಂದೇ ದಿನದಲ್ಲಿ ಆ 'ಕೂಸಿ'ನ ಕೈಯೊಳಗೆ ೨೮೦೦ ರೂ. ಹ್ಯಾಗೆ ಬಂದಾವು?' ಎಂಬ ಯಥಾ ಪ್ರಕಾರದ ಉದ್ಗಾರ ತೆಗೆದರು, ಸಂಚಾಲಕರು.

ಮಶೀನ್ ತರಿಸಿದ್ದರ ಸಾಲದ ಹೊರೆ, ಅಷ್ಟಿಷ್ಟಲ್ಲ. ಆ ಸಾಲ ತೀರುವಿಕೆಗೆ ಮರಳಿ ಚಂದಾದಾರರ ಮೊರೆ ಹೋಗಬೇಕಲ್ಲ. "ಚಂದಾದಾರರೇ ಚಂದ್ರಿಕೆಯ ಆಶ್ರಯದಾತರು ಆಗಿರುವದಿಂದ ಅವರು ವಕ್ರದೃಷ್ಟಿಯಿಂದ ನೋಡಿಬಿಟ್ಟರೆ, ಚಂದ್ರಿಕೆಯ ಜಿಬ್ಬಿಯಾಗಬಹುದು. ಯಾವ ಸಾವುಕಾರರೇ, ಆಗಲಿ ಆಶ್ರಯದಾತೃಗಳ ಮೋರೆ ನೋಡಿಯೇ ಸಹಾಯ ಮಾಡುವರು" ಎಂಬ ಪೀಠಿಕೆ ಹಾಕಿ, ಯಾವ ಯಾವ ರೀತಿಯಲ್ಲಿ ಸಹಾಯ ಮಾಡಬಹುದೆಂಬುದರ ವಿವರಗಳನ್ನು ಕೊಟ್ಟರು. ಅಲ್ಲದೆ ೭ ಸಾವಿರ ಚಂದಾದಾರರಿಂದ ಬರುವ

೭ ಸಾವಿರ ರೂ. ಯ ವೆಚ್ಚದ ವಿವರಗಳನ್ನೂ ಈ ಹಿಂದಿನಂತೆ ಕೊಟ್ಟು, ಒಟ್ಟಿಗೆ ೫೬೦೦ ರೂ. ಕೊರತೆಯ ಅಂದಾಜನ್ನೂ ಮಂಡಿಸಲಾಯಿತು.

ಇಷ್ಟೊಂದು ಅಧಿಕ ಪ್ರಸಾರವುಳ್ಳ ಪತ್ರಿಕೆಯೇ ಆಗಿನ ಕಾಲಕ್ಕೆ ಇಲ್ಲದಿದ್ದಾಗ್ಯೂ ಪತ್ರಿಕೆ ಆರ್ಥಿಕ ಮುಗ್ಗಟ್ಟಿನಲ್ಲಿದ್ದಿತು. ಆದರೆ ಈ ಹಿಂದೆಯೂ ಕೊರತೆಯ ಬಜೆಟ್ ಇದ್ದುಕೊಂಡು, ಪತ್ರಿಕೆ ಬೆಳೆಯುತ್ತ ಹೋದಂತೆ ಮುಂದೂ ಹಾಗೆ ಆಗಬಹುದಿತ್ತು. ಅದಕ್ಕೆ ಹೊಸ ದೊಡ್ಡ ಮುದ್ರಾಯಂತ್ರವು ಅನುಕೂಲಕರವಾಗಿದ್ದಿತು. ಆದರೆ ಪ್ರಥಮ ಮಹಾಯುದ್ಧವು ಆರಂಭವಾಗಿ ಅನೇಕ ರೀತಿಯಿಂದ ಚಂದ್ರಿಕೆಗೆ ಹೊಡೆತ ಬಿತ್ತು. ಇತ್ತ ಸಾಲ ತೀರುವಿಕೆಗೆ ಪತ್ರಿಕೆಯ ವಾರ್ಷಿಕ ವಂತಿಗೆಯನ್ನು ಒಂದು ರೂಪಾಯಿಯಿಂದ ಒಂದು ಕಾಲು ರೂ.ಗೆ ಏರಿಸಿದಾಗ, ಜನ ಸಹಕರಿಸಲಿಲ್ಲ. ಕಾಗದ, ಮಸಿ ಇತ್ಯಾದಿ ವೆಚ್ಚಗಳು ಏರಿ, ಚಂದ್ರಿಕೆಗೆ ಮುಗ್ಗಟ್ಟು ಒದಗಿದಂತೆ ಜನರಿಗೂ ನಿತ್ಯ ಜೀವನದ ವೆಚ್ಚಗಳು ಏರಿ ತೊಂದರೆ ಎನಿಸಿರಬೇಕು. ಅದಕ್ಕಿಂತಲೂ ಇಷ್ಟು ವರ್ಷ ಇಳಿಸಿದ ಬೆಲೆಯಲ್ಲಿ ಪತ್ರಿಕೆಯನ್ನು ಪಡೆದು ಸವಿ ಹತ್ತಿರುವಾಗ, ಈ ಬೆಲೆಯೇರಿಕೆ ಜನಕ್ಕೆ ರುಚಿಸಲಿಲ್ಲ. ಅಂದಿನಿಂದ (೧೯೧೫) ಚಂದ್ರಿಕೆಯನ್ನು ಮುದ್ದಾಡುವವರ ಸಂಖ್ಯೆ, ೭ ಸಾವಿರದಿಂದ ೬; ೬ ರಿಂದ ೫; ೫ ರಿಂದ ೪ಕ್ಕೆ ಇಳಿಯುತ್ತ ಹೋಯಿತು. ಈ ಹೊಡೆತ ಸಾಲದೆಂಬಂತೆ, ಶೇಷಾಚಲ ಸಾಧುಗಳು ನಿರ್ಯಾಣ ಹೊಂದಿದರು. ಆಗ ಚಂದ್ರಿಕೆಯ ಸಂಚಾಲಕರಿಗೂ ಆನಂದವನದ ಇತರ ಹಿರಿಯರಿಗೂ ಹೊಂದಿಕೆಯಾಗದೇ ಸಂಚಾಲಕರು ಹಾವೇರಿಗೆ ಹೊರಟು ಹೋದರು.

ಯಾರು ಈ ಸಂಚಾಲಕರು? ಅನೇಕರು ಅವರಾರೆಂಬುದನ್ನು ಊಹಿಸಿಯೇ ಇದ್ದಾರೆ. 'ಸದ್ಬೋಧ ಚಂದ್ರಿಕೆ' ಎಂಬ ಪತ್ರಿಕೆಯನ್ನು ಹೊರಡಿಸಬೇಕೆನ್ನುವ ವಿಚಾರ ಮಾಡಿದವರೂ, ಅದರಲ್ಲಿ ಸುರಸ ಸುರಮ್ಯ ಕಾದಂಬರಿಗಳನ್ನು ಪ್ರಕಟಿಸುವ ಮೂಲಕ ಪತ್ರಿಕೆಯ ಪ್ರಸಾರವನ್ನು ಅತ್ಯಧಿಕ ಗೊಳಿಸಿದವರೂ ಆದ ಗಳಗನಾಥರೇ ಅದರ ಸಂಪಾದಕ –ಸಂಚಾಲಕ, ಏನೆಲ್ಲ ಆಗಿದ್ದರು. ಇದೂ ಪರಿಚಿತ ವಿಷಯವೇ. ಆದರೆ ಚಂದ್ರಿಕೆಯನ್ನು ಓರ್ವ ಬಾಲಿಕೆಯಾಗಿ ವ್ಯಕ್ತೀಕರಿಸಿ, ತಾವೇ ಅನೇಕ ಬಾರಿ ಅವಳಲ್ಲಿ ಪರಕಾಯ ಪ್ರವೇಶ ಮಾಡಿ, ಪತ್ರಿಕೆಯ ಪೋಷಕರಾದ ಚಂದಾದಾರರೊಡನೆ ಜ್ವಲಂತ ಸಂಪರ್ಕವನ್ನು ಬೆಳೆಸಿದ್ದುದು 'ನ ಭೂತೋ, ನ ಭವಿಷ್ಯತಿ' ಸಾಲಿಗೆ ಸೇರುವಂತಹುದಾಗಿದೆ.

ಆದರೆ ಪತ್ರಿಕೆಯ ಆರಂಭ ಕಾಲದ ಈ ಊರ್ಜಿತ ಸ್ಥಿತಿಗೆ ಅವರೇ ಬಹುಮಟ್ಟಿಗೆ ಕಾರಣರಾದರೂ, ಅವರಿಂದಲೇ ಪತ್ರಿಕೆ ನಡೆಯಿತು. ಮುನ್ನಡೆಯಿತು ಎಂಬ ಮಾತು ಎಷ್ಟರ ಮಟ್ಟಿಗೆ ನಿಜ? ಆನಂದವನದ ಆಶ್ರಯವನ್ನು ಬಿಟ್ಟು, ಹಾವೇರಿಗೆ ಹೋಗಿ ಆನಂದವನದ್ದೇ ಪ್ರತಿ ಸೃಷ್ಟಿ, ಮಾಡಹೊರಟ ಅವರಿಗೆ ಯಶಸ್ಸು ಸಿಕ್ಕಲಿಲ್ಲವಲ್ಲ? ಯಾವದೊಂದು ಕಾರ್ಯಸಿದ್ಧಿಗೆ, ವ್ಯಕ್ತಿಯ ಜೊತೆಗೆ, ಕಾಲ ಮತ್ತು ಪರಿಸರಗಳೂ ಕಾರಣವಾಗುತ್ತವೆ, ಎಂಬುದನ್ನು ನೆನೆಯಬೇಕು. ◆

✍ ಶ್ರೀ. ಹಾ.

## ೧೬. ಶ್ರೀಕೃಷ್ಣಸೂಕ್ತಿ

✍ ಡಾ. ಹಾ. ತಿ. ಕೃಷ್ಣೇಗೌಡ

ಶ್ರೀಕೃಷ್ಣಸೂಕ್ತಿ ಮಾಸಪತ್ರಿಕೆಯಾಗಿ ೧೯೦೬ರ ಜನವರಿಯಲ್ಲಿ ಜನ್ಮತಾಳಿತು. ಕೆರೋಡಿ ಸುಬ್ಬರಾಯರು ಈ ಪತ್ರಿಕೆಯ ಸ್ಥಾಪಕ ಸಂಪಾದಕರು. ಡೆಮ್ಮೆ ಆಕಾರದಲ್ಲಿ ೨೪ ಪುಟಗಳನ್ನೊಳಗೊಂಡಿರುತ್ತಿದ್ದ ಈ ಪತ್ರಿಕೆ ಆರಂಭದಲ್ಲಿ ಉಡುಪಿಯ ಹಿಂದೂ ಮುದ್ರಣಾಲಯದಲ್ಲಿ ಮುದ್ರಿತವಾಗುತ್ತಿತ್ತು. ಆಗ ಈ ಪತ್ರಿಕೆಗಿದ್ದ ವಾರ್ಷಿಕ ಚಂದಾಹಣ ಒಂದೂವರೆ ರೂಪಾಯಿಗಳು; ಬಿಡಿ ಸಂಚಿಕೆ ಎರಡು ಆಣೆಗಳು. ಚಂದಾಹಣಕ್ಕೆ ಬದಲಾಗಿ ಸ್ಟಾಂಪ್ ಕಳುಹಿಸುವವರು. ಒಂದು ರೂಪಾಯಿ ಒಂಬತ್ತು ಆಣೆಗಳ ಮೌಲ್ಯದ ಸ್ಟಾಂಪ್ ಕಳುಹಿಸಬೇಕಾಗಿತ್ತು! ಪತ್ರಿಕೆಯ ಮುಖಪುಟದ ಮೇಲ್ತುದಿಯಲ್ಲಿ "ಶ್ರೀಕೃಷ್ಣಸೂಕ್ತಿ" ಎಂಬ ಇಂಗ್ಲಿಷ್ ಬರಹ, ಅದರ ಕೆಳಗೆ ಕನ್ನಡದಲ್ಲಿ "ಶ್ರೀಕೃಷ್ಣಸೂಕ್ತಿ" ಎಂಬ ಇಂಗ್ಲಿಷ್ ಬರಹ, ಅದರ ಕೆಳಗೆ ಕನ್ನಡದಲ್ಲಿ "ಶ್ರೀಕೃಷ್ಣಸೂಕ್ತಿ" ಎಂಬ ಬರಹ, ಅದರ ಅಡಿಯಲ್ಲಿ ಮರದ ಕೆಳಗೆ ಹಸುವೊಂದನ್ನು ಒರಗಿ ಕೊಳಲು ನುಡಿಸುತ್ತಿರುವ ಶ್ರೀಕೃಷ್ಣನ ಚಿತ್ರವಿರುತ್ತಿತ್ತು.

ಈ ಚಿತ್ರದ ಕೆಳಗೆ "ಎ ಹೈಕ್ಲಾಸ್ ಮಂಥ್ಲಿ ಜರ್ನಲ್ ಇನ್ ಕೆನರೀಸ್" ಎಂಬ ಇಂಗ್ಲಿಷ್ ಬರಹವನ್ನು ಹಾಕಲಾಗುತ್ತಿತ್ತು. ಪತ್ರಿಕೆಯ ಒಳಪುಟದ ಆರಂಭದ ಮೇಲ್ತುದಿಯಲ್ಲಿ ಶ್ರೀಕೃಷ್ಣಸೂಕ್ತಿಯೆಂಬ ಬರಹ, ಅದರ ಕೆಳಗೆ

ಕಾಲೇ ವರ್ಷೇತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ
ದೇಶಸ್ಸ್ಯಾತ್ ಕ್ಷೋಭರಹಿತಃ ಸಜ್ಜನಾ ಸಂತು ನಿರ್ಭಯಾಃ

ಎಂಬ ಸಂಸ್ಕೃತ ಶ್ಲೋಕವಿರುತ್ತಿತ್ತು. ಸಂಪಾದಕರ ಮಾತುಗಳಾದ ಅನಂತರ ಲೇಖನಗಳಿರುತ್ತಿದ್ದವು. ಮೊದಮೊದಲು ಪತ್ರಿಕೆಗೆ

ವೆಂಕಟರಾವ್, ತುಳಸೀಬಾಯಿ (ಮಲ್ಲಿಗೆ), ಶಿವರಾಮ ಕಾರಂತ - ಮುಂತಾದವರು.

ಶ್ರೀಕೃಷ್ಣಸೂಕ್ತಿಯಲ್ಲಿ ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಎಲ್ಲ ಸಾಹಿತ್ಯ ಪ್ರಕಾರಗಳೂ, ಸ್ವತಂತ್ರ ಹಾಗೂ ಅನುವಾದಿತ ಬರಹಗಳೂ ಪ್ರಕಟವಾಗಿವೆ. ಕಾದಂಬರಿ, ಕಥೆ, ಕವನ, ಪ್ರಬಂಧ, ನಾಟಕ ಮೊದಲಾದ ಸಾಹಿತ್ಯ ಪ್ರಕಾರಗಳ ಸವಿಯನ್ನು ಆ ಕಾಲದ ಓದುಗರಿಗೆ ದೊರಕಿಸಿಕೊಡುವಲ್ಲಿ ಸೂಕ್ತಿಯ ಹಿರಿಮೆ ಕಂಡುಬರುತ್ತದೆ. ಕಾದಂಬರಿಗಳು, ನಾಟಕಗಳು ಈ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ವೈಚಾರಿಕ ಲೇಖನಗಳಿಗೂ ಸೂಕ್ತಿ ಎಡೆಮಾಡಿಕೊಟ್ಟಿತ್ತು. ಅನುವಾದಗಳಲ್ಲಿ ಬಂಗಾಳಿ ಭಾಷೆಯಿಂದ ವಿಪುಲವಾಗಿ ಕೃತಿಗಳು ಕನ್ನಡಕ್ಕೆ ಬಂದಿವೆ. ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಬರಹಗಳು ಬೋಧಪ್ರದವೂ ವಿಚಾರಪರಿಪ್ಲುತವೂ ಬಹುಜನಾಕರ್ಷಕವೂ ಆಗಿರುತ್ತಿದ್ದವು. ಈ ಲೇಖನಗಳು ಕನ್ನಡಿಗರ ಅಭಿರುಚಿಯನ್ನು ತಿದ್ದುವಲ್ಲಿ ಅಪಾರವಾಗಿ ನೆರವಾದುವು. ಸೂಕ್ತಿಯಲ್ಲಿ ಪ್ರಕಟವಾಗಿರುವ ಬರಹಗಳಲ್ಲಿ ಯಜ್ಞನಾರಾಯಣ ಅಡಿಗರ 'ಮೋಹಿನಿ' (ವಿಶಿಷ್ಟ ಪ್ರಬಂಧ ಸಂಕಲನ), ಎಂ. ಡಿ. ಆಳಸಿಂಗರಾಚಾರ್ಯರ 'ದೇಶಭಾಷೆಯ ಈಗಿನ ಸ್ಥಿತಿ, ಆರ್. ತಾತಾ ಅವರ 'ಪ್ರಭುಲಿಂಗ ಲೀಲೆ ಕಾವ್ಯದ ವಿಮರ್ಶೆ' ಹಾಗೂ 'ಕೊಟ್ಟೂರು ಬಸವಪುರಾಣದ ವಿಮರ್ಶೆ', ಆಲೂರ ವೆಂಕಟರಾಯರ 'ಕನ್ನಡಿಗರ ಭವಿತವ್ಯ', ಎಂ. ಎಸ್. ಕಾಮತರ 'ಪ್ರಾಚೀನ ಭಾರತದಲ್ಲಿ ಪತ್ರಲೇಖನ', ಎಸ್. ಜಿ. ರಂಗಸ್ವಾಮಯ್ಯಂಗಾರ್ ಅವರ 'ಹಾರಾಡುವ ಮೃಗಗಳು' - ಈ ಮೊದಲಾದ ಲೇಖನಗಳು ಉಲ್ಲೇಖನೀಯವಾದವುಗಳು. ಶ್ಮಶಾನ ಶೋಕ (ಗ್ರೇ ಕವಿಯ 'ಎ ಎಲಿಜಿ ಇನ್ ಕಂಟ್ರಿ ಚರ್ಚ್ ಯಾರ್ಡ್' ಎಂಬ ಕವನದ ಅನುವಾದ : ಎಸ್. ಜಿ. ಗೋವಿಂದರಾಜ ಅಯ್ಯಂಗಾರ್), ರಂಗಸೆಟ್ಟಿ (ಕಥನಕವನ, ವಿಲಿಯಂ ಕೌಪರ್ ಎಂಬ ಕವಿಯ ಜಾನ್ ಗಿಲ್ಪಿನ್ ಕವನದ ಅನುವಾದ : ಮಲ್ಲಿಗೆ), ಹೆಸರಿಸಬಹುದು. ಇವುಗಳ ಜೊತೆಗೆ 'ಸಮೂಲ ಭಾಷಾಂತರಗಳು' ಎಂಬ ಹೆಸರಿನಲ್ಲಿ ಅನೇಕ ಕವಿತೆಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಆ ಬಗೆಯ ಕವಿತೆಗಳನ್ನು ಮೂಲದೊಂದಿಗೆ ಪ್ರಕಟಿಸಿದ ಪತ್ರಿಕೆಗಳಲ್ಲಿ ಶ್ರೀಕೃಷ್ಣ ಸೂಕ್ತಿಯೇ ಮೊದಲನೆಯದು. ಇವುಗಳ ಜೊತೆಗೆ ವಿಚಾರವಿಮರ್ಶೆಯೊಡನೆ ಪ್ರಕಟವಾಗಿರುವ ಅನೇಕ ಸಂಪಾದಕೀಯ ಬರಹಗಳು ಬಹು ಬೆಲೆಯುಳ್ಳವಾಗಿವೆ. ◆

## ೧೭. ಶತಮಾನ ದಾಟಿದ 'ಕರ್ನಾಟಕ ವೈಭವ'

✍ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ

ಕಳೆದ ಶತಮಾನದ ಉತ್ತರಾರ್ಧದಲ್ಲಿ ಅಂದರೆ ಕ್ರಿ.ಶ. ೧೮೯೨ರ ಆಗಸ್ಟ್ ತಿಂಗಳಲ್ಲಿ ವಿಜಾಪುರದಿಂದ ಪ್ರಾರಂಭವಾದ ಕನ್ನಡ ರಾಷ್ಟ್ರೀಯ ವಾರಪತ್ರಿಕೆ 'ಕರ್ನಾಟಕ ವೈಭವ ಇಂದಿಗೂ ಜೀವಂತವಾಗಿದೆ. ಇಷ್ಟು ದೀರ್ಘ ಕಾಲ ಬಾಳಿದ ಪತ್ರಿಕೆ ಕನ್ನಡದಲ್ಲಿ ಬೇರೊಂದಿಲ್ಲ.

ಕರ್ನಾಟಕ ವೈಭವದ ಕಥೆ ರೋಚಕವಾಗಿದೆ. ಈ ಶತಮಾನದ ಮೊದಲಿನ ಮೂರು ದಶಕಗಳಲ್ಲಿ ಅದರ ಪ್ರಸಾರ ಅಂದು ಹರಿದು ಹಂಚಿ ಹೋಗಿದ್ದ ಕರ್ನಾಟಕದ ಎಲ್ಲ ಭಾಗಗಳಲ್ಲೂ ಇತ್ತು. ಒಂದು ಅರ್ಥದಲ್ಲಿ ಮೈಸೂರು ಮುಂಬಯಿ, ಮದ್ರಾಸ ಹಾಗೂ ಹೈದರಾಬಾದ ಕರ್ನಾಟಕದ ಜನರನ್ನು ಬೆಸೆಯುವ ಕೊಂಡಿಯಾಗಿತ್ತು.

ಮರಾಠೀಮಯವಾಗಿದ್ದ ಮುಂಬಯಿ ಕರ್ನಾಟಕದಲ್ಲಿ ಒಂದೊಂದು ಕಾಗದ ಪತ್ರಗಳು, ಅಸಲ ಅರ್ಜಿ, ವಕೀಲಪತ್ರ ಸ್ಥಾವರ ಜಂಗಮದಲ್ಲಿಯ ದರಖಾಸ್ತು ಸಾಕ್ಷೀದಾರರ ಯಾದಿ, ಖರ್ಚಿನ ಹಣದ ಪಾವತಿ. ವಕೀಲರ ಬದಲೀ ನೋಟೀಸುಗಳು ಗ್ರಾಮಸ್ಥರ ಉಪಯುಕ್ತವಾದ ಲಾವಣೀ ಪತ್ರಿಕೆ, ಪತ್ರಿಕೆಗಳ ರೈತರ ಪಾವತಿ ಬುಕ್ಕುಗಳು ಎಲ್ಲ ಮರಾಠಿಯಲ್ಲಿದ್ದುವು. ಗ್ರಾಮಸ್ಥರಿಗೆ ಗ್ರಾಮಲೆಕ್ಕಾಧಿಕಾರಿಗಳಿಗೆ, ಕಂದಾಯ ಇಲಾಖೆ-ಕೋರ್ಟು-ಕಚೇರಿಗಳಿಗೆ ಉಪಯುಕ್ತವಾದ ಈ ಎಲ್ಲ ನಮೂನೆಯ ಫಾರ್ಮುಗಳನ್ನು ಕನ್ನಡದಲ್ಲಿ ಮುದ್ರಿಸಲು ಒಂದು ಕನ್ನಡ ಮುದ್ರಣಾಲಯದ ಆವಶ್ಯಕತೆ ಇತ್ತು. ಅದನ್ನು ಮನಗಂಡು ಅಲ್ಲಿಯ ಕಲೆಕ್ಟರ ಆಫೀಸಿನಲ್ಲಿ (ಇಂದಿನ ಡೆಪ್ಯೂಟಿ ಕಮಿಶನರ) ಕೆಲಸ ಮಾಡುವ ಮೇಲಿನ ದರ್ಜೆಯ ಕೆಲವು ಗುಮಾಸ್ತರು ಕೂಡಿ ಕನ್ನಡದ ಅಭಿಮಾನ, ಜೊತೆಗೆ ಕಿಂಚಿತ್ ಲಾಭದಾಯಕ ಕೆಲಸವೆಂದು ಗ್ರಾಮಾಧಿಕಾರಿ ಮುದ್ರಣಾಲಯವನ್ನು ಪ್ರಾರಂಭಿಸಿದರು. ಅದರ ಹೆಸರೇ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಇದರೊಂದಿಗೆ ಅಂದು ಅದೇ ಆಗ ಪ್ರಸಿದ್ಧಿ ಪಡೆದ ವಿಜಾಪುರ ಹಾಗೂ ಮುಂಬಯಿ ಕರ್ನಾಟಕದಲ್ಲೆಲ್ಲ ಪ್ರಸಾರ ಹೊಂದಿದ ಲೋಕಮಾನ್ಯ ಟಿಳಕರ 'ಕೇಸರಿ' ಮರಾಠೀ ಪತ್ರಿಕೆಯು ಒಂದು ಕನ್ನಡ ಪತ್ರಿಕೆಯನ್ನೂ ಪ್ರಕಟಿಸಲು ಪ್ರಚೋದಿಸಿರಬೇಕು. ಎರಡೂ ಒಂದೇ ಕಾಲಕ್ಕೆ ಪ್ರಾರಂಭವಾಗಿವೆ. ಪತ್ರಿಕೆಯನ್ನು ಪ್ರಕಟಿಸುವಾಗ ಕೂಡ ರಾಷ್ಟ್ರೀಯತೆಯ ಅರಿವಿನೊಂದಿಗೆ ವ್ಯಾವಹಾರಿಕತೆಯನ್ನೂ ಮರೆತಿರಲಿಲ್ಲ. ಅಲ್ಲಿಯವರೆಗೂ ಕೋರ್ಟು-ಕಚೇರಿಗಳ ನೋಟೀಸು ತಿಳುವಳಿಕೆ ಪತ್ರ ಜಾಹೀರನಾಮೆ, ಹರಾಜುಗಳ ಪ್ರಕಟನೆ ಮರಾಠೀಯಲ್ಲೇ ಪ್ರಕಟವಾಗುತ್ತಿದ್ದುವು. ಕನ್ನಡದ ಜನ ಅದನ್ನೇ ಓದಿ ತಮಗೆ ಅನಿಸಿದ್ದನ್ನು ಹೇಳಬೇಕಾದರೆ

ಅದೇ ರೀತಿಯಲ್ಲಿ ಮರಾಠೀಯಲ್ಲೇ ಹೇಳಬೇಕಾಗುತ್ತಿತ್ತು. ಸೋಡಚೀಟಿಯ ನೋಟೀಸನ್ನು ಕೂಡ ಮರಾಠೀಯಲ್ಲೇ ಕೊಡಬೇಕಾಗುತ್ತಿತ್ತು. ಇವೆಲ್ಲವುಗಳ ಪರಿಣಾಮವೇ ಮುದ್ರಣಾಲಯ ಹಾಗೂ ಪತ್ರಿಕಾ ಪ್ರಕಟನೆಯ ಸಾಹಸಕ್ಕೆ ಈ ಯುವಕರು ಇಳಿದರು.

ಎಷ್ಟು ಜನ ಕೂಡಿಕೊಂಡು ಪ್ರಾರಂಭಿಸಿದರೆಂದು ಖಚಿತವಾಗಿ ಹೇಳಬರುವುದಿಲ್ಲವಾದರೂ ಮುದ್ರಣಾಲಯದ ವ್ಯವಸ್ಥಾಪಕರೆಂದು ಸರ್ವಶ್ರೀ ಅಣ್ಣಾಜಿ ಗೋಪಾಳ ಜೋರಾಪುರಕರ ಹಾಗೂ ಗುಂಡೇರಾವ ರಾಮಚಂದ್ರರಾವ ಮಣೂರಕರ ಇಬ್ಬರ ಹೆಸರುಗಳು ದೊರೆಯುತ್ತವೆ. ಆದರೆ ಮುದ್ರಣಾಲಯ ಹಾಗೂ ಪತ್ರಿಕೆಯನ್ನು ಪ್ರಾರಂಭಿಸುವಾಗ ಸಾರ್ವಜನಿಕರಿಂದ ಶೇರುಗಳನ್ನು ಕೂಡಿಸಿದ್ದರೆಂದು ಕಾಣುತ್ತದೆ. ಹದಿನೇಳು ವರುಷಗಳ ನಂತರ ತಮ್ಮ ಪತ್ರಿಕೆಯ ೪-೧೨-೧೯೨೯ ಸಂಚಿಕೆಯಲ್ಲಿ ಈ ಕುರಿತು ಒಂದು ಪ್ರಕಟನೆ ಇದೆ. ಅದರ ಪೂರ್ಣಪಾಠ ಹೀಗಿದೆ :

"ಕೆಳಗೆ ಸಹಿ ಮಾಡುವ ಪ್ರೊಪ್ರಾಯಟರ್ಸ ಹಾಗೂ ಮ್ಯಾನೇಜರ್ಸ, ಗ್ರಾಮಾಧಿಕಾರಿ ಪ್ರೆಸ್ ವಿಜಾಪುರ ಇವರ ಕಡಿಯಿಂದಾ ತಿಳುಹಿಸುವವರಲ್ಲಿ ಬರುತ್ತದಲ್ಲಾ - ಗ್ರಾಮಾಧಿಕಾರಿ ಪ್ರೆಸ್ ಕಂಪನಿ ಈಗ್ಗೆ ಕೆಲವು ದಿವಸಗಳ ಪೂರ್ವದಲ್ಲಿ ಕಂಪನಿ ಆಕ್ಟ್ ಪ್ರಕಾರ ಲಿಮಿಟೆಡ್ ಮಾಡಲ್ಪಟ್ಟಿದ್ದು, ಆದರೆ ಅದು ಕೆಲವು ಶೇಯರ ಹೋಲ್ಡರ ಜನರಿಗೆ ಫಾಯದೇಶೀರವಾಗಿ ಕಂಡು ಬಾರದ್ದರಿಂದ ಸದರೀ ಪ್ರೆಸ್ಸದ ಪೂರ್ವದ ಲಾಗಾಯತ ಚಾಲಕ ಹಾಗೂ ಮಾಲಿಕರಾದ ಮಿ।। ಗುಂಡೇರಾವ ರಾಮಚಂದ್ರರಾವ ಮಣೂರಕರ ಹಾಗೂ ಮಿ।। ಅಣ್ಣಾಜೀ ಗೋಪಾಳ ಜೋರಾಪುರಕರ ಇವರು ಸದರೀ ಗ್ರಾಮಾಧಿಕಾರೀ ಪ್ರೆಸ್‌ದ ಎಲ್ಲ ಮಾಲಿಕೀ ಹಕ್ಕನ್ನು ಶೇಯರ ಹೋಲ್ಡರ ಕಡಿಯಿಂದಾ ಮಾರಲಿಕ್ಕೆ ತೆಗೆದುಕೊಂಡಿದ್ದಾರೆ. ಈಗಿನ ಅದರ ಅಸ್ತಿತ್ವದ ವಿಷಯವಾಗಿ ಯಾರೂ ತಿಲಮಾತ್ರವಾದರೂ ಸಂಶಯ ತೆಗೆದುಕೊಳ್ಳಬಾರದು."

- ಎಂದು ಉಭಯತರು ಸಹಿ ಮಾಡಿ ಕೊಟ್ಟ ನೋಟೀಸು. ಮುದ್ರಣಾಲಯವು ಕಂಪನಿ ಆಕ್ಟ ಪ್ರಕಾರ ನೋಂದಾಯಿಸಿತ್ತೋ ಅಥವಾ ಅದರಲ್ಲಿ ಕರ್ನಾಟಕ ವೈಭವ ಪತ್ರಿಕೆಯೂ ಒಳಗೊಂಡಿತ್ತೋ ಎಂಬುದನ್ನು ಸ್ಪಷ್ಟವಾಗಿ ಹೇಳುವದಿಲ್ಲ. ಪ್ರಾರಂಭದ ಪತ್ರಿಕೆಗಳು ಅಣ್ಣಾಜಿ ಗೋಪಾಳ ಎಂಬ ಹೆಸರಿನಲ್ಲಿದ್ದರೆ ಮುಂದೆ ೨೫-೭-೧೯೧೮ ಗುಂಡೇರಾವ ಮಣೂರಕರ ಅವರ ಹೆಸರಿನಲ್ಲಿ ಪ್ರಕಟವಾಗಿವೆ.

## ಸಂಯುಕ್ತ ಉದ್ದೇಶ

ಹೀಗೆ ಕನ್ನಡ ಭಾಷೆಯ ಅಭಿಮಾನ ಹಾಗೂ ವ್ಯವಹಾರ ಈ ಎರಡರ ಸಂಯುಕ್ತ ಉದ್ದೇಶದಿಂದ ಪ್ರಾರಂಭವಾದ ಪತ್ರಿಕೆ ದಿನ ಕಳೆದಂತೆ ವ್ಯವಹಾರದ ಜೊತೆಗೆ ರಾಷ್ಟ್ರೀಯತೆಯ ಕಡೆಗೆ ವಿಶೇಷ ಗಮನಕೊಟ್ಟಿತು. ವಂಗಭಂಗ ಚಳವಳಿ, ಲೋಕಮಾನ್ಯ ಟಿಳಕರ ಕಾರಾಗೃಹ ವಾಸ ಇತ್ಯಾದಿಗಳ ಕಾಲದಲ್ಲಿ ಪತ್ರಿಕೆ ಉಗ್ರಸ್ವರೂಪವನ್ನು ತಾಳಿತು. ಬ್ರಿಟಿಷರನ್ನು ನೇರವಾಗಿ ಆಪಾದಿಸತೊಡಗಿತು. ಸಮಗ್ರ ಭಾರತದ ಸ್ವಾತಂತ್ರ್ಯ ಚಳವಳಿಯ ವೃತ್ತಾಂತವನ್ನು ಕನ್ನಡಿಗರಿಗೆ ಕೊಡತೊಡಗಿತು. ಅದರ ರಾಷ್ಟ್ರೀಯತೆ ಎಷ್ಟೊಂದು ಜಾಗ್ರತೆಯಾಗಿತ್ತೆಂದರೆ ೧೯೦೭ರಲ್ಲಿ ಬಾಬು ಅರವಿಂದ ಘೋಷರ ಆಲಿಪುರ ಕೇಸಿನ ಸಮಗ್ರ ವರದಿಯನ್ನು, ೧೯೦೮ರಲ್ಲಿ ಲೋಕಮಾನ್ಯ ಟಿಳಕರನ್ನು ಸೆರೆಹಿಡಿದು ಮಂಡಾಲೆಯ ಜೇಲಿಗೆ ಕಳಿಸಿದಾಗ ಅವರ ಮೇಲಿನ ಖಟ್ಲೆಯ ದಿನನಿತ್ಯದ ವಿವರಗಳನ್ನು ಕೊಡುವುದಲ್ಲದೆ ಕನ್ನಡ ಭಾಷೆಯಲ್ಲಿ ಅದರ ಸಾಗ್ರವಾದ ಸತ್ಯ ನಿರೂಪಣವನ್ನು ಡೆಮಿ ಅಷ್ಟ ಪತ್ರದ ಏಳುನೂರು ಪುಟಗಳಲ್ಲಿ ೧೭-೧೧-೧೯೦೮ರಂದು ಪ್ರಕಟಿಸಿ ಒಂದು ರೂಪಾಯಿಗೆ ಮಾರಿತು. ಆ ಹೊತ್ತಿಗಾಗಲೇ ಟಿಳಕರ ಚರಿತ್ರೆಯನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸಿತ್ತು. ಅಂತೆಯೇ ಯುರೋಪಿಯನ್ ಲೇಖಕ ವಾಲಂಟ್ಯಾನ ಚಿರೋಲ್ ತನ್ನ 'ಇಂಡಿಯನ್-ಅನ್‌ರೆಸ್ಟ್' ಎಂಬ ಪುಸ್ತಕದಲ್ಲಿ ಕರ್ನಾಟಕ ವೈಭವದ ಪಾತ್ರವನ್ನು ಮರೆಯಲು ಆಗಲಿಲ್ಲ. ಅದೊಂದು ಉಗ್ರ ಸ್ವರೂಪದ ಪತ್ರಿಕೆಯೆಂದೂ ಕನ್ನಡ ಬಲ್ಲ ಎಲ್ಲ ಭಾಗಗಳಲ್ಲೂ ಅದರ ಪ್ರಸಾರವಿದೆಯೆಂದು ಉಲ್ಲೇಖಿಸಿದ್ದಾನೆ. ಟಿಳಕರ ಮೇಲಿನ ಅಭಿಮಾನ ಕನ್ನಡ ವಿಷಯದಲ್ಲಿ ಆದರವನ್ನು ಎಷ್ಟೂ ಕಡಿಮೆ ಮಾಡಲಿಲ್ಲ. ಮರಾಟಿಗರು ವಿಜಾಪುರ ನಡುಮಧ್ಯದಲ್ಲಿ ಮರಾಠೀ ಶಾಲೆಯನ್ನು ತೆರೆಯಲು ಬಂದಾಗ ಅದನ್ನು ಖಂಡಿಸಿ ಅಲ್ಲಿ ಕನ್ನಡ ಶಾಲೆ ಬೇಕು ಎಂದು ಪಟ್ಟು ಹಿಡಿದು ಕನ್ನಡ ಶಾಲೆಯನ್ನು ಪ್ರಾರಂಭಿಸಿದರು !

## ಬ್ರಿಟಿಷರ ಕಾಕದೃಷ್ಟಿ

ಇದೀಗ ಬ್ರಿಟಿಷರ ಕಾಕದೃಷ್ಟಿ ಕರ್ನಾಟಕ ವೈಭವದ ಮೇಲೂ ಬಿತ್ತು. ಎರಡೂ ದಡಗಳ ಮೇಲೆ ಕೈ ಇಟ್ಟು ಕರ್ನಾಟಕದ ಏಕೀಕರಣದತ್ತ ವಿಶೇಷ ಗಮನಕೊಟ್ಟರು. ಅದು ಈ ಶತಕದ ಎರಡನೆಯ ದಶಕದ ಕಾಲ. ಆಗ ರಾಷ್ಟ್ರಮಟ್ಟದಲ್ಲಿ ಟಿಳಕರು ಸೆರೆಮನೆಯಲ್ಲಿದ್ದರೆ ಮಹಾತ್ಮಾ ಗಾಂಧೀಜಿಯವರು ಇನ್ನು ಉದಯಿಸದಿದ್ದ ಕಾಲ. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿ, ಹರಿದು ಹಂಚಿ ಹೋಗಿದ್ದ ಕನ್ನಡಿಗರ ಒಂದುಗೂಡುವಿಕೆಯ ಆವಶ್ಯಕತೆ ಇತ್ಯಾದಿಯಾಗಿ ಹಲವಾರು ಬಹುಮುಖ್ಯ ಲೇಖನಗಳು ಈ ದಶಕದಲ್ಲಿ ಪ್ರಕಟವಾಗಿವೆ.

ಕನ್ನಡದಲ್ಲಿ ಪೋರ್ತುಗೀಸ್ ಶಬ್ದಗಳು, ಮರಾಠೀಯಲ್ಲಿ ಕನ್ನಡ ಶಬ್ದಗಳು, ಮುಂತಾಗಿ ಶುದ್ಧ ಭಾಷಾ ವಿಜ್ಞಾನದ ಲೇಖನಗಳು, ಯದುನಾಥ ಸರಕಾರರ 'ವಿಜಾಪುರ ಪತನ'ದಂಥ ಶ್ರೇಷ್ಠ ಐತಿಹಾಸಿಕ ಲೇಖನಗಳು. ಬಾಲ ವಿವಾಹ ಪದ್ಧತಿಯ

ಅನಿಷ್ಟತೆ, ಜಾತಿ – ಕೋಮುಗಳ ವೈಷಮ್ಯ ಮೊದಲಾದ ಸಾಮಾಜಿಕ ಕಳಕಳಿಯ ಲೇಖನಗಳು ಧಾರವಾಡದಲ್ಲಿ ಕರ್ನಾಟಕ ಕಾಲೇಜು ಅವರ ಅವಶ್ಯಕತೆಯ ಕುರಿತು ವರುಷಗಟ್ಟಲೆ ಬರೆದ ಅಗ್ರಲೇಖನಗಳು. ವಿಶೇಷ ಲೇಖನಗಳು ಪ್ರತಿಷ್ಠಿತರ ಪತ್ರ ವ್ಯವಹಾರ ಈ ಕಾಲದಲ್ಲಿಯೇ ಬಂದುವು.

ಈ ಮೊದಲೆ ಅಂದರೆ ೧೮೯೯ರಿಂದಲೇ ಕಥೆ–ಕಾವಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುವ ಪತ್ರಿಕೆ ಇದಾಗಿತ್ತು. ಬಂಗಾಲಿ ಮರಾಠಿಗಳಿಂದ ಅನುವಾದಗಳಲ್ಲದೆ ಕನ್ನಡದಲ್ಲೂ ಸ್ವತಂತ್ರ ಕಥೆ–ಕಾದಂಬರಿಗಳನ್ನು ಕರ್ನಾಟಕ ವೈಭವ ಪ್ರಕಟಿಸಲು ಪ್ರಾರಂಭಿಸಿತ್ತು. ೧೯೦೩ರಲ್ಲಿ ಪ್ರಕಟವಾದ ಒಬ್ಬ ಸುಧಾರಕನ ಆತ್ಮವೃತ್ತ(ಕಾದಂಬರಿ). ಫುಲಜಾನೇ ಬೇಗಂ (ನಾಟಕ). ಶಾರ್ದೂಲ ಇಲ್ಲವೆ ರಜಪೂತರ ಒಡೆಯ ರಣಧೀರನು (ಕಾವಂಬರಿ) ನಿತ್ಯಾನಂದ (ಕಾದಂಬರಿ) ೧೯೦೫ರಲ್ಲಿ ಚಾತುರ್ಯದ ಮಾದರಿಯು(ಕಥೆ) ಹಾಗೂ ೧೯೦೫ರಲ್ಲಿ ಚಾತುರ್ಯದ ಮಾದರಿಯು (ಕಥೆ) ಹಾಗೂ ಕೆರೂರ ವಾಸುದೇವಾಚಾರ್ಯರದಲ್ಲದ 'ಇಂದಿರಾ' ಎಂಬ ಕಾದಂಬರಿ ಹತ್ತು ಪರಿಚ್ಛೇದಗಳಲ್ಲಿ ಪ್ರಕಟವಾಗಿದೆ. ಗೋಪಾಳರಾವ ಸೀತಾಬಾಯಿ ಅವರ ಮೂರು ಗಂಡುಮಕ್ಕಳು ಮತ್ತು ಸೊಸೆಯಂದಿರ ಸುತ್ತ ಹೆಣೆದ ಕಾದಂಬರಿ ಶಿಕ್ಷಣದ ಪ್ರಭಾವವನ್ನು ಹೇಳುತ್ತದೆ. ಲೇಖಕರ ಹೆಸರು ಇಲ್ಲ !

## ರಾಷ್ಟ್ರೀಯತೆಯ ಪ್ರಜ್ಞೆ

ಮತ್ತೊಂದು ದಶಕ ಕಳೆದಾಗ ದೇಶದಲ್ಲಿಯ ರಾಷ್ಟ್ರೀಯತೆಯ ಜಾಗ್ರತೆ. ಮಹಾತ್ಮಾಗಾಂಧೀಜಿಯವರ ಉದಯ. ರಾಷ್ಟ್ರೀಯ ಕಾಂಗ್ರೆಸ್ಸಿನ ವ್ಯಾಪಕ ಪ್ರಭಾವ. ಕರ್ನಾಟಕದ ವೈಭವ ಪೂರ್ತಿಯಾಗಿ ರಾಷ್ಟ್ರೀಯ ವಾರಪತ್ರಿಕೆಯಾಯಿತು. ಶ್ರೀ ಗುಂಡೇರಾವ ಮಣೂರಕರರು ಮುದ್ರಕ–ಪ್ರಕಾಶಕರಾಗಿ ಉಳಿದು ದೇಶಭಕ್ತ ಜಯರಾವ ದೇಶಪಾಂಡೆ ಅವರು ೧೯೨೧ರಲ್ಲಿ ಪತ್ರಿಕೆಯ ಸಂಪಾದಕತ್ವವನ್ನು ವಹಿಸಿದರು. ಅವರ ವ್ಯಕ್ತಿತ್ವ ಅಪರೂಪದ್ದಾಗಿತ್ತು. ಕರ್ನಾಟಕ ಸಿಂಹ ದೇಶಭಕ್ತ ಗಂಗಾಧರರಾವ ದೇಶಪಾಂಡೆಯವರ ಮಾತಿನಲ್ಲಿ ಹೇಳುವುದಾದರೆ ಅವರಿಗೆ (ಜಯರಾವ) ಕನ್ನಡ ನಾಡಿನ ಮೇಲೂ ನುಡಿಯ ಮೇಲೂ ಅತ್ಯಂತ ಪ್ರೇಮವಿತ್ತು. ಕರ್ನಾಟಕವನ್ನು ಮುಂದೆ ತಂದು ಇಡೀ ಹಿಂದುಸ್ತಾನದಲ್ಲಿ ಅದರ ಹೆಸರು ಮಾಡಬೇಕೆಂದು ಅವರ ಆಕಾಂಕ್ಷೆಯಿತ್ತು. ನಾನೂ ನಿಮ್ಮ ಸೇವಕನೇ ಆಗಿದ್ದರೂ ಕರ್ನಾಟಕದ ಬಗ್ಗೆ ಇಷ್ಟು ಅಭಿಮಾನ ನನಗಿದ್ದಿಲ್ಲ" ಎಂದು ಹೇಳಿದ್ದಾರೆ. ಜಯರಾವ ದೇಶಪಾಂಡೆಯವರು ೨೩–೬–೧೯೨೨ರಂದು ಅಕಾಲ ಮರಣ ಹೊಂದಿದಾಗ ತುಸು ದಿನ ರಂಗರಾವ ತಿಳಗೂಳ ವಕೀಲರು ಪತ್ರಿಕೆಯನ್ನು ಸಂಪಾದಿಸಿದರು. ಅವರಿಗೆ ಕನ್ನಡ ಬರೆಯಲು ಬರುತ್ತಿರಲಿಲ್ಲ. ದೇವನಾಗರಿ ಲಿಪಿಯಲ್ಲಿ ಬರೆದದ್ದನ್ನು ಕನ್ನಡದಲ್ಲಿ ಮೊಳೆ ಜೋಡಿಸಿ ಮುದ್ರಿಸುತ್ತಿದ್ದರು! ಅವರು ಜೇಲಿಗೆ ಹೋದ ನಂತರ ಹಣಮಂತರಾವ ಮೋಹರೆಯವರು ಪತ್ರಿಕೆಯ ಸಂಪಾದಕರಾದರು. ಒಂದು ವರ್ಷ ಕಳೆಯುವಷ್ಟರಲ್ಲಿ ಅವರೂ ತಮ್ಮ ಸಂಪಾದಕೀಯದಿಂದ ವಿಜಾಪುರ ಜಿಲ್ಲೆಯ ಅಂದಿನ ಕಲೆಕ್ಟರ ಹೆಂಡರ್ಸನ್‌ನಿಂದ ಎರಡು ವರ್ಷ ಶಿಕ್ಷೆ. ಒಂದು ಸಾವಿರ ರೂಪಾಯಿಗಳ ದಂಡದ ಬಳುವಳಿಯನ್ನು ಪಡೆದರು. ಶಿಕ್ಷೆಯಾಗಿ ಜೇಲಿಗೆ ಹೋಗುವದಂದರೆ ಅಂದಿನವರಿಗೆ ಅದೊಂದು ಪವಿತ್ರ ಕಾರ್ಯವಾಗಿತ್ತು. ಜೇಲು ಅವರಿಗೆ 'ಸ್ವರಾಜ್ಯಾಶ್ರಮ'ವೆಂದು ಹೇಳುತ್ತಿದ್ದರು. ಮೋಹರೆಯವರ ಸ್ಥಳದಲ್ಲಿ ಯಶವಂತ ಸ್ವಾಮಿರಾವ ತಿಳಗೂಳರು ೧೭–೪–೧೯೨೩ ರಿಂದ ಪತ್ರಿಕೆಯ ಸಂಪಾದಕತ್ವವನ್ನು ವಹಿಸಿದರು. ಅಂದಿನ ಸಂಚಿಕೆಯಲ್ಲಿ ವಾಚಕರನ್ನುದ್ದೇಶಿಸಿ ಹೇಳಿದ ಮಾತುಗಳು ಕರ್ನಾಟಕ ವೈಭವದ ಉದ್ದೇಶವನ್ನು ಸ್ಪಷ್ಟಗೊಳಿಸುತ್ತವೆ.

> 'ವೈಭವದ ಮೇಲೆ ಇದೊಂದೇ ವರುಷದಲ್ಲಿ ಬಂದ ಮೂರನೆಯ ಆಪತ್ತಿ ಇದು. ವೈಭವದ ಉದ್ದೇಶವು ಯಾರ ವಿರುದ್ಧವಾದರೂ ಅಪ್ರೀತಿಯನ್ನಾಗಲೀ, ದ್ವೇಷವನ್ನಾಗಲೀ ಹುಟ್ಟಿಸುವುದು ಇಲ್ಲ. ದೇಶಭಕ್ತಿಯನ್ನು, ಸ್ವಾರ್ಥತ್ಯಾಗ ಬುದ್ಧಿಯನ್ನು, ಕಾರ್ಯೋತ್ಸಾಹವನ್ನೂ ಜನರಲ್ಲಿ ಹುಟ್ಟಿಸಿ ಸ್ವರಾಜ್ಯದ ಪ್ರಾಪ್ತಿಗಾಗಿ ಅಹರ್ನಿಶಿ ಯತ್ನಿಸುವುದೇ ನಮ್ಮ ವೈಭವದ ಅಸ್ತಿತ್ವವಿರುವುದೆಂಬ ಮಾತು ವೈಭವದ ಲೇಖನಗಳನ್ನು ಮನಮುಟ್ಟಿ ಓದುವ ವಾಚಕರಿಗೆ ಗೊತ್ತಾದ ಮಾತು. ಈ ರಾಷ್ಟ್ರಕಾರ್ಯವನ್ನು ಜರಗಿಸುತ್ತಿರುವಾಗ ಬಂದ ಆಪತ್ತುಗಳಿಗೆ ಹೆದರಿ ಕೈಕಾಲು ಕಳೆದುಕೊಳ್ಳುವುದು ವೈಭವದ ಸ್ವಭಾವವಲ್ಲ. ಒಬ್ಬ ಸಂಪಾದಕನು ಹೋದರೆ ಇನ್ನೊಬ್ಬನು ಅವನ ಸ್ಥಳದಲ್ಲಿ ಸಿದ್ಧನಾಗಿರುವನು. ಅವನೂ ಹೋದರೆ ಮತ್ತೊಬ್ಬನು.... "
>
> ಕರ್ನಾಟಕ ವೈಭವದ ಉದ್ದೇಶ ಘನವಾಗಿತ್ತು. ಅದಕ್ಕಾಗಿ ಅದು ಯಾರ ಅಂಜಿಕೆಗೂ ಮಣಿಯುತ್ತಿದ್ದಿಲ್ಲ ಎಂಬುದನ್ನು ಮರುವಾರದ ೨೪–೪–೧೯೨೩ ಅಗ್ರಲೇಖನದಿಂದ ಸ್ಪಷ್ಟವಾಗುತ್ತದೆ. "ನಮ್ಮ ಪತ್ರವನ್ನು ಇನ್ನು ಮುಂದೆ ಸಾಗಗೊಡುವದು ಸರಕಾರಕ್ಕೆ ಶಕ್ಯವಿಲ್ಲವೆಂದು ತೆಗೆದ ಉದ್ಗಾರಗಳನ್ನು ಅವಲೋಕಿಸಿದರೆ ನಮ್ಮ ಪತ್ರವು ಸರಕಾರದ ಕಣ್ಣಲ್ಲಿ ಒಳ್ಳೆ ರೀತಿಯಿಂದ ನಟ್ಟಿರುತ್ತದೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಆದರೂ ನಾವು ನಮ್ಮ ಸಹಕಾರೀ ಮಿತ್ರರ ಸಹಾಯದಿಂದ ಈ ಪತ್ರವನ್ನು ಇದೇ ಪ್ರಕಾರ ಮುಂದಾದರೂ ನಡೆಸುವ ನಿಶ್ಚಯವನ್ನೂ ಮಾಡಿದ್ದೇವೆ" ಎಂದು ಧೈರ್ಯದಿಂದ ಹೇಳಿದ್ದಾರೆ. ಹಾಗೆ

ನಡೆಸಿದರೂ ಕೂಡ. ಅವರೂ ಜೇಲಿಗೆ ಹೋದಾಗ ೧೪-೭-೧೯೨೪ರಿಂದ ಹಣಮಂತರಾವ ಕೌಜಲಗಿ ಅವರು ಸಂಪಾದಕರಾಗಿ 'ಪೂಜಾರಿ ಬೇರೆಯಾದರೂ ದೇವರು ಒಬ್ಬನೇ!" ಎಂದು ಅಗ್ರಲೇಖನ ಬರೆದು ತಮ್ಮ ಸಂಪಾದಕೀಯವನ್ನು ಪ್ರಾರಂಭಿಸಿದರು.

## ಬ್ರಿಟಿಷರ ಕಿರಿಕಿರಿ

ಹಣಮಂತರಾವ ಮೋಹರೆಯವರು ಜೇಲಿನಿಂದ ತಿರುಗಿ ಬಂದಮೇಲೆ ಮತ್ತೆ ಅವರೇ ಕರ್ನಾಟಕ ವೈಭವದ ಸಂಪಾದಕರಾದರು. ಈಗ ಮುದ್ರಣಾಲಯ ಹಾಗೂ ಪತ್ರಿಕೆ ಎರಡೂ ಅವರದ್ದಾಗಿದ್ದವೆಂದು ಕಾಣುತ್ತದೆ. ಮಧ್ಯದ ದಿನಗಳಲ್ಲಿ ಸರಕಾರದ ಕಿರಿ-ಕಿರಿ ಹೆಚ್ಚಾಗಿ ಪ್ರತಿಸಲ ಪ್ರಕಾಶಕ/ಮುದ್ರಕನ ಮೇಲೆ ಕೇಸುಗಳನ್ನು ಹಾಕಿ, ಒಂದು ಸಲವಂತೂ ನಾಲ್ವತ್ತು ಸಾವಿರ ರೂಪಾಯಿಗಳ ಜಾಮೀನನ್ನು ಬೇಡಿದರು. ಅಂತೆಯೇ ಗುಂಡೇರಾವ ಮಣೂರಕರ ಅವರು ಎರಡನ್ನೂ ಮೋಹರೆ, ತಿಳಿಗೂಳ ಹಾಗೂ ಮೊಡ್ಡಿಹಾಳ ಅವರಿಗೆ ಮಾರಿದರು. ಮುಂದಿನ ದಿನಗಳಲ್ಲಿ ಉಳಿದಿಬ್ಬರಿಂದ ಮೋಹರೇ ಅವರೇ ಖರೀದಿಸಿದರೆಂದು ಕಾಣುತ್ತದೆ. ಮೋಹರೆ ಅವರು ಸಂಯುಕ್ತ ಕರ್ನಾಟಕಕ್ಕೆ ೧೯೩೩ರಲ್ಲಿ ಹೋಗುವವರೆಗೂ ಅವರೇ ಕರ್ನಾಟಕ ವೈಭವದ ಸಂಪಾದಕರಾಗಿದ್ದರು. ಆಮೇಲೆ ತುಸುಕಾಲ ವ್ಹಿ.ಬಿ. ನಾಯಕರು, ಟಿ.ಕೆ. ನಾಯಕರು ಸಂಪಾದಕರಾಗಿದ್ದರು. ನಂತರ ಮೋಹರೆಯವರ ಮಕ್ಕಳಾದ ಎಸ್.ಎಚ್. ಹಾಗೂ ಎಸ್.ಎಚ್. ನಾಯಕರು ಪತ್ರಿಕೆಯನ್ನು ನಡೆಸಿ ಕೊನೆಗೆ ೧೯೭೫ರಲ್ಲಿ ಇಂದಿನ ಎಸ್.ಎನ್. ಪಾಟೀಲರಿಗೆ ಮುದ್ರಣಾಲಯವನ್ನು ಮಾರಿ ಪತ್ರಿಕೆಯನ್ನು ನಡೆಸಲು ಕೊಟ್ಟರು.

ಕರ್ನಾಟಕ ವೈಭವದ ಅಭ್ಯಾಸವೆಂದರೆ ಕನ್ನಡ ಪತ್ರಿಕಾ ವ್ಯವಸಾಯದ ಬೆಳವಣಿಗೆಯ ಅಭ್ಯಾಸವೂ ಹೌದು. ಕರ್ನಾಟಕದ ಪತ್ರಿಕಾ ರಂಗದ ಪಿತಾಮಹರೆಂದು ಗುರುತಿಸುವ ಮೋಹರೆ ಹಣಮಂತರಾಯರ ಗುರುಸ್ವರೂಪರಾದ ಮಣೂರಕರ ಹಾಗೂ ಜಯರಾಯರನ್ನು ಇಂದು ಪೂರ್ತಿಯಾಗಿ ಮರೆತಿದ್ದೇವೆ. ಮಣೂರಕರ ಕನ್ನಡ ಪತ್ರಿಕಾರಂಗದ ಪ್ರಪಿತಾಮಹರೆಂದರೂ ಸರಿ. ತೊಂಬತ್ತು ವರುಷಗಳಷ್ಟು ಹಿಂದೆ ಅವರು ಕರ್ನಾಟಕ ವೈಭವದಲ್ಲಿ ವೈವಿಧ್ಯಮಯವಾದ ಸ್ಥಿರಶೀರ್ಷಿಕೆಗಳನ್ನು ಪ್ರಕಟಿಸುತ್ತಿದ್ದರು. 'ಸ್ಫುಟ ವಿಚಾರ', ವಿವಿಧ ವೃತ್ತ', 'ಪತ್ರ ವ್ಯವಹಾರ', 'ಸ್ಥಳೀಯ ಸುದ್ದಿ', 'ಕರ್ನಾಟಕ ಸುದ್ದಿ', 'ದೇಶ ಸುದ್ದಿ', 'ವಿದೇಶಿ ಸುದ್ದಿ' ಸರಕಾರಿ ವಿಷಯ' ಇತ್ಯಾದಿಗಳಲ್ಲದೆ ವಾರದ ಹವಾಮಾನ, ವ್ಯಾಪಾರ ವಹಿವಾಟುಗಳ ವಿಷಯಗಳನ್ನೂ ಪ್ರಕಟಿಸುತ್ತಿದ್ದರು!

ಕನ್ನಡ ಭಾಷೆ ಈ ಶತಮಾನದಲ್ಲಿ ಬೆಳೆದು ಬಂದ ಬಗೆ ಕರ್ನಾಟಕ ಏಕೀಕರಣ ಚಳವಳಿ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಅದರಲ್ಲೂ ಕರ್ನಾಟಕದ ಕತೆಯನ್ನು ಕರ್ನಾಟಕ ವೈಭವದ ಹಳೆಯ ಕಡತಗಳು ಹೇಳುವಷ್ಟು ನಿರ್ದಿಷ್ಟವಾಗಿ ಬೇರೆ ಯಾವ ಆಧಾರಗಳಿಂದಲೂ ದೊರೆಯಲಿಕ್ಕಿಲ್ಲ. ◆

# ೧೮. ಕಲ್ಯಾಣಮ್ಮ ಅವರ 'ಸರಸ್ವತಿ'

✍ ಡಾ. ಎನ್. ಬಿ. ಸುಮಿತ್ರಾಬಾಯಿ

ಕ್ರಿ.ಶ. ೧೯೧೭ರಲ್ಲಿ ಮೊಟ್ಟಮೊದಲ ಬಾರಿಗೆ 'ಸರಸ್ವತಿ'ಯನ್ನು ಪಕ್ಷಪತ್ರಿಕೆಯಾಗಿ ಹೊರತಂದಾಗ ಕಲ್ಯಾಣಮ್ಮ ಅದರ 'ಅವತಾರಿಕೆ'ಯಲ್ಲಿ ತಮ್ಮ ಧ್ಯೇಯೋದ್ದೇಶಗಳನ್ನು ವಿವರಿಸಿದ್ದಾರೆ:

'....ಸಂಪತ್ತು, ಸರಸ್ವತಿ (ವಿದ್ಯೆ), ಸತ್ಯ, ಸಂತಾನ, ಸದನುಗ್ರಹ (ಮಹಾತ್ಮರ ಕೃಪೆ), ಉತ್ತಮಪವಿವಿಕ ಸತ್ಕಾರ್ಯ ಮುಂತಾದ ಸದ್ಗುಣ ಸಂಪನ್ನರಾದ ಮಹಿಳೆಯರ ಸಂಖ್ಯೆಯು ಎಷ್ಟು ವಿಸ್ತಾರವಾಗಿ ವೃದ್ಧಿಯಾಗುವುದೋ ದೇಶದ ಅಭಿವೃದ್ಧಿಯೂ ಅಷ್ಟು ವಿಸ್ತರಿಸುವುದು. ಈ ಸಂಕಲ್ಪವು ಸಫಲವಾಗಬೇಕಾದರೆ ಸ್ತ್ರೀಯರ ವಿಜಯಾಭ್ಯುದಯಗಳನ್ನು ಸೂಚಿಸತಕ್ಕವುಗಳೂ ಸ್ತ್ರೀಯರಿಂದಲೇ ಪ್ರಕಟಿಸಲ್ಪಡತಕ್ಕವುಗಳೂ ಆದ ದೇಶಭಾಷಾ ಪತ್ರಿಕೆಗಳು, ಅನೇಕವಾಗಿಯೂ ಅತ್ಯವಶ್ಯಕವಾಗಿಯೂ ಪ್ರಚಾರಕ್ಕೆ ಬರಬೇಕು. .... ಈಗ ಪ್ರಚಾರದಲ್ಲಿರುವ ಪತ್ರಿಕೆಗಳಲ್ಲಿ ಸ್ತ್ರೀವಿದ್ಯಾಭಿಮಾನವುಳ್ಳವುಗಳು ಒಂದೆರಡಿದ್ದಾಗ್ಯೂ ಆರ್ಯಕಾಲದ ಸ್ತ್ರೀಯರ ಮೇಲ್ಪಂಕ್ತಿಯನ್ನು ಅನುಸರಿಸಿ ಸ್ತ್ರೀಯರ ನೈಸರ್ಗಿಕ ಧರ್ಮಗಳನ್ನು ಬೋಧಿಸತಕ್ಕ ಸಚಿತ್ರ ಪತ್ರಿಕೆಗಳು ಸ್ತ್ರೀಯರಿಂದಲೇ ಪ್ರಕಟಿಸಲ್ಪಡಬೇಕಾದ ಅವಶ್ಯಕವು ಪ್ರಕೃತದಲ್ಲಿ ಮುಖ್ಯವೆಂದು ತೋರಿತು. ಅಂತಹ ಪತ್ರಿಕೆಯೊಂದನ್ನು ಪ್ರಕಟಿಸಬೇಕೆಂಬ ಕುತೂಹಲವು ನಾನು ವಿದ್ಯಾರ್ಥಿನಿಯಾಗಿದ್ದ ಕಾಲದಿಂದಲೂ ನನ್ನ ಮನಸ್ಸಿನಲ್ಲಿದ್ದಿತು. ಈಗ ನಾಲ್ಕು ವರ್ಷಗಳ ಹಿಂದೆ (ಅಂದರೆ ೧೯೧೩ರಲ್ಲಿ) ಪೂಜ್ಯರಾದ ಕೆಲವು ಮಂದಿ ಸೋದರೀಮಣಿಯರ ಸಹಾಯದಿಂದ "ಶ್ರೀ ಶಾರದಾ ಸ್ತ್ರೀಸಮಾಜ"ವೆಂಬ ಹೆಸರಿನಿಂದ ಭಾರತಮಹಿಳೆಯರ ಶ್ರೇಯೋಭಿವೃದ್ಧಿ - ಗನುಕೂಲವಾದ ಸಮಾಜವೊಂದನ್ನು ಸ್ಥಾಪಿಸಿದ್ದಾಯಿತು... ಸಮಾಜವು ಅಭಿವೃದ್ಧಿಯಾದ ಹಾಗೆಲ್ಲಾ ಪತ್ರಿಕಾಪ್ರಚಾರ ವಿಷಯಕವಾದ

ನನ್ನ ಮನಸ್ಸಂಕಲ್ಪವೂ ಮತ್ತಷ್ಟು ದೃಢವಾಗಿ ನನ್ನನ್ನು ತ್ವರೆಮಾಡಲಾರಂಭಿಸಿತು. ನನ್ನ ಸಂಕಲ್ಪದ ಭಾಗ್ಯವೇನೋ ಎಂಬಂತೆ ಈ ವರ್ಷದಲ್ಲಿ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಲಾಶಾಲೆಯಲ್ಲಿ ನಡೆದ ನಮ್ಮ ಸಮಾಜದ ನಾಲ್ಕನೆಯ ವಾರ್ಷಿಕೋತ್ಸವಕ್ಕೆ ಅಧ್ಯಕ್ಷರಾಗಿ (ಈಗ ಮೈಸೂರು ಸಂಸ್ಥಾನದ ಮಂತ್ರಾಲೋಚನಾ ಸಭೆಯಲ್ಲಿ ಕೌನ್ಸಿಲರ್ ಪದವಿಯಲ್ಲಿರುವ ಶ್ರೀಯುತ ಎ.ಆರ್. ಬ್ಯಾನರ್ಜಿಯವರ ಧರ್ಮಪತ್ನಿಯರಾದ) ಶ್ರೀಮತಿ ನಳಿನೀದೇವಿಯವರು ಅಗ್ರಾಸನವನ್ನಲಂಕರಿಸಿದ್ದರು. ಅವರು ತಮ್ಮ ಸಂಭಾಷಣೆಯಲ್ಲಿ ಪತ್ರಿಕಾ ಪ್ರಚಾರವನ್ನು ಪ್ರತಿಪಾದಿಸುತ್ತಾ 'ಬಂಗಾಳದಲ್ಲಿ ಶ್ರೀಮತಿ ಸ್ವರ್ಣಕುಮಾರಿದೇವಿಯವರಿಂದ ಪ್ರಕಟಿಸಲ್ಪಡುತ್ತಿರುವ 'ಭಾರತಿ' ಎಂಬ ಪತ್ರಿಕೆಯ ರಚನಾಕ್ರಮವನ್ನನುಸರಿಸಿ ಕನ್ನಡವಲ್ಲೊಂದು ಪತ್ರಿಕೆಯನ್ನು ಯಾರಾದರೂ ನಡೆಸಿದರೆ ಅದಕ್ಕೆ ತಾವು ಸಹಾಯ ಮಾಡುವುದಾಗಿ ಸೂಚಿಸಿದರು. ವಿದ್ಯಾವತಿಯೂ ಶ್ರೀಮಂತಿನಿಯೂ ಆದ ಆ ದೇವಿಯರ ಸಂಭಾಷಣೆಯು ನನ್ನ ಸಂಕಲ್ಪವು ಕ್ರಿಯಾರೂಪವಾಗಿ ಅನುಷ್ಠಾನಕ್ಕೆ ಬರತಕ್ಕ ಶುಭಸೂಚನೆಯಾಗಿ ಪರಿಣಮಿಸಿತು...'.

ಕಲ್ಯಾಣಮ್ಮನವರಿಗಿಂತ ಕೊಂಚ ಮೊದಲು ತಿರುಮಲಾಂಬಾ ಅವರು ಮಹಿಳೆಯರ ಶಿಕ್ಷಣವನ್ನು ಉದ್ದೇಶವಾಗಿರಿಸಿಕೊಂಡು 'ಕರ್ನಾಟಕ ನಂದಿನಿ' ಪತ್ರಿಕೆಯನ್ನು ಪ್ರಾರಂಭಿಸಿದ್ದರು. 'ಜಯಕರ್ನಾಟಕ'ದಂಥ ಪತ್ರಿಕೆಯಲ್ಲಿ ಪ್ರಾರಂಭದಿಂದಲೂ ಸ್ತ್ರೀ ಪರವಾದ ಹಿತಾಸಕ್ತಿಯಿತ್ತು. ಆದರೆ ಮಹಿಳೆಯರ ಸರ್ವತೋಮುಖವಾದ ಏಳಿಗೆಯನ್ನು ಗುರಿಯಾಗಿಟ್ಟುಕೊಂಡ ಸಚಿತ್ರ ಪತ್ರಿಕೆಗಳನ್ನು ಮಹಿಳೆಯರೇ ಪ್ರಕಟಿಸಿದ ಉದಾಹರಣೆ ಕನ್ನಡದಲ್ಲಿ ಇರಲಿಲ್ಲ. ಇಂಥ ವಿಶಿಷ್ಟ ಸ್ವರೂಪವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಾರಂಭವಾದ ಸರಸ್ವತಿ ಕಲ್ಯಾಣಮ್ಮನವರ ಮೇಲಿನ ಮಾತುಗಳಲ್ಲಿ ಸೂಚಿತವಾಗುವಂತೆ ಬಂಗಾಳದ 'ಭಾರತಿ'ಯ ರಚನಾಕ್ರಮವನ್ನು ತನ್ನ ಮಾದರಿಯಾಗಿರಿಸಿಕೊಂಡಿರಲು ಸಾಧ್ಯ. ಸರಸ್ವತಿಯು ಆರಂಭವಾದ ಕಾಲಕ್ಕೆ 'ಭಾರತಿ' ಪತ್ರಿಕೆಯನ್ನು ಸ್ವರ್ಣಕುಮಾರಿದೇವಿ (ರವೀಂದ್ರನಾಥ ಠಾಕೂರರ ಸಂಬಂಧಿ)ಯವರ ಮಗಳು ಸರಳಾದೇವಿಯವರು ನಡೆಸುತ್ತಿದ್ದರು. ಈ ಸರಳಾದೇವಿಯವರ ವಿಚಾರಗಳು ರಜಪೂತರಮಣಿಯರ ಅಂತಶ್ಚೇತನವನ್ನು ಭಾರತೀಯ ಮಹಿಳೆಯರಲ್ಲಿ ಪುನರುಜ್ಜೀವಿತಗೊಳಿಸುವ ದೃಷ್ಟಿಯ ತೀವ್ರವಾದ ರಾಷ್ಟ್ರೀಯತಾ ಭಾವನೆಯಿಂದ ಪ್ರೇರಿತವಾಗಿದ್ದವು ಎಂಬುದನ್ನು ಗಮನಿಸಿದರೆ ಕಲ್ಯಾಣಮ್ಮನವರು 'ಆರ್ಯಕಾಲದ ಸ್ತ್ರೀಯರ ಮೇಲ್ಪಂಕ್ತಿಯನ್ನು ಅನುಸರಿಸಿ ಸ್ತ್ರೀಯರ ನೈಸರ್ಗಿಕ ಧರ್ಮಗಳನ್ನು ಬೋಧಿಸುವುದನ್ನು 'ತಮ್ಮ ಪತ್ರಿಕೆಯ ಉದ್ದೇಶವಾಗಿಟ್ಟುಕೊಂಡಿರುವುದರ ಮೂಲ ಹೆಚ್ಚು ಸ್ಪಷ್ಟವಾದೀತು. ಸರಸ್ವತಿ ಎಂಬ ಹೆಸರು 'ಭಾರತಿ' ಎಂಬುವರ ಪರ್ಯಾಯ ಅರ್ಥವನ್ನು ಹೊಂದಿರುವಂಥದು.

ಪತ್ರಿಕೆ ತರುವ ನಿರ್ಧಾರ ದೃಢವಾದಾಗ ಕಲ್ಯಾಣಮ್ಮ ಸಮಾಜದ ಸದಸ್ಯೆಯರೊಂದಿಗೆ ಚರ್ಚಿಸಿ ಸಮಾಜದ ಖರ್ಚು ಕಳೆದು ಉಳಿವ ಹಣವನ್ನು ಪತ್ರಿಕೆಗಾಗಿ ಬಳಸಬಹುದೆಂಬ ನಿರ್ಧಾರಕ್ಕೆ ಎಲ್ಲರನ್ನೂ ಒಪ್ಪಿಸಿದರು. ಈ ರೀತಿಯಲ್ಲಿ 'ಭಾರತ ಮಹಿಳೆಯರ ಇಹಪರ ವಿಜಯಾಭ್ಯುದಯಗಳನ್ನು ಬೋಧಿಸತಕ್ಕ ಲೇಖನಗಳಿಂದೊಡಗೂಡಿದ ಸಚಿತ್ರ ಪಕ್ಷಪತ್ರಿಕೆ'ಯಾಗಿ ೧೯೧೭ನೆಯ ಇಸವಿಯ ಅಕ್ಟೋಬರ್ ತಿಂಗಳಲ್ಲಿ ಸರಸ್ವತಿ ಮೊದಲ ಬಾರಿಗೆ ಹೊರಬಂದಿತು. ಈ ಪಕ್ಷಪತ್ರಿಕೆಯ ವಿವಿಧ ಅಂಕಣಗಳು ಲೇಖನಗಳು ಉಚ್ಚಮಟ್ಟದ ಅಭಿರುಚಿಯಿಂದ ಕೂಡಿದ್ದವು. ಒಳ್ಳೆಯ ಗುಣಮಟ್ಟದ ಛಾಯಾಚಿತ್ರಗಳ ಮುದ್ರಣ ಇದರ ಅಂದವನ್ನು ಹೆಚ್ಚಿಸಿತ್ತು. ಕಿರೀಟ ಅಷ್ಟಪತ್ರಾಕಾರದ ಮುವ್ವತ್ತಾರು ಪುಟಗಳಿಂದ ಕೂಡಿದ್ದ ಈ ಪತ್ರಿಕೆಯಲ್ಲಿ ದೇಶದ ವಿವಿಧ ಪತ್ರಿಕಾ ಮೂಲಗಳಿಂದ ವಿವಿಧ ಕ್ಷೇತ್ರದಲ್ಲಿ ಮಹಿಳೆಯರ ಸಾಧನೆಗಳ ವಿವರಗಳನ್ನು ಸಂಗ್ರಹಿಸಿ ಛಾಯಾಚಿತ್ರದೊಂದಿಗೆ ಪರಿಚಯಿಸುವ ಅಂಕಣವು ಬಹು ಆಕರ್ಷಕವಾಗಿತ್ತು. ಇಂಥ ಉನ್ನತ ಮಟ್ಟದ ಪತ್ರಿಕೆಯನ್ನು ಹೊರತರುವುದು ನಿಜಕ್ಕೂ ಬಹು ಮಹತ್ವಾಕಾಂಕ್ಷೆಯ ಯತ್ನವೇ. ಆದರೆ ಕಲ್ಯಾಣಮ್ಮ ಈ ಬಗ್ಗೆ ತುಂಬು ವಿನಯದಿಂದ ಬರೆಯುತ್ತಾರೆ. 'ಬಿ.ಎ. ಎಂ.ಎಂ. ಪದವೀಧರೆಯಾದ ಧನವಂತರಾದ ಸ್ತ್ರೀಯರು ಕೈಗೊಳ್ಳಬೇಕಾದಂಥ ಕೆಲಸವನ್ನು' 'ಅಲ್ಪಜ್ಞಳಾದ' ತಾನು ಕೈಹಿಡಿದುದಕ್ಕೆ ಪಾಂಡಿತ್ಯದ ಅಹಮಿಕೆಯು ಕಾರಣವಲ್ಲ; 'ಜಗತ್ತಿಗೆ ಮಾತೃಸ್ವರೂಪಿಯಾದ ಭಗವಂತನ ದಯೆ, ಅನುಗ್ರಹವೇ ಕಾರಣ' ಎಂದು ಅವರು ಹೇಳುತ್ತಾರೆ.

ಆರಂಭದ ಉತ್ಸಾಹಕ್ಕೆ ತಕ್ಕಂತೆ ತಡೆಯಿಲ್ಲದೆ ಪತ್ರಿಕೆಯನ್ನು ಹೊರತರಲು ತೀವ್ರವಾದ ಹಣದ ಅಡಚಣೆಯಿತ್ತು. ಆ ಅಡ್ಡಿಗಳ ನಡುವೆ ಒಂದೆರಡು ವರ್ಷ ಮುಗ್ಗರಿಸಿ ನಡೆದು ಪತ್ರಿಕೆ ನಿಂತುಹೋಯಿತು. ಆದರೆ ಕಲ್ಯಾಣಮ್ಮನವರ ಕಾರ್ಯೋತ್ಸಾಹವನ್ನು ಎಂತಹ ಅಡಚಣೆಯೂ ತಡೆಹಿಡಿಯುವುದು ಸಾಧ್ಯವಿರಲಿಲ್ಲ. ಆದ್ದರಿಂದಲೇ ಛಲಹಿಡಿದು ತಮ್ಮ ಹಿತೈಷಿಗಳ ಬೆಂಬಲ ನೆರವುಗಳಿಂದ ೧೯೨೧ರಲ್ಲಿ ಮತ್ತೆ ಸರಸ್ವತಿಯನ್ನು ಮಾಸಪತ್ರಿಕೆಯಾಗಿ ಹೊರ ತರತೊಡಗಿದರು. ಅಲ್ಲಿಂದ ಮುಂದೆ ಸುಮಾರು ನಲವತ್ತಮೂರು ವರ್ಷಗಳ ಕಾಲ ಆ ಪತ್ರಿಕೆ ನಿಲ್ಲದೆ ನಡೆಯಿತು.

ಸರಸ್ವತಿಯ ಮೂಲಭೂತ ಉದ್ದೇಶಕ್ಕೆ ತಕ್ಕಂತೆ ಸ್ತ್ರೀಸಮಸ್ಯೆಗಳನ್ನು ಕುರಿತ ಚರ್ಚೆಯನ್ನೊಳಗೊಂಡ ಗಂಭೀರ ಲೇಖನಗಳು (ಸ್ತ್ರೀ ಪುರುಷರಿಬ್ಬರಿಂದಲೂ ರಚಿತವಾದವುಗಳು) ಈ ಪತ್ರಿಕೆಯಲ್ಲಿ ಆದ್ಯತೆ ಪಡೆದಿದ್ದರೂ ಸ್ತ್ರೀಯರಿಗೆ ಜಗತ್ತಿನ ಸಾಧ್ಯವಾದಷ್ಟೂ ಹೆಚ್ಚಿಗೆ ವಿಷಯಗಳ ಬಗ್ಗೆ ತಿಳಿವಳಿಕೆ, ಮಾಹಿತಿ ನೀಡುವ ಉದ್ದೇಶದಿಂದ ಸಾಮಾನ್ಯಜ್ಞಾನವನ್ನು ಹೆಚ್ಚಿಸುವ ಅಂಕಣಗಳು, ಸುತ್ತಮುತ್ತಲಿನ ಸಾಂಸ್ಕೃತಿಕ ಆಗುಹೋಗುಗಳನ್ನು ಕುರಿತ ವರದಿಗಳು, ಸಂಪಾದಕೀಯ ಟಿಪ್ಪಣಿಗಳು ಅದರಲ್ಲಿದ್ದವು. ಹೊಸ ಅಡುಗೆಗಳು, ಆಹಾರಪಥ್ಯಗಳು, ಕೌಟುಂಬಿಕ ಸಲಹೆಗಳು, ತಿಳಿಹಾಸ್ಯದ ಚುಟುಕುಗಳು, ದೇಶವಿದೇಶಗಳ ಸ್ತ್ರೀಯರ ಸ್ಥಿತಿಗತಿಗಳನ್ನು, ಮಹಿಳಾ ಪ್ರಗತಿಯನ್ನು ಬಿಂಬಿಸುವಂತೆ ಆಯ್ದು ಪ್ರಕಟಿಸಿದ ಅನುವಾದಿತ ಲೇಖನಗಳು ಮತ್ತು ಎಲ್ಲಕ್ಕಿಂತ ಮಿಗಿಲಾದ ಸ್ವಾರಸ್ಯಕರವಾದ

ಮಕ್ಕಳ ವಿಭಾಗದಿಂದ ಕೂಡಿದ್ದ ಸರಸ್ವತಿಯ ವೈವಿಧ್ಯ ಮತ್ತು ಗುಣಮಟ್ಟ ಇಂದಿಗೂ ಬೆರಗು ಹುಟ್ಟಿಸುವಂತಿದೆ. ಪತ್ರಿಕೆಯನ್ನು ಆದಷ್ಟು ಹೆಚ್ಚು ಮಹಿಳೆಯರಿಗೆ ಉಪಯುಕ್ತವಾಗುವಂತೆ ಮಾಡಲು ಕಲ್ಯಾಣಮ್ಮ ಸದಾ ಪ್ರಯತ್ನಿಸುತ್ತಿದ್ದುದನ್ನು ಕಾಣಬಹುದಾದರೂ ಎಲ್ಲಿಯೂ ಚಲನಚಿತ್ರ ವಿಭಾಗವಾಗಲಿ, ಅವುಗಳ ಜಾಹೀರಾತುಗಳಾಗಲೀ ಕಂಡುಬರುವುದಿಲ್ಲ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪತ್ರಿಕೋದ್ಯಮ ಒಂದು ಬಂಡವಾಳಶಾಹಿ ಮಾಧ್ಯಮವಾಗಿ ಬೆಳೆದಿದ್ದು, ತಮ್ಮ ವ್ಯಾಪಾರೀ ಆಕರ್ಷಕತೆಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಎಲ್ಲ ಪತ್ರಿಕೆಗಳೂ ಚಲನಚಿತ್ರದ ಅಂಶಗಳನ್ನು ಬಳಸಿಕೊಳ್ಳತೊಡಗಿದವು. ಆದರೆ ಸರಸ್ವತಿ ಇದಕ್ಕೆ ಅಪವಾದವಾಗಿಯೇ ಅರವತ್ತರ ದಶಕದವರೆಗೆ ಸಾಗಿದ್ದು ಕಲ್ಯಾಣಮ್ಮನವರ ತಾತ್ವಿಕ ದೃಢತೆಯನ್ನು ಸೂಚಿಸುತ್ತದೆ ಎನ್ನಬಹುದು.

ಶಾರದಾ ಸ್ತ್ರೀ ಸಮಾಜದ ಹೊಣೆಯ ಜೊತೆಗೆ ಸರಸ್ವತಿಯ ಜವಾಬ್ದಾರಿಯನ್ನೂ ತಮ್ಮ ಬೆನ್ನಿಗೇರಿಸಿಕೊಂಡ ಕಲ್ಯಾಣಮ್ಮ ಪತ್ರಿಕೆಗಾಗಿ ಮಾಡದ ಕರ್ತವ್ಯವಿಲ್ಲ. ಪಡದ ಕಷ್ಟವಿಲ್ಲ. ಬರಹಗಳಿಗಾಗಿ ಲೇಖಕ ಲೇಖಕಿಯರಿಗೆ ಪತ್ರ ಬರೆಯುವುದು. ಸಾಧ್ಯವಿದ್ದವರನ್ನು ಸ್ವತಃ ಕಂಡು ಬರೆಸುವುದು, ಮುದ್ರಣ ಶಾಲೆಗಳಿಗೆ ಓಡಾಡುವುದು, ಮುದ್ರಣದ ಕಾಗದವನ್ನು ಗಳಿಸುವುದು ಮುದ್ರಿತ ಪತ್ರಿಕೆಯನ್ನು ಚಂದಾದಾರರಿಗೆ ಟಪ್ಪಾಲಿನಲ್ಲಿ ಕಳಿಸುವುದೇ ಮೊದಲಾದ ಎಲ್ಲ ಕೆಲಸಗಳನ್ನೂ ಅವರು ನಿರ್ವಹಿಸುತ್ತಿದ್ದರು. ಅನೇಕ ಪ್ರಸಿದ್ಧ ಲೇಖಕ-ಲೇಖಕಿಯರಿಂದ ಆಹ್ವಾನಿಸಿದ ರಚನೆಗಳಲ್ಲದೆ ಅಸಂಖ್ಯಾತ ಹೊಸ ಪ್ರತಿಭೆಗಳು ಸರಸ್ವತಿಯ ಮೂಲಕ ಬೆಳಕು ಕಾಣಲು ಅವರು ಅವಕಾಶ ನೀಡಿದ್ದರು. ಹೊಸಬರಲ್ಲಿ ಯುವಜನರಲ್ಲಿ ಹುದುಗಿರುವ ಪ್ರತಿಭೆಯನ್ನು ಗುರುತಿಸಿ, ಬೆಳೆಸಿ, ಅವರನ್ನು ತಮ್ಮ ಕೆಲಸಗಳಲ್ಲಿ ಸಹಕರಿಸುವಂತೆ ಪ್ರೇರೇಪಿಸುತ್ತಿದ್ದರು. ಕಲ್ಯಾಣಮ್ಮನವರ ವಾತ್ಸಲ್ಯಮಯ ವ್ಯಕ್ತಿತ್ವದಿಂದ ಪ್ರಭಾವಿತರಾದ ಹಲವರು ಈ ರೀತಿ ತಮ್ಮ ಪ್ರತಿಭೆಯ ಜ್ಯೋತಿಗಳನ್ನು ಅವರಿಂದ ಬೆಳಗಿಸಿಕೊಂಡರು. ಅಂಥ ಎರಡು ಉದಾಹರಣೆಗಳನ್ನು ಟಿ.ಕೆ. ಸೀತಾರಾಮ ಜೋಯಿಸ್ ಮತ್ತು ಎಚ್. ವೈ. ಸರಸ್ವತ ನವರು ಒದಗಿಸುತ್ತಾರೆ.

ತೋವಿನಕೆರೆ ಕೆ. ಸೀತಾರಾಮ ಜೋಯಿಸ್ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ (೧೯೨೬-೨೭) 'ಸೀತಾ-ದ್ರೌಪದೀ' ಎಂಬ ಲೇಖನವನ್ನು ಬರೆದು ಸರಸ್ವತಿಗೆ ಕಳುಹಿಸಿದ್ದರು. ಅದು ಪ್ರಕಟವೂ ಆಗಿತ್ತು. ಮುಂದೆ ಅವರು ಬೆಂಗಳೂರಿನ ರಾಮಕೃಷ್ಣಾಶ್ರಮದ ಸಮಾರಂಭವೊಂದರಲ್ಲಿ ಮೂರು ಜನ ಮಹಿಳೆಯರು ಶ್ರೀ ಶಾರದಾದೇವಿಯವರನ್ನು ಸ್ವತಃ ಕಂಡಂತೆ ಭಾವಪರವಶತೆಯಿಂದ ಮಾತನಾಡುತ್ತಿದ್ದುದನ್ನು ಕೇಳಿ ಜೋಯಿಸರು ಅಲ್ಲಿದ್ದ ಚಿಕ್ಕ ಹುಡುಗಿಯನ್ನು 'ಆಕೆ ಯಾರು?' ಎಂದು ಕೇಳಿದರು. 'ಅವರೇ ಕಲ್ಯಾಣಮ್ಮ' ಎಂದಳು ಆ ಹುಡುಗಿ. ಭಾಷಣ ಮುಗಿದ ಮೇಲೆ ಇವರು ಹತ್ತಿರ ಹೋಗಿ ತಮ್ಮ ಪರಿಚಯ ಹೇಳಿಕೊಂಡರು. ಇವರ ಹೆಸರು ಕೇಳಿದವರೇ ಕಲ್ಯಾಣಮ್ಮ ಥಟ್ಟನೆ 'ನೀವೇನ ಸೀತಾ-ದ್ರೌಪದಿ ಬರೆದವರು' ಎಂದು ಕೇಳಿದರಲ್ಲದೆ ದೆಹಲಿಯ 'ಚಿಲ್ಡ್ರನ್ಸ್ ನ್ಯೂಸ್' ಪತ್ರಿಕೆಯಲ್ಲಿ ಇದೇ ಹೆಸರಿನವರೊಬ್ಬರು ಬರೆಯುತ್ತಾರಲ್ಲ, ಅದೂ ನೀವೇನೆ?' ಎಂದು ಕೇಳಿ ಖಚಿತಪಡಿಸಿಕೊಂಡರು. ತಮ್ಮೊಂದಿಗೆ ಮನೆಗೆ ಕರೆದೊಯ್ದು, ಸರಸ್ವತಿಯ ಮಕ್ಕಳ ಪುಟಗಳಿಗಾಗಿ ಬರೆದುಕೊಡುವಂತೆ ಕೇಳಿಕೊಂಡರು. 'ಹಸನ್ಮುಖಿ','ಸೀತಾರಾಮು', 'ಸಾಧು ವಿಶ್ವಾಸು' ಎಂಬ ಹೆಸರುಗಳಿಂದ ಜೋಯಿಸರು ಹಲವಾರು ಕಿರುಗತೆಗಳು, ಕವನಗಳು, ಮತ್ತು ವಿವಿಧ ಪ್ರಾಂತಗಳಿಂದ ಬರೆದ ಪತ್ರರೂಪದ ರಚನೆಗಳನ್ನು ಸರಸ್ವತಿಯ ಮಕ್ಕಳ ಪುಟಗಳಿಗೆ ಸುಮಾರು ೧೯೩೭ರ ವರೆಗೆ ಬರೆದಿದ್ದಾರೆ.

ಇಷ್ಟೇ ಆಗಿದ್ದರೆ ಆ ಕಾಲದ ಎಲ್ಲ ಪತ್ರಿಕೋದ್ಯೋಗಿಗಳು, ಸಂಪಾದಕರು ತೋರುತ್ತಿದ್ದ ಗುಣ ಇದೇ ಅಲ್ಲವೆ ಎನ್ನಿಸಬಹುದು. ತಮ್ಮ ಉದ್ದೇಶದ ಸಾಧನೆಗಳಿಗಾಗಿ ಇತರರ ಪ್ರತಿಭೆಗಳನ್ನು ಬಳಸಿಕೊಳ್ಳುವುದರಲ್ಲಿ ಅವರ ಸ್ವಂತದ ಆವಶ್ಯಕತೆಯೂ ಇರುತ್ತದೆನ್ನುವುದು ನಿಜ. ಆದರೆ ತಮ್ಮೊಂದಿಗೆ ಸಹಕರಿಸಿದ ಜನರೊಂದಿಗೆ ಕಲ್ಯಾಣಮ್ಮ ಎಷ್ಟು ವಿನಯ, ಕೃತಜ್ಞತೆಗಳಿಂದ ನಡೆಯುತ್ತಿದ್ದರು ಎನ್ನುವುದನ್ನು ಗಮನಿಸಬೇಕು. ಸರ್ವೇಯರ್ ಆಗಿದ್ದು ಊರೂರು ಸುತ್ತಬೇಕಾಗಿದ್ದ ಜೋಯಿಸರು ಮೈಸೂರಿನಲ್ಲಿದ್ದಾಗ, ದಸರಾ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆ ಮುಂತಾದ ಕಾರ್ಯಕ್ರಮಗಳಿಗಾಗಿ ಹೋಗುತ್ತಿದ್ದ ಕಲ್ಯಾಣಮ್ಮ 'ಮನೆಯ ಮಗಳೇ' ಎಂಬಷ್ಟು ಪ್ರೀತಿಯಿಂದ ಜೋಯಿಸರ ಮನೆಗೆ ಹೋಗುತ್ತಿದ್ದರು. ಅಷ್ಟು ದೊಡ್ಡ ವಿದುಷಿ ಸಾಮಾಜಿಕ ಪ್ರತಿಷ್ಠೆಗಳಿರುವಾಕೆ ತಮ್ಮೊಂದಿಗ ಎಷ್ಟು ಸರಳವಾಗಿ ಬೆರೆತು ಹೊಂದಿಕೊಳ್ಳುತ್ತಾರೆ ಎಂಬುದರಿಂದಾಗಿ ತುಂಬ ಸಂಪ್ರದಾಯಸ್ಥರಾದ ಜೋಯಿಸರ ತಾಯಿ ಕೂಡ ಕಲ್ಯಾಣಮ್ಮನವರನ್ನು ತಮ್ಮದೇ ಒಬ್ಬ ಮಗಳಂತೆ ಗೌರವ, ಅಭಿಮಾನಗಳಿಂದ ವಾತ್ಸಲ್ಯದಿಂದ ನಡೆಸಿಕೊಳ್ಳುತ್ತಿದ್ದರು. ತಾವು ಒಬ್ಬ ಸಾಮಾನ್ಯ ಲೇಖಕರಾಗಿದ್ದರೂ ತಮ್ಮಂಥವರನ್ನು ಹೊರತಂದು ಬೆಳಗಿಸಿದ ಕಲ್ಯಾಣಮ್ಮ ಹಿರಿಯಕ್ಕನಂತಿದ್ದರೆಂದು ನೆನೆಯುವಾಗ ಎಂಭತ್ತು ದಾಟಿರುವ ಜೋಯಿಸರ ಕಣ್ಣುಗಳಲ್ಲಿ ನೀರು ಜಿನುಗುತ್ತದೆ.

ಸ್ನೇಹವಾತ್ಸಲ್ಯಗಳಿಂದ ಎಂಥವರ ಮನಸ್ಸನ್ನೂ ಗೆದ್ದು ಅವರ ಸಹಕಾರವನ್ನು ಪಡೆದು ಕಾರ್ಯಸಾಧನೆ ಮಾಡಿದ್ದರ ಜೊತೆಗೆ ತಮ್ಮ ಸಾಧನೆ ಪ್ರತಿಷ್ಠೆಗಳಿಗೆ ತಾವೇ ಮಣಿದು ತಲೆಗೇರಿಸಿಕೊಳ್ಳದ ಈ ಸರಳತೆಯೇ ಕಲ್ಯಾಣಮ್ಮನವರ ಯಶಸ್ಸಿನ ಮೂಲವೆನ್ನಬಹುದು. 'ಸರಸ್ವತಿ ಕಾರ್ಯಾಲಯ' ಎನ್ನುವುದು ಯಾವುದೋ ಕಛೇರಿಯಲ್ಲ. ಅವರಿದ್ದ ಮನೆಯ ವರಾಂಡದಲ್ಲೇ ಒಂದು ಮೂಲೆ! ಅದರಲ್ಲಿ ಇರಿಸಿದ್ದ ದೊಡ್ಡದೊಂದು ಮರದ ಪೆಟ್ಟಿಗೆಯೇ ಅವರ ಗ್ರಂಥಭಂಡಾರ. ಸರಸ್ವತಿಯ ಲೇಖಕರು ಅವಕ್ಕೆ ನೆರವಾಗಲು ಬರುತ್ತಿದ್ದ ಪರಿಚಿತರು, ಒತ್ತೈಪಿಗಳು ಕಲ್ಯಾಣಮ್ಮನವರನ್ನು ಅವರ ಮನೆಯಲ್ಲಿಯೇ ಭೇಟಿಯಾಗುತ್ತಿದ್ದರು. 'ತಾಯಿನಾಡು', 'ಡೇಲಿನ್ಯೂಸ್' ಪತ್ರಿಕೆಗಳನ್ನು ಹೊರತರುತ್ತಿದ್ದ ಪಿ. ಆರ್. ರಾಮಯ್ಯ ಮತ್ತು ಪಿ. ಆರ್. ಜಯಲಕ್ಷಮ್ಮ ದಂಪತಿಗಳು, 'ಜೀವನ'

ಪತ್ರಿಕೆಯ ಸಂಪಾದಕರಾಗಿದ್ದ ಲೇಖಕ ಮಾಸ್ತಿ, ಸುಬೋಧ ರಾಮರಾಯರು, ತಿ.ತಾ. ಶರ್ಮರೇ ಮೊದಲಾದ ಪತ್ರಿಕೋದ್ಯೋಗಿಗಳ ಹಿತಾಕಾಂಕ್ಷೆ. ಬೆಂಬಲಗಳು ಸರಸ್ವತಿಗೆ ಇದ್ದರೂ ಪತ್ರಿಕೆಯ ಆರ್ಥಿಕ ಮುಗ್ಗಟ್ಟಿನ ವಿರುದ್ಧ ಹೋರಾಟವನ್ನು ಕಲ್ಯಾಣಮ್ಮನವರೊಬ್ಬರೇ ನಡೆಸಬೇಕಾಗಿತ್ತು. ಅವರ ಹಲವಾರು ಸಂಪಾದಕೀಯಗಳಲ್ಲಿ ಅಂಥ ಯಾತನೆಯನ್ನು ಕಾಣಬಹುದು.

'....ಸರಸ್ವತಿಯು ೫ ವರ್ಷಗಳನ್ನು ಕಳೆದು ೬ನೆಯ ವರ್ಷಕ್ಕೆ ತೊಡಗಿರುವವಳು ಇಷ್ಟು ದಿನವೂ ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ಕೇವಲ ಪಸುಳೆಯಾಗಿದ್ದ ಈ ಬಾಲಕಿಯು ಈಗ ತನ್ನ ಕರ್ತವ್ಯ ಕಾರ್ಯಗಳ ಜವಾಬ್ದಾರಿಯನ್ನು ತಿಳಿದವಳಾದಳು. ಇವಳನ್ನು ಪೀಡಿಸುತ್ತಿದ್ದ  ಬಾಲಗ್ರಹಾದಿ ದೋಷಗಳು ಮುಂದಿವಳನ್ನು ಬಾಧಿಸದಿರಬೇಕೆಂದು ಜಗತಿಯನ್ನು ಪ್ರಾರ್ಥಿಸುವೆವು...."

"....ಸರಸ್ವತಿಯು ಪುರುಷಯತ್ನವಲ್ಲ. ಸ್ತ್ರೀಯರಿಗೆ ಉಪಯುಕ್ತವಾದ ಲೇಖನಗಳಿಂದ ಕೂಡಿ ಸ್ತ್ರೀಸಮೂಹದ ಸೇವೆಯಲ್ಲಿ ತನುವನ್ನು ತೇಯ್ದುಬಿಡಬೇಕೆಂಬುದೇ ಅದರ ಮುಖ್ಯೋದ್ದೇಯ...ಸಾಕಾದಷ್ಟು ಪ್ರೋತ್ಸಾಹದ ಮಾತು ಹಾಗಿರಲಿ, ಮುದ್ರಣದ ಕಾರ್ಯವು ಸುಸೂತ್ರವಾಗಿ ನಡೆಯುವುದಕ್ಕೆ ಬೇಕಾದಷ್ಟು ಜನ ಚಂದಾದಾರರೂ ದೊರಕದೆ ಸರಸ್ವತಿಯ ಆರ್ಥಿಕ ಪರಿಸ್ಥಿತಿಯು ಬಹು ಶೋಚನೀಯ ಸ್ಥಿತಿಯಲ್ಲಿದೆ... ಸರಸ್ವತಿಯು ನಿಮಗೆ ಅಗ್ರಾಹ್ಯಳಾದರೂ ನಿಮ್ಮ ಗೃಹಲಕ್ಷ್ಮಿಯರಿಗೂ ಅಕ್ಕತಂಗಿಯರಿಗೂ ಪ್ರಿಯಳಾಗಲಿ...."

ಪತ್ರಿಕೆಯುದ್ದಕ್ಕೂ ಈ ಆರ್ಥಿಕ ತೊಂದರೆಯಿದ್ದೇ ಇದ್ದರೂ, ಅದನ್ನು ಉತ್ತಮಗೊಳಿಸಲು, ಅದರ ಸ್ವರೂಪವನ್ನು ಮತ್ತು ಅದರೊಳಗಿನ ವಸ್ತುವಿನ ಗುಣಮಟ್ಟವನ್ನು ಪರಿಷ್ಕರಿಸಲು ಅವರು ಸದಾ ಯತ್ನಿಸುತ್ತಲೇ ಇದ್ದರು ಎಂಬುದನ್ನೂ ಕಾಣುತ್ತೇವೆ:

> '... ಮುಂದಿನ ಸಂಪುಟದಿಂದ ಕೆಲವು ಬದಲಾವಣೆಗಳನ್ನು ಮಾಡಲು ಯತ್ನಿಸಿದೆ. 'ಕುಸುಮಕುಂಜ', 'ಗೃಹವಿಜ್ಞಾನ', 'ವನಿತಾ ವಿನೋದ','ಮುತ್ತಿನ ಮಾಲೆ','ಚಾರು ಚರಿತಾವಳಿ', 'ಸಾಹಿತ್ಯ ಸರೋಜ', 'ಕನ್ಯಾ ಕೈಪಿಡಿ', 'ಸ್ತ್ರೀ ಸಂಸಾರ' ಎನ್ನುವ ಶಿರೋಲೇಖನಗಳನ್ನು ಪ್ರಾರಂಭಿಸಲಿರುವೆವು... ಉತ್ತರ ದೇಶದ ಕೆಲವು ಪ್ರಸಿದ್ಧ ಹಿಂದಿ ಪತ್ರಿಕೆಗಳ ಅತ್ಯುತ್ತಮವಾದ ಸ್ತ್ರೀಸಂಬಂಧದ ಲೇಖನಗಳನ್ನು ಪರಿವರ್ತಿಸಿ ಹಾಕುವ ಏರ್ಪಾಡು ಮಾಡಲಾಗಿದೆ. ಸಾಧ್ಯವಾದಷ್ಟು ಸಚಿತ್ರವಾಗಿಯೇ ಪತ್ರಿಕೆಯು ನಡೆಸಲ್ಪಡುವುದು....'ಸುಖಲತೆ' ಎನ್ನುವುದೊಂದು ಕಾದಂಬರಿಯೂ 'ಷಹಜಹಾನ್' ಎನ್ನುವದೊಂದು ನಾಟಕವೂ ಕ್ರಮಶಃ ಪ್ರಕಟಿಸಲ್ಪಡುವುವು..."

ಧಾರಾವಾಹಿಗಳಿಂದ ಪತ್ರಿಕೆಯ ಬಗ್ಗೆ ಜನರಲ್ಲಿ ವಾಚನಾಭಿರುಚಿಯನ್ನು ಮೂಡಿಸಲು ಯತ್ನಿಸಿದಂತೆ ಕಲ್ಯಾಣಮ್ಮ ಹೆಸರಾಂತ ವ್ಯಕ್ತಿಗಳಿಂದ ವಿವಿಧ ವೃತ್ತಿಗಳಲ್ಲಿ ಸಾಧನೆ ಮಾಡಿದವರಿಂದ ಲೇಖನಗಳನ್ನು ಕೋರಿ ಬರೆಸುವ ಮೂಲಕ ಪತ್ರಿಕೆಯ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತಿದ್ದುದಕ್ಕೆ ನಿದರ್ಶನವಾಗಿ ಅವರೇ ನೀಡಿರುವ ಈ ಪಟ್ಟಿಯನ್ನು ಗಮನಿಸಬಹುದು:

'...ಕೊಚ್ಚಿಯ ಲೆಜಿಸ್ಲೇಟಿವ್ ಕೌನ್ಸಿಲ್ ಸದಸ್ಯರಾದ ಶ್ರೀಮತಿ ಮಾಧವಿ ಅಮ್ಮನವರು, ಮದ್ರಾಸ್‌ನ 'ಚಿಂತಾಮಣಿ'ಯ ಸಂಪಾದಕರು ಶ್ರೀಮತಿ ಬಾಲಮ್ಮಾಳ್‌ಯವರೂ, 'ಪ್ರೇಮಾಯತನ'ದ ಪಂಡಿತ ತಾರಾನಾಥ ಯೋಗಿಗಳವರೂ, ಶ್ರೀಯುತರಾದ ದೇವುಡು ನರಸಿಂಹಶಾಸ್ತ್ರಿ ಎಂ.ಎ. ಯವರೂ, 'ವಿಶ್ವಕರ್ನಾಟಕ'ದ ಸಂಪಾದಕರಾದ ತಿರುಮಲೆ ತಾತಾಚಾರ್ಯ ಶರ್ಮರವರೂ, 'ರಂಗಭೂಮಿ'ಯ ಸಂಪಾದಕರಾದ ದತ್ತಾತ್ರೇಯ ಕೃಷ್ಣಭಾರದ್ವಾಜರೂ, 'ಜಯ ಕರ್ನಾಟಕ'ದ ಸಂಪಾದಕರಾದ ಆಲೂರ್ ವೆಂಕಟರಾವ್ ಬಿ.ಎ.ಎಲ್.ಎಲ್.ಬಿ. ಯವರೂ, ಶ್ರೀಯುತರಾದ ಗವಾನಂದ ಕೆರೋಡಿ ಸುಬ್ಬರಾವ್ ಬಿ.ಎ.ಯವರೂ, ಪ್ರಸಿದ್ಧ ನಟ ಟಿ.ಪಿ. ಕೈಲಾಸಂಯವರೂ, ಶ್ರೀಮತಿ ಟಿ. ಕನಕಲಕ್ಷ್ಮಮ್ಮ ಎಂ.ಎ. ಯವರೂ, ಶ್ರೀಯು ಆರ್. ರಾಘವೇಂದ್ರಾಚಾರ್ ಜಾಗಲಬ್ಬಿ ಬಿ.ಎ.ಬಿ.ಎಲ್. ಅವರೂ, ಶ್ರೀಯುತ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎಂ.ಎ. ಯವರೂ, ಶ್ರೀಯುತ ವಿ.ಬಿ. ಪುರಾಣಿಕ ಬಿ.ಎ.ಯವರೂ ಲೇಖನಗಳನ್ನು ಬರೆದು ಕೊಡಲೊಪ್ಪಿರುವರು..."

ಪತ್ರಿಕೆಯನ್ನು ಉತ್ತಮಪಡಿಸಲು ಇಂಥ ಉತ್ಸಾಹ ಕಲ್ಯಾಣಮ್ಮನವರಲ್ಲಿ ಸದಾ ಇತ್ತು. ಆದರೆ ಅವರ ಈ ಉತ್ಸಾಹಕ್ಕೆ ತಕ್ಕ ಬೆಂಬಲ ನಾಡಿನ ಜನರಿಂದ ಅವರಿಗೆ ಎಂದೂ ದೊರೆಯಲಿಲ್ಲ. ಪ್ರತಿಬಾರಿ ಸರಸ್ವತಿಯ ಪ್ರಗತಿ ಕುಂಠಿತವಾದಾಗಲೂ ಅವರು ದುಃಖಿಪಟ್ಟಿದ್ದಾರೆ, ಮನವಿ ಮಾಡಿದ್ದಾರೆ:

"... ಇಲ್ಲಿಗೆ ಸರಸ್ವತಿಗೆ ಏಳು ವರ್ಷ ತುಂಬಿದಹಾಗಾಯಿತು... ಅವಳಿಗಿನ್ನೂ ಶೈಶವಾವಸ್ಥೆಯು ಕಳೆದಿಲ್ಲ. ಆದುದರಿಂದ ಪ್ರತಿಯೊಬ್ಬ ಕನ್ಯಾಪಿತೃವೂ ಅವಳನ್ನು ಪೋಷಿಸಿ ದೊಡ್ಡವಳನ್ನಾಗಿ ಮಾಡಬೇಕಾದುದು ತನ್ನ ಕರ್ತವ್ಯವೆಂದು ತಿಳಿಯಬೇಕು...'

'... ಹೆಣ್ಣುಮಕ್ಕಳ ಉಪಯೋಗಕ್ಕಾಗಿ ಅಖಿಲ ಕರ್ನಾಟಕದಲ್ಲಿ ಎಷ್ಟು ಪತ್ರಿಕೆಗಳಿವೆ?  ಈ ಪ್ರಶ್ನೆಗೆ ಉತ್ತರ ಹೇಳುವಾಗ ನಿಮ್ಮ ಹೃದಯ ಬಹುಮಟ್ಟಿಗೆ ನಿರ್ಬಲವಾಗುವುದೆಂದು ಯಾರಿಗೆ ಗೊತ್ತಿಲ್ಲ? ಹೆಣ್ಣುಮಕ್ಕಳು ಧರ್ಮದ ಹಾದಿಯಲ್ಲಿ ನಿರತರಾಗಿದ್ದ ನಮ್ಮ ಸ್ತ್ರೀಯರ ವ್ಯಕ್ತಿತ್ವವನ್ನು ಹೊಂದಿ ನಿತ್ಯ ಸುಖವನ್ನು ಪಡೆಯಲೆಂದು ಯಾರು ತಾನೆ ಹರಸುವುದಿಲ್ಲ? ಈ ಮಾತು ಮಾದರೀ ಸರ್ಕಾರದವರ ಉದಾರ ಹೃದಯಕ್ಕೆ ಕಾಣುವುದೆ?...."

ಈ 'ಮಾದರಿ ಸರ್ಕಾರ' ಎನ್ನುವುದು ಮೈಸೂರು ಸಂಸ್ಥಾನದ ಸರ್ಕಾರಕ್ಕೆ ಬ್ರಿಟಿಷರಿಂದ ದಕ್ಕಿದ್ದ ಬಿರುದು. ಒಂದೆಡೆ ವಿದ್ಯುಚ್ಛಕ್ತಿ

ಉತ್ಪಾದನೆ, ಕಾರ್ಖಾನೆಗಳ ಸ್ಥಾಪನೆ, ನೀರಾವರಿ ಅಣೆಕಟ್ಟುಗಳ ನಿರ್ಮಾಣ, ಶಾಲಾಕಾಲೇಜುಗಳ ಸ್ಥಾಪನೆ, ವಿಶ್ವವಿದ್ಯಾನಿಲಯ ಸ್ಥಾಪನೆ ಮೊದಲಾದ ಬಂಡವಾಳಶಾಹಿಯ ಬೆಳವಣಿಗೆಯನ್ನು ಪ್ರತಿನಿಧಿಸುವಂತಹ ಪ್ರಗತಿಪರ ಸಾಧನೆಗಳನ್ನು ಮೈಸೂರು ಸಂಸ್ಥಾನ ಸಾಧಿಸಿತ್ತು. ಮತ್ತೊಂದೆಡೆ ಸ್ಥಳೀಯ ಆಡಳಿತ ನೆಲೆಗಳೆಲ್ಲ ಪಾಳೆಯಗಾರರಂಥ ಜಮೀನುದಾರರ ಮುಷ್ಟಿಯಲ್ಲಿದ್ದು ಬೇರಿನ ನೆಲೆಯಲ್ಲಿ ಜನರ ಶಿಕ್ಷಣಾವಕಾಶ ತುಂಬ ನಿರ್ಲಕ್ಷ್ಯಕ್ಕೊಳಗಾಗಿದ್ದ ವೈಪರೀತ್ಯವಿತ್ತು. ಸಾಮಾನ್ಯ ಪ್ರಾಥಮಿಕ ಶಿಕ್ಷಣಕ್ಕೂ ಅಭಾವವಿದ್ದಾಗ ಸ್ತ್ರೀಶಿಕ್ಷಣದ ಬಗ್ಗೆ ಹೇಳಬೇಕೆ? ಆದ್ದರಿಂದಲೇ ಕಲ್ಯಾಣಮ್ಮ ಈ ಪರಿಸ್ಥಿತಿಯತ್ತ ಸರ್ಕಾರದ ಗಮನ ಸೆಳೆಯುತ್ತ, ಸರಸ್ವತಿಯಂಥ ಸ್ತ್ರೀ ಶಿಕ್ಷಣವನ್ನು ಧ್ಯೇಯವಾಗಿಟ್ಟುಕೊಂಡ ಪತ್ರಿಕೆಗೆ ಸರ್ಕಾರ ನೆರವು ನೀಡದಿರುವ ಬಗ್ಗೆ ಇಲ್ಲಿ ನೋವನ್ನು ವ್ಯಕ್ತಪಡಿಸಿದ್ದರೆನ್ನುವುದು ಅರ್ಥಪೂರ್ಣ.

ಪತ್ರಿಕೆಯ ಆರ್ಥಿಕಸ್ಥಿತಿ ಎಷ್ಟೇ ನಿರಾಶಾದಾಯಕವಾಗಿದ್ದರೂ, ಅಂಥ ಸ್ಥಿತಿಯಲ್ಲೂ ಅದರ ಆಕಾರವನ್ನು ದೊಡ್ಡದು ಮಾಡಬೇಕೆಂಬ ಸಲಹೆ ಓತ್ಯಪಿಗಳಿಂದ ಬಂದಾಗ ಅವರ ಪ್ರತಿಕ್ರಿಯೆಯಿದು : '........ ಪತ್ರಿಕೆಯ ಆಕಾರವನ್ನು ಹೆಚ್ಚಿಸುವುದು ಈ ವರ್ಷ ಸಾಧ್ಯವಾಗದುದಕ್ಕಾಗಿ ವಿಷಾದಿಸುವೆವು. ಅದಕ್ಕೆ ಪ್ರತಿಯಾಗಿ ಈಗಿರುವ ೪೮ ಪುಟಗಳನ್ನು ೫೬ ಪುಟಗಳಿಗೆ ಹೆಚ್ಚಿಸಿ ಸಾಧ್ಯವಾದ ಮಟ್ಟಿಗೆ ಅಂದವಾಗಿಯೂ ಚಿತ್ರಸಹಿತವಾಗಿಯೂ ಮುದ್ರಿಸಲಾಗುವುದು. ಎಂದಿನಂತೆ ಜುಲೈ ತಿಂಗಳಿನಲ್ಲಿ.ಪತ್ರಿಕೆಯ ವರ್ಷಾರಂಭವನ್ನು ಮಾಡದೆ ಈ ವರ್ಷದಿಂದ ಅಶ್ವಯುಜ ಸರಸ್ವತೀ ಪೂಜೆಗೆ 'ಸರಸ್ವತಿ'ಯು ತನ್ನ ಗೆಳೆಯ ಗೆಳತಿ ಪೋಷಕರ ಆಹ್ವಾನಾದರಗಳನ್ನು ನಿರೀಕ್ಷಿಸುತ್ತಾ ಬರುವಳು. ಅಷ್ಟ ವರ್ಷದ ಈ ಕನ್ನಡ ಶಿಶುವಿಗೆ ಕರ್ನಾಟಕದ ಜನಕ-ಜನನಿಯರು ಪುಷ್ಟಿಯಾದ ಆಹಾರವನ್ನಿತ್ತು ಪೋಷಿಸುವರೆ?...."

ಸರಸ್ವತಿಯ ಸಲುವಾಗಿ ತಮ್ಮ ಅಂತಶ್ಶಕ್ತಿಯನ್ನು ಧಾರೆಯೆರೆದ ಕಲ್ಯಾಣಮ್ಮ ಆ ಪತ್ರಿಕೆಯ ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ನಿರಂತರ ಶ್ರಮಿಸಿದ್ದರ ಫಲವಾಗಿ ಪರಿಸ್ಥಿತಿ ಕೊಂಚ ಸುಧಾರಿಸಿದಾಗ 'ಇದುವರೆಗೆ ತನ್ನ ಧ್ಯೇಯದ ಸಲುವಾಗಿ ಹೆಚ್ಚು ಕೆಲಸವನ್ನು ತಾನು ಮಾಡಿದ್ದೇನೆಂದು ಹೇಳಿಕೊಳ್ಳುವುದಾಗದಿದ್ದರೂ ಆ ಹಾದಿಯಲ್ಲಿ ನಡೆಯುತ್ತಿರುವ' ಬಗ್ಗೆ ಸ್ವಲ್ಪ ಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಆದರೆ ತಮ್ಮ ಮುಖ್ಯ ಗುರಿಯನ್ನು ಸೇರಲು 'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ' ಎಂಬ ಗೀತಾವಾಣಿಯ ಅರ್ಥವರಿತು ಸಾಗುವುದೊಂದೇ ದಾರಿ ಎಂದು ತಮ್ಮ ನಿಸ್ಪೃಹತೆಯನ್ನೂ ಪ್ರಕಟಿಸಿದ್ದಾರೆ.

ಕಲ್ಯಾಣಮ್ಮನವರ ಯತ್ನಗಳ ಫಲವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರೂ, ಬೊಂಬಾಯಿ ಸಾರ್ವಜನಿಕ ಶಿಕ್ಷಣ ಇಲಾಖೆಯವರೂ ಎಲ್ಲಾ ಶಾಲೆಗಳಿಗೆ ಮತ್ತು ಗ್ರಂಥಾಲಯಗಳಿಗೆ ಈ ಪತ್ರಿಕೆಯನ್ನು ಶಿಫಾರಸು ಮಾಡಿದ್ದರು. (ಟಿ.ಬಿ. ನಂ. ೨೪೪ ದಿನಾಂಕ ೧೫-೨-೨೯). ಅದೇ ರೀತಿ ರೆವಿನ್ಯೂ ಕಮೀಷನರು ರಾಜ್ಯದ ಎಲ್ಲಾ ಗ್ರಾಮ ಪಂಚಾಯ್ತಿಗಳಿಗೆ ಇದನ್ನು ಓದಲರ್ಹವೆಂದು ಶಿಫಾರಸು ಮಾಡಿದ್ದರು. ಕಲ್ಯಾಣಮ್ಮನವರ ಈ ಹೆಮ್ಮೆಯ ಕೂಸು ಹೀಗೆ ಬಹು ಕಷ್ಟದಿಂದ ಇಪ್ಪತ್ತೈದು ವರ್ಷಗಳ ಗಡಿ ದಾಟಿತು. ಆಗ ಅವರು ಪತ್ರಿಕೆಯ ಸಾಧನೆಯ ಬಗ್ಗೆ ಸ್ವಲ್ಪ ನೆಮ್ಮದಿ ಪಟ್ಟಿದ್ದರೂ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಪತ್ರಿಕೆಯನ್ನು ತಮ್ಮದಾಗಿಸಿಕೊಳ್ಳದಿರುವ ಬಗ್ಗೆ ಅವರಿಗೆ ನೋವಿತ್ತು:

> '.... ಕನ್ನಡ ಮಹಿಳೆಯರಿಗಾಗಿ ಕಾಲು ಶತಮಾನ ಸೇವೆ ಸಲ್ಲಿಸಿರುವ ಪತ್ರಿಕೆ ಇದೊಂದೇ ಎನ್ನುವುದು ಎಲ್ಲರೂ ಅರಿತ ವಿಷಯವೇ. ಆದರೂ ತಮ್ಮ ಮನೋಭಿಪ್ರಾಯವನ್ನೂ ತಮ್ಮ ಉನ್ನತಿಯ ಮಾರ್ಗವನ್ನೂ ಧೈರ್ಯದಿಂದ ಸೂಚಿಸಲು, ತಮ್ಮ ಮಕ್ಕಳ ಪ್ರಗತಿಗೆ ಸರಿಯಾದ ಹಾದಿಯನ್ನು ತೋರಲು ಸಾಕಷ್ಟು ಮಹಿಳೆಯರು ಮುಂದಾಗಬೇಕು. 'ಸರಸ್ವತಿ'ಯು ತನ್ನದೇ ಎಂಬ ಭಾವನೆಯು ಕನ್ನಡನಾಡಿನ ಮೂಲೆಮೂಲೆಗಳಲ್ಲಿಯೂ ಬೆಳಗಬೇಕು. ಕನ್ನಡ ಮಕ್ಕಳ ಕೈಯಲ್ಲೆಲ್ಲಾ 'ಸರಸ್ವತಿ'ಯ ಮಕ್ಕಳ ಬಾವುಟವು ಉಚ್ಚಸ್ಥಾನದಲ್ಲಿ ಹಾರಾಡಬೇಕು...."

ಕಲ್ಯಾಣಮ್ಮನವರ ಈ ಮಹದಾಕಾಂಕ್ಷೆ ಸ್ವಪ್ರಯೋಜನ, ಸ್ವಂತದ ಕೀರ್ತಿ ಹೆಗ್ಗಳಿಕೆಗಾಗಿರದೆ ನಾಡಿನ ಎಲ್ಲ ಮಹಿಳೆಯರಿಗೂ ಪತ್ರಿಕೆ ಉಪಯುಕ್ತವೆನಿಸಬೇಕು, ಅವರು ಅದರಿಂದ ಪ್ರಯೋಜನ ಪಡೆಯಬೇಕು ಎಂಬುದಕ್ಕಾಗಿತ್ತು. ಈ ಕನಸು ಎಂದೂ ಸಂಪೂರ್ಣವಾಗಿ ನನಸಾಗಲಿಲ್ಲ. ಆದರೆ ಎರಡನೆಯ ಮಹಾಯುದ್ಧದ ಭೀಕರ ಪರಿಣಾಮಗಳಿಂದಾಗಿ ದೇಶದ ಆರ್ಥಿಕ ಸ್ಥಿತಿ ಏರುಪೇರಾದಾಗ ಸರಸ್ವತಿಯ ಜೊತೆಯ ಅನೇಕ ಪ್ರಸಿದ್ಧ ಪತ್ರಿಕೆಗಳು ಮಣ್ಣುಮುಕ್ಕಿದವು. ಸ್ವಾತಂತ್ರ್ಯಾನಂತರದ ದುರ್ಭರ ದಿನಗಳಲ್ಲೂ ಹೀಗಾಯಿತು. ಆದರೆ ಸರಸ್ವತಿ ಮಾತ್ರ ಹೇಗೋ ಈ ಎಲ್ಲ ಅವಧಿಗಳಲ್ಲಿ ಜೀವ ಉಳಿಸಿಕೊಂಡಿದ್ದನ್ನು ಕಲ್ಯಾಣಮ್ಮ ತಿಳಿಸುತ್ತಾರೆ. ಸರಸ್ವತಿಯ ಮೂವತ್ತಾರನೆಯ ವರ್ಷದಲ್ಲಿ ತಮ್ಮ ಪತ್ರಿಕೆ ನಡೆದು ಬಂದ ಹಾದಿಯತ್ತ ನೋಟ ಹರಿಸಿ ಅವರು ಬರೆದಿದ್ದಾರೆ :

> .... ಮಹಿಳೆಯರು ಬೀದಿಯಲ್ಲಿ ನಡೆದು ಹೋಗುತ್ತಿದ್ದುದೇ ಅಪರಾಧವೆಂದು ಅನ್ನುತ್ತಿದ್ದ ಕಾಲದಲ್ಲಿ ಅಂದರೆ ೧೯೨೧ರಲ್ಲಿ ಈ ಪತ್ರಿಕೆಯು ಪ್ರಾರಂಭವಾಯ್ತು. ... ಸ್ವಾತಂತ್ರ್ಯಾನಂತರ ಪತ್ರಿಕಾ ವ್ಯವಸಾಯಕ್ಕೆ ಕಷ್ಟನಷ್ಟಗಳು ಹೆಚ್ಚಾಗಿ ಅನೇಕ ಪತ್ರಿಕೆಗಳು ಸ್ವಾತಂತ್ರ್ಯ ಹೋರಾಟಕ್ಕೆ ಶ್ರಮಿಸಿದಂಥವು ಆಗ ನಿಂತು ಹೋದವು. ಕೆಲವು ಕುಂಟುತ್ತಾ ತಮ್ಮ ಸೇವೆಯನ್ನು ಮುಂದುವರೆಸಿದವು. ನಾವೂ ಕುಂಟುತ್ತಲೇ ಮುಂದೆ ಸಾಗುತ್ತಿದ್ದೆವು. ಈಗ ಸುವ್ಯವಸ್ಥಿತ ರೀತಿಯಲ್ಲಿ ಪತ್ರಿಕೆಯು ಪ್ರಕಟವಾಗುತ್ತಿದೆ....

ಪತ್ರಿಕೆಯ ಇಡೀ ಇತಿಹಾಸದಲ್ಲಿ ಇದೇ ಮೊದಲ ಬಾರಿಗೆ ಎಂಬಂತೆ ಕಲ್ಯಾಣಮ್ಮ ಪತ್ರಿಕೆಯ ಆರ್ಥಿಕ ಸುಭದ್ರತೆಯ ಬಗ್ಗೆ ನೆಮ್ಮದಿಯನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇಂಥ ನೆಮ್ಮದಿಯ ಹಿಂದೆ ಇದ್ದ ಕಥೆಯೇ ಬೇರೆ. ಸೀತಾರಾಮ ಜೋಯಿಸರು ಸ್ಮರಿಸುವಂತೆ ೧೯೫೬ರಲ್ಲಿ ಅವರು ಬೆಂಗಳೂರಿಗೆ ಹಿಂದಿರುಗಿದ್ದು, ಕಲ್ಯಾಣಮ್ಮನವರನ್ನು ಕಾಣಲು ಹೋದಾಗ ಅವರಿಗೆ ಪಾರ್ಶ್ವವಾಯುವಿನ ಆಘಾತವಾಗಿತ್ತು. ಪತ್ರಿಕೆಗಾಗಿ ಏನೂ ಮಾಡಲು ಸಾಧ್ಯವಿಲ್ಲದ ತಮ್ಮ ಸ್ಥಿತಿಗಾಗಿ ಅವರು ಕಣ್ಣೀರಿಟ್ಟರು. ಆ ಕಾರಣದಿಂದಲೇ ಹಿಂದಿನ ವರ್ಷ ಎಂದರೆ ೧೯೫೫ರಲ್ಲಿ ಪತ್ರಿಕೆಯನ್ನು ಅವರು ಬೇರೆಯವರಿಗೆ ಒಪ್ಪಿಸಿದ್ದಾಗಿತ್ತು.

## ಅನುಬಂಧ

**ಶ್ರೀಮತಿ ಕಲ್ಯಾಣಮ್ಮನವರು (ಪ್ರತಿಭಾನ್ವಿತ ಕವಿ) ಪೇಜಾವರ ಸದಾಶಿವರಾವ್ ಅವರಿಗೆ ಬರೆದ ಪತ್ರ.**

ವಂದನೆಗಳು: ತಾವು ಬರೆದ ಕಾರ್ಡು ತಲುಪಿ ವಿಷಯಗಳು ತಿಳಿದವು. ಈ ದಿನ ಜನವರಿ ಮತ್ತು ಫೆಬ್ರವರಿ ತಿಂಗಳುಗಳ ಸಂಚಿಕೆಯನ್ನು ಕಳುಹಿಸಿದ್ದೇನೆ. ನನಗೆ ಎರಡು ತಿಂಗಳುಗಳಿಂದಲೂ ಮೈ ಚೆನ್ನಾಗಿಲ್ಲ. ಈ ಕಾರಣದಿಂದ ಪತ್ರಿಕೆಯು ಸ್ವಲ್ಪ ತಡವಾಗಿ ಹೊರಡುವಂತಾಯಿತು. ಇದರ ಜೊತೆಯಲ್ಲಿ ಆರ್ಥಿಕ ದುರವಸ್ಥೆಯೊಂದು ಕಡೆ. ಅನೇಕ ಕಾರಣಗಳಿಂದ ಪತ್ರಿಕೆಯ ಚಂದಾದಾರರ ಸಂಖ್ಯೆಯು ಇಳಿದುಹೋಗಿ ಈ ವರ್ಷ ೪೦೦ ರೂಪಾಯಿಗಳವರೆಗೂ ತಲೆ ಮೇಲೆ ಬೀಳುವ ಹಾಗಿದೆ. ಚಂದಾದಾರರನ್ನೊದಗಿಸಿ ನಷ್ಟ ಬಾರದಂತೆ ನೋಡಬೇಕು. ಪತ್ರಿಕೆಯು ಹೆಚ್ಚು ಪ್ರಯೋಜನವಾಗುವಂತೆಯೂ ಎಲ್ಲರ ಕೈಸೇರುವಂತೆಯೂ ಹೆಚ್ಚು ಬಳಕೆಯಾಗುವಂತಾಯೂ ಆಗಬೇಕಾದರೆ ಏನು ಮಾಡಬೇಕು – ಈ ವಿಷಯವನ್ನು ಸಂಕೋಚವಿಲ್ಲದೆ ಬರೆಯಿರಿ. ಈ ಪತ್ರಿಕೆಗಾಗಿ ನನ್ನ ಜೀವನವನ್ನೇ ತ್ಯಾಗಮಾಡಲು ಸಹ ನಾನು ಸಿದ್ಧಳಿದ್ದೇನೆ. ಪತ್ರಿಕೆಯು ಮೂರು ಮನೆಗಳಿರುವ ಹಳ್ಳಿಗಳಲ್ಲೂ ಪ್ರಚಾರವಾಗಬೇಕು. ಪ್ರತಿಯೊಂದು ವ್ಯಕ್ತಿಯ ಕೈಯಲ್ಲೂ ಇರಬೇಕು. ಒಂದು ಸಾವಿರ ಜನ ಚಂದಾದಾರರು ದೊರೆತರೆ ಚಂದಾಹಣವನ್ನಾದರೂ ಕಡಿಮೆ ಮಾಡಬಹುದು ಅಥವಾ ಇನ್ನೂ ೮ ಪುಟಗಳನ್ನು ಹೆಚ್ಚಿಗೆ ಹಾಕಬಹುದು. ನಿಮ್ಮಲ್ಲಿ ಚಂದಾದಾರನ್ನು ಕೂಡಿಸಲು ಸಾಧ್ಯವೇ? ಒಂದೊಂದು ಪಟ್ಟಣದಲ್ಲಿ ಒಬ್ಬಿಬ್ಬರು ಸರಸ್ವತಿಯ ಸೇವೆಗೆ ಸೊಂಟಕಟ್ಟಿದರೆ ಅಂದು ಪತ್ರಿಕೆಗೊಂದು ಶಾಶ್ವತ ಸ್ಥಾನ ನಿರ್ಮಾಣವಾಗುವುದು. ಈ ವಿಷಯಗಳಿಗೆ ಬರೆಯಿರಿ. "ಜನಪದ ಸಾಹಿತ್ಯವು" ಪ್ರಕಟವಾಗಿರುವ ಸಂಚಿಕೆಯು ಇನ್ನೂ ಬಂದಿಲ್ಲ. ಬಂದೊಡನೆಯೆ ಕಳುಹಿಸುತ್ತೇನೆ. ಈಗ ಮಾರ್ಚಿ ಸಂಚಿಕೆಯು ಪ್ರಿಂಟಾಗುತ್ತಲಿದೆ. ಅದರಲ್ಲಿ ನಿಮ್ಮ ಲೇಖನ (ಜ- ಸಾಹಿತ್ಯ) ಬರುತ್ತಿದೆ.

ಏಪ್ರಿಲ್–ಮೇ– ಜೂನ್ –ಜುಲೈ ನಾಲ್ಕು ತಿಂಗಳುಗಳ ಸಂಚಿಕೆಗಳು ಪ್ರಿಂಟಾಗಬೇಕಾಗಿದೆ. ನೀವು ಲೇಖನಗಳನ್ನು ಕಳುಹಿಸುವುದಕ್ಕಾಗುತ್ತದೆಯೆ? ಸರಸ್ವತಿಯಲ್ಲಿ ಇದುವರೆಗೆ ಪ್ರಕಟವಾಗಿರುವ ಹಳ್ಳಿಯ ಹಾಡುಗಳನ್ನೂ ಇನ್ನೂ ಕೆಲವನ್ನೂ ಸಂಗ್ರಹಿಸಿ ಒಂದು ಸಣ್ಣ ಪುಸ್ತಕವನ್ನು ಮಾಡಿ ಸರಸ್ವತಿ ಪೂಜೆಯ ವೇಳೆಗೆ 'ಪೂಜೆಯ ಕಾಣಿಕೆ'ಯೊಂದನ್ನು ವಾಚಕರಿಗೆ ಅರ್ಪಿಸಬೇಕೆಂದಿದೆ. ನೀವು ಇನ್ನೂ ಕೆಲವು ಹಾಡುಗಳನ್ನು ಸಂಗ್ರಹ ಮಾಡಿ ಕಳುಹಿಸಲು ಸಾಧ್ಯವೇ? ಸುಮಾರು Crown sizeನಲ್ಲಿ ೪೮ ಪುಟಗಳಷ್ಟಾಗಬೇಕು. ಸಂಗ್ರಹಕಾರರು ಇನ್ನಾರಾದರೂ ಇದ್ದರೆ ಅವರ ವಿಳಾಸಗಳನ್ನು ಬರೆದರೆ ನಾನವರಿಗೆ ಬರೆಯುತ್ತೇನೆ. ಅಂತೂ ನೀವು ಸರಸ್ವತಿಯ ವಿಷಯವನ್ನು ಮನಸ್ಸಿಗೆ ತಂದುಕೊಂಡು ಅದು ಅಭಿವೃದ್ಧಿ ಹೊಂದಲು ಬೇಕಾದ ಸಲಹೆ – ಸಹಾಯಗಳನ್ನೊದಗಿಸಬೇಕು. ನಿಮ್ಮನ್ನು ನಾನು ಹಣ ಕೇಳಲಿಲ್ಲ. ಇತರ ಸಹಾಯಗಳನ್ನು – ಸರಸ್ವತಿಯು ಕನ್ನಡನಾಡಿನ ರತ್ನವಾಗಬೇಕೆಂಬುದು ನನ್ನ ಹಂಬಲ. ಈ ವಿಷಯದಲ್ಲಿ ನಾನು ನಿಮ್ಮ ಸಹಾಯವಾಗಬೇಕೆಂದು ಅಪೇಕ್ಷಿಸುವೆನು. ಪತ್ರಿಕೆಯು ಏನಾದರೂ ಅನಾನುಕೂಲದಿಂದ ಬಾರದಿದ್ದಲ್ಲಿ ಬರೆದು ತರಿಸಿಕೊಳ್ಳುವ ವಿಚಾರದಲ್ಲಿ ಸಂಕೋಚ ಪಡಬಾರದೆಂಬುದು ನನ್ನ ಪ್ರಾರ್ಥನೆ. ಮೊದಲು ಪುಟದಲ್ಲಿ ಹಾಕಲು ಯೋಗ್ಯವಾದ – ಪ್ರಾರ್ಥನರೂಪವಾದ ಪದ್ಯಗಳು ಕೆಲವನ್ನು ಕಳುಹಿಸಿ. ಪತ್ರಿಕೆಯು ತಲುಪಿದ್ದಕ್ಕೂ ನಾನು ಮೇಲೆ ಬರೆದಂತಿರುವ ವಿಷಯಗಳಿಗೂ ವಿವರವಾಗಿ ಬರೆಯಿರಿ. ನೀವು ಬರೆದು ಕಳುಹಿಸಿದ ಒಂದೆರಡು ಕವಿತೆಗಳು ನನ್ನಲ್ಲಿವೆ. ಸಮಯೋಚಿತವಾಗಿ ಅವುಗಳ ಪ್ರಕಟಣೆಯನ್ನು ಮಾಡಲಾಗುವುದು.

೪-೬-೧೯೩೨

ಇತಿ ನಿಮ್ಮ ಸಹೋದರಿ,

ಕಲ್ಯಾಣಮ್ಮ

# ೧೯. ಸ್ವಾತಂತ್ರ್ಯ ಹೋರಾಟದಲ್ಲಿ 'ಕರ್ಮವೀರ'ದ ಪಾತ್ರ

✍ ಶ್ರೀ ಸುರೇಂದ್ರ ದಾನಿ

ಕರ್ಮವೀರ ಇಂದು ಕತೆಯಾಗಿದೆ. ಕೆಲವರು ಅದರ ಸುವರ್ಣ ದಿನಗಳನ್ನು ಮೆಲಕು ಹಾಕಿದರೆ ಇನ್ನು ಕೆಲವರು ಅದರ ಉಜ್ವಲ ಪರಂಪರೆಯನ್ನು ಸ್ಮರಿಸಿಕೊಳ್ಳುತ್ತಾರೆ. ಯಾಕೆಂದರೆ ಅದು ಭಾರತದ ರಾಷ್ಟ್ರೀಯ ಹೋರಾಟದ ಯಜ್ಞಕುಂಡದಲ್ಲಿ ಜನ್ಮ ತಾಳಿ ಯಜ್ಞಸೇನೆಯಾಗಿ ಬಾಳಿತು. ಮಹಾಭಾರತದಲ್ಲಿ ಯುದ್ಧದ ಸಂಭವಗಳು ಹಿಂದೆ ಸರಿದಾಗಲೆಲ್ಲ ಆ ಯಜ್ಞಸೇನೆ ಮುಂದೆ ಬಂದು ಕುರುಕ್ಷೇತ್ರ ಯುದ್ಧದತ್ತ ಕತೆಯನ್ನು ತಿರುಗಿಸಲು ಹೇಗೆ ಕಾರಣಳಾದಳೋ ಅದೇ ರೀತಿ ಕರ್ಮವೀರ ಪತ್ರಿಕೆ ಸಹ ಕರ್ನಾಟಕದ, ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕದ, ರಾಷ್ಟ್ರೀಯ ಚಳವಳಿಗೆ ಹೊಸ ಹೊಸ ಇಂಧನವನ್ನು ಒದಗಿಸುವ ಕಾರ್ಯವನ್ನು ಮಾಡಿದೆ. ಯಾವದೇ ಲಾಭದಾಸೆ ಇಟ್ಟುಕೊಳ್ಳದೆ ರಾಷ್ಟ್ರೀಯ ಜಾಗೃತಿಯ ಧ್ಯೇಯವೊಂದನ್ನೇ ಕಣ್ಮುಂದಿರಿಸಿಕೊಂಡು ಆ ವ್ರತ ಪಾಲನೆಗಾಗಿ ಅನೇಕ ಕಷ್ಟ, ಕಾರ್ಪಣ್ಯಗಳನ್ನೂ ಪೆಟ್ಟು ನಷ್ಟಗಳನ್ನೂ ಅನುಭವಿಸಿದ ಕೆಲವೇ ಕನ್ನಡ ಪತ್ರಿಕೆಗಳ ಪಟ್ಟಿಯಲ್ಲಿ ಕರ್ಮವೀರದ ಹೆಸರು ಮೊದಲ ಸ್ಥಾನದಲ್ಲಿ ನಿಲ್ಲುತ್ತದೆ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಕರ್ನಾಟಕದ ಏಕೀಕರಣದ ಕತೆಗಳನ್ನು ಹೇಳಹೊರಟರೆ ಅವುಗಳಲ್ಲಿ ಕರ್ಮವೀರದ ಪಾತ್ರವನ್ನು ಉಲ್ಲೇಖಿಸದಿದ್ದರೆ ಅವು ಪರಿಪೂರ್ಣವೆನಿಸಲಾರವು. ಸ್ವಾತಂತ್ರ್ಯ ಪೂರ್ವದ ಮೂರು ದಶಕಗಳಲ್ಲಿ ಬಾಳಿದ ಪ್ರತಿಯೊಬ್ಬ ಜಾಗೃತ ಕನ್ನಡಿಗನೂ ಇದಕ್ಕೆ ಸಾಕ್ಷಿಯಾಗಿದ್ದಾನೆ. ಈಗಿನ ಪತ್ರಿಕೆಗಳೊಡನೆ ಹೋಲಿಸಿದರೆ ಅಂದಿನ ಕರ್ಮವೀರದ ಪ್ರಸಾರ ವಿಶೇಷವಾಗಿರಲಿಲ್ಲ. ಆದರೆ ಅದರ ಪ್ರಚಾರ ಮತ್ತು ಪ್ರಭಾವ ಮಾತ್ರ ಇಂದಿನ ಲಕ್ಷಾಂತರ ಸಂಚಿಕೆಗಳ ಪ್ರಸಾರ ಹೊಂದಿರುವ ಪತ್ರಿಕೆಗಳಿಗಿಂತ ಎಷ್ಟೋ ಪಾಲು ಅಧಿಕವಾಗಿತ್ತು.

ಇಪ್ಪತ್ತನೇ ಶತಮಾನದ ಪ್ರಥಮ ಕಾಲು ಭಾಗವೆಂದರೆ ಭಾರತದ ರಾಷ್ಟ್ರೀಯ ಜಾಗೃತಿ ಬಹುಮುಖವಾಗಿ ಬೆಳೆದ ಕಾಲ. ಈ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ ಪ್ರಮುಖವಾದುದಾಗಿತ್ತು. ಲೋಕಮಾನ್ಯ ಟಿಳಕರು ಕೇಸರಿ ಮತ್ತು ಮರಾಠಾ ಪತ್ರಿಕೆಗಳನ್ನೂ ಅರವಿಂದ ಘೋಷರು(ಮಹರ್ಷಿ) ವಂದೇ ಮಾತರಂ ಪತ್ರಿಕೆಯನ್ನೂ ಪ್ರಕಟಿಸಿದರು. ಮಹಾತ್ಮಾಗಾಂಧಿಯವರು ಸಹಾ ಯಂಗ್ ಇಂಡಿಯಾ ಮತ್ತು ಹರಿಜನ ಪತ್ರಿಕೆಗಳನ್ನು ತಮ್ಮ ವಿಚಾರಗಳ ಪ್ರಚಾರಕ್ಕಾಗಿ ಉಪಯೋಗಿಸಿಕೊಂಡರು. ಕರ್ಮವೀರ ಪ್ರಕಟಣೆಗೆ ಈ ಪತ್ರಿಕೆಗಳು ಮತ್ತು ಸಂಪಾದಕರುಗಳೇ ಸ್ಫೂರ್ತಿ ಮತ್ತು ಆದರ್ಶರಾಗಿದ್ದರೆಂಬಲ್ಲಿ ಸಂದೇಹವಿಲ್ಲ. ಅವುಗಳ ಜಾಡಿನಲ್ಲಿಯೇ ಕರ್ಮವೀರ ನಡೆದರೂ ಒಂದು ವಿಷಯದಲ್ಲಿ ಮಾತ್ರ ಇದು ಭಿನ್ನವಾಗಿತ್ತು. ಅದೆಂದರೆ ಆ ಪತ್ರಿಕೆಗಳು ಅವುಗಳ ಹಿಂದೆ ಇದ್ದ ವಿಶಿಷ್ಟ ವ್ಯಕ್ತಿಯ ವಿಚಾರ ಧಾರೆಗಳ ಮುಖಪತ್ರಗಳೆನಿಸಿದ್ದವು. ಕರ್ಮವೀರವು ಆ ಮಟ್ಟಕ್ಕೇರದೆ ರಾಷ್ಟ್ರೀಯ ಜಾಗೃತಿಯ ವ್ಯಾಪಕ ಧ್ಯೇಯವನ್ನು ಕಣ್ಮುಂದೆ ಇಟ್ಟುಕೊಂಡು ಅದಕ್ಕೆ ಸಂಬಂಧಿಸಿದ ಬೇರೆ ಬೇರೆ ವ್ಯಕ್ತಿಗಳ ನಾಯಕರ ಅಭಿಪ್ರಾಯ ಪ್ರಕಟಣೆಗೂ ಸುದ್ದಿ ಸಮಾಚಾರ ಪ್ರಕಟಣೆಗೂ ಅವಕಾಶ ನೀಡುತ್ತಿತ್ತು. ಆಗಿನ ಪತ್ರಿಕೆಗಳನ್ನು ನಾವು ಸ್ಥೂಲವಾಗಿ (೧) ವಿಚಾರ ಪತ್ರಿಕೆಗಳು (ಕೇಸರಿ, ಹರಿಜನ, ವಂದೇ ಮಾತರಂ ಇತ್ಯಾದಿ) (೨) ವಾರ್ತಾ ಪತ್ರಿಕೆಗಳು (ಹಿಂದೂ, ಟೈಮ್ಸ್ ಆಫ್ ಇಂಡಿಯಾ, ಹಿಂದೂಸ್ತಾನ ಟೈಮ್ಸ್, ಬಾಂಬೆ ಕ್ರಾನಿಕಲ್ ಇತ್ಯಾದಿ) (೩) ಪ್ರಚಾರ ಪತ್ರಿಕೆಗಳು (ರಾಜಕೀಯ ಪಕ್ಷಗಳ ಮುಖಪತ್ರಗಳು) ವಿಭಾಗಿಸುವದಾದರೆ ಕರ್ಮವೀರವು ಮೊದಲ ಮತ್ತು ಎರಡನೇ ವರ್ಗಗಳ ಸ್ವರೂಪದ ಸುಂದರ ಸಮ್ಮಿಶ್ರಣವಾಗಿತ್ತು. ಅದು ತನ್ನ ಈ ಸ್ವರೂಪವನ್ನು ಕಾಯ್ದುಕೊಂಡಿರುವ ವರೆಗೂ ಒಳ್ಳೇ ತೇಜಸ್ವಿಯಾಗಿ ಬಾಳಿತೆಂಬುದನ್ನು ಮರೆಯುವಂತಿಲ್ಲ.

ಕರ್ಮವೀರದ ಪ್ರಥಮ ಸಂಚಿಕೆ ಪ್ರಕಟವಾದದ್ದು ೧೯೨೧ರ ಫೆಬ್ರುವರಿ ೧೫, ರಥಸಪ್ತಮಿ. ಅದು ನಮ್ಮ ದೇಶದಲ್ಲಿ ಗಾಂಧೀಯುಗದ ಆರಂಭದ ವರ್ಷವೆಂಬುದನ್ನೂ ಕರ್ನಾಟಕದಲ್ಲಿ ಆಷ್ಟೊತ್ತಿಗಾಗಲೇ ಗಾಂಧೀ ವಿಚಾರವಾದಿಗಳೆಂದು ಹೆಸರಾಗಿದ್ದ ಶ್ರೀ ದಿವಾಕರ ರಂಗರಾಯರೇ ಇದರ ಮೊದಲ ಸಂಪಾದಕರೆಂಬುದನ್ನೂ ಗಮನಿಸಬೇಕು. ಈ ಪತ್ರಿಕೆಯ ಪ್ರಕಟಣೆ ಆಕಸ್ಮಿಕ ಘಟನೆಯಲ್ಲ. ಇದಕ್ಕೂ ಅನೇಕ ವರ್ಷ ಮೊದಲೇ ಈ ಪತ್ರಿಕೆಯ ಬಗ್ಗೆ ಮತ್ತು ಇದರ ಮೂಲಕ ದಿನಪತ್ರಿಕೆ ಹಾಗೂ ಮಾಸಪತ್ರಿಕೆಗಳ ಜಾಲವನ್ನೇ ಬೆಳೆಸುವ ಬಗ್ಗೆ ತಮ್ಮ ಸಹಕಾರಿಗಳೊಡನೆ ವಿಚಾರ ಮಂಥನ ನಡೆಸುತ್ತಿದ್ದುದಾಗಿ ಶ್ರೀ ದಿವಾಕರರು ಒಂದು ಕಡೆಗೆ ಹೇಳಿದ್ದಾರೆ. ದೇಶಕಾರ್ಯದ ದೀಕ್ಷೆಯನ್ನು ತೊಟ್ಟಾಗಲೇ ಅದನ್ನು ಕೃತಿಯಲ್ಲಿಳಿಸುವ ಮಾರ್ಗಗಳೆಂದರೆ ಶಿಕ್ಷಕನಾಗುವದು ಮತ್ತು ಪತ್ರಿಕೆ ನಡೆಸುವುದು ಎಂಬ ಕನಸನ್ನು ಅವರು ಕಾಣುತ್ತಿದ್ದರಂತೆ. ಲೋಕಮಾನ್ಯ ತಿಲಕರು ಜೀವನಮಿಡೀ ನಡೆದು ಬಂದ ದಾರಿ ಅದು. ಆ ಸ್ಫೂರ್ತಿಯೇ ಕನ್ನಡಿಗರ ಮನಸ್ಸನ್ನು ಆಕರ್ಷಿಸಿತ್ತು.

ಆಗ ಕರ್ನಾಟಕವು ಮೈಸೂರು ಸಂಸ್ಥಾನ, ನೈಜಾಮ ಸಂಸ್ಥಾನ ಮತ್ತು ಬ್ರಿಟಿಶ್ ಆಡಳಿತ ಎಂದು ಮುಖ್ಯವಾಗಿ ಮೂರು ಭಾಗಗಳಲ್ಲಿ ಹಂಚಿ ಹೋಗಿತ್ತು. ರಾಷ್ಟ್ರೀಯ ಚಳವಳಿಗೆ ದೇಶೀಯ ಸಂಸ್ಥಾನಗಳಲ್ಲಿ ವಿಶೇಷ ಅವಕಾಶವಿರಲಿಲ್ಲ. ಆದ್ದರಿಂದ ಬ್ರಿಟಿಶ್ ಕರ್ನಾಟಕದ ಭಾಗವೇ ಸ್ವಾತಂತ್ರ್ಯ ಚಳವಳಿಯಲ್ಲಿ ಮತ್ತು ನಂತರ ಕರ್ನಾಟಕ ಏಕೀಕರಣದ ಚಳವಳಿಯಲ್ಲಿ ಅಗ್ರಪಾತ್ರ ವಹಿಸಬೇಕಾಗಿ ಬಂತು. ಈ ಭಾಗಕ್ಕೆಲ್ಲ ಧಾರವಾಡವೇ ನಾಯಕ ಸ್ಥಾನದಲ್ಲಿತ್ತು. ಆಧುನಿಕ ಶಿಕ್ಷಣದ ಕೇಂದ್ರವೆನಿಸಿದ್ದ ಆ ನಗರದಲ್ಲಿ ರಾಷ್ಟ್ರೀಯ ಚಳವಳಿ ಸ್ವಾಭಾವಿಕವಾಗಿಯೇ ಬೇಗ ಹಬ್ಬಿತು. ಆದ್ದರಿಂದ ಕರ್ಮವೀರನ ಜನ್ಮ ಧಾರವಾಡದಲ್ಲಿ ಆಗುವದು ಸ್ವಾಭಾವಿಕವೇ ಆಯಿತು. ಇವರ ಹುಟ್ಟಿಗೆ ದಿವಾಕರರೊಡನೆ ಹೆಗಲು ಕೊಟ್ಟವರೆಂದರೆ ಹುಕ್ಕೇರಿಕರ ರಾಮರಾಯರು ಮತ್ತು ಕಬ್ಬೂರ ಮಧ್ವರಾಯರು. ಇವರಲ್ಲಿ ಹುಕ್ಕೇರಿಕರ ರಾಮರಾಯರು ತಮ್ಮಲ್ಲಿದ್ದ ಪುಡಿಕಾಸುಗಳನ್ನೆಲ್ಲ ಸೇರಿಸಿ ಮುದ್ರಣಾಲಯವನ್ನು ಪ್ರಾರಂಭಿಸಿದರು. ಕಬ್ಬೂರ ಮಧ್ವರಾಯರು ಕೆಲ ಮಟ್ಟಿಗೆ ಹಣದ ನೆರವು ನೀಡಿದರು. ದಿವಾಕರರು ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡು ನಡೆಸುವ ಹೊಣೆ ಹೊತ್ತರು. ಆದರೂ ಕಾಗದ ಮತ್ತು ಇತರ ವೆಚ್ಚಗಳನ್ನು ನಿರ್ವಹಿಸಲು ಅಗತ್ಯವಾದ ಹಣ ದಿವಾಕರರಲ್ಲಿ ಇರಲಿಲ್ಲವಂತೆ. ಇದಕ್ಕಾಗಿ ಒಂದು ಸಾವಿರ ರೂಪಾಯಿ ಕೊಟ್ಟು ನೆರವಾದವರು ಹುಬ್ಬಳ್ಳಿಯ ಶೇವಡೆ ರಾಮರಾಯರು ಮತ್ತು ಟೇಂಬೆ ವಿಷ್ಣುಪಂತರು ಎಂದು ದಿವಾಕರರು ಸ್ಮರಿಸಿಕೊಂಡಿದ್ದಾರೆ. ಮತ್ತು ಆಲೂರ ವೆಂಕಟರಾಯರು ಸಹ ಈ ಸಾಹಸದಲ್ಲಿ ತಮ್ಮೊಡನೆ ಇದ್ದರೆಂದು ಪತ್ರಿಕೆಯ ಹೆಸರನ್ನು ಎಲ್ಲರೂ ಸೇರಿಯೇ ನಿರ್ಧರಿಸಿದ್ದಾಗಿಯೂ ಹೇಳಿದ್ದಾರೆ.

ಕರ್ಮವೀರದ ಮೊದಲ ಸಂಚಿಕೆ ರಾಯಲ್ ಫೋಲಿಯೋ ಆಕಾರದ ೮ ಪುಟಗಳ ಪತ್ರಿಕೆಯಾಗಿತ್ತು. ಅದರ ಬೆಲೆ ಒಂದಾಣೆ. ಅಂದರೆ ಈಗಿನ ಆರು ಪೈಸೆ. ಅದರಲ್ಲಿ 'ನಮ್ಮ ಕರ್ತವ್ಯ' ಎಂದು ಬರೆದ ಅಗ್ರಲೇಖದಲ್ಲಿ 'ಇಡೀ ಹಿಂದುಸ್ತಾನದ ಸ್ವರಾಜ್ಯವು ನಮ್ಮ ಧ್ಯೇಯವಿರುವದು ಆದರೆ ನಾನು ಕನ್ನಡದಲ್ಲಿ ಬರೆಯುತ್ತಿರುವದರಿಂದ ಕರ್ನಾಟಕವೇ ನಮ್ಮ ಕಾರ್ಯಕ್ಷೇತ್ರವಿರುವದು. ಕರ್ನಾಟಕದ ಮುಖಾಂತರವಾಗಿ ಭರತ ಭೂಮಿಯ ಸೇವೆಯನ್ನು ಯಥಾಶಕ್ತಿಯಾಗಿ ಮಾಡಿ ಅದನ್ನು ಕೃಷ್ಣಾರ್ಪಣ ಮಾಡುವದು ನಮ್ಮ ಕರ್ತವ್ಯವೆಂದು ನಂಬುತ್ತೇನೆ" ಎಂದು ದಿವಾಕರರು ಹೇಳಿದ್ದಾರೆ.

ಪತ್ರಿಕೆಯ ಪ್ರಾರಂಭದ ದಿನಗಳನ್ನು ನೆನಸಿಕೊಳ್ಳುತ್ತ ದಿವಾಕರರು ಬರೆದ ಒಂದು ಲೇಖನದಲ್ಲಿ "ಅಚ್ಚುಕೂಟದ ಅನುಭವ ಏನೂ ಇಲ್ಲದೆ ಹಗಲಿರುಳು ಪೇಚಾಡುತ್ತ ೪-೫ ದಿನ ಗುದ್ದಾಡಿ ಒಂದು ಕೈಯಂತ್ರದ ಮೇಲೆ ಎಂಟು ಪುಟ ರಾಯಲ್ ಫೊಲಿಯೋ ಕರ್ಮವೀರವನ್ನು ಹೊರಡಿಸಿದೆವು. ಅದರಲ್ಲಿ ಅಚ್ಚು ಯಾವುದೇ ರೀತಿ ನೆಟ್ಟಗಿರಲಿಲ್ಲ. ಆದರೂ ಪತ್ರಿಕೆ ನಡೆಯಿತೆಂದು ಆನಂದವಾಗುತ್ತಿತ್ತು." ಎಂದು ಬರೆದಿದ್ದಾರೆ.

ಕರ್ಮವೀರದ ಈ ಪ್ರಾರಂಭಾವಸ್ಥೆಯಲ್ಲಿಯ ಕಷ್ಟ ನಷ್ಟಗಳಲ್ಲಿ ಹೆಗಲು ಕೊಟ್ಟವರೆಂದರೆ ಧಾರವಾಡಕರ ವಾಮನರಾಯರು, ಆಲೂರ ವೆಂಕಟರಾಯರು, ಶಂ.ಬಾ. ಜೋಶಿ, ವೆಂ. ಶ್ರೀ. ಮಿರ್ಜಿ, ನಾರಾಯಣ ಶರ್ಮ, ಕರವರಕರ ದತ್ತರಾಯರು, ಎಚ್. ಆರ್. ಪುರೋಹಿತ, ಹ.ಭೀ. ಹೊಸೂರ ಮೊದಲಾದವರು. ಇವರಾರಿಗೂ ಪತ್ರಿಕೋದ್ಯಮದ ಅನುಭವವಾಗಲೀ, ತರಬೇತಿಯಾಗಲಿ ಇರಲಿಲ್ಲ. ಅದರ ಅಗತ್ಯವೂ ಅವರಿಗೆ ಅನಿಸಲಿಲ್ಲ. ಪತ್ರಿಕೆಯನ್ನು ವಿವಿಧ ವಿಭಾಗ ಮತ್ತು ಶೀರ್ಷಿಕೆಗಳಿಂದ, ಲೇಖನ ಚಿತ್ರಗಳಿಂದ ಅಲಂಕಾರಗೊಳಿಸಿ ವಾಚಕರನ್ನು ಆಕರ್ಷಿಸಬೇಕೆಂಬ ಕಲ್ಪನೆಯಾಗಲಿ, ಹಂಬಲವಾಗಲಿ ಇವರಾರಿಗೂ ಇರಲಿಲ್ಲ. ರಾಷ್ಟ್ರೀಯ ಚಳುವಳಿ ಮತ್ತು ಕಾಂಗ್ರೆಸ್ ಸಂಘಟನೆಗೆ ಪೋಷಕವೆನಿಸುವ ಸುದ್ದಿ ಸಮಾಚಾರಗಳನ್ನು, ಲೇಖನ ಹಾಡು ಮೊದಲಾದವುಗಳನ್ನು ನಿಯಮಿತವಾಗಿ ಒಂದೇ ಕಡೆ ಮುದ್ರಿಸುವದಷ್ಟೇ ಅವರ ಪತ್ರಿಕೋದ್ಯಮದ ಪಾತ್ರವಾಗಿತ್ತು. ಒಂದು ದೃಷ್ಟಿಯಿಂದ ಆಗಿನ ಕರ್ಮವೀರ ಪತ್ರಿಕೆಯನ್ನು ಆಗಿನ ಚಳವಳಿಯ ಬುಲೆಟಿನ್ ಎಂದರೂ ತಪ್ಪಾಗಲಿಕ್ಕಿಲ್ಲ. ಅಥವಾ ಬುಲೆಟಿನ್‌ಗಳಿಗೇ ಸುವ್ಯವಸ್ಥಿತ ರೂಪವನ್ನು ಕೊಟ್ಟು ನಿಯತಕಾಲಿಕೆಯಾಗಿ ಪ್ರಕಟಿಸಲಾಗುತ್ತಿತ್ತೆಂದು ಹೇಳಿದರೂ ಆದೀತು. ಕರ್ಮವೀರದ ಈ ಸ್ವರೂಪ ಸ್ವಾಭಾವಿಕವಾಗಿಯೇ ಆಗಿನ ಆಳರಸರನ್ನು ಕೆರಳಿಸಿತು.

೧೯೨೧ನೇ ಇಸ್ವಿಯೆಂದರೆ ಮಹಾತ್ಮಾ ಗಾಂಧೀಜಿಯವರ ಅಸಹಕಾರ ಚಳವಳಿ ದೇಶವನ್ನೆಲ್ಲ ಬಡಿದೆಬ್ಬಿಸಿದ ವರ್ಷ. ಯುವಕರು ತಮ್ಮ ಶಾಲೆ ಕಾಲೇಜುಗಳನ್ನು ಬಿಟ್ಟು ಬರುವದು, ವಕೀಲರು, ಸರಕಾರೀ ನೌಕರರು ಮೊದಲಾದವರೆಲ್ಲ ತಮ್ಮ ವೃತ್ತಿಗಳನ್ನು ತ್ಯಜಿಸಿ ರಾಷ್ಟ್ರಕಾರ್ಯದಲ್ಲಿ ತೊಡಗುವದು, ಖಾದೀ ಪ್ರಚಾರ, ಮದ್ಯಪಾನ ನಿರೋಧ ಇತ್ಯಾದಿಗಳು ಸಾರ್ವಜನಿಕರಲ್ಲಿ ವಿಶೇಷ ಜಾಗೃತಿಯನ್ನು ಉಂಟು ಮಾಡಿದ್ದವು. ಕರ್ಮವೀರ ಪತ್ರಿಕೆ ಇವರ ಪ್ರಚಾರಕ್ಕೆ ಕಂಕಣಬದ್ಧವಾಗಿ ಜನ್ಮ ತಳೆದದ್ದು ಆಗಿನ ಆಳರಸರನ್ನು ಕೆರಳಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆಗ ಧಾರವಾಡದ ಜಿಲ್ಲಾಧಿಕಾರಿಯಾಗಿದ್ದ ಪೇಂಟರ್ ಎಂಬ ಯುರೋಪಿಯನ್ ಅಧಿಕಾರಿ ಇದರಿಂದ ಬಹಳ ಕ್ರುದ್ಧಗೊಂಡ. ಮೊದಲು ಅವನು ಇದರ ಬಗ್ಗೆ ಉಪೇಕ್ಷೆ ತಳೆದಿದ್ದನೆಂದು ತೋರುತ್ತದೆ. ಆದರೆ ತಿಂಗಳೆರಡು ಉರುಳುವಷ್ಟರಲ್ಲಿಯೇ ಬೆಳೆದ ಕರ್ಮವೀರದ ಪ್ರಭಾವಕ್ಕೆ ಅವನು ಬೆದರಿದ. ಮೇ ತಿಂಗಳ ಉರಿ ಬಿಸಿಲಿನಲ್ಲಿ ಒಂದು ದಿನ ರಂಗರಾಯರನ್ನೂ ಕಬ್ಬೂರ ಮಧ್ವರಾಯರನ್ನೂ ತನ್ನ ಕಚೇರಿಗೆ ಕರೆಸಿಕೊಂಡು ಅವರನ್ನು ಈ ಸಾಹಸದಿಂದ ಪರಾವೃತ್ತಗೊಳಿಸಲು ಪ್ರಯತ್ನಿಸಿದ. ಅವರು ಅವಕ್ಕೆ ಸೊಪ್ಪು ಹಾಕದಿದ್ದಾಗ ಬೆದರಿಕೆಯ ಬಾಣಗಳನ್ನು ಬಿಟ್ಟ. "ನಿಮ್ಮ ರಕ್ತಕ್ಕಾಗಿ ನಾನು ಹಂಬಲಿಸುತ್ತಿದ್ದೇನೆ" ಎಂದು ಗುಡುಗಿದ.

೧೯೨೧ನೇ ಜುಲೈ ೧ ಶುಕ್ರವಾರ ಧಾರವಾಡದಲ್ಲಿ ಹೆಂಡದಂಗಡಿಯ ಮುಂದೆ ಪಿಕೆಟಿಂಗ್ ನಡೆಸಿದ್ದ ಸ್ವಯಂಸೇವಕರ ಮೇಲೆ ಪೋಲೀಸರು ಏರಿ ಹೋಗಿ ನೆರೆದ ಜನಜಂಗುಳಿಯನ್ನು ಚದುರಿಸಲು ಗೋಳೀಬಾರು ಮಾಡಿದರು. ಆಗ ಮೂವರು ಸ್ಥಳದಲ್ಲೇ ಮೃತಪಟ್ಟರಲ್ಲದೆ ೪೦ ಜನರು ಗಾಯಗೊಂಡರು. ಮರುದಿನ ಬೆಳಗಾಗುವಷ್ಟರಲ್ಲಿ ನಗರಾದ್ಯಂತ ಬಂಧನ ಸತ್ರ ನಡೆಯಿತು. ಕಬ್ಬೂರ ಮಧ್ವರಾಯರನ್ನೂ ದಿವಾಕರ ರಂಗರಾಯರನ್ನೂ ಬಂಧಿಸಲಾಯಿತು. ಕರ್ಮವೀರ ಪತ್ರಿಕೆಯ ಬಾಯಿ ಮುಚ್ಚುವುದೇ ಇವರಿಬ್ಬರ ಬಂಧನದ ಉದ್ದೇಶವಾಗಿತ್ತೆಂಬುದು ಸ್ಪಷ್ಟವಿದೆ. ಆದರೆ ಅದು ಸಫಲವಾಗಲಿಲ್ಲ. ಹುಕ್ಕೇರಿಕರ ರಾಮರಾಯರು ಹೊರಗೇ ಇದ್ದರು. ಅವರು, ಆಲೂರ ವೆಂಕಟರಾಯರು ಮತ್ತು ಶಂ.ಬಾ. ಜೋಶಿಯವರ ಸಹಾಯದಿಂದ ಪತ್ರಿಕೆಯ ಪ್ರಕಟಣಾ ಕಾರ್ಯವನ್ನು ಅನಿರ್ಬಂಧವಾಗಿ ಮುಂದುವರಿಸಿದರು. ಅಕ್ಟೋಬರ್ ತಿಂಗಳದಲ್ಲಿ ದಿವಾಕರರು ಬಿಡುಗಡೆ ಹೊಂದಿ ಬಂದರು. ಅದೇ ತಿಂಗಳ ೧೫ನೇ ತಾರೀಖಿನ ಕರ್ಮವೀರದಲ್ಲಿ ಪ್ರಕಟವಾದ "ಭೂರಕ್ಕಸಾಯ ಸ್ವಾಹಾ" ಎಂಬ ಅಗ್ರಲೇಖನ ಸರಕಾರೀ ಅಧಿಕಾರಿಗಳನ್ನು ಮತ್ತೆ ರೊಚ್ಚಿಗೆಬ್ಬಿಸಿತು. "ಬ್ಯುರಾಕ್ರಸಿ" ಎಂಬ ಇಂಗ್ಲೀಷ್ ಪದವನ್ನು ಭೂ ರಕ್ಕಸ ಎಂದು ತದ್ಭವಗೊಳಿಸಿ ಸರಕಾರದ ಅತ್ಯಾಚಾರವನ್ನು ಈ ಲೇಖನ ಖಂಡಿಸಿತ್ತು. (ಅದರ ಪಠ್ಯಕ್ಕಾಗಿ ಈ ವಿಭಾಗ ೨೫ನೆಯ ಲೇಖ ನೋಡುವುದು.)

ಈ ಲೇಖನವನ್ನು ಬರೆದದ್ದಕ್ಕಾಗಿ ಸಂಪಾದಕರಾದ ದಿವಾಕರರ ಮೇಲೂ ಮುದ್ರಕ ಮತ್ತು ಪ್ರಕಾಶಕರಾದ ಹುಕ್ಕೇರಿಕರರ ಮೇಲೂ ಸರಕಾರ ಮೂರು ತಿಂಗಳ ನಂತರ ಖಟ್ಲೆ ಹಾಕಿತು. ವಿಚಾರಣೆ ನಡೆದ ಕಾಲಕ್ಕೆ ಈ ಲೇಖನ ಬರೆದವರು ದಿವಾಕರರೇ ಎಂದು ಸಿದ್ಧಪಡಿಸುವದು ಸರಕಾರಕ್ಕೆ ಸಾಧ್ಯವಾಗಲಿಲ್ಲ. (ನಿಜವಾಗಿಯೂ ಈ ಲೇಖನವನ್ನು ಬರೆದವರು ಆಲೂರ ವೆಂಕಟರಾಯರು) ಆದರೂ ಅವರಿಬ್ಬರನ್ನೂ ಮತ್ತೊಂದು ಖಟ್ಲೆಯಲ್ಲಿ ತೊಡಗಿಸಿ ಶಿಕ್ಷೆಗೆ ಗುರಿ ಮಾಡಿ ಸೆರೆಮನೆಗೆ ಅಟ್ಟಲಾಯಿತು.

ಸರಕಾರದ ಎಣಿಕೆ ಮತ್ತೆ ಸುಳ್ಳಾಯಿತು. ಕರ್ಮವೀರ ಪತ್ರಿಕೆ ನಿಲ್ಲಲಿಲ್ಲ. ಆಲೂರ ವೆಂಕಟರಾಯರ ಸಂಪಾದಕತ್ವದಲ್ಲಿ ಪ್ರಕಟಣೆ ಮುಂದುವರೆಯಿತು.

ದಿವಾಕರರು ಶಿಕ್ಷೆ ಅನುಭವಿಸಿ ಹೊರಗೆ ಬಂದರೂ ಸರಕಾರ ಅವರ ಬೆನ್ನು ಬಿಡಲಿಲ್ಲ. ಆಗ ಅವರು ಪತ್ರಿಕೆಯ ಸಂಪಾದಕರು ಮಾತ್ರವಲ್ಲದೆ ಮುದ್ರಕರು ಮತ್ತು ಪ್ರಕಾಶಕರೂ ಆಗಿದ್ದರು. ರಾಜದ್ರೋಹಾತ್ಮಕ ಅಂಶಗಳನ್ನೊಳಗೊಂಡ ಲಾವಣಿಯೊಂದನ್ನು ಆ ಮುದ್ರಣಾಲಯದಲ್ಲಿ ಮುದ್ರಿಸಿದ ಆರೋಪ ಹೊರಿಸಿ ೧೯೨೪ರಲ್ಲಿ ಮತ್ತೆ ದಿವಾಕರರನ್ನು ಜೇಲಿಗ ಅಟ್ಟಲಾಯಿತು. ಆದರೂ ಕರ್ಮವೀರ ನಿಲ್ಲಲಿಲ್ಲ. ಅದರ ಮೇಲೆ ನೇರವಾಗಿ ಸರಕಾರ ಪ್ರತಿಬಂಧ ಹೇರುವ ವರೆಗೆ ಅದನ್ನು ನಿಲ್ಲಿಸಬಾರದೆಂದು ಎಲ್ಲ ಕಾರ್ಯಕರ್ತರು ನಿರ್ಧರಿಸಿದಂತಿತ್ತು. ಪತ್ರಿಕೆಯು ದಿವಾಕರರದೆಂದಿದ್ದರೂ ಇನ್ನುಳಿದ ನಾಯಕರು ಅದರ ಬಗ್ಗೆ ಯಾವುದೇ ಪರಕೀಯ ಭಾವನೆ ತಳೆಯದೆ ಅಥವಾ ಅದರಿಂದ ಯಾವದೇ ಪ್ರತಿಫಲಾಪೇಕ್ಷೆ ಇಲ್ಲದೆ ಅದರ ಪ್ರಕಟಣೆಯನ್ನು ಮುಂದುವರೆಸಿದರು.

ಪತ್ರಿಕೆ ಪ್ರಾರಂಭವಾಗಿ ಏಳೆಂಟು ವರ್ಷಗಳು ಉರುಳಿದರೂ ಅದರ ಆರ್ಥಿಕ ಪರಿಸ್ಥಿತಿ ಭದ್ರಗೊಳ್ಳಲಿಲ್ಲ. ಅದರತ್ತ ಯಾರೂ ಲಕ್ಷ್ಯವನ್ನೇ ಹಾಕಿರಲಿಲ್ಲವೆಂದು ತೋರುತ್ತದೆ. ಅದರ ಕಚೇರಿ ಸಹ ಕಾಂಗ್ರೆಸ ಕಚೇರಿಯ ಒಂದು ಭಾಗದಲ್ಲೇ ಇದ್ದಿತು. ರಾಷ್ಟ್ರೀಯ ಚಳುವಳಿಗಾರರು ಇದೂ ತಮ್ಮ ಚಳವಳಿಯ ಕಾರ್ಯಕ್ರಮಗಳಲ್ಲಿ ಒಂದು ಎಂದೇ ಭಾವಿಸಿ ಕೆಲಸ ಮಾಡುತ್ತಿದ್ದರೆಂಬುದಕ್ಕೆ ಇದು ಸಾಕ್ಷಿ.

೧೯೩೦ರಲ್ಲಿ ಗಾಂಧೀಜಿ ಪ್ರಾರಂಭಿಸಿದ ಉಪ್ಪಿನ ಸತ್ಯಾಗ್ರಹ ರಾಷ್ಟ್ರೀಯ ಚಳವಳಿಗೆ ಇನ್ನೊಂದು ಮಹಾಪೂರವನ್ನು ತಂದಿತು. ಸರಕಾರದ ದಮನ ಕ್ರಿಯೆಗೂ ಹೊಸ ಬಲ ಮೂಡಿತು. ದೇಶದಾದ್ಯಂತ ಕಾಂಗ್ರೆಸ ಸಂಸ್ಥೆ ಅಕ್ರಮವೆಂದು ಸಾರಲ್ಪಟ್ಟಿತು. ಅದರನ್ವಯ ಧಾರವಾಡದಲ್ಲಿಯ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಚೇರಿಯ ಮೇಲೆ ನವಂಬರ ೧೧ರಂದು ಪೋಲೀಸರು ದಾಳಿ ಮಾಡಿ ಅಲ್ಲಿದ್ದ ವಸ್ತುಗಳನ್ನೆಲ್ಲ ಜಪ್ತ ಮಾಡಿ ಬಾಗಿಲಿಗೆ ಜೀಗಮುದ್ರೆ ಹಾಕಿದರು. ಅದರಲ್ಲಿ ಕರ್ಮವೀರ ಕಚೇರಿಯೂ ಒಳಗೊಂಡಿತ್ತು. ಇದು ಕಾಂಗ್ರೆಸ ಸಂಸ್ಥೆಗೆ ಸಂಬಂಧಪಟ್ಟಿದ್ದಲ್ಲವೆಂದೂ ಇದನ್ನು ಬಂಧಮುಕ್ತಗೊಳಿಸಬೇಕೆಂದೂ ಕೇಳಿಕೊಂಡದ್ದಕ್ಕೆ ೧೦೦೦-೦೦ ರೂ. ಭದ್ರತಾ ಠೇವಣಿ ಇಟ್ಟರೆ ಅಪ್ಪಣೆ ಕೊಡುವದಾಗಿ ಉತ್ತರ ಬಂತು. ರಾಷ್ಟ್ರೀಯ ಪತ್ರಿಕೆಗಳು ಇಂಥ ಠೇವನ್ನು ಕೊಡಬಾರದೆಂದು ಕಾಂಗ್ರೆಸ ಸಮಿತಿಯ ಆದೇಶವಿದ್ದುದರಿಂದ ಕರ್ಮವೀರ ಅಜ್ಞಾತವಾಸವನ್ನು ಆರಿಸಿಕೊಳ್ಳಬೇಕಾಯಿತು.

೧೯೩೧ರ ಮಾರ್ಚ ತಿಂಗಳಲ್ಲಿ ಭಾರತದ ವೈಸರಾಯ್ ಲಾರ್ಡ ಇರ್ವಿನ್ನರು ಗಾಂಧೀಜಿಯವರೊಡನೆ ಮಾಡಿಕೊಂಡ ಒಪ್ಪಂದದ ಪ್ರಕಾರ ಚಳವಳಿ ಹಿಂತೆಗೆದುಕೊಳ್ಳಲ್ಪಟ್ಟಿತು. ದೇಶದಲ್ಲಿ ಮತ್ತೆ ಎಂದಿನಂತೆ ಜನಜೀವನ ಆರಂಭವಾಯಿತು. ಕರ್ಮವೀರವನ್ನು ಮತ್ತೆ ಪ್ರಾರಂಭಿಸುವ ಪ್ರಯತ್ನಗಳು ನಡೆದವು. ಈ ಸಲ ಅದನ್ನು ಕಾಂಗ್ರೆಸ್ ಕಚೇರಿಯಲ್ಲಿಯಯೆ ಇಡದೆ ಅದಕ್ಕೆ ಪ್ರತ್ಯೇಕ ಕಟ್ಟಡವನ್ನು ಬಾಡಿಗೆ ಹಿಡಿಯಲಾಯಿತು. ಮತ್ತು ಕರ್ಮವೀರಕ್ಕೆಂದೇ ಒಂದು ಮುದ್ರಣ ಯಂತ್ರವನ್ನು ಕೊಂಡುಕೊಳ್ಳಲಾಯಿತು. ಅಂತೂ ೧೯೩೧ರ ಕೊನೆಗೆ ಕರ್ಮವೀರನ ಪುನರವತಾರ ಆಯಿತು. ಧಾರವಾಡದ ದೇಸಾಯಿ ಓಣಿಯಲ್ಲಿರುವ ಮೊಖಾಶಿ ಗುರುರಾಯರೆಂಬುವವರು ಕರ್ಮವೀರಕ್ಕೆ ತಮ್ಮ ಮನೆ ಬಾಡಿಗೆ ಕೊಡುವ ಧೈರ್ಯ ಮಾಡಿದರು. ಅವರದು ರಾಷ್ಟ್ರೀಯ ಪ್ರವೃತ್ತಿ. ಆ ಮನೆಯಲ್ಲಿ ಈ ಮೊದಲೇ ವಿದ್ಯಾರಣ್ಯ ಶಿಬಿರವೆಂಬ ರಾಷ್ಟ್ರೀಯ ಚಟುವಟಿಕೆಯೊಂದಕ್ಕೆ ಆಶ್ರಯ ನೀಡಿದ್ದರು. ಈ

ಪಿನ್ನೆಲೆ ಆಗ ಅನುಕೂಲವಾದರೂ ಮುಂದೆ ಅದೇ ಮಾರಕವಾಗಿ ಪರಿಣಮಿಸಿತು. ಗಾಂಧಿ – ಇರ್ವಿನ್ ಒಪ್ಪಂದದ ಶಾಂತಿ ಬಹಳ ದಿವಸ ಉಳಿಯಲಿಲ್ಲ. ದುಂಡುಮೇಜಿನ ಪರಿಷತ್ತಿಗೆಂದು ಲಂಡನ್ನಿಗೆ ತೆರಳಿದ್ದ ಗಾಂಧೀಜಿ ಬರಿಗೈಯಿಂದ ಮರಳಿದ್ದರು. ಗಾಂಧೀಜಿ ಬಂಧನ ಆಯಿತು. ದೇಶಾದ್ಯಂತ ಅದಕ್ಕೆ ಪ್ರತಿಭಟನೆ. ಮತ್ತೆ ಕಾನೂನು ಉಲ್ಲಂಘನೆ ಮತ್ತು ಅಸಹಕಾರ ಚಳವಳಿಕೆ ಕರೆ. ಅದನ್ನು ಹತ್ತಿಕ್ಕಲು ಸರ್ಕಾರದ ದಬ್ಬಾಳಿಕೆ ಅಸ್ತ್ರ ಪ್ರಯೋಗ.

ವಿದ್ಯಾರಣ್ಯ ಶಿಬಿರ ನಡೆದ ಸ್ಥಳವೆಂದು ನೆವ ಹೇಳಿ ಕರ್ಮವೀರ ಕಾರ್ಯಾಲಯದ ಮೇಲೆ ಪೋಲೀಸರು ದಾಳಿ ನಡೆಸಿ ಇದ್ದ ಬಿದ್ದ ಸರಕು ಸಾಮಾನುಗಳನ್ನೆಲ್ಲ ಜಪ್ತಿ ಮಾಡಿ ಕಟ್ಟಡಕ್ಕೆ ಬೀಗ ಹಾಕಿದರು. ಇಷ್ಟೊತ್ತಿಗೆ ಎಚ್. ಆರ್. ಪುರೋಹಿತರು ಸಂಪಾದಕೀಯ ಹೊಣೆ ಹೊತ್ತುಕೊಂಡಿದ್ದರು. ಅವರ ಮೇಲೂ ಧಾರವಾಡ ನಗರಸಭೆಯ ಸೀಮೆಯನ್ನು ದಾಟಿ ಹೋಗಬಾರದೆಂದು ನಿರ್ಬಂಧ ಹೇರಲಾಯಿತು. ಅಂತೂ ಕರ್ಮವೀರ ಕಣ್ಣು ಮುಚ್ಚಿತು. ಮತ್ತೆ ಕಣ್ಣು ತೆರೆಯಬೇಕಾದರೆ ಎಂಟು ವರ್ಷ ಕಾಯಬೇಕಾಯಿತು.

ಈ ಮಧ್ಯೆ ಬೆಳಗಾವಿಯಲ್ಲಿ ಬಿ. ಎನ್. ದಾತಾರ, ಕೇಶವರಾವ್ ಗೋಖಲೆ ಮತ್ತು ನಾರಾಯಣರಾವ್ ಜೋಶಿ ಇವರ ಪ್ರಯತ್ನದಿಂದ ೧೯೨೯ರಲ್ಲಿ 'ಸಂಯುಕ್ತ ಕರ್ನಾಟಕ' ವಾರಪತ್ರಿಕೆ ಪ್ರಾರಂಭವಾಗಿತ್ತು. ಅವರೂ ರಾಷ್ಟ್ರೀಯ ಚಳುವಳಿಗಾರರಾಗಿ ಬಂಧನ ಬಿಡುಗಡೆಗಳ ಬವಣೆಯನ್ನು ಅನುಭವಿಸುತ್ತಿದ್ದುದರಿಂದ ಪತ್ರಿಕೆ ಸಹ ಮತ್ತೆ ಜನನ ಮರಣಗಳನ್ನು ಅನುಭವಿಸಬೇಕಾಗುತ್ತಿತ್ತು. ಆದರೂ ಅವರು ೧೯೩೩ರಲ್ಲಿ ಅದನ್ನು ದಿನ ಪತ್ರಿಕೆಯನ್ನಾಗಿ ಪರಿವರ್ತಿಸಿದರು. ದಿವಾಕರರೂ ಇತ್ತ ದಿನಪತ್ರಿಕೆಯನ್ನು ಪ್ರಾರಂಭಿಸುವ ಉದ್ದೇಶದಿಂದ ನಿಧಿ ಕೂಡಿಸುವ ಯತ್ನದಲ್ಲಿದ್ದರು. ಆಗ ಬೆಳಗಾವಿ ಗುಂಪಿನವರು ತಮ್ಮ ದಿನಪತ್ರಿಕೆಯನ್ನೇ ದಿವಾಕರರಿಗೆ ಒಪ್ಪಿಸುವ ನಿರ್ಧಾರ ಕೈಕೊಂಡರು. ದಿವಾಕರರು ತಾವು ಸಾರ್ವಜನಿಕರಿಂದ ಸಂಗ್ರಹಿಸಿದ ಹಣದಿಂದ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟ್ ಎಂಬ ವಿಶ್ವಸ್ತ ನಿಧಿಯನ್ನು ನಿರ್ಮಿಸಿದರು. ಅದಕ್ಕೆ ಅವರೇ ಏಕಮೇವ ಧರ್ಮದರ್ಶಿಗಳಾಗಿರಬೇಕೆಂದು ಎಲ್ಲರೂ ಒಪ್ಪಿದರು. ಮತ್ತು ಬೆಳಗಾವಿಯಲ್ಲಿಯ ಸಂಯುಕ್ತ ಕರ್ನಾಟಕ ಪತ್ರಿಕೆ ಹಾಗೂ ಮುದ್ರಣಾಲಯಗಳನ್ನು ಈ ಟ್ರಸ್ಟಿಗೆ ಒಪ್ಪಿಸಿಕೊಡಲಾಯಿತು. (೧೯೩೫)

ಇಷ್ಟೊತ್ತಿಗಾಗಲೇ ಮೊಹರೆ ಹಣಮಂತರಾಯರು ಸಂಪಾದಕರಾಗಿ ಮತ್ತು ಹ. ರಾ. ಪುರೋಹಿತರು ಅವರ ಸಹಕಾರಿಗಳಾಗಿ ಸಂಯುಕ್ತ ಕರ್ನಾಟಕದಲ್ಲಿ ಕೆಲಸ ಮಾಡುತ್ತಿದ್ದರು. ವಾಙ್ಮಯ ಪ್ರಕಾಶನ ಟ್ರಸ್ಟು ಪತ್ರಿಕೆಯನ್ನು ವಹಿಸಿಕೊಂಡ ಮೇಲೂ ಅದರ ಪರಿಸ್ಥಿತಿ ಸುಧಾರಿಸಲಿಲ್ಲ. ಆಗ ಸಂಪರ್ಕ ಸಾರಿಗೆಗಳ ದೃಷ್ಟಿಯಿಂದ ಕೇಂದ್ರಸ್ಥಾನವಾದ ಹುಬ್ಬಳ್ಳಿಗೆ ಪತ್ರಿಕೆಯನ್ನು ಸ್ಥಳಾಂತರಿಸಬೇಕೆಂದು ನಿರ್ಧರಿಸಲಾಯಿತು. ಅದರಂತೆ ೧೯೩೭ ಆಗಸ್ಟದಲ್ಲಿ ಸಂಯುಕ್ತ ಕರ್ನಾಟಕವು ಹುಬ್ಬಳ್ಳಿಯಿಂದ ಪ್ರಕಟಣೆ ಆರಂಭಿಸಿತು. ಪತ್ರಿಕೆಯ ಅಭಿವೃದ್ಧಿಯ ದೃಷ್ಟಿಯಿಂದ ಇದು ಉಚಿತ ನಿರ್ಣಯವಾಗಿತ್ತೆಂಬುದು ಕೆಲವೇ ದಿನಗಳಲ್ಲಿ ಸ್ಪಷ್ಟವಾಯಿತು.

ಈ ಮಧ್ಯೆ 'ಕರ್ಮವೀರ' ಪತ್ರಿಕೆಯನ್ನು ಪುನರುಜ್ಜೀವಿಸುವ ವಿಚಾರ ದಿವಾಕರರ ತಲೆಯಲ್ಲಿ ಸುಳಿಯತೊಡಗಿತ್ತು. ಅದನ್ನು ಮೊದಲಿನಂತೆ ಸ್ವತಂತ್ರವಾಗಿ ಪ್ರಾರಂಭಿಸದೆ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಆಡಳಿತದಲ್ಲಿ ಸಂಯುಕ್ತ ಕರ್ನಾಟಕದ ಸಹೋದರ ಪತ್ರಿಕೆಯಾಗಿ ಪ್ರಾರಂಭಿಸಬೇಕೆಂದು ಯೋಚಿಸಿದರು. ಇದರನ್ವಯ ೧೯೪೮ನೇ ಜನವರಿ ೧ ರಂದು ಮತ್ತೆ ಕರ್ಮವೀರ ಕಣ್ತೆರೆಯಿತು. ಈಗಾಗಲೇ ಸಂಯುಕ್ತ ಕರ್ನಾಟಕದ ವ್ಯವಸ್ಥೆಯ ಅಂಗವಾಗಿದ್ದ ಎಚ್. ಆರ್. ಪುರೋಹಿತರು ಇದರ ಸಂಪಾದಕರಾದರು. ಈ ಕರ್ಮವೀರ ಹಿಂದಿನ ಕರ್ಮವೀರನಿಗಿಂತ ಸಾಕಷ್ಟು ಭಿನ್ನವಾಗಿದ್ದ. ಡೆಮಿ ಅರ್ಧ ಆಕಾರದ ೧೬ ಪುಟಗಳ ಸಂಚಿಕೆ. ಬೆಲೆ ಮಾತ್ರ ಹಿಂದಿನಂತೆ ಒಂದೇ ಆಣೆ. ಒಳಗಿನ ಹೂರಣವೂ ವೈವಿಧ್ಯಮಯ. ವರ್ಣರಂಜಿತ ಶೀರ್ಷಿಕೆ. ವಿದ್ಯುಚ್ಚಾಲಿತ ಯಂತ್ರದಲ್ಲಿ ದರ್ಶನೀಯ ಮುದ್ರಣ. ಲೇಖನಗಳ ಆಯ್ಕೆ ಮತ್ತು ಪ್ರಕಟಣೆಯಲ್ಲಿ ಒಂದು ಸೂತ್ರತೆ ಮತ್ತು ತತ್ವ ಎದ್ದು ಕಾಣುತ್ತಿತ್ತು. ರಾಷ್ಟ್ರೀಯ ಜಾಗೃತಿ ಹುಟ್ಟಿಸುವುದರೊಂದಿಗೆ ಓದುಗರ ಜ್ಞಾನದ ಹಸಿವನ್ನು ಹಿಂಗಿಸುವ ಹಂಬಲವೂ ಕಂಡುಬರುತ್ತಿತ್ತು. ಲೇಖನಗಳೊಡನೆ ಸುದ್ದಿ ಸಂಗ್ರಹವೂ ಆಗಿನ ಕರ್ಮವೀರದ ವಿಶೇಷ ಆಕರ್ಷಣೆ ಎನಿಸಿತ್ತು. ಕ್ರಮೇಣ ವಾರದ ಕತೆ ಮತ್ತು ವಾರದ ಭವಿಷ್ಯಗಳೂ ಸ್ಥಾನ ಪಡೆದವು. ಲಘು ಮನರಂಜನೆಯ ಲೇಖನಗಳು ಆಗಾಗ ಪ್ರಕಟವಾಗುತ್ತಿದ್ದವಾದರೂ ಪತ್ರಿಕೆ ಹೆಸರು ಗಳಿಸಿತ್ತು. ೧೯೩೯ ರಲ್ಲೇ ಎರಡನೇ ಮಹಾಯುದ್ಧ ಪ್ರಾರಂಭವಾಗಿತ್ತು. ಅದರ ಸುದ್ದಿಯ ಬಗ್ಗೆ, ಹಿನ್ನೆಲೆ ಮಾಹಿತಿ ಬಗ್ಗೆ ಕನ್ನಡ ಓದುಗರಲ್ಲಿ ಇದ್ದ ಹಸಿವನ್ನು ತಣಿಸಲು ಕರ್ಮವೀರ ಯಥಾ ಶಕ್ತಿ ಪ್ರಯತ್ನಿಸುತ್ತಿತ್ತು. ಆಗ ಕರ್ನಾಟಕದಲ್ಲಿ ವಿಶೇಷ ಪ್ರಚಾರದಲ್ಲಿದ್ದ ಇನ್ನೊಂದು ಪತ್ರಿಕೆಯೆಂದರೆ ಪ್ರಜಾಮತ. ಅದು ಸಾಮಾನ್ಯ ಮನರಂಜನೆಯ ಪತ್ರಿಕೆಯೆಂದೂ ಕರ್ಮವೀರವು ವಿಚಾರಶೀಲ ಪತ್ರಿಕೆಯೆಂದೂ ಹೆಸರು ಗಳಿಸಿದ್ದವು.

ಕರ್ಮವೀರದ ಪ್ರಕಟಣೆಯ ದಿನ ಸೋಮವಾರವಾಗಿತ್ತು. ಸಂಯುಕ್ತ ಕರ್ನಾಟಕ ಕಚೇರಿಗೆ ವಾರದ ಬಿಡುವು ರವಿವಾರ ಇದ್ದುದರಿಂದ ಅದು ಸೋಮವಾರ ಪ್ರಕಟವಾಗುತ್ತಿರಲಿಲ್ಲ. ಅಂದು ಸಂಯುಕ್ತ ಕರ್ನಾಟಕದ ವಾಚಕರಿಗೆ ತಮ್ಮದೇ ಆದ ಇನ್ನೊಂದು ಪತ್ರಿಕೆಯನ್ನು ಕೊಡೋಣವೆಂದು ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನವರು ಯೋಚಿಸಿದರು. ಇದರಲ್ಲಿ "ಸೋಮವಾರದ ಸಂಯುಕ್ತ ಕರ್ನಾಟಕ ಸೇರಿದೆ" ಎಂಬ ಶೀರ್ಷಿಕೆಯನ್ನೂ ಅದು ಹೊತ್ತು ಬರುತ್ತಿತ್ತು. "ಈಗ ಸಂಯುಕ್ತ ಕರ್ನಾಟಕ' ವಾರಪತ್ರಿಕೆಯನ್ನು ಕರ್ಮವೀರದಲ್ಲಿ ಅಂತರ್ಧಾನಗೊಳಿಸಿ 'ಕರ್ಮವೀರ' ಎಂಬ ಹೊಸ ಹೆಸರಿನಿಂದ ಅದನ್ನು ಹೊರಡಿಸುವ ವಿಚಾರ ಮಾಡಿದ್ದೇವೆ. ಆದುದರಿಂದ ಸಂಯುಕ್ತ ಕರ್ನಾಟಕ ವಾರಪತ್ರಿಕೆಯ ಚಂದಾದಾರರೆಲ್ಲರಿಗೂ ಕರ್ಮವೀರವನ್ನೇ ಸಲ್ಲಿಸುತ್ತಾ ಹೋಗುವೆವು. ಅವರು

ಈ ಸೇವೆಯನ್ನು ಮನ್ನಿಸಬೇಕು. ಮತ್ತು ಸಂಯುಕ್ತ ಕರ್ನಾಟಕದ ಸೇವೆಯನ್ನು ಸ್ವೀಕರಿಸುತ್ತ ಬಂದಂತೆ ಕರ್ಮವೀರದ ಸೇವೆಯನ್ನೂ ಸ್ವಾಗತಿಸಬೇಕಾಗಿ ಬಿನ್ನಹ" ಎಂದು ಶ್ರೀ ದಿವಾಕರ ರಂಗರಾಯರು ಅಂದಿನ ಪ್ರಥಮ ಸಂಚಿಕೆಯಲ್ಲಿ ಬರೆದಿದ್ದಾರೆ.

ಕರ್ಮವೀರದ ಧ್ಯೇಯೋದ್ದೇಶಗಳನ್ನು ವಿವರಿಸುತ್ತ ಅದೇ ಲೇಖನದಲ್ಲಿ

"ಪತ್ರಿಕೆಯು ಈಗ ರಾಜಕೀಯ ರಂಗವೊಂದನ್ನೇ ಇಟ್ಟುಕೊಳ್ಳದೆ ಕಾಲಕ್ಕೆ ಅನುಸರಿಸಿ ಕರ್ನಾಟಕದ ವಿವಿಧಾಂಗಗಳ ಹಾಗೂ ವಿವಿಧ ಸ್ವರೂಪದ ಸೇವೆ ಮಾಡಲು ಸಿದ್ಧವಾದ ಪತ್ರಿಕೆಯಾಗಬೇಕು ಎಂದು ಸಂಕಲ್ಪವಿದೆ. ಈ ಕಾರ್ಯದಲ್ಲಿ ಎಲ್ಲ ಕನ್ನಡ ಲೇಖಕರ ಹಾಗೂ ಕಾರ್ಯಕರ್ತರ ಸಹಕಾರವನ್ನು ನಾನು ಸಂಪಾದಕರ ಪರವಾಗಿ ಕೋರುತ್ತೇನೆ...." ಕರ್ಮವೀರ ಹೊರಟಾಗ ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮ ಚೇತಸಾ!! ನಿರಾಶೀರ್ನಿರ್ಮಮೋ ಭೂತ್ವಾ ಯುದ್ಧ್ಯಸ್ವ ವಿಗತಜ್ವರಃ !! ಎಂಬುದೇ ಇದರ ಧ್ಯೇಯವಾಕ್ಯವಾಗಿದ್ದಿತು. ಈಗ ಕೃಷ್ಣನ ಆ ಉಪದೇಶವನ್ನು ಅನುಸರಿಸುತ್ತ ಬಂದ ಕರ್ಮವೀರನು ನಷ್ಟ ಮೋಹನಾಗಿ ಗತ ಸಂದೇಹನಾಗಿ ಶ್ರೀಕೃಷ್ಣನ ವಚನವನ್ನು ಪಾಲಿಸಲು ನಿಷ್ಕಾಮ ಸೇವೆಯನ್ನು ಅರ್ಪಿಸಲು ಸಿದ್ಧನಾಗಿದ್ದಾನೆ. ಮನ್ನಿಸಬೇಕು"

ಎಂದೂ ಬರೆಯಲಾಗಿದೆ.

ಇದಕ್ಕನುಗುಣವಾಗಿ ಅರ್ಜುನನು ಬಿಲ್ಲನ್ನು ಕೆಳಗಿಟ್ಟು ಮಂಡೆಯೂರಿ ಶಿರಬಾಗಿ ಕೈಮುಗಿದು ಕುಳಿತು "ಕರಿಷ್ಯೇ ವಚನಂ ತವ" ಎಂದು ಹೇಳುವ ಭಂಗಿಯನ್ನು ಕರ್ಮವೀರ ಶೀರ್ಷಿಕೆಯ ಹಿನ್ನೆಲೆಯಲ್ಲಿ ಮುದ್ರಿಸಲಾಗುತ್ತಿತ್ತು.

ಈ ಕರ್ಮವೀರಕ್ಕೆ ದೊರೆತ ಇನ್ನೊಂದು ದೊಡ್ಡ ಬಲವೆಂದರೆ ಮಹಾತ್ಮಾ ಗಾಂಧೀಜಿಯವರ 'ಹರಿಜನ' ಪತ್ರಿಕೆಯ ಪುರವಣಿ. ಪ್ರತಿ ರವಿವಾರ ಪ್ರಕಟವಾಗುವ ಹರಿಜನ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳನ್ನು ಸೋಮವಾರ ಕರ್ಮವೀರದಲ್ಲಿ 'ಹರಿಜನ ಪುರವಣಿ' ಎಂಬ ವಿಶೇಷ ಅಂಕಣದಲ್ಲೇ ಪ್ರಕಟಿಸಲಾಗುತ್ತಿತ್ತು. ಇದಕ್ಕಾಗಿ ದಿವಾಕರರು ಮಹಾತ್ಮರೊಡನೆ ಮಾತಾಡಿ ವಿಶೇಷ ವ್ಯವಸ್ಥೆ ಮಾಡಿಕೊಂಡಿದ್ದರು. ಇದು ಕರ್ಮವೀರಕ್ಕೆ ವಿಶೇಷ ಗೌರವ ಗಾಂಭೀರ್ಯಗಳನ್ನೂ ಅಧಿಕ ಪ್ರಸಾರವನ್ನೂ ನೀಡಿದವು. ದ್ವಿತೀಯ ಯುದ್ಧವು ಅತ್ಯಂತ ನಿರ್ಣಾಯಕ ಮಟ್ಟವನ್ನು ತಲುಪಿದ ದಿನಗಳವು. ರಾಜಕೀಯ ಚಟುವಟಿಕೆಗಳು ಎಡೆಬಿಡದ ಗತಿಯಿಂದ ನಡೆಯುತ್ತಿದ್ದವು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ಹೊರತು ಅದು ಯುದ್ಧ ಪ್ರಯತ್ನದಲ್ಲಿ ನೆರವಾಗಲಾರದೆಂದು ಮಹಾತ್ಮಾ ಗಾಂಧಿ ಮತ್ತು ಕಾಂಗ್ರೆಸ್ಸು ಸ್ಪಷ್ಟವಾಗಿ ಸಾರಿದ್ದರು. ಆದ್ದರಿಂದ ಮಹಾತ್ಮಾಗಾಂಧಿಯವರ ಅಭಿಪ್ರಾಯಗಳಿಗಾಗಿ ಎಲ್ಲಿಲ್ಲದ ಕುತೂಹಲ. ಹರಿಜನ ಪುರವಣಿಗಾಗಿಯೇ ಕರ್ಮವೀರ ಕೊಳ್ಳುತ್ತಿದ್ದವರ ಸಂಖ್ಯೆಯೂ ಕಡಿಮೆಯಾಗಿರಲಿಲ್ಲ.

ಆದರೆ 'ಹರಿಜನ ಪುರವಣಿ'ಯನ್ನು ಕೊರಳಲ್ಲಿ ಕಟ್ಟಿಕೊಂಡದ್ದೇ ಕರ್ಮವೀರ ಪತ್ರಿಕೆಗೆ ಒಂದು ಕುತ್ತಾಗಿ ಪರಿಣಮಿಸಿತು. ೧೯೪೨ರ ಆಗಸ್ಟನಲ್ಲಿ ಸರಕಾರ ಯಾವ ಮುನ್ಸೂಚನೆ ಇಲ್ಲದೆ ದೇಶಾದ್ಯಂತ ಬಂಧನ ಸತ್ರವನ್ನೂ ಉಗ್ರ ದಬ್ಬಾಳಿಕೆಯನ್ನೂ ಆರಂಭಿಸಿತು. ಮಹಾತ್ಮಾ ಗಾಂಧಿ ಮತ್ತು ಇನ್ನಿತರ ನಾಯಕರ ಬಂಧನವಾಯಿತು. ಜನತೆಯೆಲ್ಲ ರೊಚ್ಚಿಗೆದ್ದು ಉಗ್ರ ಪ್ರತಿಭಟನೆ ಆರಂಭಿಸಿತು. ದೇಶ ಹಿಂದೆಂದೂ ಕಾಣದ ಕ್ಷೋಭೆಯನ್ನು ಅನುಭವಿಸತೊಡಗಿತು. ಈ ವಾತಾವರಣದಲ್ಲಿ ಹರಿಜನ ಪುರವಣಿಯ ಪ್ರಕಟಣೆಯನ್ನು ಸರಕಾರ ಸಹಿಸುವದು ಸಾಧ್ಯವಿರಲಿಲ್ಲ. ಅದರ ೨೪-೮-೧೯೪೨ರ ಸಂಚಿಕೆಯನ್ನು ಮುದ್ರಣ ಹಂತದಲ್ಲಿಯೇ ತಡೆಹಿಡಿಯುವ ಉದ್ದೇಶದಿಂದ ಸರಕಾರದವರು ಅಂದು ಶಸ್ತ್ರ ಸಜ್ಜಿತ ದಾಳಿ ಮಾಡಿ ಪತ್ರಿಕೆಗಳನ್ನೆಲ್ಲ ವಶಪಡಿಸಿಕೊಂಡು ಪತ್ರಿಕೆಯ ಪ್ರಕಟಣೆಯ ಮೇಲೆ ನಿರ್ಬಂಧ ಹೇರಿದರು.

ಆದರೆ ವಿಚಿತ್ರವೆಂದರೆ ಸರಕಾರ ವಶಪಡಿಸಿಕೊಂಡ ಅಂದಿನ ಸಂಚಿಕೆಯಲ್ಲಿ ಹರಿಜನ ಪುರವಣಿಯಲ್ಲಿ ಅವರಿಗೆ ಬೇಕಾಗಿದ್ದ ಲೇಖನ ಇರಲೇ ಇಲ್ಲ. ಅಂಚೆಯ ಅವ್ಯವಸ್ಥೆಯಿಂದಾಗಿ ಎಲ್ಲ ಲೇಖನಗಳು ತಮ್ಮ ಕೈ ಸೇರಿಲ್ಲವೆಂದೂ ಆದ್ದರಿಂದ ಪುರವಣಿಯ ಪೂರ್ತಿಭಾಗವನ್ನು ಪ್ರಕಟಿಸಲು ಅಸಾಧ್ಯವಾದುದಕ್ಕಾಗಿ ವಿಷಾದಿಸುತ್ತೇವೆಂದೂ ಸಂಪಾದಕರು ನೀಡಿದ ಒಂದು ಪ್ರಕಟನೆ ಮಾತ್ರ ಇತ್ತು. ಇದೆಲ್ಲ ವಿವರಣೆ ಹೇಳಿದ ಮೇಲೆ ಸರಕಾರೀ ಅಧಿಕಾರಿಗಳು ತಮ್ಮ ಆಜ್ಞೆಯನ್ನು ಹಿಂತೆಗೆದುಕೊಂಡರು. 'ಕರ್ಮವೀರ'ದ ಪ್ರಕಟಣೆಗೆ ಅನುಮತಿ ಇತ್ತರು. ೧೪ -೯-೪೨ನೇ ದಿನದಿಂದ ಎಂದಿನಂತೆ ಪತ್ರಿಕೆ ಮತ್ತೆ ಆರಂಭವಾಯಿತು.

ದ್ವಿತೀಯ ಮಹಾಯುದ್ಧದ ನಂತರ ಜನಜೀವನದಲ್ಲಿ ಅನೇಕ ಮಾರ್ಪಾಡುಗಳಾದವು. ಭಾರತ ಸ್ವತಂತ್ರವಾಯಿತು. ಸಾರ್ವಜನಿಕ ಜೀವನದ ಮೌಲ್ಯಗಳೆಲ್ಲ ಬದಲಾದವು. ತ್ಯಾಗ ಜೀವನ ಭೋಗ ಜೀವನಕ್ಕೆ ಎಡೆ ಕೊಟ್ಟಿತು. ಹೋರಾಟದ ಪ್ರವೃತ್ತಿ ವಿಲಾಸೀ ಪ್ರವೃತ್ತಿಯಾಗಿ ಮಾರ್ಪಟ್ಟಿತು. ನಿಸ್ಪೃಹತೆಯ ಬದಲಾಗಿ ಐಹಿಕ ಸುಖಾಪೇಕ್ಷೆಯೇ ಆದ್ಯತೆ ಪಡೆಯಿತು. ಹಿಂದಿನ ಸ್ವಾರ್ಥ ತ್ಯಾಗ, ಇಂದಿನ ರಾಜಕೀಯ ಅಧಿಕಾರ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಕೊಂಡುಕೊಳ್ಳುವ ಒಂದು ಬಂಡವಾಳವಾಗಿ ಪರಿಣಮಿಸಿತು. ಇದನ್ನು ಗುರುತಿಸಲು ಸಮರ್ಥರಾದ ಚಾಣಾಕ್ಷಮತಿಗಳು ಅಲ್ಪ ಕಾಲದಲ್ಲೇ ತಮ್ಮ ಜೀವನದ ಮಹತ್ವಾಕಾಂಕ್ಷೆಗಳನ್ನೆಲ್ಲ ಈಡೇರಿಸಿಕೊಂಡರು. ಬೆಳೆಯೊಡನೆ ಕೊಳೆಯೂ ಸಾಕಷ್ಟು ವಿಪುಲವಾಗಿ ತಲೆಯೆತ್ತಿತು. ಸಾಮಾನ್ಯ ನಾಗರಿಕನಿಗೆ ಈ ಬದಲಾವಣೆಗೆ ಹೊಂದಿಕೊಳ್ಳುವದಿರಲಿ, ಗುರುತಿಸುವುದು ಕೂಡ ಕಷ್ಟವೇ ಆಯಿತು.

ಇವರ ಪ್ರಭಾವ ಪತ್ರಿಕಾ ಪ್ರಪಂಚದ ಮೇಲೂ ಆಗದಿರಲಿಲ್ಲ. ವಿದೇಶೀ ಸರಕಾರವನ್ನು ವಿರೋಧಿಸಿದ ಪತ್ರಿಕೆಗಳು ಸ್ವದೇಶೀ ಸರಕಾರ ಬಂದೊಡನೆ ಅದನ್ನು ಅವಿನಾಭಾವದಿಂದ ಅಪ್ಪಿಕೊಂಡುಬಿಟ್ಟವು. ಪಟ್ಟಭದ್ರ ಹಿತಾಸಕ್ತಿಗಳೊಡನೆ ಹೊಂದಿಕೊಳ್ಳುವ ಮತ್ತು ತಮ್ಮಲ್ಲೂ ಆ ಶಕ್ತಿಗಳ ಬೆಳವಣಿಗೆಗೆ ಆಶ್ರಯ ನೀಡುವ ಪ್ರವೃತ್ತಿ ಬೆಳೆಯಿತು. ಅಂದಿನ ವರೆಗೂ ಒಂದು ಸೇವೆ ಎನಿಸಿದ್ದ ಪತ್ರಿಕಾ ವೃತ್ತಿ ಈಗ ಉದ್ಯಮವಾಗಿ ಬದಲಾವಣೆ ಹೊಂದಿತು. ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನಗಳ ಗಳಿಕೆಗೆ ಒಂದು ಸೋಪಾನವೆನಿಸಿತು. ಹಣ ತೊಡಗಿಸಿ ಬಹು ಪರಿಯಾಗಿ ಗಳಿಸುವ ಒಂದು ಜೂಜು ಎನಿಸಿತು. ಪತ್ರಿಕಾ ಸಾಮ್ರಾಜ್ಯಗಳೂ ಪತ್ರಿಕಾ ಸಾಮ್ರಾಟರೂ ತಲೆಯೆತ್ತತೊಡಗಿದರು.

ಸಂಯುಕ್ತ ಕರ್ನಾಟಕ ಮತ್ತು ಕರ್ಮವೀರ ಪತ್ರಿಕೆಗಳ ಮಾಲಿಕತ್ವದ ಸ್ವರೂಪ ಸಾರ್ವಜನಿಕ ಟ್ರಸ್ಟ್ ಆಗಿದ್ದುದರಿಂದ ಈ ಬದಲಾವಣೆಯ ಗಾಳಿಗೆ ಸಿಕ್ಕು ಅಲ್ಲಾಡದೆ ಆದರ್ಶ ಪತ್ರಿಕಾ ಸಂಸ್ಥೆಯ ಉದಾಹರಣೆಯನ್ನು ನೀಡಬಹುದಿತ್ತು. ಆದರೆ ಸ್ವಾತಂತ್ರ್ಯ ಪ್ರಾಪ್ತಿಯೊಡನೆಯೇ ಪ್ರತಿಯೊಬ್ಬ ಭಾರತೀಯನಲ್ಲಿ ಮೂಡಿದ ಸಂತೃಪ್ತ ಜೀವನದ ಮನೋಭಾವಕ್ಕೆ ಇದೂ ಹೊರತಾಗಲಿಲ್ಲ. ಅಲ್ಲಿಯ ಕಾರ್ಯಕರ್ತರಿಗೆ ತಮ್ಮದು ಕೈತುಂಬ ಸಂಬಳ ತರುವ ನೌಕರಿಯಾಗಿ ಪರಿವರ್ತನೆ ಆಗಬೇಕಾಗಿತ್ತು. ಮೇಲಿನ ಸ್ಥಾನದಲ್ಲಿರುವವರಿಗೆ ಈಗ ಸರಕಾರದ ದಬ್ಬಾಳಿಕೆಯ ಹೆದರಿಕೆ ಇಲ್ಲದ್ದರಿಂದ ಇನ್ನು ಆರ್ಥಿಕ ಕಾರಣಗಳಿಗಾಗಿ ಸಂಸ್ಥೆ ಮುಚ್ಚದಂತೆ ಭದ್ರತೆಯನ್ನು ಬೆಳೆಸುವುದು ಬೇಕಾಗಿತ್ತು. ವಾಚಕರಲ್ಲಿ ವೈವಿಧ್ಯಮಯ ಸಾಹಿತ್ಯವನ್ನೂ ಲಘು ಮನೋರಂಜನೆಯನ್ನೂ ಆಕರ್ಷಕ ಚಿತ್ರ ಮತ್ತು ವರ್ಣಗಳನ್ನೊಳಗೊಂಡ ಪುಟಗಳನ್ನೂ ಓದುವ ಹಂಬಲ ಬೆಳೆಯತೊಡಗಿತ್ತು. ಈ ಹಿನ್ನೆಲೆಯಲ್ಲಿ ಭಾರತೀಯ ಪತ್ರಿಕಾ ಪ್ರಪಂಚದ ಸ್ವಾತಂತ್ರ್ಯೋತ್ತರ ಬೆಳವಣಿಗೆಯನ್ನು ಪರಿಶೀಲಿಸಬೇಕು. ಪ್ರತಿಯೊಂದು ಪತ್ರಿಕೆಯ ಚರಿತ್ರೆಯನ್ನೂ ನಾವು ಈ ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡಿ ಅದರ ಯಶಾಪಯಶಗಳನ್ನು ನಿರ್ಧರಿಸಬಹುದು.

ಕನ್ನಡ ಪತ್ರಿಕಾ ಪ್ರಪಂಚದಲ್ಲಿ ವಿಶಿಷ್ಟ ಮತ್ತು ಅನುಕರಣೀಯ ಸ್ಥಾನವನ್ನು ಪಡೆದು ಬೆಳೆದ 'ಕರ್ಮವೀರ'ವು ಸ್ವಾತಂತ್ರ್ಯೋತ್ತರ ಭಾರತದಲ್ಲಿ ತನ್ನತನಕ್ಕಾಗಿ ಬಹಳಷ್ಟು ತಡಕಾಡಿತು. ಪತ್ರಿಕೆಯು ಮೂಲತಃ ಸುದ್ದಿ ಸಾಪ್ತಾಹಿಕವೆಂದೇ ಜನ್ಮವೆತ್ತಿ ಹೆಸರು ಗಳಿಸಿತ್ತು. ಆದರೆ ಸ್ವಾತಂತ್ರ್ಯೋತ್ತರದ ದಿನಗಳಲ್ಲಿ, ಜನಪ್ರಿಯತೆಗೆ ಮಾರು ಹೋಯಿತು. ಆದರೇನು ಅದಕ್ಕೆ ಹೊಸತು ದಕ್ಕಲಿಲ್ಲ. ಹಳೆಯದು ಉಳಿಯಲಿಲ್ಲ! ◆

## ೨೦. 'ಜನಸೇವಕ' ನಡೆದು ಹೋದ ಹಾದಿ!

✍ ಶ್ರೀ ಅಮ್ಮೆಂಬಳ ಆನಂದ

ಆಗಸ್ಟ ೨, ೧೯೭೨ರ ಸಂಚಿಕೆಯನ್ನು ತನ್ನ ಕೊನೆಯ ಉಸಿರಾಗಿಸಿಕೊಂಡು ಉತ್ತರ ಕನ್ನಡದ ಜನಪ್ರಿಯ ವಾರಪತ್ರಿಕೆ 'ಜನಸೇವಕ' ಇತಿಹಾಸದ ಪುಟಗಳನ್ನು ಸೇರಿಕೊಂಡಿತು. ತಾನು ಹಮ್ಮಿಕೊಂಡ ಸಾರ್ವತ್ರಿಕ ಶಿಕ್ಷಣ ಚಳವಳಿಯ ಅಂಗವಾಗಿ ಕೆನರಾ ವೆಲ್‌ಫೇರ್ ಟ್ರಸ್ಟು ೧೯೫೫ರಲ್ಲಿ ಈ ಪತ್ರಿಕೆಯನ್ನು ಪ್ರಾರಂಭಿಸಿತ್ತು. 'ಜನಸೇವಕ'ದ ಮೊದಲನೆಯ ಸಂಚಿಕೆ (೨೬-೧-೫೫) ಯಲ್ಲಿ ಅವರ ಧ್ಯೇಯ ಧೋರಣೆಗಳನ್ನು ಸ್ಪಷ್ಟಪಡಿಸಲಾಗಿದೆ – "ಪತ್ರಿಕೆಯು ತನ್ನ ಹೆಸರಿನಂತೆ ಜನರ ಸೇವೆ ಮಾಡುವ ಉದ್ದೇಶದಿಂದ ಕಾರ್ಯ ಎಸಗುವುದು. ಉ.ಕನ್ನಡ ಜಿಲ್ಲೆಯ ಜನರ ದೈನಂದಿನ ತೊಡಕುಗಳನ್ನು ನಿವಾರಿಸಲು ಹೆಣಗುವುದು ಪತ್ರಿಕೆಯ ಧ್ಯೇಯ. ಜನಜಾಗೃತಿಗೆ ಉಪಯುಕ್ತವಿರುವ ಜ್ಞಾನ ಪ್ರಸಾರ ಮಾಡಿ ಕರಾವಳಿ ಕರ್ನಾಟಕ ಮಾತ್ರವಲ್ಲದೆ ವಿಶಾಲ ಕರ್ನಾಟಕದ ಸರ್ವಾಂಗೀಣ ಏಳ್ಗೆಗಾಗಿ ದುಡಿಯುವುದು ಪತ್ರಿಕೆಯ ಉದ್ದೇಶವಾಗಿದೆ."

### ನನಸಾದ ಕನಸು

ವ್ಯಾವಹಾರಿಕ ಕನಸುಗಾರರಾದ ಶ್ರೀ ದಿನಕರ ದೇಸಾಯಿಯವರು 'ಜನಸೇವಕ' ಆದರ್ಶ ಪತ್ರಿಕೆಯಾಗಿ ಮುನ್ನಡೆಯುವಂತೆ ಸುಸಂಬದ್ಧ ಯೋಜನೆಯನ್ನು ರೂಪಿಸಿಕೊಂಡಿದ್ದರು. ಪತ್ರಿಕೆಯ ಸ್ಥಿರ ಶೀರ್ಷಿಕೆಗಳು ಇದನ್ನು ವಾಚನೀಯವಾಗಿಸಿದವು. ಮೊದಲು 'ನಿರೀಕ್ಷಕ' ಹೆಸರಿನಲ್ಲಿ ಮುಖಪುಟದ ಲೇಖನಗಳನ್ನು ಬರೆಯುತ್ತಿದ್ದ ಶ್ರೀ ದೇಸಾಯಿಯವರು ೧೯೬೦ರಿಂದ 'ಜನಸೇವಕ' ರಾದರು. 'ವಾರ್ತಾಸಂಗ್ರಹ' ಪ್ರಾಮುಖ್ಯವಾಗಿ ಜಿಲ್ಲಾ ವಾರ್ತೆಯನ್ನು ಜೊತೆಗೆ ದೇಶ ವಿದೇಶಗಳ ಮುಖ್ಯ ಸಮಾಚಾರಗಳನ್ನು ಒಳಗೊಂಡಿರುತ್ತಿತ್ತು. 'ಮಕ್ಕಳ ಮಂಟಪ' ಶಿಶು ಸಾಹಿತ್ಯಕ್ಕೆ ಬೆಲೆಯುಳ್ಳ ಕಾಣಿಕೆ ಕೊಟ್ಟಿದೆ. ರೈತರಿಗೆ ಒಕ್ಕಲುತನ ಹಾಗೂ ಇನ್ನಿತರ ವೃತ್ತಿಗಳ ಮಾಹಿತಿಯು 'ನಮ್ಮ ರೈತರಿಗಾಗಿ' ವಿಭಾಗದಲ್ಲಿ ದೊರೆಯುತ್ತಿತ್ತು.

'ಜನಸೇವಕ' ಪ್ರಕಟನೆಯನ್ನು ಆರಂಭಿಸಿದ ವರುಷ 'ಜಯಕರ್ನಾಟಕ'(೨೭ -೮-೫೫) ಸಂಪಾದಕೀಯವೊಂದನ್ನು ಬರೆದು ಆಶೀರ್ವದಿಸಿತು – "ಜನಸೇವಕ ಬಹು ಅಚ್ಚುಗಟ್ಟಾಗಿ, ಒಳ್ಳೆಯ ಧ್ಯೇಯ ಇಟ್ಟುಕೊಂಡು, ವಿಶೇಷ ಗದ್ದಲವಿಲ್ಲದೆ ಜಿಲ್ಲೆಗೆ ನಿಜವಾದ ವಿಧಾಯಕ ಸೇವೆ ಸಲ್ಲಿಸುತ್ತಿದೆ". ಮುಂದೆ 'ಜನಸೇವಕ'ದ ಲೇಖನಗಳನ್ನು 'ಪ್ರಜಾವಾಣಿ', 'ಕಸ್ತೂರಿ', 'ಪ್ರಪಂಚ', 'ರಾಯಭಾರಿ' –

ಪತ್ರಿಕೆಗಳು ಪುನರ್ಮುದ್ರಿಸಿ ಬೆನ್ನು ತಟ್ಟಿದವು. ಜಿಲ್ಲೆಯ ಕ್ಷೇತ್ರ ಸ್ಥಳಗಳ ಪರಿಚಯ ಮಾಡಿಕೊಡುತ್ತಿದ್ದ 'ಉತ್ತರ ಕನ್ನಡದ ಕೈಪಿಡಿ' ಕಾಲಾನುಕ್ರಮದಲ್ಲಿ 'ಪ್ರತಿಯೊಬ್ಬನ ಕೈಪಿಡಿ'ಯಾಯಿತು. ಕುರುಡರಿಗೆ ಯಾಂತ್ರಿಕ ಕಣ್ಣು, ಸಾಗರಾಂತರಾಳದಲ್ಲಿಯ ಆಹಾರ, ಜರ್ಮನಿಯಲ್ಲಿ ಪುಸ್ತಕ ವ್ಯಾಪಾರ, ನಾಗರಹಾವಿನ ವಿಷದಿಂದ ಔಷಧ, ಪ್ರವಾಸಿ ಪಕ್ಷಿಗಳು, ಆಗಾಖಾನ ಪ್ಯಾಲೇಸ್, ಚಂದ್ರಯಾನದ ಪಕ್ಷ, ಹಾಲಕ್ಕಿ ಒಕ್ಕಲಿಗರು – ಇಂತಹ ವಿಷಯ ವೈವಿಧ್ಯದಿಂದ ಈ ವಿಭಾಗ ನಿಜಕ್ಕೂ ಜ್ಞಾನದೀವಿಗೆಯಾಗಿತ್ತು. ೧೯೬೭ರಿಂದ ಪ್ರಾರಂಭವಾದ 'ಸುದ್ದಿಸಿಪ್ಪುದು' ಅಂಕಿ–ಸಂಖ್ಯೆಗಳಿಂದೊಡಗೂಡಿದ ಸ್ವಾರಸ್ಯಕರ ಮಾಹಿತಿ ಹೊಂದಿರುತ್ತಿತ್ತು.

## ಹಲವು ಹೋರಾಟಗಳು

ಸಮಾಜವಾದಿ ಪಕ್ಷದ ಧ್ಯೇಯ ಧೋರಣೆಗಳನ್ನು 'ಜನಸೇವಕ' ಅತ್ಯಂತ ಸಮರ್ಥವಾಗಿ ಪ್ರತಿಪಾದಿಸಿದೆ. ಸರ್ವೋದಯ ಧುರೀಣ ಶ್ರೀ ಜಯಪ್ರಕಾಶ ನಾರಾಯಣರ ವಿಚಾರಧಾರೆಯನ್ನು ಕನ್ನಡಕ್ಕೆ ಮೊದಲು ನೀಡಿದ್ದು ಈ ಪತ್ರಿಕೆಯೇ. ಉತ್ತರ ಕನ್ನಡದ ವಿಕಾಸಕ್ಕೆ ತ್ರಿಮುಖ ಯೋಜನೆಯನ್ನು ದಶಕದ ಹಿಂದೆಯೆ ಇದು ರೂಪಿಸಿತು. ಔದ್ಯಮೀಕರಣದೊಂದಿಗೆ ಕೃಷಿ ಸಂಪತ್ತು ಹಾಗೂ ಅರಣ್ಯ ಸೊತ್ತು ವೃದ್ಧಿಯಾಗಬೇಕೆಂದು ಇದು ಹೋರಾಡಿತು. ಜಿಲ್ಲೆಯ ಅಪಾರ ನೈಸರ್ಗಿಕ ಸಂಪತ್ತು ಸದುಪಯೋಗವಾಗುವಂತೆ ಕಾಗದ, ರೇಯಾನ್, ಅಲ್ಯೂಮಿನಿಯಂ ಕಾರಖಾನೆಗಳು, ರೇಶಿಮೆ ಉದ್ದಿಮೆ, ಕಾಸ್ಟಿಕ್ ಸೋಡಾ ಫ್ಯಾಕ್ಟರಿ, ನಾವೆ ಕಟ್ಟುವ ಉದ್ದಿಮೆ – ಇವುಗಳ ಸ್ಥಾಪನೆಯ ಅಗತ್ಯವನ್ನು 'ಜನಸೇವಕ' ಎತ್ತಿ ತೋರಿತು. ಫಲಪ್ರದ ಔದ್ಯಮೀಕರಣದ ನಂತರ ಉತ್ತರ ಕನ್ನಡ ಭಾರತದ ಸ್ವೀಡನ್ ಆಗಬೇಕೆಂಬ ಹಾರೈಕೆ ಅದರದಾಗಿತ್ತು.

ಜಿಲ್ಲೆಯ ಅಷ್ಟೇ ಅಲ್ಲ, ಸಮಗ್ರ ಮೈಸೂರು ರಾಜ್ಯದ ಭೂ ಸಮಸ್ಯೆಯ ಸ್ವರೂಪದ ವಿವರ ವಿವೇಚನೆಯನ್ನು ಈ ಪತ್ರಿಕೆ ನೀಡಿದೆ. ಗೇಣಿ ಪದ್ಧತಿ ರದ್ದಾದ ಹೊರತು ಕೃಷಿವಿಕಾಸವಾಗಲಾರದೆಂದೂ ನಮ್ಮ ರೈತರಿಗೆ ಸಾಗುವಳಿ ಯೋಗ್ಯ ಅರಣ್ಯ ಭೂಮಿ ಬೇಸಾಯಕ್ಕೆ ದೊರಕಬೇಕೆಂದೂ ಅದು ಮೊದಲಿನಿಂದ ಹೋರಾಡುತ್ತ ಬಂದಿದೆ. ೧೯೬೬ರಷ್ಟೊತ್ತಿಗೆ ಸರಕಾರ 'ಜನಸೇವಕ'ದ ಹೋರಾಟಕ್ಕೆ ಮಣಿದು, ೧೨೦೦೦ ಎಕರೆ ಅರಣ್ಯ ಭೂಮಿಯನ್ನು ಬಿಡುಗಡೆ ಮಾಡಿತು. ಆದರೆ ಇದರಿಂದ 'ಜನಸೇವಕ' ತೃಪ್ತನಾಗಲಿಲ್ಲ. 'ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆಯೇ' ಎಂದು ಗುಡುಗಿತು. ಹೋರಾಟದ ಕಾವು ಇಳಿಯಲಿಲ್ಲ. ಇಂದು ಸರಕಾರ ಒಂದು ಲಕ್ಷ ಎಕರೆ ಭೂಮಿಯನ್ನು ಬೇಸಾಯಕ್ಕೆ ಬಿಡುಗಡೆ ಮಾಡುತ್ತಿದ್ದು, 'ಜನಸೇವಕ'ದ ಆಂದೋಲನ ಅಂಶತಃ ಆದರೂ ಯಶಸ್ವಿಯಾದದ್ದರ ನಿದರ್ಶನವಾಗಿದೆ.

## ದಿನಕರ ಬೆಳಕಿನಲ್ಲಿ

ಶ್ರೀ ದಿನಕರ ದೇಸಾಯಿಯವರು ತಮ್ಮ ಬಹುಶ್ರುತತ್ವ ಹಾಗೂ ಅನುಭವಗಳ ತಿರುಳನ್ನು 'ಜನಸೇವಕ'ದ ಪುಟ ಪುಟಗಳಲ್ಲಿ ಧಾರೆ ಎರೆದರು. ದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ರಂಗಗಳ ಅಸ್ತವ್ಯಸ್ತತೆಯ ಮೇಲೆ ಅವರು ಕೇವಲ ಭೂಬಾಣ ಬಿಟ್ಟು ಹಿಂದೆ ಸರಿಯಲಿಲ್ಲ. ನಮ್ಮ ಜನ ಜೀವನದ ಅನಿಷ್ಟಗಳ ಪರಿಹಾರಕ್ಕೆ ವ್ಯವಹಾರಿಕ ಯೋಜನೆಗಳನ್ನು ನಾಡಿನ ಮುಂದಿಟ್ಟರು.

ಸಾರ್ವತ್ರಿಕ ಸಾಕ್ಷರತೆ, ಭಾರತದಲ್ಲಿ ಬಡತನ, ಭ್ರಷ್ಟಾಚಾರದ ಮಾದರಿ, ಪ್ರಗತಿಪರ ವಿರೋಧಿ ಪಕ್ಷ, ಕನ್ನಡ ಪತ್ರಿಕೋದ್ಯಮ, ಗ್ರಾಮಾಂತರ ಅಭಿವೃದ್ಧಿ, ಸಂಸತ್ ಶಿಕ್ಷಣ ಸಮಿತಿಯ ಕಾರ್ಯಕಲಾಪಗಳು, ಪಂಚವಾರ್ಷಿಕ ಯೋಜನೆಗಳ ಕಾರ್ಯಾಚರಣೆ, ಪಕ್ಷಾಂತರ ಪಿಡುಗು ಇವು ಅವರ ಹಲವು ವಿಷಯಗಳಲ್ಲಿ ಕೆಲವು. ತಿಳಿಯಾದ ಭಾಷೆ, ವಿಚಾರ ಪೂರ್ಣತೆ, ಸಣ್ಣ ಸಣ್ಣ ವಾಕ್ಯಗಳು, ಅಂಕಿ ಸಂಖ್ಯೆಗಳಿಂದ ವಾದಮಂಡನೆ ಹಾಗೂ ಸಮಸ್ಯೆಯ ವಿಶ್ಲೇಷಣೆ – ಇವು ಶ್ರೀ ದೇಸಾಯಿಯವರ ಲೇಖನಗಳಲ್ಲಿ ಎದ್ದು ಕಾಣುವ ಅಂಶಗಳಾಗಿವೆ.

'ಜನಸೇವಕ'ದ 'ಛತ್ರದ ತೆನೆ' ಒಂದೂ ಕಾಲು ದಶಕ ನಾಡಿನ ಬುದ್ಧಿ ಜೀವಿಗಳಿಗೆ ಚುಟಕ ಡೋಜ್ ನೀಡಿದೆ. ಇಲ್ಲಿ ಬಂದ ದಿನಕರ ಚುಟಕಗಳು ಹೆಚ್ಚಾಗಿ ರಾಜಕೀಯ ರಂಗಕ್ಕೆ ಸಂಬಂಧಿಸಿದವುಗಳಾಗಿದ್ದರೂ ಜನಮನವನ್ನು ಏಕಪ್ರಕಾರವಾಗಿ ಸೆಳೆದುಕೊಂಡವು. ನಿರ್ಭೀತ ಟೀಕೆಯ ಈ ಲಿಮರಿಕ್‌ಗಳಿಗೆ ಭಾರೀ ಗಿರಾಕಿ ಇತ್ತೆಂಬುದು ಸರ್ವಶ್ರುತ. ಛತ್ರದ ತೆನೆಯಿಂದ ಸ್ಫೂರ್ತಿಯೇ ಹೊರಬಂದಿತು. ಸಿದ್ಧಗಂಗಾ ಕನ್ನಡ ಸಾಹಿತ್ಯ ಸಮ್ಮೇಳನ (೧೯೬೪) ದ ಕವಿಗೋಷ್ಠಿಯಲ್ಲಿ ಖ್ಯಾತ ಕವಿ–ವಿಮರ್ಶಕ ಡಾ|| ಜಿ.ಎಸ್. ಶಿವರುದ್ರಪ್ಪನವರು ಅಭಿಪ್ರಾಯ ಪಟ್ಟರು : "ಶ್ರೀ ದೇಸಾಯಿಯವರ ಚುಟಕಗಳು ಯಾರ ಕಣ್ಣನ್ನಾದರೂ ಸೆಳೆಯುತ್ತವೆ. ಭಾಷೆಯ ಹದ, ಮಾತಿನ ಮೊನಚು, ಧ್ವನಿಯ ಕೊಂಕು ಅವುಗಳಲ್ಲಿ ಅಪೂರ್ವವಾಗಿದೆ."

## ಕರ್ನಾಟಕದ ಕನವರಿಕೆ

'ಜನಸೇವಕ' ಕರ್ನಾಟಕ ಏಕೀಕರಣ ಚಳುವಳಿಯ ಕಹಳೆಯಾಗಿ ಕಾರ್ಯ ನಿರ್ವಹಿಸಿದೆ. ತನ್ನ ಜನನದ ಪ್ರಾರಂಭದಲ್ಲಿಯೇ (೬–೧೧–೫೫) ಅದು ಬರೆಯಿತು – "ಏಕೀಕರಣವಾದೊಡನೆ 'ಕರ್ನಾಟಕ' ನಾಮಕರಣವಾಗಬೇಕಾದ್ದು ಅವಶ್ಯ. ಮೈಸೂರಿನವರು ಕನ್ನಡಿಗರಾದ್ದರಿಂದ ಕರ್ನಾಟಕ ರಾಜ್ಯದ ಪ್ರಜೆಗಳಾಗಲು ನಾಚುವುದೇಕೆ? ಮೈಸೂರಿನ ಮಹಾರಾಜರಿಗೆ ಸಹ 'ಕರ್ನಾಟಕ

ಸಿಂಹಾಸನಾಧೀಶ್ವರ' ಎಂಬ ಬಿರುದುಂಟು." ಏಕೀಕರಣದ ನಂತರದ ನಾಲ್ಕು ವರುಷಗಳಲ್ಲಿಯೂ ನಾಡಿಗೆ 'ಕರ್ನಾಟಕ' ನಾಮಕರಣ ಆಗದಾಗ 'ಜನಸೇವಕ' ಮತ್ತೆ ಧ್ವನಿ ಎತ್ತರಿಸಿತು - "ಏಕೀಕೃತ ಕರ್ನಾಟಕದಲ್ಲಿ ನವ ಚೈತನ್ಯ ಹುಟ್ಟಿ ಹೊಸ ಪರಂಪರೆ ಬೆಳೆಯಬೇಕಾದರೆ, ಕನ್ನಡ ರಾಜ್ಯಕ್ಕೆ 'ಕರ್ನಾಟಕ' ಎಂದೇ ಹೆಸರಿಡಬೇಕು". ಕರ್ನಾಟಕ ಏಕೀಕರಣ ಮೂರು ಮುಖ - ನಾಡು, ನುಡಿ, ಜನ - ವಾಗಿದೆ ಎಂಬ ಸತ್ಯವನ್ನು ಅದು ಬಿಂಬಿಸಿತು.

೧೯೭೨ರಲ್ಲಿ ನಾಮಕರಣ ಹಾಗೂ ಆಡಳಿತ ಭಾಷೆಯ ಕುರಿತು ಇನ್ನೂ ನಡೆದಿದ್ದ ಮೀನಮೇಷವನ್ನು ಕಂಡು ಕನಲಿದ 'ಜನಸೇವಕ' ಗುಡುಗಿತು. "ಮಾದರಿಯ ಮೈಸೂರಿನಲ್ಲಿ ಕನ್ನಡವು ಆಡಳಿತ ಭಾಷೆಯಾಗುವುದು ಯಾವಾಗ? ಇನ್ನು ಒಂದು ಶತಮಾನ ಬೇಕೆ? ಒಂದೇ ಒಂದು ವರುಷದ ಅವಧಿಯಲ್ಲಿ ಎಲ್ಲಾ ಮಟ್ಟದಲ್ಲೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಬಾರದೆ?" (೧೭-೫-೭೨) ಮತ್ತೆ ಎಚ್ಚರಿಸಿತು. "ಕರ್ನಾಟಕ'ವೆಂದು ರಾಜ್ಯದ ಹೆಸರನ್ನು ಬದಲಿಸುವ ಅಂತಿಮ ನಿರ್ಣಯ ಇನ್ನು ಕಾಲ ವಿಲಂಬ ಕೂಡದು." ಕರ್ನಾಟಕವೆಂದು ನಿರಂತರ ಕನವರಿಸಿದ ಆ ಪತ್ರಿಕೆ ರಾಜ್ಯ ಆ ಹೆಸರನ್ನು ಹೊಂದುತ್ತಿರುವಾಗಲೆ ಕಣ್ಣು ಮುಚ್ಚಿದ್ದು ದುರ್ವಿಧಿಯ ವಿಪರ್ಯಾಸವಾಗಿದೆ!

## ಲೇಖಕರ ಬಳಗ

ಪತ್ರಿಕೆಯ ಒಟ್ಟು ಬರವಣಿಗೆಯಲ್ಲಿಯ ಸಿಂಹಪಾಲನ್ನು ಶ್ರೀ ಗೌರೀಶ ಕಾಯ್ಕಿಣಿ ಅವರು ಶ್ರೀ ದೇಸಾಯಿಯವರೊಂದಿಗೆ ಹಂಚಿಕೊಂಡಿರುವರು. ೧೯೫೨ ಎಪ್ರಿಲದಿಂದ ಶ್ರೀ ಗೌರೀಶರು 'ಜನಸೇವಕ'ದ ಕೊನೆಯ ಸಂಚಿಕೆಯ ವರೆಗೂ ಅದಕ್ಕಾಗಿ ಪ್ರತಿವಾರ ಬರೆಯುತ್ತಲೇ ಇದ್ದರು. ಪ್ರತಿವಾರ ಒಂದು ವಿಶೇಷ ಲೇಖನವನ್ನಲ್ಲದೆ, 'ಅಡಿಗೆಭಟ್ಟ'ರಾಗಿ 'ವಾರದ ಉಪ್ಪಿನಕಾಯಿ' ಬಡಿಸುತ್ತಿದ್ದವರು ಇವರೆ. ಸುದ್ದಿಗೆ ಗುದ್ದು ಕೊಡುವ ಈ ವಿಭಾಗ ಇವರ ಹರಿತ ಲೆಕ್ಕಣಿಕೆಗೆ ತಕ್ಕ ಕ್ಷೇತ್ರ ಒದಗಿಸಿತು. ಇವರ 'ಸಾಹಿತ್ಯ ದರ್ಪಣ' ವಿಸ್ತೃತ ಪುಸ್ತಕ ವಿಮರ್ಶಾ ವಿಭಾಗವಾಗಿತ್ತು. ಈ 'ಅಡಿಗೆಭಟ್ಟ'ರು ಆಗಾಗ 'ವೈಶ್ವಾನರ'ರಾಗಿಯೂ ಅವತರಿಸುತ್ತಿದ್ದುದುಂಟು. ಶಾಸ್ತ್ರೀಯ ವಿಷಯ ಪ್ರತಿಪಾದನೆ, ಹೊಂದಿಕೆಯಾಗುವ ಹೋಲಿಕೆ, ತಿಳಿಹಾಸ್ಯದಿಂದ ಕೂಡಿದ ಮಾರ್ಮಿಕ ಮಾತು ಹಾಗೂ ಅರ್ಥಪುಷ್ಟಿಗಾಗಿ ಅಲ್ಲಲ್ಲಿ ಬರುವ ಸಂಸ್ಕೃತ-ಇಂಗ್ಲಿಷ್ ಉಕ್ತಿ, ಅವರ ಲೇಖನಗಳಿಗೆ ವಿಶಿಷ್ಟ ಮುದ್ರೆಯನ್ನು ಒತ್ತಿದೆ. ಸನ್ಮಿತ್ರನ ಪ್ರಯಾಣದ ಕೊನೆಯಲ್ಲಿ 'ಕೊನೆಯ ವಂದನೆ' ಸಲ್ಲಿಸುತ್ತ (೨-೮-೭೨) ಗೌರೀಶರು ಬರೆದರು. 'ಜನಸೇವಕವು ನನ್ನ ಸಾಹಿತ್ಯಿಕ ಪ್ರಜ್ಞೆಗೆ ನಿಜವಾದ ಜನಸೇವೆಯನ್ನು ಕಲ್ಪಿಸಿತು, ನನ್ನ ಲೆಕ್ಕಣಿಕೆಯನ್ನೂ ಒಕ್ಕಣಿಕೆಯನ್ನೂ ಜನಸೇವೆಗೆ ಪಳಗಿಸಿತು".

ಶ್ರೀ ಯಶವಂತ ಚಿತ್ತಾಲರ 'ಆಬೋಲೀನ್' ಹಾಗೂ ಶ್ರೀ ಆನಂದ ವರ್ಟಿಯವರ 'ಸಂಶೋಧಕರ ಸವಿಗತೆಗಳು' ಧಾರಾವಾಹಿಯಾಗಿ ಮೊದಲು ಬೆಳಕು ಕಂಡಿದ್ದು 'ಜನಸೇವಕ'ದಲ್ಲಿಯೆ. ಶ್ರೀ ಗಂಗಾಧರ ಚಿತ್ತಾಲರ 'ವಿದೇಶ ಪ್ರವಾಸದ ಅನುಭವ', ಪ್ರೊ. ವಿ. ಕೃ. ಗೋಕಾಕ ಅವರ 'ಬೆಲ್ಜಿಯಂ ಯಾತ್ರೆಯ ಫಲಶ್ರುತಿ', ಶ್ರೀ ವಿ. ಜೆ. ನಾಯಕರ 'ನಾಟ್ಯ ಶಿಕ್ಷಣ', 'ಗ್ರಾಮ ಸ್ವರಾಜ್ಯ ಕುರಿತ ಲೇಖನ ಮಾಲೆ', ಸ್ವರಾಜ್ಯ ಕುರಿತ ಲೇಖನ ಮಾಲೆ', ಶ್ರೀ ವಿ. ರಾಮನ್'ರ 'ಶೈಕ್ಷಣಿಕ ಸಮಸ್ಯೆಗಳ ವಿಶ್ಲೇಷಣೆ' ಹಾಗೂ ಶ್ರೀ ವಾಂ. ದಾ. ಶಹಾಣೆಯವರ 'ಸಾನೆ ಗುರೂಜಿ ಸಾಹಿತ್ಯ' - ಇಲ್ಲಿ ರಮ್ಯವಾಗಿ ಮೂಡಿವೆ. ಉದಯೋನ್ಮುಖ ಲೇಖಕರಿಗೆ ಕೂಡ 'ಜನಸೇವಕ' ಸಹಾಯ ಹಸ್ತ ನೀಡಿತು. ಸರ್ವಶ್ರೀ ಶ್ರೀನಿವಾಸ ಹಾವನೂರ, ಅರವಿಂದ ನಾಡಕರ್ಣಿ, ಜಿ.ವಿ. ಕುಲಕರ್ಣಿ(ಜೀವಿ) ದಯಾನಂದ ತೊರ್ಕೆ, ಗೋಪಾಲಕೃಷ್ಣ ಹೆಗಡೆ, ಜಿ. ಎಸ್. ಅಸ್ನದಾನಿ, ಶ್ಯಾಮ ಹುದ್ದಾರ, ವಿಠ್ಠಲ ಶಹಾಣೆ, ನಾರಾಯಣ ಕಾಗಲ, ಜಿ. ಎಸ್. ಅವಧಾನಿ ಹಾಗೂ ಕುಸುಮಾ ಕೇಣಿಕರ - ಇವರ ಅನೇಕ ಪ್ರಾರಂಭಿಕ ಕೃತಿಗಳನ್ನು 'ಜನಸೇವಕ' ಪ್ರಕಟಿಸಿ ಪ್ರೋತ್ಸಾಹಿಸಿದೆ. ಪ್ರತಿ ವರುಷ ಜನವರಿ ೨೬ಕ್ಕೆ ಪ್ರಕಟವಾಗುತ್ತಿದ್ದ ಪತ್ರಿಕೆಯ ಪ್ರಜಾರಾಜ್ಯ ವಿಶೇಷ ಸಂಚಿಕೆ ವೈಚಾರಿಕ ಮೇಜವಾನಿ ನೀಡುತ್ತಿತ್ತು. ಸರ್ವಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ, ಶಂ. ಬಾ. ಜೋಶಿ, ಶಿವರಾಮ ಕಾರಂತ, ಶಾಂತಿನಾಥ ದೇಸಾಯಿ, ಬಿ. ಎಚ್. ಶ್ರೀಧರ, ಸೇವ ನಮಿರಾಜ ಮಲ್ಲ - ಇಂತಹ ನಾಮಾಂಕಿತರ ವೈಚಾರಿಕ ಲೇಖನಗಳನ್ನು ಇದು ಹೊಂದಿರುತ್ತಿತ್ತು. ಊಟಕ್ಕೆ ಉಪ್ಪಿನಕಾಯಿ ಇರುವಂತೆ ಶ್ರೀ ದಿನಕರರ ಚುಟುಕ ಪಟಾಕಿಗಳು ಪುಟ ಪುಟಗಳಲ್ಲಿ ಹಾರಿರುತ್ತಿದ್ದವು.

ಶ್ರೀ ಅಮ್ಮೆಂಬಳ ಆನಂದ ಅವರು ಪತ್ರಿಕೆಯ ಪ್ರಾರಂಭದಿಂದಲೂ ಅದರ ಸಂಪಾದಕರಾಗಿ ಅದರ ಏಳುಬೀಳುಗಳಲ್ಲಿ ಪಾಲುಗೊಂಡರು. ಸಮಾಜವಾದಿ ದೃಷ್ಟಿಕೋನ ಇವರ ಬರವಣಿಗೆಯಲ್ಲಿಯ ಎದ್ದು ಕಾಣುವ ಅಂಶವಾಗಿದೆ. 'ಸ್ವರಾಜ್ಯ' 'ಜನತಾ' 'ಸಾಧನಾ' - ಪತ್ರಿಕೆಗಳಿಂದ ಲೇಖನಗಳನ್ನು ಆಯ್ದು ಪ್ರಕಟಿಸುವಲ್ಲಿಯೂ ಇವರು ಸದಭಿರುಚಿಯನ್ನು ತೋರ್ಪಡಿಸಿದರು. ಇವರೊಡನೆ ಶ್ರೀ ಶ್ಯಾಮ ಹುದ್ದಾರ, ಶ್ರೀ ರಾಮಕೃಷ್ಣ ಎ. ಪೈ, ಶ್ರೀ ಹರಿಶ್ಚಂದ್ರ ನಾಯ್ಕ, ಶ್ರೀ ಸುಕ್ರು ಗೌಡ ಹಾಗೂ ಶ್ರೀ ಸಣ್ಣತಮ್ಮ ಶ್ರೀ ಎಂ.ಎ. ನಾಯ್ಕ - ಇವರು 'ಜನಸೇವಕ'ದ ಬದುಕಿನಲ್ಲಿ ಬೆರೆತುಕೊಂಡಿದ್ದರು.

## ಲೋಕಸತ್ತೆಯ ಕಾವಲುಗಾರ

ಜನಜಾಗೃತಿ ಹಾಗೂ ನಾಡಿನ ಅಭ್ಯುದಯಗಳು 'ಜನಸೇವಕ' ಕಣ್ಣು ಮುಂದಿರಿಸಿಕೊಂಡ ಉನ್ನತ ಧ್ಯೇಯಗಳಾಗಿದ್ದವು. ಪತ್ರಿಕೆಯದು ಲಾಭದ ದೃಷ್ಟಿಯಲ್ಲ; ಸೇವಾದೃಷ್ಟಿ. ರಾಜಕೀಯ ಭ್ರಷ್ಟಾಚಾರ, ಸಂಪನ್ಮೂಲಗಳ ಅಪವ್ಯಯ, ದೇ. ಭ. ರ ವೈಯಕ್ತಿಕ ಹಿತಾಸಕ್ತಿ, ಪಕ್ಷಾಂತರ ಪಿಡುಗು - ಇಂಥವರನ್ನು 'ಜನಸೇವಕ' ಯಾವತ್ತೂ ಉರಿಗಣ್ಣಿನಿಂದ ನೋಡಿದೆ. ಆಳುವ ಪಕ್ಷಕ್ಕೆ ಎದುರಾಗಿ

ಪ್ರಬಲ ಪ್ರತಿಪಕ್ಷ ತಲೆಯೆತ್ತಿ ನಿಲ್ಲದೆ, ಲೋಕಸತ್ತೆಯ ಯಶಸ್ವಿ ಕಾರ್ಯನಿರ್ವಹಣೆ ಅಸಾಧ್ಯ ಎಂದು ಇವರ ನಂಬಿಕೆ. ಸದಭಿರುಚಿಯ ಜನಾಭಿಪ್ರಾಯ ರೂಪಿಸಲು ಇದು ಬಹಳಷ್ಟು ಹೆಣಗಿತು. ಲೋಕ ಶಿಕ್ಷಣವೇ ಇದರ ಗುರಿಯಾಗಿತ್ತು. ಜಾಗೃತ ಉತ್ತರ ಕನ್ನಡ ಜಿಲ್ಲೆಗೆ ಗೊತ್ತು, ತನ್ನ ಜಾಗೃತಿಯಲ್ಲಿ ಸಿಂಹಪಾಲು 'ಜನಸೇವಕ'ಕ್ಕೆ ಸಲ್ಲುತ್ತದೆಂದು.

ರಾಷ್ಟ್ರೀಯ ಪ್ರಜ್ಞೆ 'ಜನಸೇವಕ'ದ ಜೀವನಾಡಿಯಾಗಿತ್ತು. ಗೋವೆಯ ವಿಮೋಚನೆ, ನಮ್ಮ ರಾಷ್ಟ್ರೀಯ ಭಾವೈಕ್ಯ, ಸಾನೆ ಗುರೂಜಿಯವರ ಅಂತರ್ ಭಾರತಿ, ವಿನೋಬಾಜಿ ಭೂದಾನ, ಗಾಂಧೀಜಿ ಕನಸಿನ ಗ್ರಾಮರಾಜ್ಯ – ಇಂಥ ವಿಷಯಗಳನ್ನು ಇದು ಯಾವಾಗಲೂ ವ್ಯಾವಹಾರಿಕ ದೃಷ್ಟಿಯಿಂದ ವಿಶ್ಲೇಷಿಸಿದೆ. ಜಿಲ್ಲಾ ಪತ್ರಿಕೆಯಾಗಿಯೂ ರಾಷ್ಟ್ರೀಯ ದೃಷ್ಟಿಕೋನವನ್ನು ರೂಢಿಸಿಕೊಂಡದ್ದು ಇದರ ವೈಶಿಷ್ಟ್ಯ. ದಶಕಗಳ ಹಿಂದೆ ಶ್ರೀ ದಿನಕರ ದೇಸಾಯಿಯವರು ಕೈಕೊಂಡ 'ಉಳುವವನೇ ಹೊಲದ ಒಡೆಯನಾಗಬೇಕು' – ಎಂಬ ಹೋರಾಟಕ್ಕೆ 'ಜನಸೇವಕ' ಮುಖಪತ್ರವಾಯಿತು. ಉತ್ತರ ಕನ್ನಡದ ಹಿತಾಸಕ್ತಿಗಳ ರಕ್ಷಣೆಗೆ ಇದು ಸದಾ ಅಜ್ಞಗಾವಲಾಗಿತ್ತು. ಕಾರವಾರವನ್ನು ಸರ್ವಋತು ಬಂದರವಾಗಿ ವಿಕಾಸಗೊಳಿಸುವುದು. ಕಾರವಾರ-ಹುಬ್ಬಳ್ಳಿ ರೈಲು ಮಾರ್ಗರಚನೆ, ಜಿಲ್ಲೆಯ ನದಿಗಳ ವಿದ್ಯುತ್ ವಿಕಾಸ ಹಾಗೂ ಉತ್ತರ ಕರ್ನಾಟಕದಲ್ಲಿ ಉದ್ಯೋಗಗಳ ಬೆಳವಣಿಗೆ – ಪರಸ್ಪರ ಪೂರಕವಾಗಿವೆಯೆಂದು ಇದು ಪ್ರತಿಪಾದಿಸಿತು. ಜೊತೆಗೆ ಮಲೆನಾಡಿನ ವಿಕಾಸಕ್ಕೆ ನಿರ್ದಿಷ್ಟ ಯೋಜನೆಯನ್ನು ರೂಪಿಸಿತು. ಈ ಜೀವಕ್ಕೆ ವಿಶ್ರಾಂತಿಯೇ ಇರಲಿಲ್ಲ. ಹಿಂದೆ ಗೇಣಿಯ ವಿರುದ್ಧ ಎತ್ತಿದ ಗದೆಯನ್ನು ಮುಂದೆ ಲೇವಿ ಬಕಾಸುರನ ಮೇಲೂ ಎತ್ತಲಾಯಿತು. 'ಜನಸೇವಕ'ದ ವಿಚಾರ ಪ್ರಣಾಳಿಕೆಯನ್ನು ಪ್ರಶ್ನಿಸುವವರಿಗೂ ಗೊತ್ತು, ಅದು ನಾಡುನುಡಿಗಳ ಕುರಿತು ಹೊಂದಿದ ಕಳಕಳಿ ಪ್ರಶ್ನಾತೀತವೆಂದು.

## ವ್ಯಥೆಯ ಕಥೆಗೆ ಕೊನೆ

ಕೆನರಾ ವೆಲ್‌ಫೇರ್ ಟ್ರಸ್ಟಿನ ಕಾರ್ಯದರ್ಶಿಗಳೂ ಪತ್ರಿಕೆಯ ಪ್ರಕಾಶಕರೂ ಆದ ಶ್ರೀ ದಯಾನಂದ ನಾಡಕರ್ಣಿಯವರು ಭಾರವಾದ ಹೃದಯದಿಂದ ಬರೆದರು (ಜ.ಸೇ. ೨೬-೭-೭೨) "ಆರಂಭದಿಂದ ಈ ವರೆಗೂ ಪತ್ರಿಕೆಯು ಪ್ರತಿ ವರುಷ ಸಾವಿರಾರು ರೂಪಾಯಿಗಳ ನಷ್ಟವನ್ನು ಸಹಿಸಿ ಪ್ರಕಟವಾಗುತ್ತಿತ್ತು. ಆರ್ಥಿಕ ಅಡಚಣೆ ಮೂಲಕ ಟ್ರಸ್ಟಿಗೆ ಇಂಥ ನಷ್ಟನನ್ನು ಸಹಿಸುವುದು ಸಾಧ್ಯವಿಲ್ಲದ್ದರಿಂದ 'ಜನಸೇವಕ'ದ ಪ್ರಕಾಶನವನ್ನು ಅನಿವಾರ್ಯವಾಗಿ ಕೈ ಬಿಡುವ ಪ್ರಸಂಗ ಬಂದಿದೆ". 'ಜನಸೇವಕ' ತನ್ನ ೧೮ನೆಯ ವರುಷದ ೩೧ನೆಯ ಸಂಚಿಕೆಯನ್ನು ೧೯೭೨ ಆಗಸ್ಟ ೨ ರಂದು ಪ್ರಕಟಿಸಿ. ೧೭ ಸಂಪುಟಗಳ ಹೊರೆಯನ್ನು ಹೊತ್ತುಕೊಂಡು ಕಾಲಗರ್ಭದಲ್ಲಿ ಕರಗಿ ಹೋಯಿತು. ಲೋಕಸತ್ತೆಯ ಈ ಅವಿಶ್ರಾಂತ ಕಾವಲುಗಾರ ಚಿರವಿಶ್ರಾಂತಿಗೆ ತೆರಳಿದ. ಅಖಂಡ ಕರ್ನಾಟಕದಲ್ಲಿ ಮೊಳಗುತ್ತಿದ್ದ ಉತ್ತರ ಕನ್ನಡದ ಎತ್ತರದ ಧ್ವನಿ ನಿಜಕ್ಕೂ ಕ್ಷೀಣವಾಯಿತು. ಜನತಾ ಶಿಕ್ಷಣದ ಒಂದು ಪ್ರಭಾವಿ ಮಾಧ್ಯಮ ಕಳಚಿ ಬಿದ್ದಿತು. 'ಜನಸೇವಕ' ಉಳಿಯಲಿಲ್ಲ ಅನ್ನುವುದಕ್ಕಿಂತ ಜನತೆ ಅದನ್ನು ಉಳಿಸಿಕೊಳ್ಳಲಿಲ್ಲ ಎನ್ನುವುದೆ ಹೆಚ್ಚು ಸುಸಂಗತವಾದದ್ದು. ಸೇವಕನಿಂದ ಸೇವೆ ಪಡೆಯುವ ಭಾಗ್ಯ ಜನಕ್ಕಿರಲಿಲ್ಲ. ಅಷ್ಟೇ?

ನ್ಯೂಸ್ ಪ್ರಿಂಟ್ ಕೊರತೆ, ಹೆಚ್ಚುತ್ತಿರುವ ಮುದ್ರಣ – ಸಿಬ್ಬಂದಿ ವೆಚ್ಚ, ಸಾರ್ವಜನಿಕರ ನಿರಾಶಾದಾಯಕ ಪ್ರೋತ್ಸಾಹ ಇವುಗಳಿಂದ 'ಜನಸೇವಕ' ಆರ್ಥಿಕ ಮುಗ್ಗಟ್ಟನ್ನು ಎದುರಿಸಿತು. ೧೯೬೮ರಲ್ಲಿ ಒಮ್ಮೆ ಮಾತ್ರ ಅದು ತನ್ನ ಆರ್ಥಿಕ ದುಃಸ್ಥಿತಿಯ ಚಿತ್ರವನ್ನು ಜನತೆಯ ಮುಂದಿಟ್ಟಿತು. ಆಗ ಪತ್ರಿಕೆಯ ಬಿಡಿ ಪ್ರತಿ ೧೨ ಪೈಸೆಗೆ ಮಾರಾಟವಾಗುತ್ತಿದ್ದರೆ, ಅದಕ್ಕಾಗುತ್ತಿದ್ದ ವೆಚ್ಚ ಕೇವಲ ೨೬ ಪೈಸೆ! ಪತ್ರಿಕಾ ಪ್ರಕಾಶನವೂ ಜನತಾ ಶಿಕ್ಷಣದ ಒಂದು ಮಾಧ್ಯಮ ಎಂದು ನಂಬಿದ ಟ್ರಸ್ಟ್ ಈ ಹಾಲಾಹಲವನ್ನು ಹಲವು ವರುಷ ನಗುತ್ತ ನುಂಗಿಕೊಂಡಿತು. ವರುಷಗಳು ಉರುಳಿದಂತೆ ದುಸ್ಥಿತಿ ಉಲ್ಬಣಗೊಂಡಾಗ ಟ್ರಸ್ಟು ಕೆರಳಿತು. ಸಾರ್ವಜನಿಕರಿಂದ ಸಂಗ್ರಹಿಸಿದ ನಿಧಿಯನ್ನು ಪ್ರತಿಯೊಂದರ ಪೋಷಣೆಗೆ ವಿನಿಯೋಗಿಸುವುದರಲ್ಲಿ ಯಾವ ಪುರುಷಾರ್ಥವಿದೆ?

ತನ್ನ ಪ್ರಸಾರಕ್ಕಿಂತ ಹೆಚ್ಚಿನ ಪ್ರಭಾವವನ್ನು ಹೊಂದಿದ 'ಜನಸೇವಕ' ತೆರೆಯ ಮರೆಗೆ ಸರಿದುದು ಕೆಲ ವರುಷಗಳ ಹಿಂದೆ ಅಪಮೃತ್ಯುವಿಗೀಡಾದ ರಾ. ಶಿ.ಯವರ 'ಕೊರವಂಜಿ'ಯ ನೆನಪನ್ನು ತರುತ್ತಿದೆ. ಕಾಲಗರ್ಭದಲ್ಲಿ ಇನ್ನೂ ಹಿಂದಕ್ಕೆ ಇಣುಕಿ ನೋಡಿದರೆ ಮಹಾತ್ಮಾ ಗಾಂಧೀಜಿಯವರ 'ಹರಿಜನ' ಪತ್ರಿಕೆ ಸಹ ಅಕಾಲ ಮರಣಕ್ಕೆ ತುತ್ತಾದುದನ್ನು ಕಾಣಬಹುದು. ಅದಕ್ಕೂ ಹಿಂದೆ ದಾದಾಭಾಯಿ ನವರೋಜಿಯವರ 'ಭಾರತವಾಣಿ' ಆರ್ಥಿಕ ಕಾರಣಕ್ಕಾಗಿ ನಿಂತುಹೋದ ಸತ್ಯ ಗೋಚರಿಸುತ್ತದೆ!

ಜಿಲ್ಲಾಮಟ್ಟದ ಪತ್ರಿಕೆಯಾಗಿ ಸೀಮಿತ ಪ್ರಸಾರವನ್ನು ಹೊಂದಿದ್ದರೂ ತನ್ನ ಜೀವಮಾನದಲ್ಲಿ 'ಜನಸೇವಕ' ಗಾಢವಾದ ಪ್ರಭಾವ ಬೀರಿತು. ಅಂತೆಯೆ ಅದು ಕೊನೆಯುಸಿರು ಎಳೆದಾಗ ಬಿಜಾಪುರದಿಂದ ಬೆಂಗಳೂರಿನವರೆಗೆ ಪ್ರತಿಕ್ರಿಯೆಯ ಅಲೆಗಳು ಅಪ್ಪಳಿಸಿದವು. ವಿಷಾದ ಯೋಗ ಎಲ್ಲೆಲ್ಲೂ ಪಸರಿಸಿತು. 'ಸತ್ತ ಎಮ್ಮೆಗೆ ಸೇರು ತುಪ್ಪ' – ನಮ್ಮೀ ಜನಕ್ಕೆ ಅನ್ವರ್ಥಕ. ಆದರೆ ಈ ವರೆಗೆ ಸತ್ತ ಯಾವ 'ಎಮ್ಮೆ'ಗೂ ಇಂಥ ಗೌರವ ಸಂದಿಲ್ಲ ಎಂಬುದನ್ನಿಲ್ಲಿ ನೆನೆಯಬೇಕು. ಕರ್ನಾಟಕ ಏಕೀಕರಣವಾಯಿತು, ನಾಡಿನ ಹೆಸರೂ ಕರ್ನಾಟಕವೆಂದಾಯಿತು, ಆಡಳಿತ ಮಾಧ್ಯಮ ಕನ್ನಡವಾಗುತ್ತಾ ಇದೆ. ಅರಣ್ಯ – ಭೂಧೋರಣೆಗಳಲ್ಲಿ ಆಮೂಲಾಗ್ರ ಬದಲಾವಣೆಗಳು ಆಗುತ್ತಿವೆ. ಹಾಂ, ತನ್ನ ಅಖಂಡ ಹೋರಾಟದ ಫಲಶ್ರುತಿಯನ್ನು ನೋಡಿ ನಲಿಯಬೇಕಾದ, ಅಲ್ಲ, ಅದಮ್ಯ ಉತ್ಸಾಹದಿಂದ ಹೊಸ ಹೋರಾಟಗಳನ್ನು ಕೈಗೆತ್ತಿಕೊಳ್ಳಬೇಕಾದ 'ಜನಸೇವಕ' ಈ ಸಂಧಿಕಾಲದಲ್ಲಿ ನಮ್ಮಿಂದ ನಿರ್ಗಮಿಸಿತಲ್ಲ' ಎಂದು ಖೇದ.

◆

# (೩) ಸಂಪಾದಕರ ಬರಹದ ಮಾದರಿಗಳು

## ೨೧. ಶೋಧಕ

### (ಡಿಸೆಂಬರ್ ೧೮೭೫ರ ಸಂಪಾದಕೀಯ)

ಕೊಲ್ಹಾಪುರ, ಬೀದರ, ನೀಲಗಿರಿ, ಪಶ್ಚಿಮ, ಸಮುದ್ರ ಈ ನಾಲ್ಕು ಮರ್ಯಾದೆಗಳ ಮಧ್ಯದಲ್ಲಿ ವಿಸ್ತಾರವಾಗಿ ಹಬ್ಬಿದ ಶೀಮೆಯು ಕರ್ನಾಟಕವೆಂದೆನಿಸಿಕೊಳ್ಳುತ್ತದೆ. ಈ ದೇಶದ ಕ್ಷೇತ್ರಫಲವು ಸು. ೬೬೦೦ ಚೌಕು ಮೈಲು. ಜನಸಂಖ್ಯೆ ೨೨ ಲಕ್ಷ. ಆದರೆ ನಮ್ಮ ನೆರೆಯಲ್ಲಿದ್ದ ಮಹಾರಾಷ್ಟ್ರ ದೇಶವು ಇದಕ್ಕೂ ಚಿಕ್ಕದಿದ್ದಾಗ್ಯೂ ಇವೆರಡು ದೇಶಗಳ ಈಗಿನ ಸ್ಥಿತಿಗತಿಗಳನ್ನು ಸರಿ ನೋಡಲಾಗಿ ಅತಿ ಖೇದಕರವಾದ ವ್ಯತ್ಯಾಸವು ಕಂಡುಬರುತ್ತದೆ. ಮಹಾರಾಷ್ಟ್ರದಲ್ಲಿ ನಾಲ್ಕೈದು ಕಾಲೇಜುಗಳೂ ಬಹುಶಃ ಪ್ರತಿ ಜಿಲ್ಲೆಗೊಂದರಂತೆ ಹಾಯ್‌ಸ್ಕೂಲುಗಳೂ ೨೦೦೦ಕ್ಕಿಂತ ಹೆಚ್ಚು ಇತರ ಶಾಲೆಗಳೂ ಇರುತ್ತವೆ. ಕರ್ನಾಟಕದಲ್ಲಿ ಕಾಲೇಜವೆಂಬ ಹೆಸರೇ ಗೊತ್ತಿಲ್ಲ ಹಾಯ್‌ಸ್ಕೂಲುಗಳು (ಮೈಸೂರು ಮಹಾರಾಷ್ಟ್ರಗಳಿಗೆ ಶೇರಿದ ಭಾಗಗಳು ಸಹಿತ) ಐದಾರಕ್ಕಿಂತ ಹೆಚ್ಚಿಲ್ಲ. ಇತರ (ಪ್ರಾಥಮಿಕ) ಶಾಲೆಗಳು ಎಲ್ಲ ಕೂಡಿ ಆರೇಳು ನೂರರೊಳಗೇ.

ಮಹಾರಾಷ್ಟ್ರದಲ್ಲಿ ೩೦ಕ್ಕಿಂತ ಹೆಚ್ಚು ವರ್ತಮಾನ ಪತ್ರಗಳೂ ಸುಮಾರು ೨೦ ಮಾಸಿಕ ಪುಸ್ತಕಗಳೂ ಸಧ್ಯಕ್ಕೆ ನಡಿಯುತ್ತವೆ. ಕರ್ನಾಟಕ ಭಾಷೆಯಲ್ಲಿ ಯರಡಕ್ಕಿಂತ ಹೆಚ್ಚು ವರ್ತಮಾನ ಪತ್ರಗಳಿಲ್ಲ. ಅವೂ ಬೆಂಗಳೂರು ಶೀಮೆಯ ಹೊರಗೆ ಯಾರಿಗೂ ಗೊತ್ತಿಲ್ಲ. ಮಾಸಿಕ ಪುಸ್ತಕವು ಇರುತ್ತದೆಂದು ಆಣೆ ಮಾಡಲಿಕ್ಕೆ ಮಾತ್ರ ಒಂದುಂಟು. ಅದೂ ಹುಟ್ಟಿ ಒಂದು ವರ್ಷವೂ ಇನ್ನೂ ಪೂರ್ಣವಾಗಿರುವುದಿಲ್ಲ. ಈ ಮುಂತಾದ ಸಂಗತಿಗಳಿಂದ ಈ ಎರಡು ದೇಶವಾಸಿಗಳ ಸಾಂಪ್ರತಾ ಸ್ಥಿತಿಯಲ್ಲಿ ತೋರಿ ಬರುವ ಮಹದಂತರವ ನೋಡಿ ಕೆಲ ಜನರು ಕರ್ನಾಟಕರು ಬಹು ಖೇದಪಡುವುದಕ್ಕೂ ಮಹಾರಾಷ್ಟ್ರರು ಹೆಮ್ಮೆಯಿಂದ ಅವರನ್ನು ಧಿಕ್ಕರಿಸುವುದನ್ನೂ ನಾವು ಆಗಾಗ್ಗೆ ನೋಡುತ್ತೇವೆ...

ಇದರಿಂದ ಕರ್ನಾಟಕರು ಮಂದಮತಿಗಳೆಂಬುದಾಗಿ ಸಿದ್ಧವಾಗಲರಿಯದು. ಈಗ ನಮ್ಮನ್ನು ಆಳುವ ಅರಸರೇ ನಮ್ಮೆಲ್ಲರಿಗೆ ಸ್ವದೇಶದ ವಿದ್ಯೆಗಳನ್ನು ಕಲಿಸುತ್ತಾರೆ. ಅವರ ರಾಜಧಾನಿಗಳಲ್ಲಿ ಒಂದಾದ ಮುಂಬಯಿ ಪಟ್ಟಣವು ಮಹಾರಾಷ್ಟ್ರ ದೇಶದ ಮಧ್ಯ ದಂಡೆಯಲ್ಲಿರುತ್ತದೆ. ಆ ಪ್ರದೇಶವೆಲ್ಲ ಅದೊಂದೇ ರಾಜಧಾನಿಗೆ ಸೇರಿರುತ್ತದೆ. ಆದರೆ ಕರ್ನಾಟಕಕ್ಕೆ ಈ ಲಾಭಗಳಿಲ್ಲ. ಇಂಗ್ಲಿಷ ಸರಕಾರಕ್ಕೂ ನಿಜಾಮ ಸರಕಾರಕ್ಕೂ ಸೇರಿದ ಭಾಗಗಳು ಅವರವರ ರಾಜಧಾನಿಗಳಿಂದ ದೂರವಾಗಿರುತ್ತವೆ. ಮೈಸೂರು ಶೀಮೆಯಲ್ಲಿ ಇಂಗ್ಲಿಷ್ ಅಧಿಕಾರಿಗಳೇ ಕೆಲಸ ನಡಿಸುತ್ತಿದ್ದಾಗ್ಯೂ ಅದು ಸ್ವದೇಶೀ ಅರಸನ ಸಂಸ್ಥಾನವೆನಿಸಿಕೊಳ್ಳುತ್ತದೆ. ಈ ಕಾರಣಗಳಿಂದ ಕರ್ನಾಟಕದಲ್ಲಿ ಇಂಗ್ಲಿಷ್ ವಿದ್ಯದ ಪ್ರಸಾರವು ಕಡಿಮೆಯಾಗಿರುವುದು ಸ್ವಾಭಾವಿಕವೇ. ಈ ನ್ಯೂನತೆಯಲ್ಲಿ ಸಹ ಕರ್ನಾಟಕರು ಸಂತೋಷಪಡತಕ್ಕಂಥಾದ್ದೊಂದು ಸಂಗತಿಯೇನೆಂದರೆ ಅವರಲ್ಲಿ ಇಂಗ್ಲೀಷ ವಿದ್ಯದ ಪ್ರಸಾರವು ಕಡಿಮೆಯಾಗಿದ್ದ ಪ್ರಮಾಣದಂತೆಯೇ ಇಂಗ್ಲಿಷರ ದುರ್ವ್ಯಸನೆಗಳೂ ದುರಾಚಾರಗಳೂ ಕಡಿಮೆಯಾಗಿರುತ್ತವೆ. ಆದರೆ ಸ್ವದೇಶದ ವಿದ್ಯೆಬುದ್ಧಿಗಳಲ್ಲಿ ಮಹಾರಾಷ್ಟ್ರರನ್ನೂ, ಕರ್ನಾಟಕರನ್ನೂ ಎದುರು ಬದುರು ಕುಳ್ಳಿರಿಸಿ ವಿಚಾರಿಸಲಾಗಿ ಕರ್ನಾಟಕದ ಗೌರವವು ಕಂಡುಬರುತ್ತದೆ.

...ಶ್ರೀ ಮಚ್ಛಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ವಿದ್ಯಾಭಟ್ಟಾಚಾರ್ಯರು, ಬೋಪದೇವ ಇತ್ಯಾದಿ ಮಹಾಮಹಾ ಪ್ರತಾಪಿಗಳೆಂದೆನಿಸಿಕೊಂಡ ಅನಿರ್ವಾಚ್ಯ ವಿದ್ವಾಂಸರು ಈ ಕರ್ನಾಟಕದಲ್ಲಿಯೇ ಹುಟ್ಟಿ ಬೆಳೆದರು. ಮಹಾರಾಷ್ಟ್ರದಲ್ಲಿ ಇವರ ಅರ್ಧದಷ್ಟು ಜನ ಬಹುತರವಾಗಿ ಯಾರೂ ಅಲ್ಲೆಂದು ಹೇಳಬಹುದು... ಪ್ರಕೃತಕ್ಕೆ ಸಹ ನ್ಯಾಯ, ವ್ಯಾಕರಣ, ವೇದಾಂತ, ಜ್ಯೋತಿಷ್ಯ ಧರ್ಮಶಾಸ್ತ್ರ ಮುಂತಾದ ಶಾಸ್ತ್ರಗಳಲ್ಲಿ ಪಾರಂಗತರಾದ ಜನರು ಕರ್ನಾಟಕದಲ್ಲಿ ಹೊರಟಷ್ಟರ ಚತುರ್ಥಾಂತ ಜನರು ಸಹ ಮಹಾರಾಷ್ಟ್ರದಲ್ಲಿ ಹೊರಡರೆಂದು ಶೋಧಕರಿಗೆ ತಿಳಿದು ಬರುವುದೆಂಬುದಕ್ಕೆ ಸಂದೇಹವಿಲ್ಲ. ಮೈಸೂರು, ಉಡುಪಿ.

**ಶೋಧಕ**

ಈ ಪುಸ್ತಕದಲ್ಲಿ ಇತಿಹಾಸಶಾಸ್ತ್ರ ಕಲಾಕೌಶಲ್ಯಾದಿ ವ್ಯವಹಾರೋಪಯುಕ್ತ ವಿಷಯಗಳು ಸಂಗ್ರಹಿಸಲ್ಪಡುವವು. ಸ್ವದೇಶದ ವಿದ್ಯಾರ್ಥಿಗಳಿಗೆ ವಿಶೇಷ ಲಕ್ಷ್ಯವು ಕೊಡಲ್ಪಡುವದು. ಇಂಥಾ ವಿಷಯಗಳನ್ನು ಯಾರಾದರೂ ಬರೆದು ಕಳುಹಿಸಿದರೆ ಸಂತೋಷದಿಂದ ಅವುಗಳನ್ನು ಸ್ವೀಕರಿಸುವೆವು.

ಶೃಂಗೇರಿ, ಸ್ಸಾದಿ, ಮಂತ್ರಾಲಯ, ಮುಳಬಾಗಲು, ಮುಧೋಳ, ಗಲಗಲಿ, ಖೇಡ ಮುಂತಾದ ಸ್ಥಳಗಳು ಈಗ್ಯೂ ವಿದ್ಯಾಪೀಠಗಳೆಂದೆನಿಸಿಕೊಳ್ಳುತ್ತವೆ.

ಆದ್ದರಿಂದ ದೇಶ, ಕಾಲ, ವರ್ತಮಾನಗಳಿಗನುಸಾರವಾಗಿ ಕರ್ನಾಟಕದ ಈಗಿನ ಸ್ಥಿತಿಯು ಇದರದಕ್ಕಿಂತ ಹೆಚ್ಚು ಇರುತ್ತದೆಂಬುದು ಸ್ಪಷ್ಟವಿದೆ ಮತ್ತು ಈ ದೇಶದ ನಿವಾಸಿಗಳು ಸಾಂಪ್ರತದ ನೂತನ ವಿದ್ಯಾ ಕಲಾ ಕೌಶಲ್ಯಾದಿಗಳಲ್ಲಿ ಮೆಲ್ಲಮೆಲ್ಲಗೆ ಸ್ಥಿರವಾದ ಪ್ರವೀಣತೆಯನ್ನು ಪಡೆಯುತ್ತ ಸಾಗಿ ಬುನಾದಿಯಿಂದ ನಡೆದು ಬಂದ ತಮ್ಮ ಗೌರವವನ್ನು ಇದರಲ್ಲಿ ಸಹ ತಕ್ಕ ಕಾಲದಲ್ಲಿ ಪ್ರಕಟಿಸುವರೆಂದು ನಾವು ತುಂಬ ಆಶಾಬದ್ಧರಾಗಿ ಎದುರು ನೋಡುತ್ತೇವೆ. ◆

ವೆಂಕಟ ರಂಗೋ ಕಟ್ಟಿ

## ೨೨. THE LAW RECORDER
### *A monthly Publication*
### 'ನ್ಯಾಯಾಧಿಕರಣ'

[vol. 1 JANUARY 1877 No. 1 * ಪುಸ್ತಕ ೧ ಜನವರಿ ೧೮೭೭ ಅಂಕೆ ೧]

### ಪ್ರಸ್ತಾವನೆ

ವಾಚಕರಿಗೆ ಶುಭಮಸ್ತು! ನಾವು 'ನ್ಯಾಯಾಧಿಕರಣ' ಎಂಬ ಈ ನಾಮಧೇಯವನ್ನು ಧರಿಸಿಕೊಂಡು, ಪ್ರಕಟವಾದದ್ದು ಚೋದ್ಯವಾಗಿ ತೋರೀತು. ಯಾಕಂದರೆ ಈ ಊರಲ್ಲಿ ವರ್ತಮಾನ ಪತ್ರಗಳಾಗಲಿ ನ್ಯಾಯಪತ್ರಗಳಾಗಲಿ ದೀರ್ಘಾಯುಷ್ಯ ಬಾಳುವದಿಲ್ಲಾ : "ಕನ್ನಡ ವಾರ್ತಿಕ"ವಾಯಿತು, "ವಿಚಿತ್ರವರ್ತಮಾನ ಸಂಗ್ರಹ"ವಾಯಿತು, "ನ್ಯಾಯಸಂಗ್ರಹ"ವಾಯಿತು, "ಸುಬೋಧಿನೀ" ಆಯಿತು; ಇವೆಲ್ಲಾ ಬಾಲ್ಯಪ್ರಾಯದಲ್ಲೇ ತೀರಿಹೋದವು; ಒಂದು ಪ್ರಶಸ್ತವಾದ ಪತ್ರವನ್ನು ದೀರ್ಘಕಾಲ ನಡಿಸುವ ಯೋಗ್ಯತೆ ಈ ಊರಿಗೆ ಇನ್ನೂ ಬರಲಿಲ್ಲ ಎಂತ ಹೇಳುವಿರಿ. ಆದರೂ ಈ ಊರಲ್ಲಿ ಒಂದು ಪತ್ರವಿರಬೇಕೆಂಬ ಆಶೆ ಪದೇಪದೇ ಹುಟ್ಟುತ್ತಿರುತ್ತದೆ ಎಂಬುದೂ, ಒಂದು ಪತ್ರವಿಲ್ಲದಿರುವದು ಈ ಊರಿಗೆ ಮಾತ್ರವಲ್ಲ ಕನ್ನಡ ಭಾಷೆಗೇ ಒಂದು ಕುಂದು ಎಂಬದೂ ಹಿಂದಿನ ಅನುಭವದಿಂದಲೂ ಪ್ರಕೃತ ಸ್ಥಿತಿಯಿಂದಲೂ ಸಿದ್ಧಾಂತವಾಗುತ್ತದೆ. ವಿದ್ಯೆಯು ದಿವಸದಿಂದ ದಿವಸಕ್ಕೆ ವಿಕಾಸವಾಗುತ್ತಾ, ವಿದ್ಯಾರತ್ನಗಳು ನಮ್ಮ ಯೌವನಸ್ಥರಲ್ಲಿ ಮಿಂಚುತ್ತಾ ಬರುತ್ತವೆ. ಹೀಗಿರುತ್ತಾ ವಿದ್ಯೆಯ ಪ್ರವರ್ತನೆಗೆ ಅನುಕೂಲವಾಗಿ ಪತ್ರಕರ್ತನು ಸಹ ತಲೆಯೆತ್ತಿ, ವಿದ್ಯಾವಲಂಬನೆಯಲ್ಲಿ ಕೈ ನೀಡುವದು ಉಚಿತವಲ್ಲವೇ? ಹಿಂದೆ ನೋಡಿ, ಸಮಯ ಇನ್ನೂ ಬರಲಿಲ್ಲ ಅಂದರೆ ಆದೀತೆ? ಜನರ ಅವಶ್ಯಕತೆಗೆ ಸರ್ವಥಾ ಕಣ್ಣು ಮುಚ್ಚಿರಬಾರದು. ಜನೋಪಕಾರಾರ್ಥವಾಗಿ ಛಲ ಹಿಡಿದು, "ಸಾಧನ ಮಾಡಿದರೆ, ಗಗನವಾದರೂ ಕೈಗಳವಹುದು."

ಮನುಷ್ಯರು ಸ್ವಭಾವದಿಂದ ಸಹವಾಸಪ್ರಿಯರಾಗಿರುತ್ತಾರೆ. ಪಟ್ಟಣ, ಸಂಘ ಮುಂತಾದವುಗಳು ಇದರ ಫಲವಾಗಿರುತ್ತವೆ. ಅನ್ಯೋನ್ಯ ಸಹವಾಸದ ಬಾಹುಲ್ಯದಿಂದ ವಿವೇಕವಾಗಲೀ ಐಕಮತ್ಯವಾಗಲೀ ಅಗದೀ ಬಾಳುವುದಿಲ್ಲ. ಇವುಗಳ ಭಂಗದಿಂದ ವ್ಯಾಜ್ಯಗಳೂ ಕಲಹಗಳೂ ಅತಿಕ್ರಮಗಳೂ ದುರುಪಯೋಗಗಳೂ ಹೆಸರು ಹೊಂದುತ್ತವೆ. ಇವುಗಳನ್ನು ಅಭ್ಯಂತರಿಸಿ, ನ್ಯಾಯವನ್ನು ಸುಸೂತ್ರ ಪಡಿಸುವುದಕ್ಕಾಗಿ ಕಾಯಿದೆಗಳೂ, ಕಾನೂನು ಶಾಸ್ತ್ರಗಳೂ ಅವಶ್ಯವಾದವು. ಇವುಗಳನ್ನು ಏರ್ಪಡಿಸುವುದಕ್ಕೂ ವಿಧಾಯಿಸಲಿಕ್ಕೂ ಅಧಿಕಾರವುಳ್ಳ ನ್ಯಾಯಸ್ಥಾನಗಳು ಸ್ಥಾಪಿತವಾದವು. ಹೀಗಾಗಿ, ಊರಲ್ಲಿ ಅನ್ಯಾಯವೂ ಅತಿಕ್ರಮವೂ ಹ್ಯಾಗೆ ಹೆಚ್ಚುತ್ತಿರುತ್ತವೋ, ಕಾಯಿದೆ ಕಾನೂನುಗಳೂ ತದನುಸಾರವಾಗಿ ಹೆಚ್ಚುವದಾಯಿತು. ಈ ಪ್ರಕಾರ ಅನ್ಯಾಯವನ್ನು ಪ್ರತಿಕೂಲಿಸುವ ಬಗ್ಗೆಯೂ, ನ್ಯಾಯವನ್ನೂ ಸತ್ಯವನ್ನೂ ಕಾಪಾಡಿ ಜನರ ದೇಹ, ಆಸ್ತಿ, ಮಾನ ಮುಂತಾದ್ದನ್ನು ರಕ್ಷಿಸುವ ಬಗ್ಗೆಯೂ, ಸರಕಾರದವರು ಸ್ಥಾಪಿಸಿದ ಕಾಯಿದೆಗಳೂ ನಿಬಂಧನೆಗಳೂ ಏನೆಂತ ಪ್ರತಿ ಒಬ್ಬ ದೇಶವಾಸಿಯು ತಿಳಿದುಕೊಳ್ಳುವದು ಅತ್ಯಗತ್ಯವಾಗಿರುತ್ತದೆ. ಆಂಗ್ಲ ಭಾಷೆ ಅರಿತವರು ನ್ಯಾಯಸಮ್ಮಂಧವಾದ ಸಮಸ್ತ ವಿಷಯಗಳನ್ನು ಓದಿ ಪರಿಸುವ ಬಗ್ಗೆ ಸಾಕಾಗಿ ಯಥೇಷ್ಟ ಧರ್ಮಶಾಸ್ತ್ರ ಪುಸ್ತಕಗಳೂ, ಕಾಯಿದೆ ಕಾನೂನುಗಳೂ, ಕಾಯಿದಾಪತ್ರಿಕೆಗಳೂ ಇರುತ್ತವಷ್ಟೆ; ಆದರೂ, ಇಂಗ್ಲಿಷ ಭಾಷೆಯನ್ನರಿಯದ ಈ ನಮ್ಮ ಕನ್ನಡದ ದೇಶಸ್ಥರಿಗೆ ಅಂಥಾದ್ದೇನೂ ಇಲ್ಲವಾದ್ದರಿಂದ, ಅಂಥವರ ಪ್ರಯೋಜನಾರ್ಥವಾಗಿ ಈ ಪತ್ರವು ಉಪಕ್ರಮಿಸಲಾಯಿತು. ಸರಕಾರ ಕಾಯಿದೆಗಳೂ ನ್ಯಾಯವಿಧಾಯಕ ಕ್ರಮಗಳೂ ದಿವಸದಿಂದ ದಿವಸಕ್ಕೆ ವಿಸ್ತಾರವಾಗಿಯೂ ಬಾಹುಲ್ಯವಾಗಿಯೂ ಬರುತ್ತಾ ಅವೆ. ಇವುಗಳ ಅಜ್ಞಾನದಿಂದ ಎಷ್ಟೋ ಅನರ್ಥಗಳು ಸಂಭವಿಸುತ್ತವೆ. ಕಾಯಿದೆಗಳನ್ನು ಒಬ್ಬಪ್ಪಿಗನಾಗಿ ಗೊತ್ತು ಮಾಡಿಕೊಳ್ಳಲಿಕ್ಕೆ

ಎಷ್ಟೋ ಪ್ರಯಾಸ ಹಿಡಿಯುತ್ತದೆ. ವಾದಿಯಾಗಲೀ ಪ್ರತಿವಾದಿಯಾಗಲೀ, ಮುದ್ದಾಯಿ ಆಗಲೀ ಮುದ್ದಾಯಿ ಅಲೆ ಆಗಲೀ ತನ್ನ ಸಾಧನೆಗೆ ಸಮರ್ಪಕವಾಗಿ ಶಾಸ್ತ್ರಾಧಾರವಾಗಲೀ ವ್ಯವಹರಣೆ ಕ್ರಮವಾಗಲೀ ತಿಳಿಯದೆ ಇರುವುದರಿಂದ ಎಷ್ಟೋ ಅನ್ಯಾಯಕ್ಕೆ ಕಾರಣವಾಗುತ್ತದೆ. ಕಾಯಿದೆ ತಿಳಿಯದ್ದರಿಂದ ವ್ಯವಹರಣೆ ಕೆಟ್ಟು ಹೋಗುತ್ತದೆ. ವ್ಯವಹರಣೆಯ ದೋಷದಿಂದ ಸತ್ಯ ಭಿನ್ನವಾಗುತ್ತದೆ. ಹೀಗಾಗಗೂಡದ ಹಾಗೆ ಪ್ರಯತ್ನಿಸುವದು ಈ ಪತ್ರದ ಉದ್ದೇಶವಾಗಿರುತ್ತದೆ. ಕಕ್ಷಿಗಾರರು, ರಹಿತರು, ಇವರಿಗೆ ಮಾತ್ರವಲ್ಲ, ವಕೀಲರೂ ನ್ಯಾಯಾಧೀಶ ಸರಕಾರ ಉದ್ಯೋಗಸ್ಥರೂ ಇವರಿಗೂ ಪ್ರಯೋಜನಕರವಾಗಿ ನಾವು ಸೇವಿಸುವೆವು.

ಶಿವಿಲ ಮತ್ತು ಕ್ರಿಮಿನಲ್ ಸಮ್ಮಂಧವಾಗಿ "ಲಾ ರಿಪೋರ್ಟುಗಳಿಂದ" ಸಂಗ್ರಹಿಸಲ್ಪಟ್ಟ ತೀರ್ಪುಗಳನ್ನೂ ಹುಕುಮುಗಳನ್ನೂ ಇದರಲ್ಲಿ ಪ್ರಕಟಿಸುವೆವು. ರೇವನಿ ಬಾಬಿನಲ್ಲಿಯೂ ಏನಾದರೂ ವಿಶೇಷವಿದ್ದರೆ, ಅಂಥಾದ್ದನ್ನು ಸಹ ಆಗ್ಯಾಗ್ಯೆ ಕೊಡುವೆವು. ಒಟ್ಟಾರೆ ಈ ಪತ್ರಿಕೆಯಲ್ಲಿ ಬರತಕ್ಕ ವಿಷಯಗಳ್ಯಾವವಂದರೆ: ಯಾವದೊಂದು ನ್ಯಾಯವಿಷಯವನ್ನು ಕುರಿತು ೧ ಯಾ ೨ ನಿರೂಪಣಗಳು; ಶಿವಿಲ್ ಬಾಬಿನ ಪ್ರಶಸ್ತ ಫಯಿಸಲೆಗಳ ಸಾರಾಂಶಸಂಗ್ರಹ; ಕ್ರಿಮಿನಲ್ ಫಯಿಸಲೆಗಳ ಆ ಪ್ರಕಾರದ ಸಾರಾಂಶ ಸಂಗ್ರಹ; ಲೇಖಿನಪತ್ರಗಳು; ನ್ಯಾಯವಿಷಯ ವರ್ತಮಾನಗಳು. ಇದಲ್ಲದೆ ಹೈಕೋರ್ಟು ಮುಂತಾದ ಪ್ರಧಾನ ನ್ಯಾಯಸ್ಥಾನಗಳಲ್ಲಿ ಆಗ್ಯಾಗ್ಯ ನ್ಯಾಯವಿಷಯ ಏನೇನು ನಡೆಯುತ್ತದೆಂಬುದನ್ನು ಸಹ ನಾವು ಈ ಪುಟಗಳಲ್ಲಿ ಚರ್ಚಿಸುವೆವು. ಈ ಪ್ರಕಾರ ಕೂಡುವಷ್ಟು ಉತ್ಸಾಹದಿಂದ ಈ ಮಹಾಉದ್ದೇಶವನ್ನು ನೆರವೇರಿಸಬೇಕೆಂದು ನಿಶ್ಚಯಿಸಿದ್ದೇವೆ. ಈ ಕಾರ್ಯದಲ್ಲಿ ನಿರಾಲಶ್ಯವಾಗಿ ಪರಿಶ್ರಮಪಟ್ಟು, ನಮ್ಮ ಪತ್ರದಲ್ಲಿ ಸ್ಥಳವೂ ಸಹಾಯವೂ ಇರುವ ಮಟ್ಟಿಗೆ ಪ್ರಯೋಜನಕರವಾಗುವ ಹಾಗೆ ಹೋರಾಡುವೆವು. ಆದರೆ ಕಾರ್ಯವು ಪ್ರಯಾಸವಾದದ್ದು; ಜನಸಹಾಯವೂ ಬುದ್ಧಿಸಹಾಯವೂ ಇವೆಲ್ಲ ತಕ್ಕ ಮಟ್ಟಿಗೆ ಒದಗಿಸಿಕೊಂಡರೂ, ಇವೇನಾದರೂ ನಮಗೆ ಮುಂದಕ್ಕೆ ಕೊರತೆ ಬೀಳದಂತೆ, ಈ ದೇಶಹಿತ ಕಾರ್ಯದಲ್ಲಿ ಸಹಾಯ ಮಾಡುವದಕ್ಕೆ ನಮ್ಮ ವಾಚಕರು ಉದ್ಯುಕ್ತರಾದಾರೆಂದು ನಿರೀಕ್ಷಿಸುತ್ತೇವೆ.

ನಮ್ಮ ಪತ್ರಿಕೆಯನ್ನು ಈ ನಮ್ಮ ದಕ್ಷಿಣ ಕನ್ನಡದಲ್ಲಿ ಮಾತ್ರವಲ್ಲ, ಬೊಂಬೈ ಖಾತೆಗೆ ಶೇರಿದ ಉತ್ತರ ಕನ್ನಡವಲ್ಲಿಯೂ ಬೆಳಗಾವು, ಧಾರವಾಡ ಮುಂತಾದ ಸ್ಥಳಗಳಲ್ಲಿಯೂ ಮೈಸೂರ ಶೀಮೆಗಳಲ್ಲಿಯೂ, ಬಳ್ಳಾರಿ ಅತ್ತ ಕಡೆಗೂ ನೀಡಿ, ಅಲ್ಯಲ್ಲಿರುವ ನಮ್ಮ ಕನ್ನಡ ವಾಚಕರಿಗೆ ಪ್ರಯೋಜನವಾಗುವಂತೆ. ಆ ಆ ಸ್ಥಳಗಳಲ್ಲಿರುವ ಶಾಸ್ತ್ರಾಭ್ಯಾಸಿಗಳಾದರೂ ನ್ಯಾಯವಿಷಯಗಳನ್ನು ಕುರಿತು ಆಗಾಗ್ಯೆ ಪತ್ರಗಳನ್ನು ಕಳುಹಿಸಿದ್ದಲ್ಲಿ ನಾವು ಸಂತೋಷದಿಂದ ಪ್ರಚುರಪಡಿಸೇವು.

ಈ ಪ್ರಥಮದ ಅಂಕೆಯು ಜನರ ಹಸ್ತಗತವಾಗಲಾಗಿ ನಮಗೆ ಕನಿಷ್ಟ ಪಕ್ಷಕ್ಕೆ ೩೦೦ಕ್ಕೆ ಕಡಿಮೆಯಾಗದಂತೆ ಚಂದಾದಾರರು ದೊರಕುವರೆಂಬ ನಿರೀಕ್ಷೆ ಪಟ್ಟಿರುತ್ತೇವೆ. ಆದ ಪ್ರಯುಕ್ತ ಈ ಪತ್ರದ ಬಾಳಿಕೆಯನ್ನು ಬಯಸುವ ನಮ್ಮ ಜನಹಿತಾರ್ಥಿಗಳಾದವರು ತಮ್ಮ ಆಪ್ತರನ್ನೂ ಸ್ನೇಹಿತರನ್ನೂ ಸಹೋದ್ಯೋಗಿಗಳನ್ನೂ ಕಂಡು, ಈ ಪತ್ರವನ್ನು ಕುರಿತು ಪ್ರಶಂಸಿಸಿ, ತಮ್ಮ ಪ್ರಯತ್ನದಿಂದ ಸಿಕ್ಕುವಷ್ಟು ಚಂದಾದಾರರನ್ನು ಗೊತ್ತು ಮಾಡಿ ಕೊಟ್ಟಲ್ಲಿ ಅವರ ಉಪಕಾರ ಕೃತಜ್ಞತೆಯಿಂದ ನೆನಸಲಾದೀತು.

ಈ ಪತ್ರವು ತೀರಾ ಕನ್ನಡ ಪತ್ರ ಮಾತ್ರವಾಗಿರದೆ, ಇಂಗ್ಲಿಷ ತಿಳಿದವರಾದರೂ ಇದು ತಮಗೆ ಸಲ್ಲದೆಂತ ತ್ಯಜಿಸದ ಹಾಗೆ ಆಗಾಗ್ಯೆ ಅವಶ್ಯ ಕಂಡಲ್ಲಿ, ಸರ್ವ ವಿಶೇಷವೆಂತ ತೋರುವ ಯಥೋಕ್ತಗಳಾಗಲೀ ನ್ಯಾಯಸೂತ್ರಗಳಾಗಲೀ ಇಂಗ್ಲಿಷದಲ್ಲಿ ಕನ್ನಡ ಟೀಕು ಸಮೇತ ಕೊಡುವೆವು. ಪತ್ರವು ಒಟ್ಟಾರೆ ೧೨ ಪುಟಗಳಿಗೆ ಕಡಿಮೆಯಾಗಲಿಕ್ಕಿಲ್ಲ.

ಈ ಪತ್ರವು ಎಲ್ಲಾ ಸ್ಥಿತಿಯವರ ಕೈಗೆ ಮುಟ್ಟುವ ಹಾಗೆ, ಇದರ ಕ್ರಯವನ್ನು ಕೂಡುವಷ್ಟು ಅಗ್ಗ ಮಾಡಿದ್ದೇವೆ. ಇದಕ್ಕಿಂತ ಕಡಿಮೆ ಮಾಡಲಿಕ್ಕೆ ಸದ್ಯಕ್ಕೆ ನಿರ್ವಾಹವಿಲ್ಲ. ಚಂದಾದಾರರ ಸಂಖ್ಯೆ ೪೦೦ ಅಥವಾ ಹೆಚ್ಚು ಆಗಿ, ನಮ್ಮ ಬೇರೆ ವಿಷಯಗಳಲ್ಲಿಯೂ ಧೈರ್ಯ ಕಂಡ ಪಕ್ಷದಲ್ಲಿ, ಈ ಪತ್ರದ ಪುಟಗಳನ್ನು ಹೆಚ್ಚಿಸುವೆವು, ಅಥವಾ ತಿಂಗಳಲ್ಲಿ ಎರಡಾವರ್ತಿ ಪ್ರಕಟಿಸುವೆವು. ಹ್ಯಾಗೂ ನಾವು ಯಾರ ಉದ್ದೇಶಾರ್ಥವಾಗಿ ಪರಿಶ್ರಮ ಪಡುತ್ತೇವೋ, ಅವರ ಕೈಯಲ್ಲಿ ನಮ್ಮ ಭವಿಷ್ಯವು. ಅವರು ನಮ್ಮ ನಿರೀಕ್ಷೆ ನಿರರ್ಥಕವಾಗಗೊಡಿಸರು ಎಂತ ನಂಬುತ್ತೇವೆ.

ನಮ್ಮ ಮಹಾ ಇಂಡಿಯದ ಚಕ್ರವರ್ತಿನಿಯವರ ಪರಿಪಾಲನೇ ಕೆಳಗೆ ಅವರ ನ್ಯಾಯವಿಧಾಯಕ ಸ್ಥಾನಗಳ ದ್ವಾರಾ ಪ್ರಜೆಗಳೊಳಗೆ ಅನ್ಯೋನ್ಯ ಸಂಬಂಧಗಳೂ ಸ್ವಾತಂತ್ರ್ಯಗಳೂ ಸುರಕ್ಷಿತವಾಗಿ, ಎಲ್ಲಾ ವಿಷಯಗಳಲ್ಲಿ ಪ್ರಜೆಗಳ ಸುಕ್ಷೇಮವನ್ನು ಕಾಪಾಡುವ ಉದ್ದೇಶದಿಂದ ಅನುಮೋಯಿಸುವ ನ್ಯಾಯಕ್ರಮಗಳೂ, ಕಾಯಿದೆಗಳೂ, ಅಪ್ಪಣೆಗಳೂ, ಕನ್ನಡ ಭಾಷಿಗಳಿಗೆ ಪ್ರಕಟಿಸುವಂತೆ ಯತ್ನಿಸುವ ಈ ಪತ್ರವು ನಮ್ಮ ಮೇಲಿರುವ ಅಧಿಕಾರಸ್ಥರಿಗೆ ಆಜ್ಞಾಧಾರಕವಾಗಿ, ನಮ್ಮ ವಾಚಕರಿಗೆ ಸುಬೋಧಕರವಾಗಿ ಈ "ನ್ಯಾಯಾಧಿಕರಣವು" ದೀರ್ಘಾಯುಷ್ಯ ಬಾಳಲಿ!

| | | ಪ್ರಥಮ ದಫೆಗೆ | ಪುನರಾವರ್ತಿಗೆ |
|---|---|---|---|
| ಸಿವಿಲ | ಮೂಲವ್ಯಾಜ್ಯ ಯಾ ಫಿರ್ಯಾದಿಯನ್ನು ಕುರಿತಾದರೆ... | ರೂ. | ರೂ. |
| ವ | | 25 | 12 |
| ಕ್ರಿಮಿನಲ | ಅಪ್ಪೀಲ ವ್ಯಾಜ್ಯ ಕುರಿತಾದರೆ | 16 | 8 |

### ನ್ಯಾಯಸಂಬಂಧವಾದ ಆಲೋಚನೆಗಳು

ಕಾಯಿದೆ ಕಾನೂನಿನ ವಿಷಯದಲ್ಲಿ ದಾಖಲೆಗಳನ್ನಾಗಲೀ ಅನುಭವ ಆಲೋಚನೆಗಳನ್ನಾಗಲಿ ಕೇಳಿಕೊಳ್ಳ ಮನಸ್ಸು ಇರುವವರು ತಮ್ಮ ಮೊಕದ್ದಮೆಯ ಎಲ್ಲಾ ವಿದ್ಯಮಾನಗಳನ್ನು ಕುರಿತು ಸಂಕ್ಷೇಪವಾಗಿಯೂ ಸ್ಪಷ್ಟವಾಗಿಯೂ ಈ ಪತ್ರಕರ್ತರಿಗೆ ಬರದು ತಿಳಿಸಿದ್ದಲ್ಲಿ ಅವರು ಮನವಿಕಾರರ ಅಪೇಕ್ಷೆಯನ್ನು ಪೂರೈಸಿ ಕೊಡುವರೆ ಸಿದ್ಧವಿರುತ್ತಾರೆ. ಯಾವ ಸಂಗತಿ ಕುರಿತು ಆಲೋಚನೆ ಅವಶ್ಯವಿರುತ್ತದೋ ಆ ಸಂಗತಿ ಅಡಗಿರುವ ಅವರ ಪ್ರಶ್ನೆಯನ್ನು ಸ್ಪಷ್ಟವಾಗಿ ತಿಳಿಸಬೇಕಷ್ಟೆ.

ಆಲೋಚನೆಗಳನ್ನು ಬಹುಶಾ ಕೇಳಿಕೊಳ್ಳುತ್ತಿರುವ ಗಿರಾಕಿಗಳಿಗಾದರೆ, ಅಥವಾ ಗರಿಬರಾದ ಇತರರಿಗಾದರೆ, ಅವರ ಸ್ಥಿತಿಗತಿ ನೋಡಿ, ತಾರತಮ್ಯಾನುಸಾರವಾಗಿ ಮೇಲಿನ ದರವನ್ನು ಬೇಕಾದ ಮಟ್ಟಿಗೆ ಕಡಿಮೆ ಮಾಡಬಹುದು. ◆

## ೨೩. 'ಹಿತಬೋಧಿನಿ'ಯ ಸಂಪಾದಕರಿಂದ

(ಸ್ಥಾ: ೧೮೮೩)

ಸಂಪಾದಕರು: ಎಂ. ವೆಂಕಟಕೃಷ್ಣಯ್ಯ

ನಮ್ಮ ದೇಶವು ಪೂರ್ವದಲ್ಲಿ ಅತ್ಯುತ್ಕೃಷ್ಟ ದೆಸೆಯಲ್ಲಿದ್ದು ಈಗ ಕ್ಷೀಣದೆಸೆಗೆ ಬಂದಿರುವುದಕ್ಕೂ ಅತಿ - ಹೀನಸ್ಥಿತಿಯಲ್ಲಿದ್ದ ಯುರೋಪ್ ಖಂಡದ ದೇಶಗಳು ಈಗ ನೋಡುವಂಥ ವೃದ್ಧಿಸ್ಥಿತಿಗೆ ಬಂದಿರುವುದಕ್ಕೂ.... ಪಾಶ್ಚಿಮಾತ್ಯ ಶಾಸ್ತ್ರಗಳೇ ಮುಖ್ಯ ಕಾರಣಗಳಾಗಿರುತ್ತವೆ. ಇಂತಹ ಪ್ರಯೋಜನಕಾರಿಗಳಾದ ಪಾಶ್ಚಿಮಾತ್ಯ ಶಾಸ್ತ್ರಗಳನ್ನು ಹೂಣ ವಿದ್ಯಾಬಲವಿಲ್ಲದವರಿಗೆ ತಿಳಿಯಪಡಿಸುವುದು ಮುಖ್ಯವೆಂದೆಣಿಸಿ ಸಾಧ್ಯವಾದ ಮಟ್ಟಿಗೂ ಈ ಶಾಸ್ತ್ರ ವಿಷಯಗಳನ್ನೂ ಆಗಾಗ್ಗೆ ನಡೆಯುವ ಸರ್ಕಾರಿ ಏರ್ಪಾಡುಗಳನ್ನೂ ಸ್ವದೇಶ ಅನ್ಯದೇಶ ವೃತ್ತಾಂತಗಳನ್ನೂ ಕುಟುಂಬ ವರ್ತಮಾನಗಳನ್ನೂ ಅವಕಾಶಾನುಗುಣವಾಗಿ ವಿವರಿಸುತ್ತಾ ಬರುತ್ತೇವೆ...

ಜನರಿಗೆ ತಿಳಿವಳಿಕೆ ಹೆಚ್ಚಿದಷ್ಟೂ ಸೌಖ್ಯ ಹೆಚ್ಚುವುದು. ಇಂಥಾ ತಿಳುವಳಿಕೆಯನ್ನು ಸುಲಭವಾದ ರೀತಿಯಲ್ಲಿ ಹೆಚ್ಚಿಸುವುದಕ್ಕೆ ಉಪಾಯಗಳು ಅನೇಕವಾಗಿ ಉಂಟು. ಉಪಯೋಗಕರವಾಗಿಯೂ ವಿನೋದಕರವಾಗಿಯೂ ಇರತಕ್ಕ ಅಂಶಗಳನ್ನು ಪತ್ರಿಕೆಗಳ ಮೂಲಕ ಆಯಾಯ ದೇಶಭಾಷೆಗಳಲ್ಲಿ ತಿಳಿಯಪಡಿಸುವುದು ಒಂದು ಸುಲಭೋಪಾಯ.....

ನಮ್ಮ ಕರ್ನಾಟ ದೇಶದಲ್ಲಿ ಈ ರೀತಿಯಾದ ಪತ್ರಿಕೆಗಳು ಯಾವುದೂ ಇರಲಿಲ್ಲ. ಆದಕಾರಣ ಈ ಹಿತಬೋಧಿನಿಯ ಮೂಲಕ ಜನಗಳಿಗೆ ಕೈಲಾದ ಮಟ್ಟಿಗೆ ತಿಳಿವಳಿಕೆಯನ್ನು ಹೆಚ್ಚಿಸಬೇಕೆಂದು ಯತ್ನಿಸಿದ್ದೇವೆ. ನಮ್ಮ ಶಾಸ್ತ್ರಗಳಲ್ಲಿರುವ ವಿಷಯಗಳನ್ನು ಹೇಳುವದಲ್ಲದೆ ಇಂಗ್ಲಿಷರಲ್ಲಿರತಕ್ಕ ನೂತನವಾದ ಕುಶಲ ವಿದ್ಯದ ಮತ್ತು ಉಪಯುಕ್ತವಾದ ಶಾಸ್ತ್ರಗಳ ಸಂಗತಿಗಳನ್ನು ಆಗಾಗ್ಗೆ ಈ ಪತ್ರಿಕೆಯಲ್ಲಿ ಬರೆವೆವು. ವಿನೋದಕರವಾಗಿಯೂ ನೀತಿ ಪ್ರದರ್ಶಕವಾಗಿಯೂ ಇರುವ ಕೆಲವು ಕಥೆಗಳೂ ಬರೆಯಲ್ಪಡುವವು. ದೇಶಾಂತರದ ವರ್ತಮಾನ ಸಂಗ್ರಹವೂ ಇನರಲ್ಲಿರುವುದು. ಜನರು ಈ ಪತ್ರಿಕೆಯನ್ನು ಓದುವದರಲ್ಲಿ ಕಳೆದ ಕಾಲವನ್ನು ವ್ಯರ್ಥವಾಗಿ ಕಳೆದ ಹಾಗಾಗಲಿಲ್ಲವೆಂದೂ ಇದರಿಂದ ತಮಗೆ ಸ್ವಲ್ಪವಾದರೂ ತಿಳಿವಳಿಕೆ ಉಂಟಾಯಿತೆಂದೂ ಭಾವಿಸುವ ಮಟ್ಟಿಗೆ ಈ ನಮ್ಮ ಪ್ರಯತ್ನವು ಸಾಗಿದರೆ ನಮ್ಮ ಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇವೆ.

ಪತ್ರಿಕಾ ಸಂಚಿಕೆಗಳಲ್ಲಿ ಬಂದಿರುವ ಕೆಲವು ವಿಷಯಗಳು

ನವರಾತ್ರಿ... ಐಶ್ವರ್ಯ... ಮಿತ್ರರನ್ನು ಕುರಿತು ಕೆಲವು ಬಿಡಿ ಕತೆಗಳು. ಪ್ರಜಾಪ್ರತಿನಿಧಿಗಳ ಸಭೆ, ನಿರಂಕುಶ ಪ್ರಭುತ್ವ, ನಂಜನಗೂಡ್ ರೇಲ್ವೆ, ಶಾರೀರಿಕ, ಧರ್ಮಶಾಸ್ತ್ರ, ಸ್ತ್ರೀಯರ ಹಕ್ಕುಗಳು, ಭೂಕಂಪಗಳೂ ಅಗ್ನಿ ಪರ್ವತಗಳೂ ಫರೂಕಬಾದಿನ ಆರ್ಯಸಮಾಜ.

## ೨೪. 'ವಿವೇಕಾನಂದ'ದ ಸಂಪಾದಕೀಯ

(೧೮೯೪ರಿಂದ)

**(ಸಂಪಾದಕರು: ರಾ. ಸೂ. ವೆಂಕಟಕೃಷ್ಣಯ್ಯ)**

ವೇದೋದಿತ ಧರ್ಮವನ್ನೇ ಸರ್ವೋತ್ಕೃಷ್ಟವಾಗಿ ಉಜನೀವಿಸುವಂತೆ(?) ಅಮೇರಿಕಾ, ಯುರೋಪ ಮುಂತಾದ ಜಗದ್ವಿಭಾಗಗಳಲ್ಲೆಲ್ಲಾ ಪರಮ ಪ್ರಸಿದ್ಧಿಗೆ ತಂದು ಜಗತ್ತಿಗೇ ಪರಮಗುರುವಾದ ಶ್ರೀಯುತ ವಿವೇಕಾನಂದ ಸರಸ್ವತಿಯರ ಹೆಸರನ್ನು ಶಾಶ್ವತಗೊಳಿಸಲು ಈ ಪತ್ರಾಭ್ಯುದಯವಾಗಿದೆ.... 'ವಿವೇಕಮುತ್ಪಾದ್ಯ ಜನಾನಂದಯತೀತಿ ವಿವೇಕಾನಂದಃ' ಎಂಬಂತೆ ನಮ್ಮ ಅಭೀಷ್ಟವೂ ಇದೇ ಆಗಿದೆ...

ಆಧುನಿಕರಾದ ಪಂಡಿತರನೇಕರು ವೇದಾರ್ಥವನ್ನು ಕೆಡಿಸಿ ವೇದಕ್ಕೆ ಕೆಟ್ಟ ಹೆಸರನ್ನು ತಂದಿರುವುದರಿಂದ ಈ ಕಾಲಕ್ಕೆ ಬ್ರಾಹ್ಮಣಗಳನ್ನು ಪ್ರಕಟಿಸುವುದೇ ಮುಖ್ಯ ಪ್ರಯೋಜನವೆಂದೆಣಿಸುವೆವು... ಪ್ರಯೋಜನವೇನೆಂಬುದನ್ನು ಅರಿಯದೇ ಕುರುಡ ಸರವಿಯಂತೆ(?) ಗೊಡ್ಡು ಪಾಠವಾಗಿ ಕಲಿತಿದ್ದ ವೇದ, ಬ್ರಾಹ್ಮಣ ಮುಂತಾದ ಅನಾದಿ ಗ್ರಂಥಗಳಲ್ಲಿ ಇಷ್ಟು ಅಮೋಘವಾದ ಅರ್ಥವಿದೆಯೆಂತಾಗಲಿ, ಅದೆಲ್ಲಾ ಆಬಾಲವೃದ್ಧರಿಗೂ ಸುಲಭ ಬೋಧೆಯಾಗುವಂತೆ ಸ್ವಭಾಷೆಯಲ್ಲಿ ಪ್ರಕಟಿಸುವದೆಂತಾಗಲೀ ಯಾರಾದರೂ ತಿಳಿದಿದ್ದರೆ? ವೇದೋಕ್ತ ಧರ್ಮ ಪ್ರಚಾರಕವಾದ 'ವಿವೇಕಾನಂದ'ವೆಂಬ ಈ ವೇದಶಿಶುವನ್ನು ಪರಿಗ್ರಹಿಸಿ, ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಇದೇ ಸಕಾಲ.

> ಚಂದಾದಾರರಿಗೆ (ವರ್ಷಕ್ಕೆ ೨೧ ರೂ. ಮಾತ್ರ). ತಾವು ಪ್ರಕಟಿಸಿದ 'ಐತರೇಯ ಬ್ರಾಹ್ಮಣ' (ಬೆಲೆ ೨೧೧ ರೂ) ಮತ್ತಿತರ ಪ್ರಕಟನೆಗಳನ್ನು ಉಚಿತವಾಗಿ ಕೊಡುವ ಅಪೇಕ್ಷೆ. ಅನಂತರ ಮನುಸ್ಮೃತಿ ಕೊಡಬೇಕೆಂದರು. (ಅದರ ಬೆಲೆ ೩೧೧ ರೂ.!)

## ೨೫. ಭೂರಕ್ಕಸಾಯ ಸ್ವಾಹಾ

ದಿ. ೧೫-೧೦-೧೯೨೯ರ ಕರ್ಮವೀರದ ಅಗ್ರಲೇಖನವಿದು:

"ಬ್ಯೂರಾಕ್ರಸಿಯವರ ರಾಜ್ಯವೆಂದರೆ ಭೂರಕ್ಕಸರ ರಾಜ್ಯವೆಂದು ಮಹಾ ಮಹಾ ಮುತ್ಸದ್ದಿಗಳ ಮತವು. ಇಂಥ ನರರಕ್ಕಸರಲ್ಲೊಬ್ಬನಾದ ಪೇಂಟರ ಸಾಹೇಬನು ಈಗ ಮೂರು ತಿಂಗಳುಗಳ ಹಿಂದೆ ಇಲ್ಲಿ ಹೊತ್ತಿಸಿದ ನರಮೇಧ ಯಜ್ಞದಲ್ಲಿ ಯಮಾಯಸ್ವಾಹಾ, ಯಮದೂತಾಯಸ್ವಾಹಾ, ಪಾಪಾಯಸ್ವಾಹಾ, ಪಾಪಪುರುಷಾಯಸ್ವಾಹಾ, ಎಂದು ಮೂರು ಆಹುತಿಗಳನ್ನು ಧಾರವಾಡದವರು ಹಾಕಿದರು. ಆಯಿತು, ಪೋಲೀಸರ ತೋಳ್ತಿಂಡಿಯು ತುರ್ತಿಗೆ ತೀರಿತು. ಪೇಂಟರ ಸಾಹೇಬನ ನೆತ್ತರ ನೀರಡಿಕೆಯು ನೆಟ್ಟಗೆ ನೆನೆಯಿತು. ಸಹಕಾರಿಗಳ ಹೊಟ್ಟೆಯೊಳಗಿನ ಆನಂದವು ಹಿಡಿಸಲಾರದಾಯಿತು. ಈ ಪಾಪಮಯ ಯಜ್ಞದ ದುರ್ಗಂಧವು ಧಾರವಾಡದಲ್ಲೆಲ್ಲ ಇಪುಗಿತ್ತು. ಇತ್ತ ಸದಯಾಂತಃಕರಣಿಗಳಾದ ಸಜ್ಜನರ ಹೃದಯಗಳು ಕರಗಿದವು. ಪ್ರೇಮಮಯ ಸ್ತ್ರೀಯರ ಕಣ್ಣೊಳಗಿಂದ ಅಶ್ರುಧಾರೆಯು ಧೋ ಧೋ ಎಂದು ಧಾರಾಳವಾಗಿ ಹರಿಯಿತು. ಅತ್ತ ಆಳರಸರ ಉಬ್ಬು ಅಬ್ಬರವಾಯಿತು. ದುರ್ಜನರ ಹೊಟ್ಟೆಯೊಳಗೆ ಹಿಡಿಸಲಾರದಷ್ಟು ಆನಂದವಾಯಿತು. ಸಜ್ಜನರು ಮೊಹರಮ್ಮ ಹಬ್ಬ, ನವರಾತ್ರಿಯ ರಥೋತ್ಸವಗಳೇ ಮೊದಲಾದವುಗಳನ್ನು ಮಾಡಲಿಲ್ಲ. ದುರ್ಜನರು ಮನೆ ಮಾರುಗಳನ್ನು ಬಾಳೆಯ ಕಂಬಗಳಿಂದ ಸಿಂಗರಿಸಿ ಮೆರೆದರು. ಹಿಂದಕ್ಕೆ ನೀರೋ ಎಂಬ ಅರಸರು ರೋಮ ಪಟ್ಟಣವು ಸುಡುವಾಗ ಆನಂದದಿಂದ ವಾದ್ಯ ಬಾರಿಸುತ್ತ ನಡೆದಿದ್ದರಂತೆ. ಹಾಗೆ ಇಲ್ಲಿಯ ಕಲಿಪುರುಷರ ಹಾಡಾಗಿದೆ.

"ಪೋಲೀಸರು ಹೇಳಿಕೇಳಿ ಹಣಕ್ಕೆ ಮಾರಿಕೊಂಡ ಹೆಣಗಳು. ಆದುದರಿಂದಲೇ ಶಿವಲಿಂಗಪ್ಪನ ಸ್ವಾಭಾವಿಕ ಶೂರತನದ ಉಪಯೋಗವು ದೇಶಬಾಂಧವರ ಗಂಟಲುಗಳನ್ನು ಹಿಚಕುವವರಲ್ಲಿ ಆಗಹತ್ತಿದೆ. ಪಾರತಂತ್ರ್ಯ ಪಂಕದಲ್ಲಿ ಸಿಕ್ಕು ತೊಳಲಾಡುತ್ತಿರುವ ರಾಷ್ಟ್ರದೊಳಗಿನ ಸದ್ಗುಣಗಳೆಲ್ಲವೂ ಹೇಗೆ ದುರ್ಗುಣಗಳಾಗುತ್ತವೆಂಬುದಕ್ಕೆ ಇದು ಉತ್ತಮವಾದ ನಿದರ್ಶನವು. ಪೋಲೀಸರಿಗೇನೋ ತಾವು ವಿಜಯ ಪತಾಕೆಯನ್ನು ಹಚ್ಚಿದೆವೆಂದು ಹೆಮ್ಮೆ ಬಂದಿರಬಹುದು. ಆದರೆ ಅವರು ಹೀಗೆ ಮನೆಮಾರುಗಳನ್ನು ತಳಿರು ತೋರಣಗಳಿಂದ ಸಿಂಗರಿಸಿಕೊಂಡದ್ದು, ಸಜ್ಜನರಿಗೆ ಸೂಳೆಯ ಸಿಂಗಾರದ ಸೊಬಗಿನಂತೆಯೇ ಹೃದಯಕಲ್ಪವಾಗಿ ಭಾಸವಾಗುತ್ತದೆಂಬುದು ನಿರ್ವಿವಾದವಿದೆ. ರಾಷ್ಟ್ರೀಯ ಸಭೆಯಾಗಲೀ, ಮೌಲಾನಾ ಶೌಕತ ಅಲಿ ಮೊದಲಾದವರೇ ಆಗಲೀ ಲಷ್ಕರೀ ಖಾತೆಯಲ್ಲಿಯೂ ಮೇಲಿನ ಖಾತೆಯಲ್ಲೂ ನೌಕರಿ ಮಾಡಿ ದೇಶಬಾಂಧವರ ಹೊಟ್ಟೆಯಲ್ಲಿ ಬರ್ಚಿಯನ್ನು ಚುಚ್ಚುವದಕ್ಕಿಂತ ನವಕರಿಗೆ ಶರಣು ಹೊಡೆದು ಬಿಕ್ಷೆ ಬೇಡಿ ಉಪಜೀವಿಸುವದು ಸಾವಿರ ಪಾಲಿಗೆ ಲೇಸೆಂದು ಉಪದೇಶಿಸುವುದಕ್ಕಾದರೂ ಇದೇ ಕಾರಣವು. ಆ ತರದ ಪಶ್ಚಾತ್ತಾಪ ಬುದ್ಧಿಯನ್ನು ದೇವರು ಅವರಿಗೆ ಇಂದಿಲ್ಲ ನಾಳೆ ಕೊಟ್ಟೇ ಕೊಡುವನು.

ಇನ್ನು ಪೇಂಟರ ಸಾಹೇಬರು ಯಾವ ಪುರುಷಾರ್ಥ ಸಾಧಿಸಿದರು ನೋಡಿರಿ. ಅಸಹಕಾರದ ಗೋಣು ಮುರಿಯಬೇಕೆಂದು ಭೀಷ್ಮಪ್ರತಿಜ್ಞೆ, ಆದರೆ ಮೊನ್ನಿನ ದಿವಸ ದೇ. ಮಳೆಬೆನ್ನೂರ ಇವರು ಸಭೆಯಲ್ಲಿ ಹೇಳಿದಂತೆ ಕಂಸಾಸುರನಿಗೆ ಎಲ್ಲಿ ನೋಡಿದಲ್ಲಿ ಕೃಷ್ಣನೇ ಕಾಣಿಸಿದಂತೆ ಈ ಪೇಂಟಾಸುರನಿಗೆ ಧಾರವಾಡದಲ್ಲಿ ಎಲ್ಲಿ ನೋಡಿದಲ್ಲಿ ಮುದವೇದಕರ, ಕಬ್ಬೂರರೇ ಕಾಣಹತ್ತಿದ್ದಾರೆ. ಸಹಕಾರಿಗಳಾದರೂ ಏನು ದಿಗ್ವಿಜಯ ಮಾಡಿದರು? ಪರದೆಯ ಹಿಂದೆ ಅಡಗಿಕೊಂಡು ಮೋರೆಯ ಮೇಲೆ ಮುಸುಕು ಹಾಕಿಕೊಂಡು ನಾಚುತ್ತ ನಾಚುತ್ತ ಆಳರಸರ ಕೈಗೆ ಕೈ ಹಚ್ಚುವದಷ್ಟೇ ಅಲ್ಲವೆ? ಪಾಪಕಾರ್ಯದಲ್ಲಿ ಸಹಕಾರಿಗಳಾಗುವದು ಸಹಕಾರಿತನವೆ? ಸಾರಾಂಶ, ಯಾವ ದೃಷ್ಟಿಯಿಂದ ನೋಡಿದರೂ ಅವರ ಉದ್ದೇಶವು ನಿಷ್ಫಲವೇ ಆಗಿದೆ. ಇದರಿಂದ ಬ್ರಿಟಿಶ ನ್ಯಾಯದೇವತೆಯು ಮಾತ್ರ ಧಾರವಾಡದಲ್ಲಿ ದಿಗಂಬರಳಾಗಿ ನಿಂತಳು. ಸಹಕಾರಿಗಳ ಸತ್ವವು ಸತ್ತಿತು. ಸರಕಾರದ ಸಾವು ಸಮೀಪಿಸಿತು. ಮತ್ತೇನೂ ಆಗಲಿಲ್ಲ. ಅಸಹಕಾರಿಗಳ ಕೂದಲವು ಕೂಡ ಕದಲಲಿಲ್ಲ. ಅವರ ಬೆಲೆಯು ತಿಲಪ್ರಾಯವೂ ಕಡಿಮೆ ಆಗಲಿಲ್ಲ. ಆಳರಸರ ತಕ್ಕಡಿಯಲ್ಲಿ ಆರೋಪಿತರು ಹುಲ್ಲಿಗಿಂತ ಹಗುರಾಗಿದ್ದರೂ ಜನರ ತಕ್ಕಡಿಯಲ್ಲಿ, ಕಾಂಗ್ರೆಸ್ ಕಮೀಟಿಯವರು ನೇಮಿಸಿದ ನ್ಯಾಯಾಧೀಶರ ತಕ್ಕಡಿಯಲ್ಲಿ ಅವರ ಬೆಲೆಯು ಅವರ ತೂಕ ಬಂಗಾರದಷ್ಟೇ ಆಗಿರುತ್ತದೆ, ಪೇಂಟರ ಕಂಪನಿಯವರ ಬೆಲೆಯು ಮಾತ್ರ ಆರೋಪಿತರ ಎಡಗಾಲಿಗಿಂತ ಕಡೆಯಾಗಿದೆ. ಈ ವಚನಭ್ರಷ್ಟ, ಬುದ್ಧಿಭ್ರಷ್ಟ, ನೀತಿಭ್ರಷ್ಟ, ಲಜ್ಜಾಭ್ರಷ್ಟ ಸರಕಾರವು ರಾಜ್ಯ ಭ್ರಷ್ಟವಾಗುವ ಕಾಲವು ಸನ್ನಿಹಿತ ಎಂಬುದಕ್ಕೆ ಇವೆಲ್ಲವು ಸ್ಪಷ್ಟವಾದ ಚಿಹ್ನೆಗಳಲ್ಲವೆ? ಅವರ ಆಳ್ವಿಕೆಯ ದೀಪವು ದೊಡ್ಡದಾಗ ಹತ್ತಿದೆ! ಧರ್ಮರಾಜ್ಯದ ಅರುಣೋದಯವು ಕಾಣಹತ್ತಿದೆ!

ಜಾಲಿಯನ್ ವಾಲಾಬಾಗದಲ್ಲಿ ಆದ ಘೋರಕೃತ್ಯಗಳಿಂದ ಚೇತರಿಸಿಕೊಂಡ ರಾಷ್ಟ್ರವು, ಸ್ವರಾಜ್ಯ ಕಂಕಣವನ್ನು ಕೈಯಲ್ಲಿ ಕಟ್ಟಿಕೊಂಡು ಸಹನಶೀಲ ಅಸಹಕಾರ ಅಸ್ತ್ರಗಳನ್ನು ಎತ್ತಿದಾಗಿನಿಂದ ಧೈರ್ಯದಿಂದಲೂ ಶಾಂತದಿಂದಲೂ ದೊಡ್ಡ ಪ್ರಮಾಣದಲ್ಲಿ ಆಹುತಿ ಹಾಕಿದ ಉದಾಹರಣೆಯೆಂದರೆ ಇಡೀ ಭರತಖಂಡದಲ್ಲಿ ಮೊದಲನೆಯದು. ಹೀಗೆ ಪ್ರಥಮಾಹುತಿ ಹಾಕಿದ ಪುಣ್ಯವನ್ನು ಕರ್ನಾಟಕಕ್ಕೆ ಲಭಿಸಿಕೊಟ್ಟದ್ದಕ್ಕಾಗಿ ಪೇಂಟರ ಸಾಹೇಬರ ಉಪಕಾರವನ್ನು ನಾವು ಸ್ಮರಿಸುವುದು ಅತ್ಯಂತ ಅವಶ್ಯವಾಗಿದೆ. ಮತ್ತು ದೇವಾಸುರರು ನಡೆಸಿದ ಸ್ವರಾಜ್ಯ ಮಥನದಲ್ಲಿ ಹುಟ್ಟಿದ ಹಾಲಾಹಲವನ್ನು ಕುಡಿದು ಕೊರಳೊಳಗೆ ಆಭರಣವಾಗಿ ಧರಿಸುವುದಕ್ಕೆ ಗಂಗಾಧರನು ಸಿದ್ಧನಾಗಿಯೇ ನಿಂತಿರುವನು. ಪೇಂಟರ ಸಾಹೇಬರೇ, ಹೂಂ ಮೊದಲನೇ ಪುಟವು ಮುಗಿಯಿತು. ಎರಡನೇ ಪುಟಕ್ಕೆ ಪ್ರಾರಂಭಿಸಿರಿ. ನೀವು ಪುಟ ಕೊಡುವದು ಹೆಚ್ಚಿದಂತೆ ಈ ಚೊಕ್ಕ ಚಿನ್ನವು ಹೆಚ್ಚು ಹೆಚ್ಚು ಪ್ರಕಾಶವಾಗ ಹತ್ತುತ್ತದೆ.

ದಾನವದಲ್ಲಣರಾದ ಧಾರವಾಡದ ಧೀರರೇ, ನೀವು ಸೆರೆಮನೆಯಲ್ಲಿ ಸ್ವಸ್ಥ ಚಿತ್ತದಿಂದ ಇರ್ರಿ. ನಿಮ್ಮ ತೇಜಃಪುಂಜವಾದ ಮನೋಹರ ಮೂರ್ತಿಗಳು ಕರ್ನಾಟಕದ ಹೆಂಗಳೆಯರಲ್ಲಿ ಕೂಡಾ ವೀರಾವೇಶವನ್ನು ತುಂಬಿಸಿರುತ್ತವೆ. ನಿಮ್ಮ ಅಚಲವಾದ ಶಾಂತವೃತ್ತಿಯು ಧಾರವಾಡಸ್ಥರಿಗೆ ಆದರ್ಶಪ್ರಾಯವಾಗಿದೆ. ಅಗೋ, ದೇವತೆಗಳು ನಿಮ್ಮ ಮೇಲೆ ಪುಷ್ಪವೃಷ್ಟಿಯನ್ನು ಮಾಡುತ್ತಿರುವರು. ಕರ್ನಾಟಕಸ್ಥರೇ ಏಳಿರಿ. ನಿಮ್ಮೊಳಗಿನ ಪಾಪಗಳನ್ನೆಲ್ಲ ಸುಟ್ಟು ಬೂದಿ ಮಾಡಿ ಸ್ವರಾಜ್ಯ ದೇವತೆಯ ಆರಾಧನೆಗೆ ಮತ್ತೆ ಆರಂಭಿಸಿರಿ.

## ದಿವಾಕರರ ಜವಾಬು

ರಾಜದ್ರೋಹ ಖಟ್ಲೆಯಲ್ಲಿ ದಿವಾಕರರು ಕೊಟ್ಟ ಹೇಳಿಕೆ ಇಂತಿದೆ. ಅದು ಕರ್ಮವೀರದ ೧-೨-೨೨ನೇ ಸಂಚಿಕೆಯಲ್ಲಿ ಪ್ರಕಟವಾಗಿದೆ:-

(೧) ನಾನು ಕಾಂಗ್ರೆಸ್ ಸಭಾಸದನು. ಅಹಿಂಸಾತ್ಮಕ ಅಸಹಕಾರಿತ್ವದ ಮಾರ್ಗವನ್ನು ಅವಲಂಬಿಸುವದೇ ನನ್ನ ಈಗಿನ ಧರ್ಮವು. ಆದ ಕಾರಣವೇ ಈ ಖಟ್ಲೆಯಲ್ಲಿ ನಾನು ಯಾವ ಭಾಗವನ್ನೂ ತೆಗೆದುಕೊಂಡಿರುವುದಿಲ್ಲ. ನನ್ನನ್ನು ಸಂರಕ್ಷಿಸಿಕೊಳ್ಳುವುದಕ್ಕೆ

ಈ ಜವಾಬನ್ನು ಕೊಟ್ಟಿರುವುದಿಲ್ಲ. ಸತ್ಯವನ್ನು - ಕೇವಲ ಸತ್ಯವನ್ನೇ ಹೇಳುವುದಕ್ಕಾಗಿ ನಾನು ಈ ಜವಾಬನ್ನು ಕೊಟ್ಟಿರುವೆನು.

(೨) ಕಾಂಗ್ರೆಸ್ಸಿನ ಕೆಲಸವನ್ನು ನಾನು ನನ್ನ ಅಲ್ಪಮತಿಗೆ ತಿ:ದಷ್ಟು ಮಾಡುತ್ತಿರುವುದರಿಂದ ಬಹು ದಿವಸಗಳಿಂದ ನನ್ನ ಮೇಲೆ ಅಧಿಕಾರಿಗಳ ಕಣ್ಣು ಅದೆ. ಧಾರವಾಡ ಗೋಳೀಬಾರ ಖಟ್ಲೆಯಲ್ಲಿ ನಾನು ಆರೋಪಿಯಾಗಿದ್ದೆನು. ಆದರೆ ನನ್ನ ವಿರುದ್ಧವಾಗಿ ಮುಂದೆ ಬಂದ ಸುಳ್ಳು ಮತ್ತು ಅಸಂಬದ್ಧವಾದ ಪುರಾವೆಯು ತನ್ನ ಭಾರದಿಂದಲೂ ಹಾಗೂ ಅಸಂಬದ್ಧತೆಯಿಂದಲೂ ತಾನೇ ಮುಳುಗಿ ಚೂರು ಚೂರಾಗಿ ಹೋಯಿತು ಮತ್ತು ನ್ಯಾಯಾಧೀಶರು ಅದನ್ನು ನಂಬಲಿಲ್ಲ. ಈ ಪ್ರಕಾರ ನನ್ನ ವಿರುದ್ಧವಾಗಿ ತರಲ್ಪಟ್ಟ ಹೇಸಿ ಆರೋಪಗಳಿಂದ ನಾನು ಮುಕ್ತನಾದೆನು.

"ಈ ಮಾತಿಗೆ ಇನ್ನೂ ಮೂರು ತಿಂಗಳಾಗಿಲ್ಲ. ಆ ಪ್ರಕಾರ ಹೇಸಿಯಾದ ಆರೋಪವು ನನ್ನ ಮೇಲೆ ಇಲ್ಲ ಮತ್ತು ನನ್ನಿಂದ ಮಾಡಲಾಗದಂಥ ಅಪರಾಧದ ಬಗ್ಗೆಯೂ ನನ್ನ ಮೇಲೆ ಖಟ್ಲೆಯು ಮಾಡಲ್ಪಟ್ಟಿರುವುದಿಲ್ಲ. ಆದರೂ ಈಗ ನನ್ನ ಮೇಲೆ ಇಟ್ಟ ಆರೋಪವು ಸುಳ್ಳು ಎಂದು ಮಾತ್ರ ನಾನು ಹೇಳುತ್ತೇನೆ. ಈ ಸಾರೆ ನನ್ನ ಮೇಲಿನ ಆರೋಪವೆಂದರೆ ರಾಜದ್ರೋಹವು. ೧೪ ನೇ ಅಕ್ಟೋಬರ ೧೯೨೧ನೇ ಇಸ್ವಿಯ ದಿವಸ ಕರ್ಮವೀರದಲ್ಲಿ ಪ್ರಸಿದ್ಧವಾದ "ಘೋರಕೃತ್ಯಾಯ ಸ್ವಾಹಾ" ಎಂಬ ಲೇಖನವನ್ನು ನಾನು ಬರೆದಿರುವೆನೆಂದೂ ಮತ್ತು ಈ ಲೇಖನವು ಸರಕಾರದ ವಿರುದ್ಧ ಅಪ್ರೀತಿ ಹುಟ್ಟಿಸುವದೆಂತಲೂ ಈಗ ನನ್ನ ಮೇಲೆ ಆರೋಪ ಹೊರಿಸಲ್ಪಟ್ಟಿದೆ. ಆದರೆ ನಿಜವಾದ ಸಂಗತಿ ಅಂದರೆ ಆ ಲೇಖನವನ್ನು ನಾನು ಬರೆದಿರುವದಿಲ್ಲ. ೨೯ ನೇ ಜೂನ್ ೧೯೨೧ ರಿಂದ ೭ ನೇ ಅಕ್ಟೋಬರ ೧೯೨೧ನೇ ಇಸ್ವಿಯ ವರೆಗೆ ನಾನು ಕರ್ಮವೀರದ ಮುದ್ರಕನೂ ಪ್ರಕಾಶಕನೂ ಇದ್ದೆನು. ಆದರೆ ಧಾರವಾಡ ಗೋಳೀಬಾರ ಖಟ್ಲೆಯಲ್ಲಿ ನನಗೆ ಶಿಕ್ಷೆಯಾಗಬಹುದೆಂದು ತಿಳಿದು ನಾನು ಆಗ ಆ ಮುದ್ರಕತ್ವವನ್ನೂ ಪ್ರಕಾಶಕತ್ವವನ್ನೂ ಬಿಟ್ಟುಕೊಟ್ಟೆನು. ಫಿರ್ಯಾದಿ ಪಕ್ಷದ ವಕೀಲರೇ ಆಗಲಿ, ಪೋಲೀಸರೇ ಆಗಲಿ ಆ ಲೇಖನವನ್ನು ಬರೆದವರಾರೆಂಬುದನ್ನು ಗೊತ್ತು ಹಚ್ಚಲಿಕ್ಕೆ ಪ್ರಯತ್ನವನ್ನು ಮಾಡಿದಂತೆ ತೋರುವುದಿಲ್ಲ.

ಆ ಸಂಚಿಕೆಯಲ್ಲಿ ನಾನು ಸಹಿಯಿಂದ ಮುದ್ರಿಸಿರುವ "ವಿನಂತಿ" ಎಂಬ ಲೇಖನದ ಆಧಾರದಿಂದ ಈ ಲೇಖವನ್ನು ನಾನೇ ಬರೆದಿರುವೆನೆಂದು ಸಿದ್ಧಮಾಡಲಿಕ್ಕೆ ಯತ್ನ ಮಾಡಲ್ಪಟ್ಟಿದೆ. ಆ "ವಿನಂತಿ" ಎಂಬ ಲೇಖವನ್ನು ಪುನಃ ಪುನಃ ಓದಿದ್ದೇನೆ. ಫಿರ್ಯಾದಿ ತರ್ಫೆನವರು ಊಹಿಸುವಂಥ ಅನುಮಾನವು ಅದರಿಂದ ಹೊರಡುತ್ತದೆಂದು ನನಗೆ ತಿಲಪ್ರಾಯವೂ ತೋರುವದಿಲ್ಲ. ಹೀಗಿದ್ದೂ ನನ್ನ ಮೇಲೆ ಖಟ್ಲೆ ಮಾಡಿ ನನಗೆ ತುರಂಗಕ್ಕೆ ಕಳಿಸುವದಕ್ಕೆ ಫಿರ್ಯಾದಿಗಳು ಹೇಗೆ ವ್ಯರ್ಥವಾದ ಹಾಗೂ ಅಸಮ್ಮಳವಾದ ಪ್ರಯತ್ನ ಮಾಡುತ್ತಿರುವರೆಂಬುದು ಮಾತ್ರ ವ್ಯಕ್ತವಾಗುತ್ತದೆ.

ನಾನು ಮುದ್ರಕನೂ ಅಲ್ಲ; ಪ್ರಕಾಶಕನೂ ಅಲ್ಲವೆಂಬುದು ಗೊತ್ತಿದ್ದರೂ ನಾನು ಬೇಡಾದವನಾದ್ದರಿಂದ ಪುರಾವೆಯು ಇರಲಿ; ಇರದಿರಲಿ ನನಗೆ ಶಿಕ್ಷೆಯಾದೀತೆಂಬ ನಂಬಿಕೆಯಿಂದ ನನ್ನ ಮೇಲೆ ಈ ಖಟ್ಲೆಯು ಮಾಡಲ್ಪಟ್ಟಿದೆ.

ಅದು ನನ್ನ ಲೇಖವಾಗಿದ್ದರೆ ನನಗೆ ಏನು ಸಂಭವಿಸಿದರೂ ಪ್ರತ್ಯಕ್ಷ ಸಾವು ಸಂಭವಿಸಿದ್ದರೂ ಅದನ್ನು ಅಲ್ಲಗಳೆಯುತ್ತಿದ್ದಿಲ್ಲ.*

ಈ ಲೇಖದ ಲೇಖಕನಷ್ಟು ಪ್ರತಿಭೆಯೂ ಅವನಂಥ ಲೇಖನ ಪ್ರಭಾವವೂ ನನ್ನಲ್ಲಿದ್ದರೆ ನಾನೂ ಅದನ್ನು ಬರೆಯಬಾರದೆನಿಸುವಂಥ ಯಾವ ಅಕ್ಷರವೂ ಅದರೊಳಗೆ ನನಗೆ ಕಂಡು ಬರವಲ್ಲದು. ನನ್ನ ಲೇಖನ ಶೈಲಿಯನ್ನು ಬಲ್ಲವರಿಗೆ ಅಂಥ ಲೇಖವನ್ನು ಬರೆಯುವ ಶಕ್ತಿಯು ನನ್ನಲ್ಲಿ ಇಲ್ಲವೆಂದು ಗೊತ್ತೇ ಅದೆ. ಆ ಲೇಖವನ್ನು ನಾನು ಬರೆಯದೆ ಇದ್ದರೂ ಆ ಬಗ್ಗೆ ನನಗೆ ಶಿಕ್ಷೆ ಆದರೆ ನನಗೆ ಏನೂ ಆಶ್ಚರ್ಯವೆನಿಸುವುದಿಲ್ಲ. ಯಾಕಂದರೆ ಬ್ರಿಟಿಶ ಕೋರ್ಟಿನಲ್ಲಿ ನಿರಪರಾಧಿಗಳಿಗೆ ಶಿಕ್ಷೆಯಾಗುವದರ ಮೊದಲನೇ ಉದಾಹರಣೆಯು ಇದು ಅಲ್ಲ; ಇದೇ ಕೊನೆಯ ಉದಾಹರಣೆ ಎಂದೂ ಹೇಳಲಿಕ್ಕೆ ಬರುವದಿಲ್ಲ. ಕರ್ತವ್ಯ ಕರ್ಮವನ್ನು ಮಾಡುವಾಗ ನನ್ನಂಥ ನಿರಪರಾಧಿಗೆ ವಿಧಿಸಲ್ಪಡುವ ಶಿಕ್ಷೆಯು ಕಾಯದೇಶೀರ ಇರಲಿ, ಇರದಿರಲಿ ಅದನ್ನು ನಾನು ಆನಂದದಿಂದ ಅನುಭವಿಸಲಿಕ್ಕೆ ಸಿದ್ಧನಿದ್ದೇನೆ. ಕಟ್ಟಕಡೆಗೆ ಪರಮಾತ್ಮನ ನ್ಯಾಯವೇ ಜಯ ಹೊಂದುವದೆಂದು ನನಗೆ ಪೂರ್ಣ ಭರವಸೆ ಇದೆ.

---

* ಈ ಲೇಖವನ್ನು ಬರೆದವರು ಆಲೂರ ವೆಂಕಟರಾಯರು!

# ೨೬. "ವಿಚಾರ ಕ್ರಾಂತಿಯ ಹೊಣೆ ವಿಜ್ಞಾನದ್ದು"

## (ವಿಶ್ವಕರ್ನಾಟಕದಿಂದ ಸಂಪಾದಕರು: ಸಿದ್ದವನಹಳ್ಳಿ ಕೃಷ್ಣಶರ್ಮ)

ವಿಜ್ಞಾನವನ್ನು ಪಳಗಿಸಬೇಕು. ಪಳಗಿಸದಿದ್ದರೆ ಅದು ಕಾಡುಕೋಣ. ಪಳಗಿಸಿದರೆ ಅದು ಸಾಧು ಪ್ರಾಣಿ.

ಏನು ಹೀಗೆಂದರೆ?

ವಿಜ್ಞಾನವನ್ನು ಏನು ಪಳಗಿಸುವುದು? ಹೇಗೆ ಪಳಗಿಸುವುದು? ಅದಕ್ಕೆ ಕಣ್ಣು ಕಿವಿ ಏನೂ ಇಲ್ಲವಲ್ಲ.

ನಿಜ, ವಿಜ್ಞಾನವನ್ನು ಪಳಗಿಸಬೇಕಾಗಿಲ್ಲ. ವಿಜ್ಞಾನವನ್ನು ಉಪಯೋಗಿಸುತ್ತಿರುವ ಮನುಷ್ಯನ ಮನಸ್ಸನ್ನು ಪಳಗಿಸಬೇಕು.

ವಿಚಾರದಿಂದ ಮನುಷ್ಯನ ಮನಸ್ಸು ಪಳಗುತ್ತದೆ. ಚಿತ್ತಶುದ್ಧಿಯಾಗುತ್ತದೆ. ಪರಿವರ್ತನವಾಗುತ್ತದೆ.

ಎಷ್ಟೋ ಸಲ ಯಾರೋ ಒಬ್ಬರು ನಮಗೆ ಬೇಕಾದವರ ಬಗ್ಗೆಯೆ ಚಾಡಿ ಹೇಳಿದರೂ ನಮ್ಮ ಮನೋಧರ್ಮ ಬದಲಾಗುತ್ತದೆ. ನಮ್ಮ ದೃಷ್ಟಿ ವ್ಯತ್ಯಾಸವಾಗುತ್ತದೆ. ವಿಶ್ವಾಸವಿದ್ದುದು ಅವಿಶ್ವಾಸಕ್ಕೆ ತಿರುಗುತ್ತದೆ.

ಕೈಕೇಯಿಗೆ ಶ್ರೀರಾಮನ ಮೇಲೆ ಎಷ್ಟು ಪ್ರೀತಿ! ಹಡೆದ ತಾಯಿಗಿಂತ ಹೆಚ್ಚು ಆಗಿದ್ದಳು. ಮಂಥರೆಯ ದುರ್ಬೋಧನೆ ಹೇಗೆ ಮಾಡಿತು ಅವಳನ್ನು! ಎಂಥ ಕಲ್ಲೆದೆಯಾಯಿತು ಅವಳದು! ಹೀಗೆಯೇ ಒಂದು ಮಾತಿನಿಂದ, ಒಂದು ವಿಚಾರದಿಂದ, ಒಳ್ಳೆಯವರಾದವರೂ ಉಂಟು. ಕಳ್ಳ ದರೋಡೆಗಾರ ವಾಲ್ಯಾ-ವಾಲ್ಮೀಕಿಯಾಗಲಿಲ್ಲವೇ ನಾರದರ ಮಾತಿನಿಂದ?

ಆದರೆ ಈಗಿನ ಜನಕ್ಕೆ ಮನುಷ್ಯನ ಮನಸ್ಸು ಪರಿವರ್ತನಶೀಲ ಎಂಬ ನಂಬುಗೆಯೇ ಹೋಗಿದೆ. ಒಂದು ವೇಳೆ ಪರಿವರ್ತನೆಯಾದರೂ ಅದು ಸ್ಥಿರವಲ್ಲ. ನಾಯಿಬಾಲ ಡೊಂಕು ಎಂಬ ಗಾದೆಯೇ ಹುಟ್ಟಿದೆ.

ಈ ಮಾತು ತಪ್ಪು. ಈ ಭಾವನೆ ತಪ್ಪು. ವಿಜ್ಞಾನ ಇದನ್ನು ಲೋಕಕ್ಕೆ ಬಿಡಿಸಿ ತೋರಿಸಬೇಕು.

ಎಲ್ಲ ಕಾರ್ಯಕ್ಕೂ ಒಂದು ಕಾರಣವಿದ್ದೇ ಇದೆ ಲೋಕದಲ್ಲಿ.

ಈ ಕಾರ್ಯಕಾರಣ ಸಂಬಂಧವನ್ನು ಅಭ್ಯಾಸ ಮಾಡಿ, ಎಂಥ ಕಾರ್ಯ ಆಗಬೇಕೋ ಅದಕ್ಕೆ ತಕ್ಕ ಕಾರಣವನ್ನು ಒದಗಿಸುವುದು ವಿಜ್ಞಾನದ ಕೆಲಸ.

ಎಂಥ ಬೆಳೆ ಬೇಕೋ ಅಂಥ ಬೀಜ ಬಿತ್ತಬೇಕು.

ಹರಗಿ ಹಸ ಮಾಡಿ ಸರಿಯಾದ ಬೀಜ ಬಿತ್ತದಿದ್ದರೆ ತಾನೇ ತಾನಾಗಿ ಬೆಳೆಯುವುದು ಗರಿಕೆ, ಮುಳ್ಳುಕಂಟಿ.

ಸಮಾಜವೂ ಒಂದು ಹೊಲ. ಇಲ್ಲಿಯೂ ಮನುಷ್ಯರ ಮನಸ್ಸನ್ನು ಹರಗಿ ಹಸಮಾಡಿ ಸರಿಯಾದ ಬೀಜ ಬಿತ್ತಬೇಕು. ಇದು ವಿಜ್ಞಾನದ ಕೆಲಸ. ಹೊಲದಲ್ಲಿ ಬೆಳೆ ತೆಗೆಯಲು ಒಂದು ಯೋಜನೆ ಬೇಕು. ಅದಕ್ಕೆ ತಕ್ಕ ಕಾರ್ಯಕ್ರಮ ಬೇಕು.

ಮಾನವ ಸಮಾಜದಲ್ಲೂ ಅಷ್ಟೆ. ಮಾನವ ಜೀವನದಲ್ಲಿ ಶಾಂತಿಯ ಫಲ ಬೇಕೋ, ಸಮಾಜದ ಮನಸ್ಸನ್ನು ಹರಗಿ ಹಸಮಾಡಿ ಶಾಂತಿಯ ಬೀಜವನ್ನು ಬಿತ್ತಬೇಕು. ಅಶಾಂತಿಯ ಬೀಜದ ಕಳೆಯನ್ನು ಕಿತ್ತೆಸೆಯಬೇಕು.

ಈ ಬಗೆಯ ಭಾವನೆ, ಈ ಸ್ಫೂರ್ತಿ ಈಗ ಲೋಕದಲ್ಲಿ ಮೂಡುತ್ತಿದೆ. ಕಲಹ, ಸಂಘರ್ಷಣೆ, ಯುದ್ಧಗಳಿಂದ ಬೇಸತ್ತು ಮುಖಂಡರು ಹೊಸ ಮಾತನ್ನು ಆಡುತ್ತಿದ್ದಾರೆ. ಯಾವುದೋ ಹೊಸ ಜ್ಞಾನವನ್ನು ಹೊಸ ಶಕ್ತಿಯನ್ನು ಆವಾಹನ ಮಾಡುತ್ತಿದ್ದಾರೆ.

ಎರಡನೆಯ ಮಹಾ ಯುದ್ಧದ ದಂಡನಾಯಕ ಮೆಕಾರ್ಥರ್ ಹೇಳಿದ್ದಾನೆ; ಒಂದು ಹೊಸ ದಾರಿ ಹುಡುಕಬೇಕು. ಅದಕ್ಕೆ ಸಾಹಸ, ಧೈರ್ಯ, ಹೊಸ ದರ್ಶನ ಬೇಕು.

ಅಮೇರಿಕದ ಆಟಾಮಿಕ್ ಶಕ್ತಿ ನಿಯೋಗದ ಮುಂದೆ ಬರ್ನಾರ್ಡ್ ಬರೂಚ್ ಹೇಳಿದರು : 'ನಮ್ಮೆದುರಿಗಿರುವ ಸಮಸ್ಯೆ ವಿಜ್ಞಾನದ್ದಲ್ಲ; ನೀತಿಯದು'.

೧೯೪೫ರಲ್ಲಿ ಅಮೇರಿಕದ ಅಧ್ಯಕ್ಷ ರೂಸ್‌ವೆಲ್ಟ್ ಹೇಳಿದರು :'ಮಾನವ ಲೋಕ ಶಾಂತಿಯಿಂದ ಕೂಡಿ ಬಾಳಿ ಪ್ರಗತಿಗೊಳ್ಳಬೇಕೆಂದರೆ ಮಾನವೀಯ ಸಂಬಂಧಗಳ ವಿಜ್ಞಾನವನ್ನು ಬೆಳೆಸಲೇಬೇಕು.'

ಇದನ್ನೇ ನಮ್ಮವರು ಧರ್ಮಶಾಸ್ತ್ರ ಎಂದರು. ಮನುಷ್ಯರ ಸಂಬಂಧಗಳನ್ನು ಪರಸ್ಪರ ಅವಿರುದ್ಧವಾಗಿ ಶಾಂತಿಮಯವಾಗಿ ನಡೆಸಬಲ್ಲದ್ದೇ ಧರ್ಮಶಾಸ್ತ್ರ.

ಮನುಷ್ಯನ ಬುದ್ಧಿ - ಧೈರ್ಯ, ವಿವೇಕ - ವಿಜ್ಞಾನ ಎಲ್ಲವೂ ಈ ಶಾಂತಿಧರ್ಮದ ಸ್ಥಾಪನೆಗೆ ಉಪಯೋಗವಾಗಬೇಕು.

ಕೋಟಿ ಕೋಟಿ ಮನೆ ಕಟ್ಟುತ್ತಿದ್ದೇವೆ. ಸಾವಿರಾರು ಕೆರೆ ಕಟ್ಟುತ್ತಿದ್ದೇವೆ. ಈ ಮನೆಗಳಲ್ಲಿ ನೆಮ್ಮದಿಯಾಗಿದ್ದು, ಈ ಗದ್ದೆಗಳನ್ನು ನಿರ್ಮತ್ಸರವಾಗಿ ಗೆಯ್ಯಬಲ್ಲ ಮನಸ್ಸುಗಳನ್ನು ಕಟ್ಟಬೇಡವೇ?

ಬಾಂಬೆಸೆವ ದಂಡಿಗೆ ಸಿಪಾಯಿಗಳು ಸಿಗುತ್ತಾರೆ, ಅದರ ಬೆಂಬಲಕ್ಕೆ ವಿಜ್ಞಾನಿಗಳು ಸಿಗುತ್ತಾರೆ. ಶಾಂತಿಸೇನೆಗೆ ಸಿಗರೆ ಸೈನಿಕರು, ವಿಜ್ಞಾನಿಗಳು? ನಾವು ಪ್ರಯತ್ನವನ್ನೇ ಮಾಡಿಲ್ಲ.

ಮೊದಲನೆಯದಾಗಿ ವಿಜ್ಞಾನ ಬರೀ ಭೌತಶಾಸ್ತ್ರ ಎಂಬ ಭ್ರಾಂತಿ ಹೋಗಬೇಕು. ವೈಜ್ಞಾನಿಕ ಮನೋವೃತ್ತಿ ನಿಷ್ಪಕ್ಷ ಸತ್ಯಶೋಧನೆಯ ಮನೋವೃತ್ತಿ.

ಸತ್ಯ ಕೇವಲ ಪ್ರಾಕೃತಿಕವಲ್ಲ. ಸೃಷ್ಟಿ ಎಷ್ಟು ಸತ್ಯವೋ ಮನಸ್ಸೂ ಅಷ್ಟೇ ಸತ್ಯ. ಮನುಷ್ಯನ ಮನಸ್ಸಿನ ಔನ್ನತ್ಯ ಸಾಧನೆಯೂ ವಿಜ್ಞಾನವೇ.

ಎರಡನೆಯದಾಗಿ ವಿಜ್ಞಾನ ನಿರ್ದೋಷವಾದುದಲ್ಲ ಎಂಬ ತಿಳಿವು ಅಗತ್ಯ. ವಿಜ್ಞಾನ ಹೇಳಿದ್ದೆಲ್ಲ ಸತ್ಯವಲ್ಲ. ಎಷ್ಟೋ ಮಾತು ಆಯಾ ಪರಿಮಿತಿಯಲ್ಲಿ ನಿಜವಾದರೂ ಸಮಗ್ರತೆಯ ದೃಷ್ಟಿಯಲ್ಲಿ ಸತ್ಯವಲ್ಲ.

ವಿಜ್ಞಾನ ನಿರ್ಗುಣ ಬ್ರಹ್ಮದಂತೆ. ಅದಕ್ಕೆ ನೀತಿ ಅನೀತಿಗಳ ಸೋಂಕೇ ಇಲ್ಲ. ವಿಜ್ಞಾನ ಕೇವಲ ಸಾಧನೆ. ಅದರದೇನು ತಪ್ಪು, ಅದನ್ನು ಉಪಯೋಗಿಸುವವರದು ತಪ್ಪು ಎಂಬ ವಾದವನ್ನೂ ನಿರಾಕರಿಸಬೇಕು.

ಬೆಂಕಿ ಸುಡುತ್ತದೆ ಎಂಬುದು ವಿಜ್ಞಾನ.

ನಮ್ಮ ಮಾತು ಕೇಳದವರಿಗೆ ಬರೆ ಹಾಕು ಎಂಬುದು ವಿಜ್ಞಾನವಲ್ಲ.

ಅಣುಶಕ್ತಿಯ ಶೋಧನೆ ವಿಜ್ಞಾನಿಗಳಿಗೆ ಕೀರ್ತಿ ತಂದೀತು. ಅಣುಶಕ್ತಿಯಿಂದ ಬಾಂಬನ್ನು ಮಾಡುವವನು ವಿಜ್ಞಾನಿಯಾಗಲಿ ಆಗದಿರಲಿ ಅದರಿಂದ ಬಾಂಬನ್ನು ಮಾಡಬಹುದು, ಎಂದು ಹೇಳಿಕೊಟ್ಟವನು ವಿಜ್ಞಾನಿ.

ವಿಜ್ಞಾನಿಯ ಕೆಲಸದಿಂದ ಲೋಕಹಿತವಾಗುತ್ತದೆ ಎಂದಲ್ಲವೆ ಆ ವಿದ್ಯೆಯನ್ನು ನಾವು ಕಲಿಯುವುದು, ಕಲಿಸುವುದು?

ಹಾಗಿಲ್ಲದಿದ್ದರೆ ಅದಕ್ಕೇಕೆ ಇಷ್ಟು ಪ್ರಾಶಸ್ತ್ಯ?

ಬೆಂಕಿ ಸುಡುತ್ತದೆ ಎಂಬುದು ವಿಜ್ಞಾನ ಹೇಳಿತು.

ಸುಡುವುದು ಬೆಂಕಿಯ ಪ್ರಕೃತಿ. ಅದು ಸುಡುತ್ತದೆ ಎಂಬ ನಮ್ಮ ತಿಳಿವು ವಿಜ್ಞಾನ. ಆಟಂ ಶಕ್ತಿಯಿಂದ ಬಾಂಬನ್ನು ಮಾಡಬಹುದು ಎಂಬ ತಿಳಿವು ವಿಜ್ಞಾನದ್ದು.

ಬಾಂಬು ಜನರನ್ನು ಕೊಲ್ಲುವ ಸಾಧನ ಎಂಬ ಅರಿವೂ ವಿಜ್ಞಾನವೇ.

ಇದನ್ನು ತಿಳಿದೂ ಹಾಗೆ ಹೇಳಿಕೊಡುವ ವಿಜ್ಞಾನ ನಿರ್ಗುಣ ಬ್ರಹ್ಮ, ಅದಕ್ಕೆ ನೀತಿ ಅನೀತಿಗಳ ಲೇಪವಿಲ್ಲ ಎಂದರೆ?

ಮಾನವ ಸಮಾಜದ ಸಾಮಾಜಿಕ ಧರ್ಮದ ಪರಮ ಸತ್ಯಕ್ಕೆ, ಶಾಂತಿಗೆ ಸಾಧಕವಲ್ಲದ ವಿಜ್ಞಾನ ವಿಜ್ಞಾನವಲ್ಲ. ಅಸುರೀ ಸಿದ್ಧಿ.

ಏಕೆ ವಿಜ್ಞಾನ ಮನುಷ್ಯರಿಗೆ? ಜಗತ್ತನ್ನು ಸುಡಲಿಕ್ಕೋ? ಮನುಷ್ಯರಿಗೆ ಸುಖ ಶಾಂತಿ ಕೊಡಲಿಕ್ಕೋ?

ಅರ್ಥಶಾಸ್ತ್ರ ಹೇಳುವುದಿಲ್ಲವೆ? ಉತ್ಪಾದನೆಯ ಉಪಕರಣಗಳು ಉತ್ಪಾದಕರ ಅಧೀನವಲ್ಲೇ ಇರಬೇಕು. ಇಲ್ಲದಿದ್ದರೆ ಶೋಷಣಕ್ಕೆ ದಾರಿಯಾಗುತ್ತದೆ.

ಅದೇ ರೀತಿ ವಿಜ್ಞಾನದ ಸಿದ್ಧಿಗಳೂ ಸಮಸ್ತ ಜನತೆಯ ಹಿತಕ್ಕೆ, ವಿಶ್ವಕಲ್ಯಾಣಕ್ಕೆ ಅಧೀನವಾಗಿರಬೇಕು ಎನ್ನುತ್ತದೆ ಸಮಾಜಶಾಸ್ತ್ರ.

ಶೋಷಣದ ಉತ್ಪಾದನೆ ಹೇಗೆ ಅನೀತಿವಂತವೋ ತ್ಯಾಜ್ಯವೋ ಮಾನವ ವಿಧ್ವಂಸಕವಿಜ್ಞಾನವೂ ಅಧೀನವಾಗಿರಬೇಕು ಎನ್ನುತ್ತದೆ ಸಮಾಜಶಾಸ್ತ್ರ.

ಶೋಷಣದ ಉತ್ಪಾದನೆ ಹೇಗೆ ಅನೀತಿವಂತವೋ ತ್ಯಾಜ್ಯವೋ ಮಾನವ ವಿಧ್ವಂಸಕ ವಿಜ್ಞಾನವೂ ಅನೀತಿವಂತ, ತ್ಯಾಜ್ಯ.

ಇಷ್ಟು ದಿನ ಭೌತಿಕ ಕ್ರಾಂತಿಯನ್ನು ಮಾಡಿತು ವಿಜ್ಞಾನ. ಇನ್ನು ವಿಚಾರ ಕ್ರಾಂತಿ ಮಾಡಬೇಕು. ಲೋಕದಲ್ಲಿ ಅಹಿಂಸಕ ವಿಚಾರಕ್ರಾಂತಿ ಮಾಡಲು ವಿಜ್ಞಾನವನ್ನು ಉಪಯೋಗಿಸಬೇಕು.

ಇದು ಶಾಂತಿಸ್ಥಾಪನೆಯ ಯೋಜನೆಯ ಒಂದು ಮುಖ. ಈ ಪ್ರಯತ್ನಗಳನ್ನೇ ಮಾಡದೆ ಶಾಂತಿ ಬೇಕು ಎಂದರೆ? ಮಂತ್ರಕ್ಕೆ ಮಾವಿನಕಾಯಿ ಉದುರೀತೆ? ◆

# ೨೭. ಕಾಶ್ಮೀರದ ಸಮಸ್ಯೆಯ ಕುರಿತು - 'ಜೀವನ'ದಲ್ಲಿ
## (೧೯೫೧)
## (ಸಂಪಾದಕರು: ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್)

ಕಾಶ್ಮೀರದ ವಿಷಯದಲ್ಲಿ ಈ ಎರಡು ತಿಂಗಳಲ್ಲಿ ನಡೆದಿರುವ ಸಂಗತಿ ಇಂಥ ಪಾಪವನ್ನು ಹರಿಸುವುದಕ್ಕೆ U.N.O. ಸಂಸ್ಥೆಗೆ ಯೋಗ್ಯತೆಯಿಲ್ಲ ಎಂಬುದನ್ನೂ ಈ ಅಕ್ಷಮತೆಗೆ ಕಾರಣ ಆ ಸಂಸ್ಥೆಯಲ್ಲಿ ಪ್ರಮುಖವಾಗಿರುವ ರಾಷ್ಟ್ರಗಳ ಸ್ವಾರ್ಥಕಲುಷಿತ ಮನೋಧರ್ಮ ಎಂಬುದನ್ನೂ ಸ್ಪಷ್ಟಪಡಿಸಿದೆ.

ಆಂಗ್ಲ ರಾಷ್ಟ್ರ ಸಮುದಾಯದ ಮಂತ್ರಿಗಳು ಲಂಡನ್ನಿನಲ್ಲಿ ಸೇರಿದ್ದಾಗ ಈ ವಿಷಯದಲ್ಲಿ ಆಸ್ಟ್ರೇಲಿಯದ ಮುಖ್ಯಮಂತ್ರಿ ಮಾಡಿದ ಒಂದು ಸಲಹೆಯನ್ನು ಪಂಡಿತ ನೆಹ್ರೂ ಅವರು ಒಪ್ಪಲಾಗುವುದಿಲ್ಲ ಎಂದರು. ಮುಖ್ಯಮಂತ್ರಿಗಳ ಈ ಸಮಾವೇಶದಲ್ಲಿ ಮುಂಬರಿಸಲಾಗದ ತನ್ನ ಉದ್ದೇಶವನ್ನು ಇಂಗ್ಲೆಂಡ್ ಈಚೆಗೆ U.N.O. ಸಂಸ್ಥೆಯಲ್ಲಿ ಮುಂದರಿಸಿಕೊಂಡಿದೆ. ಇದಕ್ಕೆ ಇಂಗ್ಲೆಂಡಿನ ಪ್ರತಿನಿಧಿ ಬಳಸಿದ ಸಾಧನ ಒಂದು ಸೂಚನೆಯ ನಿರ್ಣಯ. ಇದರ ಪ್ರಕಾರ, ಭರತವರ್ಷ ಪಾಕೀಸ್ಥಾನ ಎರಡೂ ರಾಷ್ಟ್ರಗಳೂ ಕಾಶ್ಮೀರದ 'ಪ್ಲೆಬಿಸೈಟ್' ನಡೆಯುವ ಬಗ್ಗೆ ಅನುಕೂಲವಾದ ಪರಿಸ್ಥಿತಿಯನ್ನು ಕಲ್ಪಿಸಲು ತೊಡಗಬೇಕು. ಈ ಉದ್ದೇಶದಿಂದ ಈ ಎರಡು ರಾಷ್ಟ್ರಗಳ ಸೈನ್ಯಗಳು ಕಾಶ್ಮೀರದಿಂದ ಹೊರಕ್ಕೆ ಬರುವಂತೆ ಏರ್ಪಾಡಾಗಬೇಕು, ಈ ಏರ್ಪಾಡಿಗೆ ಸಂಬಂಧಿಸಿದ ವಿವರಗಳನ್ನು ಕುರಿತು ಎರಡು ರಾಷ್ಟ್ರಗಳೂ ಸೂಕ್ತವಾದ ಒಪ್ಪಿಗೆಯನ್ನು ಕೊಟ್ಟರೆ, ಸಮ ಕೊಡದೆ ಇದ್ದರೆ ಅವು ಈ ಸಂಗತಿಯನ್ನು ಒಬ್ಬ ಮಧ್ಯಸ್ಥಗಾರನಿಗೆ ಒಪ್ಪಿಸಬೇಕು. ಅವನು ಕೊಟ್ಟ ನಿರ್ಣಯವನ್ನು ಅಂಗೀಕರಿಸಬೇಕು. ಈ ಸೂಚನೆ ಆಂಗ್ಲ ಮತ್ತು ಅಮೆರಿಕಾ ಇಬ್ಬರು ಪ್ರತಿನಿಧಿಗಳ ಹೆಸರಿನಲ್ಲಿ U.N.O. ಸಂಸ್ಥೆಯ ಕ್ಷೇಮಕಾರಕ ಸಮಿತಿಯ ಮುಂದೆ ಬಂದಿತು. ಭರತವರ್ಷದ ಪರವಾಗಿ ಈ ನಿರ್ಣಯಕ್ಕೆ ಸ್ಪಷ್ಟ ವಿರೋಧ ಸೂಚಿತವಾಯಿತು. ಈ ಮೊದಲು ಈ ವಿಷಯವನ್ನು ಪರಿಶೀಲಿಸಿದ U.N.O. ಕಮೀಷನ್, ಪಾಕೀಸ್ಥಾನದ ಸೈನ್ಯಗಳು ಮೊದಲು ಕದಲಬೇಕು, ಮತ್ತು ಆಜಾದ್ ಕಾಶ್ಮೀರದ್ದು ಎಂಬ ಪಾಕೀಸ್ಥಾನ ಉತ್ಪಾದಿತ ಸೈನ್ಯ ಕರಗಬೇಕು, ಆಗ್ಗೆ ಭರತವರ್ಷದ ಸೈನ್ಯ ಕಾಶ್ಮೀರದ ಶಾಂತೀಯ ರಕ್ಷಣೆಗಾಗಿ ಎಷ್ಟೋ ಅಷ್ಟು ನಿಂತು ಉಳಿದದ್ದು ಹಿಂತಿರುಗಬೇಕು, ಎಂದು ಎರಡೂ ರಾಷ್ಟ್ರಗಳ ಸಮ್ಮತಿಯಿಂದ ನಿಶ್ಚಯಿಸಿದ್ದಿತು. ಈಗಿನ ಈ ಅಮೆರಿಕಾ ಸಹ ಆಂಗ್ಲ ನಿರ್ಣಯ ಹಿಂದಿನ ನಿರ್ಣಯವನ್ನು ತೀರಾ ಮರೆತು, ಪಾಕಿಸ್ತಾನ ಭರತ ವರ್ಷಗಳೆರಡನ್ನೂ ಒಂದೇ ಮಟ್ಟದಲ್ಲಿ ನಿಲ್ಲಿಸುವೆನೆಂದಿತು. ಭರತ ವರ್ಷ ಇದಕ್ಕೆ ಒಪ್ಪುವುದು ಸಾಧ್ಯವಲ್ಲ. ಆಂಗ್ಲ ಪ್ರತಿನಿಧಿ ನಿರ್ಣಯದ ವಿಷಯ ಮಾತನಾಡುತ್ತಾ, 'ಕಾಶ್ಮೀರ ಒಂದು ರಾಜ್ಯವಲ್ಲ. ಬರಿಯ ಒಂದಷ್ಟು ಭೂಮಿ; ಈಗ ಚರ್ಚೆಯಲ್ಲಿರುವುದು ಇದು ಯಾರ ಪಾಲಿಗೆ ಬರಬೇಕು ಎನ್ನುವುದು; ಎಂಬಂತೆ ಮಾತನಾಡಿದರು. ಕಾಶ್ಮೀರದ ಮುಖ್ಯಮಂತ್ರಿ ಷೇಕ್ ಅಬ್ದುಲ್ಲಾ ರಾಷ್ಟ್ರರಚನಾ ಸಭೆಯೊಂದನ್ನು ನೆರಯಿಸಲು ಕೆಲವು ತಿಂಗಳ ಹಿಂದೆ ನಿಶ್ಚಯಿಸಿದರಷ್ಟೆ. ಆಂಗ್ಲ ಪ್ರತಿನಿಧಿ ಕಾಶ್ಮೀರದ ಸರಕಾರ ಹೀಗೆ ಮಾಡುವುದು ಕೂಡದು ಎಂದರು; ಭರತವರ್ಷ ಇದನ್ನು ತಡೆಯಬೇಕೆಂದರು. ಅವರ ಮಾತಿನಲ್ಲಿ ಕಾಶ್ಮೀರ ಇನ್ನೂ ಯಾವ ರಾಷ್ಟ್ರಕ್ಕೂ ಸೇರಿಲ್ಲ ಎಂಬ ಕಲ್ಪನೆ ಪ್ರಕಟವಾಯಿತು. ಭಾರತ ಪ್ರತಿನಿಧಿ, ಈ ಕಲ್ಪನೆ ಸರಿಯಲ್ಲ, ಕಾಶ್ಮೀರ ಈಗಾಗಲೇ ಭರತ ವರ್ಷಕ್ಕೆ ಸೇರಿದ್ದಾಗಿದೆ, ಅಂದಿನ ಆ ಸರಕಾರದ ಇಷ್ಟದಿಂದಾದ ಆ ಸೇರಿಕೆಗೆ ಜನದ ಒಪ್ಪಿಗೆ ಉಪಸ್ತಂಭಕವಾಗಿ ಬೇಕಾಗಿದೆ ಅಷ್ಟೆ ಅಂದರು. ಇದನ್ನು ಆಂಗ್ಲ ಪ್ರತಿನಿಧಿ ಲಾಗೊಮ್ಯಾಚಿ 'ತರ್ಕಸಂಭ್ರಮ' ಎಂದು ವರ್ಣಿಸಿದರು; "ಕಾಶ್ಮೀರದ ಅರಸರು ಭರತವರ್ಷಕ್ಕೆ ಸೇರಿದ್ದು ಸರಿಯೆಂದು ಹೇಳುವುದಾದರೆ ಇದೇ ರೀತಿಯ ಇತರ ಸೇರಿಕೆಗಳ ವಿಷಯವನ್ನೂ ನಾವು ಹೀಗೆಯೇ ನೋಡಬೇಕಾದೀತು", ಎಂದರು. ಇವರು ಬಾಯಿಬಿಟ್ಟು ಹೇಳಲಿಲ್ಲವಾದರೂ ಇದರ ಅರ್ಥ ಸ್ಪಷ್ಟವಾಗಿಯೇ ಇದೆ. ಕಾಶ್ಮೀರದ ಅರಸರು ತಮ್ಮ ಸಂಸ್ಥಾನವನ್ನು ಭರತವರ್ಷಕ್ಕೆ ಸೇರಿಸಿದಂತೆ ಜುನಘಡದ ನವಾಬರು ತಮ್ಮ ಸಂಸ್ಥಾನವನ್ನು ಪಾಕೀಸ್ಥಾನಕ್ಕೆ ಸೇರಿಸಲಿಲ್ಲವೇ? ಈಗ ಜುನಘಡ ಯಾರ ಕೈಯಲ್ಲಿದೆ? ಇದು ಇವರ ವ್ಯಂಗ್ಯ. ಪಾಕೀಸ್ಥಾನ ಈ ನಿರ್ಣಯ ತನಗೆ ಸಮ್ಮತ ಎಂದಿತು. ಇತರ ರಾಷ್ಟ್ರಗಳು ನಿರ್ಣಯದಿಂದ ತೊಂದರೆಯೇನೂ ಇಲ್ಲ ಎಂದವು. ಕ್ಷೇಮಪಾಲಕ ಸಮಿತಿ ನಿರ್ಣಯವನ್ನು ಅಂಗೀಕರಿಸಿತು.

ಆಂಗ್ಲ ಸರಕಾರ ಸದ್ಯದಲ್ಲಿ 'ಲೇಬರ್' ಪಕ್ಷದ ಸರಕಾರವಾಗಿದ್ದರೂ ಅವರ ವಿದೇಶ ನೀತಿ ಬಹುಮಟ್ಟಿಗೆ ಎಂದಿನಂತೆ 'ಕನ್ಸರ್ವೇಟಿವ್' ಆಗಿಯೇ ಇದೆ. ಚರ್ಚಿಲ್ ಮಹಾಶಯರು ಮೂರ್ತಿವೆತ್ತ ಈ ಮನೋಧರ್ಮ. ಭರತವರ್ಷ ಸ್ವಾತಂತ್ರ್ಯ ಗಳಿಸಿದ ಅಪರಾಧವನ್ನು ಈ ಜನ ಕ್ಷಮಿಸಲಾರರು. ಈ ಅಪರಾಧದ ಎಲ್ಲ ಹೊಣೆಯನ್ನೂ ಈ ಜನ ಹಿಂದೂಗಳ ಮೇಲೆ

ಹಾಕುತ್ತಾರೆ. ಭರತವರ್ಷ ಇವರ ದೃಷ್ಟಿಯಲ್ಲಿ ಈ ಅಪರಾಧಿಗಳ ರಾಜ್ಯ. ಎಲ್ಲಿ ಸಾಧ್ಯವಾದರೆ ಅಲ್ಲೆಲ್ಲ ಇವರು ಭರತವರ್ಷಕ್ಕೆ ಅಪಕಾರ ಮಾಡಬೇಕು. ಹಾಗೆ ಮಾಡದಿದ್ದರೆ ಇವರ ಮನಸ್ಸಿನ ತಿನಸಿಗೆ ಸಮಾಧಾನವಿಲ್ಲ.

ಮುಸಲ್ಮಾನರು, ಹಿಂದೂಗಳಿಗೆ ಸ್ವಾತಂತ್ರ್ಯ ಬೇಡ ಎಂದ ಜನರು. ಪಾಕೀಸ್ತಾನ ಅವರ ರಾಜ್ಯ. ಅಲ್ಲದೆ ಅದು ಇಂಗ್ಲೆಂಡಿಗೆ ಅನುಕೂಲವಾಗಿ ನಡೆಯಬಲ್ಲ ಮನೋಧರ್ಮವನ್ನು ತೋರುತ್ತಿದೆ. ಅಲ್ಲದೆ ಅಲ್ಲಿ ಸ್ವತಂತ್ರ ಮನೋಧರ್ಮದ ನಾಯಕರ ಸಂಖ್ಯೆ ಕಡಮೆ; ಅವರ ಭವಿಷ್ಯದಲ್ಲಿ ಆಂಗ್ಲರ ಕೈವಾಡಕ್ಕೆ ಹೆಚ್ಚು ಅವಕಾಶವಿದೆ. ಆದ್ದರಿಂದ 'ಕನ್ಸರವೆಟಿವ್' ಆಂಗ್ಲರಿಗೆ ಅದಕ್ಕೆ ಸಹಾಯ ಮಾಡಬೇಕು ಎಂಬ ಅಪೇಕ್ಷೆ.

ಕೊರಿಯಾ ಯುದ್ಧವನ್ನು ಕುರಿತ ಪ್ರಶ್ನೆಯಲ್ಲಿ ಭರತವರ್ಷ ಅಮೆರಿಕಾದ ನೀತಿಯನ್ನು ಪೂರ್ಣವಾಗಿ ಒಪ್ಪದೆ ಹೋದದ್ದು ಅಲ್ಲಿಯ ಜನರ ಒಂದು ದೊಡ್ಡ ಭಾಗಕ್ಕೆ ಅಸಮಾಧಾನವನ್ನು ಉಂಟುಮಾಡಿದೆ. ಸಾಲದ್ದಕ್ಕೆ ಪಂಡಿತ ನೆಹ್ರೂ ಪೂರ್ವದೇಶಗಳ ಬಾಳ್ವಿಕೆಯಲ್ಲಿ ಪಶ್ಚಿಮದೇಶದ ಜನರು ಬಹಳವಾಗಿ ತಲೆಹಾಕಬಾರದು ಎಂಬ ಮಾತನ್ನು ಆಗಾಗ ಹೇಳುತ್ತಿದ್ದಾರೆ ; ಹೇಳುವುದರಲ್ಲಿಯೂ ಇವರು ದೈನ್ಯವನ್ನಳವಡದೆ ಭರತವರ್ಷ ಪಶ್ಚಿಮದೇಶಗಳಿಗೆ ಸಮಾನ ಎಂಬಂತೆ ದರ್ಪದ ಧ್ವನಿಯನ್ನು ಬಳಸುತ್ತಿದ್ದಾರೆ. ಹೊಟ್ಟೆಗಿಲ್ಲದ ದೇಶ; ಸ್ವಲ್ಪ ಧಾನ್ಯ ಕೊಡು, ಬದುಕಿಕೊಳ್ಳುತ್ತೇನೆ, ಎಂದು ಒಂದು ಕಡೆ ಕೇಳುತ್ತಿದೆ. ಇನ್ನೊಂದು ಕಡೆ ಈ ದೊಡ್ಡತನದ ಮಾತು. ಇದೇನು ದುರಹಂಕಾರ? ಅಮೆರಿಕಾದ ಕೆಲವರಾದರೂ ನಾಯಕರು ಇದನ್ನು ಮುರಿಯಬೇಕು ಎನ್ನುವುದು ಸಹಜವಾಗಿದೆ.

ಇನ್ನು ಫ್ರಾನ್ಸ್ ದೇಶ. ಪ್ರಬಲರಾದ ಆಂಗ್ಲರನ್ನು ಒಟ್ಟು ಭರತವರ್ಷದಿಂದ ಓಡಿಸಿದ ಭಾರತ ಜನ ತನ್ನನ್ನು ಅಂಗೈಯಗಲದ ನಾಲ್ಕು ಕ್ಷೇತ್ರಗಳಿಂದ ಹೊರಟು ಹೋಗು ಎನ್ನುತ್ತಿದೆಯಲ್ಲಾ ಎಂದು ಈ ಜನಕ್ಕೆ ಕೋಪ. ಜೊತೆಗೆ ಇಂಡೋ ಚೈನಾದಲ್ಲಿ ಫ್ರಾನ್ಸ್ ನಡೆದುಕೊಳ್ಳುತ್ತಿರುವ ರೀತಿ ಭರತವರ್ಷಕ್ಕೆ ಒಪ್ಪಿಗೆಯಿಲ್ಲ ಎನ್ನುವುದು ಈ ಮೊದಲೆ ಕಂಡಿದೆ. ಫ್ರಾನ್ಸ್‌ದೇಶ ಸದ್ಯಕ್ಕೆ ಭರತ ವರ್ಷದ ವಿಷಯದಲ್ಲಿ ಬಹಳ ವಿಶ್ವಾಸವನ್ನು ತೋರುವುದು ಸಾಧ್ಯವಲ್ಲ.

ಇದಾದ ಮೇಲೆ 'ನ್ಯಾಷನಲಿಸ್ಟ್' ಎಂದು ಹೆಸರಿಟ್ಟುಕೊಂಡ ಚೀನಾ. ಮಾ-ವೊ-ಟ್ಸೆ'ಟುಂಗ್ (Mao-Tse Tung) ಮಹಾಶಯನು ಒಟ್ಟು ಚೀನಾ ದೇಶವನ್ನು ಕೈಗೆ ತೆಗೆದುಕೊಂಡು, ಚಿಯಾಂಗ್-ಕೈ-ಷೇಕ್ ಮಹಾಶಯನು ಫಾರ್ಮೋಸಾ ಸೇರಿದ ಮೇಲೆ ಭರತವರ್ಷ, ಚೀನಾದೇಶದ ಹೊಸ ಸರ್ಕಾರಕ್ಕೆ U.N.O. ಸಂಸ್ಥೆಯಲ್ಲಿ ಸ್ಥಳ ದೊರೆಯಬೇಕು ಎಂದಿತು. 'ನ್ಯಾಷನಲಿಸ್ಟ್ ಚೀನಾ' ಎನ್ನುವುದು ಚಿಯಾಂಗ್-ಕೈ-ಷೇಕ್ ಪಕ್ಷ. ಅದು ಭರತವರ್ಷದ ವರ್ತನೆಯನ್ನು ಹೇಗೆ ಒಪ್ಪೀತು? ನಿಜವಾದ ಚೀನಾ ಮಾ-ವೊ-ಟ್ಸೆ-ಟುಂಗನದು, ಚಿಯಾಂಗ್-ಕೈ-ಷೇಕನದಲ್ಲ, ಎಂದ ಮಾತನ್ನು ಹೇಗೆ ಕ್ಷಮಿಸೀತು? 'ನ್ಯಾಷನಲಿಸ್ಟ್' ಚೀನಾ ಎನ್ನುವುದು ಎಷ್ಟೇ ನ್ಯಾಷನಲಿಸ್ಟಾದರೂ ಚೀನಾ ಅಲ್ಲ ಎಂದ ಭಾರತೀಯ ಧೃಷ್ಟತನವನ್ನು ದಂಡಿಸಬೇಕಲ್ಲವೇ? ಈ ನಿರ್ಣಯ ಬಂದಾಗ ನ್ಯಾಷನಲಿಸ್ಟ್ ಚೀನಾ ಭರತವರ್ಷಕ್ಕೆ ವಿರೋಧವಾಗಿ ನಡೆದುಕೊಂಡಿತು.

ಇನ್ನು ದಕ್ಷಿಣ ಅಮೇರಿಕದ ದುಃಸಂಸ್ಕೃತ ರಾಷ್ಟ್ರಗಳು. ಅವುಗಳ ಪ್ರತಿನಿಧಿಗಳು ಯಾವ ಭಾವನೆಯಿಂದ ವರ್ತಿಸುತ್ತಾರೋ ಹೇಳುವಂತಿಲ್ಲ. ಒಟ್ಟಿನಲ್ಲಿ ಅವರ ಸೂತ್ರ ತಮ್ಮ ಪ್ರಯೋಜನ ಕೆಡದಂತೆ ಇದ್ದರೆ ಅಮೆರಿಕಾ ಜೊತೆಗೇ ನಡೆಯುವುದು. ಆಂಗ್ಲರೂ ಅಮೆರಿಕರೂ ತಂದ ಸಲಹೆ U.N.O. ಸಂಸ್ಥೆಯ ಸಮಿತಿಯಲ್ಲಿ ಅಂಗೀಕೃತವಾದದ್ದಕ್ಕೆ ಇದೇ ಕಾರಣ.

ಕಾಶ್ಮೀರದ ಅರಸರು ಭರತವರ್ಷಕ್ಕೆ ಸೇರಲು ಬಯಸಿದಾಗ ನಮ್ಮ ಸರಕಾರ ಆ ಬಯಕೆಗೆ ಸಮ್ಮತಿಸಿ ಮುಂದೆ ಈ ವಿಷಯದಲ್ಲಿ 'ಪ್ಲೆಬಿಸೈಟ್' ತೆಗೆದುಕೊಳ್ಳುತ್ತೇವೆ ಎಂದು ಹೇಳಿದ್ದು ಅನವಶ್ಯಕವಾಗಿದ್ದಿತು. ಆದರೆ ಅದು ಎಷ್ಟೇ ಅನವಶ್ಯಕವಾಗಿದ್ದರೂ ಒಂದು ತಪ್ಪೇನೂ ಇಲ್ಲ. ಕಾಶ್ಮೀರ ಭರತ ವರ್ಷಕ್ಕೆ ಸೇರಿತಲ್ಲಾ ಎಂಬ ಹೊಟ್ಟೆಯುರಿಯಲ್ಲಿ ಪಾಕಿಸ್ತಾನ ಮೊದಲು ಪರೋಕ್ಷವಾಗಿ ಆಮೇಲೆ ಪ್ರತ್ಯಕ್ಷವಾಗಿ, ಮೊದಲು ಯಾರೋ ದರೋಡೆಕಾ[illegible] ಎಂದು ಹೆಸರಿಟ್ಟು ಆಮೇಲೆ ತನ್ನ ಸೇನೆಯನ್ನೇ ಮುಂದಿಟ್ಟು ಕಾಶ್ಮೀರದಲ್ಲಿ ದಾಂಧಲೆ ಮಾಡಿದಾಗ ಭರತವ[illegible] ಅಲ್ಲಿ ಅದನ್ನು ಎದುರಿಸಿ ನಿಲ್ಲಿಸಿ, ಹೀಗೆ ಮಾಡಬಾರದೆಂದು ಪಾಕಿಸ್ತಾನಕ್ಕೆ ಬುದ್ಧಿ ಹೇಳಿ ಎಂದು ಪ್ರಪಂಚದ ಪಂಚಾಯತಿ ಸಂಸ್ಥೆಯಾದ U.N.O. ಸಂಸ್ಥೆಗೆ ದೂರು ಹೊತ್ತದ್ದಾದರೂ ಸರಿಯೆ. ಆದರೆ ಈ ಸಂಸ್ಥೆ ಮೊದಲಿನಿಂದಲೂ ಈ ವಿಷಯದಲ್ಲಿ ಅವಿವೇಕದಿಂದಲೇ ನಡೆದುಕೊಂಡಿದೆ. ಅದರಿಂದಲೇ ಒಂದು ಸಲ ಸರದಾರ್ ಪಟೇಲರು ಈ ಸಂಸ್ಥೆ ನಮಗೆ ಬೇಡ ಎಂದು ಒದರಿ ಮಾತನಾಡಿದರು. ಆದರೂ ಎಲ್ಲ ರಾಷ್ಟ್ರಗಳ ಪರಿಷತ್ತಾಗಿ ಇಂಥ ಒಂದು ಸಂಸ್ಥೆ ಇರುವುದು ಅವಶ್ಯಕ ಎಂಬ ಕಾರಣದಿಂದ ಭರತವರ್ಷ ಸಂಸ್ಥೆಯನ್ನು ಪುರಸ್ಕರಿಸಿಕೊಂಡೇ ಬಂದಿದೆ. ಆದರೆ ಸಂಸ್ಥೆ ಪುರಸ್ಕಾರಕ್ಕೆ ಯೋಗ್ಯವಾಗುವಂತೆ ನಡೆದುಕೊಂಡಿಲ್ಲ. 'ಯತ್ರ ಸೂಕ್ತಂ ದುರುಕ್ತಂ ವಾ ಸಮಂ ಸ್ಯಾತ್ ಮಧುಸೂದನ। ನ ತತ್ರ ಪ್ರಲಪೇತ್ ಪ್ರಾಜ್ಞಃ ಬಧಿರೇಷು ಇವ ಗಾಯನಃ ।' ಕೌರವ ಸಭೆಯಲ್ಲಿ ನ್ಯಾಯವನ್ನು ಬೇಡ ಹೋಗಬೇಡ ಎಂದು ಕೃಷ್ಣನಿಗೆ ವಿದುರನು ಹೇಗೆಂದನಂತೆ. U.N.O. ಸಂಸ್ಥೆಯ ಎದುರಲ್ಲಿ ಸೂಕ್ತಿ

ದುರುಕ್ತಿ, ಸಚ್ಚರಿತ ದುಶ್ಚರಿತ ಇವೆರಡೂ ಸಮ. ಸಂಸ್ಥೆ ಮೊದಲು ಸರಿಯಾಗಿದ್ದು ಆಮೇಲೆ ಕೆಡುತ್ತಾ ಬಂದಿದೆ ಎನ್ನುವುದಕ್ಕೂ ಅವಕಾಶವಿಲ್ಲ. ಮೊದಲಿಂದಲೂ ಇದರ ಯೋಗ್ಯತೆ ಇಷ್ಟೆ. ಸಹಿಸಿ ಸಹಿಸಿ ಕೊನೆಗೆ ಈಗ ಪಂಡಿತ ನೆಹ್ರೂ ಮೂರು ವರ್ಷದ ಹಿಂದೆ ಸರದಾರರು ಹೇಳಿದ ಮಾತನ್ನು ಹೇಳತೊಡಗಿದ್ದಾರೆ. ಭರತವರ್ಷಕ್ಕೆ ಬೇರೆ ದಾರಿಯಿಲ್ಲ.

ತಮ್ಮ ಅನ್ಯಾಯದ ನಿರ್ಣಯವನ್ನು ಕಾರ್ಯರೂಪಕ್ಕೆ ತರಲು ಆಂಗ್ಲರೂ ಅಮೆರಿಕನರೂ ಏನು ಮಾಡುವರೋ ನೋಡಬೇಕು. ದಕ್ಷಿಣ ಆಫ್ರಿಕಾದ ಮೆಲಾನ್ ಸರಕಾರ ಬಣ್ಣದ ಜನರಿಗೆ ಮಾಡುತ್ತಿರುವ ಅನ್ಯಾಯವನ್ನು ನೋಡಿಕೊಂಡು ಸುಮ್ಮನಿರುವ U.N.O. ಸಂಸ್ಥೆ ನ್ಯಾಯವಾದಿಯಾದ ಭರತವರ್ಷ ಕಾಶ್ಮೀರದ ಅಸಹಾಯ ಜನವನ್ನು ದರೋಡೆಕಾರರಿಗೆ ಬಿಟ್ಟುಕೊಡುವುದಿಲ್ಲ ಎನ್ನುವ ತಪ್ಪಿಗೆ ದಂಡನೆ ಕೊಡುವ ಪ್ರಸಂಗ ಉತ್ತಮ ಪ್ರಹಸನವಾದೀತು. ಆದರೇನು? ಇದು 'ರಾಂಗರಾಂಗ ರಾಜುವಾರಿ ಗುರ್ರುಂ ಗಾಡಿದಿ ಆಯ' ಎಂಬ ತೆಲುಗು ಗಾದೆಯ ಕಥೆ. ಹತ್ತು ಸಾವಿರ ಹೊನ್ನುಕೊಟ್ಟು ರಾಜರಿಗೆ ಪಟ್ಟದ ಕುದುರೆಯನ್ನು ಕೊಂಡ ಅಶ್ವಶಾಲೆಯ ಯಜಮಾನ ಮರುದಿನವೇ ಅದಕ್ಕೆ ಏನೋ ವಿರೋಧವಾಗಿದೆ ಎಂದು ಹೇಳಿ ಹದಿನೈದು ದಿನದ ನಂತರ, ಕುದುರೆ ಕತ್ತೆಯಾಗಿಬಿಟ್ಟಿದೆ, ಅದಕ್ಕೆ ಯಾರೋ ಮಾಟ ಮಾಡಿರಬೇಕು, ಎಂದನಂತೆ. ಮಾಟವೆನ್ನುವುದು ಸುಳ್ಳುಮಾತು. ಹತ್ತು ಸಾವಿರ ಹೊನ್ನಿಗೆ ಮೊದಲು ಬಂದದ್ದೇ ಕತ್ತೆ. ಎಲ್ಲ ರಾಷ್ಟ್ರಗಳೂ ಸೇರಿ ಕೋಟ್ಯಂತರ ಹೊನ್ನು ಖರ್ಚುಮಾಡಿ ಕಟ್ಟಿದ U.N.O. ಪಟ್ಟದ ಸಂಸ್ಥೆ ಈಚೆಗೆ ಕೆಟ್ಟಿಲ್ಲ; ಹುಟ್ಟುತ್ತಲೇ ಕೆಟ್ಟಿತ್ತು. ಇದು ಸರಿಹೋಗಬೇಕಾದರೆ ಮಾಟ ಬೇಕು. ಅದು ಮುಂದೆ ಆಗಬಹುದು.

ಆದರೂ ಒಂದು ಮಾತು. ಸಂಸ್ಥೆಯ ಮೊದಲ ಅವಿವೇಕದ ಮಾತಿಗೇ ಭರತವರ್ಷ ಎದುರು ಬಿದ್ದಿದ್ದರೆ ಅದಕ್ಕೆ ತಾಳ್ಮೆ ಸಾಲದು ಎಂಬ ದೂರು ಬರಬಹುದಾಗಿತ್ತು. ಸಹಿಸುವಷ್ಟು ಸಹಿಸಿ ನ್ಯಾಯದ ಬೇರಿಗೇ ಕೇಡು ತಟ್ಟಿದಾಗ ನಾವು ಒಲ್ಲೆ ಎನ್ನುತಿರುವುದರಿಂದ ಭರತವರ್ಷದ ನಿಲುವಿನಲ್ಲಿ ನ್ಯಾಯವಿದೆಯೆಂದು ಕೆಲವು ರಾಷ್ಟ್ರಗಳಿಗಾದರೂ ತಿಳಿದೀತು. ◆

## ೨೮. 'ವಿಕಟ ವಿನೋದಿನಿ'ಯ ಸಂಪಾದಕೀಯ

### (ಸ್ಥಾಪನೆ : ೧೯೧೧) (ದಿ. ನವೆಂಬರ್ ೧, ೧೯೬೦)

ಹಾಸ್ಯಪ್ರವೃತ್ತಿ ಮಾನವನ ಸ್ವಭಾವ ಜನಿತವಾದ ಗುಣ. ಎಂತಲೇ ಸಾಹಿತ್ಯ ಮತ್ತು ಕಲೆಗಳಲ್ಲಿ ಹಾಸ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ ಹಾಗೂ ಶೃಂಗಾರ ವೀರರಸ ಪ್ರಾಧಾನ್ಯವುಳ್ಳ ಸಾಹಿತ್ಯಸೃಷ್ಟಿಯಾಗಿರುವಂತೆ ಹಾಸ್ಯ ಪ್ರಧಾನ ಸಾಹಿತ್ಯವೂ ವಿಶ್ವದ ವಿವಿಧ ಭಾಷೆಗಳಲ್ಲಿ ಸೃಷ್ಟಿಯಾಗಿದೆ.

ಈ ಸಂದರ್ಭದಲ್ಲಿ ಹಾಸ್ಯವೆಂದರೇನು ಎನ್ನುವ ಪ್ರಶ್ನೆ ಸಹಜವಾಗಿಯೇ ನಮ್ಮ ಮುಂದೆ ಬರುತ್ತದೆ. ಇದು ತಿಳಿಯಬೇಕಾದರೆ ಹಾಸ್ಯದ ಮೂಲವನ್ನು ಹುಡುಕಬೇಕು. ಎಂದರೆ ನಾವು ಯಾವ ಸಂದರ್ಭದಲ್ಲಿ ನಗುತ್ತೇವೆ ಎನ್ನುವ ಪ್ರಶ್ನೆಯನ್ನು ಉತ್ತರಿಸಬೇಕು.

ಮಾನವನಲ್ಲಿ ಕಾಣಬರುವ ಬಂದು ವಿಶೇಷವಾದ ಗುಣ, ನಡತೆ, ರೂಪ, ಸ್ವಾಭಾವಿಕವಾದ ವಿಕಾರವಾದ, ಅಥವಾ ಕೊಂಕಾದ ಲಕ್ಷಣ – ಇವೇ ಹಾಸ್ಯದ ಮೂಲವಾಗುತ್ತದೆ, ನೀವು ವ್ಯಂಗ್ಯಚಿತ್ರವನ್ನು ನೋಡಿರಬಹುದು. ವ್ಯಂಗ್ಯ ಚಿತ್ರಕಾರನ ನಿರೂಪಣೆಯನ್ನು ಗಮನಿಸಿದರೆ ವ್ಯಕ್ತಿಯ ವಿಲಕ್ಷಣತೆಯನ್ನು ಅಥವಾ ವಿಕಾರವನ್ನು ದೊಡ್ಡದು ಮಾಡಿ ಚಿತ್ರವನ್ನು ರಚಿಸಿರುತ್ತಾನೆ. ಹಾಸ್ಯಸಾಹಿತ್ಯವನ್ನು ಸೃಷ್ಟಿ ಮಾಡುವವನೂ ಅಷ್ಟೆ. ಒಂದು ವ್ಯಕ್ತಿಯ ಭೌತ ಲಕ್ಷಣವನ್ನು ಅಥವಾ ಜೀವನಕ್ಕೆ ಸಂಬಂಧಿಸಿದ ಯಾವುದಾದರೂ ಘಟನೆಯನ್ನು ತನ್ನ ಸಾಹಿತ್ಯಕ್ಕೆ ವಸ್ತುವನ್ನಾಗಿ ತೆಗೆದುಕೊಂಡು ಅಲ್ಲಿ ತಾನು ಕಾಣುವ ವಿಕಾರಗಳನ್ನು ದೊಡ್ಡದು ಮಾಡಿ ಆ ಸಂದರ್ಭಗಳನ್ನು ಲಘುವಾಗಿಯೂ ಹಾಸ್ಯ ಪ್ರಧಾನವಾಗಿಯೂ ಚಿತ್ರಿಸುತ್ತಾನೆ. ಈ ವರ್ಣನೆಯನ್ನು ನಾವು ಓದಿದಾಗ ನಮ್ಮಲ್ಲಾಗುವ ಪ್ರತಿಕ್ರಿಯೆ ಉಲ್ಲಾಸಕಾರಿ ಮತ್ತು ಚೇತೋಹಾರಿ. ವಾಸ್ತವವಾಗಿ ಹೇಳುವುದಾದರೆ ಒಬ್ಬ ಕುರೂಪಿಯನ್ನು ನೋಡಿ ನಾವು ನಕ್ಕಾಗ ಪರೋಕ್ಷವಾಗಿ ನಮ್ಮನ್ನೇ ನೋಡಿ ನಕ್ಕಿರುತ್ತೇವೆ.

ಈ ದೃಷ್ಟಿಯಲ್ಲಿ ಹಾಸ್ಯವನ್ನು ಜೇನಿಗೆ ಹೋಲಿಸಬಹುದು. ಜೇನು ಸವಿಯಲ್ಲಿ ಸಿಹಿ. ಆದರೂ ಜೇನಿನ ಕಥೆ ಮಾತ್ರ ಕಹಿ. ಹೇಗೆಂದರೆ ಮುಂಜಾವಿನಿಂದ ಸಂಜೆಯವರೆಗೆ ಹೂವಿಂದ ಹೂವಿಗೆ ಹಾರಿ ಮಕರಂದ ಹೀರಿ ಕೂಡಿಟ್ಟ ಅದರ ಆಹಾರವನ್ನು ಸ್ವಾರ್ಥಿಯಾದ ಮಾನವ ತಾನು ತನ್ನ ಉಪಯೋಗಕ್ಕಾಗಿ ಕಸಿದುಕೊಳ್ಳುತ್ತಾನೆ. ಇದೇ ಸಿಹಿಜೇನಿನ ಕಥೆಯಲ್ಲಿ ಕಹಿಯಾದ ಅಂಶ. ಹಾಗೆಯೇ ಹಾಸ್ಯವು ಅಷ್ಟೇ ನೋಡುವವರಿಗೆ ಹಾಸ್ಯಾಸ್ಪದವಾಗಿದ್ದರೂ ಅನುಭವಿಸುವವರಿಗೆ ನೋವು

ಉಂಟಾಗಿರುತ್ತದೆ. ಎಂತಲೇ ಹಾಸ್ಯದ ಹಿನ್ನೆಲೆ ನೋವಾಗಿರುತ್ತದೆ ಎಂದ ಮಾತ್ರಕ್ಕೆ 'ಹಾಸ್ಯ ಅಳಿಯಬೇಕೆಂದರ್ಥವಲ್ಲ, ಹಾಗೆ ಅಳಿವೂ ಇಲ್ಲ. ಸಾಹಿತಿ ಮತ್ತು ಕಲಾವಿದರ ಕಾರ್ಯರಂಗದ ವ್ಯಾಪ್ತಿ ಮಾನವ ಜೀವನದ ನಾನಾ ಮುಖಗಳ ಮೇಲೆ ಪಸರಿಸಿದ್ದು, 'ಹಾಸ್ಯ' ಆವ್ಯಾಪ್ತಿಯಿಂದ ಹೊರತಾಗಿಲ್ಲ.

ಎಂತಲೇ ಆ ಬಗೆಯ ಹಾಸ್ಯಪ್ರಧಾನ ಬರಹಗಳನ್ನು ಪ್ರಕಟಿಸಿ ಕನ್ನಡಿಗರ ತನ್ಮೂಲಕ ಕನ್ನಡ ಭಾಷೆಗೆ ಅಳಿಲು ಸೇವೆ ಮಾಡಬೇಕೆಂಬ ಹಿರಿಯಾಸೆ ತಳೆದು ನಮ್ಮ ಹಿರಿಯರು ನಮ್ಮ ಪತ್ರಿಕೆಯನ್ನು ಈಗ್ಗೆ ಐವತ್ತು ವರ್ಷಗಳ ಹಿಂದೆ ಆರಂಭಿಸಿದರು. ಈ ದೀರ್ಘ ಕಾಲಾವಧಿಯಲ್ಲಿ ನಮ್ಮಂತೆಯೇ ಆಶೆತೊಟ್ಟು, ಆರಂಭವಾದ ಎಷ್ಟೋ ಪತ್ರಿಕೆಗಳು ಪ್ರೋತ್ಸಾಹವಿಲ್ಲದೆ ಅಳಿದ ನಿದರ್ಶನಗಳು ತಮ್ಮ ಗಮನಕ್ಕೆ ಬಾರದೇ ಇಲ್ಲ. ನೆರೆನಾಡಿನವರಾದ ತಮಿಳರು, ತೆಲುಗರು, ಮಲೆಯಾಳಿಗಳು, ಮರಾಠರು ಮಾತ್ರ ತಮ್ಮ ಭಾಷೆಯ ಬಗ್ಗೆ ಅಮಿತವಾದ ಅಭಿಮಾನ ಪಟ್ಟು, ಎಷ್ಟೋ ವೇಳೆ ಭಾಷೆಗಾಗಿ ಮೇರೆ ಮೀರಿ ವರ್ತಿಸಿರುವುದು ನಮ್ಮ ಗಮನಕ್ಕೆ ಬಂದಿರುತ್ತದೆ ಅಲ್ಲದೆ ಅವರು ತಮ್ಮ ಭಾಷೆಗೆ ಪತ್ರಿಕೆಗಳಿಗೆ ತೊಡುತ್ತಿರುವ ಪ್ರೋತ್ಸಾಹ ನಿಜಕ್ಕೂ ಅನುಕರಣೀಯ.

ಹೀಗಿರಲು ಈ ಭಾಷಾಭಿವೃದ್ಧಿ ಬಗ್ಗೆ ನಾವು ಯಾವ ಮಟ್ಟಿನ ಕ್ರಿಯಾಶೀಲ ಕಾರ್ಯಕ್ರಮವನ್ನು ಕೈಗೊಳ್ಳದೆ ನಿರುತ್ಸಾಹದಿಂದ ಹಿಂದುಳಿದಿರುವುದು ಶೋಚನೀಯ ಸಂಗತಿ.

ಏಕೀಕರಣವಾದ ಮೇಲೆ ಕನ್ನಡಿಗರು ಕನ್ನಡದ ಬಗ್ಗೆ ಹೆಚ್ಚು ಪ್ರೇಮ ವ್ಯಕ್ತಪಡಿಸುತ್ತಾರೆನ್ನುವ ಕನಸು ಪೂರ್ಣವಾಗಿ ನನಸಾಗಿಲ್ಲ. ಈಗಲೂ ಸಮಯ ಮೀರಿಲ್ಲ. ನಾವೆಲ್ಲ ಒಂದಾಗಿ ಒಮ್ಮತದಿಂದ ಭಾಷಾಭಿವೃದ್ಧಿಗೆ ಕಂಕಣ ತೊಡುತ್ತಾರೆಂಬ ಆಶಯ ತಳೆಯಬೇಕಾಗಿದೆ.

ನಮ್ಮ ಪತ್ರಿಕೆಯಾರಂಭವಾದಾಗ ಕನ್ನಡದಲ್ಲಿ ಪತ್ರಿಕೋದ್ಯಮ ಶೈಶವಾವಸ್ಥೆಯಲ್ಲಿದ್ದು ಆಗಿನಿಂದ ಈಗಿನವರೆಗೆ ಭಗವಂತನ ಕೃಪೆಯಿಂದ ಹೇಗೋ ನಮ್ಮ ಶಿಶುವನ್ನು ಬೆಳಗಿದ್ದೇವೆ. ಇದಕ್ಕೆ ನಿಮ್ಮ ನಿರಂತರ ಪ್ರೋತ್ಸಾಹವೂ ಒಂದು ಕಾರಣ. ಇದಕ್ಕಾಗಿ ನಿಮಗೆ ನಾವೂ ಋಣಿಗಳು.

ಈ ಸಂದರ್ಭದಲ್ಲಿ ನಮ್ಮ ಪಾಲಿಗೆ ಬಂದಿರುವ ಇನ್ನೊಂದು ಮುಖ್ಯ ಕರ್ತವ್ಯ, ನಮ್ಮ ಪತ್ರಿಕೆಯ ಹುಟ್ಟಿಗೆ ಕಾರಣರಾದ ನಮ್ಮ ಹಿರಿಯರನ್ನು ನೆನೆಯುವುದೇ ಆಗಿದೆ. ಈಗ್ಗೆ ಐವತ್ತು ವರ್ಷಗಳ ಹಿಂದೆ ಎಂದರೆ ೧೯೧೧ರ ನವೆಂಬರ್ ಒಂದರಲ್ಲಿ ಈ ಪತ್ರಿಕೆಯನ್ನು ನಮ್ಮ ಪೂಜ್ಯ ತಂದೆಯವರಾದ ಶ್ರೀ ಬಸವಪ್ಪ ಶೆಟ್ಟರವರು ಆರಂಭಿಸಿದರು. ಶ್ರೀಯುತರು ಪತ್ರಿಕೆಯ ಮುದ್ರಕ, ಪ್ರಕಾಶಕರಾಗಿಯೂ ಅವರ ಮಿತ್ರರಾದ ಶ್ರೀ ಎನ್. ಶಿವರಾಮ ಶಾಸ್ತ್ರಿಗಳು ಸಂಪಾದಕರಾಗಿಯೂ ನಿಂತು ೧೯೨೧ರ ವರೆವಿಗೂ ನಡೆಸಿಕೊಂಡು ಬಂದರು. ನಮ್ಮ ಹಿರಿಯರು ೧೯೨೧ರಲ್ಲಿ ಕಾಲವಾದ ಮೇಲೆ, ಮುದ್ರಣ ಪ್ರಕಾಶನದ ಜವಾಬ್ದಾರಿಯನ್ನು ನಾವು ಹೊತ್ತೆವು. ಶ್ರೀ ಶಾಸ್ತ್ರಿಗಳು ೧೯೩೦ರಲ್ಲಿ ಕಾಲವಾದ ಮೇಲೆ ಆಗಿನಿಂದಲೂ ನಾವು ಸಂಪಾದಕರಾಗಿ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿದ್ದೇವೆ. ಪತ್ರಿಕೋದ್ಯಮಕ್ಕೆ ನಮ್ಮನ್ನು ಪ್ರವೇಶಿಸುವಂತೆ ಮಾಡಿ ಆ ಹಾದಿಯಲ್ಲಿ ನಮ್ಮ ಬಹುದೂರದ ವರೆವಿಗೂ ತಂದುಬಿಟ್ಟು ಮೇಲಿನ ಹಿರಿಯರಿಬ್ಬರನ್ನು ನಾವು ಶ್ರದ್ಧಾಪೂರ್ವಕವಾಗಿ ಸ್ಮರಿಸುತ್ತೇವೆ.

ನಮ್ಮ ಪತ್ರಿಕೆಯ ಈ ವಿಶೇಷ ಸಂಚಿಕೆಯನ್ನು ಹೊರತರಬೇಕೆಂಬ ನಿರ್ಧಾರವನ್ನು ಕೇವಲ ಇತ್ತೀಚೆಗೆ ಕೈಗೊಂಡದ್ದರಿಂದ, ನಮಗೆ ದೊರೆತ ಕಾಲಾವಕಾಶ ಬಹಳ ಸ್ವಲ್ಪ; ಅಷ್ಟರಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಆಕರ್ಷಕವನ್ನಾಗಿ ಮಾಡಲು ಪ್ರಯತ್ನಿಸಿದ್ದೇವೆ. ಆದರೆ ಹೆಚ್ಚು ಸಮಯ ದೊರೆತಿದ್ದಲ್ಲಿ ಮತ್ತಷ್ಟು ಚೆನ್ನಾಗಿ ಹೊರತರುವುದಾಗಿತ್ತೆಂಬ ಅಂಶವನ್ನು ನಾವು ಅರಿತಿದ್ದೇವೆ. ಆದರೆ ಸಹೃದಯ ವಾಚಕರು ಹಂಸಕ್ಷೀರ ನ್ಯಾಯದಂತೆ ಗುಣವನ್ನು ತೆಗೆದುಕೊಂಡು ಲೋಪಗಳನ್ನು ಮನ್ನಿಸಬೇಕು. ಇದು ನಿಮ್ಮಲ್ಲಿ ನಮ್ಮ ಬೇಡಿಕೆ ಈ ಸಂಚಿಕೆ ಹೊರಬರಲು ಕಾರಣರಾದ ಜಾಹಿರಾತುದಾರರು ಬರಹಗಾರರಿಗೆ ನಾವು ಈ ಮೂಲಕ ಪ್ರತಿಜ್ಞಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ. ಓದುಗರಾದ ನಿಮಗೆ ನಮ್ಮ ವಿಶೇಷ ವಂದನೆಗಳು.

◆

ಬಿ. ಶಿವಪ್ಪ

# ೨೯. ಪತ್ರಕರ್ತರೆಂದರೆ ಶಾಸನಗಳ ಭಾಷ್ಯಕಾರರು; ನ್ಯಾಯಾಧೀಶರು

## (ಪ್ರಜಾಮತ, ೧೯೭೧)

## ಮಧ್ಯಪುಟದ ಲೇಖ : ತಿ. ತಾ. ಶರ್ಮರಿಂದ

"ಸಮಾಜವಾದಿ ಮನೋಧರ್ಮದ ವಕೀಲರ ಸಮ್ಮೇಳನ" ವೊಂದು ೨೮-೨-೧೯೭೧ ಬೆಂಗಳೂರಲ್ಲಿ ನಡೆಯಿತು. ಇದನ್ನಾರಂಭಿಸುವ ಮಹದವಕಾಶ ಶ್ರೀ ಕೆಂಗಲ ಹನುಮಂತಯ್ಯನವರದಾಯಿತು. ಅವರು ವೃತ್ತಿಯಲ್ಲಿ ವಕೀಲರು. ಈಗ ಕೇಂದ್ರ ಮಂತ್ರಿಮಂಡಲದಲ್ಲಿ ಕಾನೂನು ಶಾಖಾ ಸಚಿವರು. ಅರ್ಹತೆ-ಅಧಿಕಾರ ಇವೆರಡರ ದೃಷ್ಟಿಯಿಂದಲೂ ಅವರು ಸಾರ್ವಜನಿಕ ವೇದಿಕೆಯ ಮೇಲಿಂದ ವ್ಯಕ್ತಪಡಿಸುವ ಅಭಿಪ್ರಾಯಗಳಿಗೆ ಜನರು ವಿಶೇಷ ಪ್ರಾಮುಖ್ಯತೆ ಮತ್ತು ಬೆಲೆ ಕೊಡುತ್ತಾರೆ ಶ್ರೀ ಕೆಂಗಲ್ಲರು ಹೀಗೆ ಅಭಿಪ್ರಾಯ ಪಟ್ಟಂತೆ ವರದಿಯಾಗಿದೆ.

"ದೇಶದ ನ್ಯಾಯ ವಿಮರ್ಶಾಂಗವು ಓಬೀರಾಯನ ಕಾಲದ್ದು, ಗೊಡ್ಡು ಹಳೇಮಾರ್ಗದ್ದು, ಹಿಡಿದ ಜಾಡಿಗೆ ಭದ್ರವಾಗಿ ಕಟ್ಟಿಕೊಂಡು ಕೂಡುವ ಮನೋಧರ್ಮದಿಂದ ಕೂಡಿದ್ದು. ನ್ಯಾಯವಿಮರ್ಶಾಂಗದಲ್ಲಿ ವಿಪ್ಲವಕಾರಕ ಬದಲಾವಣೆಗಳಾಗಬೇಕೆಂದು ಬಯಸುತ್ತೇವೆ. ಕಾಲಧರ್ಮಕ್ಕನುಗುಣವಾಗಿ ವರ್ತಿಸಿರಿ. ಯಾವುದೋ ಕಾಲದ ಸಮಯ ಸಂಪ್ರದಾಯಗಳ ಬಾಲಂಗೋಚಿಗಳನ್ನೇ ಭದ್ರವಾಗಿ ಹಿಡಿದು ತೂಗಾಡುತ್ತ ಕೂಡಬೇಡಿ. ಇವೆಲ್ಲ ದೇಶದ ಪ್ರಗತಿಗೆ ಅಡ್ಡಿಯಾದುವ - ಎಂದು ವಕೀಲರಲ್ಲಿ ಪ್ರಾರ್ಥನೆ ಮಾಡುತ್ತೇನೆ"

ಸಮಾಜಕ್ಕೆ ಯಾವುದು ಹಿತ, ಯಾವುದು ಪ್ರಿಯ? ದಿನವೂ ಇವು ಬದಲಾವಣೆಯಾಗುತ್ತ ಹೋಗುತ್ತವೆ. ಬದಲಾವಣೆಗೆ ಅನುಗುಣವಾಗಿ ಜೀವನದ ಸಕಲ ಚಟುವಟಿಕೆಗಳೂ ಬದಲಾವಣೆಗೊಳ್ಳಬೇಕು. ಆದರೆ ಬದಲಾವಣೆ ಹೇಗಾಗಬೇಕು? ಶಾಸನ ಬದ್ಧವಾಗಿ, ಶಾಂತಿಯುತವಾಗಿ, ಆಗಬೇಕೆ; ಇಲ್ಲವೆ ಕ್ರಾಂತಿ ವಾತಾವರಣದಲ್ಲಿ; ಅವ್ಯವಸ್ಥಾಸ್ಥಿತಿಯಲ್ಲಾಗಬೇಕೆ, ಇದು ಇಂದಿನ ಪ್ರಶ್ನೆ.

ಸ್ವಾತಂತ್ರ್ಯ ಪಡದ ಮೇಲೆ ಭಾರತದಲ್ಲಿ ನಾವಿಂದು 'ಶಾಸನಪ್ರಭುತ್ವ' ಸ್ಥಾಪಿಸಿದ್ದೇವೆ. ಪ್ರಭುತ್ವಗಳು (ಕೇಂದ್ರದಲ್ಲಾಗಲೀ, ರಾಜ್ಯಗಳಲ್ಲಾಗಲಿ) ಕಿರುಬೆರಳನ್ನಲ್ಲಾಡಿಸಬೇಕಾದರೂ ಶಾಸನಬದ್ಧವಾಗಿ ಆಡಿಸಬೇಕು. ಇಂದಿನ ಪ್ರಭುತ್ವ ಸ್ವೇಚ್ಛಾಪ್ರಭುತ್ವವಲ್ಲ. ಪ್ರತಿಯೊಬ್ಬ ಪ್ರಜೆಗೂ ನ್ಯಾಯಸ್ಥಾನಕ್ಕೆ ಹೋಗಿ "ಸರ್ಕಾರ ಶಾಸನಕ್ಕೆ ಅನುಗುಣವಾಗಿ ವರ್ತಿಸುತ್ತಿದೆಯೇ ಇಲ್ಲವೆ" - ಎಂದು ಕೇಳುವ ಅಧಿಕಾರವನ್ನು ಸಂವಿಧಾನವು ಕೊಟ್ಟಿದೆ. ಸರಕಾರ ಶಾಸನಕ್ಕನುಗುಣವಾಗಿ ವರ್ತಿಸಿದೆ. ಅಥವಾ ವರ್ತಿಸಿಲ್ಲ" ಎಂದು ತೀರ್ಮಾನ ಕೊಡುವ ಅಧಿಕಾರ ನ್ಯಾಯಸ್ಥಾನದ್ದು. ಸಂವಿಧಾನ ವ್ಯಾಖ್ಯಾನಕಾರರು ನ್ಯಾಯಾಧೀಶರು. ಸಂವಿಧಾನ ವಿಧಿಗಳಲ್ಲಿ, ಶಾಸನಗಳ ವಿಧಿಗಳಲ್ಲಿ, ಬಳಸಿರುವ ಮಾತುಗಳು, ಪದಬಂಧ, ಸಮಾಸ, ಒಟ್ಟರ್ಥ, ಇವೆಲ್ಲವುಗಳನ್ನೂ, ಗಮನದಲ್ಲಿಟ್ಟುಕೊಂಡು ನ್ಯಾಯಧೀಶರು ಅರ್ಥ ಮಾಡುತ್ತಾರೆ. ವ್ಯವಹಾರಗಳ ತೀರ್ಮಾನ ಮಾಡುವಾಗ ಹಿಂದಿನಿಂದ ನಡೆದು ಬಂದ ಸಮಯ -ಸಂಪ್ರದಾಯಗಳನ್ನು, ನ್ಯಾಯಾಧೀಶರು ಶಾಸನವಿಧಿಗಳಿಗೆ ಅರ್ಥ ಮಾಡುವ ಹಾಗಿಲ್ಲ. ಅವರು ಶಾಸನಗಳಲ್ಲಿ ಬಳಸಿರುವ 'ಪದವಾಕ್ಯ ಪ್ರಮಾಣ' ಬದ್ಧರು. ಅರ್ಥ ಮಾಡುವಾಗ ಹೊರಗಿನ ಯಾವೊಂದು ಪ್ರಕೃತಿಯನ್ನೂ ಪ್ರವೇಶಗೊಳಿಸಲಾಗದು. ಶಾಸಕಾಂಗಗಳು ಮಾಡಿರುವ ಶಾಸನಗಳ ಭಾಷೆಯ ಮೂಲಕ ಆ ಶಾಸನಗಳ ಉದ್ದೇಶ್ಯಗಳನ್ನು ತಿಳಿಯಲು ಪ್ರಯತ್ನ ಮಾಡುವುದು ಮಾತ್ರ ನ್ಯಾಯಾಧೀಶರ ಕರ್ತವ್ಯ. ಈ ಕರ್ತವ್ಯ ನಿರ್ವಾಹದಲ್ಲಿ ನ್ಯಾಯಸ್ಥಾನಗಳ ಕಾರ್ಯಕಲಾಪಗಳಿಗೆ ಸಹಕಾರ ನೀಡುವ ವಕೀಲರು ನ್ಯಾಯಾಧೀಶರಿಗೆ ಹೃತ್ಪೂರ್ವಕ ಸಹಾಯ ನೀಡುತ್ತಾರೆ.

ಸಾಮಾಜಿಕ ಹಿತಸಾಧನೆಯಾಗಬೇಕಾದದ್ದು ಶಾಸನಗಳ ಮೂಲಕ. ಶಾಸನಗಳನ್ನು ಮಾಡುವವರು ಚುನಾಯಿತರಾಗಿ ಹೋಗಿ ವಿಧಾನಸಭೆ-ಲೋಕಸಭೆಗಳಲ್ಲಿ ಕೂಡುವ ಶಾಸಕರು ಅವರು ಮಾಡಿದ ಶಾಸನದಂತೆ ಆಡಳಿತ ನಡೆಸುವವರು ಮಂತ್ರಿಗಳು ಆ ಮಂತ್ರಿಗಳು. ನಡೆಸುವ ಆಡಳಿತ ಶಾಸನಬದ್ಧವಾಗಿದೆಯೇ ಇಲ್ಲವೇ ಎಂಬುದನ್ನು ನಿರ್ಣಯ ಮಾಡತಕ್ಕವರು ನ್ಯಾಯಾಧೀಶರು.

ಅಂದ ಮೇಲೆ ಸಮಾಜ ಹಿತವನ್ನು ಸಾಧಿಸಬೇಕಾದರೆ ಶಾಸನ ಮಾಡುವ ಶಾಸಕರಿಗೂ, ಮಾಡಿದ ಶಾಸನಗಳನ್ನು ಆಚರಣೆಗೆ ತರುವ ಮಂತ್ರಿಗಳಿಗೂ, ಆಚರಣೆಗೆ ತಂದ ಆಜ್ಞೆಗಳು ಶಾಸನಕ್ಕೆ ಅನುಗುಣವಾಗಿವೆಯೆ, ಇಲ್ಲವೆ ಎಂದು ಹೇಳುವ ನ್ಯಾಯಾಧೀಶರಿಗೂ, ಮಧ್ಯೆ ಪೂರ್ಣ ಹೊಂದಾಣಿಕೆ ಇರಬೇಕು, ಸಮರಸ ಭಾವವಿರಬೇಕು. ಹೊಂದಾಣಿಕೆ ಇಲ್ಲವಾದರೆ ಈ ಅಂಗಗಳ ಮಧ್ಯೆ ಘರ್ಷಣೆ ಅನಿವಾರ್ಯ.

ನ್ಯಾಯಸ್ಥಾನಗಳ ಪೂರ್ಣ ಸ್ವಾತಂತ್ರ್ಯಕ್ಕೆ ಯಾವ ಮೂಲೆಯಿಂದಲೂ ಅಡ್ಡಿ ಬರಲಾಗದು. ಯಾವ ಪ್ರಮಾಣದಲ್ಲೂ ಬರಲಾಗದು. ಶಾಸನ ಪ್ರಭುತ್ವದ ಸ್ವಾತಂತ್ರ್ಯ ಮತ್ತು ಪವಿತ್ರತೆ, ಇವೆರಡು ಪ್ರಜಾತಂತ್ರದ ಜೀವ-ಜೀವಾಳಗಳು. ಜೀವಭದ್ರವಾಗಿದ್ದರೆ ಉಳಿದುದೆಲ್ಲ ಭದ್ರ. ಇಲ್ಲವಾದರೆ ಅಭದ್ರ.

## ಎಲ್ಲ ಪಕ್ಷಗಳ ಒಂದೇ ಮಟ್ಟ

'ಚುನಾವಣೆಗಳ ಪ್ರಚಾರ ಹೇಗೆ ನಡೆಯುತ್ತಿದೆ ಎಂಬುದನ್ನು ನೋಡಿದಾಗ ಆಡಳಿತ ಕಾಂಗ್ರೆಸ್ ಸುಳ್ಳು, ಪ್ರಚಾರ, ಅಶಿಸ್ತುಗಳಲ್ಲಿ ರಮಿಸುತ್ತಿರುವುದು ಸ್ಪಷ್ಟವಾಗುತ್ತದೆ. ಪ್ರಜೆಗಳ ಮನಸ್ಸಿನಲ್ಲಿ ಗಜಿ-ಬಿಜಿಯನ್ನುಂಟುಮಾಡುವುದು; ಜಾತಿಮತ ದ್ವೇಷಾಸೂಯೆಗಳ ಬೀಜ ಬಿತ್ತುವುದು; ಲಂಚಗುಳಿತನ; ಇವೇ ಆಡಳಿತ ಕಾಂಗ್ರೆಸಿನ ಕಲ್ಯಾಣಗುಣಗಳು. ಇಷ್ಟೇ ಸಾಲದೆಂದು ವಿದೇಶಗಳಿಂದ ಅದಕ್ಕೆ ಅಪಾರ ಹಣದ ಸಹಾಯ ದೊರೆಯುತ್ತಿದೆ ಎಂಬುದಾಗಿ ಮೂಲ ಕಾಂಗ್ರೆಸಿನ ಅಧ್ಯಕ್ಷರಾದ ಶ್ರೀ ನಿಜಲಿಂಗಪ್ಪನವರು (೫-೩-೭೧) ಬೆಂಗಳೂರಲ್ಲಿ ಶ್ರೀ ವಾಜಪೇಯಿ, ಶ್ರೀ ಸಾದಿಕ್ ಅಲಿಯವರೊಂದಿಗೆ ಮಾತನಾಡುತ್ತ ಪರಿಸ್ಥಿತಿಯ ವರ್ಣನೆ ಮಾಡಿದರು.

ಚುನಾವಣೆಗಳ ರಣರಂಗಗಳಲ್ಲಿ ಸಾಮಾನ್ಯವಾಗಿ ಎಲ್ಲ ಪಕ್ಷಗಳ 'ಕಲ್ಯಾಣಗುಣ'ಗಳೂ 'ಚರಂಡಿಮಟ್ಟ'ದವುಗಳೆಂದೇ ಹೇಳಲು ಬಹಳ ವ್ಯಸನವಾಗುತ್ತದೆ. ನಾನಾ ಪಕ್ಷಗಳ 'ನಾಯಕ ಶಿಖಾಮಣಿ'ಗಳು ಸಾರ್ವಜನಿಕ ಕ್ಷೇತ್ರಗಳಲ್ಲಿ ಆಡುವ ಮಾತುಗಳನ್ನೆಲ್ಲ ಪತ್ರಿಕೆಗಳೇನಾದರೂ ಪ್ರಕಟಿಸಿದರೆ ಮರ್ಯಾದೆಯುಳ್ಳ ಜನ ಹೀಗೆ ಮಾತನಾಡುವವರನ್ನೆಲ್ಲ ಹುಚ್ಚು ನಾಯಿಗಳಂತೆ ಸಂಭಾವಿಸುವರೆಂಬುದರಲ್ಲಿ ಸಂದೇಹವೇ ಇಲ್ಲ. ಇವರೆಲ್ಲ ಇನ್ನೂ ರಾಜವೀಧಿಗಳಲ್ಲಿ ಕ್ಷೇಮವಾಗಿ ಓಡಾಡುತ್ತಿರಲು ಕಾರಣ ಅಂತಹ ದುರ್ಭಾಷೆ ಪ್ರಕಟಿಸದ ಸಮಾಜ ಮರ್ಯಾದೆ ಕಾಪಾಡುತ್ತಿರುವ ಪತ್ರಿಕೆಗಳು. ನಾಯಕರೆನಿಸಿದವರು ತಮ್ಮ ನಾಲಿಗೆಗಳನ್ನು ಹದ್ದಿನಲ್ಲಿರಿಸಿಕೊಂಡಿಲ್ಲ. ಕಾರಣ ಅವರ ಹೃದಯ ದ್ವೇಷರೋಷಗಳಿಂದ ತುಂಬಿಹೋಗಿದೆ.

ಖಂಡಿತವಾಗಿಯೂ ಇದು ಪ್ರಜಾತಂತ್ರವನ್ನು ಕಾಪಾಡುವ, ಬೆಳೆಸುವ ದಾರಿಯಲ್ಲ. ಪ್ರತಿಪಕ್ಷಗಳ ಜನರನ್ನು ವೈರಿಗಳೆಂದೇಕೆ ಭಾವಿಸಿ, ವರ್ತಿಸಬೇಕು? ಇದರಿಂದ ದೇಶಸೇವೆ ಮಾಡಿದಂತಾಗಲಿಲ್ಲ. ಬೈದು ಗೆದ್ದವರಿಲ್ಲ; ಸೋತು ಗೆದ್ದವರನೇಕರಿದ್ದಾರೆ.

ಮನಸ್ಸು, ಮಾತು, ಕೆಲಸ, ಎಲ್ಲ ಹಿಂಸಾಮಯ. ತತ್ತ್ವಗಳೆಲ್ಲ 'ಷಂಡಮಾರುತ'ಕ್ಕೆ ಸಿಕ್ಕಿ (ಚಂಡಮಾರುತನಲ್ಲ) ಕಾಡು ಪಾಲಾದುವು. ಒಟ್ಟಿನಲ್ಲಿ ಮಧ್ಯಕಾಲೀನ ಚುನಾವಣೆಗಳ ನೆಪದಲ್ಲಿ ರಾಷ್ಟ್ರದ ಎಲ್ಲ ರಾಜಕೀಯ ಪಕ್ಷಗಳೂ 'ನಾವು ನಮ್ಮ' ಕಾಲ ಮೇಲೇ ನಿಂತು, ಗೆದ್ದು, ತತ್ತ್ವಪರಿಪಾಲಕರಾಗಲಾರೆವು" ಎಂದು ತಮ್ಮ ನಡತೆಯಿಂದ ಸ್ಪಷ್ಟಪಡಿಸಿದರು. ಇನ್ನೇನು ಒಂದರೆಡು ವಾರಗಳೊಳಗಾಗಿ ನವದೆಹಲಿಯ ಮಂತ್ರಿಮಂಡಲ ನಿರ್ಮಾಣವಾಗಿ, ಆಡಳಿತ ರೂಪುಗೊಳ್ಳಬೇಕಾಗಿದೆ.

ನವದೆಹಲಿಯ ರಕ್ತದುರ್ಗದ ಮೇಲೆ ಶ್ರೀ ನಿಜಲಿಂಗಪ್ಪನವರು ತಮ್ಮ 'ಚರಕಾ-ಬುರುಕೀ' ಧ್ವಜಹಾರಿಸುವರೋ, ಇಲ್ಲ ಶ್ರೀ ಜಗಜೀವನರಾಂರವರು ತಮ್ಮ 'ಹಸು ಕರು' ಧ್ವಜ ಹಾರಿಸುವರೋ, ನೋಡಬೇಕು. ಇವರಿಬ್ಬರಲ್ಲಿ ಯಾರೇ ಧ್ವಜ ಹಾರಿಸಲಿ; ಆ ಧ್ವಜದಡಿ ನಿಲ್ಲುವವರು ನಾನಾ (ಪಕ್ಷಗಳ) ಗೋತ್ರ ಸೂತ್ರಗಳ ಜನ. ಈ 'ಸಮುದ್ರಕುಲ'ದ ಶಾಸಕರು 'ಲೋಕಸಭೆ'ಯನ್ನು ಯಾವ ರೀತಿ ಪರಿವರ್ತನಗೊಳಿಸಬಲ್ಲರು? ಪಕ್ಷಗಳ ವರ್ತನೆ ಹೇಗೆ ಇರಲಿ, ಮಧ್ಯಕಾಲದ ಚುನಾವಣೆಗಳು 'ಮಧ್ಯಮ ವರ್ಗದ ವಿದ್ಯಾವಂತ ಜನರನ್ನು ಹೊಡೆದೆಬ್ಬಿಸಿದುವು. ಇದೊಂದು ಪರಮ ಲಾಭ ರಾಷ್ಟ್ರಕ್ಕೆ.

## 'ಭಾರತ ಮರ್ಯಾದೆ' ರಕ್ಷಕರು

ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಅಪೇಕ್ಷಿಸಿ ಅದಕ್ಕಾಗಿ ಹೊಡೆದಾಡಿ, ಕಡೆಗೆ ಅದನ್ನು ಸಾಧಿಸಿದ್ದು ಯಾತಕ್ಕೆ? ಈ ಪ್ರಶ್ನೆಗೆ ಉತ್ತರಕೊಡುವ ಕಾಲವೀಗ ಬಂದಿದೆ. ಅಶೋಕ ಪಿತಾಮಹ, ಚಂದ್ರಗುಪ್ತನ ಕಾಲಕ್ಕೆ ಹಿಂದೆ ಭಾರತದ ಜೀವನವೆಲ್ಲ ಛಿದ್ರವಾಗಿತ್ತೆಂದೂ, 'ಧರ್ಮಗ್ಲಾನಿ'ಯುಂಟಾಗಿತ್ತೆಂದೂ ಸ್ಪಷ್ಟವಾಗುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರವನ್ನೋದುವವರಿಗೆ ನಿಜವಾಗಿಯೂ ಆ ಮಹಾನುಭಾವ ಮಾಡಿದ್ದೇನೆಂಬುದು ಅರ್ಥವಾದೀತು. ಈ ಕಾಲದ ಮಾತಿನಿಂದ ಹೇಳಬಹುದಾದ ಕೌಟಿಲ್ಯ ಭಾರತಕ್ಕೆ ಹೊಸ ಸಂವಿಧಾನವೊಂದನ್ನು ಕೊಟ್ಟ ಈ ಮಾತನ್ನು ಕೇಳಿ ಕೆಲವರು ಆಶ್ಚರ್ಯಪಡಬಹುದು. ಆಶ್ಚರ್ಯಕ್ಕೆ ಕಾರಣ ಅಜ್ಞಾನ

ಕೌಟಿಲ್ಯನು ಕೊಟ್ಟ 'ಭಾರತ ಸಂವಿಧಾನ'ದ ಪರಮಾರ್ಥವಿದು.

"ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂಚಹಿತೇಹಿತಂ
ನಾತ್ಮಪ್ರಿಯಂಹಿತಂ ರಾಜ್ಞಃ ಪ್ರಜಾನಾಂತು ಪ್ರಿಯಂ ಹಿತಂ"

ನಾವೀಗ ರಚಿಸಿರುವ 'ಸಂವಿಧಾನ' ಪ್ರಜೆಗಳ ಸುಖವನ್ನೂ, ಸಾಧಿಸುತ್ತಿಲ್ಲ; ಹಿತವನ್ನೂ ಸಾಧಿಸುತ್ತಿಲ್ಲ. ಚತುರ ರಾಜಕಾರಣಿಗಳ ಸ್ವಾರ್ಥವನ್ನು ಪೂರೈಸುತ್ತಿದೆ. ಈ ದೃಷ್ಟಿಯಿಂದ 'ಸಂವಿಧಾನ' ಪರಿವರ್ತನವಾಗಬೇಕಾಗಿದೆ.

ಇಂದಿನ 'ಭಾರತ ಸಂವಿಧಾನ' ಪಾಶ್ಚಾತ್ಯ ಜೀವನದ ಅನುಕರಣ. ಕೌಟಿಲ್ಯ ತನ್ನ ಕಾಲದಲ್ಲಿ 'ಆರ್ಯಮರ್ಯಾದೆ'ಯನ್ನು ರಕ್ಷಿಸಿದ. ನಾವೀಗ ಭಾರತ ಮರ್ಯಾದೆಯನ್ನು ರಕ್ಷಿಸಬೇಕಾಗಿದೆ.

'ಚಂದ್ರಗುಪ್ತ ಪೂರ್ವ' ಭಾರತದಲ್ಲಿ ಆರ್ಯಸಂಸ್ಕೃತಿ ನಾಶವಾಗಿತ್ತು. ಕೌಟಿಲ್ಯ 'ಆರ್ಯ ಮರ್ಯಾದೆ'ಯನ್ನು ಪುನರುಜ್ಜೀವನಗೊಳಿಸಿದ. ಇಂದು 'ಭಾರತ ಸಂಸ್ಕೃತಿ' ನಾಶವಾಗುತ್ತಿದೆ. ನಾವೀಗ ಈ ಪವಿತ್ರ, ಮಾನವಕುಲ ಸಂಜೀವಿನಿ, ಭಾರತ ಸಂಸ್ಕೃತಿಯನ್ನು ರಕ್ಷಿಸಬೇಕಾಗಿದೆ. ಇದು ಭಾರತದ ಇಂದಿನ ಮಹಾಧರ್ಮ.

ಸ್ವಾತಂತ್ರ್ಯ ಸಾಧಿಸಿದ ಅನಂತರ ರಾಷ್ಟ್ರದಲ್ಲೇ ಶಾಲೆಗಳೂ, ಕಾಲೇಜುಗಳೂ, ಬೆಳೆಯುತ್ತಿವೆ. ಶಾಲೆಗಳೂ, ಕಾಲೇಜುಗಳೂ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ತುಂಬಿ ಹರಿಯುತ್ತಿವೆ. ದಿನ ಬೆಳಗಾದರೆ ಒಂದು ಹೊಸ ವಿಶ್ವವಿದ್ಯಾನಿಲಯ! ಇವು ಸಾಲದೆಂದು ಬೆಳಿಗ್ಗೆ, ಸಂಜೆ, ರಾತ್ರಿ ಸಹ, ಶಾಲಾಕಾಲೇಜು ವರ್ಗಗಳ ಶಿಕ್ಷಣ ಕಾರ್ಯ ನಡೆಯುತ್ತಿದೆ. ವರ್ಷ ವರ್ಷವೂ ಓದುವವರ ಸಂಖ್ಯೆ ಏರುತ್ತಿದೆ. ಬಾಲಕರಿಗೆ ಸಮಸಮನಾಗಿ ಬಾಲಕಿಯರೂ, ಶಾಲಾಕಾಲೇಜುಗಳ ಪ್ರವೇಶ ಮಾಡಿ, ಓದಿ, ಪದವೀಧರರಾಗುತ್ತಿದ್ದಾರೆ. ಇದೆಲ್ಲ ನಮ್ಮ ಸಂತೋಷಕ್ಕೆ ಕಾರಣವೆಂಬುದೇನೋ ನಿಜ. ಆದರೆ ಈ ವಿದ್ಯಾಪ್ರಗತಿಯು ಸಮಾಜದ ಮೇಲೆ ಉಂಟು ಮಾಡುತ್ತಿರುವ ಪರಿಣಾಮ ಕುರಿತು ಹೆಚ್ಚಾಗಿ ಯಾರೂ ಆಲೋಚನೆ ಮಾಡುತ್ತಿಲ್ಲ. ಸಮಾಜದ ಮೇಲಿನ ಪರಿಣಾಮ ಹಾಗಿರಲಿ ಸಂಸಾರಗಳ ಮೇಲಾಗುತ್ತಿರುವ 'ಪ್ರಚಂಡ ಪರಿಣಾಮ'ವೇನೆಂಬುದನ್ನು ತಿಳಿದುಕೊಳ್ಳಲು ಅನೇಕರು ಹಿಂಜರಿಯುತ್ತಿದ್ದಾರೆ.

ಪರಿಣಾಮ ಹಿತವೋ-ಅಹಿತವೋ, ಲಾಭಕಾರಕವೋ-ನಷ್ಟದಾಯಕವೋ, ಅದು ಪ್ರಶ್ನೆಯಲ್ಲ; ವಿದ್ಯಾವಂತರಾದವರೆಲ್ಲ ಒಂದಲ್ಲ ಒಂದು ಉದ್ಯೋಗಕ್ಕೆ ಸೇರಿ, ಸಂಪಾದನೆ ಮಾಡಬೇಕೆಂಬ ಆಸೆ ಬಲವಾಗಿದೆ. ಕೈತುಂಬ ಸಂಬಳ, ನಿವೃತ್ತರಾದ ಮೇಲೆ 'ಪೆನ್‌ಷನ್' ಇತರ ಸಂಭಾವನೆಗಳು, ಸೌಕರ್ಯಗಳು ಇವೆಲ್ಲ ಸರಕಾರಿ ಉದ್ಯೋಗಗಳಲ್ಲಿ ಮಾತ್ರ ಸಾಧ್ಯ. ಆದಕಾರಣ ಪ್ರತಿಯೊಬ್ಬರೂ ಸರಕಾರದ ಅಧಿಕಾರವನ್ನು, ಸರಕಾರಿ ಉದ್ಯೋಗವನ್ನು ಅಪೇಕ್ಷಿಸುತ್ತಾರೆ. ಗಂಡಸರೇ ಅಲ್ಲ, ಹೆಂಗಸರೂ ಅಪೇಕ್ಷಿಸುತ್ತಾರೆ. ಎಲ್ಲ ಉದ್ಯೋಗ ಕ್ಷೇತ್ರಗಳಲ್ಲೂ ಇಂದು ಗಂಡಸರಿಗೂ ಹೆಂಗಸರಿಗೂ ಪೈಪೋಟಿ ಆರಂಭವಾಗಿದೆ. ಎಲ್ಲ ಆಡಳಿತ ಶಾಖೆಗಳಲ್ಲೂ ಈ ಪೈಪೋಟಿ ನಡೆಯುತ್ತಿದೆ. ಎಲ್ಲ ಹಂತಗಳಲ್ಲೂ ನಡೆಯುತ್ತಿದೆ.

ಇದು ಸಾಂಸಾರಿಕ ಜೀವನಕ್ಕೆ, ಸುಖ-ಸಂತೋಷ ಜೀವನಕ್ಕೆ ಹಿತಕಾರಿಯೆ - ಎಂಬುದನ್ನು ಕುರಿತೂ ಪ್ರತಿಯೊಬ್ಬ ಗಂಡ, ಪ್ರತಿಯೊಬ್ಬ ಹೆಂಡತಿ, ನಿಸ್ಸಂಕೋಚವಾಗಿ, ವಿಚಾರ ಮಾಡಬೇಕು.

ಇನ್ನೊಂದು ದೃಷ್ಟಿಯಿಂದಲೂ ಸಮಾಜ ಹಿತೈಷಿಗಳೆಲ್ಲ ಈ ಸಾಮಾಜಿಕ 'ವಿಪ್ಲವ' ಕುರಿತು ವಿಚಾರ ಮಾಡಬೇಕು. ಇಂದು ಮಕ್ಕಳು ತಂದೆ-ತಾಯಿಗಳ ಲಾಲನೆ-ಪಾಲನೆಯಲ್ಲಿಲ್ಲ. ಅವರ ವಾತ್ಸಲ್ಯ-ಸಂಸ್ಕಾರಗಳ ಪ್ರಭಾವದಿಂದ ಅವರು ವಂಚಿತರಾಗಿದ್ದಾರೆ. ಇಂದಿನ ಬಾಲಕ-ಬಾಲಕಿಯರಲ್ಲಿ ಕಂಡುಬರುತ್ತಿರುವ ಅವಿಧೇಯತೆ, ಅವಿನಯ, ಸ್ವಚ್ಛಂದ ವೃತ್ತಿ, ಭೋಗ ಜೀವನಾಪೇಕ್ಷೆ, ನಾಸ್ತಿಕ್ಯ - ಇವಕ್ಕೆಲ್ಲ ಕಾರಣ ಬಾಲ್ಯದಲ್ಲಿ ಮಕ್ಕಳಿಗೆ ಇಂದು ಅಭಾವವಾಗಿರುವ ತಾಯಿಯ ಮಡಿಲು, ತೊಟ್ಟಿಲ ತೂಗು, ತಂದೆ-ತಾಯಿಗಳ ವಾತ್ಸಲ್ಯಾಮೃತ.

ಹೆಚ್ಚು ವಿವರಣೆ ಬೇಡ. ಹೆಣ್ಣುಮಕ್ಕಳು ಸಂಪಾದನೆಯೊಂದನ್ನೇ ಲಕ್ಷ್ಯದಲ್ಲಿಟ್ಟುಕೊಳ್ಳಬೇಕೆ? ಇಲ್ಲ ಸುಖಸಂಸಾರಭಾಗ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕೆ? ಇದನ್ನು ಕುರಿತು ಆಲೋಚನೆ ಮಾಡಬೇಕು, ಹೆಣ್ಣುಮಕ್ಕಳು ವಿದ್ಯಾವಂತರಾಗಲಿ; ಆಗಬೇಕು. ಆದರೆ ಉದ್ಯೋಗ ಸಂಪಾದನೆಯೊಂದೇ ವಿದ್ಯಾರ್ಜನೆಯ ಪರಮಾದರ್ಶವೆ? ವಿದ್ಯಾರ್ಜನೆ ಮಾಡಿದ ಹೆಣ್ಣುಮಕ್ಕಳು ಪದವೀಧರರಾದ ಹೆಣ್ಣುಮಕ್ಕಳು 'ಗಂಡಹೆಂಡರಿಬ್ಬರೂ ಸಂಪಾದಿಸಿದರೆ ಸುಖಜೀವನ ನಡೆಸಬಹುದು' ಎಂಬ ಮೋಹಕ್ಕೊಳಗಾಗಿದ್ದಾರೆ. 'ಸುಖಜೀವನ'ವೇನೆಂಬುದನ್ನವರು ಸರಿಯಾಗಿ ತಿಳಿದುಕೊಂಡಾಗ ಸತಿ-ಪತಿಗಳ ಜೀವನದ ಪವಿತ್ರತೆ ಅರ್ಥವಾಗುತ್ತದೆ. ಸಂಸಾರ ಸುಖವೇನೆಂಬುದು ಅರ್ಥವಾಗುತ್ತದೆ. ◆

## ೩೦. ಚಿನ್ನದ ಹಬ್ಬದ ಹೊಸ್ತಿಲಲ್ಲಿ ಪ್ರಬುದ್ಧ ಕರ್ಣಾಟಕ
### (೧೯೬೯ರಲ್ಲಿ, ಅದರ ವಿಜ್ಞಾನದ ವಿಶೇಷ ಸಂಚಿಕೆಗೆ ಬರೆದ ಸಂಪಾದಕೀಯ)

✍ ಪ್ರೊ. ದೇ.ಜ.ಗೌ.

ಒಂದು ಪತ್ರಿಕೆ ಪ್ರಬಲ ಬೋಧನಮಾಧ್ಯಮವಾಗಿರುವಂತೆ, ನವೋನವವಾದ ಚಲನ ವಿಶ್ವಕೋಶವಾಗಿರುವಂತೆ, ಸಾಮಾಜಿಕ ರಾಜಕೀಯ ವಿಚಾರಗಳ ಸಮರ್ಥ ಪ್ರಸಾರ ಸಾಧನವಾಗಿರುವಂತೆ, ತನ್ನ ನಾಡಿನ ಭಾಷಾ ಸಾಹಿತ್ಯಗಳ ತುಂಬು ಬೆಳವಣಿಗೆಗೆ ಪ್ರೇರಕ ಹಾಗೂ ಆಶ್ರಯ ಶಕ್ತಿಯಾಗಿರುತ್ತದೆ. ಆಂಗ್ಲ ಸಾಹಿತ್ಯದ ಇತಿಹಾಸ ಬಲ್ಲವರಿಗೆ ಈ ಮಾತು ಹೊಸದಲ್ಲ.

ಸಮಕಾಲೀನ ರಾಜಕೀಯ ಸಾಮಾಜಿಕ ವಿಚಾರವೇದಿಕೆಗಳಾಗಿ ಉಗಮಗೊಂಡ ದೈನಿಕ ವಾರಿಕ ಮಾಸಿಕಗಳು ಸಾಹಿತ್ಯದ ಹಲವು ಪ್ರಕಾರಗಳನ್ನು ಪೋಷಿಸಿ ಬೆಳೆಸಿ, ಅಜರಾಮರವಾಗುಳಿದಿವೆ. ಅವುಗಳಲ್ಲಿ ಕೆಲವು ಬಹು ಬೇಗನೆ ಅಂತ್ಯಗೊಂಡರೂ ಮಹಾ ಸಾಹಿತಿಗಳ ಪ್ರತಿಭಾ ಸಂಸ್ಪರ್ಶದಿಂದ ಕೀರ್ತಿಭಾಜನವಾಗಿವೆ. ಅನೇಕ ಕವಿಗಳನ್ನು ಸೃಷ್ಟಿಸಿ, ಪೋಷಿಸಿ, ಪ್ರೋತ್ಸಾಹಿಸಿ, ಮಗನ ಹೆಸರಿನಿಂದ ತಂದೆ ಬೆಳಕಿಗೆ ಬರುವಂತೆ, ತಾವೇ ಹೊತ್ತು ಸಾಕಿದ ಕವಿಗಳ ಹೆಗ್ಗಳಿಕೆಯ ಕಾರಣವಾಗಿ ಆ ಪತ್ರಿಕೆಗಳು ಜನಮನದ ತಳದಲ್ಲಿ ಅಚ್ಚೊತ್ತಿ ನಿಂತಿವೆ. ೧೮ ಮತ್ತು ೧೯ನೆಯ ಶತಮಾನದ ಬ್ರಿಟನ್ನಿನಲ್ಲಿ ಹುಟ್ಟಿದ ಪತ್ರಿಕೆಗಳ ಸಂಖ್ಯೆ ವಿಸ್ಮಯಕಾರಿಯಾದದ್ದು. ದಿ ಬೀ, ದಿ ಫಿಮೇಲ್, ಸ್ಪೆಕ್ಟೇಟರ್ (೧೭೪೪-೪೬), ದಿ ಪ್ಯಾರೆಟ್ (೧೭೪೬) ಮೊದಲಾದ ಕೆಲವು ಪತ್ರಿಕೆಗಳು ಕೆಲವು ತಿಂಗಳಲ್ಲಿಯೇ ಅವಸಾನಹೊಂದಿದ್ದಾದರೆ, ಲಂಡನ್ ಮ್ಯಾಗಜೈನ್, ಕ್ವಾರ್ಟರ್ಲಿ ರೆವ್ಯೂ ಮೊದಲಾದುವು ಹಲವಾರು ವರ್ಷಗಳು ನಡೆದು ಆಂಗ್ಲರ ಬದುಕಿನ ಮೇಲೆ ಅಪಾರ ಪ್ರಭಾವ ಬೀರಿವೆ. ಅಡಿಸನ್, ಸ್ಟೀಲ್, ಸ್ವಿಫ್ಟ್ ಮೊದಲಾದ ಮಹಾ ಸಾಹಿತಿಗಳ ಸಂಪರ್ಕದಿಂದ ಟ್ಯಾಟ್ಲರ್ ಮತ್ತು ಸ್ಪೆಕ್ಟೇಟರ್ ಪತ್ರಿಕೆಗಳು ಮಾನವ ಸ್ಮೃತಿಪಟಲದಲ್ಲಿ ರಿಂಗಣಗುಣಿಯುವಂತಾಗಿದೆ. ಲೇ ಹಂಟ್, ಲೊಕಾರ್ಥ್ ಮತ್ತು ಸ್ಯಾಮುಯಲ್ ಜಾನ್‌ಸನ್‌ರು ಎಕ್ಸಾಮಿನರ್, ಕ್ವಾರ್ಟರ್ಲಿ ರೆವ್ಯೂ, ರ್‍ಯಾಂಬ್ಲರ್ ಮೊದಲಾದ ಪತ್ರಿಕೆಗಳನ್ನು ಸ್ವತಃ ಸ್ಥಾಪಿಸಿ, ಸಂಪಾದಿಸಿ, ತಮ್ಮ ಲೇಖನಗಳಿಂದ ಪೋಷಿಸಿದ್ದುಂಟು. ಈ ಅಪಾರ ಸಂಖ್ಯೆಯ ಪತ್ರಿಕೆಗಳು ಆ ದೇಶದಲ್ಲಿ ತಲೆಯೆತ್ತದಿದ್ದರೆ ಅಲ್ಲಿಯ ಮಾನವಪ್ರತಿಭೆ ಬತ್ತಿ ಹೋಗುತ್ತಿತ್ತು, ಕಾವ್ಯಸ್ಫೂರ್ತಿ ಇಂಗಿ ಹೋಗುತ್ತಿತ್ತು.

ಕನ್ನಡ ನಾಡಿನ ಅನೇಕ ಪತ್ರಿಕೆಗಳು ಇಂಥವೇ ಮಹತ್ಕಾರ್ಯವನ್ನು ಅಲ್ಲಿಯಷ್ಟೇ ಶ್ರದ್ಧೆಯಿಂದ ಸುಸಮರ್ಥವಾಗಿ ಸಾಧಿಸುತ್ತಿವೆ. ಅವುಗಳಿಗೆಲ್ಲ ಪ್ರಬುದ್ಧ ಕರ್ಣಾಟಕ ನಾಯಕಸ್ಥಾನದಲ್ಲಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಅದು ಇಷ್ಟು ಹೊರವಾಗಿ, ಇಷ್ಟು ಕೀರ್ತಿಯುತವಾಗಿ, ಇಷ್ಟು ಕಾಲ ಬೆಳೆದು, ನಾಡಿನ ಸಜ್ಜನರು ಕೈಗೆತ್ತಿಕೊಂಡು ಕಣ್ಣೊತ್ತಿಕೊಂಡು ಮನಮನಗಳಲ್ಲಿ ಮೆರೆಸುತ್ತಾರೆಂಬ ಕಲ್ಪನೆ ಅದನ್ನು ಐವತ್ತು ವರ್ಷಗಳ ಹಿಂದೆ ಹುಟ್ಟು ಹಾಕಿದವರ ಕನಸುಮನಸುಗಳಿಗೆ ಬಂದಿರಲಿಲ್ಲವೆಂದು ತೋರುತ್ತದೆ. ದಿನ ಕಳೆದಂತೆಲ್ಲ ಮೈತುಂಬಿಕೊಳ್ಳುತ್ತ ತೇಜೋವಂತವಾಗುತ್ತ, ಬಲಾಢ್ಯವಾಗುತ್ತ, ಕಾಲಕ್ಕೆ ಸರಿಯಾಗಿ ಗ್ರಾಹಕರ ಕೈಯಲ್ಲಿ ನಲಿದಾಡುತ್ತ, ವಿಶ್ವವಿದ್ಯಾನಿಲಯದ ಹೆಮ್ಮೆಯಾಗಿ, ಬೆಳಕಾಗಿ, ಗಂಗೆಯಾಗಿ, ಕವಿಗಳ ಕಾಮಧೇನುವಾಗಿ, ನಾಡಿನ ಕಲ್ಪವೃಕ್ಷವಾಗಿ, ಕನ್ನಡದ ಶಕ್ತಿಯಾಗಿ ಮೆರೆದಾಡುತ್ತಿರುವ ಈ ಪತ್ರಿಕೆಯನ್ನು ಯಾವ ಶುಭಮುಹೂರ್ತದಲ್ಲಿ ಪ್ರತಿಷ್ಠಾಪಿಸಿದರೊ, ಆ ಪ್ರತಿಷ್ಠಾಪಿಸಿದ ದಿ|| ಪ್ರೊ. ಕೃಷ್ಣಶಾಸ್ತ್ರಿಗಳು ಧನ್ಯರು. ಆಗಾಗ್ಗೆ ನಾಡಿನ ಏಳ್ಗೆಗಾಗಿ ಸಂತರು ಪ್ರವಾದಿಗಳು ಮಹಾತ್ಮರು ಅವತರಿಸುವಂತೆ ಪತ್ರಿಕೆಗಳೂ ಜನ್ಮಧಾರಣೆ ಮಾಡುತ್ತವೆ. ನಿಜವಾದ ಪತ್ರಿಕೆ ನಾಡಿನ ಅಗ್ರಶಕ್ತಿ. ಕನ್ನಡ ಸಾಹಿತ್ಯದ ನವೋದಯಕ್ಕೆ ಶ್ರೀಯವರು ಕಾರಣರಾದಂತೆ ಈ ಪತ್ರಿಕೆಯೂ ಸಮಾನ ಕಾರಣವಾಯಿತೆಂದರೆ ತಪ್ಪಾಗಲಾರದು. ಅದು ಶ್ರೀಯವರ ಕಾರುಣ್ಯದ ತೊಟ್ಟಿಲಲ್ಲಿ, ಕುವೆಂಪು ಅವರ ಪ್ರತಿಭಾರಕ್ಷೆಯಲ್ಲಿ, ವಿ.ಸೀ., ತೀ.ನಂ.ಶ್ರೀ, ದೊ.ಲ.ನ ಅವರ ವಿದ್ವತ್ಸಂಪರ್ಕದಲ್ಲಿ ಅದಮ್ಯ ಶಕ್ತಿಯಾಗಿ ಬೆಳೆದಿದೆ. ಬೇಂದ್ರೆ, ಮಾಸ್ತಿ, ಪೈ, ಪುತಿನ, ಶಿವರುದ್ರಪ್ಪ ಮೊದಲಾದ ಹಿರಿಯ, ಕಿರಿಯ ಕವಿಗಳ ಹರಕೆ ಹಾರೈಕೆಗಳಿಂದ ಅದು ವಿಶ್ವಕುಟುಂಬಿಯಾಗಿ, ಅನೇಕ ಕಿರಿಯ ಪತ್ರಿಕೆಗಳಿಗೆ ಮಾರ್ಗದರ್ಶಕವಾಗಿ, ಮಾದರಿಯಾಗಿ ಶೋಭಿಸುತ್ತಿದೆ. ಒಂದು ರೀತಿಯಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಚರಿತ್ರೆಯೆಂದರೆ ಪ್ರಬುದ್ಧ ಕರ್ಣಾಟಕದ ಚರಿತ್ರೆಯೆಂದೇ ಹೇಳಬಹುದು.

ಪ್ರಾರಂಭದಲ್ಲಿ ಕಿರುತೊರೆಯಾಗಿ ಕಾಣಿಸಿಕೊಂಡ ಈ ಪತ್ರಿಕೆ ಇಂದು ಮಹಾಪೂರವಾಗಿ ಪರಿಣಮಿಸಿದೆ. ಅದರ ಮೊದಲ ಸಂಪುಟ ೧೨೦ ಪುಟಗಳ ಗಾತ್ರದ್ದಾಗಿದ್ದು ಐವತ್ತನೆಯ ಸಂಪುಟ ಅದರ ಹತ್ತರಷ್ಟು ಬೆಳೆದಿದೆ. ಈ ವರೆಗಿನ ಅದರ ಒಟ್ಟು ಪುಟಸಂಖ್ಯೆ ೩೩೧೫೦ಕ್ಕೆ ಮಿಕ್ಕಿದ್ದು, ಒಂದೊಂದು ಸಂಪುಟದ ಸರಾಸರಿ ಪುಟ ಸಂಖ್ಯೆ ಸುಮಾರು ೬೬೩. ಸುಮಾರು ೫೬೦ ಲೇಖಕರು ಹೆಚ್ಚು ಕಡಿಮೆ ೨೯೫೯ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲಿ ೨೦೮ ಸಾಹಿತ್ಯೇತರ ಲೇಖನಗಳು. ಅವುಗಳ ಗಾತ್ರ ೩೨೯೦ ಪುಟಗಳಷ್ಟಾಗುತ್ತದೆ. ಈ ಅಂಕಿ ಅಂಶಗಳನ್ನು ಗಮನಿಸಿದಾಗ ಅದು ಸಾಹಿತ್ಯಕ್ಷೇತ್ರದಲ್ಲಿ ಮಾತ್ರವಲ್ಲ, ಸಾಹಿತ್ಯೇತರ ಕ್ಷೇತ್ರಗಳಲ್ಲಿಯೂ ಕ್ರಾಂತಿಯನ್ನುಂಟುಮಾಡಿದೆಯೆಂದು ಹೇಳಬಹುದು. ಅದು ಸಾಹಿತ್ಯಭಾಷೆಯನ್ನು ಸೃಷ್ಟಿಸಿದಂತೆಯೇ ವೈಜ್ಞಾನಿಕ ಭಾಷೆಯನ್ನೂ ಸಾಕಷ್ಟು ಪ್ರಮಾಣದಲ್ಲಿ ನಿರ್ಮಿಸಿದೆ. ಅದು ಸಾಧಿಸಿರುವ ಸಿದ್ಧಿ ವಿಕ್ರಮಗಳ ಕಡೆಗೆ ಕಣ್ಣು ಹಾಯಿಸಿದಾಗ ನಾವು ಮೂಕ ವಿಸ್ಮಿತರಾಗುತ್ತೇವೆ. ಈ ಒಂದು ಪತ್ರಿಕೆ ನಡೆಸಿರುವ ವಿಕ್ರಮವನ್ನು ಮೇಲೆ ಸೂಚಿಸಿರುವ ಯಾವ ಆಂಗ್ಲ ಪತ್ರಿಕೆಯೂ ಸಾಧಿಸಿಲ್ಲವೆಂದೇ ಹೇಳಬಹುದು. ಇಷ್ಟೆಲ್ಲ ಸಾಧನೆಗೆ ಅರ್ಥಾಭಿಲಾಷೆಯಿಲ್ಲದೆ ಸಕಾಲಕ್ಕೆ ಸತ್ವಪೂರ್ಣವಾದ ಸಾಮಗ್ರಿಯನ್ನೊದಗಿಸುತ್ತಿರುವ ಲೇಖಕರೆಷ್ಟು ಕಾರಣರೊ, ಶ್ರದ್ಧಾನಿಷ್ಠೆಗಳಿಂದ ಶ್ರಮವನ್ನು ಲೆಕ್ಕಿಸದೆ ಸತತ ದುಡಿಯುತ್ತಿರುವ ಸಂಪಾದಕರುಗಳೂ ಅಷ್ಟೇ ಕಾರಣರು. ಈ ವರೆಗೆ ೫ ಮಂದಿ ಪ್ರಧಾನ ಸಂಪಾದಕರೂ ೧೪ ಮಂದಿ ಸಂಪಾದಕರೂ ಇದರ ಶ್ರೇಯೋಭಿವೃದ್ಧಿಗಾಗಿ ಅಹರ್ನಿಶಿ ಶ್ರಮಿಸಿದ್ದಾರೆ.

ಇಂಥದೊಂದು ಪತ್ರಿಕೆ ನಡೆಸುವುದು ಸುಲಭದ ಕೆಲಸವಲ್ಲ. ಲೇಖನ ಸಂಪಾದನೆಯೇ ಪರಮ ಸಾಹಸದ ಕಾರ್ಯವಾಗುತ್ತದೆ. ಪತ್ರಿಕೆಯ ಮಟ್ಟ ಇಳಿದು ಹೋಗದಂತೆ, ಲೇಖಕರ ಮನಸ್ಸಿಗೆ ನೋವಾಗದಂತೆ, ಎರಡನ್ನೂ ತೂಗಿಸುವ ಕಾರ್ಯ ಕಷ್ಟಸಾಧ್ಯವಾದದ್ದು. ದೊಡ್ಡವರಿಗೆ ಪುರಸತ್ತಿಲ್ಲ, ಎಳೆಯರಿಗೆ ತಾಳ್ಮೆಯಿಲ್ಲ; ಒಳ್ಳೆಯ ಲೇಖನ ಬರುವಂತಿಲ್ಲ, ಬಂದದ್ದನ್ನೆಲ್ಲ ಹಾಕುವಂತಿಲ್ಲ. ಹಾಕದಿದ್ದರೆ ನಿಂದೆ ತಪ್ಪುವಂತಿಲ್ಲ. ಕಾಗದ ಬರೆದರೆ ಉತ್ತರವಿಲ್ಲ. ಮನೆಗೆ ಹೋದರೆ ಸಬೂಬು ನೆಪಗಳಿಗೆ ನಿಲುಗಡೆಯಿಲ್ಲ. ಬಂದ ಹಸಿ ಲೇಖನವನ್ನು ನೇರಾಗಿ ಅಚ್ಚಿನ ಮನೆಗೆ ರವಾನಿಸುವಂತಿಲ್ಲ. ತಿದ್ದಿದರೆ ವೈಗುಳ, ತಿದ್ದದಿದ್ದರೆ ಆಕುಲ. ಕೆಲವರ ಕಾಕಲಿಪಿಯೊ, ಬ್ರಹ್ಮನೇ ಕಾಪಾಡಬೇಕು! ವಿವಿಧ ಮೋಡಿಗಳನ್ನೋದುವಾಗ ಕಣ್ಣಿಗೆ ಶ್ರಮ, ಮನಸ್ಸಿಗೆ ತ್ರಾಸ. ಕೊನೆಗೆ ಅಚ್ಚಿನ ಮನೆಯಲ್ಲಿ ಚತುರೋಪಾಯಗಳನ್ನೂ ಕಾರ್ಯಗತಗೊಳಿಸಬೇಕು; ಇಲ್ಲವಾದರೆ ಪತ್ರಿಕೆ ಬೆಳಕು ಕಾಣುವಂತಿಲ್ಲ. ಪ್ರೂಫು ತಿದ್ದುವ ಕೆಲಸ ಹಗೆಗೂ ಬೇಡ; ತಿದ್ದದೆ ಉಪಾಯವಿಲ್ಲ. ಇದೆಲ್ಲ ಹೆಚ್ಚು ಕಡಿಮೆ ಬಿಟ್ಟಿ ಕೆಲಸ! ಇದನ್ನೇ ಕೃಷ್ಣಶಾಸ್ತ್ರಿಗಳು ಮಾಡಿದ್ದು; ಈಚಿನವರಿಗೂ ಅದೇ ಪ್ರಾಪ್ತಿ.

ಮೊದಲು ಸರ್ಕಾರ, ಆಮೇಲೆ ವಿಶ್ವವಿದ್ಯಾನಿಲಯ ಧಾರಾಳವಾಗಿ ದ್ರವ್ಯ ಸಹಾಯ ನೀಡಿದುವು. ಪತ್ರಿಕೆಗೆ ತಗಲುವ ವಾರ್ಷಿಕ ವೆಚ್ಚ ಹನ್ನೆರಡು-ಹದಿಮೂರು ರೂಪಾಯಿಯಾದರೆ, ಅದರ ವಾರ್ಷಿಕ ಚಂದಾ ಹಣ ಕೇವಲ ನಾಲ್ಕು-ಐದು ರೂಪಾಯಿ. ಅದರ ಚಂದಾದಾರರ ಸಂಖ್ಯೆ? ಎರಡೂವರೆ ಕೋಟಿ ಜನರಿರುವ ರಾಜ್ಯದಲ್ಲಿ ಆ ಸಂಖ್ಯೆ ಹೇಳಲು ನಾಚಿಕೆಯಾಗುತ್ತದೆ. ಇದು ಮುಂದುವರಿದ ಜನರ ಲಕ್ಷಣವಲ್ಲ. ಕಾಡುಜನರಾದರೆ ಇವೆಲ್ಲ ಬೇಕಿಲ್ಲ. ಹೇಳಿ ಪ್ರಯೋಜನವಿಲ್ಲ. ಎಂಥೆಂಥದಕ್ಕೊ ಖರ್ಚು ಮಾಡುತ್ತೇವೆ-ಸಿನಿಮಾ, ಹೋಟೆಲು, ಜೂಜು, ಷೋಕಿ ಇತ್ಯಾದಿ. ಇಂಥ ಪ್ರೌಢಪತ್ರಿಕೆ ನಾಗರಿಕ ಜೀವನದ ಅತ್ಯಗತ್ಯ ವಸ್ತುವಲ್ಲವೆ? ತಮಿಳರಿಂದ - ಅದರ ರಿಕ್ಷಾವಾಲರಿಂದ - ನಮ್ಮ ಜನ ಪಾಠ ಕಲಿಯಬೇಕಾಗಿದೆ. ಚಿನ್ನದ ಹಬ್ಬದಲ್ಲಿ ಇದನ್ನೆಲ್ಲ ಹೇಳಬಾರದಿತ್ತೇನೊ? ಹಬ್ಬವೋ ಹರಿದಿನವೊ, ಸಂಕಟವುಕ್ಕಿದಾಗ ಕೋಡಿ ಹರಿಯಲೇಬೇಕು; ನೋವಾದವರು ಕ್ಷಮಿಸಬೇಕು. ನಮ್ಮ ಮಾನಸಿಕ ಆರೋಗ್ಯ ಹಾಗೂ ಬೌದ್ಧಿಕ ಸಾಮರ್ಥ್ಯ ಕುದುರಬೇಕಾದರೆ ಈ ಪರಿಕರಗಳೆಲ್ಲ ಬೇಕೆನ್ನುವುದಕ್ಕೆ ಇಷ್ಟೆಲ್ಲ ಹೇಳಬೇಕಾಯಿತು.

ಹಬ್ಬದಲ್ಲಿ ಮೊದಲ ಸಂಚಿಕೆಯ ಲೇಖಕರಿಗೆ ಸನ್ಮಾನ ಮಾಡಬೇಕು, ಲೇಖಕರ ಸಮ್ಮೇಲನ ನಡೆಸಬೇಕು, ಸಾವಿರ ಪುಟಗಳ ವಿಶೇಷ ಸಂಚಿಕೆ ಪ್ರಕಟವಾಗಬೇಕು - ಇದು ಹಾಕಿಕೊಂಡ ಯೋಜನೆ. ಸಾವಿರ ಪುಟದ ಯೋಜನೆ ಎರಡೂವರೆ ಸಾವಿರಕ್ಕೂ ಮಿಕ್ಕಿತು. ಇದಕ್ಕೆ ಸಂಪಾದಕರ ಉತ್ಸಾಹದ ಜೊತೆಗೆ ಲೇಖಕರ ಉತ್ಸಾಹವೂ ಕಾರಣ. ವಿಜ್ಞಾನ ವಿಭಾಗವೇ ಆಂಜನೇಯನಂತೆ ಬೆಳೆದು ೧೫೬೨ ಪುಟಗಳವರೆಗೆ ಮುಟ್ಟಬೇಕೆ! ಇದರ ಜೊತೆಗೇ ವಿಜ್ಞಾನ ಕರ್ನಾಟಕ-ಪ್ರಬುದ್ಧ ಕರ್ನಾಟಕದ ಮಗಳು! ಸಂತೋಷದ ಮೇಲೆ ಸಂತೋಷ! ಹಬ್ಬದೆಡೆಯಲ್ಲಿಯೇ ಆ ಮಹಾಮಹಿಮಳ, ಆ ಕಾರಣಪುರುಷೆಯ ಜನನ! ಸಾವಿರ ಪುಟಗಳ ಸಾಹಿತ್ಯಾಂಕವೂ ಇದೇ ಸಮಯಕ್ಕೆ ಬೆಳಕಿಗೆ ಬರಬೇಕು. ಸಂಪಾದಕರೂ ವಿದ್ವಾಂಸರೂ ಶಿಸ್ತಿನ ಸಿಪಾಯಿಗಳು, ಶ್ರದ್ಧಾಳುಗಳು, ಕರ್ತವ್ಯನಿಷ್ಠರು, ಸೌಂದರ್ಯೋಪಾಸಕರು-ಪರಿಪೂರ್ಣತೆ ಅವರ ಗುರಿ; ಎಲ್ಲವೂ ಚೆನ್ನಾಗಿರಬೇಕು, ಪಕ್ವವಾಗಿರಬೇಕು. ಆ ಮೂವರು-ನಾಯಕ್, ತಿಪ್ಪೇರುದ್ರಸ್ವಾಮಿ, ಲಕ್ಷ್ಮಣರಾವ್-ಒಂದು ವರ್ಷ ಲಾಗಾಯ್ತು ಹಗಲಿರುಳೂ ದುಡಿಯುತ್ತಿದ್ದಾರೆ; ಲೇಖನ ಸಂಪಾದಿಸಿ, ತೂರಿ ಕೇರಿ ಒನೆದು ಒಪ್ಪಮಾಡಿ, ಅಚ್ಚಿನ ಮನೆಯಲ್ಲಿ ಕುಳಿತು ಪ್ರೂಫು ತಿದ್ದಿ ಅಂದವಾಗಿ ಮುದ್ರಣವಾಗುವಂತೆ ಹುಷಾರಿಯಿಂದ ನೋಡಿಕೊಂಡಿದ್ದಾರೆ-ತಮ್ಮ ಇತರ ಕೆಲಸದ ಜೊತೆಗೆ! ಇದು ದುಡ್ಡಿಗೆ ಮಾಡುವ ಕೆಲಸವಲ್ಲ, ಕನ್ನಡದ ಮೇಲಣ ಪ್ರೀತಿಯಿಂದ, ಕಾಯಕ ನಿಷ್ಠೆಯಿಂದ ಎಸಗುತ್ತಿರುವ ಉದ್ಯೋಗ. ಇಂಥವರ ಜೊತೆ ಕೆಲಸ ಮಾಡುವ ಭಾಗ್ಯ ನನ್ನದಾಗಿದೆ.

ಇವರೆಲ್ಲರೂ ಆದರ್ಶವ್ಯಕ್ತಿಗಳು, ನಿಜ. ಆದರೆ ಲಕ್ಷ್ಮಣರಾಯರನ್ನು ಕುರಿತು ಒಂದು ಹೆಚ್ಚಿಗೆ ಮಾತು ಹೇಳಲೇಬೇಕು. ೧೫೬೨ ಪುಟಗಳ ಪ್ರಮಾಣವುಳ್ಳ ೫೭ ಲೇಖನಗಳನ್ನು ವಿಜ್ಞಾನ ಸಂಚಿಕೆಗೆ ಕೂಡಿ ಹಾಕಿರುವ ಅವರ ಸಾಹಸ ಶ್ಲಾಘನೀಯವಾದದ್ದು. ಕಳೆದ ಇಪ್ಪತ್ತೈದು ವರ್ಷಗಳ ವೈಜ್ಞಾನಿಕ ಪ್ರಗತಿಯ ಕತೆ ಈ ಲೇಖನಗಳ ವಸ್ತು. ಬಹುಶಃ ಯಾವ ಭಾರತೀಯ ಭಾಷೆಯಲ್ಲಿಯೂ ಈವರೆಗೆ ಇಂಥದೊಂದು ವ್ಯಾಪಕವಾದ ಗ್ರಂಥ ಬಂದಿಲ್ಲವೆಂದೇ ಹೇಳಬಹುದು. ಆ ಕ್ಷೇತ್ರದಲ್ಲಿ ಇದೊಂದು ಗೌರೀಶಂಕರ; ಅವರದು ತೇನ್‌ಸಿಂಗ್ ಸಾಹಸ! ಕನ್ನಡ ಮಾಧ್ಯಮ ವಿರೋಧಿಗಳಿಗೆ ಇದೊಂದು ಸಶಕ್ತ ಸವಾಲು! ಕನ್ನಡ ವೈಜ್ಞಾನಿಕ ಭಾಷೆಯಾಗಿಲ್ಲವೆಂದು ಕುಂಯ್‌ಗುಟ್ಟುವ ಸಂಶಯಗ್ರಸ್ತರಿಗೆ ಇದೊಂದು ಗದಾಪ್ರಹಾರ!

ಸಾಹಿತ್ಯಾಂಕ ವಿಜ್ಞಾನಾಂಕಗಳೆರಡೂ ಐವತ್ತರ ಹರೆಯದ ಪ್ರಬುದ್ಧ ಕರ್ನಾಟಕದ ಅಪೂರ್ವ ಸಿದ್ಧಿಯ ಧವಳಗಿರಿ ಶೃಂಗಗಳು; ಕನ್ನಡದ ಶಕ್ತಿ ದಿಗ್ದಿಗಂತಗಳಲ್ಲಿ ಅನುರಣಿತವಾಗುವಂತೆ ಘೋಷಿಸುವ ದೇವದತ್ತ ಪಾಂಚಜನ್ಯಗಳು; ಕನ್ನಡದ ವಿಜಯವನ್ನು ವಿಶ್ವವಿದ್ಯಾನಿಲಯದ ಕೀರ್ತಿಯನ್ನು ಮೆರೆವ ನಭಶ್ಚುಂಬಿ ವೈಜಯಂತಿಗಳು. ◆

# (ಈ) ಕೆಲವು ಪತ್ರಕರ್ತರು

## ೩೧. ಎಂ. ವೆಂಕಟಕೃಷ್ಣಯ್ಯ

## (೧೮೪೪ - ೧೯೩೩)

✍ ಶ್ರೀ ಕೆ.ವಿ. ನಾಗರಾಜ

ಹತ್ತೊಂಬತ್ತನೆಯ ಶತಮಾನದ ಎರಡನೆಯ ಭಾಗ, 'ಹಳೆಯ ಮೈಸೂರು ಪ್ರದೇಶದ ಸಾರ್ವಜನಿಕ ಜೀವನ ಮಂದಗತಿಯಲ್ಲಿ ಸಾಗುತ್ತಿತ್ತು. ಆಡಳಿತಗಾರರು ತಪ್ಪು ಮಾಡಿದರೆ ಅದನ್ನು ಖಂಡಿಸುವ ಎದೆಗಾರಿಕೆ ಇದ್ದವರ ಸಂಖ್ಯೆ ಬೆರಳೆಣಿಕೆಯಷ್ಟು ಅಂತಹವರಲ್ಲಿ ಎಂ. ವೆಂಕಟಕೃಷ್ಣಯ್ಯ ಯನವರಿಗೆ ಹೆಚ್ಚು ಮಾನ್ಯತೆ. ಅಧ್ಯಾಪಕರಾಗಿ, ಸಮಾಜ ಸುಧಾರಕರಾಗಿ, ಪತ್ರಕರ್ತರಾಗಿ ಮತ್ತು ಎಲ್ಲದ್ದಕ್ಕಿಂತ ಮಿಗಿಲಾಗಿ ಕಟ್ಟಾ ದೇಶಾಭಿಮಾನಿಯಾಗಿ ಅವರು ಸಲ್ಲಿಸಿರುವ ಸೇವೆ ಕನ್ನಡ ನಾಡಿನ ಇತಿಹಾಸದಲ್ಲಿ ಒಂದು ಅಪೂರ್ವ ಅಧ್ಯಾಯ. ತಮ್ಮ ಗುರಿ ಸಾಧನೆಯ ಹಾದಿಯಲ್ಲಿ ಎಷ್ಟೇ ಕಂಟಕಗಳಿದ್ದರೂ ಅದನ್ನೆಲ್ಲ ಮೆಟ್ಟಿ ಮುನ್ನಡೆದ ಮಹಾ ಸಾಹಸಿ. ಸತತ ಕಾಯಕದಲ್ಲೇ ಜೀವನದ ಸಾರ್ಥಕತೆಯನ್ನು ಕಂಡ ಮಹಾನುಭಾವ.

ಕನ್ನಡ ಪತ್ರಿಕೆಗಳು ಬೆಳೆದು ಬಂದ ಬಗೆ ಇತರ ಭಾಷಾ ಪತ್ರಿಕೆಗಳದ್ದಕ್ಕಿಂತ ಬೇರೆಯಲ್ಲ. ಮಂಗಳೂರಿನಲ್ಲಿ ಕ್ರೈಸ್ತಪಾದ್ರಿಗಳು ಆರಂಭಿಸಿದ 'ಮಂಗಳೂರು ಸಮಾಚಾರ'ದಿಂದ ಕನ್ನಡ ಪತ್ರಿಕೆಗಳು ಬೆಳೆದು ಬಂದ ಬಗೆ ಇತರ ಭಾಷಾ ಪತ್ರಿಕೆಗಳದ್ದಕ್ಕಿಂತ ಕನ್ನಡ ಪತ್ರಿಕೋದ್ಯಮ ಆರಂಭ. ತೆವಳುತ್ತ ನಡೆದ ಕನ್ನಡ ಪತ್ರಿಕೋದ್ಯಮಕ್ಕೆ ಜೀವರಕ್ತ ತುಂಬಿದವರು ಕೆಲವೇ ಮಂದಿ, ಆಗ ಪತ್ರಕರ್ತರಿಗೆ ಬೆಲೆ ಇರಲಿಲ್ಲ. ಅರೆವಿದ್ಯಾವಂತರು ಮತ್ತು ಅಪ್ರಯೋಜಕರಿಗೆ ಮೀಸಲಾದ ವೃತ್ತಿ ಪತ್ರಿಕೋದ್ಯಮ ಎಂಬ ಭಾವನೆ ಸಾಮಾನ್ಯ ಜನರಲ್ಲಿ ಇತ್ತು. ಈ ಕಲ್ಪನೆ ತಪ್ಪೆಂದು ಸಾಧಿಸಿ ತೋರಿಸಿದವರು ಈ ಧೀಮಂತರು. ವೆಂಕಟಕೃಷ್ಣಯ್ಯನವರಿಗೆ ಕನ್ನಡ ಪತ್ರಿಕಾಲೋಕದ ಆದ್ಯಪ್ರವರ್ತಕರಲ್ಲಿ ಮೊದಲ ಮರ್ಯಾದೆ.

### ಕಷ್ಟದ ಬಾಲ್ಯ

ಕಟ್ಟಾಸಂಪ್ರದಾಯವಾದಿಗಳ ಮನೆಯಲ್ಲಿ ಇವರ ಜನನ. ೧೮೪೪ರ ಸೆಪ್ಟೆಂಬರ್ ೫ರಂದು. ಸ್ಥಳ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಮಗ್ಗೆ ಗ್ರಾಮ. ತಂದೆ ವೇದಮೂರ್ತಿ ಸುಬ್ಬಯ್ಯ, ತಾಯಿ ಭಾಗೀರಥಮ್ಮ. ತೆಲುಗು ಮಾತನಾಡುವ ವೆಲನಾಡು ಬ್ರಾಹ್ಮಣ ವರ್ಗಕ್ಕೆ ಸೇರಿದವರು.

ವೆಂಕಟಕೃಷ್ಣಯ್ಯ ಸುಖದ ಸುಪ್ಪತ್ತಿಗೆಯ ಮೇಲೆ ಬೆಳೆಯಲಿಲ್ಲ. ತೀರಾ ಚಿಕ್ಕವರಿದ್ದಾಗಲೇ ತಂದೆಯನ್ನು ಕಳೆದುಕೊಂಡು, ಸಂಸಾರ ನಿರ್ವಹಿಸುವ ಪೂರ್ಣ ಹೊಣೆ, ತಾಯಿ ಭಾಗೀರಥಮ್ಮ ಮೇಲೆ. ಆಕೆ ಅಂಜಲಿಲ್ಲ. ಅಳುಕಲಿಲ್ಲ. ಮಗ ದೊಡ್ಡ ಮನುಷ್ಯನಾಗುತ್ತಾನೆಂಬ ಜ್ಯೋತಿಷಿಯ ಮಾತಿನ ಮೇಲೆ ಅಷ್ಟು ಪ್ರಬಲ ನಂಬಿಕೆ ಇಟ್ಟಿದ್ದರು ಆಕೆ.

ಹೊಟ್ಟೆ ಪಾಡಿಗ ಹಳ್ಳಿಯಲ್ಲಿ ಬೇರೆ ದಾರಿ ಕಾಣದೆ ಇಡೀ ಸಂಸಾರ ಮೈಸೂರಿಗೆ ವಲಸೆ ಹೊರಟಿತು. ಕಿಲ್ಲೆ ಮೊಹಲ್ಲಾದ ಸೌದೆಕೊಪ್ಪಲಿನಲ್ಲಿ ವಾಸ. ಕುದುರೆಲಾಯವೇ ಆಶ್ರಯತಾಣ. ತಾಯಿ ಮತ್ತು ಸಹೋದರಿ ಪೆದ್ದ ಅಮ್ಮಣಮ್ಮ ಅವರ ಶ್ರಮಕ್ಕೆ ಮೇರೆಯೇ ಇರಲಿಲ್ಲ. ಅಕ್ಕಪಕ್ಕದ ಮನೆಗಳಲ್ಲಿ ಮನೆಗೆಲಸ ಮಾಡಿ ಜೀವನ ಸಾಗಿಸಲು ಆರಂಭಿಸಿದರು. ಆಪತ್ತಿನಲ್ಲಿ ಸಹಾಯ ಹಸ್ತ ನೀಡಿದವರು ಭಾಗವತ ಸುಬ್ಬರಾಯರು. ಶ್ರೀಮತಿ ಅನಂತರಾಮಯ್ಯ ಎಂಬವರೂ ಸಹಾ ಬಹುಕಾಲ ಊಟ ಹಾಕಿ ಬೆಳೆಸಿದರು.

### ವಿದ್ಯಾಭ್ಯಾಸ

ವೆಂಕಟಕೃಷ್ಣಯ್ಯನವರು ಹುಟ್ಟಿದಾಗ ಇಟ್ಟ ಹೆಸರು ಚಿನ್ನಸ್ವಾಮಿ. ಶಾಲೆಗೆ ದಾಖಲಾದದ್ದು ಸ್ವಲ್ಪ ವಯಸ್ಸಾದ ಮೇಲೆಯೆ ಎನ್ನಬಹುದು. ರಾಜಾ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ. ಅನಂತರ ಸ್ವಲ್ಪಕಾಲ ವೆಸ್ಲಿಯನ್ ಮಿಷನ್ ಪ್ರೌಢಶಾಲೆಯಲ್ಲಿ ಮತ್ತು ಪುನಃ ರಾಜಾ ಶಾಲೆಯಲ್ಲಿ ಸೆಕೆಂಡರಿ ಶಿಕ್ಷಣ. ಅಂದಿನ ರಾಜಾಶಾಲೆ ಇಂದು ಮಹಾರಾಜ ಕಾಲೇಜಾಗಿದೆ.

ಹದಗೆಟ್ಟ ಆರ್ಥಿಕ ಪರಿಸ್ಥಿತಿಯ ಕಾರಣ ವೆಂಕಟಕೃಷ್ಣಯ್ಯ ವಿದ್ಯಾಭ್ಯಾಸಕ್ಕೆ ಶರಣು ಹೊಡೆಯಬೇಕಾಯಿತು. ಜೀವನ ತಕ್ಕಡಿ ತೂಗಿಸಲು ಮನೆಪಾಠ ಹೇಳುತ್ತಿದ್ದರು. ಜೊತೆಗೆ ಯುರೋಪಿಯನ್ ಧರ್ಮಪ್ರಚಾರಕರಿಗೂ ಕನ್ನಡ ಕಲಿಸುತ್ತಿದ್ದರು. ಶಿಕ್ಷಣ ನಿಂತರೂ ವೆಂಕಟಕೃಷ್ಣಯ್ಯನವರ ಅಧ್ಯಯನ ಆಸಕ್ತಿ ಕುಂಠಿತವಾಗಲಿಲ್ಲ. ಬಿಡುವಿನ ಸಮಯದಲ್ಲಿ ಇತಿಹಾಸ, ಸಮಾಜಶಾಸ್ತ್ರ, ತತ್ವಶಾಸ್ತ್ರ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿದರು. ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆ ಅವರ ಮೇಲೆ ಗಾಢ ಪರಿಣಾಮ ಬೀರಿತು.

## ಜೀವನ ಪ್ರಾರಂಭ

ಜೀವನಕ್ಕಾಗಿ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಆಕಸ್ಮಿಕವಾಗಿ ದಿವಾನ್ ರಂಗಾಚಾರ್ಲು ಅವರ ಪರಿಚಯ ಆಯಿತು. ರಂಗಾಚಾರ್ಲು ಅವರ ಮಗನಿಗೆ ಖಾಸಗಿ ಶಿಕ್ಷಕರಾದರು. ದಿವಾನರು ಅಂದಿನ ಬುದ್ಧಿಜೀವಿಗಳ ಸಮುದಾಯದ ಮುಂಚೂಣಿಯಲ್ಲಿ ಇದ್ದವರು. ಪತ್ರಿಕೋದ್ಯಮದ ಬಗ್ಗೆ ಆಗಿನ ಕಾಲದಲ್ಲೇ ಕ್ರಾಂತಿಕಾರಿ ಎನ್ನುವಷ್ಟು ಅತಿ ಉದಾರವಾದ ನಿಲುವು ತಳೆದಿದ್ದವರು. ಅವರ ಪ್ರಭಾವ ವೆಂಕಟಕೃಷ್ಣಯ್ಯನವರ ಮೇಲೂ ಆಯಿತು.

ಸರಿಸುಮಾರು ೧೮೭೪-೭೫ರಲ್ಲಿ ವೆಂಕಟಕೃಷ್ಣಯ್ಯನವರಿಗೆ ಉದ್ಯೋಗ ದೊರಕಿತು. ಹತ್ತು ರೂಪಾಯಿ ಮಾಸಿಕ ವೇತನದ ಮೇಲೆ ಮರಿಮಲ್ಲಪ್ಪ ಶಾಲೆಯಲ್ಲಿ ಅಧ್ಯಾಪಕರಾದರು. ಇದಕ್ಕೆ ಕಾರಣ ದಿವಾನ್ ಸಿ. ರಂಗಾಚಾರ್ಲು ಮತ್ತು ಶಾಲೆಯ ಮೊದಲ ಉಪಾಧ್ಯಾಯ ಎಸ್. ರಂಗಾಚಾರ್ಯ ಅವರ ಶಿಫಾರಸು. ಕಷ್ಟದ ದಿನಗಳು ಹಿಂದೆ ಸರಿಯಲು ಆರಂಭವಾದಂತೆ ತೋರಿತು.

ಮರಿಮಲ್ಲಪ್ಪ ಶಾಲೆಯ ಅಭಿವೃದ್ಧಿಗೆ ವೆಂಕಟಕೃಷ್ಣಯ್ಯ ಸತತವಾಗಿ ದುಡಿದರು. ಶ್ರಮಕ್ಕೆ ಪ್ರತಿಫಲವಾಗಿ ೧೮೮೩ರಲ್ಲಿ ಮುಖ್ಯೋಪಾಧ್ಯಾಯ ಪದವಿ ಲಭಿಸಿತು. ವೇತನ ಇಪ್ಪತ್ತೈದು ರೂಪಾಯಿಗೆ ಏರಿತು. ವಿದ್ಯಾರ್ಥಿಗಳ ಆಸಕ್ತಿ ಕುದುರಿತು. ಮನಮುಟ್ಟುವಂತೆ ಪಾಠ ಮಾಡುವ ಕಲೆ ಅವರಿಗೆ ಕರಗತವಾಗಿತ್ತು. ಗೌತಮ ಬುದ್ಧ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಜೇಮ್ಸ್ ಗಾರ್ಫೀಲ್ಡ್ ಮುಂತಾದ ಮಹಾನುಭಾವರ ಕಥೆಗಳನ್ನು ರೋಮಾಂಚಕವಾಗಿ ವಿವರಿಸುತ್ತಿದ್ದರು. ಅಷ್ಟೇ ಅಲ್ಲ, ವಿದ್ಯಾರ್ಥಿಗಳನ್ನು ಕಂಡರೆ ಅವರಿಗೆ ಅತೀವ ಪ್ರೀತಿ ಮತ್ತು ಮಮತೆ. ಯಾವ ವಿದ್ಯಾರ್ಥಿಯೇ ಆಗಲಿ ನೆರವು ಕೋರಿದರೆ ಇಲ್ಲ, ಎಂದವರಲ್ಲ.

## ವಿದ್ಯಾಭ್ಯಾಸಾಸಕ್ತ

ವೆಂಕಟಕೃಷ್ಣಯ್ಯನವರು ೧೯೧೮ರಲ್ಲಿ ಮರಿಮಲ್ಲಪ್ಪ ಶಾಲೆಯ ಸೇವೆಯಿಂದ ನಿವೃತ್ತರಾದರು. ತಮ್ಮದೇ ಆದ ಶಾರದಾ ವಿಲಾಸ ಹೈಸ್ಕೂಲನ್ನು ಪ್ರಾರಂಭಿಸಿದರು. ಈಗ ಅದು ಒಂದು ಬೃಹತ್ ಶಿಕ್ಷಣ ಸಂಸ್ಥೆಯಾಗಿ ಬೆಳೆದಿದೆ. ಆ ಕಾಲದಲ್ಲೇ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಬೇಕು ಎಂದು ಅವರು ನಡೆಸಿದ ಹೋರಾಟ ಅವರ ದೂರದರ್ಶಿತ್ವಕ್ಕೆ ಪ್ರತೀಕ.

ತಾಂತ್ರಿಕ ಶಿಕ್ಷಣದಿಂದಲೇ ದೇಶದ ಉನ್ನತಿಗೆ ಭದ್ರ ಅಡಿಪಾಯ ಎಂದು ವೆಂಕಟಕೃಷ್ಣಯ್ಯನವರು ಬಲವಾಗಿ ಪ್ರತಿಪಾದಿಸಿದರು. ಯುರೋಪಿನಲ್ಲಿ, ಜಪಾನ್ ಮತ್ತು ಅಮೆರಿಕ ಮುಂತಾದ ದೇಶಗಳಲ್ಲಿ ಉತ್ಪಾದಕರು ಅನುಸರಿಸುವ ಆಧುನಿಕ ತಂತ್ರಜ್ಞಾನದ ಆಳವಾದ ಅಭ್ಯಾಸಕ್ಕೆ ತಾಂತ್ರಿಕ ಶಾಲೆಗಳನ್ನು ತೆರೆಯಲು ಸರ್ಕಾರವನ್ನು ಒತ್ತಾಯಿಸಿದರು. ಅವರ ಪರಿಶ್ರಮದ ಫಲವೇ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯ ಸ್ಥಾಪನೆ ಹಾಗೂ ಚನ್ನಪಟ್ಟಣ, ಸಾಗರ, ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ಶಿವಮೊಗ್ಗಗಳಲ್ಲಿ ತಾಂತ್ರಿಕ ಶಾಲೆಗಳ ಆರಂಭ. ಅನಂತರ ಈ ಅಭ್ಯರ್ಥಿಗಳಿಗೆ ವಿದ್ಯಾರ್ಥಿ ವೇತನಗಳನ್ನು ಮಂಜೂರು ಮಾಡಲಾಯಿತು. ಅನಾಥಾಲಯ ಸಹಾ ಅವರು ಕಟ್ಟಿ ಬೆಳೆಸಿದ ಸಂಸ್ಥೆಯೇ. ಹೀಗೆ ಅವರ ಕಾರ್ಯಕ್ಷೇತ್ರ ವಿಶಾಲವಾಗಿತ್ತು.

## ಮಾನಸಿಕ ಸಂಕಷ್ಟತೆ

ಬಾಳಿನುದ್ದಕ್ಕೂ ವೆಂಕಟಕೃಷ್ಣಯ್ಯನವರು ಅನೇಕ ಬಾರಿ ಮಾನಸಿಕ ಸಂಕಷ್ಟಕ್ಕೆ ಈಡಾದರು. ಮೊದಲನೇ ಪತ್ನಿ ಬೇಗನೇ ತೀರಿಕೊಂಡರು. ಅವರ ಮೂವರು ಮಕ್ಕಳು ಸುಬ್ಬಯ್ಯ, ನಾರಾಯಣರಾವ್ ಮತ್ತು ಭಾಗೀರಥಮ್ಮ. ಎರಡನೆಯ ಪತ್ನಿ ಸಹಾ ಕ್ಷಯಪೀಡಿತರಾಗಿ ವಿಧಿವಶರಾದರು. ಅವರ ಮಗ ವೆಂಕಟರಾಮು, ಮಗಳು ಭಾಗೀರಥಮ್ಮನ ಪತಿ ೧೮೯೫ರಲ್ಲಿ ನಿಧನರಾದರು. ಸ್ವಲ್ಪ ಕಾಲದ ನಂತರ ಮಗಳು ಸಹಾ ಕ್ಷಯದಿಂದ ಮರಣ ಹೊಂದಿದರು. ಇವರ ಮಕ್ಕಳು ರಾಮು ಮತ್ತು ಲಕ್ಷ್ಮಿ.

ದೊಡ್ಡ ಮಕ್ಕಳಿಬ್ಬರೂ ೧೯೦೭ರವರೆಗೆ ವಿದ್ಯಾರ್ಥಿಗಳು. ಆ ವರ್ಷ ಕೊನೆಯ ಮಗ ವೆಂಕಟರಾಮು, ಮೊಮ್ಮಕ್ಕಳು ರಾಮು ಮತ್ತು ಲಕ್ಷ್ಮಿ ಪ್ಲೇಗಿಗೆ ಬಲಿಯಾದರು, ಕಷ್ಟದ ಹೊರೆ ಹೆಚ್ಚಾಯಿತು. ಸಂಸಾರ ನಿರ್ವಹಣೆಗೆ ಅಧ್ಯಾಪಕ ವೃತ್ತಿಯಿಂದ

ಬರುತ್ತಿದ್ದ ಸಂಬಳ ಸಾಕಾಗದೆ ಮನೆ 'ಪದ್ಮಾಲಯ'ವನ್ನು ಮಾರಬೇಕಾಯಿತು. ಮಗ ನಾರಾಯಣರಾವ್ ೧೯೧೯ರಲ್ಲಿ ಅಪಘಾತಕ್ಕೆ ತುತ್ತಾಗಿ ಅಸು ನೀಗಿದರು. ಮೊದಲ ಮಗ ಸುಬ್ಬಯ್ಯ ೧೯೩೧ರಲ್ಲಿ ತೀರಿಕೊಂಡರು. ಹೀಗೆ ವೆಂಕಟಕೃಷ್ಣಯ್ಯ ಒಂದಾದ ಮೇಲೆ ಒಂದರಂತೆ ಆಘಾತಗಳ ಸರಮಾಲೆಯನ್ನೇ ಎದುರಿಸಿದರು. ಕರ್ಮಯೋಗಿಯಾಗಿ ಸಾರ್ವಜನಿಕ ಸೇವೆಗೆ ಇಡೀ ಜೀವನವನ್ನೇ ಮುಡಿಪಿಟ್ಟು ಎಂ. ವೆಂಕಟಕೃಷ್ಣಯ್ಯನವರು ನಿಧನರಾದದ್ದು ೧೯೩೩ರಲ್ಲಿ ನವೆಂಬರ್ ೮ರಂದು. ಅವರ ಧೈರ್ಯ ಮತ್ತು ಛಲ ಇತರರಿಗೆ ಶ್ರೇಷ್ಠ ಮಾದರಿ.

## ಪತ್ರಕರ್ತ

ಚಿಕ್ಕವರಾಗಿದ್ದಾಗಲೇ ವೆಂಕಟಕೃಷ್ಣಯ್ಯನವರಿಗೆ ಸಾರ್ವಜನಿಕ ಸೇವೆಯಲ್ಲಿ ಆಸಕ್ತಿ. ಸದಾ ಅವರ ಮನಸ್ಸಿನಲ್ಲಿ ದೀನದಲಿತರ ಉದ್ಧಾರದ ಆದರ್ಶ ಸುಳಿಯುತ್ತಿತ್ತು. ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಸಾರ್ವಜನಿಕ ಜೀವನದ ನಾನಾ ರಂಗಗಳಲ್ಲಿ ಎಣೆ ಇಲ್ಲದೆ ದುಡಿದರು. ಸಹಜವಾಗಿಯೇ ಅವರ ಒಲವು ಪತ್ರಿಕೋದ್ಯಮದತ್ತ ಹರಿಯಿತು. ಪ್ರಜಾತಂತ್ರದ ಯಶಸ್ಸು ಪತ್ರಿಕೆಗಳ ಉತ್ತಮ ಕೆಲಸದ ಮೇಲೆ ಅವಲಂಬಿಸಿದೆ ಎಂಬುದನ್ನು ಶೀಘ್ರವಾಗಿ ಅರಿತುಕೊಂಡರು.

ರಂಗಾಚಾರ್ಲು ಅವರು ದಿವಾನರಾದ ಕೂಡಲೇ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಪ್ರಜಾಪ್ರತಿನಿಧಿ ಸಭೆಯ ರಚನೆ ಇವುಗಳಲ್ಲಿ ಮುಖ್ಯವಾದದ್ದು. ಜನತಂತ್ರದ ಮೊದಲ ಪ್ರಯೋಗ, ಮೈಸೂರು ಸಂಸ್ಥಾನದಲ್ಲಿ ಇದು ವೆಂಕಟಕೃಷ್ಣಯ್ಯನವರಿಗೆ ಒಂದು ಸುವರ್ಣಾವಕಾಶವನ್ನು ಒದಗಿಸಿತು.

## ಪತ್ರಿಕೋದ್ಯಮದ ಬೆಳವಣಿಗೆ

ಇಲ್ಲಿಂದ ಅವರ ಪತ್ರಿಕೋದ್ಯಮದ ಮೊದಲ ಹಂತ ಆರಂಭ. 'ವೃತ್ತಾಂತ ಚಿಂತಾಮಣಿ' ಮೊದಲ ಪತ್ರಿಕೆ. (ಕೆಲವರು ಅದರ ಹೆಸರು 'ಉದಂತ ಚಿಂತಾಮಣಿ' ಎಂದೂ ಹೇಳುತ್ತಾರೆ). ಆರಂಭ ೧೮೮೫ರಲ್ಲಿ. ಮೈಸೂರಿನ ಜನತೆಯ ಜಡತೆಯನ್ನು ನೀಗಿಸಿ ರಾಜ್ಯದ ಅಭಿವೃದ್ಧಿಯಲ್ಲಿ ಅವರು ವಹಿಸಬೇಕಾದ ಪಾತ್ರವನ್ನು ಮನದಟ್ಟು ಮಾಡಿಕೊಡುವುದು ಈ ಕನ್ನಡ ವಾರಪತ್ರಿಕೆಯ ಧ್ಯೇಯವಾಗಿತ್ತು.

ಪತ್ರಿಕೆಗಳೊಡನೆ ತಾತಯ್ಯನವರ ಸಂಪರ್ಕ ಇದೇ ಮೊದಲಲ್ಲ. ಇದಕ್ಕೂ ಮುಂಚೆ ಅವರು 'ಹಿತಬೋಧಿನಿ' ಎಂಬ ಕನ್ನಡ ಮಾಸಪತ್ರಿಕೆಯೊಡನೆ ನೇರ ಸಂಪರ್ಕ ಹೊಂದಿದ್ದರು. ಎಂ. ಎಸ್. ಪುಟ್ಟಣ್ಣ ಮತ್ತು ಎಂ.ಬಿ. ಶ್ರೀನಿವಾಸ ಅಯ್ಯಂಗಾರ್ ಅವರ ಸಂಪಾದಕತ್ವದಲ್ಲಿ ೧೮೮೩ರಲ್ಲಿ ಈ ಪತ್ರಿಕೆ ಅಸ್ತಿತ್ವಕ್ಕೆ ಬಂದಿತು. ಮರುವರ್ಷ 'ಹಿತಬೋಧಿನಿ' ವೆಂಕಟಕೃಷ್ಣಯ್ಯನವರ ಮಾಲೀಕತ್ವಕ್ಕೆ ಒಳಪಟ್ಟು ಅವರೇ ಸಂಪಾದಕರಾದರು. 'ವಿದ್ಯಾದಾಯಿನಿ' ಪತ್ರಿಕೆ ಮೈಸೂರಿನಲ್ಲಿ ಆರಂಭವಾದಾಗ 'ಹಿತಬೋಧಿನಿ' ಪತ್ರಿಕೆ ನಿಂತು ಹೋಯಿತು.

'ವೃತ್ತಾಂತ ಚಿಂತಾಮಣಿ' ಪ್ರತಿ ಬುಧವಾರ ಪ್ರಕಟವಾಗುತ್ತಿತ್ತು. ಹೆಚ್. ನರಸಿಂಗರಾವ್ ಅವರು ವ್ಯವಸ್ಥಾಪಕ ಮಾಲೀಕರಾಗಿದ್ದರು. ವಾಣೀವಿಲಾಸ ಮುದ್ರಣಾಲಯದಲ್ಲಿ ಮುದ್ರಿತವಾಗುತ್ತಿದ್ದ ನಾಲ್ಕು ಪುಟಗಳಲ್ಲಿ ಎರಡು ಪೂರ್ಣ ಪುಟಗಳನ್ನು ಸಂಪಾದಕೀಯ ಅಭಿಪ್ರಾಯಗಳಿಗೆ ಮೀಸಲು ಇಡಲಾಗಿತ್ತು.

ವೆಂಕಟಕೃಷ್ಣಯ್ಯನವರು ೧೮೮೮ರ ನವೆಂಬರ್ ಎಂಟರಂದು 'ಮೈಸೂರು ಹೆರಾಲ್ಡ್' ಎಂಬ ಇಂಗ್ಲಿಷ್ ವಾರಪತ್ರಿಕೆಯನ್ನು ಸ್ಥಾಪಿಸಿದರೆಂಬ ಉಲ್ಲೇಖವಿದೆ. ದಿವಾನ್ ರಂಗಾಚಾರ್ಲು ಅವರು ೧೮೮೩ರಲ್ಲಿ ನಿಧನರಾದರು. ಆಗ ದಿವಾನರಾದವರು ಕೆ. ಶೇಷಾದ್ರಿ ಅಯ್ಯರ್ ಅವರದ್ದು. ಸ್ವಭಾವತಃ ರಂಗಾಚಾರ್ಲು ಜನತಂತ್ರವಾದಿ ಆಗಿದ್ದರು. ತಮ್ಮವರನ್ನು ಎಂದಿಗೂ ಉನ್ನತ ಹುದ್ದೆಗಳಿಗೆ ಏರಿಸಲಿಲ್ಲ. ಮೈಸೂರಿಗರಿಗೇ ಉದ್ಯೋಗಾವಕಾಶಗಳಲ್ಲಿ ಪ್ರಾಧಾನ್ಯತೆ ನೀಡುತ್ತಿದ್ದರು. ಇದಕ್ಕೆ ಸಂಪೂರ್ಣವಾಗಿ ಅಪವಾದ ಎನ್ನುವಂತೆ ಇದ್ದರು – ಶೇಷಾದ್ರಿ ಅಯ್ಯರ್, ಸರ್ಕಾರೀ ಕಛೇರಿಗಳಲ್ಲಿ ತಮ್ಮವರನ್ನೇ ತುಂಬಿದರು.

ಅಯ್ಯರ್ ಅವರ ಈ ನಡವಳಿಕೆ ಮತ್ತು ಸರ್ವಾಧಿಕಾರೀ ಧೋರಣೆ ವೆಂಕಟಕೃಷ್ಣಯ್ಯನವರಂತಹ ನಾಯಕರನ್ನು ರೊಚ್ಚಿಗೆಬ್ಬಿಸಿತು. ಪ್ರತಿನಿಧಿ ಸಭೆಯಲ್ಲಿ ದಿವಾನರ ವಿರುದ್ಧ ಧಾಳಿ ಆರಂಭವಾಯಿತು. ಉದ್ಯೋಗಗಳನ್ನು ನೀಡುವಾಗ ಮೈಸೂರಿನವರಿಗೇ ಪ್ರಾಧಾನ್ಯ ನೀಡಬೇಕು ಎಂದು ಅವರು ವಾದಿಸಿದರು. ಹೀಗೆ ೧೮೯೧ನೇ ಇಸವಿಯಷ್ಟು ಹಿಂದೆಯೇ 'ಮಣ್ಣಿನ ಮಕ್ಕಳು' ಅಥವಾ 'ಮೈಸೂರು ಮೈಸೂರಿಗರಿಗಾಗಿ' ಎಂಬ ಕಲ್ಪನೆಯನ್ನು ಹುಟ್ಟು ಹಾಕಿದವರು ವೆಂಕಟಕೃಷ್ಣಯ್ಯ. ಅವರ ಸೇವಾತತ್ಪರತೆಯನ್ನು ಮೆಚ್ಚಿದ ಜನ ಪ್ರೀತಿಯಿಂದ ಅವರನ್ನು 'ತಾತಯ್ಯ' ಎಂದು ಕರೆದರು.

ಕೇವಲ ಪ್ರಜಾಪ್ರತಿನಿಧಿ ಸಭೆಯಿಂದ ಕಾರ್ಯ ನಿರ್ವಹಣೆ ಪೂರ್ಣವಾಗಿ ಸಾಗುವುದಿಲ್ಲ. ಒಂದು ನ್ಯಾಯವಿಧಾಯಕ ಸಭೆ ಅಸ್ತಿತ್ವಕ್ಕೆ ಬಂದರೆ ಉತ್ತಮ ಎಂದು ಕೆಲವು ಮಂದಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಭಾವಿಸಿದರು. ಇದಕ್ಕಾಗಿ ೧೮೯೦ರಲ್ಲಿ

ಸಭೆಯಲ್ಲಿ ಒಂದು ನಿರ್ಣಯ ಮಂಡಿಸಿದರು. ಆಗ ಅಯ್ಯರ್ 'ಪ್ರತ್ಯೇಕವಾದ ನ್ಯಾಯವಿಧಾಯಕ ಸಭೆಯನ್ನು ಸ್ಥಾಪನೆ ಮಾಡುವ ಬದಲು, ಪ್ರಜಾಪ್ರತಿನಿಧಿ ಸಭೆಯ ಕೆಲವು ಮಂದಿ ಸದಸ್ಯರನ್ನು ಒಳಗೊಂಡ ಒಂದು ಸ್ಟ್ಯಾಂಡಿಂಗ್ ಕಮಿಟಿಯನ್ನು ನಿರ್ಮಿಸಬಹುದು. ನ್ಯಾಯವಿಧಾಯಕ ಸಭೆಯ ಉದ್ದೇಶಗಳನ್ನು ಈ ಕಮಿಟಿಯೇ ನೆರವೇರಿಸಬಹುದು' ಎಂದರು. ಅದರಂತೆ ಸಮಿತಿಯೂ ರಚಿತವಾಯಿತು. ನಾಲ್ಕು ವರ್ಷಗಳ ಕಾಲ ಉಪಯುಕ್ತ ಕೆಲಸವನ್ನು ಮಾಡಿತು. ವೆಂಕಟಕೃಷ್ಣಯ್ಯನವರು ೧೮೯೨ರಲ್ಲಿ ಸ್ಟ್ಯಾಂಡಿಂಗ್ ಕಮಿಟಿಯ ಕಾರ್ಯದರ್ಶಿಯಾಗಿ ಚುನಾಯಿತರಾದರು.

ಮಹಾರಾಜರಾಗಿದ್ದ ಚಾಮರಾಜ ಒಡೆಯರ್ ಅವರು ೧೮೯೪ರಲ್ಲಿ ನಿಧನರಾದರು. ಸಮಿತಿಯ ಸದಸ್ಯರು ದಿವಾನರನ್ನು ಕೇಳದೆ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಪ್ರಾಪ್ತ ವಯಸ್ಕರಾಗುವ ವರೆಗೆ ರಾಜಮಾತೆಯವರೇ ರೀಜೆಂಟರಾಗಬೇಕು ಎಂದು ಒತ್ತಾಯಿಸಿ ಬ್ರಿಟಿಷ್ ಸರ್ಕಾರಕ್ಕೆ ಪತ್ರ ಬರೆದರು. ಈ ಪದವಿಗಾಗಿ ದಿವಾನರು ಬಹಳ ಹಂಬಲಿಸಿದ್ದರು. ಸ್ವಾಭಾವಿಕವಾಗಿಯೇ ಅಯ್ಯರ್ ಸಮಿತಿಯ ಬಗ್ಗೆ ಕೋಪಗೊಂಡರು. ಆದರೆ ಬಹುತೇಕ ಮಂದಿ ಮೈಸೂರಿನವರು ಶೇಷಾದ್ರಿ ಅಯ್ಯರ್ ಅವರನ್ನು ರೀಜೆಂಟ್ ಪದವಿಗೆ ಪರಿಗಣಿಸಬಾರದೆಂಬ ಬಲವಾದ ಪಟ್ಟು ಹಿಡಿದರು. ಇವರೆಲ್ಲರ ನೇತಾರರು ಎಂ. ವೆಂಕಟಕೃಷ್ಣಯ್ಯ. ತಮ್ಮ ಪತ್ರಿಕೆಗಳೇ ಅಲ್ಲದೆ ಇತರ ಪತ್ರಿಕೆಗಳಿಗೂ ಲೇಖನ ಬರೆದು ತಮ್ಮ ವಿರೋಧವನ್ನು ಪ್ರಬಲವಾಗಿ ಪ್ರತಿಪಾದಿಸಿದರು.

ತಾತಯ್ಯನವರ ಬರಹಗಳು ಜನರ ಮೇಲೆ ಪರಿಣಾಮ ಬೀರಿದವು. ಶೇಷಾದ್ರಿ ಅಯ್ಯರ್ ಅವರನ್ನು ರೀಜೆಂಟರನ್ನಾಗಿ ನೇಮಿಸಬಾರದೆಂಬ ಮತ ಪ್ರದರ್ಶನಗಳು ಅನೇಕ ಸ್ಥಳಗಳಲ್ಲಿ ನಡೆದವು. ಬ್ರಿಟಿಷ್ ಸರ್ಕಾರ ಸಾರ್ವಜನಿಕರ ಒತ್ತಾಯಕ್ಕೆ ಮಣಿದು ೧೮೯೫ರಲ್ಲಿ ರಾಜಮಾತೆಯವರನ್ನೇ ರೀಜೆಂಟರನ್ನಾಗಿ ನೇಮಿಸಿತು.

ಸ್ಟ್ಯಾಂಡಿಂಗ್ ಕಮಿಟಿಯನ್ನು ಶೇಷಾದ್ರಿ ಅಯ್ಯರ್ ಕಡೆಗಣಿಸಿದರು. ಅದರ ಸಲಹೆಗಳು ಮತ್ತು ಮನವಿಗಳು ನಿರರ್ಥಕವಾದವು. ಇದರಿಂದ ಖತಿಗೊಂಡ ಸಮಿತಿ ಸರ್ಕಾರವನ್ನು ಟೀಕಿಸಲು ಆರಂಭಿಸಿತು. ತಮ್ಮ ವಿರುದ್ಧ ಟೀಕೆಗಳು ತೀವ್ರವಾದಷ್ಟೂ ದಿವಾನರ ನಡವಳಿಕೆ ಸಹಾ ಅಷ್ಟೇ ಕಠಿಣವಾಗುತ್ತ ನಡೆಯಿತು. ಕೊನೆಗೆ ಆರು ವರ್ಷಗಳ ಹೊಯ್ದಾಟದ ನಂತರ ಸಮಿತಿ ಅವಸಾನ ಕಂಡಿತು.

## ಜನರಲ್ಲಿ ಕಲಿಕೆಯ ಜಾಗೃತಿ ಎಬ್ಬಿಸಿದ ಕ್ರಾಂತಿಕಾರಿ

ಕನ್ನಡ ನಾಡಿನಲ್ಲಿ ಎಲ್ಲರೂ ಕಡ್ಡಾಯವಾಗಿ ಕಲಿಯುವಂತೆ ಮಾಡುವುದು ವೆಂಕಟಕೃಷ್ಣಯ್ಯನವರ ಪರಮ ಉದ್ದೇಶಗಳಲ್ಲಿ ಒಂದಾಗಿತ್ತು. ಪತ್ರಿಕೆಗಳ ಮೂಲಕ ಅದನ್ನು ಜನತೆಗೆ ಮನದಟ್ಟು ಮಾಡಿಕೊಟ್ಟರು. ಪ್ರತಿನಿಧಿಗಳ ಸಭೆಯಲ್ಲಿ ಕನ್ನಡ ಕಡ್ಡಾಯವಾಗುವಂತೆ ಸೇವಾ ಆಯೋಗ ಪರೀಕ್ಷೆಯ ನಿಯಮಾವಳಿಗೆ ತಿದ್ದುಪಡಿ ಮಾಡುವ ಬೇಡಿಕೆಯನ್ನು ಮುಂದಿಟ್ಟರು. ರೆವರೆಂಡ್ ರೀಸ್, ರೆವರೆಂಡ್ ಹೇಗ್ ಮತ್ತು ಆ್ಯಂಡರ್‌ಸನ್ ಮುಂತಾದ ಯುರೋಪಿಯನ್ನರು ಬೆಂಬಲ ನೀಡಿದರೂ ಬೇಡಿಕೆ ಈಡೇರಲಿಲ್ಲ. ಅಷ್ಟಕ್ಕೇ ವೆಂಕಟಕೃಷ್ಣಯ್ಯನವರು ಹೋರಾಟವನ್ನು ನಿಲ್ಲಿಸಲಿಲ್ಲ. ಈ ಘರ್ಷಣೆ ಮುಂದುವರಿದಂತೆ ಮೈಸೂರಿನಲ್ಲಿ ಮೈಸೂರಿಗರು ಮತ್ತು ಮದರಾಸಿಗಳು ಎಂಬ ಎರಡು ಗುಂಪುಗಳಾದವು. ಸ್ಥಳೀಯರ ಚಟುವಟಿಕೆಯ ಕೇಂದ್ರ 'ಮೈಸೂರು ಹೆರಾಲ್ಡ್' ಮತ್ತು 'ವೃತ್ತಾಂತ ಚಿಂತಾಮಣಿ' ಪತ್ರಿಕಾಲಯ.

ಕಾಲ ಕಳೆದಂತೆ ಹೊರಗಿನವರೂ ಕನ್ನಡ ಕಲಿಯುವಂತೆ ಮಾಡುವ ತಾತಯ್ಯನವರ ಉದ್ದೇಶ ಪೂರ್ಣವಾಯಿತು. ಸರಕಾರೀ ಕೆಲಸಗಳಿಗೆ ನೇಮಕಗಳನ್ನು ಮಾಡುವಾಗ ಮೈಸೂರಿನ ಪೌರತ್ವವನ್ನು ಅರ್ಹತೆಗಳಲ್ಲಿ ಒಂದನ್ನಾಗಿ ಸರ್ಕಾರ ಪರಿಗಣಿಸುವಂತೆ ಆಯಿತು.

ಆಗ ಪತ್ರಿಕೋದ್ಯಮ ಶಿಕ್ಷಣಕ್ಕೆ ಸ್ಪಷ್ಟ ರೂಪ ಇರಲಿಲ್ಲ. ಹುಟ್ಟಿನಿಂದ ಮಾತ್ರ ಪತ್ರಕರ್ತರು ಆಗಲು ಸಾಧ್ಯ, ಶಿಕ್ಷಣದಿಂದಲ್ಲ ಎಂಬ ನಂಬಿಕೆ ಆಳವಾಗಿ ಬೇರೂರಿತ್ತು. ಇದಕ್ಕೆ ವಿರುದ್ಧವಾದ ಅಭಿಪ್ರಾಯ ತಳೆದಿದ್ದರು ವೆಂಕಟಕೃಷ್ಣಯ್ಯ. ಶಿಕ್ಷಣದಿಂದ ಒಳ್ಳೆಯ ಪತ್ರಕರ್ತರನ್ನು ರೂಪಿಸಬಹುದು ಎಂದು ನಂಬಿದ್ದರು. ಯಾವತ್ತೂ ಪ್ರತಿಭೆಯನ್ನು ಹುಡುಕಿ ತೆಗೆದು ಉತ್ತೇಜಿಸುವುದು ಅವರ ಜಾಯಮಾನ. ಪತ್ರಿಕೋದ್ಯಮದಲ್ಲಿ ಹೆಚ್ಚು ಅಂಕ ಗಳಿಸುವ ವಿದ್ಯಾರ್ಥಿಗೆ ಬಹುಮಾನ ನೀಡಲು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಆ ಕಾಲದಲ್ಲೇ ದತ್ತಿ ನೀಡಿದ್ದರು ಎನ್ನುವುದು ಇದಕ್ಕೆ ಸಾಕ್ಷಿ.

ತಾತಯ್ಯನವರು ಇಬ್ಬರು ಪ್ರತಿಭಾವಂತ ಸಹೋದರರನ್ನು ಪತ್ರಿಕೋದ್ಯಮದಲ್ಲಿ ತರಬೇತು ಗೊಳಿಸಿದ್ದರು. ಅವರೇ ಎಂ. ಗೋಪಾಲ ಅಯ್ಯಂಗಾರ್ ಮತ್ತು ಎಂ. ಶ್ರೀನಿವಾಸ ಅಯ್ಯಂಗಾರ್. ಇವರಿಬ್ಬರಿಗೂ ಮುಂದೆ ಬೆಂಗಳೂರಿಗೆ ತಮ್ಮ ಕಾರ್ಯಕ್ಷೇತ್ರವನ್ನು ವರ್ಗಾಯಿಸಿದರು. ಅವರ 'ಕನ್ನಡ ನಡೆಗನ್ನಡಿ' ಪತ್ರಿಕೆ ೧೮೯೫ರಲ್ಲಿ ಆರಂಭವಾಯಿತು. ಇದರೊಡನೆ 'ಮೈಸೂರು ಸ್ಟಾಂಡರ್ಡ್' ಎಂಬ ಇಂಗ್ಲಿಷ್ ಭಾಷೆಯ ಅರ್ಧವಾರ ಪತ್ರಿಕೆಯನ್ನು ಹೊರಡಿಸಿದರು.

## ಸರ್ಕಾರದ ಕಣ್ಣು ಬಿದ್ದಾಗ

ವೆಂಕಟಕೃಷ್ಣಯ್ಯನವರ ಬೆಂಬಲವಿದ್ದ 'ಕನ್ನಡ ನಡೆಗನ್ನಡಿ' ಅತ್ಯಲ್ಪ ಕಾಲದಲ್ಲಿಯೇ ಜನಪ್ರಿಯವಾಯಿತು. ಅದರ ನಿರ್ಭೀತ ಟೀಕೆ, ಸ್ವತಂತ್ರ ವಿಚಾರಧಾರೆ ಮತ್ತು ಸರಳ ಶೈಲಿ ಓದುಗರನ್ನು ಆಕರ್ಷಿಸಿದವು. ಇದಕ್ಕೆ ತಾತಯ್ಯನವರು ನೀಡಿದ್ದ ತರಬೇತಿಯೇ ಕಾರಣ. ಆದರೆ ಆಡಳಿತಗಾರರ ಉರಿಗಣ್ಣು ಇಂತಹ ಧೀಮಂತ ಪತ್ರಿಕೋದ್ಯಮವನ್ನು ಸಹಿಸಲಿಲ್ಲ. ಎರಡೂ ಪತ್ರಿಕೆಗಳು ಅಂದಿನ ದಿವಾನರುಗಳಾದ ಪಿ. ಎನ್. ಕೃಷ್ಣಮೂರ್ತಿ ಮತ್ತು ವಿ.ಪಿ. ಮಾಧವರಾಯರ ಅವಕೃಪೆಗೆ ಈಡಾದವು.

ಈ ಮುನ್ನ ೧೮೯೪ರಲ್ಲಿ ಬಿ.ಸಿ. ಶ್ರೀನಿವಾಸ ಅಯ್ಯಂಗಾರ್ ಅವರ 'ಮೈಸೂರು ದೇಶಾಭಿಮಾನಿ' ಪತ್ರಿಕೆಯನ್ನು ಸರ್ಕಾರ ನಿಲ್ಲಿಸಿ, ಮುದ್ರಣಾಲಯವನ್ನು ಮುಟ್ಟುಗೋಲು ಹಾಕಿಕೊಂಡಾಗ ವೆಂಕಟಕೃಷ್ಣಯ್ಯನವರು ಅದನ್ನು ತೀವ್ರವಾಗಿ ಪ್ರತಿಭಟಿಸಿದ್ದರು. ಇದು ಅವರ ಪತ್ರಿಕಾ ಸ್ವಾತಂತ್ರ್ಯದಲ್ಲಿ ಇಟ್ಟಿದ್ದ ನಂಬಿಕೆಗೆ ನಿದರ್ಶನ.

ತಾತಯ್ಯನವರ ಸಾರ್ವಜನಿಕ ಸೇವೆ ಅಡೆತಡೆಯಿಲ್ಲದೆ ಮುಂದುವರೆಯಿತು. ಅವರು ಲೆಜಿಸ್ಲೇಟಿವ್ ಕೌನ್ಸಿಲ್ಲಿನ ಸದಸ್ಯರಾಗಿ ಅನೇಕ ವರ್ಷ ಸೇವೆ ಸಲ್ಲಿಸಿದರು. ಮೈಸೂರು ಪುರಸಭೆಯ ಸದಸ್ಯರಾಗಿ ಸುಮಾರು ಅರ್ಧ ಶತಮಾನ ಕಾಲ ಕಾರ್ಯ ನಿರ್ವಹಿಸಿದರು ಎಂದರೆ ಮಹಾಸಾಧನೆಯೇ ಸರಿ. ಆರ್ಥಿಕ ಸಮ್ಮೇಳನ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಇವುಗಳ ಸದಸ್ಯರಾಗಿಯೂ ಇದ್ದರು. ಅವರ ಅನಾಥಾಲಯ ೧೮೯೬ರಲ್ಲಿ ಸ್ಥಾಪನೆ ಆಯಿತು. ಬಡ ವಿದ್ಯಾರ್ಥಿಗಳ ಸಹಾಯಕ್ಕಾಗಿ ಹುಟ್ಟುಹಾಕಲಾದ ಸಂಸ್ಥೆ ಇಂದಿಗೂ ಸೇವೆಯ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಿದೆ.

ಮಹಾತ್ಮಾ ಗಾಂಧಿಯವರ ಆದರ್ಶ ಮತ್ತು ತತ್ವಗಳು ತಾತಯ್ಯನವರಿಗೆ ಪ್ರಿಯವಾಗಿದ್ದವು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಮೈಸೂರು ರಾಜ್ಯದಲ್ಲಿ ಕಾಲಿಟ್ಟಾಗ ಅದನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಹರಿಜನೋದ್ಧಾರಕ್ಕಾಗಿ ಶ್ರಮಿಸಿದರು. ಮಹಿಳೆಯರ ವಿದ್ಯಾಭ್ಯಾಸದ ಅಗತ್ಯ ಸದಾ ಅವರ ಮನಸ್ಸಿನಲ್ಲಿ ಇದ್ದಿತು. ಅಪರಿಮಿತ ಸ್ವಾತಂತ್ರ್ಯವಾದಿ. ಅವರು ಶಾಂತಿಶೀಲರು, ಆದರೆ ಅವರ ಬರಹಗಳು ೧೯೧೮ರಿಂದ ೧೯೨೪ರವರೆಗೆ ಕಿಡಿಯನ್ನೇ ಕಾರಿದವು. ಸರ್ಕಾರವನ್ನು ಕಟುವಾಗಿ ಚುಚ್ಚಿದವು. ನಿವೃತ್ತಿ ವೇತನವನ್ನು ಸರ್ಕಾರ ಹಿಂತೆಗೆದುಕೊಂಡಾಗಲೂ ಅವರು ಅಂಜಲಿಲ್ಲ. ಅಳುಕಲಿಲ್ಲ. ತಮ್ಮ ಕಾಯಕವನ್ನು ನಿರ್ಭಯವಾಗಿ ಎಲ್ಲರಿಗೂ ಮೆಚ್ಚುಗೆಯಾಗುವಂತೆ ನಿರ್ವಹಿಸಿದರು.

## ಜನಪ್ರಿಯತೆ

ವೆಂಕಟಕೃಷ್ಣಯ್ಯನವರ 'ವೃತ್ತಾಂತ ಚಿಂತಾಮಣಿ' ಮತ್ತು ಇಂಗ್ಲಿಷ್ ಪತ್ರಿಕೆ 'ಮೈಸೂರು ಹೆರಾಲ್ಡ್' ಅತ್ಯಂತ ಜನಪ್ರಿಯವಾಗಿದ್ದವು. ಅನೇಕ ಮಂದಿ ಗೆಳೆಯರ ಸಹಕಾರ ಮತ್ತು ಸಹಾಯ ಇದ್ದರೂ ವೆಂಕಟಕೃಷ್ಣಯ್ಯನವರೇ ಪತ್ರಿಕೆಗಳ ನೀತಿ ನಿಯಂತ್ರಕ. ವಾರಪತ್ರಿಕೆಗಳಾಗಿದ್ದ ಇವು ಸ್ವಲ್ಪ ಕಾಲದಲ್ಲೇ ಅರ್ಧವಾರ ಪತ್ರಿಕೆಗಳಾಗಿ ಪರಿವರ್ತಿತವಾದವು. ಕುತೂಹಲಕಾರೀ ಸುದ್ದಿಗಳಿಗೆ ಮತ್ತು ಕುಟುಕುವ ಅಭಿಪ್ರಾಯಗಳಿಗೆ ಹೆಸರು ಪಡೆದವು. ಇವುಗಳಲ್ಲಿ ಸರ್ಕಾರದ ಮತ್ತು ಸ್ಥಳೀಯ ಸಂಸ್ಥೆಗಳ ಆಡಳಿತ ವೈಖರಿಯನ್ನು ಮೊನಚಾಗಿ ಟೀಕಿಸುತ್ತಿದ್ದ ಲೇಖನಗಳು ಪ್ರಕಟವಾಗುತ್ತಿದ್ದವು. ಶಿಕ್ಷಣ ಇಲಾಖೆಯ ಅಂದಿನ ಇನ್ಸ್‌ಪೆಕ್ಟರ್ ಜನರಲ್ ಸಿ. ಆರ್. ರೆಡ್ಡಿಯವರ ಶಿಕ್ಷಣ ನೀತಿ ಸಹಾ ಟೀಕೆಗೆ ಒಳಗಾಯಿತು.

ತಾತಯ್ಯನವರ ಮನೆಯ ಅಂಗಳದಲ್ಲೇ ಇದ್ದ ಸ್ವಂತ ಅಚ್ಚುಕೂಟದಲ್ಲಿ ಈ ಪತ್ರಿಕೆಗಳು ಮುದ್ರಿತವಾಗುತ್ತಿದ್ದವು. 'ಮೈಸೂರು ಹೆರಾಲ್ಡ್' ಉತ್ತಮ ಪ್ರಸಾರವನ್ನು ಹೊಂದಿತ್ತು. ವೆಂಕಟಕೃಷ್ಣಯ್ಯನವರ ಪ್ರಭಾವ ಎಷ್ಟಿತ್ತೆಂದರೆ ಅವರ ಅಭಿಪ್ರಾಯಗಳನ್ನು ಅಧಿಕಾರಕ್ಕೆ ಬಂದ ಎಲ್ಲ ದಿವಾನರು ಗೌರವಿಸುತ್ತಿದ್ದರು. ವೆಂಕಟಕೃಷ್ಣಯ್ಯನವರ ಪತ್ರಿಕೆಗಳಿಗೆ ಅಂದಿನ ಅನೇಕ ವಕೀಲರು ಮುಂತಾದ ಬುದ್ಧಿಜೀವಿಗಳು ಲೇಖನಗಳನ್ನು ಬರೆಯುತ್ತಿದ್ದರು.

ಒಮ್ಮೆ ಕೆಲವು ಅಧಿಕಾರಿಗಳ ಅಕ್ರಮಗಳನ್ನು ವಿವರಿಸುವ ಲೇಖನವೊಂದರಲ್ಲಿ ಬಳಸಿದ ಪದವೊಂದು ವಿವಾದಕ್ಕೆ ಎಡೆಕೊಟ್ಟಿತು. ಪತ್ರಿಕೆಯ ಪ್ರಕಾಶಕರು ಮತ್ತು ಲೇಖಕರ ವಿರುದ್ಧ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲಾಯಿತು. ಇದು ಸಾರ್ವಜನಿಕ ಆಸಕ್ತಿಯನ್ನು ಕೆರಳಿಸಿತು. ಸ್ವಲ್ಪ ಕಾಲದ ಮೇಲೆ ಫಿರ್ಯಾದುದಾರರು ಖಟ್ಲೆಯನ್ನು ಹಿಂತೆಗೆದುಕೊಂಡರು. ಹೀಗೆ ತಾತಯ್ಯನವರಿಗೆ ತಾತ್ವಿಕ ವಿಜಯ ಲಭಿಸಿತು.

ವಿ. ಪಿ. ಮಾಧವರಾಯರು ದಿವಾನರಾದರು. ವೆಂಕಟಕೃಷ್ಣಯ್ಯನವರ ಟೀಕೆಗಳು ಮತ್ತಷ್ಟು ಹರಿತವಾದವು. ಮೈಸೂರು ಸಂಸ್ಥಾನದಲ್ಲಿ ೧೯೦೮ರಲ್ಲಿ ಪತ್ರಿಕಾ ನಿಯಂತ್ರಣ ಶಾಸನ ಜಾರಿಗೆ ಬಂದಿತು. ಇದರ ಉದ್ದೇಶ 'ಕನ್ನಡ ನಡೆಗನ್ನಡಿ'ಯಂತಹ ನಿರ್ಭೀತ ಪತ್ರಿಕೆಗಳನ್ನು ತುಳಿಯುವುದು, ಧೀರ ಸಂಪಾದಕರನ್ನು ಗಡೀಪಾರು ಮಾಡುವುದು. ಶಾಸನವು ಸರ್ಕಾರಕ್ಕೆ ರಾಜ್ಯದಲ್ಲಿ ಪ್ರಕಟವಾಗುವ ಯಾವುದೇ ಪತ್ರಿಕೆಯನ್ನು ದಮನಗೊಳಿಸುವ ಅಧಿಕಾರ ನೀಡಿತು. ಸರ್ಕಾರದ ಲಿಖಿತ ಪೂರ್ವಾನುಮತಿ ಇಲ್ಲದೆ

ಸಂಸ್ಥಾನದಲ್ಲಿ ಯಾವುದೇ ಪತ್ರಿಕೆ ಪ್ರಕಟವಾಗುವುದನ್ನು ಶಾಸನ ನಿಷೇಧಿಸಿತು. ಅಲ್ಲದೇ ಯಾವ ಮುನ್‌ಸೂಚನೆಯನ್ನೂ ನೀಡದೆ ಅನುಮತಿಯನ್ನು ಹಿಂದೆ ತೆಗೆದುಕೊಳ್ಳುವ ವಿಶೇಷ ಅಧಿಕಾರ ಸರ್ಕಾರಕ್ಕೆ ಪ್ರಾಪ್ತವಾಯಿತು. ಇದಕ್ಕಾಗಿ ಸರ್ಕಾರ ಯಾವುದೇ ತನಿಖೆ ನಡೆಸುವ, ಸಾಕ್ಷ್ಯ ಪಡೆಯುವ ಅಥವಾ ಕಾರಣ ಕೊಡುವ ಅಗತ್ಯ ಇರಲಿಲ್ಲ. ಆಪಾದನೆಯನ್ನು ಪರಿಶೀಲಿಸದೆಯೇ - ನ್ಯಾಯಾಧೀಶರು ಶಿಕ್ಷೆ ವಿಧಿಸಬಹುದಿತ್ತು. ಆಪಾದಿತನಿಗೆ ವಿಚಾರಣೆಯಲ್ಲಿ ಮಾತನಾಡುವ ಅಥವಾ ಸಮರ್ಥಿಸಿಕೊಳ್ಳುವ ಅವಕಾಶವೇ ಇರಲಿಲ್ಲ.

ಕರಾಳ ಶಾಸನದ ಉಕ್ಕಿನ ಹಿಡಿತ ಬಲವಾದಂತೆ 'ಮೈಸೂರು ಹೆರಾಲ್ಡ್', 'ವೃತ್ತಾಂತ ಚಿಂತಾಮಣಿ' ಮುಂತಾದ ಪತ್ರಿಕೆಗಳ ಪ್ರಕಟಣೆಯನ್ನು ನಿಲ್ಲಿಸಬೇಕಾಯಿತು. ಹೆಚ್ಚುಕಡಿಮೆ ಭಾರತೀಯ ಮಾಲಿಕತ್ವದ ಎಲ್ಲ ಪತ್ರಿಕೆಗಳಿಗೂ ಇದೇ ಗತಿ ಒದಗಿತು. ಆಡಳಿತಗಾರರಲ್ಲಿ ಪತ್ರಿಕಾ ಸ್ವಾತಂತ್ರ್ಯವನ್ನು ಒತ್ತೆ ಇಡಲು ವೆಂಕಟಕೃಷ್ಣಯ್ಯ ಸಿದ್ಧರಿರಲಿಲ್ಲ. ತಿಂಗಳಿಗೆ ನೂರು ರೂಪಾಯಿಗಳಿಗೂ ಹೆಚ್ಚು ನಷ್ಟ ಅನುಭವಿಸುತ್ತಿದ್ದರೂ ಪತ್ರಿಕೆಗಳ ಸ್ವಾತಂತ್ರ್ಯವನ್ನು ಮಾರಿಕೊಳ್ಳಲು ಅವರು ಎಂದಿಗೂ ಒಪ್ಪಲಿಲ್ಲ. ವಿರುದ್ಧವಾಗಿ ಈ ಕಪ್ಪು ಶಾಸನದ ಹಿನ್ನೆಲೆಯಿಂದ ಅಧಿಕಾರೀ ವರ್ಗಕ್ಕೆ ಸವಾಲು ಹಾಕಿದರು. ಅವರ ಬೆಂಬಲಕ್ಕೆ ಬಹುತೇಕ ಪತ್ರಿಕಾ ಸಂಪಾದಕರು ನಿಂತರು.

ಪತ್ರಿಕೆ ನಿಲ್ಲಿಸುವ ಮುನ್ನ 'ಮೈಸೂರು ಹೆರಾಲ್ಡ್' ಪತ್ರಿಕೆಯಲ್ಲಿ ಬರೆದ ಕಡೆಯ ಸಂಪಾದಕೀಯ:

'ಇಂಗ್ಲೆಂಡಿನ ಉದಾಹರಣೆಯನ್ನೇ ಮೈಸೂರಿನ ಪತ್ರಿಕೆಗಳು ಅನುಸರಿಸಿ, ಮಹಾರಾಜರನ್ನು ಬಿಟ್ಟು, ದಿವಾನರಾದಿಯಾಗಿ ಯಾವ ಅಧಿಕಾರಿಯನ್ನೇ ಆಗಲೀ ಟೀಕಿಸಲು ಅಧಿಕಾರ ಹೊಂದಿರುತ್ತದೆ. ಅದಕ್ಕೆ ಭಂಗ ತರುವಂತೆ ದಿವಾನರು ಮಾಡಿದ್ದು ಸರ್ವಥಾ ಸರಿಯಲ್ಲ, ನ್ಯಾಯವಲ್ಲ, ಇದರಿಂದ ದೇಶಕ್ಕೆ ಬಹಳ ಅಪಕಾರ, ಪತ್ರಿಕಾ ಕಾನೂನನ್ನು ಉಲ್ಲಂಘಿಸಿದರೆ ಗಡೀಪಾರೆ? ಇದೆಂತಹ ಹುಚ್ಚು ಶಿಕ್ಷೆ! ವಿಧಿ ಇಲ್ಲದೆ ಈಗ ಪತ್ರಿಕೆಯನ್ನು ನಿಲ್ಲಿಸಿದ್ದೇವೆ. ಮುಂದೆ ಒಳ್ಳೆಯ ಸಮಯ ಬಂದಾಗ ಪತ್ರಿಕೆಯನ್ನು ಪುನಃ ಹೊರಡಿಸುತ್ತೇವೆ. ಸದ್ಯಕ್ಕೆ ಎಲ್ಲರಿಗೂ ನಮಸ್ಕಾರ!'

೧೯೧೨ನೇ ಇಸವಿ ಎಂ. ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾದರು. ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇಟ್ಟಿದ್ದವರು. ಪತ್ರಿಕೆಗಳ ಮಹತ್ವವನ್ನು ಅರಿತಿದ್ದು ಅವುಗಳ ಸ್ವಾತಂತ್ರ್ಯವನ್ನು ಮನ್ನಿಸಿದ ಉದಾರವಾದಿ. ದಿವಾನರ ಪದವಿ ಮೈಸೂರಿನವರಿಗೇ ದೊರೆತದ್ದರಿಂದ ವೆಂಕಟಕೃಷ್ಣಯ್ಯನವರಿಗೂ ಸಂತೋಷ.

ಹೊಸ ಪರಿಸರ ಹೊಸ ಪತ್ರಿಕೆಗಳನ್ನು ಆರಂಭಿಸಲು ತಾತಯ್ಯನವರಿಗೆ ಉತ್ತೇಜನ ನೀಡಿತು. ಇದಕ್ಕೂ ಮುಂಚೆ ಸ್ವಲ್ಪ ಸಮಯ ಟಿ. ಆನಂದರಾಯರು ದಿವಾನರಾಗಿದ್ದಾಗ ೧೯೧೧ರಲ್ಲಿ 'ಸಾಧ್ವಿ' ಕನ್ನಡ ವಾರಪತ್ರಿಕೆ ಮತ್ತು ಇಂಗ್ಲಿಷ್ ವಾರಪತ್ರಿಕೆ ' ಮೈಸೂರು ಪೇಟ್ರಿಯಟ್' ಇವುಗಳನ್ನು ಪುನಃ ಆರಂಭಿಸಿದ್ದರು. ಅನಂತರ ದಿನಪತ್ರಿಕೆಯಾಗಿ ಈಗ ವಜ್ರಮಹೋತ್ಸವದತ್ತ ಸಾಗುತ್ತಿರುವ 'ಸಾಧ್ವಿ' ಪತ್ರಿಕೆಯ ಸಂಪಾದಕರು ಅಗರಂ ರಂಗಯ್ಯ.

## ಆಡಳಿತದಲ್ಲಿ ಸುಧಾರಣಾಮುಟ್ಟ

ವಿಶ್ವೇಶ್ವರಯ್ಯನವರ ಆಡಳಿತ ಕಾಲದಲ್ಲಿ ಲೋಪದೋಷಗಳು ಕಂಡು ಬಂದಾಗ ಅವುಗಳನ್ನು ಖಂಡಿಸಲು ವೆಂಕಟಕೃಷ್ಣಯ್ಯ ಹಿಂಜರಿಯಲಿಲ್ಲ. ತಮ್ಮ ಆಡಳಿತ ಮೇಲಿನ ಟೀಕೆಗಳನ್ನು ವಿಶ್ವೇಶ್ವರಯ್ಯನವರೂ ಸಹಾ ಅಷ್ಟೇ ಮುಕ್ತ ಮನಸ್ಸಿನಿಂದ ಸ್ವಾಗತಿಸುತ್ತಿದ್ದರು. ಈ ಪತ್ರಿಕೆಗಳನ್ನು ದಮನಗೊಳಿಸಲು ಬ್ರಿಟಿಷ್ ರೆಸಿಡೆಂಟನಿಂದ ಸಲಹೆ ಬಂದರೂ ದಿವಾನರು ಅದನ್ನು ಕಾರ್ಯಗತಗೊಳಿಸಲಿಲ್ಲ. ಆ ಕಾಲದಲ್ಲಿ ವೆಂಕಟಕೃಷ್ಣಯ್ಯ ಅವರು ಸ್ಥಾಪಿಸಿದ ಎರಡು ಪತ್ರಿಕೆಗಳು 'ವೆಲ್ತ್ ಆಫ್ ಮೈಸೂರ್', ಇಂಗ್ಲೀಷ್ ದೈನಿಕ ಮತ್ತು 'ಸಂಪದಭ್ಯುದಯ' ಕನ್ನಡ ದೈನಿಕ.

ವೆಂಕಟಕೃಷ್ಣಯ್ಯನವರು ತಮ್ಮ ಲೇಖನಿಯಿಂದ ಮುಟ್ಟದ ಕ್ಷೇತ್ರವಿಲ್ಲ. ಭಾರತದಲ್ಲಿ ವೈದ್ಯಕೀಯ ಶಿಕ್ಷಣ, ಭಾರತ ರಾಷ್ಟ್ರೀಯ ಕಾಂಗ್ರೆಸ್, ಸರ್ಕಾರೀ ಸೇವೆಗಳಿಗೆ ನೇಮಕ, ಇಂಗ್ಲೆಂಡಿನಲ್ಲಿ ಭಾರತೀಯ ವಿದ್ಯಾರ್ಥಿಗಳು ಮತ್ತಿತರ ಅನೇಕ ವಿಷಯಗಳ ಮೇಲೆ ಲೇಖನಗಳನ್ನು ಬರೆದರು. ಸರ್ ಲೆಸ್ಲೀ ಮಿಲ್ಲರ್, ಸಿ. ಆರ್. ರೆಡ್ಡಿ, ಲಾರ್ಡ್ ಮತ್ತು ಲೇಡಿ ವಿಲಿಂಗ್‌ಟನ್, ಕ್ರೈಸ್ತ ಪಾದ್ರಿಗಳ ಚಟುವಟಿಕೆಗಳು, ಮಿರ್ಜಾ ಇಸ್ಮಾಯಿಲ್ ಆಡಳಿತ, ಕೋಮುವಾರು ಪ್ರಾತಿನಿಧ್ಯ ಮತ್ತು ವಿಶ್ವೇಶ್ವರಯ್ಯ ಸಮಿತಿ - ಎಲ್ಲವೂ ವೆಂಕಟಕೃಷ್ಣಯ್ಯನವರ ಲೇಖನಿಗೆ ಆಹಾರವಾದವು.

ಮಿರ್ಜಾ ಇಸ್ಮಾಯಿಲ್ ೧೯೨೬ರಲ್ಲಿ ದಿವಾನರಾದರು. ಮೊದಲಲ್ಲಿ ತಾತಯ್ಯನವರಿಗೂ ಮತ್ತು ಮಿರ್ಜಾ ಸಾಹೇಬರಿಗೂ ಸ್ನೇಹವಿತ್ತು. ಆದರೆ ಅದು ಕ್ರಮೇಣ ಮಾಯವಾಯಿತು. 'ಮೈಸೂರೂ ಪೇಟ್ರಿಯಟ್' ಪತ್ರಿಕೆಯಲ್ಲಿ ಬಂದ ಕೆಲವು ವರದಿಗಳ ಬಗ್ಗೆ ಮಿರ್ಜಾ ಅವರು ಆಕ್ಷೇಪಿಸಿದರು. ಮಿರ್ಜಾರವರು ದಿವಾನರಾಗಲು ಅಸಮರ್ಥರು ಮತ್ತು ಯುರೋಪಿಯನ್ ದಿವಾನರನ್ನು ನೇಮಿಸಬೇಕು ಎಂದು ಅರ್ಥ ಬರುವ ಪತ್ರವನ್ನು ತಾತಯ್ಯ ಪ್ರಕಟಿಸಿದರು. ಬೆಂಗಳೂರಿನಲ್ಲಿ ಗಲಾಟೆ, ೧೯೨೮ರಲ್ಲಿ ಪತ್ರಿಕೆಗಳ ಹರಿತವಾದ ಟೀಕೆ ಬೇರೆ.

ಮಿರ್ಜಾರಿಗೆ ಕ್ರೋಧ ಉಕ್ಕಿತು. ಪ್ರತೀಕಾರಕ್ಕಾಗಿ ಹವಣಿಸಿದರು. ಪತ್ರಿಕಾ ಕಾನೂನು ಇನ್ನೂ ಚಾಲ್ತಿಯಲ್ಲೇ ಇತ್ತು. ಅದನ್ನು ಆಯುಧವಾಗಿ ಬಳಸಲು ಮಿರ್ಜಾ ನಿರ್ಧರಿಸಿದರು. ಸರ್ಕಾರ ೧೯೨೯ ರಲ್ಲಿ ಪತ್ರಿಕೆಗಳನ್ನು ಪ್ರಕಟಿಸಬಾರದೆಂದು ವೆಂಕಟಕೃಷ್ಣಯ್ಯನವರಿಗೆ ಆದೇಶ ನೀಡಿತು. ಉಲ್ಲಂಘಿಸಿದರೆ ಗಡೀಪಾರು, ಪತ್ರಿಕೆಗಳನ್ನು ನಿಲ್ಲಿಸದೆ ಬೇರೆ ಮಾರ್ಗ ಇರಲಿಲ್ಲ. ಮಹಾರಾಜರಿಗೆ ಮನವಿ ಸಲ್ಲಿಸಿದರೂ ಪ್ರಯೋಜನವಾಗಲಿಲ್ಲ.

ಪತ್ರಿಕೆಗಳ ಸೆಳೆತ ತಾತಯ್ಯನವರನ್ನು ಸುಲಭವಾಗಿ ಬಿಡಲಿಲ್ಲ. ಪ್ರಕೃತಿ ಚಿಕಿತ್ಸೆಗೇ ಮೀಸಲಾದ 'ನೇಚರ್ ಕ್ಯೂರ್' ಎಂಬ ಇಂಗ್ಲಿಷ್ ಪತ್ರಿಕೆಯನ್ನು ಹೊರಡಿಸಿದರು. ಇದಕ್ಕೆ ಸರ್ಕಾರದ ಅನುಮತಿ ಇರಲಿಲ್ಲ. ಸ್ವಲ್ಪ ದಿನಪತ್ರಿಕೆ ನಡೆಯಿತು. ಅಷ್ಟರಲ್ಲಿ ತಾತಯ್ಯನವರ ಸ್ನೇಹಿತರಾದ ಕೆಲವು ಸರ್ಕಾರೀ ಅಧಿಕಾರಿಗಳು ಪತ್ರಿಕೆಯನ್ನು ನಿಲ್ಲಿಸಲು ಒತ್ತಾಯಿಸಿದರು. ಸರ್ಕಾರದ ಅನುಮತಿ ಇಲ್ಲದೆ ಇರುವುದರಿಂದ ಶಿಕ್ಷೆಗೆ ಗುರಿಯಾಗುವ ಸಂಭವ ಇದೆ ಎಂದು ಹೇಳಿದರು. ವಿಧಿ ಇಲ್ಲದೆ ಪತ್ರಿಕೆ ನಿಂತಿತು. ವೆಂಕಟಕೃಷ್ಣಯ್ಯನವರು ಮೇಲಿಂದ ಮೇಲೆ ಪತ್ರಿಕೆಗಳನ್ನು ನಡೆಸಲು ಸರ್ಕಾರಕ್ಕೆ ಅನುಮತಿಗಾಗಿ ಮಾಡಿಕೊಂಡ ಮನವಿಗಳೆಲ್ಲ ನಿರರ್ಥಕಗೊಂಡವು. ಅಲ್ಲಿಗೆ ಅವರ ಕ್ರಿಯಾಶೀಲ ಪತ್ರಿಕೋದ್ಯಮಕ್ಕೆ ತೆರೆ ಬಿದ್ದಿತು.

ಪತ್ರಿಕೆಗಳ ಕರ್ತವ್ಯದ ಬಗ್ಗೆ ಎಂ. ವೆಂಕಟಕೃಷ್ಣಯ್ಯನವರಿಗೆ ಅತ್ಯುತ್ತಮ ಪರಿಜ್ಞಾನವಿತ್ತು. ಅವರ ಅಭಿಪ್ರಾಯಕ್ಕೂ ಮಹಾತ್ಮಾ ಗಾಂಧಿಯವರ ಅಭಿಪ್ರಾಯಕ್ಕೂ ಬಹಳ ಸಾಮ್ಯವಿದೆ. ತಾತಯ್ಯನವರು ಹೇಳಿದ್ದು :

"ಎಲ್ಲಾ ದೇಶಗಳಲ್ಲೂ ಪತ್ರಿಕೆಗಳ ಮುಖ್ಯ ಕರ್ತವ್ಯ ಒಂದೇ. ಅದೇನೆಂದರೆ, ಪ್ರಜೆಗಳ ತಪ್ಪನ್ನು ಪ್ರಜೆಗಳಿಗೆ ತಿಳಿಸತಕ್ಕದ್ದು ಮತ್ತು ಸರ್ಕಾರದ ತಪ್ಪುಗಳನ್ನು ಸರ್ಕಾರಕ್ಕೆ ತೋರಿಸತಕ್ಕದ್ದು.

### ಸನ್ಮಾನ

ಬೆಂಗಳೂರಿನಲ್ಲಿ ೧೯೩೨ರಲ್ಲಿ ಪತ್ರಿಕೋದ್ಯೋಗಿಗಳ ಸಂಘದ ಸ್ಥಾಪನೆ ಆಯಿತು. ಖ್ಯಾತ ಸಾಹಿತಿ ಮತ್ತು ರಾಜನೀತಿಜ್ಞ ಡಿ.ವಿ. ಗುಂಡಪ್ಪನವರು ಅಧ್ಯಕ್ಷರು. ಸಂಘವು ವೆಂಕಟಕೃಷ್ಣಯ್ಯನವರನ್ನು ಸನ್ಮಾನಿಸಿ ಗೌರವಿಸಿತು. ಅವರ ಭಾವಚಿತ್ರ ಅನಾವರಣವು ನಡೆಯಿತು.

ವೃದ್ಧ ಪಿತಾಮಹ, ದಯಾಸಾಗರ ವೆಂಕಟಕೃಷ್ಣಯ್ಯನವರು ಕೇವಲ ಹೊಟ್ಟೆಪಾಡಿಗಾಗಿ ಪತ್ರಿಕೋದ್ಯಮವನ್ನು ಅವಲಂಬಿಸಿರಲಿಲ್ಲ. ಸಾರ್ವಜನಿಕ ಸೇವೆ, ರಾಷ್ಟ್ರದ ಅಭ್ಯುದಯ ಅವರ ಧ್ಯೇಯವಾಗಿತ್ತು. ಅದರ ಸಾಧನೆಗೆ ಪತ್ರಿಕೋದ್ಯಮ ಒಂದು ಮಾಧ್ಯಮವಾಯಿತು. ಕನ್ನಡ ಪತ್ರಿಕೋದ್ಯಮ ಅವರಿಂದ ಸೂಕ್ತ ತಳಹದಿ ಕಂಡುಕೊಂಡಿತು. ಆದ್ದರಿಂದಲೇ ವೆಂಕಟಕೃಷ್ಣಯ್ಯನವರನ್ನು ಕನ್ನಡ ಪತ್ರಿಕೋದ್ಯಮದ ಭೀಷ್ಮ ಎಂದು ವರ್ಣಿಸಿರುವುದು ಅತಿ ಸೂಕ್ತ ಸಮಂಜಸ. ◆

## ೩೨. ಕರ್ಕಿ ವೆಂಕಟರಮಣಶಾಸ್ತ್ರಿ, ಸೂರಿ

ಕ್ರಿ.ಶ. ೧೮೮೭ರಲ್ಲಿ ಮುಂಬಯಿಯಿಂದ ಪ್ರಕಟವಾದ 'ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ'ವೇ ಕನ್ನಡದ ಆದ್ಯ ಸ್ವತಂತ್ರ ಸಾಮಾಜಿಕ ನಾಟಕ; ಅದನ್ನು ಬರೆದವರು ಕರ್ಕಿ ವೆಂಕಟರಮಣ ಶಾಸ್ತ್ರಿಗಳು - ಎಂಬ ಮಾತನ್ನು ಪ್ರೊ. ಲಿಂಗೇಶ ಶರ್ಮರು ಬೆಳಕಿಗೆ ತಂದರು. ಜೊತೆಗೆ ಹಿರಿಯರಿಂದ ಕೇಳಿ ತಿಳಿದ ಕೆಲವು ಅಂಶಗಳನ್ನು ಹೇಳುವಾಗ "ಉತ್ತರ ಕನ್ನಡ ಜಿಲ್ಲೆಯ ವನದುಃಖ ನಿವಾರಣೆ" ಎಂಬ ಲೇಖ ಬರೆದು, ಸರಕಾರದ ಕ್ಷೋಭೆಗೆ ಗುರಿಯಾದರು" ಎಂದು ಉಲ್ಲೇಖಿಸಿದರು. ಆಗಿನ ಕಾಲಕ್ಕೆ ಕನ್ನಡ ಪತ್ರಕರ್ತನ ಮೇಲೆ ಸರಕಾರದ ಕ್ಷೋಭೆ! ಅದರಿಂದ ಕುತೂಹಲಗೊಂಡು, ಮುಂಬಯಿಯ ಪುರಾತನ ದಾಖಲೆಗಳ ಕಚೇರಿಯಲ್ಲಿಯ ಕಾಗದಪತ್ರಗಳನ್ನು ತಡಕಾಡಿದಾಗ, ಶಾಸ್ತ್ರಿಗಳ ಪತ್ರಿಕೋದ್ಯಮ ಸಾಹಸದ ಕೆಲವು ಅಪೂರ್ವ ನಿದರ್ಶನಗಳು ದೊರೆತವು.

ಹವ್ಯಕರಾದ ವೆಂಕಟರಮಣಶಾಸ್ತ್ರಿಗಳು ಹುಟ್ಟಿ ಬೆಳೆದ ಊರು ಕರ್ಕಿ (ಜನನ ಸು. ೧೮೫೨). ಅವರ 'ಸೂರಿ' ಮನೆತನವು ಸಂಸ್ಕೃತ-ವೈದಿಕ ವಿದ್ಯೆಗೆ; ಪಂಚಾಂಗ ಪರಿಷ್ಕರಣಕ್ಕೆ, ವೈದ್ಯಕೀಯಕ್ಕೆ ಹೆಸರಾದುದು. ಜೊತೆಗೆ ಬಡತನ. ತಂದೆ ವಿಘ್ನೇಶ್ವರ ಶಾಸ್ತ್ರಿಗಳು ಸಾಗರ ತಾಲೂಕಿನ ರಾಮಚಂದ್ರಾಪುರ ಮಠದ ಅಧೀನ ಭಕ್ತರು. ಮಗನ ವಿದ್ಯಾಭ್ಯಾಸಕ್ಕೆ ಅಲ್ಲಿಯೆ ಏರ್ಪಾಡು ಮಾಡಿದರು. ಅಲ್ಲಿ ಕಲಿತ ವಿದ್ಯೆ ಮೂಲದ್ರವ್ಯವಾಗಿ ಉಳಿದು ವೆಂಕಟರಮಣ ಶಾಸ್ತ್ರಿಗಳ ಜೀವಮಾನದ ವರೆಗೂ ಪ್ರಯೋಜನಕ್ಕೆ ಬಂದಿತು. ಅವರಲ್ಲಿ ಹವ್ಯಕ ನಿಷ್ಠೆ ನೆಲೆ ನಿಲ್ಲುವುದಕ್ಕೂ ಅಲ್ಲಿಯ ಪರಿಸರವೇ ಕಾರಣ.

ಚಿಕ್ಕಂದಿನಿಂದಲೂ ಶಾಸ್ತ್ರಿಗಳಿಗೆ ಸಂಚಾರವೊಂದು ಹವ್ಯಾಸವಾಗಿ ಬಂತು. ಉತ್ತರ ಕನ್ನಡ ಜಿಲ್ಲೆಯ ಘಟ್ಟದ ಮೇಲಿನ ಊರುಗಳಲ್ಲಿ, ಹಳೆಯ ಮೈಸೂರಿನ ಸಾಗರ, ಸೊರಬ ತಾಲೂಕುಗಳಲ್ಲಿ ಅವರಿಗೆ ಪರಿಚಯವಿರದ ಮುಖ್ಯರಿರಲಿಲ್ಲ.

ಅದರಲ್ಲಿಯೂ ಶಿರಸಿಯ ಹೊಕ್ಕುಬಳಕೆ ವಿಶೇಷವಾಗಿದ್ದಿತು. ಅಲ್ಲಿಯ ವಕೀಲರಾದ (ಸರಕಾರೀ?) ಗೋಪಿ ಮಹಾಬಲೇಶ್ವರ ಭಟ್ಟರು ಸಮಾಜಸುಧಾರಕರೆನಿಸಿದ್ದರು. ತರುಣ ವಯದ ಶಾಸ್ತ್ರಿಯವರು ಅವರ ವ್ಯಕ್ತಿತ್ವ, ಕಾರ್ಯಸ್ವರೂಪಗಳಿಗೆ ಮಾರುಹೋಗಿದ್ದರು. ತಮ್ಮ 'ನಾಟ್ಯ ಕಥಾರ್ಣವ' ಕೃತಿಯನ್ನು ಅವರಿಗೆ ಅರ್ಪಿಸಿದರು. ಈ ಸುತ್ತಾಟದ ಫಲವಾಗಿ ಶಾಸ್ತ್ರಿಗಳಿಗೆ ಜನಜೀವನದ, ಅವರ ಸಮಸ್ಯೆಗಳ ನಿಕಟ ಪರಿಚಯ ಒದಗಿಬಂದಿತು. ಹಿಂದುಳಿದ ಹವ್ಯಕ ಸಮಾಜದ ಸುಧಾರಣೆಯ ಜೊತೆಗೆ, ಜಿಲ್ಲೆಯ ಸಂಕಷ್ಟಗಳ ಬಗ್ಗೆ ಕಳಕಳಿ ಮತ್ತು ಉತ್ಕಟವಾದ ಕನ್ನಡಾಭಿಮಾನ ಇವು ಅವರ ಅಂತರ್ಯದ ಒಲವುಗಳಾಗಿದ್ದುವು; ಅವರನ್ನು ನಾಡಿನ ನವೋದಯ ರಂಗದಲ್ಲಿ ತಂದು ನಿಲ್ಲಿಸಿದುವು; ಮುಂಬಯಿಗೂ ಕರೆದು ತಂದುವು.

ಅದು ೧೮೮೫ನೆಯ ವರ್ಷ, ಮಧ್ಯಮ ವರ್ಗೀಯರ ಸ್ವಾಭಿಮಾನ, ಸ್ವಾತಂತ್ರ್ಯಾಪೇಕ್ಷೆಗಳ ಪ್ರತೀಕವಾಗಿ ಅಖಿಲ ಭಾರತ ಕಾಂಗ್ರೆಸ್ ಜನ್ಮ ತಾಳಿದ ವರ್ಷವದು. ಬ್ರಿಟಿಶ್ ಅಧಿಕಾರಿಗಳ ಉಚ್ಛೃಂಖಲ ಮನೋವೃತ್ತಿಯನ್ನು ಧೈರ್ಯದಿಂದ ಎದುರಿಸುವ ಮನೋವೃತ್ತಿ ಮೂಡಿದ್ದಿತು. ಆಗ ವಾಯಿಸರಾಯನಾಗಿದ್ದ ಲಾರ್ಡ್ ಡಫರಿನ್ ಅಪ್ಪಟ ಸಾಮ್ರಾಜ್ಯವಾದಿ. ಅದೇ ಕಾಲಕ್ಕೆ ಮುಂಬಯಿಯಲ್ಲಿ ಗವರ್ನರನಾಗಿದ್ದ ಲಾರ್ಡ್ ರೇನಂತಹ ಕೆಲವು ಉದಾರ ಹಾಗೂ ನ್ಯಾಯಪಕ್ಷಪಾತಿಗಳಿದ್ದರೂ ಒಟ್ಟಿನಲ್ಲಿ ಅಧಿಕಾರಿಗಳ ಅಹಂಭಾವವು ಭಾರತೀಯರನ್ನು ಉದ್ರಿಕ್ತಗೊಳಿಸುವಂತಿದ್ದಿತು. ಇತ್ತ ಟಿಳಕ, ಆಗರಕರರಂತಹರು ಸಾರ್ವಜನಿಕ ರಂಗದಲ್ಲಿ ಧುಮುಕಿ ಜನಜಾಗೃತಿಯ ಕಾರ್ಯದಲ್ಲಿ ತೊಡಗಿದ್ದರು. ಆಗಿನ ಮುಂಬಯಿ ರಾಜ್ಯದಲ್ಲಿ ಪ್ರಕಟವಾಗುತ್ತಿದ್ದ 'ನೇಟಿವ್ ಓಪಿನಿಯನ್' ಮತ್ತು 'ಮರಾಠಾ' ಎಂಬ ಇಂಗ್ಲಿಷ್ ಪತ್ರಿಕೆಗಳೂ 'ಕೇಸರಿ', 'ಜ್ಞಾನಪ್ರಕಾಶ' ಮೊದಲಾದ ಮರಾಠೀ ಪತ್ರಿಕೆಗಳೂ 'ಜಾಮೇ-ಜಮಶೇದ್'(ಪಾರ್ಸಿ) ಹಾಗೂ 'ಹಿತೇಚ್ಛು' ಎಂಬ ಗುಜರಾತೀ, ಮರಾಠೀ ಸಾಪ್ತಾಹಿಕಗಳೂ ಸರಕಾರದ ವಿವಿಧ ಧೋರಣೆಗಳನ್ನು ಖಂಡಿಸುತ್ತ ಆಡಳಿತೆಯ ಲೋಪ-ದೋಷಗಳನ್ನೂ ಹೊರಗೆಳೆಯುತ್ತಲಿದ್ದುವು.

ಇಂಥ ವಾತಾವರಣದಲ್ಲಿ ವೆಂಕಟರಮಣ ಶಾಸ್ತ್ರಿಗಳು ಮುಂಬಯಿಗೆ ಬಂದರು. ಪ್ರತ್ಯುತ್ಪನ್ನಮತಿಯಾದ ಅವರು ಗ್ರಂಥೋದ್ಯಮ, ಪತ್ರಿಕಾ ಪ್ರಕಟನೆಗಳನ್ನು ತಮ್ಮ ಕಾರ್ಯರಂಗವನ್ನಾಗಿ ಮಾಡಿಕೊಂಡರು. 'ಕರ್ಕಿ ವೆಂಕಟರಮಣ ಶಾಸ್ತ್ರೀ ಮತ್ತು ಕಂಪೆನಿ'ಯನ್ನು ಸ್ಥಾಪಿಸಿದರು. ಈ ಕಂಪೆನಿಯ ಭಾಗೀದಾರರು ಇಬ್ಬರೇ! ಇವರನ್ನುಳಿದು ಆ ಇನ್ನೊಬ್ಬ ವ್ಯಕ್ತಿ ಬೂದಿ ಮಹಾಬಲೇಶ್ವರ ಭಟ್ಟರು. ಸ್ವಯಂ ಲೇಖಕರಲ್ಲವಾದರೂ ಶಾಸ್ತ್ರಿಗಳ ಗ್ರಂಥೋದ್ಯಮದ ಹುಚ್ಚು ಸಾಹಸಕ್ಕೆ ಭಟ್ಟರು ಹೆಗಲೆಣೆಯಾದರು. ವ್ಯಾಪಾರೀ ವೃತ್ತಿಯಿಂದ ಗಳಿಸಿದುದನ್ನೆಲ್ಲ ಗ್ರಂಥಪ್ರಕಟನೆಗೆ ಸುರಿದು ಕೈ ಸುಟ್ಟುಕೊಂಡರು. ಶಾಸ್ತ್ರಿಗಳ ಕಾರ್ಯ ಸಾಧನೆಯ ಮಾತು ಇನ್ನು ಮುಂದೆ ಬಂದಾಗ, ಅದರ ಹಿಂದೆ ಈ 'ಗಳಸ್ಯ ಕಂಠಸ್ಯ' ಸ್ನೇಹಿತನ ಪಾಲೂ ಇದೆಯೆಂಬುದನ್ನು ನೆನೆದಿರಬೇಕು.

ಗ್ರಂಥರಚನೆ ಮತ್ತು ಪ್ರಕಟನೆ ಒಂದು ಹುಚ್ಚು ಸಾಹಸ ಎಂದೆ. ಈಗೂ ತುಸು ಮಟ್ಟಿಗೆ ಆ ಪರಿಸ್ಥಿತಿ ಇರುವಾಗ ೮೦ ವರ್ಷಗಳ ಹಿಂದೆ, ಅದೂ ದೂರದ ಮುಂಬಯಿಯಲ್ಲಿ ಆ ಉದ್ಯಮವು Fools rush in where angels fear to tread ಎಂಬ ಉಕ್ತಿಗೆ ಅನುಗುಣವಾಗಿದ್ದಿತು. ೧೮೮೦ನೆಯ ದಶಕದಲ್ಲಿ ಸ್ವತಂತ್ರ ವಿಚಾರಧಾರೆಯನ್ನು ವ್ಯಕ್ತಪಡಿಸುವ ಬರವಣಿಗೆ ಕನ್ನಡವಲ್ಲಿ ಒಡಮೂಡಿರಲಿಲ್ಲ. ಕನ್ನಡ ಓದುಗರ ಪಡೆಯೇ ನಿರ್ಮಾಣವಾಗದಿದ್ದಾಗ ಜೀವನೋಪಾಯಕ್ಕೆ ಧಾರ್ಮಿಕ ಅಥವಾ ರಾಜಸ್ಥಾನದ ಆಶ್ರಯ, ಶಿಕ್ಷಕವೃತ್ತಿ ಇಲ್ಲವೇ ಸರಕಾರೀ ನೌಕರಿ ಇವಾವುದನ್ನೂ ನೆಚ್ಚದೇ ಕನ್ನಡದ ಮೇಲಣ ಅಭಿಮಾನದಿಂದ ಈ ಉದ್ಯಮದಲ್ಲಿ ಧುಮುಕುವುದೆಂದರೆ ಹುಚ್ಚು ಸಾಹಸವೇ ಸೈ.

ಅದೂ ಮುಂಬಯಿ ನಗರದಲ್ಲಿ! ಇಂದು ನಾಲ್ಕೈದು ಲಕ್ಷ ಜನ ಕನ್ನಡಿಗರಿರುವ ಮುಂಬೈಯಲ್ಲಿ ನೂರು ವರ್ಷಗಳ ಹಿಂದೆ ಇದ್ದ ಕನ್ನಡಿಗರ ಸಂಖ್ಯೆ ಕೇವಲ ಏಳೆಂಟು ಸಾವಿರ. ಇಂದು ನಾಡಿನ ಎಲ್ಲ ಭಾಗಗಳಿಂದ ಜನ ನೆಲಸಿದ್ದರೂ ಅಂದಿಗೆ ಮಾತ್ರ ಕೆನರಾ ಜಿಲ್ಲೆಯಿಂದ ಬಂದವರ ಸಂಖ್ಯೆ ದೊಡ್ಡದಿತ್ತು. ಈಸ್ಟ್ ಇಂಡಿಯಾ ಕಂಪೆನಿಯ ಕಾಲದಿಂದಲೂ ಇದ್ದ ಬಳುವಳಿ ಅದು. ಕಾರವಾರ, ಕುಮಠಾ, ಹೊನ್ನಾವರ ಮಾರ್ಗವಾಗಿ ವ್ಯಾಪಾರದ ನಿಮಿತ್ತದಿಂದ ಸಾರಸ್ವತರು ಮತ್ತು ಹವ್ಯಕರು ಇಲ್ಲಿ ನೆಲೆಯೂರಿದ್ದರು. ಈಗಿನಂತೆ ಕನ್ನಡ ಶಿಕ್ಷಣದ ಅನುಕೂಲತೆ ಅವರಿಗಿರಲಿಲ್ಲ. ಇಂದಿನಂತೆ ಕನ್ನಡ ಚಟುವಟಿಕೆಗಳಿಗೆ ಉತ್ಸಾಹವನ್ನು ತಂದುಕೊಡುವ ವಾತಾವರಣ ನಿರ್ಮಾಣವಾಗಿರಲಿಲ್ಲ.

ಅಂಥದರಲ್ಲಿಯೆ ಕನ್ನಡ ಲೇಖನಿಯ ಮಿಂಚು ಆಗೀಗ ಸುಳಿದಾಡುತ್ತಿದ್ದಿತು. ಚುರಮುರಿ ಶೇಷಗಿರಿರಾಯರು (೧೮೭೦) ತಮ್ಮ ಕನ್ನಡ ಶಾಂಕುಂತಲದ ಕವನಗಳನ್ನು ಗುಣಗುಣಿಸಿದ್ದುದು ಇಲ್ಲಿಯೇ. ಅವರೊಬ್ಬರನ್ನುಳಿದು ಈ ನಿರ್ಲಾಭದಾಯಕ ಉದ್ಯಮದಲ್ಲಿ ಸುರುವಿಗೆ ತೊಡಗಿದವರು ಉತ್ತರ ಕನ್ನಡ ಜಿಲ್ಲೆಯವರೇ. ಅವರಲ್ಲೊಬ್ಬರು 'ಕನ್ನಡ ಸುವಾರ್ತೆ' ಎಂಬ ಪತ್ರಿಕೆಯನ್ನು ೧೮೮೩-೮೪ ರಲ್ಲಿ ಮುಂಬೈಯಿಂದ ಹೊರಡಿಸುತ್ತಿದ್ದರು. ಕರ್ನಾಟಕ ಪ್ರೆಸ್ ಎಂಬ ಏಕಮೇವ ಮುದ್ರಣಾಲಯ ಅಸ್ತಿತ್ವದಲ್ಲಿದ್ದಿತು. ಇವು ಕೆಲವೇ ಸಂಗತಿಗಳನ್ನು ಬಿಟ್ಟರೆ ಹೆಚ್ಚಿನ ಸಾಹಿತ್ಯಕಾರ್ಯವು ನಡೆದಂತೆ ತೋರುವುದಿಲ್ಲ. ವೆಂಕಟರಮಣ ಶಾಸ್ತ್ರಿಗಳು ಮುಂಬಯಿಗೆ ಬಂದು, ಆ ರಂಗದಲ್ಲಿ ಧುಮುಕಿ ಚೈತನ್ಯವನ್ನು ತುಂಬಿದರು. ಬೂದಿ ಮಹಾಬಲೇಶ್ವರ ಭಟ್ಟರ ನೆರವಿನಿಂದ ಭಾರತೀ ಪ್ರೆಸ್ ಸ್ಥಾಪಿಸಿದರು. ಪತ್ರಿಕೆಗಳನ್ನೂ ಹಲವಾರು ವೈಶಿಷ್ಟ್ಯಪೂರ್ಣ ಗ್ರಂಥಗಳನ್ನೂ ಬೆಳಕಿಗೆ ತಂದರು.

ಅವರ ಮೊತ್ತಮೊದಲಿನ ಕೃತಿ 'ದಕ್ಷಿಣ ಯಾತ್ರಾ ಚರಿತ್ರೆ'ಯು ಉಡುಪಿ, ಸುಬ್ರಹ್ಮಣ್ಯ ಕ್ಷೇತ್ರಗಳ ಸಂದರ್ಶನವಾಗಿದ್ದು, ಹೊಸಗನ್ನಡ ಗದ್ಯದ ಪ್ರಥಮ ಪ್ರವಾಸ ಸಾಹಿತ್ಯವಾಗಿದೆ. ಅನಂತರದ ಸುಮಾರು ಇಪ್ಪತ್ತು ಕೃತಿಗಳಲ್ಲಿ ಕೆಲವನ್ನು ಅವರು ಸಂಪಾದಿಸಿ, ತಿದ್ದಿ ಪ್ರಕಟಿಸಿದ್ದರು; ಹಲವನ್ನು ಸ್ವತಃ ಬರೆದಿದ್ದರು. ಅವುಗಳಲ್ಲಿ ಯಕ್ಷಗಾನ ಪ್ರಸಂಗಗಳಿವೆ, ಅಧ್ಯಾತ್ಮ ಕೃತಿಗಳಿವೆ, ಹಳಗನ್ನಡ ಕಾವ್ಯಗಳಿವೆ. ಜೊತೆಗೆ ಹವ್ಯಕರ ಉಗಮ, ಇತಿಹಾಸಗಳಿಗೆ ಸಂಬಂಧಪಟ್ಟ ಪುಸ್ತಕಗಳಿವೆ. ಹೀಗೆ ಅವರು ಉತ್ತರ ಕನ್ನಡ ಜಿಲ್ಲೆಯ ಅನೇಕ ಕವಿ ಲೇಖಕರನ್ನು ಬೆಳಕಿಗೆ ತಂದರು. ಅವರ ಸ್ವಂತದ ಪುಸ್ತಕಗಳೆಂದು 'ಪ್ರಾಚೀನ ನಾಟ್ಯ(ನಾಟಕ) ಕಥಾರ್ಣವ', 'ಅನಾರ್ಯರ ವಿವರ' ಮತ್ತು 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಇವನ್ನು ಹೆಸರಿಸಬೇಕು. 'ಅನಾರ್ಯರ ವಿವರ'ವು ಹಿಂದೂಗಳಲ್ಲಿ ಶೂದ್ರರ ಸ್ಥಾನಮಾನವನ್ನು ಐತಿಹಾಸಿಕವಾಗಿ ನಿದರ್ಶಿಸುವ ಸ್ವತಂತ್ರ ಪ್ರಬಂಧವಾಗಿದ್ದು, ಈ ಬಗೆಯ ಬರೆಹ ೧೮೮೭ರ ಕಾಲದಲ್ಲಿ ಅಪೂರ್ವವಾಗಿತ್ತು. 'ಇಗ್ಗಪ್ಪನ ಪ್ರಹಸನ'ವಂತೂ ಲಿಂಗೇಶ ಶರ್ಮರ ಮರು ಪ್ರಕಟನೆಯಿಂದ (೧೯೫೩) ಹಾಗೂ ಗೋವಿಂದ ಪೈ, ಶಿವರಾಮ ಕಾರಂತ, ರಂ. ಶ್ರೀ ಮುಗಳಿ, ಶ್ರೀರಂಗ, ನಿರಂಜನ ಮೊದಲಾದವರ ಮೆಚ್ಚಿಕೆಯ ಬರಹಗಳ ಮೂಲಕ ಈಗಾಗಲೇ ಮಾನ್ಯತೆಯನ್ನು ಪಡೆದಿದೆ. ವೆಂಕಟರಮಣ ಶಾಸ್ತ್ರಿಗಳ ಸಮಾಜಸುಧಾರಣೆಯ ಕಳಕಳಿಯೇ ಇದರ ಪ್ರೇರಣೆಯೆಂಬುದನ್ನು ಗಮನಿಸತಕ್ಕುದು.

ಈ ಮನ್ನಣೆಗಿಂತಲೂ ಮಿಗಿಲಾದುದೆಂದರೆ ಅವರ ಪತ್ರಿಕಾವೃತ್ತಿ. ಅವರು ನಡೆಸಿದ ಪತ್ರಿಕೆಗಳು ಎರಡು: 'ಹವ್ಯಕ ಸುಬೋಧ' ಮತ್ತು 'ಹಿತೋಪದೇಶ'. ಈ ಹೆಸರುಗಳು ಹಳೆಯ ಕಾಲದವೆನಿಸಿದರೂ, ವಿಷಯವಿವೇಚನೆ ಮತ್ತು ಪತ್ರಿಕಾ ಧೋರಣೆಗಳು ಹೊಸಯುಗಕ್ಕೆ ಅನುಸಾರವಾಗಿಯೇ ಇದ್ದುವು. ೧೮೮೮ರ ಜನವರಿಯಿಂದ ಹೊರಡಲಾರಂಭಿಸಿದ 'ಹಿತೋಪದೇಶ' ಮಾಸಿಕದ ಉದ್ದೇಶವು 'ಕನ್ನಡ ಬಾಲಕರ ವಿದ್ಯಾವ್ಯಾಸಂಗವನ್ನು ಊರ್ಜಿಸುವುದಕ್ಕೆ ಕೈಲಾದ ಮಟ್ಟಿಗೆ ಸಹಾಯ' ಮಾಡಬೇಕೆಂಬುದಾಗಿದ್ದಿತು. ಅದರಲ್ಲಿ ಬಂದಿರುವ ಚರಿತ್ರೆ, ಇತಿಹಾಸ, ವಿಜ್ಞಾನಗಳ ಮೇಲಿನ ವಿವಿಧ ಲೇಖನಗಳು ಮಕ್ಕಳಿಗಾಗಿ ಬರೆದವುಗಳೇ; ಆದರೆ ಇತರರಿಗೂ ಅಷ್ಟೇ ಪ್ರಯೋಜನಕಾರಿಯಾಗಿದ್ದುವು. 'ಹಿತೋಪವಚನ'ವು ನೇರವಾಗಿ ಮಕ್ಕಳನ್ನು ಉದ್ದೇಶಿಸಿಯೇ ಇದ್ದಿತು. ಅನಂತರ, 'ವಿವಿಧ ವೃತ್ತಾಂತ ಸಂಗ್ರಹ'ವೆಂಬ ಹೊಸ ಶೀರ್ಷಿಕೆಯನ್ನು ಆರಂಭಿಸುವಾಗ 'ನಮ್ಮ ಚಿಕ್ಕ ಪ್ರಿಯ ಬಾಲಕರು ಒಂದೇ ವಿಧವಾದ ಭೋಜನವನ್ನು ಮಾಡಬಾರದೆಂದು ಸಿದ್ಧಪಡಿಸಿದ ಕೋಸಂಬರಿ ಇದು' ಎಂದು ಬರೆದರು. ಈ ಶೀರ್ಷಿಕೆಯ ಅಡಿಯಲ್ಲಿ ಜಗತ್ತಿನ ಮೂಲೆ ಮೂಲೆಗಳಿಂದ, ವಿಕ್ಟೋರಿಯಾ ರಾಣಿಯ ಹಿಂದುಸ್ಥಾನೀ ವ್ಯಾಸಂಗದಿಂದ ಹಿಡಿದು ರಣ ಹದ್ದಿನ ಆಯುಮಾನದ ವರೆಗೂ, ನಾನಾ ವಿಧವಾದ ವರ್ತಮಾನಗಳನ್ನು ಚುಟುಕಿನಲ್ಲಿ ಕೊಟ್ಟಿದ್ದಾರೆ. ಮಕ್ಕಳ ಜ್ಞಾನಾರ್ಜನದ ವಿಷಯದಲ್ಲಿ ಅವರ ಕಳಕಳಿ ಎಷ್ಟಿತ್ತೆಂದರೆ, ಪತ್ರಿಕೆಯ ಚಂದಾ ಹಣವನ್ನು ಒಂದೇ ರೂಪಾಯಿ ಇರಿಸಿದ್ದರಲ್ಲದೇ, ಒಂದು ಶಾಲೆಯಲ್ಲಿ ಐದಕ್ಕಿಂತ ಹೆಚ್ಚು ಜನ ವಿದ್ಯಾರ್ಥಿಗಳು ಚಂದಾದಾರರಿದ್ದರೆ ಅವರಿಗೆ ಕೇವಲ ಹತ್ತು ಆಣೆ; ಜೊತೆಗೆ ಮಾಸ್ತರರಿಗೆ ಒಂದು ಪ್ರತಿ ಇನಾಮು! ಈ ಸೌಲಭ್ಯವನ್ನು ಮೊದಲ ಸಂಚಿಕೆಯಲ್ಲಿಯೆ ಸಾರಿದ್ದರ ಪರಿಣಾಮವಾಗಿ, ಅದರ ಪ್ರಯೋಜನವನ್ನು ಅನೇಕರು ಪಡೆದರೆಂಬುದು, ಮುಂದಿನ ಸಂಚಿಕೆಗಳಲ್ಲಿ ಕೊಟ್ಟಿದ್ದ ಚಂದಾದಾರರ ಪಟ್ಟಿಯಿಂದ ವ್ಯಕ್ತವಾಗುತ್ತದೆ.

'ಹಿತೋಪದೇಶ'ದ ಅಪೂರ್ವ ಆಕರ್ಷಣೆ ವ್ಯಂಗ್ಯಚಿತ್ರಗಳಲ್ಲಿದ್ದಿತು. ರಾಜಕೀಯ ಹಾಗೂ ಪ್ರಚಲಿತ ವಿಷಯಗಳ ಮಾರ್ಮಿಕ ನಿರೂಪಣೆಗೆಂದು ಕನ್ನಡದಲ್ಲಿ ವ್ಯಂಗ್ಯಚಿತ್ರಗಳನ್ನು ಬಳಸಿದವರಲ್ಲಿ ವೆಂಕಟರಮಣ ಶಾಸ್ತ್ರಿಗಳೇ ಮೊದಲಿಗರೆಂದು ತೋರುತ್ತದೆ. ಈ ಚಿತ್ರಮಾಲಿಕೆಯನ್ನು ವಾಚಕರು ವಿಶೇಷವಾಗಿ ಮೆಚ್ಚಿದ್ದರೆನ್ನುವುದಕ್ಕೆ ಅವರ ಪತ್ರಗಳೇ ಸಾಕ್ಷಿ. ಖ್ಯಾತನಾಮ ಕರ್ಪೂರ ಶ್ರೀನಿವಾಸರಾಯರು ಆಗ ಬೆಳಗಾವಿ ಜಿಲ್ಲೆಯಲ್ಲಿ ಇಂಜಿನಿಯರರಾಗಿದ್ದರು. "ನಮ್ಮ ಕನ್ನಡ ಭಾಷೆಯು ಅತಿ ಹೀನ ಸ್ಥಿತಿಯಲ್ಲಿದ್ದು ಇಂಥಾ 'ಹಿತೋಪದೇಶ'ಕರವಾದ ಪುಸ್ತಕಗಳು ಬಹು ಅಪರೂಪವಾಗಿರುವುದರಿಂದ ನಿಮ್ಮ ಮೊದಲನೇ ಯತ್ನಕ್ಕೆ ನಿಮ್ಮನ್ನು ಬಹಳವಾಗಿ ಕೊಂಡಾಡಬೇಕಾಗಿದೆ. ಮುಖ್ಯವಾಗಿ ನಿಮ್ಮ ಚಿತ್ರಗಳು ಕೇವಲ ಆನಂದವನ್ನುಂಟು ಮಾಡುವುದಲ್ಲದೆ, ನಿಜಸ್ಥಿತಿಯ ಸಂಗತಿಗಳನ್ನು ಚೆನ್ನಾಗಿ ಮನಸ್ಸಿಗೆ ಹತ್ತುವ ಹಾಗೆ ತೋರಿಸುತ್ತವೆ." ಎಂಬುದಾಗಿ ಶಾಸ್ತ್ರಿಗಳಿಗೆ ಬರೆದರು.

ಹಲವು ವಿಷಯಗಳ ಮೇಲಿನ ಬರೆಹವನ್ನು ಬರುವ ಸಂಚಿಕೆಗಳಲ್ಲಿ ಮುಂದುವರಿಸಿಕೊಂಡು ಹೋಗುವ ಆಗಿನ ಪದ್ಧತಿಯಂತೆ, ಸಾಕ್ರೆಟೀಸ್‌ನ ಚರಿತ್ರೆ, ನೀರಿನ ವೈಜ್ಞಾನಿಕ ವಿವೇಚನೆ, ಹಾಗೂ ಅರ್ಥಶಾಸ್ತ್ರ - ಇವು ಮೂರರ ವಿಸ್ತಾರವಾದ ಪ್ರತಿಪಾದನೆಯು ಪತ್ರಿಕೆಯ ಮೊದಲ ಸಂಪುಟದಲ್ಲಿ ಬಂದಿದೆ. ಇವುಗಳಿಗೆ ಮೂಲ ಸಾಮಗ್ರಿಯನ್ನು ಬೇರೆ ಕಡೆಗಳಿಂದ ತೆಗೆದುಕೊಂಡಿದ್ದರೂ ವಿಷಯ ವಿವೇಚನೆ ಸಂಪೂರ್ಣವಾಗಿ ಶಾಸ್ತ್ರಿಗಳದೇ. ಅರ್ಥಶಾಸ್ತ್ರದ ಮೇಲಿನ ದೀರ್ಘ ನಿರೂಪಣೆಯು ಕನ್ನಡದ ಮಟ್ಟಿಗೆ ಇಂದಿಗೂ ಗಣನೀಯವಾದುದು.

ಪತ್ರಿಕೆಗೆ ನಾಡಿನ ವಿವಿಧ ಮೂಲೆಗಳಿಂದ ಚಂದಾದಾರರಿದ್ದರು ಮತ್ತು ಅವರ ಸಂಖ್ಯೆ ಕ್ರಮೇಣ ಏರುತ್ತ ನಡೆದುದರ ಉಲ್ಲೇಖ ಪ್ರತಿ ಸಂಚಿಕೆಯಲ್ಲಿದೆ. ಉಡುಪಿಯ ಬಿ. ಕೃಷ್ಣಯ್ಯನೆಂಬ ಚಂದಾದಾರನು ಪತ್ರಿಕೆಯನ್ನು ಮೆಚ್ಚಿದ್ದನಾದರೂ ಭಾಷೆಯು ಗಡಚಿನದು ಎಂದಿದ್ದಾನೆ. ಮತ್ತೂರು (ಶಿವಮೊಗ್ಗ ಜಿಲ್ಲೆ) ಗ್ರಾಮದ ಮಾ. ನರಸಿಂಹಯ್ಯಂಗಾರನು ಪತ್ರಿಕೆಯಲ್ಲಿ

ದೋಷ ಹುಡುಕಹೊರಟು ಒಂದನ್ನೂ ಕಾಣದಾದನಂತೆ. ಇಡೀ ಮೈಸೂರು ಸಂಸ್ಥಾನದಲ್ಲಿ ಒಂದಾದರೂ ಇಂಥ ಪತ್ರಿಕೆ ಇಲ್ಲವೆನ್ನುವ ಮಟ್ಟಿಗೆ ಅವನ ಮೆಚ್ಚುಗೆ ವ್ಯಕ್ತವಾಯಿತು. ಹಾಗಿದ್ದರೂ ಪತ್ರಿಕೆಯ ಚಂದಾ ಹಣವನ್ನು ತೀರ ಕಡಿಮೆ ಇರಿಸಿದ್ದರ ಕಾರಣದಿಂದ ಅದು ಒಂದರೆಡು ವರ್ಷ ಮಾತ್ರ ಪ್ರಕಟವಾಯಿತು.

'ಹಿತೋಪದೇಶ'ದ ಒಂದು ಸಂಪುಟವಾದರೂ (ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ) ಲಭ್ಯವಿದೆ. ಅವರ ಇನ್ನೊಂದು ಪತ್ರಿಕೆ 'ಹವ್ಯಕ ಸುಬೋಧ'ವು ಇಡಿಯಾಗಿ ಇದುವರೆಗೆ ದೊರೆತಿಲ್ಲ. ಆದರೆ ಅದರ ೧೮೮೭ನೆಯ ವರ್ಷದ ಯಾವುದೊ ಸಂಚಿಕೆಯ ಪುಟವೊಂದರ ಭಾಗ ಮಾತ್ರ ಲಿಂಗೇಶ ಶರ್ಮರ ಬಳಿ ಇದೆ! (ಅವರಿಗೆ ಅದನ್ನು ಕಳಿಸಿದವರು ಕೆ. ಬಾಲಕೃಷ್ಣ ಎಂಬವರು) ಅಷ್ಟರ ಮೇಲಿಂದ ಈ ಪತ್ರಿಕೆಯು ಇಂದಿನ ದಿನಪತ್ರಿಕೆಯ ಅರ್ಧ ಸೈಜಿನದಿದ್ದು, ಚಂದಾ ಹಣ ೨೧ ರೂ. ಇತ್ತೆಂದು ತಿಳಿಯಬರುತ್ತದೆ. ಬೂದಿ ಮಹಾಬಲೇಶ್ವರ ಭಟ್ಟರು ಅದರ 'ಪ್ರೊಪ್ರಾಯಿಟರ'ರು. ಶಾಸ್ತ್ರಿಗಳು ಪತ್ರಿಕೆಯ ಮ್ಯಾನೇಜರ್ ಹಾಗೂ ಸಂಪಾದಕರು. 'ಕನ್ನಡ ಸುವಾರ್ತೆ'ಯು ಪ್ರಕಟವಾಗುತ್ತಿದ್ದ ಕರ್ನಾಟಕ ಪ್ರೆಸ್ಸಿನಲ್ಲಿಯೇ ಅದು ಮುದ್ರಣಗೊಳ್ಳುತ್ತಿತ್ತು. ಅದರಲ್ಲಿ ವರ್ತಮಾನಸಾರ, ಓದುಗರ ಪತ್ರವ್ಯವಹಾರಗಳಲ್ಲದೇ 'ನಿನ್ನಿನ' ಪೇಟೆಯ ಧಾರಣೆಯೂ ಪ್ರಕಟವಾಗುತ್ತಿತ್ತು. ಅದಕ್ಕೆ 'ನಿಜವಾಗಿ ಕೇಳಿ ಬಂದದ್ದು' ಎಂಬ ವಿಶೇಷಣ! ಧಾರಣೆಯನ್ನು ಕೊಟ್ಟ ಮೇಲೆ 'ಯಾಲಕ್ಕಿ ಬಹಳ ಮಂದೀ ಅದೆ. ಗಿರಾಕಿ ಕಡಿಮೆ. ಭಂಗಾರ ಆಗದೀ ತೇಜಿ, ಇನ್ನೂ ಹೆಚ್ಚು ದರ ಆದೀತು' ಎಂಬ ಟಿಪ್ಪಣಿಯೂ ಇದೆ.

ನಮ್ಮ ಸುದೈವಕ್ಕೆ ಇದಕ್ಕೂ ಹೆಚ್ಚಿನ ವಿವರಗಳು Reports on Native Papers ಎಂಬ ಮುಂಬಯಿ ಸರಕಾರದ ಗುಪ್ತ ವರದಿಗಳಿಂದ ತಿಳಿದುಬರುತ್ತವೆ. ಪತ್ರಿಕೆಯ ಪ್ರಥಮ ಉಲ್ಲೇಖವು RNPಯ ೫ನೇ ಡಿಸೆಂಬರ್ ೧೮೮೫ರ ಸಂಚಿಕೆಯಲ್ಲಿ ಬಂದಿರುವುದರಿಂದ ಇದು ಆ ವರ್ಷದ ಕೊನೆಯಲ್ಲಿ ಆರಂಭವಾಗಿರಬೇಕು. ಕೆಲವು ಸಲ ಅದನ್ನು Anglo-Kannada ಎಂದು ಹೆಸರಿಸಿರುವುದರಿಂದ ಅದರಲ್ಲಿ ಆಗೀಗ ಇಂಗ್ಲಿಷ್ ಲೇಖನಗಳೂ ಇದ್ದಿರಬೇಕು. ಒಂದು ನೂರು ಪ್ರತಿಗಳ ಮುದ್ರಣದಿಂದ ಮೊದಲಾದ ಅದರ ಪ್ರಸಾರದ ದ್ರುತಗತಿಯನ್ನು ಗಮನಿಸುವುದು; ೧೮೮೭ರಲ್ಲಿ ೨೫೦ ಪ್ರತಿಗಳು; ೧೮೮೮ರಲ್ಲಿ ೭೫೦; ೧೮೮೯ರಲ್ಲಿಯ ಪ್ರತಿಗಳು ೯೫೦. ಕನ್ನಡದ ಸಾಮಾನ್ಯ ಪತ್ರಿಕೆಗಳ ಪ್ರಸಾರ ೩೦೦ ರಿಂದ ೫೦೦ ರ ವರೆಗೆ ಇದ್ದ ಕಾಲವದು.

ಪತ್ರಿಕೆಯಲ್ಲಿ ದೇಶದ ವಿವಿಧ ಸಮಸ್ಯೆಗಳ ಬಗ್ಗೆ ಪ್ರೌಢವಾದ ವಿವೇಚನೆ ಕಂಡುಬರುತ್ತದೆ. ವಿದೇಶೀ ವಿನಿಮಯದ ಹಣದ ಅಭಾವವು ಆಗೂ ಇದ್ದಿತಾದ ಕಾರಣ. ವೆಂಕಟರಮಣಶಾಸ್ತ್ರಿಗಳು ಆ ಬಗ್ಗೆ ಕೆಲವು ಪರಿಹಾರ ಕ್ರಮಗಳನ್ನು ಸೂಚಿಸಿದರು. ಅವುಗಳೊ ಬ್ರಿಟಿಶ್ ಅಧಿಕಾರಿಗಳ ಅಸ್ತಿತ್ವವನ್ನೇ ಅಲುಗಾಡಿಸುವಂತಹವು! ಬಿಳಿಯ ಅಧಿಕಾರಿಗಳ ಸಂಬಳದ ನಿಮಿತ್ತದಿಂದ ಅಪಾರವಾದ ಹಣವು ಪೌಂಡಿನ ರೂಪದಲ್ಲಿ ಹರಿದುಹೋಗುತ್ತಿದ್ದುದರಿಂದ, ಹಿರಿಯ ಹುದ್ದೆಗಳಿಗೆ ಇನ್ನು ಮುಂದೆ ಭಾರತೀಯರನ್ನೇ ನಿಯಮಿಸಬೇಕು, ಎಂದರು. ಈಗ ಇದ್ದವರನ್ನೇನು ಮಾಡುವುದು? ಅವರಿಗೆ ರೂಪಾಯಿಯ ಮೌಲ್ಯದಲ್ಲಿಯೆ ಸಂಬಳ ಕೊಡಬೇಕು; ಅವರು ಬಳಸುವಂಥ ವಿದೇಶೀ ಸರಕುಗಳಿಗೆ ಸುಂಕವನ್ನು ವಿಧಿಸಬೇಕು; ಮತ್ತು ಭಾರತದ ಬೊಕ್ಕಸದಿಂದ ಪೆನ್ಶನ್ ಪಡೆಯುತ್ತ ಇಂಗ್ಲಂಡಿನಲ್ಲಿ ವಾಸಿಸುವ ಅಧಿಕಾರಿಗಳಿಗೆ ಆದಾಯಕರ (ಪೌಂಡಿನ ರೂಪದಲ್ಲಿ) ಹೇರಿ ಭಾರತದ ಬೊಕ್ಕಸಕ್ಕೆ ಜಮೆ ಹಿಡಿಯಬೇಕು ಎಂದರು!

ನ್ಯಾಯ, ಸತ್ಯ, ಪ್ರಜಾಹಿತವೆಂಬ ದೊಡ್ಡ ದೊಡ್ಡ ಮಾತುಗಳನ್ನು ಹೇಳುತ್ತಲೇ ದೇಶದ ಶೋಷಣೆ ಹಾಗೂ ಪ್ರಜೆಗಳ ಮೇಲಿನ ದಬ್ಬಾಳಿಕೆಯಲ್ಲಿ ಬ್ರಿಟಿಶರು ನಿರತರಾಗಿದ್ದುದರ ಅರಿವು ವೆಂಕಟರಮಣ ಶಾಸ್ತ್ರಿಗಳಿಗಿದ್ದಿತು. ಅಂದಿನ ಕಾಶ್ಮೀರ ಮಹಾರಾಜನ ಮೇಲೆ ಆರೋಪ ಹೊರಿಸಿ, ಐದು ವರ್ಷಗಳ ವರೆಗೆ ಆ ಸಂಸ್ಥಾನದ ಆಡಳಿತವನ್ನು ಡಫರಿನ್ ತಾನೇ ವಹಿಸಿಕೊಂಡನು. ಶಾಸ್ತ್ರಿಗಳು ಇದನ್ನು ಖಂಡಿಸಿದರಲ್ಲದೇ ಕೊಡಗು, ತಂಜಾವೂರು, ನಾಗಪುರ, ಅವಧ ಮುಂತಾದ ಸಂಸ್ಥಾನಗಳಿಗೆ ಮಾಡಿದಂತೆ ಕಾಶ್ಮೀರ ಸಂಸ್ಥಾನವನ್ನು ನುಂಗುವ ಎತ್ತುಗಡೆಯಿದು - ಎಂದು ಬರೆದರು.

'ಹವ್ಯಕ ಸುಭೋಧ'ವು ಅಂದಿನ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿಯ ಆಗುಹೋಗುಗಳ ಬಗ್ಗೆ ಬರೆದುದರ ಅನೇಕ ಉಲ್ಲೇಖಗಳಿವೆ. ಮೈಸೂರು ಸಂಸ್ಥಾನದ ವಿದ್ಯಮಾನಗಳನ್ನೂ ಆಗಿನ ದಿವಾಣರಾದ ಶೇಷಾದ್ರಿ ಅಯ್ಯರರನ್ನೂ ಮೇಲಿಂದ ಮೇಲೆ ಪ್ರಸ್ತಾಪಿಸಿದ್ದಾಗಿದೆ. ಮದ್ರಾಸ್ ಗವರ್ನರ್ ಕೊನ್ನೆಮಾರಾ ಎಂಬವನು ದಕ್ಷಿಣ ಕನ್ನಡ ಜಿಲ್ಲೆಯ ಮಾರ್ಗವಾಗಿ ರಾಮೇಶ್ವರಕ್ಕೆ ಹೋಗುವವನಿದ್ದ. ಅವನ ಹಾದಿಯ ಸ್ವಾಗತದ ಸಲುವಾಗಿ ಉಡುಪಿ, ಕುಂದಾಪುರಗಳ ರೈತ ಜನರಿಂದ, ಅಲ್ಲಿಯ ಅಧಿಕಾರಿಗಳು ೧೪ ಸಾವಿರ ರೂಪಾಯಿಗಳನ್ನು ಒತ್ತಾಯದಿಂದ ಸಂಗ್ರಹಿಸಿದರಂತೆ. ಇದಾವ ನ್ಯಾಯ? ಎಂದು ಶಾಸ್ತ್ರಿಗಳು ಪ್ರಶ್ನಿಸಿದರು. ಕನ್ನಡ ಭಾಷೆ. ಸಾಹಿತ್ಯಗಳ ಏಳ್ಗೆಯ ಕುರಿತ ಚಿಂತನೆಯಂತೂ ಮೇಲಿಂದ ಮೇಲೆ ವ್ಯಕ್ತವಾಗಿದೆ. ಕನ್ನಡ ಲೇಖಕರಿಗೆ ಪ್ರೋತ್ಸಾಹವೇ ಇಲ್ಲದುದು, ಮುಂಬೈ ಕರ್ನಾಟಕದಲ್ಲಿ ಮರಾಠೀ ಅಧಿಕಾರಿಗಳು ಕನ್ನಡದ ಬಗ್ಗೆ ಅಲಕ್ಷ್ಯವನ್ನು ತೋರುತ್ತಿದ್ದುದು - ಇವನ್ನು ದೃಷ್ಟಾಂತ ಸಹಿತವಾಗಿ ಕೊಡುತ್ತಲೇ ಸರಕಾರದ ಗಮನಕ್ಕೆ ತಂದರು. ಸರಕಾರವು ಅಷ್ಟೇ ಅನಾಸ್ಥೆಯನ್ನು ತೋರಿದಾಗ, ಕನ್ನಡಿಗರೆಲ್ಲ ಒಕ್ಕೊರಲಿನಿಂದ ಪ್ರತಿಭಟಿಸದೇ ಅನ್ಯ ಗತಿ ಇಲ್ಲ ಎಂದು ಕರೆಯಿತ್ತರು. (೪-೯-೧೮೮೮ ರ ಸಂಚಿಕೆ).

ಕೆನರಾ ಜಿಲ್ಲೆಯ ಬಗ್ಗೆ ವೆಂಕಟರಮಣ ಶಾಸ್ತ್ರಿಗಳು ವಿಶೇಷ ಆಸಕ್ತಿ ವಹಿಸಿದ್ದುದು ಕ್ರಮಪ್ರಾಪ್ತವಾಗಿದೆ. ಆ ಬರೆಹಗಳಲ್ಲಿಯೂ ಜನಹಿತ ರಕ್ಷಣೆ, ದುಷ್ಟ ಅಧಿಕಾರಿಗಳ ಭರ್ತ್ಸನೆ, ಇವು ಪ್ರಧಾನ ಅಂಶಗಳಾಗಿವೆ. ಯಲ್ಲಾಪುರ, ಸುಪಾ ತಾಲೂಕುಗಳಲ್ಲಿಯ ಪ್ರಾಥಮಿಕ ಶಾಲಾ ಶಿಕ್ಷಕರ ಬಗ್ಗೆ ಅನುತಾಪವನ್ನು ವ್ಯಕ್ತಪಡಿಸುತ್ತ, ಅವರು ಮಳೆಗಾಲದಲ್ಲಿ ಅನಾರೋಗ್ಯದಿಂದ ಒದ್ದಾಡಬೇಕಾಗುತ್ತದೆ. ಅವರಿಗೆ ಸಿಕ್ಕುವ ೮-೧೦ ರೂ. ಗಳ ಸಂಬಳದಿಂದ ಏನಾಗಬೇಕಾಗಿದೆ? ಅವರಿಗೆ ಮಳೆಗಾಲದ ಭತ್ತೆ ಕೊಡಬೇಕು. ಇಲ್ಲವೆ ಪುಕ್ಕಟೆ ಔಷಧೋಪಚಾರದ ವ್ಯವಸ್ಥೆಯಾಗಬೇಕು - ಎಂದು ತಿಳಿಯಪಡಿಸಿದರು.

ಜಿಲ್ಲೆಯ ಅಧಿಕಾರಿಗಳ ಮೈಸೊಕ್ಕಿನ ನಡೆತ, ಲಂಚಗುಳಿತನ, ಸರಕಾರೀ ಸೌಲಭ್ಯಗಳ ದುರುಪಯೋಗ, ಅವರ ಸ್ತ್ರೀಲೋಲುಪತೆ - ಮುಂತಾದ ಅಂಶಗಳನ್ನು ಪದೇ ಪದೇ ಸಾರ್ವಜನಿಕರ ಗಮನಕ್ಕೆ ತಂದಿದ್ದಾರೆ. ಸರಕಾರೀ ಕಚೇರಿಗಳಲ್ಲಿಯ ಭ್ರಷ್ಟಾಚಾರದ ವಿವಿಧ ರೂಪಗಳನ್ನು ಅರಿಯಬೇಕೆಂದವರು 'ಹವ್ಯಕ ಸುಬೋಧ'ವನ್ನು ಓದಿದರೆ ಸೈ ಎನಿಸುವಷ್ಟು ಅದರ ಸುಸ್ಪಷ್ಟ ಚಿತ್ರಣ ಅಲ್ಲಿದೆ. ಇಂಥ ಅಧಿಕಾರಿಗಳನ್ನು ಟೀಕಿಸುವಾಗ ಇಂದಿನ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಹ ಹಿಡಿತದಿಂದ, ತುಸು ಅಳುಕಿನಿಂದ ಲೇಖನಿಯನ್ನು ಓಡಿಸಬೇಕಾಗುತ್ತದೆ. ವೆಂಕಟರಮಣ ಶಾಸ್ತ್ರಿಗಳೋ ಅತ್ಯಂತ ನಿರ್ಭೀತರು. ಅಧಿಕಾರಿಗಳ ಹೆಸರು ತೆಗೆದುಕೊಂಡೇ ನಿರ್ದಾಕ್ಷಿಣ್ಯವಾಗಿ ಬರೆಯುತ್ತಿದ್ದರು. ಜಿಲ್ಲೆಯಲ್ಲಿ ಅಸಿಸ್ಟಂಟ್ ಕಲೆಕ್ಟರನಾಗಿದ್ದ ಹಿಲ್ ಎಂಬವನಿಗೆ ವರ್ಗವಾದಾಗ, ಶಾಸ್ತ್ರಿಗಳ ಪ್ರತಿಕ್ರಿಯೆ ಈ ರೀತಿ ವ್ಯಕ್ತವಾಯಿತು (೩-೪-೧೮೮೮): "ಈ ವರ್ಗಾವಣೆಯಿಂದ ನಮ್ಮ ಜಿಲ್ಲೆಯ ಸಂಕಷ್ಟಗಳಲ್ಲಿ ಕಾಲಾಂಶ ಹೋದಂತಾಯಿತು. ಇನ್ನು ಮುಕ್ಕಾಲಾಂಶವು ಯಾವಾಗ ನಿವಾರಣೆಯಾದೀತೋ ಎಂದು ಕಾಯುತ್ತಿದ್ದೇವೆ!"

> "ಮುಂಬಯಿ ಇಲಾಖೆಯ ಮಧ್ಯಭಾಗದ ರೆವಿನ್ಯೂ ಕಮೀಶನರರಾದ ಮಿ.ಆರಥರ್ ಕ್ರಾಫರ್ಡರೆಂಬವರು ಬಹುಕಾಲದಿಂದ ಲಂಚವನ್ನು ತೆಗೆದುಕೊಂಡು ಜನರಿಗೆ ಅಧಿಕಾರಗಳನ್ನು ಕೊಡುವದೂ ಇನಾಮು ಉತಾರಗಳನ್ನು ಹಿಂತಿರುಗಿ ಕೊಡಿಸುವದೂ ಮೊದಲಾದ ಕೆಲಸವನ್ನು ಮಾಡುತ್ತಿದ್ದರೆಂತಲೂ ಇದಕ್ಕೆಲ್ಲ ಮಿ. ಹನುಮಂತರಾಯರೆಂಬ ಗೃಹಸ್ಥರು ಪಾಲಿಗಳಾಗಿದ್ದರೆಂತಲೂ ಜನರು ಗುಜುಗುಟ್ಟುತ್ತಿದ್ದರು... ಇಷ್ಟರಲ್ಲಿ ಕ್ರಾಫರ್ಡ ಸಾಹೇಬರು ವೇಷಪಲ್ಲಟ ಮಾಡಿಕೊಂಡು ಪರದ್ವೀಪಕ್ಕೆ ಓಡಿಹೋಗುತ್ತಿರುವಾಗ ಅವರನ್ನು ಹಿಡಿಸಿಟ್ಟರು... ಇಂತಿಂಥ ದೊಡ್ಡ ಅಧಿಕಾರಸ್ಥರೇ ಈ ತರದ ನಡತೆಗೆ ಮನಸ್ಸು ಮಾಡಿದ ಮೇಲೆ ನಮ್ಮ ದುರ್ದಶೆಗೆ ಮಿತಿಯುಂಟೋ?"

ಶಾಸ್ತ್ರಿಗಳು, 'ಹಿತೋಪದೇಶ'ದಲ್ಲಿ ಬರೆದ ಮಾತುಗಳಿವು. ಹಿರಿಯ ಬ್ರಿಟಿಶ್ ಅಧಿಕಾರಿಯನ್ನು ಬಂಧಿಸುವ ವರೆಗೆ ಸರಕಾರವು ಮುಂದುವರಿಯಬೇಕಾದರೆ, ಅವನ ಭ್ರಷ್ಟಾಚಾರವು ಅದೆಷ್ಟು ವಿಕೋಪಕ್ಕೆ ಹೋಗಿತ್ತೆಂಬುದನ್ನು ಊಹಿಸಬಹುದು. ಕೇಸರಿ, ಮರಾಠಾ ಮುಂತಾದ ಅನೇಕ ಪತ್ರಿಕೆಗಳು ಈ ಸುದ್ದಿಯನ್ನು ಸ್ವಾಗತಿಸಿದವು. ಶಾಸ್ತ್ರಿಗಳು 'ಹವ್ಯಕ ಸುಬೋಧ'ದಲ್ಲಿ ಅವನ ಅಕೃತ್ಯಗಳನ್ನು ಬಯಲಿಗೆಳೆದರು. "ತನ್ನದೇ ಜನರ ಸರಕಾರವಿದೆಯೆಂದು ದುಷ್ಕೃತ್ಯಗಳನ್ನು ಮುಂದುವರೆಸಿದರೆ ನಡೆದೀತೆ? ಕಳ್ಳನಾದವನು ತನ್ನ ಗ್ರಹಗತಿ ಒಳ್ಳೆಯದಿದೆಯೆಂದು ಬೆಳಗಾಗುವರೆಗೂ ತನ್ನ ಕಾಯಕವನ್ನು ಮುಂದುವರೆಸಿದರೆ ಸಿಕ್ಕಿಬೀಳದೆ ಇರುತ್ತಾನೆಯೇ?" ಎಂದು ಉದ್ಗಾರವೆತ್ತಿದರು. ಅಲ್ಲದೆ, "ಬಂಧಿಸಿದ ಮಾತ್ರಕ್ಕೆ ಮುಗಿಯಲಿಲ್ಲ. ಅವನಿಗೆ ತಕ್ಕ ಶಿಕ್ಷೆಯಾಗಬೇಕು. ಬ್ರಿಟಿಶರ ನ್ಯಾಯಬುದ್ಧಿಯ ಪರಿಯನ್ನು ಕಂಡ ನಮಗೆ, ಮುಂದೆ ನಿರ್ಣಯ ಏನಾಗುವದೆಂಬ ಬಗ್ಗೆ ನಿಶ್ಚಿತ ಹೇಳಲಾರೆವು" ಎಂಬ ಶಂಕೆಯನ್ನೆತ್ತಿದರು.

ಅವರ ನಿಶಿತ ಲೇಖನಿ, ದೇಶೀಯ ಅಧಿಕಾರಿಗಳ ದುಷ್ಕೃತ್ಯಗಳನ್ನೂ ಬಯಲಿಗೆಳೆದಿದೆ. ಇಂಗಳೆ ಎಂಬ ಹುಜೂರ್ ಡೆಪ್ಯುಟಿ ಕಲೆಕ್ಟರನ ನಿಮಿತ್ತ ಮಾಡಿಕೊಂಡು, ೫-೨-೧೮೮೯ರ ಸಂಚಿಕೆಯಲ್ಲಿ ಜಿಲ್ಲೆಯ ಇಂಥ ಅಧಿಕಾರಿಗಳ ಬಗ್ಗೆ ದೀರ್ಘವಾಗಿ ಬರೆದರು. "ಎಲ್ಲೋ ಒಬ್ಬಿಬ್ಬರು ಅಂಥವರಿದ್ದರೆ ನಮ್ಮ ಅಭ್ಯಂತರವಿರಲಿಲ್ಲ. ಇಲ್ಲಿಯ ಅಧಿಕಾರಿಗಳು ಹುಲಿಯ ಹಾಗೆ ಇದ್ದಾರೆ. ಎದುರಿಗೆ ಬಂದದ್ದನ್ನೆಲ್ಲ ಸ್ವಾಹಾ ಮಾಡುವ ಪ್ರವೃತ್ತಿ ಅವರದು. ಅವರು ಸರಕಾರದ ಲುಕ್ಸಾನಕ್ಕೂ ಕಾರಣರಾಗುತ್ತಾರೆ," ಎಂದು ಹೇಳಿ, ಇಂಗಳೇ ಮಹಾಶಯನು ದೀವಿಗಿ, ಮಣಕಿಗಳಲ್ಲಿಯ ಡೋಣೆಯ ಕಾಂಟ್ರಾಕ್ಟಿನಲ್ಲಿ ಲಂಚ ತಿಂದು ಸರಕಾರಕ್ಕೆ ಅದೆಷ್ಟು ಲುಕ್ಸಾನು ಮಾಡಿದ - ಎಂಬುದರ ವಿವರಗಳನ್ನು ಕೊಟ್ಟರು.

RNPಯ ಇಂಗ್ಲಿಷ್ ವರದಿಯ ಮೂಲಕ ಈ ಲೇಖನವನ್ನೋದಿದ ಮೇಲೆ, ಸರಕಾರವು ಸುಮ್ಮನುಳಿಯುವುದೆಂತು? ಇಂಗಳೆಯಿಂದ ಸ್ಪಷ್ಟೀಕರಣ ಕೇಳಿದರು. ಆಗ ಆತ 'ಹೌದು, ನನ್ನಿಂದ ತಪ್ಪಾಯಿತು' ಎಂದು ಒಪ್ಪಿದನಂತೆ. ಶಾಸ್ತ್ರಿಗಳು ಚಾಣಕ್ಯನ ಅವತಾರ ತಾಳಿ, ಬೇರು ಸಹಿತ ಈ 'ವಿಷವೃಕ್ಷ'ವನ್ನು ಕೀಳುವವರಂತೆ, "ತಪ್ಪೊಪ್ಪಿದ ಮಾತ್ರಕ್ಕೆ ಮುಗಿಯಲಿಲ್ಲ. ಅವನನ್ನು ಶಿಕ್ಷೆಗೆ ಗುರಿಪಡಿಸತಕ್ಕದ್ದು" ಎಂದರು. ಮುಂದುವರಿದು, "ಈ ವ್ಯಕ್ತಿ ಅಖಂಡ ೨೪ ವರ್ಷ ಕೆನರಾದಲ್ಲಿಯೆ ಕಾಲೂರಿದ್ದಾನೆ. ಇಷ್ಟು ದೀರ್ಘ ಕಾಲ ಸರಕಾರೀ ಅಧಿಕಾರಿ ಒಂದೇ ಜಾಗಾದಲ್ಲಿ ಇದ್ದ ಉದಾಹರಣೆಗಳು ಎಲ್ಲಾದರೂ ಉಂಟೆ? ಮೂರು ಸಲ ವರ್ಗದ ಹುಕುಮು ಹೊರಡಿಸಿದ್ದರೂ ತಪ್ಪಿಸಿಕೊಂಡು ಇಲ್ಲೇ ಉಳಿದಿದ್ದಾನೆ. ಈಗ ನಾಲ್ಕನೆಯ

ಸಲವೂ ತಪ್ಪಿಸಿಕೊಳ್ಳಲು ನಿರ್ಲಜ್ಜತನದಿಂದ ಪ್ರಯತ್ನಿಸುತ್ತಿದ್ದಾನೆ. ಅದನ್ನು ಮಾನ್ಯ ಮಾಡಲು ಸರಕಾರಕ್ಕೆ ಸ್ವಲ್ಪಾದರೂ ನಾಚಿಕೆ ಇರಬೇಡವೆ?" ಎಂದು ಖಂಡತುಂಡವಾಗಿ ಬರೆದರು.

ದಿ. ೩೦-೭-೧೮೮೮ರ ಸಂಚಿಕೆಯಲ್ಲಿ ಅಧಿಕಾರಿಗಳ ಸ್ತ್ರೀವ್ಯಾಮೋಹವನ್ನು ಪ್ರಸ್ತಾಪಿಸಿದ್ದಾರೆ. ಇವರಿಗೆ ಹೆಣ್ಣುಗಳನ್ನು ಒದಗಿಸುವ ಹೇಯುವಾದ ಪರಿಸ್ಥಿತಿ ಇದೆ. ಅಲ್ಲದೆ ಜನರು ತಮ್ಮ ಕೆಲಸವಾಗಬೇಕಾದರೆ, ಈ ಉಪಪತ್ನಿಯರನ್ನು ಖುಶಿಯಲ್ಲಿಡಬೇಕಾಗುತ್ತದೆ. ಸರಕಾರೀ ಕೆಲಸಗಳಲ್ಲಿ ಇಂಥ ಸ್ತ್ರೀಯರ ಅಪ್ರತ್ಯಕ್ಷ ಪ್ರಭಾವವೇ ಅತಿಯಾಗಿರುವ ಸಂದರ್ಭಗಳೂ ಇವೆ. ಫಿರ್ತಿಯ ಮೇಲೆ ಹೋದ ಅಧಿಕಾರಿಗಳನ್ನು ತೃಪ್ತಿಪಡಿಸಬೇಕಾದರೆ ರೈತಾಪಿ ಜನರಿಗೂ ಗ್ರಾಮಾಧಿಕಾರಿಗಳಿಗೂ ಸಾಕುಬೇಕಾಗುತ್ತದೆ. ಆಗ ಇವರಿಗೆ ಹೆಣ್ಣನ್ನು ಒದಗಿಸಬೇಕು, ಒಮ್ಮೊಮ್ಮೆ ತಾವೇ ಬರುವಾಗ ಕರತರುತ್ತಾರೆ," ಎಂದು ಬರೆದರು.

ಈ ಲೇಖವು ಸಾಕಷ್ಟು ಕ್ಷೋಭೆಯನ್ನುಂಟು ಮಾಡಿರಬೇಕು. ಕೆಲವರು ಸಾಶಂಕರಾಗಿರಲೂ ಸಾಕು. ಶಾಸ್ತ್ರಿಗಳು ದಿ. ೨೦-೮-೧೮೮೯ರಲ್ಲಿ ಮತ್ತೊಮ್ಮೆ ಈ ಬಗ್ಗೆ ಬರೆಯುತ್ತಾ, "ಇದರಲ್ಲಿ ಸಂಶಯವಿದೆಯೆ? ನಡೆದ ಘಟನೆಯೊಂದನ್ನು ಕೊಡುತ್ತೇವೆ. ತಾ. ೨೦-೩-೧೮೮೮ನೇ ದಿವಸ ಶಫರ್ಡ್ ಕಂಪೆನಿಯವರ ಸ್ಟೀಮರಿನಲ್ಲಿ ನಾನು ಕಣ್ಣಾರೆ ಕಂಡದ್ದು, ಇದು ಓರ್ವ ಫಾರೆಸ್ಟ್ ಆಫೀಸರನು ಅಂಕೋಲೆ ಕಡೆಯ ಓರ್ವ ಅನೀತಿಯ ಹೆಣ್ಣನ್ನು ಜೊತೆಗೆ ಕರೆತಂದು ಒಂದನೇ ತರಗತಿಯ ಕಂಪಾರ್ಟಮೆಂಟನ್ನು ರಿಸರ್ವ್ ಮಾಡಿಸಿ, ಕರ್ನ್ಯಾಕ್ ಬಂದರಿಗೆ (ಮುಂಬಯಿಗೆ) ಹೊರಟಿದ್ದ. ಯಾವದೇ ನಾಚಿಕೆ-ಹೇಸಿಗೆಗಳಿಲ್ಲದೆ ಬಹಿರಂಗವಾಗಿ ಅವಳೊಡನೆ ಲಲ್ಲೆಗೆಯುತ್ತಿದ್ದುದನ್ನು ಕಂಡು ಇತರ ಪ್ರವಾಸಿಕರು ಜಿಗುಪ್ಸೆ ಪಟ್ಟರು. ಆ ಅಧಿಕಾರಿ ಯಾರು, ಇತ್ಯಾದಿ ವಿವರಗಳು ಸರಕಾರಕ್ಕೆ ಬೇಕಾದರೆ ನಾನು ಕೊಡಲು ಸಿದ್ಧನಿದ್ದೇನೆ" ಎಂದು ಘೋಷಿಸಿದರು.

ಇದರ ಘೋರ ಪರಿಣಾಮವು ಸಂಬಂಧಪಟ್ಟವರ ಮೇಲೆ ಹೇಗಾಗಿರಬಹುದೆಂಬುದನ್ನು ವಾಚಕರೇ ಊಹಿಸಲಿ. ಮುಂಬಯಿಯ 'ಕನ್ನಡ ಸುವಾರ್ತೆ'ಯು ಇದನ್ನು ಅನುಮೋದಿಸಿತು. ಪುಣೆಯಿಂದ ಹೊರಡುತ್ತಿದ್ದ 'ಶಿವಾಜಿ' ಎಂಬ ಮರಾಠೀ ಸಾಪ್ತಾಹಿಕವು ಇದನ್ನು ಪ್ರಸ್ತಾಪಿಸಿ, ಸರಕಾರಕ್ಕೆ ನೈತಿಕ ಧೈರ್ಯವಿದ್ದುವಾದರೆ, 'ಹವ್ಯಕ ಸುಬೋಧ'ದ ಸಂಪಾದಕರು ಕೊಟ್ಟ ಆಹ್ವಾನವನ್ನು ಸ್ವೀಕರಿಸಿ, ಅವರು ಕೊಡುವ ಪುರಾವೆಗಳ ಸತ್ಯಾಸತ್ಯತೆಯನ್ನು ಪರಿಶೀಲಿಸಬೇಕು ಎಂದು ಬರೆಯಿತು.

ಇನ್ನೀಗ 'ವನದುಃಖ ನಿವಾರಣಾ' ಪ್ರಕರಣಕ್ಕೆ ಬರೋಣ. ಶೇಕಡ ೯೦ರಷ್ಟು ಅರಣ್ಯಪ್ರದೇಶಗಳಿರುವ ಉತ್ತರ ಕನ್ನಡ ಜಿಲ್ಲೆಯಲ್ಲಿ, ಅವುಗಳ ಒಡೆತನ, ಉಪಭೋಗಗಳ ಬಗ್ಗೆ ಕೆಲವು ವಿಶಿಷ್ಟ ನಿಯಮಗಳಿವೆ. ಮೂಲತಃ ಅವು ಸರಕಾರದ ಒಡೆತನಕ್ಕೆ ಸೇರಿದವುಗಳು. ಅದರಲ್ಲಿಯೂ ತೇಗು, ಕರಿಮರ, ಶ್ರೀಗಂಧ - ಮುಂತಾದವು, ಖಾಸಗಿ ಜನರ ಭೂಮಿಗಳಲ್ಲಿ ಬೆಳೆದರೂ ಅವನ್ನು ಸರಕಾರೀ ಸೊತ್ತೆಂದೇ ತಿಳಿಯಲಾಗುತ್ತದೆ. ಅರಣ್ಯದ ಬೆಲೆಯುಳ್ಳ ಮಾಲು ಕಳವಾದರೆ, ನೆರೆಯಲ್ಲಿರುವ ಇಡೀ ಹಳ್ಳಿಯ ಜನರು ಅದಕ್ಕೆ ಹೊಣೆ! ಇತ್ತ ಜನತೆಗೆ ಕೆಲವು ಹಕ್ಕುಗಳಿವೆ. ಅಡವಿಯನ್ನು ಸುಟ್ಟು ಕುಷ್ಕಿ ಭೂಮಿಯನ್ನು ಬೇಸಾಯಕ್ಕೆ ಪಡೆಯಬಹುದು. ಗೊಬ್ಬರವೆಂದು ಎಲೆ, ಉರವಲೆಂದು ಸಣಕಲು ಕಟ್ಟಿಗೆ, ದನ ಮೇಯಿಸುವುದಕ್ಕೆ ಅರಣ್ಯದ ನೆರೆಯ ಪ್ರವೇಶ ಇವನ್ನು ರೈತರು ಮುಫತ್ತಾಗಿ, ಕೆಲವಕ್ಕೆ ಅಲ್ಪ ಬೆಲೆ ಕೊಟ್ಟು ಪಡೆಯಬಹುದು. ಜನರ ಈ ಹಕ್ಕು ಮತ್ತು ಬೇಡಿಕೆಗಳ ವಿಚಾರದಲ್ಲಿ ಅರಣ್ಯ ಖಾತೆಯ ಅಧಿಕಾರಿಗಳು ಸಮರ್ಪಕವಾಗಿ ನಡೆದುಕೊಂಡರೆ ಸರಿ. ಅದು ಬಿಟ್ಟು, ಈ ಹಕ್ಕುಗಳನ್ನು ನಿರಾಕರಿಸುವುದಕ್ಕೆ ಇಲ್ಲವೆ ಮೊಟಕು ಮಾಡುವುದಕ್ಕೆ ಲಂಚವನ್ನು ಕೇಳುವುದಕ್ಕೆ ಆ ಅಧಿಕಾರಿಗಳಿಗೆ ಅವಕಾಶವಿದೆಯೆಂಬುದು ಸ್ಪಷ್ಟ. ಇದು ಮಿತಿ ಮೀರಿತೆಂದೇ ಜನ ತ್ರಸ್ತಗೊಂಡರು. ಇದಕ್ಕೆ ಪರಿಹಾರವೇನು? ಗ್ರಾಮದ ಶಾನಭೋಗ, ಪಟೇಲರನ್ನು ಮುಂದಿಟ್ಟುಕೊಂಡು, ಬಡ ರೈತರು ಸರಕಾರಕ್ಕೆ ತಮ್ಮ ಸಂಕಷ್ಟಗಳನ್ನು ನಿವೇದಿಸಬೇಕೆಂದರು. ಅದಕ್ಕಾಗಿ 'ಶಿರಸಿ ವನದುಃಖ ನಿವಾರಣಾ ಸಭೆ' ರಚಿತವಾಯ್ತು. ಈ ಸಂಘದ ಪ್ರಥಮ ಉಲ್ಲೇಖವು 'ಹವ್ಯಕ ಸುಬೋಧ'ದ ೯-೩-೧೮೮೭ರ ಸಂಚಿಕೆಯಲ್ಲಿ ದೊರೆಯುತ್ತದೆ. ಆಗಿನ ಅರಣ್ಯಖಾತೆಯ ಮುಖ್ಯಾಧಿಕಾರಿಯ ಹೆಸರು ಕರ್ನಲ್ ಪೇಟನ್, ಎಂದು. ಅವನಿಗೆ ರೆವಿನ್ಯೂ ಖಾತೆಯ ವಿಲ್ಸ್‌ಶಾಯರ್ (ಶಿರಸಿ ವಿಭಾಗದ ಅಸಿಸ್ಟಂಟ್ ಕಲೆಕ್ಟರ್) ಎಂಬವನು ಜೊತೆಗಾರನಾಗಿದ್ದ. ಸಂಘವು ಶಿರಸಿಯಲ್ಲಿ ಆಗಾಗ ಸಭೆ ಸೇರುತ್ತಿದ್ದುದನ್ನು ಕಂಡು ವಿಲ್ಸ್‌ಶಾಯರ್ ಒಂದು ಪರಿಪತ್ರವನ್ನು ಹೊರಡಿಸಿ, ಗೌಡ, ಶಾನಭೋಗರು ಅಂಥ ಸಭೆಗಳಿಗೆ ಹೋಗಕೂಡದೆಂದು ವಿಧಿಸಿದನು. ಪೇಟನ್‌ನಂತೂ ತನ್ನ ಬ್ಯಾಟನ್ (ಚಿಕ್ಕದಂಡ) ಹಿಡಿದುಕೊಂಡು ಶಿರಸಿಯ ಮನೆ, ಮಳಿಗೆಗಳಿಗೆ ಸ್ವತಃ ಹೋಗಿ, ಆ ಸಭೆಗಳಲ್ಲಿ ಭಾಗವಹಿಸಕೂಡದು ಎಂದು ಹೆದರಿಸುತ್ತಿದ್ದನಂತೆ! ಈ ದುರ್ಯೋಧನ-ದುಶ್ಶಾಸನರ ಮೇಲೆ, ವೆಂಕಟರಮಣ ಶಾಸ್ತ್ರಿಗಳು ಭೀಮಗದೆಯನ್ನೆ ಎತ್ತಿದ್ದರು. ಫಾರೆಸ್ಟ್ ಆಫೀಸರನ ಕೆಲಸವೇನು, ತನ್ನ ಅಧಿಕಾರದ ಇತಿಮಿತಿಗಳೇನು ಎಂಬುದನ್ನು ಯೋಜಿಸದೆ, ಹೀಗೆಲ್ಲ ಮಾಡುವುದು ದಬ್ಬಾಳಿಕೆ ಎನಿಸುತ್ತಿದೆ. ಅವರಿಬ್ಬರ ವಿರುದ್ಧ ಇಂಥ ತಕರಾರುಗಳು ಹಲವಾರು ಇವೆ; ಸರಕಾರವು ಇವನ್ನು ಪರಿಶೀಲಿಸಲು ವಿಚಾರಣಾಸಮಿತಿಯನ್ನು ನಿಯಮಿಸಬೇಕು - ಎಂದು ಆದೇಶವಿತ್ತರು.

ವನದುಃಖ ನಿವಾರಣಾಸಭೆಯು ತನ್ನ ಸಂಕಷ್ಟಗಳ ಪಟ್ಟಿ ಮಾಡಿ, ಗವರ್ನರ್ ರೇ ಇವರಿಗೆ ಮನವಿಯೊಂದನ್ನು ಸಾದರಪಡಿಸಿತು. ಇತ್ತ, ಈ ಮನವಿಗೆ ಪ್ರೇರಣೆ ಅನುಮೋದನೆಗಳನ್ನಿತ್ತ ಗ್ರಾಮಾಧಿಕಾರಿಗಳನ್ನು ಶಿಕ್ಷಿಸುವ ಕಾರ್ಯವನ್ನು ವಿಲ್ಸ್‌ಶಾಯರ್ ವಹಿಸಿಕೊಂಡನು! ಸಭೆ ನಡೆಯುವ ಸಮಯಕ್ಕೇನೆ ಗೌಡ, ಶಾನಭೋಗರನ್ನು ತಾಲೂಕು ಕಚೇರಿಗೆ ಕರೆಕಳುಹಿ, ಅಲ್ಲಿಯೇ ಕೂಡ್ರಿಸಿಕೊಂಡು, ಬೆದರಿಕೆ ಹಾಕುವುದು ಇತ್ಯಾದಿ ನಡೆದುವು. ಫಿರ್ತಿಯ ಮೇಲೆ ಹೋದನೆಂದರೆ, ಈ ಪ್ರತಿಬಂಧದ ಕಾಯಕವನ್ನು ತಪ್ಪದೇ ನಡೆಸುತ್ತಿದ್ದನು. ಒಮ್ಮೆ ಇಸಳೂರಿಗೆ ಹೋದಾಗ ಅಲ್ಲಿಯ ಪ್ರಾಥಮಿಕ ಶಾಲೆಯನ್ನು ಸಂದರ್ಶಿಸಿ, ಹೆಡ್‌ಮಾಸ್ತರರಾದ ಕೃಷ್ಣಾಜಿ ಬೀಳಗೀಕರರನ್ನು ತನ್ನ ದರ್ಪೋಕ್ತಿಗಳಿಂದ ಬೆದರಿಸಿದ. ಬೀಳಗಿಕರರು ನಿಷ್ಠಾವಂತ ಶಿಕ್ಷಕರು ಮತ್ತು ಪ್ರಾಮಾಣಿಕರು. ಸಾಹಿತಿಗಳೂ ಹೌದು ('ನಲ-ದಮಯಂತೀ' ನಾಟಕಕಾರರು), ವಿಲ್ಸ್‌ಶಾಯರನ ಬಿರುಮಾತಿಗೆ ಪ್ರತಿಯಾಗಿ ಕೃಷ್ಣಾಜಿ ಮಾಸ್ತರರು ಸೂಕ್ತ ಉತ್ತರ ಕೊಟ್ಟಿರಬೇಕು. 'ಹವ್ಯಕ ಸುಬೋಧ'ದ ಪ್ರಕಾರ, ಸಭಾಕಾರ್ಯದಲ್ಲಿ ಅವರ ಅಂಗ ನಿಜವಾಗಿ ಇರಲೇ ಇಲ್ಲ. ಅವರ ಭಾವ ಮೈದುನನಾದ, ಇಸಳೂರಿನ ಕುಲಕರ್ಣಿಯು ಸಭಾದ ಪ್ರಮುಖ ಸದಸ್ಯನಿದ್ದ. ಅವನ ಮೇಲಿನ ಸಿಟ್ಟು ಸೇರಿ, ವಿಲ್ಸ್‌ಶಾಯರನು ದಕ್ಷಿಣ ವಿಭಾಗದ ಮುಖ್ಯ ಶಿಕ್ಷಣಾಧಿಕಾರಿ ಪಟವರ್ಧನರಿಗೆ ಪತ್ರ ಬರೆದು ಮಾಸ್ತರರನ್ನೆ ವರ್ಗ ಮಾಡಿಸಿದ - ಪಾಳಾ ಎಂಬ ಕುಗ್ರಾಮಕ್ಕೆ. ಆ ವರ್ಗದ ಆರ್ಡರ್ ಹೊರಡಿಸಿದವನು ಜಿಲ್ಲೆಯ ಡೆ.ಎ. ಇ. ಆದ ದೇಶಪಾಂಡೆ ಎಂಬವನು. ವೆಂಕಟರಮಣಶಾಸ್ತ್ರಿಗಳು ಈ ವರ್ಗಾವಣೆಯನ್ನು ಹಿನ್ನೆಲೆಯೊಂದಿಗೆ ಹೊರಗೆಡಹಿದರು (೧೮-೫-೧೮೮೬). ಆಗ ಸೋದರ ಭಾಷೆಯ ಪತ್ರಿಕೆಗಳಲ್ಲಿಯೂ ಇದರ ಪ್ರತಿಧ್ವನಿ ಕೇಳಿಬಂದುದು ಗಣನೀಯವಾಗಿದೆ. 'ಮಹಾರಾಷ್ಟ್ರ ಮಿತ್ರ' ಮತ್ತು 'ಜಗದಾದರ್ಶ' ಎಂಬ ಮರಾಠೀ ಪತ್ರಿಕೆಗಳು ಅಧಿಕಾರಿಗಳ ಈ ಬಗೆಯ ಹಸ್ತಕ್ಷೇಪ ಖಂಡನೀಯವೆಂದೂ ಗವರ್ನರ್ ರೇ ಇದನ್ನು ವಿಚಾರಿಸತಕ್ಕುದೆಂದೂ ಅಗ್ರಹಪಡಿಸಿ ಲೇಖ ಬರೆದುವು. 'ಜ್ಞಾನ ಪ್ರಕಾಶ' ಎಂಬ ಹೆಚ್ಚು ಪ್ರಸಾರದ ಮರಾಠೀ ಸಾಪ್ತಾಹಿಕವು ದೇಶೀಯ ಅಧಿಕಾರಿಗಳ ಸ್ವಾಭಿಮಾನ್ಯ ಶೂನ್ಯತೆಯನ್ನು ಎತ್ತಿ ತೋರಿಸುತ್ತ, ಪಟವರ್ಧನರು ಉತ್ತರ ವಿಭಾಗದ ಮುಖ್ಯ ಶಿಕ್ಷಣಾಧಿಕಾರಿಯಿದ್ದಾಗಲೂ ಇದೇ ರೀತಿ ಬಿಳಿಯಧಿಕಾರಿಗಳಿಗೆ ತಗ್ಗಿ ನಡೆದರೆಂದು ಹೇಳಿತು. ರೆವಿನ್ಯೂ ಅಧಿಕಾರಿಯ ಮಾತಿಗೆ ಶಿಕ್ಷಣಖಾತೆಯು ಮಹತ್ವ ಕೊಡುವ ಅಗತ್ಯವೇನಿತ್ತು? ವರ್ಗ ಮಾಡುವಾಗ ಲೋಕಲ್ ಬೋರ್ಡನ್ನು ವಿಚಾರಿಸಿದರೆ? ಇಲ್ಲವಾದರೆ, ಇನ್ನು ಮುಂದಾದರೂ ಹಾಗೆ ವಿಚಾರಿಸುವಂತೆ ಪ್ರಾಂತೀಯ ಸರಕಾರ ವಿಧಿಸಬೇಕು, ಎಂದು ಸಲಹೆ ಮಾಡಿತು.

ಸುಪ್ರಸಿದ್ಧವಾದ 'ಜಾಮೆ ಜಮ್‌ಶೇದ್' ತನ್ನ ೨-೬-೧೮೮೬ರ ಸಂಚಿಕೆಯಲ್ಲಿ ಈ ಬಗ್ಗೆ ಬರೆಯುತ್ತ 'ಹವ್ಯಕ ಸುಬೋಧ'ವು ಒದಗಿಸಿರುವ ವಿವರಗಳು ಬ್ರಿಟಿಶ್ ಆಡಳಿತ ಪದ್ಧತಿಗೇನೆ ಕೆಟ್ಟ ಹೆಸರನ್ನು ತರುವಂತಿವೆ. ಬೀಳಗೀಕರರನ್ನು ವರ್ಗ ಮಾಡಿದ್ದರ ನಿರ್ದಿಷ್ಟ ಕಾರಣಗಳನ್ನು ಕೊಡಲು ದೇಶಪಾಂಡೆಯಿಂದ ಸ್ಪಷ್ಟೀಕರಣ ಕೇಳಬೇಕು. ದೇಶೀಯ ಅಧಿಕಾರಿಗಳು ಸ್ವತಃ ಹೇಡಿಗಳಂತೆ ವರ್ತಿಸುತ್ತಾರೆ, ನಿರಪರಾಧಿ ಜನರನ್ನು ದಂಡಿಸುತ್ತಾರೆ - ಎಂಬುದಕ್ಕೆ ಇದು ನಿಚ್ಚಳವಾದ ನಿದರ್ಶನ. ಲಾರ್ಡ್ ರೇ ಮಾಡಬೇಕಾದ ಮೊದಲ ಕೆಲಸವೆಂದರೆ ವಿಲ್ಸ್‌ಶಾಯರ್ ಮತ್ತು ದೇಶಪಾಂಡೆ ಇಬ್ಬರನ್ನೂ ನೌಕರಿಯಿಂದ ತೆಗೆದುಹಾಕಬೇಕು ಎಂದು ಹೇಳಿತು. ಅದರಂತೆ 'ರಿಪನ್ ರಿಪೋರ್ಟರ್', 'ಬಾಂಬೆ ಸಮಾಚಾರ' ಮತ್ತು 'ರಾಸ್ತಗಫ್ತಾರ್' - ಎಂಬ ಅನ್ಯ ಗುಜರಾತೀ ಪತ್ರಿಕೆಗಳೂ ಈ ವಿಷಯದಲ್ಲಿ ಆಸಕ್ತಿ ವಹಿಸಿದುವು. 'ಹವ್ಯಕ ಸುಬೋಧ'ದ ಸಂಪಾದಕರನ್ನು ಸಮರ್ಥಿಸಿದುವು.

ಈ ನಿಮಿತ್ತದಿಂದ ವಿಲ್ಸ್‌ಶಾಯರನ ದುರಹಂಕಾರದ ಇತರ ಘಟನೆಗಳೂ ಬೆಳಕಿಗೆ ಬರತೊಡಗಿದುವು. ಅವನು ಗಾಯತೋಂಡೆ ಗೋಪಾಳರಾಯನೆಂಬ ಇಂಜಿನಿಯರ್ ಮತ್ತು ಓರ್ವ ವರದಿಗಾರ - ಇವರನ್ನು ಹೀನಾಯವಾಗಿ ಕಂಡ ಪ್ರಸಂಗಗಳನ್ನು, 'ಸತ್ಯಸುಧಾ' ಎಂಬ ಕಾರವಾರದ ಮರಾಠೀ ಸಾಪ್ತಾಹಿಕವು ಕೊಟ್ಟಿತು. ಆಗಿನ ಪ್ರಮುಖ ಇಂಗ್ಲಿಷ್ ಪತ್ರಿಕೆಯೆನಿಸಿದ್ದ Native Opinion, ತನ್ನ ೬-೬-೧೮೮೬ರ ಸಂಚಿಕೆಯಲ್ಲಿ 'Alleged Zulum in Kanara' ಎಂಬ ಶೀರ್ಷಿಕೆಯ ಕೆಳಗೆ ಬರೆದ ಅಗ್ರಲೇಖದ ಸಾರ ಇಂತಿದೆ:

"A vast amount of petty tyranny goes on in the Districts on account of the officials having very strange notions about their own infallibility and their sagacity as to the real requirements of the people. Exposure is always difficult, even impossible. We must thank the people of Kanara."

ಕೆನರಾ ಜನತೆಯ ಮೂಲಕ ವೆಂಕಟರಮಣ ಶಾಸ್ತ್ರಿಗಳ ದಿಟ್ಟತನಕ್ಕೆ ಅಭಿನಂದನೆಗಳ ಸಲ್ಲಿಕೆ! ಇಂತು ಕನ್ನಡ ಪತ್ರಿಕೆಯೊಂದರ ಪಾಂಚಜನ್ಯದ ಕರೆ ಅಲೆ ಅಲೆಯಾಗಿ ಬಹು ದೂರದ ವರೆಗೆ ಪಸರಿಸಿ, ಮರುದನಿ ಕೊಟ್ಟುದು ಕನ್ನಡ ಪತ್ರಿಕಾ ಪ್ರಪಂಚದಲ್ಲಿಯೆ ಅತ್ಯಂತ ಅಪೂರ್ವ ಘಟನೆಯಾಗಿದೆ.

ಆದರೆ ಈ ವೃತ್ತಾಂತವನ್ನು ಖೇದಪೂರ್ವಕವಾಗಿ, ಇಲ್ಲಿಗೇ ನಿಲ್ಲಿಸಬೇಕಾಗಿದೆ. ವನದುಃಖ ನಿವಾರಣಾ ಸಭೆಯ ಮನವಿಗಳನ್ನು ಸರಕಾರ ಯಾವ ರೀತಿಯಲ್ಲಿ ಪರಿಶೀಲಿಸಿತು? ಸಂಬಂಧಪಟ್ಟ ಅಧಿಕಾರಿಗಳಿಗೆ ಶಿಕ್ಷೆಯಾಯಿತೇ? ಇತ್ಯಾದಿ ವಿವರಗಳು ಮುಂಬಯಿಯ ಆ ಕಚೇರಿಯಲ್ಲಿ ದೊರೆಯುತ್ತಲಿಲ್ಲ. ಒಂದು ಮಾತು ನಿಜ. ಸರಕಾರವು ವೆಂಕಟರಮಣ

ಶಾಸ್ತ್ರಿಗಳನ್ನಂತೂ ವಿಚಾರಣೆಗೆ ಗುರಿಪಡಿಸಿ, ಶಿಕ್ಷಿಸಿತು. ಇಲ್ಲವಾದರೆ ೧೮೯೦ನೆಯ ವರ್ಷ ಪರಿಕೆಯ ಸ್ಥಿತಿಯಲ್ಲಿದ್ದ ಪತ್ರಿಕೆ ಹಠಾತ್ತನೆ ನಿಂತುಹೋಗಲು ಕಾರಣವೇನಿದೆ? ವನದುಃಖ ನಿವಾರಣಾ ಪ್ರಕರಣ ನಡೆದದ್ದು ೧೮೮೭ರಲ್ಲಿ. ಅದರ ಕೇಸು ಮುಗಿಯಲು ೩ ವರ್ಷ ತಾಗಿರಬೇಕು. ಇಲ್ಲವೆ ಹಡಗಿನಲ್ಲಿ ಹೆಣ್ಣಿನೊಡನೆ ಚೆಲ್ಲಾಟವಾಡಿದ ಅರಣ್ಯಾಧಿಕಾರಿಯ ಹಗರಣವಾದರೂ ಇರಬೇಕು. 'ಹಿತೋಪದೇಶ'ದ ೧೮೮೮ರ ಜೂನ್ ಸಂಚಿಕೆಯಲ್ಲಿ 'ಈ ತಿಂಗಳಲ್ಲಿ ನಾವು ಒಂದು ಕೇಸಿನ ಸಂಬಂಧವಾದ ತೊಂದರೆಯಲ್ಲಿದ್ದು ನೇಮದಂತೆ ಪ್ರತಿ ತಿಂಗಳಿಗೆ ಕೊಡತಕ್ಕ (ವ್ಯಂಗ್ಯ) ಚಿತ್ರಗಳನ್ನು ಬರೆಯತಕ್ಕವರು ಪೇಚಾಟದಲ್ಲಿರುವ ಕಾರಣ ಅಂಥ ಚಿತ್ರಗಳನ್ನು ತಯಾರಿಸಲಿಕ್ಕೆ ಅನುಕೂಲವಾಗಲಿಲ್ಲಾ' ಎಂಬ ಹೇಳಿಕೆಯಿದೆ. ಇದಾವ ಕೇಸು ಎಂಬುದು ಸ್ಪಷ್ಟವಿಲ್ಲ. ಅಂತೂ ಸರಕಾರವು ಶಾಸ್ತ್ರಿಗಳ ಹೆಸರು, ಪತ್ರಿಕಾವೃತ್ತಿಗೇನೇ ಮುಟ್ಟುಗೋಲು ಹಾಕಿತು. ೧೮೯೦ರ ಅನಂತರ ಶಾಸ್ತ್ರಿಗಳ ಹೆಸರು ಯಾವ ಗ್ರಂಥ, ಪತ್ರಿಕೆಗಳ ಸಂಬಂಧವಾಗಿಯೂ ಕಂಡುಬರುವುದಿಲ್ಲ. ಶಾಸ್ತ್ರಿಗಳು ಮುಂಬಯಿಯನ್ನೇ ಬಿಟ್ಟು, ಪುಣೆಯಲ್ಲಿ ಕೆಲಕಾಲ ವೈದ್ಯಕೀಯ ವೃತ್ತಿ ಮಾಡಿಕೊಂಡು ಇದ್ದರಂತೆ. ಜೀವನದಲ್ಲಿ ಕಡು ನೊಂದವರಾಗಿ ಮಧ್ಯವಯಸ್ಸಿನಲ್ಲಿಯೆ ಅವರು ತೀರಿಕೊಂಡಿರಬೇಕು.

ಇಷ್ಟೆಲ್ಲ ಲೇಖಕೀಯ ಸಾಹಸ ಕೇವಲ ಐದು ವರ್ಷಗಳ ಅವಧಿಯದೆಂಬುದನ್ನು ಗಮನಿಸಿದರೆ ವೆಂಕಟರಮಣ ಶಾಸ್ತ್ರಿಗಳ ತೀಕ್ಷ್ಣಬುದ್ಧಿ, ಅದ್ಭುತ ಕಾರ್ಯಶಕ್ತಿ, ಮತ್ತು ಪ್ರಚಂಡ ಉತ್ಸಾಹ - ಇವುಗಳ ಕಲ್ಪನೆ ಬಾರದಿರದು. ಅವರು ಛಲದಂಕಮಲ್ಲರೆಂಬುದು ನಿಸ್ಸಂಶಯ. ಸ್ವಾರ್ಥ ಅಥವಾ ಬೇರಾವ ಪ್ರಲೋಭನವೂ ಇಲ್ಲದೆ ನಾಡಿನ ಹಿತವೊಂದನ್ನೆ ದೃಷ್ಟಿಯಲ್ಲಿಟ್ಟುಕೊಂಡು ತಮ್ಮ ಲೇಖನಿಯನ್ನು ಖಡ್ಗಕ್ಕಿಂತಲೂ ಹರಿತವಾಗಿ ಮಸೆದರು. ಅವರ ಕ್ಷಾತ್ರವೃತ್ತಿಯು ಸಮಸ್ತ ಕನ್ನಡಿಗರಿಗೆ ಗೌರವಾಸ್ಪದವಾದುದು. ಬದುಕಿನ ದುರಂತ ಏನೇ ಇರಲಿ, ಆದ್ಯ ಸಾಮಾಜಿಕ ನಾಟಕಕಾರ ಹಾಗೂ ಧೀರ ಪತ್ರಿಕೋದ್ಯಮಿ ಎಂಬ ಕಾರಣಗಳಿಂದ ಅವರ ಹೆಸರು ಹೊಸಗನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ನಿಲ್ಲತಕ್ಕುದು. ◆

- ಶ್ರೀ. ಹಾ.

## ೩೩. ಶರ್ಮದ್ವಯರು

### (ತಿ.ತಾ. ಶರ್ಮ; ಸಿ. ಕೃಷ್ಣಶರ್ಮ)

✍ ಶ್ರೀ ನೀಲತ್ತಹಳ್ಳಿ ಕಸ್ತೂರಿ

ಕನ್ನಡ ಪತ್ರಿಕಾ ಪ್ರಪಂಚದ ಇತಿಹಾಸದಲ್ಲಿ 'ವಿಶ್ವಕರ್ನಾಟಕ' ಪತ್ರಿಕೆಯದು ಜ್ವಲಂತ ಅಧ್ಯಾಯ. ಸ್ವಾತಂತ್ರ್ಯ ಹೋರಾಟದಲ್ಲಿ ಪತ್ರಿಕೆಯೂ ಒಂದು ಸಾಧನ ಆಗುತ್ತದೆ ಆಗಬೇಕು ಎನ್ನುವುದನ್ನು ನಿಚ್ಚಳವಾಗಿ ಸಾರ್ಥಕವಾಗಿ ಸಾಧಿಸಿ ತೋರಿಸಿದ್ದು ಆ ಪತ್ರಿಕೆಯ ಹಿರಿಮೆ.

ಲೋಕಮಾನ್ಯ ತಿಲಕರ 'ಕೇಸರಿ', ಲಾಲಾ ಲಜಪತರಾಯರ 'ಯಂಗ್ ಇಂಡಿಯಾ', ಶ್ರೀ ಅರವಿಂದರ 'ವಂದೇಮಾತರಂ', ಗಾಂಧೀಜಿಯವರ 'ಹರಿಜನ', ಟಿ. ಪ್ರಕಾಶಂ ಅವರ 'ಸ್ವರಾಜ್ಯ', ತಮಿಳಿನ 'ಸ್ವದೇಶ ಮಿತ್ರನ್' ಮುಂತಾದವುಗಳ ಸಾಲಿನಲ್ಲಿ ನಿಲ್ಲುವ ಕನ್ನಡ ಪತ್ರಿಕೆ ವಿಶ್ವಕರ್ನಾಟಕ.

ಉದಕಮಂಡಲದ ತಂಪು ಹವೆಯಲ್ಲಿ, ಭಾರತದ ಗತ ಇತಿಹಾಸದ ಸುಳಿವುಗಳನ್ನು ಶಾಸನಗಳ ಬೊಂತೆಯ ನಡುವಿನಿಂದ ಹೆಕ್ಕಿ ನೋಡುತ್ತ ಜೀವನಯಾತ್ರೆಯಲ್ಲಿ ತೊಡಗಿದ್ದವರು ತಿರುಮಲೆ ತಾತಾಚಾರ್ಯ ಶರ್ಮ. ಅಲ್ಲಿಗೆ ಆಗ ವಿಶ್ರಾಂತಿಗಾಗಿ ಬಂದು ಇದ್ದವರು ಆಂಧ್ರ ಕೇಸರಿ ಟಂಗುಟೂರಿ ಪ್ರಕಾಶಂ ಬಿರುದಿನ ನಾಯಕ. ಸತ್ಯಾಗ್ರಹ ಸಮರದ ಆರಂಭದ ಕಾಲ. ಹೊಸ ಇತಿಹಾಸದ ಉಗಮ ಕಾಲ. ಮುಂಬೆಳಗಿನ ಮುಂಜಾವು. "ಕಣ್ಣಿನ ಮುಂದೆಯೆ ನವ ಇತಿಹಾಸ ನಿರ್ಮಾಣವಾಗುತ್ತಿದೆ. ಅದರಲ್ಲಿ ಭಾಗಿಯಾಗುವುದನ್ನು ಬಿಟ್ಟು, ಗತಕಾಲದ ಗುರುತುಗಳನ್ನು ಕೆದಕುತ್ತ ಕಾಲ ಕಳೆಯುತ್ತಿದೀಯಲ್ಲ" ಎಂದರಂತೆ ಪ್ರಕಾಶಂ. ಮಾತು ತರುಣ ಶರ್ಮರ ಮನವೊಕ್ಕಿತು. ಬದುಕಿನ ದಿಕ್ಕನ್ನು ಬದಲು ಮಾಡಿತು. ರಾಷ್ಟ್ರ ಸೇವೆಯ ಹಂಬಲವನ್ನು ತುಂಬಿತು. ಆಂದೋಲನಕ್ಕೆ ಆಹ್ವಾನಿಸಿತು.

೧೯೨೪ ಬೆಳಗಾವಿ ಕಾಂಗ್ರೆಸ್, ಮಹಾತ್ಮರೇ ಅಧ್ಯಕ್ಷರು. ಅವರನ್ನು ಭೇಟಿ ಮಾಡಿದರು, ತಿ.ತಾ. ಶರ್ಮ. ತಾವು ಆರಂಭಿಸಬೇಕೆಂದಿದ್ದ ಪತ್ರಿಕೆಗೆ ಸಂದೇಶವನ್ನು ಬೇಡಿದರು. ಗಾಂಧೀಜಿ ಬರೆದುಕೊಟ್ಟದ್ದು ಎರಡು ಮಾತಿನ ಸಂದೇಶ, ಬೀಜಮಂತ್ರ - Courage and Character. (ಧೈರ್ಯ ಮತ್ತು ಶೀಲ) ಈ ಎರಡು ಮೌಲ್ಯಗಳ ದಂಡೆಗಳ ನಡುವೆಯೆ 'ವಿಶ್ವಕರ್ನಾಟಕ'ದ ಹೊನಲು ಭೋರ್ಗರೆದು ಹರಿಯಿತು.

ಮೊದಲು ಅದು ವಾರಪತ್ರಿಕೆ ಆಗಿತ್ತು. ನಿರ್ಭೀತ ಟೀಕೆ, ಅತೀವ ರಾಷ್ಟ್ರನಿಷ್ಠೆ, ಕೆಚ್ಚು, ಉಗ್ರವಾದ ಅಗ್ರ ಲೇಖನಗಳು ಇವರಿಂದಾಗಿ ಅದು ವಾರ್ (ಕದನ) ಪತ್ರಿಕೆ ಎಂದೇ ಹೆಸರು ಪಡೆಯಿತು. ಕ್ರಮೇಣ ಅದು ದಿನಪತ್ರಿಕೆ ಆಯಿತು.

೧೯೩೮ರ ಗಣಪತಿ ಗಲಾಟೆಯ ಸಂದರ್ಭದಲ್ಲಿ ಸರ್ಕಾರ ಪತ್ರಿಕೆಗಳ ಮೇಲೆ ನಿರ್ಬಂಧವನ್ನು ಹೇರಿತು. 'ವಿಶ್ವಕರ್ನಾಟಕ' ಅದನ್ನು ಉಗ್ರವಾಗಿ ವಿಶಿಷ್ಟವಾಗಿ ವಿರೋಧಿಸಿತು. "ಮೈಸೂರು ವೃತ್ತಪತ್ರಿಕೆಗಳ ಕರಾಳ ಶಾಸನವನ್ನು ಶಾಸನ ಕಡತದಿಂದ ತೊಡೆದು ಹಾಕುವ ವರೆಗೂ ನಾವು ಪ್ರಧಾನ ಲೇಖನವನ್ನು ಬರೆಯುವುದೇ ಇಲ್ಲ ಎಂಬುದು ನಮ್ಮ ಸತ್ಯ ಸಂಕಲ್ಪ" ಎಂದು ಸಂಪಾದಕರು ಬರೆದು, ಅಗ್ರಲೇಖನದ ಸ್ಥಳವನ್ನು ಬರಿದಾಗಿಯೆ ಬಿಡಲು ಆರಂಭಿಸಿದರು, ಈ ಖಾಲಿ ಹಾಳೆಯ ಸಂಪಾದಕೀಯ ಬರೆಹಕ್ಕಿಂತ ತೀವ್ರ ಪರಿಣಾಮಕಾರಿ ಆಯಿತು.

'ವಿಶ್ವಕರ್ನಾಟಕ'ದ ಕೆಲಸ ಒಂದು ವ್ರತ, ವೀರವ್ರತ, ಯಜ್ಞ. ಸಂಪಾದಕರಿಗೆ ಅದರಿಂದ ದೊರೆತ ಫಲ ಸಾಲ, ಆಸ್ತಿಪಾಸ್ತಿಯ ವಿಕ್ರಯ. ಬಡತನ, ಶ್ರಮ, ಕಾಯಿಲೆ, ಜೈಲು! ಆದರೆ ಸತ್ಯನಿಷ್ಠೆ ರಾಷ್ಟ್ರನಿಷ್ಠೆಗಳನ್ನು ಬಿಡದೆ ನಡೆಸಿದ ಕೃತಕೃತ್ಯತೆಯ ಆನಂದ, ಲೋಕಕ್ಕೆ ಸ್ಫೂರ್ತಿ!

೧೯೪೧ರ ಸುಮಾರು. ವಿಶ್ವಯುದ್ಧದ ದಳ್ಳುರಿ ಲೋಕದಲ್ಲೆಲ್ಲ ಭಾರತದಲ್ಲಿ ಉದ್ವೇಗ, ಬೇಗೆ. ಕಾಂಗ್ರೆಸ್ ಸರ್ಕಾರಗಳ ಪದತ್ಯಾಗ, ಎಲ್ಲರ ಆಸೆಗಣ್ಣು ಗಾಂಧೀಜಿಯತ್ತ. ಸುತ್ತ ಕವಿದಿದ್ದ ಕತ್ತಲೆಯಲ್ಲಿ ಬೆಳಕನ್ನು ಅರಸುತ್ತಿದ್ದರು ಗಾಂಧಿ. ಬೆಳಕು ಇನ್ನೂ ಕಾಣಿಸಿರಲಿಲ್ಲ. "ನನ್ನೊಳಗೆ ಬೆಂಕಿ ಉರಿಯುತ್ತಿದೆ" ಎಂದು 'ಹರಿಜನ' ದಲ್ಲಿ ತಮ್ಮ ಅಳಲನ್ನು ತೋಡಿಕೊಳ್ಳುತ್ತಿದ್ದರು.

ಅಂಥ ಪರ್ವಕಾಲದಲ್ಲಿ ತಿ.ತಾ. ಶರ್ಮರು ಕಾಯಿಲೆಯಾಗಿ ಮಲಗಿದರು. ಸಾಲ ಏರಿತು. ಪತ್ರಿಕೆ ನಿಲ್ಲುವ ಸ್ಥಿತಿ ಬಂತು. ಆಗ ನೆರವಿಗೆ ಒದಗಿ ಬಂದವರು ಸಿದ್ದವನಹಳ್ಳಿ ಕೃಷ್ಣಶರ್ಮ. ಹೈದರಾಬಾದಿನಲ್ಲಿ ಜನಜಾಗೃತಿಯ ಕಿಚ್ಚು ಎಬ್ಬಿಸಿ ತತ್ಫಲವಾಗಿ ಅಲ್ಲಿಂದ ಗಡೀಪಾರಾಗಿ ಬಂದಿದ್ದ ವಾಮನ ವ್ಯಕ್ತಿ.

ಇಬ್ಬರು ಶರ್ಮರೂ ಬಂಧುಗಳು ಸಗೋತ್ರರು. ಸಹಭಾವನೆಯರು, ಇಬ್ಬರಲ್ಲೂ ಉತ್ಕಟ ರಾಷ್ಟ್ರೀಯ ಭಾವನೆ, ಸಾಹಿತ್ಯಾಸಕ್ತಿ, ನುಡಿಜಾಣ್ಮೆ. ಇಬ್ಬರೂ ಮಾತಿನ ಮಲ್ಲರು. ಪ್ರಚೋದಕ ಲೇಖಕರು. ಆದರ್ಶಕ್ಕೆ ಅಂಟಿಕೊಂಡವರು. ಗಾಂಧೀಜಿಯನ್ನು ತಮ್ಮಲ್ಲಿ ತುಂಬಿಕೊಂಡವರು. ಈ ಸಾಮ್ಯದ ಜೊತೆಗೇ ಭಿನ್ನತೆಯೂ ಇತ್ತು. ತಿ. ತಾ. ಶರ್ಮ ಹೊರಗೆ 'ವಿಪ್ಲವಮೂರ್ತಿ ಒಳಗೆ ಶಾಂತಮೂರ್ತಿ'. ಕೃಷ್ಣಶರ್ಮ ಹೊರಗೆ 'ಸೌಮ್ಯಮೂರ್ತಿ' ಒಳಗೆ 'ಕ್ರಾಂತಿಮೂರ್ತಿ'. ಹಿರಿಯ ಶರ್ಮರ ಮಾತು ಜೋರು, ಕೆಲವೊಮ್ಮೆ ಕಟು. ಕೃಷ್ಣಶರ್ಮರದು ನಯ ಸವಿ. ಒಬ್ಬರು ಸಿಡಿಲು. ಇನ್ನೊಬ್ಬರು ಮಿಂಚು, ಇಬ್ಬರ ಜೋಡಿ ಅನಲಾನಿಲ ಸಂಯೋಗ!

"ವಿಶ್ವಕರ್ನಾಟಕದ ಜೀವ ತಿ.ತಾ.ಶರ್ಮ, ಅದರ ಜೀವಾಳ ಕೃಷ್ಣಶರ್ಮ" ಎನಿಸುವಂತೆ ಆಯಿತು.

'ವಿಶ್ವಕರ್ನಾಟಕ' ಬರಿಯ ವಾರ್ತಾ ಪತ್ರಿಕೆ ಆಗಿರಲಿಲ್ಲ. ಹೊಟ್ಟೆಪಾಡು ಮಾತ್ರ ಆಗಿರಲಿಲ್ಲ. ಅದೇ ಒಂದು ಸಂಸ್ಥೆ. ರಾಷ್ಟ್ರಪ್ರೇಮದ ಆಗರ. ನಾಡಸೇವೆಗೆ ಜನರನ್ನು ಬಡಿದೆಬ್ಬಿಸುವ ಚೇತನ ಕೇಂದ್ರ. ಯುವಕರಿಗಂತೂ ಸ್ಫೂರ್ತಿಯ ನೆಲೆ, ಉದಯೋನ್ಮುಖ ಬರಹಗಾರರಿಗೆ ಪತ್ರಕರ್ತರಿಗೆ ಪ್ರೋತ್ಸಾಹ ಕೇಂದ್ರ, ಪ್ರೇರಣೆಯ ಕೇಂದ್ರ ಹಾಗೂ ಪ್ರಯೋಗ ಕೇಂದ್ರ, ಜನತೆಯ ಆಶೋತ್ತರಗಳ ಕೈಗನ್ನಡಿ. ಮಾತ್ರವಲ್ಲ ಹೊಸ ಅಭಿರುಚಿಯನ್ನು ಬೆಳೆಸುವ, ಜನತೆಯನ್ನು ಕಟ್ಟುವ 'ನಾಯಕ' ಆಗಿತ್ತು ಪತ್ರಿಕೆ. 'ಸಮಾಚಾರ ಪತ್ರಿಕೆ' (ನ್ಯೂಸ್ ಪೇಪರ್)ಗಿಂತ ಮಿಗಿಲಾಗಿ 'ವಿಚಾರ ಪತ್ರಿಕೆ' ಆಗಿತ್ತು. ಹಾಗೇ ಇರಬೇಕು ಪತ್ರಿಕೆ; ಕೇವಲ ಸುದ್ದಿ ಹೇಳಿದರೆ ಸಾಲದು; ವರದಿ ಮಾಡಿದರೆ ಸಾಲದು; ಜನರ ಅಭೀಷ್ಟಗಳಿಗೆ ಪುಟಕೊಡಬೇಕು; ಅವರ ಅಭಿರುಚಿಯನ್ನು ಬೆಳೆಸುವಂತಿರಬೇಕು. ಪತ್ರಕರ್ತನ ಕೆಲಸ ವಿಶೇಷವಾದುದು; ಜನತೆಯನ್ನು ಕಟ್ಟುವ ಕೆಲಸ, ತಿದ್ದುವ ಕೆಲಸ; ಕೇವಲ ಸುದ್ದಿ ಸಂಗ್ರಾಹಕನ ಕೆಲಸ ಅಲ್ಲ ಎನ್ನುತ್ತಿದ್ದರು ಕೃಷ್ಣಶರ್ಮರು. ಇಬ್ಬರು ಶರ್ಮರ ಪತ್ರಿಕಾ ವ್ಯವಸಾಯ ನಡೆದುದೂ ಹಾಗೆಯೆ.

ಎರಡನೆಯ ಮಹಾಯುದ್ಧದ ಕರಾಳ ಕಾಲ. ಭಾರತದ ಭವಿಷ್ಯತ್ತು ರೂಪುಗೊಳ್ಳಬೇಕಾಗಿದ್ದ ಕಾಲ. ಎಲ್ಲೆಲ್ಲೂ ಕ್ಷೋಭೆ. ಮಹಾಚಳುವಳಿಗೆ ರಾಷ್ಟ್ರ ಸಿದ್ಧವಾಗಬೇಕಾಗಿತ್ತು. ಅಂಥ ಸಮಯದಲ್ಲಿ ಕನ್ನಡ ಜನಮನವನ್ನು ರೂಪಿಸುವ ಐತಿಹಾಸಿಕ ಹೊಣೆ 'ವಿಶ್ವಕರ್ನಾಟಕ'ದ ಮೇಲೆ ಬಂತು. ಅದನ್ನು ಪತ್ರಿಕೆ ಹೇಗೆ ನಿಭಾಯಿಸಿತು ಎನ್ನುವುದು ಚರಿತ್ರೆಯ ಸಂಗತಿ.

ಬೆಂಗಳೂರು ಬಳೇಪೇಟೆಯ ಸಂದಿಯಲ್ಲಿ ಅದರ ಕಚೇರಿ. ಮುರುಕಲು ಅಟ್ಟದ ಮೇಲೆ ಸಂಪಾದಕರ ಕೋಣೆ, ಕೋಣೆಯೇನು ಒಂದು ಮೂಲೆ. ಹರಕಲು ಮುರುಕಲು ಕುರ್ಚಿ ಮೇಜು. ಶರ್ಮರ ಸಮಯವೆಲ್ಲ ಅಲ್ಲೇ. ಅದೇ ಕಚೇರಿ, ಅದೇ ಗೆಳೆಯರು ಸೇರುವ ಸ್ಥಳ, ಮಾತುಕತೆ ಚರ್ಚೆ ಚಿಂತನ ಬರೆಹ ಎಲ್ಲ ಅಲ್ಲೇ. ಸುತ್ತ ತರುಣರ ತಂಡ. ಕೆಚ್ಚಿನ ತರುಣರು. 'ಕಿಡಿ' ಶೇಷಪ್ಪ, ಮುಂದೆ 'ಕನ್ನಡ ಪ್ರಭ' ಸಂಪಾದಕರಾದ ರಾಮಕೃಷ್ಣಮೂರ್ತಿ, ಇಂಗ್ಲಿಷಿನ ವಿದ್ವಾಂಸ ಎಸ್.

ಅನಂತನಾರಾಯಣ, ಪತ್ರಿಕೋದ್ಯಮದ ಪಂಡಿತರೇ ಆದ ನಾಡಿಗ ಕೃಷ್ಣಮೂರ್ತಿ, ಎಸ್. ಎಸ್. ಸೀತಾರಾಮಶಾಸ್ತ್ರಿ, ಮಂಜಯ್ಯ ಬೇಂದ್ರೆಯವರು ಕಳಿಸಿಕೊಟ್ಟ ಅರ್ಚಕ ವೆಂಕಟೇಶ, ಶರ್ಮರ ಮನೆಯವರೇ ಆಗಿದ್ದ ಬಿರುಸಿನ ಲೇಖಕ ತರಾಸು, ಮ. ಶ್ರೀಧರಮೂರ್ತಿ, ಖಾದ್ರಿ-ಶಾಮಣ್ಣ - ಕನ್ನಡದ ಅನೇಕ ಪತ್ರಕರ್ತರಿಗೆ ವಿಶ್ವಕರ್ನಾಟಕದಲ್ಲೆ ದೀಕ್ಷೆ, ಅದೇ ಗರಡಿಮನೆ, ಕೃಷ್ಣಶರ್ಮರೇ ಗರುಡಿಯಾಚಾರ್ಯ. ಯಾರಿಗಾದರೂ ಬರೆವಣಿಗೆಯಲ್ಲಿ ಒಲವು ಇದೆ ಎಂದು ಸುಳಿವು ಸಿಕ್ಕರೆ ಸಾಕು, ಅಂಥವರನ್ನು ಸೆಳೆದುಕೊಂಡು ಕೆಲಸಕ್ಕೆ ಹೂಡುತ್ತಿದ್ದರು. ಸತ್ಯಾಗ್ರಹದ ಕಾಲ. ಪ್ರತಿಭಾಸ್ಮಿತ ತರುಣರು ಅನೇಕರು ಶಾಲಾ ಕಾಲೇಜು ತೊರೆದು ಚಳುವಳಿಗೆ ಬಂದಿದ್ದರು. ಎಲ್ಲರಿಗೂ 'ವಿಶ್ವಕರ್ನಾಟಕ'ವೇ ಸ್ಫೂರ್ತಿಯ ಸೆಲೆ. ಅದರದೇ ಪ್ರೇರಣೆ. ನಾಡಿನ ಮೂಲೆ ಮೂಲೆಯಲ್ಲೂ ಪತ್ರಿಕೆಯನ್ನು ಓದಿ ರೋಮಾಂಚಗೊಂಡು ರಾಷ್ಟ್ರಸೇವೆಯ ಅಗ್ನಿಕುಂಡಕ್ಕೆ ಧುಮುಕಿದರು ಎಷ್ಟೋ ಮಂದಿ. ಸೆರೆಗೆ ಹೋಗಿ ಬಂದ ಮೇಲೆ ಪತ್ರಿಕೆಗೆ ಬಂದವರು ಹಲವರು. ತರಾಸು ಅನಂತನಾರಾಯಣ ನಾಡಿಗ ಮುಂತಾದವರು ಬಂದುದು ಹಾಗೆ. ಎಲ್ಲರಿಗೂ 'ವಿಶ್ವಕರ್ನಾಟಕ'ವೇ ಆಸರೆ.

ಪತ್ರಿಕೆಯ ಹೆಸರೇನೋ ಭಾರೀ ದಿಗಂತ ವಿಶ್ರಾಂತ. ಆದರೆ ಹಣಕಾಸಿನ ಸ್ಥಿತಿ ಎಂದೂ ಅಪಾಯದ ಅಂಚಿನಲ್ಲೆ. ಬರಹಗಾರರಿಗೆ ಹತ್ತಿರದ ಹೋಟಲಿನಲ್ಲಿ ತಿಂಡಿತೀರ್ಥದ ಸೇವೆ. ಕಚೇರಿಯಲ್ಲೆ ಠಿಕಾಣಿ, ಸಂಬಳ ಸಿಕ್ಕಿದಾಗಲೇ ಕಾಗದದ ಅಭಾವ. ದಿನಕ್ಕೊಂದು ಬಣ್ಣದ ಕಾಗದ. ಅಚ್ಚಿನಲ್ಲಿ ಅಂದವಿಲ್ಲ ಚೆಂದವಿಲ್ಲ. ಏನಾದರೇನು, ಜನಕ್ಕೆ ಅದೆಲ್ಲ ಮುಖ್ಯವಲ್ಲ. ಅವರು ಹಾತೊರೆಯುತ್ತಿದ್ದುದು ಪತ್ರಿಕೆ ಓದಲು, ಅದರಲ್ಲೂ ಅಗ್ರಲೇಖನ ಓದಲು. ಕಾರ್ಯಕರ್ತರಿಗೆ ಪತ್ರಿಕೆಯ ಹಳೆಯ ಕಟ್ಟುಗಳನ್ನು ತಿರುವಿ ಹಾಕುವುದೇ ದೊಡ್ಡ ಶಿಕ್ಷಣ. ಸಂಬಳ ಕಡಿಮೆ. ಮೊದಲು ಕೆಲಸಗಾರರಿಗೆ ಸಂಬಳ. ಅನಂತರ ಸಂಪಾದಕ ವರ್ಗಕ್ಕೆ, ಆದರೇನು ಯಾರಿಗೂ ಅತೃಪ್ತಿ ಇಲ್ಲ. ಏನೊ ಒಂದು ಮಹಾ ಸಾಹಸ ಕಾರ್ಯದಲ್ಲಿ ತಾವು ಪಾಲುದಾರರು ಎಂಬ ಹೆಮ್ಮೆ, ಸಮಾಧಾನ. ಎಷ್ಟೋ ಸಲ ನಾಳೆಗೆ ಕಾಗದ ಇಲ್ಲ ಎನ್ನುವ ಸ್ಥಿತಿ. ಕಾಳಸಂತೆಯಲ್ಲಿ ಕೊಳ್ಳಲು ಹಣವಿಲ್ಲ. ನಾಳೆ ಸಂಚಿಕೆ ಬರುವುದೊ ಇಲ್ಲವೊ ಎನ್ನುವ ಚಿಂತೆ. ಆದರೆ ಕೃಷ್ಣಶರ್ಮರಿಗೆ ಮೊಂಡು ಧೈರ್ಯ. ಎಲ್ಲೊ ಹೋಗುವರು, ಹಣ ತರುವರು. ಸಂಚಿಕೆ ಹೊರಡುವುದು. ಏನೇ ಪ್ರಸಂಗ ಬರಲಿ, ಜಗ್ಗುವಂತಿಲ್ಲ. 'ವಿಶ್ವ ಕರ್ನಾಟಕ'ದ ಕೆಲಸ ಎಂದರೆ ಸಾಹಸ ಕೆಲಸ. ಅಷ್ಟೇ ಅಲ್ಲ ಅಪಾಯದ ಕೆಲಸ. ಆದರೂ ಮಹಾ ಗೌರವದ ಕೆಲಸ.

ಪತ್ರಿಕೆಯಲ್ಲಿ ಅಗ್ರ ಲೇಖನ, ಮಾತಿನ ಮಂಟಪ, ಟಿಪ್ಪಣಿಗಳು, ಹುರಿಗಾಳು ಇತ್ಯಾದಿ ಅಂಕಣವೆಲ್ಲ ಕೃಷ್ಣಶರ್ಮರದೇ. ಬಹುಪಾಲು ಜನ ಕಾದಿರುತ್ತಿದ್ದುದೂ ಅವುಗಳಿಗೇ. ಸಾಮಾನ್ಯವಾಗಿ ಪತ್ರಿಕೆಯಲ್ಲಿ ತೀರ ಕಡಿಮೆ ಓದಿಸಿಕೊಳ್ಳುವ ಭಾಗ ಸಂಪಾದಕೀಯ. ಆದರೆ 'ವಿಶ್ವಕರ್ನಾಟಕ'ದಲ್ಲಿ ಇದು ತಲೆಕೆಳಗಾಯಿತು. ದಿನವೂ ಅಗ್ರಲೇಖನ ಓದದಿದ್ದರೆ ಊಟವೇ ಸೇರದು ಎನ್ನುವವರು ಎಷ್ಟೋ ಮಂದಿ. ಆ ಲೇಖನಗಳಲ್ಲಿ ಅಂದಿನ ಸಮಸ್ಯೆ ಸಂಗತಿಗಳ ಪರಿಶೀಲನೆ, ಟೀಕೆ ಟಿಪ್ಪಣಿ, ದಿಕ್ಸೂಚಿ, ಅಂಬಿನಂತೆ ಮಾತು, ತೀಕ್ಷ್ಣವಾದ ವಿಚಾರಸರಣಿ, ವಿಶಾಲ ಮನೋಧರ್ಮ, ಕ್ರಾಂತಿಕಾರಕ ಎನ್ನಬಹುದಾದರೂ ಸಮತೂಕ ತಪ್ಪದ ಸತ್ಯಾಗ್ರಹೀ  ಮನೋಭಾವ, ಉಳಿಪೆಟ್ಟು ಬೇಕಾದಲ್ಲಿ ಆ ಪೆಟ್ಟು, ಚಾವಟಿ ಬೇಕಾದಲ್ಲಿ ಚಾವಟಿ, ಗದಾಪ್ರಹಾರವೇ ಅಗತ್ಯವಾದಲ್ಲಿ ಅದಕ್ಕೂ ಸೈ. ಹೊಸ ಗದ್ಯದ ಕುಸುರಿ ಕಲೆಯ ಕಮ್ಮಟ ಪತ್ರಿಕೆ. ದೀನಬಂಧು ಆಂಡ್ರ್ಯೂಸ್, ರೋಮೇರೋಲಾ, ಮಹದೇವಭಾಯಿ, ಮ್ಯೂರಿಯಲ್ ಲೆಸ್ಟರ್ ಮುಂತಾದ ವಿಚಾರವಂತರ ಲೇಖನಗಳ ಅನುವಾದಗಳು ಇರುತ್ತಿದ್ದವು. ಗಾಂಧೀ ವಿಚಾರಕ್ಕಂತೂ ಮೊದಲ ಮಣೆ. ಕೃಷ್ಣಶರ್ಮರ ಕೈಯಲ್ಲಿ ಆ ರಾಷ್ಟ್ರೀಯ ಪತ್ರಿಕೆ ಪೂರಾ ಗಾಂಧೀ ಪತ್ರಿಕೆ ಆಯಿತು.

ಅಂತಾರಾಷ್ಟ್ರೀಯ ಸ್ಥಿತಿಗತಿ, ಭಾರತದ ರಾಜಕಾರಣ, ಸ್ವಾತಂತ್ರ್ಯ ಹೋರಾಟ, ಸತ್ಯಾಗ್ರಹದ ಸುದ್ದಿಗಳು, ನಾಯಕರ ವಾಣಿ, ಗಾಂಧೀ ಸಂದೇಶ, ಮೈಸೂರಿನ ಸ್ಥಿತಿಗತಿ, ಕರ್ನಾಟಕ ಏಕೀಕರಣ ಇವೆಲ್ಲ ಪತ್ರಿಕೆಯ ಹೂರಣ. ಕನ್ನಡದ ಮಾತು ಬಂದಾಗ ಬರೆಹಕ್ಕೆ ಮಿಂಚು. ನಿರ್ದಾಕ್ಷಿಣ್ಯವಾದ ವಿಷಯ ಪ್ರತಿಪಾದನೆ, ಹಿತಮಿತವಾದ ಮಾತಿನ ಮೋಡಿ. ಎಂಥ ವಾದವನ್ನೂ, ಕರಗಿಸುವಂಥ ವೈಖರಿ, ಮನ ಸೆಳೆಯುವ ಮನವೊಲಿಸುವ ಶೈಲಿ!

೧೯೪೨ ಆಗಸ್ಟ್ ೮ ರಂದು ಗಾಂಧೀಜಿ 'ಚಲೇಜಾವ್' ಸಂದೇಶವಿತ್ತರಲ್ಲ. ಆ ಉಜ್ವಲ ಭಾಷಣವನ್ನು ಶರ್ಮರು 'ಇನ್ನು ಸಾಕು' ಎಂದು ಸಣ್ಣ ಪುಸ್ತಿಕೆಯಾಗಿ ಹೊರತಂದರು. ಅದು ಬಹಿಷ್ಕೃತವಾಯಿತು. ಶರ್ಮರ ಬಂಧನವಾಯಿತು. ತಿ.ತಾ. ಶರ್ಮರೂ ಜೈಲಿಗೆ ಹೋಗಿದ್ದರು. ಪತ್ರಿಕೆ ನಿಂತಿತು. ಕೆಲವು ದಿನದ ನಂತರ ಬಿಡುಗಡೆ ಆಯಿತು ಕೃಷ್ಣಶರ್ಮರಿಗೆ, ಪತ್ರಿಕೆಯ ಪಾಂಚಜನ್ಯ ಮತ್ತೆ ಮೊಳಗಿತು. ೧೯೪೩ರಲ್ಲಿ 'ಲಂಚ ನಿಲ್ಲಲಿ' ಎಂದು ಉಗ್ರವಾದ ಲೇಖನಗಳನ್ನು ಬರೆದರು ಶರ್ಮರು. ಸರ್ಕಾರ ಕೆರಳಿತು, ಮೇಲೆರಗಿತು. ಪತ್ರಿಕೆ ನಿಂತಿತು. ಹಿಡಿತ ಸ್ವಲ್ಪ ಸಡಿಲವಾಯಿತೊ ಇಲ್ಲವೊ ಮತ್ತೆ ದನಿಯೆತ್ತಿತು ಪತ್ರಿಕೆ, ಸತ್ಯಾಗ್ರಹದ ಉಜ್ವಲ ಕತೆಗಳನ್ನು ಸರ್ಕಾರದ ಭೀಕರ ದಮನ ಕಾರ್ಯವನ್ನು ಬೆಂಕಿಯ ಮಾತುಗಳಲ್ಲಿ ಬಣ್ಣಿಸುತ್ತಿತ್ತು. ವೈಸರಾಯ್ ಲಿನ್‌ಲಿತ್‌ಗೋ ದಬ್ಬಾಳಿಕೆಗೆ ಖ್ಯಾತ. ಅವರ ವಿರೋಧವಾಗಿ ಶರ್ಮರು 'ವೈಸರಾಯರಿಗೆ ಬಹಿರಂಗ ಪತ್ರ' ಬರೆದರು. ಲೇಖನದ ಬಿಸಿ ಪ್ರಭುತ್ವಕ್ಕೆ ತಾಳಲಾರದಾಯಿತು. ಪತ್ರಿಕೆ ಮುಟ್ಟುಗೋಲಿಗೆ ಒಳಗಾಯಿತು. ಶರ್ಮರು ಸೆರೆಗೆ ಹೋದರು. ಆಗ ಮರುಗಿದವರು ಎಷ್ಟೋ ಮಂದಿ. "ಶರ್ಮ ದುಡುಕಿದ. ಇದ್ದ ಒಂದು ಒಳ್ಳೆಯ ಕನ್ನಡ ಪತ್ರಿಕೆಯೂ ಹೋಯಿತಲ್ಲ" ಎಂದು ಆಚಾರ್ಯ ಬಿ.ಎಂ.ಶ್ರೀ. ಸಿಟ್ಟಾದರಂತೆ.

"ಏನು ಮಾಡೋಣ, ನಾನು ಚಿಕ್ಕವ, ಬಿಸಿರಕ್ತದವ. ಬಿಎಂಶ್ರೀ ಹಿರಿಯರು, ತಣ್ಣನೆಯ ರಕ್ತದವರು" ಎಂದು ಶರ್ಮರು ಮರುನುಡಿದರು.

ಮುಂದೆ, ತಿ.ತಾ. ಶರ್ಮರೇ ಕೆಲವು ಕಾಲ ಪತ್ರಿಕೆ ನಡೆಸಿದರು. ೧೯೪೬ರಲ್ಲಿ ದಿವಾನ್ ಮಾಧವರಾಯರ ಧೋರಣೆಯನ್ನು ಟೀಕಿಸಲಾಗಿ ಮತ್ತೆ ಪತ್ರಿಕೆಯ ದಿಗ್ಬಂಧನ ಆಯಿತು. ಅಲ್ಲಿಂದಾಚೆಗೆ ಅದು ಇತರರ ಕೈಗೆ ಹೋಗಿ ಕೆಲವು ಕಾಲ ನಡೆದು ನಿಂತುಹೋಯಿತು. ಅದರ ಉಜ್ವಲ ವೈಭವ ಶರ್ಮದ್ವಯರ ಕಾಲಕ್ಕೇ ಮುಗಿದುಹೋಯಿತು. ಅನಂತರ ಉಳಿದದ್ದು ಅದರ ಅಟ್ಟೆ ಮಾತ್ರ.

ಪತ್ರಕರ್ತನ ಕೆಲಸ ಅಲಗಿನ ಮೇಲಿನ ನಡೆ, ಸುತ್ತಲ ಸಾವಿರ ಸೆಳೆತಗಳಿಗೆ ಸಿಲುಕದೆ, ಒತ್ತಡಗಳಿಗೆ ಬಾಗದೆ, ತೀರ ಅಗತ್ಯವೇ ಆಗಿರುವ ಆರ್ಥಿಕ ಲಾಭಕ್ಕೆ ಬಾಯಿ ಬಿಡದೆ, ತನ್ನ ಸ್ವಂತಿಕೆಯನ್ನು ನಿಷ್ಠೆಯನ್ನು ಬಿಡದೆ ನಡೆಸುವ ಛಲ ಇಬ್ಬರೂ ಶರ್ಮರದು. "ಸತ್ಯದನ್ನವನೆ ಉಂಡು ಬದುಕುವ ಆಸೆ." ಇದರ ಫಲ ಎಂದರೆ ಪತ್ರಿಕೆಯಲ್ಲಿ ದೊಡ್ಡ ಹೆಸರು. ಆದರೆ ತಕ್ಕಡಿ ಏಳುವುದೇ ಕಷ್ಟ. ಆದರೇನು; ಶರ್ಮದ್ವಯರು ಕನ್ನಡ ಪತ್ರಿಕಾವೃತ್ತಿಯನ್ನು ಗೌರೀಶಂಕರಕ್ಕೆ ಒಯ್ದರು. ಅಂದಿನ ಅಗತ್ಯವಾಗಿದ್ದ ರಾಷ್ಟ್ರಪ್ರೇಮವನ್ನು ಪತ್ರಿಕೆ ಸಮರ್ಥವಾಗಿ ಬಿಂಬಿಸುವಂತೆ ಮಾಡಿದರು. ರಾಷ್ಟ್ರಕಾರ್ಯಕ್ಕೆ ಸಾವಿರಾರು ಜನರನ್ನು ಪ್ರೇರೇಪಿಸಿದರು. ಉನ್ನತವೂ ಸಾಹಸಮಯವೂ ಸತ್ಯನಿಷ್ಠವೂ ಆದ ಒಂದು ಪರಂಪರೆಯನ್ನು ನಿರ್ಮಿಸಿದರು.

ಕನ್ನಡ ಪತ್ರಿಕೋದ್ಯಮದಲ್ಲಿ ತಾತಾಚಾರ್ಯರು, ಕೃಷ್ಣಶರ್ಮರು ಭೀಷ್ಮದ್ರೋಣರು ಇದ್ದಂತೆ. ಅವರು ಸೃಷ್ಟಿಸಿದ ಅರ್ಜುನ ಏಕಲವ್ಯರು ಎಷ್ಟೋ ಜನ. ಆ ಶಿಷ್ಯರೇ ಅನೇಕರು ಮುಂದೆ ಪತ್ರಿಕಾರಂಗದಲ್ಲಿ ಪ್ರಮುಖರಾದರು. ◆

## ೩೪. ಬಿ. ಎನ್. ಗುಪ್ತರು

✍ ಶ್ರೀ ಮಾ. ನಾ. ಚೌಡಪ್ಪ

ಭಾಗ್ಯವಂತರಲ್ಲಿ ಎರಡು ಬಗೆ: ಆಜನ್ಮ ಭಾಗ್ಯವಂತರು; ಈ ಜನ್ಮದಲ್ಲಿ ಕಷ್ಟಪಟ್ಟು ದುಡಿದು ಭಾಗ್ಯವಂತರಾದವರು. ಒಬ್ಬರು ಅದೃಷ್ಟದ ಕೈಗೊಂಬೆ. ಅವರು ಹುಟ್ಟಿದ ಮನೆತನ ಶ್ರೀಮಂತ. ಜೀವನದಲ್ಲಿ ಅಭಿವೃದ್ಧಿಗೆ ಬರಲು ಎಲ್ಲ ಅವಕಾಶಗಳೂ ಅವರಿಗೆ ಹುಟ್ಟಿದಾಗಲೇ ಸಿದ್ಧ. ಬೆಳೆದು ಓದಿ ದೊಡ್ಡವರಾದ ಮೇಲೆ ಒಂದು ವೃತ್ತಿಯೋ ವ್ಯಾಪಾರವೋ ಸಿದ್ಧ ವಂಶ. ಪಾರಂಪರ್ಯವಾಗಿ ಬಂದದ್ದು. ಹಿಂದಿನಿಂದ ಕೂಡಿಕೊಂಡು ಬಂದ ಐಶ್ವರ್ಯ ಇನ್ನಷ್ಟು ಉಬ್ಬಿ ಮುಂದುವರಿಯುತ್ತದೆ – ಈ ಭಾಗ್ಯಶಾಲಿಗಳ ಸ್ವತ್ತಾಗಿ.

ಇನ್ನೊಂದು ವರ್ಗದವರು ತಾವೇ ತಮ್ಮ ಅದೃಷ್ಟದ ರೂವಾರಿಗಳು. ಸ್ವಂತ ಬುದ್ಧಿಶಕ್ತಿ, ಸತತ ಪ್ರಯತ್ನಗಳಿಂದ ಹಲವಾರು ಉದ್ಯಮಗಳಲ್ಲಿ ತೊಡಗಿ ಯಶಸ್ಸನ್ನೂ ಐಶ್ವರ್ಯವನ್ನೂ ಗಳಿಸಿಕೊಂಡು ಮಾನ್ಯರಾದವರು.

### 'ಬಡವರಲ್ಲ'

ನನ್ನ ವೃತ್ತಿ ಗುರುಗಳಾದ ಬಿ. ಎನ್. ಗುಪ್ತ (ಬೈಸಾನಿ ನರಸಿಂಹೇಶ್ವರ ಗುಪ್ತ.) ಅವರು ಈ ಎರಡನೆ ವರ್ಗಕ್ಕೆ ಸೇರಿದವರು. ಅವರು ಹುಟ್ಟಾ ಬಡವರೇನಲ್ಲ. ಅವರು ಹುಟ್ಟಿದ್ದು ಧನವಂತರ ಮನೆಯಲ್ಲಿಯೇ. ಚಿಕ್ಕವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದರಿಂದ ಅಜ್ಜ ಅಜ್ಜಿಯರ ಪೋಷಣೆಯಲ್ಲಿ ಬೆಳೆದರು. ಅಜ್ಜ ಬೈಸಾನಿ ಮಾಧವ ಚೆಟ್ಟಿಯವರಿಗೆ ಪುತ್ರವಿಯೋಗ ಜೀವನದಲ್ಲಿ ಬೇಸರವನ್ನುಂಟು ಮಾಡಿತು. ಅವರ ದೃಷ್ಟಿ ಆಧ್ಯಾತ್ಮದ ಕಡೆಗೆ ತಿರುಗಿತು. ತಮ್ಮ ಆಸ್ತಿಪಾಸ್ತಿಗಳೆಲ್ಲವನ್ನೂ ತಾವೇ ಸ್ಥಾಪಿಸಿದ "ಬೈಸಾನಿ ಮಾಧವ ಚೆಟ್ಟಿ ಚಾರಿಟೀಸ್" ಎಂಬ ಧರ್ಮನ್ಯಾಸಕ್ಕೆ ಒಪ್ಪಿಸಿ ಬಿಟ್ಟರು. ಶ್ರೀವೈಷ್ಣವ ಧರ್ಮದ ಪ್ರಚಾರ, ಶ್ರೀವೈಷ್ಣವ ಕ್ಷೇತ್ರಗಳಲ್ಲಿ ದೈವಕೈಂಕರ್ಯ ಇವು ಈ ನ್ಯಾಸದ ಪ್ರಧಾನ ಕರ್ತವ್ಯಗಳು. ಈ ನ್ಯಾಸವನ್ನು ಸ್ಥಾಪಿಸಿದ ಮೇಲೆ ಮಾಧವ ಚೆಟ್ಟಿಯವರು ತಮಗಾಗಿ, ತಮ್ಮ ಕುಟುಂಬಕ್ಕಾಗಿ ಉಳಿಸಿಕೊಂಡದ್ದು ಅತ್ಯಲ್ಪ; ನ್ಯಾಸಕ್ಕಾಗಿ ಬಿಟ್ಟುಕೊಟ್ಟಿದ್ದ ತಮ್ಮ ದೊಡ್ಡ ಮಹಡಿ ಮನೆಯ ಒಂದು ಸಣ್ಣ ಭಾಗದಲ್ಲಿ ವಾಸಮಾಡಲು ಅವಕಾಶ; ನಿಧಿಯ ಆದಾಯದಿಂದ ತಮ್ಮ ವಂಶಸ್ಥರಿಗೆ ತಿಂಗಳಿಗೆ ೨೫೦ ರೂಪಾಯಿಯ ಮಾಸಾಶನ.

ಬೆಳೆದು ದೊಡ್ಡವರಾದ ಮೇಲೆ ಗುಪ್ತರಿಗೆ ಅನ್ನಿಸಿತಂತೆ – ತಾತ ತಮಗೆಷ್ಟು ಅನ್ಯಾಯ ಮಾಡಿದರು. ಅವರ ಅಪಾರ ಆಸ್ತಿಯ ಒಂದು ಅಲ್ಪ ಭಾಗವನ್ನೂ ತಮಗೆ ಬಿಟ್ಟುಕೊಡದೆ ಹೋದರಲ್ಲ ಅಂತ. ಸರಿ ಮೊಮ್ಮಗನಾದ ತನಗೆ ತಾತ ಅನ್ಯಾಯ

ಮಾಡಿದ್ದಾರೆ. ಅವರ ಆಸ್ತಿಯಲ್ಲಿ ತನಗೆ ಸರಿಯಾದ ಪಾಲು ದೊರೆಯಬೇಕು - ಎಂದು ದಾವೆ ಹೂಡಬೇಕೆಂದು ಯೋಚಿಸಿದರು. ಈ ವಿಚಾರ ಅಜ್ಜಿಗೆ ತಿಳಿಸಿದಾಗ ಅವರು ಬಿಸಿ ರಕ್ತದ ಗುಪ್ತರಿಗೆ "ನೋಡು ಮಗು - ನಿಮ್ಮ ಅಜ್ಜ ಕಷ್ಟಪಟ್ಟು ದುಡಿದರು. ಅದು ಅವರ ಆಸ್ತಿ. ಅದನ್ನು ಅವರು ತಮಗೆ ಸರಿತೋರಿದಂತೆ ವಿನಿಯೋಗ ಮಾಡಿದರು. ನಮ್ಮನ್ನೇನೂ ಬೀದಿಯ ಪಾಲು ಮಾಡಿಹೋಗಿಲ್ಲ. ಬೇರೆಯವರು ಸಂಪಾದಿಸಿದ್ದಕ್ಕೇ - ಅದು ನಿಮ್ಮ ಅಜ್ಜ ಸಂಪಾದಿಸಿದ್ದಕ್ಕೆ ಇರಲಿ - ಅದಕ್ಕೆ ಆಸೆ ಪಡಬಾರದು. ನೀನೂ ನಿಮ್ಮ ಅಜ್ಜನ ಹಾಗೆ ಸಂಪಾದನೆ ಮಾಡು; ನಿನಗೆ ಸರಿ ಎಂದು ತೋರಿದ ಹಾಗೆ ಖರ್ಚು ಮಾಡು. ಅದು ಮರ್ಯಾದಸ್ಥರ ಮಾರ್ಗ" ಎಂದರು.

## ಸವಾಲು

ತರುಣ ಗುಪ್ತರು ಅಜ್ಜಿಗೆ ಸವಾಲು ಹಾಕಿದರು. "ಆಯ್ತು, ನೀನು ಹೇಳಿದ ಹಾಗೆ ಮಾಡತೀನಿ. ಆದರೆ, ನಾನು ಯಾವುದಾದರೂ ವ್ಯಾಪಾರ ಆರಂಭಿಸುವುದಕ್ಕೆ ನಮ್ಮ ಅಜ್ಜ ಏನು ಬಂಡವಾಳ ಕೊಟ್ಟು ಹೋಗಿದ್ದಾನೆ?".

ಅಡೆತಡೆಯಿಲ್ಲದೆ. ಅಜ್ಜಿ ಉತ್ತರ ಕೊಟ್ಟರು. "ನಿನಗೆ ಬಂಡವಾಳ ತಾನೆ ಬೇಕು. ತಗೊ ಈ ನನ್ನ ಒಡವೆಗಳನ್ನೆಲ್ಲ - ನಾನು ಮುದುಕಿ. ವಿಧವೆ. ನನಗೇಕೆ ಬೇಕು ಇವೆಲ್ಲಾ. ಇವನ್ನು ಮಾರಿ ಬಂಡವಾಳ ಮಾಡಿಕೋ. ಬುದ್ಧಿವಂತಿಕೆಯಿಂದ ವ್ಯಾಪಾರ ಮಾಡು. ಮುಂದಕ್ಕೆ ಬಾ. ನೀನು ಗಳಿಸಿದ್ದನ್ನು ಸದ್ವಿನಿಯೋಗ ಮಾಡು".

ಈ ಪ್ರಸಂಗವನ್ನು ಜ್ಞಾಪಿಸಿಕೊಂಡಾಗಲೆಲ್ಲ ಗುಪ್ತರ ಕಣ್ಣಿನಲ್ಲಿ ನೀರಾಡುತ್ತಿತ್ತು. ಅವರ ಅಜ್ಜಿಯ ತ್ಯಾಗ, ಬುದ್ಧಿವಾದಗಳು ಅವರ ಮನಸ್ಸಿನಲ್ಲಿ ಎದ್ದು ನಿಲ್ಲುತ್ತಿದ್ದವು. ನಮ್ಮ ಅಜ್ಜಿಯ ಮಾತುಗಳು ನನ್ನ ಜೀವನದ ದಾರಿ ದೀಪವಾಗಿದೆ ಎನ್ನುತ್ತಿದ್ದರು.

ಗುಪ್ತರು ತಮ್ಮ ಜೀವಿತ ಕಾಲದಲ್ಲಿ ಅನೇಕ ವ್ಯಾಪಾರ, ಉದ್ಯಮಗಳನ್ನು ನಡೆಸಿದರು. ಜೇನಿನಂತೆ ದುಡಿದು ಹಣ ಕೂಡಿಸಿದರು. ಮೋಡದಂತೆ ಅದನ್ನು ತುಂಬಿಟ್ಟುಕೊಂಡರು. ಸಕಾಲದಲ್ಲಿ ಅದನ್ನು ಮಳೆಯಂತೆ ಸುರಿಸಿದರು. ಹಲವಾರು ಜನಹಿತ ಕಾರ್ಯಗಳಿಗೆ ಅಜ್ಜಿಯ ಆದೇಶವನ್ನೂ ಅಜ್ಜನ ಮೇಲ್ಪಂಕ್ತಿಯನ್ನೂ ಅನುಸರಿಸಿ ನಡೆದು ಕೃತಾರ್ಥರಾದರು.

+++

ಗುಪ್ತರು ತಮ್ಮ ಜೀವಿತಾಕಾಲದಲ್ಲಿ ಶ್ರೀಮಂತರೆನಿಸಿಕೊಂಡರು. ಹಾಗೆಯೇ ದಕ್ಷ ವ್ಯಾಪಾರೋದ್ಯಮಿಯೆಂಬ ಕೀರ್ತಿಯನ್ನೂ ಗಳಿಸಿಕೊಂಡರು. ಈ ಹೆಚ್ಚಳ ಸರಳ ಹೂಮಾಲೆಯಂತೆ ಅವರ ಕೊರಳಿಗೆ ಬೀಳಲಿಲ್ಲ. ಸೋಲು ಗೆಲುವುಗಳ ಚದುರಂಗದ ಆಟದಲ್ಲಿ ಕೆಲವಾರು ಬಾರಿ ಬಿದ್ದು ಎದ್ದ ಮೇಲೆ ಅವರು ಗಳಿಸಿದ ಮಹಾವಿಜಯಗಳ ಪ್ರಚಂಡ ಪ್ರಕಾಶ ನಮ್ಮ ಕಣ್ಣನ್ನು ಕುಕ್ಕಿತಾಗಿ ಅವರ ಅಯಶಸ್ವಿ ಪ್ರಯತ್ನಗಳು ಆ ಸಂಬಂಧದಲ್ಲಿ ಅವರ ಮನೋವೇದನೆ ಆರ್ಥಿಕ ಬಿಕ್ಕಟ್ಟುಗಳು ನಮಗೆ ಥಟ್ಟನೆ ಗೋಚರವಾಗುತ್ತಿಲ್ಲ - ಅಷ್ಟೇ. ಆದರೆ ಅವರು ಈ ಕೋಟಲೆಗಳನ್ನೆಲ್ಲಾ ದಾಟಿ ಬಂದು ಕೃತಕೃತ್ಯತೆಯ ಮಟ್ಟವನ್ನು ಮುಟ್ಟಿದರೆಂಬುದು ಗಮನಾರ್ಹ.

## ಕಲಿತ ವೃತ್ತಿ

ಗುಪ್ತರು ಕಲಿತ ವೃತ್ತಿ ಪತ್ರಿಕೋದ್ಯಮ; ಅನಿಬೆಸೆಂಟರವರ ಆಶ್ರಯದಲ್ಲಿ. ಆ ಪರಿಸರದಲ್ಲಿದ್ದಾಗ - ಪುಸ್ತಕ ಪ್ರಕಾಶನ ಅವರ ಮನಸ್ಸನ್ನಾಕರ್ಷಿಸಿತು.

ನನಗೆ ತಿಳಿದ ಮಟ್ಟಿಗೆ ಅವರು ಪ್ರಕಾಶಿಸಿದ ಮೊದಲ ಪತ್ರಿಕೆ - ಇಂಗ್ಲಿಷ್‌ನಲ್ಲಿ; ಶಿಕ್ಷಣಕ್ಕೆ ಸಂಬಂಧಿಸಿದ್ದು. ಸುಪ್ರಸಿದ್ಧ ಶಿಕ್ಷಣ ತಜ್ಞ ಜಾರ್ಜ್ ಎಸ್. ಅರುಂಡೇಲ್ (ಅನಿ ಬೆಸೆಂಟರ ಶಿಷ್ಯ) ಇದರ ಸಂಪಾದಕರು. ಇದನ್ನು ಕೆಲಕಾಲ ಪ್ರಕಟಿಸಿ ಕೈಸುಟ್ಟುಕೊಂಡು ಅದನ್ನು ಕೈಬಿಟ್ಟರು. ಆದರೆ ಪುಸ್ತಕ ಪ್ರಕಾಶನ ಮಾರಾಟದ ಉದ್ಯಮದಲ್ಲಿ ಯಶಸ್ವಿಯಾದರು. ಭಾರತದ ವಿವಿಧ ಭಾಗಗಳಲ್ಲಿದ್ದ ವಿದ್ವಾಂಸರು, ವಕೀಲರು ಮುಂತಾದವರು ಇವರು ಪುಸ್ತಕದ ಅಂಗಡಿಯ ಕಾಯಂ ಗಿರಾಕಿಗಳಾಗಿದ್ದರು. ಸಿ.ಪಿ. ರಾಮಸ್ವಾಮಿ ಅಯ್ಯರ್ ಅಂಥವರಲ್ಲಿ ಒಬ್ಬರು.

ಟಾಗೋರ್ ಅಂಡ್ ಕಂಪೆನಿ ಎಂಬ ಹೆಸರಿನಲ್ಲಿ ಅವರು ನಡೆಸುತ್ತಿದ್ದ ಪ್ರಕಾಶನಾಲಯವು, ಬಿಪಿನ ಚಂದ್ರಪಾಲ್, ಲಾಲಾ ಹರದಯಾಲ್‌ರಂಥ ಕ್ರಾಂತಿಕಾರರನ್ನೊಳಗೊಂಡಂತೆ ಅನೇಕ ಮಂದಿ ಪ್ರಖ್ಯಾತರ ಗ್ರಂಥಗಳನ್ನು ಪ್ರಕಟಿಸಿ ಭಾರತದ ಒಳಗೂ ಹೊರಗೂ ಹೆಸರು ಗಳಿಸಿತು. ಆದರೆ ಕಾರಣಾಂತರಗಳಿಂದ ಈ ಸಂಸ್ಥೆ ನಷ್ಟಕ್ಕೆ ಒಳಗಾಯಿತು. ಪುಸ್ತಕದ ಅಂಗಡಿಯನ್ನು ಮುಚ್ಚಬೇಕಾಯಿತು. ಪರಿಸ್ಥಿತಿ ಆರ್ಥಿಕವಾಗಿ ತೀರಾ ಬಿಕ್ಕಟ್ಟಿಗಿಟ್ಟುಕೊಂಡಿತು. ಅದೇನೇ ಇರಲಿ ಈ ದಾರುಣ ಪರಿಸ್ಥಿತಿಯ ಪರಿಣಾಮವಾಗಿ ಕನ್ನಡ ನಾಡಿಗೆ ದೊಡ್ಡ ಲಾಭವಾಯಿತು. ಗುಪ್ತರು ತಮ್ಮ ಕಾರ್ಯಕ್ಷೇತ್ರವಾಗಿದ್ದ ಮದರಾಸನ್ನು ಬಿಟ್ಟು

ಬೆಂಗಳೂರಿಗೆ ಬಂದರು. ಮದರಾಸಿನ ಒಂದು ಪತ್ರಿಕೆಯ ಪ್ರತಿನಿಧಿಯಾಗಿ ಹಾಗೆಯೇ ಮದರಾಸಿನ ಪುಸ್ತಕ ಪ್ರಕಾಶಕರೊಬ್ಬರ ಪ್ರತಿನಿಧಿತ್ವವನ್ನೂ ವಹಿಸಿಕೊಂಡರು. ನಿಲ್ಲಲು ನೆಲೆಯಾಯಿತು. ಆದರೆ ಇದಿಷ್ಟರಿಂದ ತೃಪ್ತವಾಗುವ ಚೈತನ್ಯವಲ್ಲ ಗುಪ್ತರು. ಆ ಎರಡು ಕೆಲಸಗಳಲ್ಲಿ ಇದ್ದುಕೊಂಡೇ ಪುಸ್ತಕ ಪ್ರಕಾಶನವನ್ನು ಮತ್ತೆ ಅರಸಲು ನಿರ್ಧರಿಸಿದರು. ಹೊಸದೊಂದು ಮಾರ್ಗವನ್ನು ತುಳಿಯಲು ಯೋಚಿಸಿದ ದ.ಕೃ. ಭಾರದ್ವಾಜರಿಂದ 'ದಾಂಪತ್ಯ ವಿಜ್ಞಾನ'ವನ್ನು ಬರೆಸಿ ಪ್ರಕಟಿಸಿದರು. ಈ ಪ್ರಕಟಣೆ ತುಂಬ ಯಶಸ್ವಿಯಾಗಿ ಹಲವಾರು ಮುದ್ರಣಗಳನ್ನು ಕಂಡಿತು. ಪರಿಸ್ಥಿತಿ ಉತ್ತಮಗೊಂಡಿತು. ಸಣ್ಣಕತೆಗಳ ಮಾಸಪತ್ರಿಕೆ 'ಕಥಾಂಜಲಿ'ಯ ಪ್ರಕಾಶಕರಾದರು.

ಏತನ್ಮಧ್ಯೆ ಪತ್ರಿಕಾ ಪ್ರತಿನಿಧಿಯಾಗಿ ಮೈಸೂರು ಸಂಸ್ಥಾನದ ರಾಜಕೀಯ ಮುಖಂಡರ ಪರಿಚಯ ಸ್ನೇಹಗಳನ್ನು ಬೆಳೆಸಿಕೊಂಡರು. ಮೈಸೂರಿನಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಬೇಕೆಂದು ಶ್ರಮಿಸುತ್ತಿದ್ದ ಪ್ರಜಾಪಕ್ಷದ ಕಾರ್ಯದರ್ಶಿಯಾದರು.

ರಾಜಕೀಯ ಪಕ್ಷವೆಂದ ಮೇಲೆ ಅದಕ್ಕೊಂದು ಮುಖಪತ್ರವಿರಬೇಕು. ಇದರಿಂದ ಪಕ್ಷದ ಪ್ರಚಾರಕ್ಕೆ ಸಹಾಯವಾಗುತ್ತದೆ - ಎಂದು ಗುಪ್ತರು ಪ್ರಜಾಪಕ್ಷದ ಮುಖಂಡರೊಡನೆ ವಾದಿಸಿದರು - ಇದು ೪೫ ವರ್ಷಗಳ ಹಿಂದಿನ ಮಾತು. ಆಗ ರಾಜಕೀಯ ಜೀವನ ಈಗಿನಂತೆ ಬೆಳೆದಿರಲಿಲ್ಲ. ಇಲ್ಲಿ ಗುಪ್ತರ ಸಲಹೆಗೆ ಒಪ್ಪಿಗೆ ಕೊಟ್ಟ ಶಾಸ್ತ್ರವಾಯಿತಾದರೂ, ಪತ್ರಿಕೆಯ ಸ್ಥಾಪನೆಗೆ ಅವಶ್ಯಕವಾದ ಧನಬಲ ಮುಂದೆ ಬರಲಿಲ್ಲ. ಜೊತೆಗೆ ಒಂದು ಅಡಚಣೆಯೂ ಬಂತು ವಿರೋಧಪಕ್ಷ(ಪ್ರಜಾಪಕ್ಷ)ದವರು ಪತ್ರಿಕೆ ಮಾಡುವ ಪ್ರಯತ್ನ ಮಾಡುವರೆಂಬ ಸುದ್ದಿ ತಿಳಿದೊಡನೆಯೆ ಅಂದಿನ ಸರಕಾರ ತನ್ನ ಪ್ರತಿಕ್ರಿಯೆಯನ್ನು ಅವರಿವರ ಕಿವಿಯ ಮೇಲೆ ಹಾಕಿತು. ಅಂಥ ಪ್ರಯತ್ನವೇನಾದರೂ ಮುಂದುವರಿದರೆ, ಅಂಥ ಪತ್ರಿಕೆಯನ್ನು ಪ್ರಕಟಿಸಲು ಸರಕಾರ ಅನುಮತಿ ಕೊಡುವುದಿಲ್ಲವೆಂದು! (ಆಗ ಜಾರಿಯಲ್ಲಿದ್ದ ಪತ್ರಿಕಾ ಕಾನೂನಿನಂತೆ, ಸರಕಾರದ ಅನುಮತಿಯಿಲ್ಲದೆ ಮೈಸೂರು ಸಂಸ್ಥಾನದಲ್ಲಿ ಯಾರೂ ಪತ್ರಿಕೆಗಳನ್ನು ಪ್ರಕಟಿಸುವಂತಿರಲಿಲ್ಲ) ಸರಿ - ಮತ್ತೆ ಮೀನ- ಮೇಷ ಶುರುವಾಯಿತು!

## ನಿರ್ಧಾರ

ಕೊನೆಗೆ ಗುಪ್ತರು ಒಂದು ನಿರ್ಧಾರಕ್ಕೆ ಬಂದರು. ತಮ್ಮ ರಾಜಕೀಯ ಮಿತ್ರರಿಗೆ ಹೇಳಿದರು. "ನಾನು ಮದರಾಸಿನಿಂದ ಪತ್ರಿಕೆ ನಡೆಸುತ್ತೇನೆ. ನೀವು ನಿಮ್ಮ ಕೈಲಾದಷ್ಟು ಬೆಂಬಲ ಕೊಡಿ ಸಾಕು" ಅಂತ. ಇದಕ್ಕೆ ಅವರು 'ಆಗಲಿ' ಎಂದರು. ಅವರು ಹಾಗೆಂದಿದ್ದೇ ತಡ, ಗುಪ್ತರು ಕಾರ್ಯೋನ್ಮುಖರಾದರು. ತಮ್ಮ ಹಳೆಯ ಪರಿಚಯಸ್ಥರಾದ ದ.ಕೃ. ಭಾರದ್ವಾಜರ ಹತ್ತಿರಕ್ಕೆ ಹೋದರು. ಒಂದು ಕನ್ನಡ ವಾರಪತ್ರಿಕೆಯನ್ನು ನಡೆಸಬೇಕೆಂದಿರುವ ತಮ್ಮ ಉದ್ದೇಶವನ್ನು ತಿಳಿಸಿ, ಪತ್ರಿಕೆಗೆ ಒಂದು ಒಳ್ಳೆಯ ಹೆಸರು ಸೂಚಿಸಬೇಕೆಂದರು. "ಪ್ರಜಾಮತ" ಭಾರದ್ವಾಜರು ಕೊಟ್ಟ ಹೆಸರು. ಗುಪ್ತರ ಅಪೇಕ್ಷೆಯಂತೆ ಪ್ರಜಾಮತದ ಪ್ರಥಮ ಅಗ್ರಲೇಖನವನ್ನು ಬರೆದು ಕೊಟ್ಟವರೂ ಅವರೇ. ಈ ಅಗ್ರ ಲೇಖನವನ್ನು ಪತ್ರಿಕಾ ಪ್ರಕಟಣೆಯನ್ನು ಕುರಿತು ಪರಿಪತ್ರವನ್ನು ಮುದ್ರಿಸಿ ಅವನ್ನು ಪ್ರಮುಖರಿಗೆ ಕಳಿಸಿ ಅವರ ಸಂದೇಶವನ್ನು ಕಳಿಸಬೇಕೆಂದು ಕೋರಲಾಯಿತು.

ಇದು ನಡೆಯುತ್ತಿದ್ದಾಗ ಗುಪ್ತರಿಂದ ನನಗೊಂದು ಪತ್ರ ಬಂತು. ಆಗಿನ್ನೂ ವಿದ್ಯಾರ್ಥಿಯಾಗಿದ್ದ ನಾನು ಬೇಸಿಗೆ ರಜಕ್ಕಾಗಿ ನಮ್ಮ ಹಳ್ಳಿಗೆ ಹೋಗಿದ್ದೆ. " ಈ ಪತ್ರ ಕಂಡೊಡನೆಯೇ ಬಾ. ಮುಖ್ಯವಾದ ವಿಚಾರ ಕುರಿತು ನಿನ್ನೊಡನೆ ಮಾತನಾಡುವುದಿದೆ" - ಇದು ಆ ಪತ್ರದ ಸಾರಾಂಶ.

ಆ ಹೊತ್ತಿಗೆ ನನ್ನ ಮತ್ತು ಗುಪ್ತರ ಪರಿಚಯ ಚೆನ್ನಾಗಿ ಬೆಳೆದಿತ್ತು. ಅವರು ನಡೆಸುತ್ತಿದ್ದ 'ಕಥಾಂಜಲಿ'ಯ ಸಂಪಾದನ ಕಾರ್ಯವನ್ನು ನಾನು ನೋಡಿಕೊಳ್ಳುತ್ತಿದ್ದೆ.

## 'ಪ್ರಜಾಮತ'

ನಾನು ಬೆಂಗಳೂರಿಗೆ ಬಂದೊಡನೆಯೇ ಅವರು ಪ್ರಜಾಮತದ ಪ್ರಕಟಣೆಯ ನಿರ್ಧಾರವನ್ನು ತಿಳಿಸಿ 'ನನ್ನ ಜೊತೆಯಲ್ಲಿ ಮದರಾಸಿಗೆ ಬಂದು ಬಿಡು. ನಮ್ಮಿಬ್ಬರ ಅದೃಷ್ಟ ಪರೀಕ್ಷೆ ಮಾಡಿಬಿಡೋಣ' ಅಂದರು. ಆಗ ಗುಪ್ತರಿಗೆ ೩೫-೩೬ ವರ್ಷ ವಯಸ್ಸು.

ಮದರಾಸಿನಿಂದ 'ಪ್ರಜಾಮತ'ದ ಪ್ರಕಟಣೆ ಆರಂಭವಾಯಿತು. ಅಂದಿನ ಮೈಸೂರು ಸಂಸ್ಥಾನದ ಹಳೆಯ ಪತ್ರಿಕೋದ್ಯಮಿಗಳಿಗೆ ಅದೊಂದು ತಮಾಷೆಯಾಗಿ ಕಂಡಿತು. 'ಮೈಸೂರಿನ ಪ್ರಜಾಮತ (ಜನಾಭಿಪ್ರಾಯ) ಮದರಾಸಿನಿಂದ ಬರುವದು ವಿಚಿತ್ರ' ಎಂದೊಬ್ಬರು ಹಾಸ್ಯ ಮಾಡಿದ್ದೂ ಉಂಟು; 'ಇದೇನೂ ಹೆಚ್ಚು ಕಾಲ ಬದುಕುವುದಿಲ್ಲ' ಎಂದು ಪ್ರಜಾಮತವನ್ನು ಉಪೇಕ್ಷಿಸಿದವರು ಕೆಲವರು.

ಈ ಪ್ರತಿಕ್ರಿಯೆ ಏನೇ ಇರಲಿ ಪ್ರಜಾಮತವನ್ನು ಯಶಸ್ವಿಯಾದ ಪತ್ರಿಕೆಯನ್ನಾಗಿ ಮಾಡಿಯೇ ತೀರಬೇಕೆಂದು ಗುಪ್ತರು ಗಟ್ಟಿ ಮನಸ್ಸು ಮಾಡಿದ್ದರು. ಅದಕ್ಕಾಗಿ ಅವರು ವಹಿಸಿದ ನಿರಂತರ ಶ್ರಮ ಹಾಕಿದ ಯೋಜನೆಗಳು ಮೈಸೂರು ಸರಕಾರದಿಂದ ಅವರ ಪ್ರಕಟಣೆಗೆ ಬಂದ ಅಡ್ಡಿ ಆತಂಕಗಳನ್ನು ದಿಟ್ಟತನದಿಂದ ಇದಿರಿಸಿ ಅದನ್ನು ನಿವಾರಿಸಿದ ಬಗೆ, ಇವುಗಳ ವರ್ಣನೆ ಬೋಧಪ್ರದ ಹಾಗೂ ರಂಜನೀಯ. ಆ ಮಾತು ಇರಲಿ.

ಗುಪ್ತರ ಸಹವಾಸದಲ್ಲಿ ನಾನು ಕಳೆದ ಹಲವಾರು ವರ್ಷಗಳ ಅನುಭವದಿಂದ ಅವರ ಪ್ರಚಂಡ ವ್ಯಕ್ತಿತ್ವದ ದರ್ಶನ ನನಗೆ ಆಯಿತು. ಆ ಬಗೆಗೆ ಕೆಲವು ಮಾತುಗಳನ್ನು ಹೇಳುವುದು ಈ ಸಂದರ್ಭದಲ್ಲಿ ಉಚಿತ.

## ಮಾರ್ಗದರ್ಶನ

ಪ್ರಜಾಮತವನ್ನು ಆರಂಭಿಸುವ ಹೊತ್ತಿಗೆ, ಯಾವುದಾದರೊಂದು ಉದ್ಯಮವನ್ನು ವ್ಯವಸ್ಥಿತವಾಗಿ ನಡೆಸುವುದು ಹೇಗೆ, ಚೆನ್ನಾಗಿ ನಡೆಯುತ್ತಿದ್ದ ಉದ್ಯಮ ಭಂಗವಾಗಲು ಕಾರಣಗಳೇನು, ಅವನ್ನು ನಿವಾರಿಸುವುದು ಹೇಗೆ ಎಂಬುದರ ಅನುಭವ ಗುಪ್ತರಿಗೆ ಚೆನ್ನಾಗಿ ಆಗಿತ್ತು. ಆದ್ದರಿಂದ ಅವರು ಪ್ರಜಾಮತದ ವ್ಯವಹಾರವನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರು. ಅಲ್ಲದೆ, ತಮ್ಮ ಜೊತೆಯಲ್ಲಿ ಕೆಲಸ ಮಾಡುತ್ತಿದ್ದವರಿಗೆ ಅವರ ಕೆಲಸದ ಬಗೆಗೆ ತಕ್ಕ ಶಿಕ್ಷಣವನ್ನೂ ಕೊಡುತ್ತಿದ್ದರು. ಮಾರ್ಗದರ್ಶನ ಮಾಡುತ್ತಿದ್ದರು. ಇದಕ್ಕೆ ನಿದರ್ಶನವಾಗಿ ಅನೇಕ ಪ್ರಸಂಗಗಳನ್ನು ಎತ್ತಿ ತೋರಿಸಬಹುದು.

ಪ್ರಜಾಮತ ಆರಂಭವಾಗಿ ಕೆಲವು ತಿಂಗಳುಗಳಾಗಿತ್ತು. ಸಂಪಾದಕೀಯದಲ್ಲಿ ನನ್ನ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಎನ್. ಶ್ರೀನಿವಾಸರಾಯರು ಅನಾರೋಗ್ಯ ನಿಮಿತ್ತ ಬೆಂಗಳೂರಿಗೆ ಹೋಗಿದ್ದರು. ಪತ್ರಿಕೆಯ ಮಾರಾಟದ ವ್ಯವಸ್ಥೆಗೆ ಮನಸ್ಸು ಕೊಟ್ಟಿದ್ದ ಗುಪ್ತರು ಸೋಮವಾರ ಅಥವಾ ಮಂಗಳವಾರ ರಾತ್ರಿ ಮದರಾಸು ಬಿಟ್ಟು ಪ್ರವಾಸಕ್ಕೆ ಹೊರಟರೆ ಹಿಂದಕ್ಕೆ ಬರುತ್ತಿದ್ದುದು ಸೋಮವಾರ ಬೆಳಿಗ್ಗೆಯೇ.

ಹೀಗಾಗಿ, ಪತ್ರಿಕೆಗೆ ಸಂಬಂಧಿಸಿದ ಬರವಣಿಗೆ, ಪತ್ರಿಕೆಯ ಮುದ್ರಣ, ಅದನ್ನು ಪ್ಯಾಕ್ ಮಾಡಿ, ರೈಲಿಗೆ ಸಾಗ ಹಾಕುವುದರವರೆಗೆ ಎಲ್ಲ ಕೆಲಸಗಳಿಗೂ ನಾನು ಗಮನ ಕೊಡಬೇಕಾಗುತ್ತಿತ್ತು – ಜೊತೆಗೆ ಖರ್ಚು ವೆಚ್ಚದ ಲೆಕ್ಕ ಬರೆಯುವ ಕೆಲಸ ಬೇರೆ.

ಗುಪ್ತರು ಒಂದು ಭಾನುವಾರ ಬೆಳಕು ಹರಿಯುವ ಹೊತ್ತಿಗೆ ಹಿಂದಿರುಗಿದರು. ಆ ಕಾಲದಲ್ಲಿ ನಾನು ಪ್ರಜಾಮತ ಕಚೇರಿಯಲ್ಲೇ ವಾಸ ಮಾಡುತ್ತಿದ್ದೆ. ಗುಪ್ತರೂ ಆ ಕಟ್ಟಡದಲ್ಲೇ ವಾಸ ಮಾಡುತ್ತಿದ್ದರು.

## ಅರ್ಥಾಣೆಗಾಗಿ....

ಮನೆಗೆ ಬಂದವರೇ ಪ್ರಜಾಮತದ ಆಫೀಸ್ ರೂಮಿಗೆ ಬಂದರು. ನಾನೂ ಆ ಹೊತ್ತಿಗೆ ಎದ್ದು ಕೂತಿದ್ದೆ. 'ಎಲ್ಲಪ್ಪಾ ಲೆಕ್ಕದ ಪುಸ್ತಕ' ಎಂದರು. ಅದನ್ನು ಅವರಿಗೆ ಕೊಟ್ಟೆ. ಲೆಕ್ಕ ನೋಡಿದರು. ಆಮೇಲೆ ನನ್ನ ಕಡೆ ತಿರುಗಿ:

"ಏನಪ್ಪ ಹಿಂಗೆ ಮಾಡಿದೆ?" ಅಂದರು.

ಹಿಂದಿನ ದಿವಸದ ಹೆಚ್ಚಿನ ದುಡಿತದ ಫಲವಾಗಿ ಮೈ ಕೈ ನೋವು ನನ್ನನ್ನು ಇನ್ನೂ ಬಿಟ್ಟಿರಲಿಲ್ಲ. ಮೈಮುರಿದು ಆಕಳಿಸುತ್ತಾ ನಿರಾಸಕ್ತಿಯಿಂದ

"ಏನಾಗಿ ಹೋಗಿದೆ ಈಗ?" ಎಂದೆ.

ಗುಪ್ತರು ಗಂಭೀರವಾಗಿ ಮಾತು ಮುಂದುವರಿಸಿದರು.

"ಇಲ್ಲಿ ನೋಡು – ಪಾರ್ಸಲ್ ಕಟ್ಟೋದಕ್ಕೆ ಹುರಿ ತರಿಸಿದ್ದೀಯಲ್ಲ – ಮೂರುವರೆ ಆಣೆ ಯಾಕೆ ಕೊಟ್ಟೆ ಅದಕ್ಕೆ"

ನನಗಿನ್ನೂ ನಿದ್ರೆ ಮಂಪರಿತ್ತೋ ಏನೋ – ಕ್ಯಾಷ್ ಬಾಕ್ಸ್‌ನಲ್ಲಿ ಹುಡುಕಿ ಮೂರೂವರಾಣೆ ಬಿಲ್ ತೆಗೆದು ಅವರ ಮುಂದಿಟ್ಟೆ.

ಗುಪ್ತರು ಇನ್ನಷ್ಟು ಗಂಭೀರವಾಗಿ

"ಸರಿ, ಅರ್ಥವಾಯಿತು. ಬಿಲ್ಲಿನಲ್ಲಿ ಇದ್ದಿದ್ದು ಲೆಕ್ಕದಲ್ಲಿ ಬರೆದಿದೆ"

"ಇನ್ನೇನು ಮಾಡಬೇಕಾಗಿತ್ತು"

ಗುಪ್ತರ ಧ್ವನಿ ಗಡುಸಾಯಿತು.

"ಇನ್ನೇನು ಮಾಡಬೇಕಿತ್ತು ಹೇಳಲೋ – ಪ್ರತಿ ವಾರ ಇಷ್ಟೇ ದಾರ ತರಿಸ್ತೀವಲ್ಲ ಅದಕ್ಕೆಷ್ಟು ಕೊಡುತ್ತಿದ್ದೆವು?"

ಎಚ್ಚರಗೊಂಡು, ನೆನಪು ಮಾಡಿಕೊಂಡು

"ಮೂರಾಣೆ" ಅಂದೆ.

"ಈ ವಾರ ಯಾಕೆ ಮೂರೂವರಾಣೆ"

"ಬಿಲ್ ಇದೆಯಲ್ಲ"

"ಬಿಲ್ ಇರುತ್ತೆ – ಅವಲ್ಲ. ಬಿಲ್‌ಗೆ ದುಡ್ಡು ಕೊಡುವಾಗ ಅದು ಸರಿಯಾಗಿದೆಯೆ, ಸಮರ್ಪಕವಾಗಿದೆಯೆ ನೋಡಿ ಆಮೇಲೆ ದುಡ್ಡು ಕೊಡಬೇಕು. ನೀನು ಕೇಳಿದೆಯ ದಾರಾ ತಂದ ಹುಡುಗನ್ನ – ಅರ್ಧಾಣೆ ಯಾಕೆ ಹೆಚ್ಚಾಯಿತು ಅಂತ."

"ಕೇಳಲಿಲ್ಲ. ಅರ್ಧ ಆಣೆ ತಾನೆ ಈಗ ನಷ್ಟವಾಗಿರೋದು. ನಾನು ನನ್ನ ಕೈಯಿಂದ ಕೊಡತೀನಿ. ಆಯಿತಲ್ಲ; ನನ್ನ ಮಾತಿನಲ್ಲಿ ಕಹಿಯಿತ್ತು. ಗುಪ್ತರು ಗಡಸಾಗಿ – ಅದನ್ನು ನಿನ್ನ ಕೈಯಿಂದ ಕೊಡಕೂಡದು. ತಪ್ಪು ಎಲ್ಲಿದೆ ವಿಚಾರಿಸಬೇಕು' ಎಂದು ಲೆಕ್ಕದ ಪುಸ್ತಕ ಮೇಜಿನ ಮೇಲಿಟ್ಟು 'ಸ್ನಾನ ಮಾಡಿಕೊಂಡು ಬರತೀನಿ' ಅಂತ ಹೊರಟು ಹೋದರು. ನಾನೂ ಸ್ನಾನ ಮುಗಿಸಿಕೊಂಡು ಹಿಂದಕ್ಕೆ ಬಂದು ಕೂತೆ. ಗುಪ್ತರೂ ಬಂದರು. ಬಂದವರೆ – 'ನಡಿಯಪ್ಪ ಹೋಗೋಣ ಟಿಫಿನ್ ಮಾಡೋಕ್ಕೆ ನಿನ್ನೆ ರಾತ್ರಿ ಊಟ ಸರಿಯಾಗಿರಲಿಲ್ಲ. ತುಂಬ ಹೊಟ್ಟೆ ಹಸಿಯುತ್ತಾ ಇದೆ' – ಎಂದು ಹೆಜ್ಜೆ ಹಾಕಿದರು. ನಾನೂ ಹೊರಟೆ.

ಹೋಟಲಿನಲ್ಲಿ ತಿಂಡಿ ತಿನ್ನುತ್ತಿದ್ದಾಗ ಗುಪ್ತರೇ ಮಾತು ತೆಗೆದರು " ಬೇಜಾರು ಮಾಡಿಕೊಂಡೆಯ – ಅರ್ಧ ಆಣೆಗೆ ಏಷ್ಟು ಕಟಿಪಿಟಿ ಮಾಡಿದ ಅಂತ' ನಾನು ಸುಮ್ಮಗೆ ಇದ್ದೆ. ಅವರೇ ಮಾತು ಮುಂದುವರಿಸಿದರು. "ನೋಡು. ಇದು ಅರ್ಧಾಣೆ ಲಾಭ ನಷ್ಟದ ವಿಚಾರ ಅಲ್ಲ, ಗೌರವದ ವಿಚಾರ."

"ಅದೇನೋ ನನಗೊಂದು ಅರ್ಥವಾಗೋದಿಲ್ಲ" ಎಂದೆ ಬೇಜಾರಿನ ಧ್ವನಿಯಲ್ಲಿ. ಗುಪ್ತರು ಸಾವಧಾನವಾಗಿ ಮಾತು ಮುಂದುವರಿಸಿದರು. 'ದಾರ ತಂದ ಹುಡುಗನಿಂದ ನಾಳೆ ಅರ್ಧ ಆಣೆ ವಸೂಲು ಮಾಡಬೇಕು.'

'ಯಾಕೆ ಇಷ್ಟೆಲ್ಲಾ ಹಗರಣ – ಬಿಡಿ'

'ಬಿಟ್ಟರೆ ನಮ್ಮ ಆಫೀಸಿನಲ್ಲಿ ಕಳ್ಳರನ್ನು ಬೆಳೆಸತೀವಿ ... .... ಬೇಜಾರು ಮಾಡಿಕೋ ಬೇಡ. ನನ್ನ ಮಾತು ಕೇಳು. ಶನಿವಾರ ನಿನಗೆ ಹೆಚ್ಚು ಕೆಲಸ ಇರುತ್ತೆ. ಚಿಲ್ಲರೆ ಸಾಮಾನುಗಳನ್ನು ತರಿಸೋದಕ್ಕೆ ಅದಕ್ಕೆ ಇದಕ್ಕೆ ಚಿಲ್ಲರೆ ಕೊಡುತ್ತಲೇ ಇರತೀಯ. ನೀನು ಯಾವುದೋ ಆಲೋಚನೇಲಿ ಇರೋವಾಗ ಬಿಲ್ಲು ಚಿಲ್ಲರೆ ದುಡ್ಡು ನಿನ್ನ ಮೇಜಿನ ಮೇಲೆ ಇಟ್ಟು ಹೋಗಿದ್ದಾನೆ. ನೀನು ಯಾವಾಗಲೋ ಬಿಲ್ಲು ತೆಗೆದು ನೋಡಿ ಎಣಿಸಿಕೊಂಡು ಕ್ಯಾಷ್ ಬಾಕ್ಸ್‌ಗೆ ಹಾಕಿಕೊಂಡಿರುವೆ. ಬಿಲ್‌ನಂತೆ ಲೆಕ್ಕ ಬರೆದಿರುವೆ. ಬಿಲ್ ಅನ್ನು ಚೆಕ್ ಮಾಡಿರುವಿ.'

ಹೌದು, ಅದದ್ದು ಹಾಗೆಯೇ ಎಂದು ಒಪ್ಪಿಕೊಂಡೆ. ಗುಪ್ತರು ಮಾತು ಮುಂದುವರಿಸಿ ಹೇಳಿದರು. 'ನಾಳೆ ಹೀಗೆ ಮಾಡು, ಹುಡುಗ ಆಫೀಸಿಗೆ ಬಂದೊಡನೆ ಕರೆದು ಈ ವಾರ ಯಾತಕ್ಕೆ ಮೂರಾಣೆ ಬದಲು ಮೂರೂವರೆ ಆಣೆ ಕೊಟ್ಟು ದಾರ ತಂದೆ ಅಂತ ಕೇಳು. ಅವನಿಗೆ ಸ್ವಲ್ಪ ಗಾಬರಿಯಾಗುತ್ತೆ. ಅವನು ಏನು ಉತ್ತರ ಹೇಳಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿ ನೀನೇ ಈ ಸಲ ಬೇರೆ ಅಂಗಡಿಯಿಂದ ದಾರ ತಂದೆಯಾ ಎನ್ನು. ಮುಳುಗುವವನು ಹುಲ್ಲುಕಡ್ಡಿ ಹಿಡಿದುಕೊಳ್ಳುವವನ ಹಾಗೆ – 'ಹೂಂ' ಅಂತಾನೆ. ಮೂರಾಣೆ ಅವನಿಗೆ ಕೊಟ್ಟು, ಮಾಮೂಲು ಅಂಗಡಿಯಲ್ಲಿ ದಾರ ಕೊಂಡುಕೊಂಡು ಅದನ್ನು ಹೊಸ ಅಂಗಡಿಯವನಿಗೆ ಕೊಟ್ಟು, ನೀನು ಆರು ಕಾಸು ಹೆಚ್ಚಾಗಿ ತೊಗೊಂಡಿದಿ, ದಾರ ಹಿಂದಕ್ಕೆ ಕೊಟ್ಟು, ದುಡ್ಡು ತೆಗೆದುಕೊಂಡು ಬಾ ಅಂದಿದಾರೆ ಅಂತ ದಾರ ಕೊಟ್ಟು, ಮೂರೂವರೆ ಆಣೆ ಹಿಂದಕ್ಕ ತೆಗೆದುಕೊಂಡು ಬಾ ಅನ್ನು. ಆಮೇಲೆ ನೋಡು.'

ನಾನು ಅವರು ಹೇಳಿದಂತೆ ಮಾಡಿದೆ. ಹತ್ತು ನಿಮಿಷಗಳ ಅನಂತರ ಹುಡುಗ ಮೂರೂವರೆ ಆಣೆ ಹಿಂದಕ್ಕೆ ತಂದುಕೊಟ್ಟ. ಇದನ್ನು ಗುಪ್ತರಿಗೆ ತಿಳಿಸಿದಾಗ ಅವರೂ ನೋಡಿದೆಯಾ ತನ್ನ ಮೋಸ ಗೊತ್ತಾಯಿತೆಂದು ಅರ್ಧಾಣೆ ಹಿಂದಕ್ಕೆ ತಂದುಕೊಟ್ಟ. ನಾವು ಅವನನ್ನು 'ಚೆಕ್ ಮಾಡದೆ ಬಿಟ್ಟಿದ್ದರೆ ಒಂದೊಂದು ಸಲ ಸಾಮಾನು ತರಿಸಿದಾಗಲೂ ಹೀಗೇ ಮಾಡುತ್ತಿದ್ದ; ಅವನು ಕಳ್ಳನಾಗುತ್ತಿದ್ದ. ಅದಕ್ಕಿಂತ ಮುಖ್ಯವಾದ ವಿಚಾರ ನಿನಗೆ ಹೇಳಬೇಕಾದ್ದು – ನಮ್ಮ ಎಡಿಟರ್ ಬುದ್ಧಿ ಅಷ್ಟೇನೂ ಚುರುಕಲ್ಲ, ಸುಲಭವಾಗಿ ಮೋಸ ಮಾಡಬಹುದು ಎಂದುಕೊಂಡು ನಿನ್ನ ವಿಚಾರವಾಗಿ ಅಗೌರವ ಭಾವವನ್ನೂ ಬೆಳೆಸಿಕೊಳ್ಳುತ್ತಿದ್ದ' ಎಂದರು.

ಗುಪ್ತರ ಆಲೋಚನಾ ವೈಖರಿಯನ್ನೂ, ಚಾಕಚಕ್ಯತೆಯನ್ನು ನಾನು ಮೆಚ್ಚಿಕೊಂಡೆ.

## ಸೂಕ್ಷ್ಮಗ್ರಾಹಿ

ತಮ್ಮ ಜೊತೆಯಲ್ಲಿ ಕೆಲಸ ಮಾಡುವವರ ನಡೆವಳಿಕೆಯನ್ನೂ ಸೂಕ್ಷ್ಮವಾಗಿ ಪರೀಕ್ಷಿಸುತ್ತಿರುವುದು ಗುಪ್ತರ ವಿಶಿಷ್ಟ ಗುಣ. ಹಾಗೆಯೇ ಅಂಥ ಪರಿಶೀಲನೆಯಿಂದ ಯಾವುದಾದರೂ ಕಾರ್ಯಕ್ರಮ ಕೈಗೊಳ್ಳುವುದು ಅವಶ್ಯಕವೆಂದರೆ ತಪ್ಪದೆ ಹಾಗೆ

ಮಾಡುತ್ತಿದ್ದರು.

ಅವರು 'ಜನಪ್ರಗತಿ' ನಡೆಸುತ್ತಿದ್ದಾಗ ಒಂದು ದಿನ ಅವರನ್ನು ಕಂಡಿದ್ದೆ. ಆಗ ಪ್ರಾಸಂಗಿಕವಾಗಿ ಕೇಳಿದೆ. "ನಿಮ್ಮ ಸಂಪಾದಕ ವರ್ಗದಲ್ಲಿದ್ದ.... ಅವರು ಎಲ್ಲಿ ಕಾಣತಾ ಇಲ್ಲ."

"ಉಪಾಯವಾಗಿ ಬಿಡಿಸಿಕೊಂಡೆ"

"ಯಾಕೆ ಆತ ಬುದ್ಧಿವಂತ, ಚೆನ್ನಾಗಿ ಬರೀತಾರೆ, ವಿಚಾರಗಳನ್ನು ತಿಳಿದುಕೊಂಡಿದ್ದಾರೆ...."

"ಅದೆಲ್ಲಾ ಸರಿ. ಈ ಎಲ್ಲ ಗುಣಗಳ ಜೊತೆಗೆ ಮುಖ್ಯವಾದ, ಅತ್ಯಂತ ಮುಖ್ಯವಾದ ಒಂದು ಗುಣ ಇರಬೇಕಪ್ಪ ಪತ್ರಿಕೋದ್ಯಮಿಗೆ ಋಜುತ್ವ" ಎಂದು ಸೂಚ್ಯವಾಗಿ ಮಾತನಾಡಿದರು.

ಸ್ವಲ್ಪ ಕಾಲದ ಅನಂತರ ಅವರು ಆತನ ಯೋಗ್ಯತೆಯನ್ನು ಎಷ್ಟು ಚೆನ್ನಾಗಿ ತೂಗಿದ್ದರು ಎನ್ನುವುದು ನನಗೆ ಗೊತ್ತಾಯಿತು – ಕೆಲವು ಬೆದರಿಕೆ-ಭ್ರಷ್ಟಾಚಾರಗಳ ಸಂದರ್ಭದಲ್ಲಿ ಆತನ ಕೈವಾಡವಿತ್ತು ಎಂದು ಗೊತ್ತಾದಾಗ.

## ಚುರುಕು ಬುದ್ಧಿ

ಗುಪ್ತರಂತೆ ಚುರುಕಾದ ಬುದ್ಧಿ, ಚಟುವಟಿಕೆಯುಳ್ಳ ದೇಹ ಇರುವವರು ಅಪೂರ್ವ. ಅವರು ಇಳಿ ವಯಸ್ಸಿನಲ್ಲಿ ಮಾಡುತ್ತಿದ್ದಷ್ಟು ಕೆಲಸವನ್ನು ಅನೇಕ ಮಂದಿ ತರುಣರೂ ಮಾಡಲಾರರು ಎಂದರೆ ತಪ್ಪಲ್ಲ. ಅವರು ನಿದ್ರೆ ಮಾಡುತ್ತಿದ್ದದ್ದು ಹೆಚ್ಚೆಂದರೆ ದಿನಕ್ಕೆ ನಾಲ್ಕು ನಾಲ್ಕೂವರೆ ಗಂಟೆಗಳ ಕಾಲ. ತಮ್ಮ ಇತರ ವ್ಯವಹಾರಗಳ ನಡುವೆ ಕೂಡ ಆದಷ್ಟು ಹೆಚ್ಚು ಅವಕಾಶ ಮಾಡಿಕೊಂಡು ಓದುತ್ತಿದ್ದರು. ಹೊಸ ಹೊಸ ಪುಸ್ತಕಗಳನ್ನು ಪತ್ರಿಕೆಗಳನ್ನು ಓದುವುದು ಅವರ ನಿತ್ಯಕರ್ಮ. ಹೊಸ ಪುಸ್ತಕ ತಂದೊಡನೆಯೇ ಅದನ್ನು ಓದಿ ಮುಗಿಸುವ ಕಾತರ ಅವರದು.

ಜಾನ್ ಗಂಥರ್ ಅವರ 'ಇನ್‌ಸೈಡ್ ಏಷ್ಯಾ' ಪುಸ್ತಕ ಬೆಂಗಳೂರಿಗೆ ಬಂದ ದಿನವೇ ಅದನ್ನು ಕೊಂಡು ತಂದರು. ಮನೆಗೆ ಬರುತ್ತಿರುವಾಗಲೇ ಅದರ ವಿಷಯಾನುಕ್ರಮಣಿಕೆ ಓದಿ – ಒಳಪುಟಗಳ ಮೇಲೆ ಕಣ್ಣು ಹಾಯಿಸಿದರು. ಮಧ್ಯಾಹ್ನ ೧೨ ಗಂಟೆಯ ಹೊತ್ತಿಗೆ ನಾನು ಮನೆಗೆ ಊಟಕ್ಕೆ ಹೊರಡುತ್ತಿದ್ದಾಗ ನನ್ನ ಕೊಠಡಿಗೆ ಬಂದು 'ನೋಡು ಜಾನ್ ಗಂಥರ್ ಪುಸ್ತಕ' ಎಂದು ಸಂಭ್ರಮದಿಂದ ತೋರಿಸಿ 'ಓದು' ಎಂದು ಕೊಟ್ಟರು. ನಾನದನ್ನು ಮನೆಗೆ ತೆಗೆದುಕೊಂಡು ಹೋದೆ.

ಸಂಜೆ ನಾಲ್ಕು ಗಂಟೆಯ ಹೊತ್ತಿನಲ್ಲಿ ಗುಪ್ತರು ಮತ್ತೆ ನನ್ನ ಕೊಠಡಿಗೆ ಬಂದರು "ಓದಿದೆಯಾ" ಎಂದರು. ಅವರು ಏನು ಕೇಳುತ್ತ ಇದ್ದಾರೆಂಬುದು ನನಗೆ ಥಟ್ಟನೆ ಹೊಳೆಯಲಿಲ್ಲ. 'ಯಾವುದು ?' ಎಂದೆ.

'ಯಾವುದು – ಜಾನ್‌ಗಂಥರ್'.

'ಅದೇ ರಾತ್ರಿ ಓದತೀನಿ'.

"ತೆಗೆದೂ ನೋಡಲಿಲ್ಲವೆ? ಯಾವ ಯಾವ ಭಾರತೀಯ ವ್ಯಕ್ತಿಗಳನ್ನು ಕುರಿತು ಬರೆದಿದ್ದಾನೆ ಅನ್ನೋದನ್ನು ನೋಡಲಿಲ್ಲವೆ! ಗಂಥರ್‌ನ ಇನ್‌ಸೈಡ್ ಏಷ್ಯಾ ಓದುವ ಕುತೂಹಲವೂ ಆಗಲಿಲ್ಲ ಅಂದರೆ – ನೀನು ಎಂಥ ಪತ್ರಿಕೋದ್ಯಮಿ! ಕುತೂಹಲ ಕೂಡ ಇಲ್ಲದ ಪತ್ರಿಕೋದ್ಯಮಿ!" ಮೂದಲಿಸಿದರು. ತಪ್ಪು ನನ್ನದಾಗಿತ್ತು ತಲೆಬಾಗಿಸಿದೆ.

ನಾನು ಅನೇಕ ವರ್ಷಗಳ ಕಾಲ ಅವರೊಡನೆ ಕೆಲಸ ಮಾಡಿ, ನನ್ನ ಪ್ರವೃತ್ತಿ ಅವರಿಗೆ ಚೆನ್ನಾಗಿ ತಿಳಿದ ಮೇಲೆ ಅವರು ಏನಾದರೊಂದು ಪ್ರಸಂಗ ಮಾಡಿಕೊಂಡು ನಾನು ಆವತ್ತಿನ ಪತ್ರಿಕೆಗಳನ್ನು ಎಚ್ಚರಿಕೆಯಿಂದ ಓದಿದ್ದೇನೆಯೇ ಎಂಬುದನ್ನು ಪರೀಕ್ಷಿಸುತ್ತಿದ್ದರು. ಇದು ನನಗೆ ದಿನಪರೀಕ್ಷೆ. ಅದರಲ್ಲಿ ಉತ್ತೀರ್ಣನಾದಾಗ ನನಗೂ ಸಂತೋಷ. ಅವರಿಗೂ ಸಂತೋಷ. ಆದರೆ ಅದನ್ನು ನಾವಿಬ್ಬರೂ ಬಚ್ಚಿಟ್ಟುಕೊಳ್ಳುತ್ತಿದ್ದೆವು.

ಗುಪ್ತರು ಕನ್ನಡದಲ್ಲಲ್ಲದೆ ಇಂಗ್ಲಿಷ್, ತೆಲುಗು, ತಮಿಳು ಭಾಷೆಗಳಲ್ಲೂ ಪತ್ರಿಕೆಗಳನ್ನು ನಡೆಸಿದರು! ಪ್ರಜಾಮತವೊಂದನ್ನು ಬಿಟ್ಟರೆ ಉಳಿದುವು ಯಾವುವೂ ಆ ಮಟ್ಟಕ್ಕೆ ಬರಲಿಲ್ಲ. ಕೆಲವು ಕಾಲ ಬಾಳಿದವು ಅಷ್ಟೆ. ಆದರೆ ನೂತನ ಪ್ರಯೋಗಗಳ ದೃಷ್ಟಿಯಿಂದ ಅವು ಗಮನಾರ್ಹವಾಗಿದ್ದುವೆಂಬುದನ್ನು ನಾವು ಮರೆಯುವಂತಿಲ್ಲ.

ಹೆಚ್ಚು ಹೆಚ್ಚು ತಿಳಿವಳಿಕೆ, ಹೆಚ್ಚು ಹೆಚ್ಚು ಜನರನ್ನು ಮುಟ್ಟುವಂತಾಗಬೇಕು. ಜನರ ತಿಳಿವಳಿಕೆ ಬೆಳೆಯಬೇಕು ಎಂಬುದು ಗುಪ್ತರ ಅತ್ಯಂತ ತೀವ್ರ ಅಭಿಲಾಷೆಯಾಗಿತ್ತು. ಇದಕ್ಕಾಗಿ ಅವರು ತಮ್ಮ ಗಳಿಕೆಯ ಗಣನೀಯ ಭಾಗವನ್ನು ವಿನಿಯೋಗಿಸಿದರು ಎಂಬುದಕ್ಕೆ ಅವರು ಸ್ಥಾಪಿಸಿದ ಜನ್ಮಭೂಮಿ ಟ್ರಸ್ಟ್‌ನ ಉದಾರ ಕೊಡುಗೆಗಳೇ ಸಾಕ್ಷಿ. ಈ ಕೊಡುಗೆಯನ್ನು ಪಡೆದು ಪ್ರಕಟಗೊಂಡಿರುವ ಗ್ರಂಥಗಳೇ ಸಾಕ್ಷಿ.

◆

# ೩೫. ಅ.ನ.ಕೃ. – ಬಿ. ಎನ್. ಗುಪ್ತರ ವಾದ – ವಿವಾದ

ನವೋದಯ ಸಾಹಿತ್ಯದ ಉದಯಕಾಲದಲ್ಲಿ ಸಣ್ಣ ಕಥೆಯು ಬಿದಿಗೆಯ ಚಂದ್ರನಂತೆ ಬೆಳಗತೊಡಗಿದ್ದ ದಿನಗಳವು. ಮಾಸ್ತಿಯವರು ಹಾಕಿಕೊಟ್ಟ ಹಾದಿಯಲ್ಲಿ ಅ.ನ.ಕೃ., ಕೆ. ಗೋಪಾಲಕೃಷ್ಣ ರಾವ್, ಆನಂದ, ನಿರಂಜನ, ಕಟ್ಟೀಮನಿ, ಕಡೆಂಗೋಡ್ಲು ಮೊದಲಾದವರು ಅದರಲ್ಲಿ ಕೃಷಿ ಮಾಡತೊಡಗಿದ್ದರು.

ಅಂಥ ಸ್ಥಿತಿಯಲ್ಲಿ 'ಕಥಾಂಜಲಿ' ಮಾಸಪತ್ರಿಕೆ ಜನ್ಮ ತಾಳಿತು. ಅದರ ಮಾಲಿಕ ಪ್ರಕಾಶಕರಾದ ಬಿ. ಎನ್. ಗುಪ್ತ ಅವರು ಅ.ನ. ಕೃಷ್ಣರಾಯರನ್ನು ಸಂಪಾದಕರಾಗಿ ಕೆಲಸ ಮಾಡಲು ವಿನಂತಿಸಿಕೊಂಡರು. ಕನ್ನಡಕ್ಕೆ ಸಂಬಂಧಿಸಿದ ಯಾವ ಕೆಲಸವಿದ್ದರೂ ರಾಯರು ಅದಮ್ಯ ಉತ್ಸಾಹದಿಂದ ತೊಡಗಿಕೊಳ್ಳುತ್ತಿದ್ದುದು ತಿಳಿದ ಮಾತೇ ಆಗಿದೆ. ಅವರ ನೇತೃತ್ವದಲ್ಲಿ ಅನೇಕ ಹೊಸ ಕತೆಗಾರರ ನಿರ್ಮಾಣವಾಯಿತು. ಶ್ರೇಷ್ಠ ಮಟ್ಟದ ಲಲಿತ ಪತ್ರಿಕೆಯೊಂದು ಜನಜನಿತವಾಯಿತು.

'ಕಥಾಂಜಲಿಯ ಅ.ನ.ಕೃ' ಎಂದು ಕರೆಯಿಸಿಕೊಳ್ಳುವಷ್ಟು ಕೆಲಸ ಮಾಡಿದ ಅವರು ಒಂದೇ ವರ್ಷದೊಳಗಾಗಿ ರಾಜೀನಾಮೆ ಇತ್ತರು. ಆ ನಿಮಿತ್ತವಾಗಿ ನಡೆದ ಪತ್ರ, ಸಂಪಾದಕೀಯ ಅವಕ್ಕೆ ಉತ್ತರ ಇವನ್ನು ಇಲ್ಲಿ ಕೊಡಲಾಗಿದೆ.

ಹೀಗೆ ಮರು ಪ್ರಕಟಿಸುವುದರ ಉದ್ದೇಶ, ಐವತ್ತು ವರ್ಷಗಳ ಹಿಂದೆ ಪತ್ರಕರ್ತರ ನಡುವಿನ ಸಂಬಂಧ ಹೇಗಿದ್ದಿತ್ತೆಂಬುದನ್ನು ತಿಳಿಯಕೊಳ್ಳುವುದಾಗಿದೆ. ಈಗಿನ ದಿನಗಳಲ್ಲಿಯೂ ಪತ್ರಿಕಾ ಪ್ರಪಂಚದಲ್ಲಿ ರಾಜೀನಾಮೆ, ಹೇಳಿಕೆ, ಪ್ರತಿ ಹೇಳಿಕೆಗಳು ಕಂಡು ಬರುತ್ತಿವೆಯಷ್ಟೆ. ಹೆಚ್ಚಿನ ಪ್ರಸಂಗಗಳಲ್ಲಿ ಅವುಗಳ ಹಿಂದೆ ಆರ್ಥಿಕ ಲಾಭ, ಪ್ರತಿಷ್ಠೆ, ಸ್ವಾರ್ಥ ಮನೋಭಾವ, ರಾಜಕೀಯ ಕುತಂತ್ರಗಳು ಕೆಲಸ ಮಾಡುತ್ತವೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಆ ಸ್ಥಿತಿ ಇರಲಿಲ್ಲ.

ಅ.ನ.ಕೃ. ಅವರು ಬೇರೆ ಕಡೆಗಳಲ್ಲಿಯೂ ಪತ್ರಿಕೋದ್ಯಮದಲ್ಲಿ ತೊಡಗಿ ಸೇವೆ ಸಲ್ಲಿಸಿದ್ದರು. ಬಿ.ಎನ್.ಗುಪ್ತರು 'ಪ್ರಜಾಮತ'ಕ್ಕೆ ಆಧಾರವಾಗಿ ನಿಂತರಲ್ಲದೆ, ಪತ್ರಿಕಾರಂಗದಲ್ಲಿ ಶ್ರದ್ಧೆಯಿಂದ ಶ್ರಮಿಸಿದವರು. 'ಕಥಾಂಜಲಿ'ಯ ನಿಮಿತ್ತದಿಂದ ಅವರೀರ್ವರ ಪತ್ರಿಕಾ ನಿಲುವನ್ನು ಅರಿತುಕೊಳ್ಳಬಹುದಾಗಿದೆ.

ಶ್ರೀ.ಹಾ.

**ಕಥಾಂಜಲಿ**
ವರ್ಷ ೨ ಸಂ. ೫. ಫೆಬ್ರು. ೧೯೩೧

## (ಅ) ಬಿ. ಎನ್. ಗುಪ್ತರಿಂದ

ಪ್ರಿಯ ವಾಚಕರೆ,

'ಕಥಾಂಜಲಿ'ಯು ಜನ್ಮವೆತ್ತಿ ಹದಿನಾಲ್ಕು ತಿಂಗಳುಗಳು ಕಳೆದುಹೋದುವು. 'ಕಥಾಂಜಲಿ'ಯ 'ಜನಕ'ರೂ ಪೂರ್ವದ ಸಂಪಾದಕರೂ ಆದ ಶ್ರೀಯುತ ಅ. ನ. ಕೃಷ್ಣರಾಯರು 'ಕಥಾಂಜಲಿ'ಯ ರಂಗದಿಂದ ನಿಷ್ಕ್ರಮಿಸಿರುವುದು ನಿಮಗೆ ತಿಳಿಯದ ವಿಷಯವಲ್ಲ. ಶ್ರೀ ಕೃಷ್ಣರಾಯರು ನಿಮಗೆ ಹೊಸಬರಲ್ಲ. ನಾನು ನಿಮಗೆ ಅವರ ಪರಿಚಯವನ್ನು ಮಾಡಿಕೊಡಬೇಕಾದ ಅವಶ್ಯಕತೆಯೂ ಇಲ್ಲ. ಅವರು ಸ್ವನಾಮಖ್ಯಾತರು. ಇಡೀ ಕರ್ಣಾಟಕದಲ್ಲಿ ಅವರನ್ನು ಅರಿಯದವರಿಲ್ಲ. ಅವರ ಪ್ರತಿಭೆಯನ್ನು ತಿಳಿಯದವರಿಲ್ಲ. 'ಕಥಾಂಜಲಿ'ಯು ಜನ್ಮವೆತ್ತಿದಂದಿನಿಂದ ಅವರದನ್ನು ಮಮತೆಯಿಟ್ಟು ಪೋಷಿಸಿರುವರು. ಪ್ರತಿಫಲಾಪೇಕ್ಷೆಯಿಲ್ಲದೆ, ಅವರು ನಮಗೆ ಮಾಡಿರುವ ಸಹಾಯವನ್ನು ನಾವು ಎಂದೆಂದಿಗೂ ಮರೆಯಲಾರೆವು. ಕರ್ಣಾಟಕದ ಸುಪ್ರಸಿದ್ಧ 'ಕಥೆಗಾರ'ರ ಕಥೆಗಳನ್ನು ಸಂಗ್ರಹಿಸಿ ಅವನ್ನು ಕಥಾಂಜಲಿಯಲ್ಲಿ ಪ್ರಕಟಿಸಲು ಅವರು ಮಾಡಿದ ಪ್ರಯತ್ನಗಳು ಸ್ತುತ್ಯಾರ್ಹವಾದುವು. ಅವರ ಒಲವಿನ ಹಾಲನ್ನುಂಡೇ 'ಕಥಾಂಜಲಿ'ಯು ಈಗಿರುವಷ್ಟು ಪುಷ್ಟವಾಯಿತೆಂದರದು ಹೊಗಳಿಕೆಯ ಮಾತಲ್ಲ. ನುರಿತ ಸಾಹಿತಿಗಳಾದ ಅವರು 'ಕಥಾಂಜಲಿ'ಯ ಸಂಪಾದಕತ್ವಕ್ಕೆ 'ಭರತವಾಕ್ಯ'ವನ್ನು ಹಾಡಿದ್ದು, ಇನ್ನೂ ಎಳೆತನದಲ್ಲಿರುವ 'ಕಥಾಂಜಲಿ'ಗೆ ತಡೆಯಲಾರದ ಪೆಟ್ಟೆಂಬುದರಲ್ಲಿ ಸಂದೇಹವಿಲ್ಲ. 'ಕಥಾಂಜಲಿ'ಯ ಬಾಹ್ಯರಂಗದಿಂದ ಅವರು ನಿಷ್ಕ್ರಮಿಸಿರುವರಾದರೂ ಇನ್ನು ಮುಂದೆಯೂ ಅವರು ತಮ್ಮ ಮಮತೆಯ ಕಂದನಾದ 'ಕಥಾಂಜಲಿ'ಯ 'ಆತ್ಮ'ವಾಗಿರುವರೆಂದೂ ಅವರ ಬೆಂಬಲವೂ ಸಂಪೂರ್ಣ ಸಹಾನುಭೂತಿಯೂ 'ಕಥಾಂಜಲಿ'ಗೆ ಉಂಟೆಂದೂ ಹೇಳಬಯಸುವೆನು.

'ಕಥಾಂಜಲಿ'ಯ ಮೇಲೆ ಪ್ರೇಮವಿಟ್ಟು, ತಮ್ಮ ಲೇಖನಗಳಿಂದ, ಅದನ್ನು ಸರ್ವಜನರಂಜನೀಯವಾಗುವಂತೆ ಮಾಡಿದ, ಲೇಖಕರೆಲ್ಲರೂ ಇನ್ನು ಮುಂದೆಯೂ 'ಕಥಾಂಜಲಿ'ಯ ಮೂಲಕ ನಮ್ಮ ಸಾಹಿತ್ಯ ಸೇವೆಯನ್ನು ನಡೆಯಿಸುವರೆಂದು ನಂಬುತ್ತೇನೆ.

ಇನ್ನು ನಮ್ಮ ವಿಚಾರವಾಗೊಂದೆರಡು ಮಾತು. ನಿಯಮಿತ ಕಾಲಕ್ಕೆ ಸರಿಯಾಗಿ ಹೊರಬೀಳುವುದಿಲ್ಲ ವೆಂಬೊಂದಪವಾದವು 'ಕಥಾಂಜಲಿ'ಯ ಮುಖವನ್ನು ಕಪ್ಪುಮಾಡಿದೆ. ಅಪವಾದವೇನೋ ಸತ್ಯವಾದದ್ದೇ. ಹಿಂದಿನದನ್ನು ಮರೆತು ಬಿಡೋಣ. ಇನ್ನುಮುಂದೆ 'ಕಥಾಂಜಲಿ'ಯು ಕಾಲಕ್ಕೆ ಸರಿಯಾಗಿ; ಅಂದರೆ ಪ್ರತಿ ತಿಂಗಳ ಮೂರನೇ ತಾರೀಖಿನ ದಿನ ಹೊರಡುವುದೆಂಬ ಭರವಸೆಯನ್ನು ಕೊಡುತ್ತೇನೆ.

ಪ್ರಕೃತ 'ಕಥಾಂಜಲಿ'ಯ ವಾರ್ಷಿಕ ಚಂದಾ ಹಣವು ೨-೮-೦ ರೂಪಾಯಿ ಇದ್ದು, ಅದು ವಿದ್ಯಾರ್ಥಿಗಳಿಗೆ ಎರಡು ರೂಪಾಯಿಗಳಿಗೆ ಕೊಡಲ್ಪಡುವುದು.

ನಮಗೆ ಅನೇಕ ವಿಧವಾದ ಸಹಾಯವನ್ನು ಮಾಡಿ, ನನ್ನನ್ನು ಅವರ ಪ್ರೀತಿಗೆ ಚಿರಋಣಿಯನ್ನಾಗಿ ಮಾಡಿರುವ ಶ್ರೀ ಕೃಷ್ಣರಾಯರಿಗೆ ಮತ್ತೊಮ್ಮೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸಿ ಈ ಪತ್ರವನ್ನು ಕೊನೆಗಾಣಿಸುವೆನು.

ಕನ್ನಡಿಗರ ಉದಾರ ಸಹಾಯದಿಂದ 'ಕಥಾಂಜಲಿ'ಯು ಚಿರಜೀವಿಯಾಗುವುದೆಂದು ನಂಬಿರುವ,

ತಮ್ಮ ವಿಧೇಯ,

ಬಿ. ಯಸ್. ಗುಪ್ತ

'ಕಥಾಂಜಲಿ'ಯ ಪ್ರಕಾಶಕ ಮತ್ತು ವ್ಯವಸ್ಥಾಪಕ.

ಸಂಪಾದಕೀಯ ಲೇಖನ ; ಸಪ್ಟಂಬರ ೧೯೩೧

## (ಆ) ಬಿ. ಎನ್. ಗುಪ್ತರಿಂದ

ಈ ಸಂಚಿಕೆಯೊಂದಿಗೆ 'ಕಥಾಂಜಲಿ'ಯ ಎರಡನೆಯ ಸಂಪುಟವು ಕೊನೆಗಾಣುವುದು. ಈ ವರ್ಷ ಕಥಾಂಜಲಿಯು ಯಶಸ್ವಿಯಾಗಿ ನಡೆಯಲು ನೆರವಾಗಿ ನಿಂತು ತಮ್ಮ ಲೇಖನಗಳಿಂದ 'ಕಥಾಂಜಲಿ'ಯನ್ನು ಸಕಲಜನ ಮನೋರಂಜನೀಯವನ್ನಾಗಿ ಮಾಡಿದ ಸಕಲ ಲೇಖಕರಿಗೂ ನಮ್ಮ ಧನ್ಯತಾಕುಸುಮ ಕಾಣಿಕೆಯನ್ನರ್ಪಿಸುತ್ತೇವೆ.

ಈ ವರ್ಷ 'ಕಥಾಂಜಲಿ'ಯು ಅನೇಕ ಗಂಡಾಂತರಗಳಲ್ಲಿ ಸಿಕ್ಕಿಬಿದ್ದು ಅಪಾಯವಿಲ್ಲದೆ ತನ್ನ ಚೇತನವನ್ನುಳಿಸಿಕೊಂಡು ಬಂದಿದೆ. ಹಿಂದಿನ ನೆನಪು ಘೋರವಾದುದಾದರೂ, ಕಷ್ಟಗಳನ್ನು ಗೆದ್ದುಬಂದವರಿಗೆ, ಅದು ಹಿತಕರವಾಗಿರುವುದು; ಅಲ್ಲದೆ ಮುಂದೆಂತಹ ಕಷ್ಟಗಳು ನಮ್ಮೆದುರಿಗೆ ಬಂದರೂ ಹೆದರದೆ ಕಾರ್ಯಸಾಧನೆ ಮಾಡಬೇಕೆಂಬ ಹುರುಪನ್ನುಂಟುಮಾಡುವುದು. ಆದುದರಿಂದ ಈ ವರ್ಷಾಂತ್ಯದಲ್ಲಿ ಈ ವರ್ಷದ ಕಾರ್ಯಕಲಾಪಗಳ ಸಿಂಹಾವಲೋಕನವು ಅನುಚಿತವೆನಿಸಲಾರದು.

ಕನ್ನಡನಾಡಿನ ಮಿಕ್ಕೆಲ್ಲ ಪತ್ರಿಕೆಗಳಂತೆಯೇ 'ಕಥಾಂಜಲಿ'ಯೂ ಆರ್ಥಿಕ ದುರವಸ್ಥೆಯಲ್ಲಿ ತನ್ನ ಎರಡನೆಯ ವರ್ಷವನ್ನು ಪ್ರಾರಂಭಿಸಿತು. ಆ ದುರವಸ್ಥೆಯಲ್ಲಿ 'ಕಥಾಂಜಲಿ'ಯ ಪ್ರಕಟಣವನ್ನು ಮುಂದುವರೆಸುವ ಮನವುಂಟಾದುದು, ದೈವಪ್ರೇರಣೆಯಿಂದೇ ಹೇಳಬೇಕು. 'ಕಥಾಂಜಲಿ'ಯು ಹೀಗೆ ಕಾಲೆಳೆದು ಹಾಕುತ್ತಾ ಎರಡು ತಿಂಗಳನ್ನು ಕಳೆಯುವುದರೊಳಗಾಗಿ ಶ್ರೀಯುತ ಅ. ನ. ಕೃಷ್ಣರಾಯರು 'ಸಂಪಾದಕೀಯ ಭರತವಾಕ್ಯ'ವನ್ನು ಹಾಡುತ್ತಾ 'ಕಥಾಂಜಲಿ'ಯ ಕಾರ್ಯರಂಗದಿಂದ ನಿಷ್ಕ್ರಮಿಸಿಬಿಟ್ಟರು.

ಪ್ರತಿಯೊಂದು ವ್ಯಕ್ತಿಯ ಹಿಂದೆಯೂ ಅದಕ್ಕೆ ಸಂಬಂಧಿಸಿದ ಶಕ್ತಿಯಿದ್ದೇ ಇರುತ್ತದೆಂಬುದು ಸುಳ್ಳಲ್ಲ. ಶ್ರೀ ಕೃಷ್ಣರಾಯರು 'ಕಥಾಂಜಲಿ'ಯನ್ನು ನಡುನೀರಿನಲ್ಲಿ ಕೈಬಿಟ್ಟನಂತರ ಕೆಲವರು ಪತ್ರಿಕಾಕರ್ತರು ಅವರ ಮೇಲೆ ಬಾಣ ಪ್ರಯೋಗಮಾಡಿ, ಅದನ್ನು ಮುಳುಗಿಸಲೆತ್ನಿಸಿದರು. 'ಕಥಾಂಜಲಿ'ಯು ಶ್ರೀ. ರಾಯರ ರಕ್ಷಾಕವಚವನ್ನು ಕಳೆದುಕೊಂಡಿತ್ತಾದರೂ ಈ ಸರಳುಗಳ ಪೆಟ್ಟಿನಿಂದದು ಜರ್ಜರಿತವಾಗಿ ಮುಳುಗಿ ಹೋಗಲಿಲ್ಲ. ಈ ರೀತಿಯಾದ ಪತ್ರಿಕಾಕರ್ತರ ಅನೀತಿಯನ್ನು ಅಲ್ಲಿ ಉಲ್ಲೇಖಿಸಲು ನಮಗೆ ಮನಸ್ಸಿಲ್ಲವಾದರೂ ಈ ವಿಚಾರವಾಗಿ ಜನರಲ್ಲಿರಬಹುದಾದ ಕುಕಲ್ಪನೆಗ[illegible] ಹೋಗಲಾಡಿಸಲೋಸುಗ ಈ ಅನಿಷ್ಟ ಪ್ರಸಂಗದ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಹೋದ ವರ್ಷ ಡಿಸೆಂಬರ್ ತಿಂಗಳಲ್ಲಿ, ಅಂದರೆ ಶ್ರೀ ಕೃಷ್ಣರಾಯರು ಕೈ ಬಿಟ್ಟ ಒಂದು ತಿಂಗಳನಂತರ, ಸುಬೋಧದ ಸಂಪಾದಕರು ತಮ್ಮ ಮಾನ್ಯಪತ್ರಿಕೆಯಲ್ಲಿ, ಕನ್ನಡಿಗರಾದ ಶ್ರೀ. ಕೃಷ್ಣರಾಯರು ಇದುವರೆಗೆ ಪೋಷಿಸಿದ್ದ ಕಥಾಂಜಲಿಯನ್ನು ತಮಿಳುವರ್ತಕರೊಬ್ಬರ ಕೈಯಲ್ಲಿಟ್ಟು, ತಾವು ಕೈ ತೊಳೆದುಕೊಂಡುದು ತಪ್ಪೆಂದು ಒಂದು ಸಂಪಾದಕೀಯ ಟೀಕೆಯನ್ನು ಬರೆದರು. ಈ ಟೀಕೆಯಲ್ಲಿರುವ, ಶ್ರೀ ಕೃಷ್ಣರಾಯರ ಮಹದ್ದ್ಯೋಷೋದ್ಘಾಟನೆಗೆ ನಾವು ಉತ್ತರ ಹೇಳಬೇಕಾಗಿಲ್ಲ. ಆದರೆ 'ತಮಿಳುವರ್ತಕ'ರ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಏಕೆಂದರೆ ಆ ವಿಚಾರವು ಕಥಾಂಜಲಿಗೆ ಸಂಬಂಧಿಸಿದ್ದು, 'ತಮಿಳುವರ್ತಕರು' ತಾವು ಕಷ್ಟಪಟ್ಟು ದುಡಿದ ಹಣವನ್ನು 'ಕಥಾಂಜಲಿ'ಗಾಗಿ ಖರ್ಚು ಮಾಡುತ್ತಿದ್ದಾರೆ. 'ಕಥಾಂಜಲಿ'ಗಾಗಿ ಇದುವರೆಗೂ ಎಷ್ಟೋ ನಷ್ಟ ಹೊಂದಿದ್ದಾರೆ. ಕನ್ನಡಿಗರಾದ ಶ್ರೀ ಕೃಷ್ಣರಾಯರು 'ಕಥಾಂಜಲಿ'ಯ ಸಂಪಾದಕರಿದ್ದಾಗ ಕೂಡ 'ಕಥಾಂಜಲಿ'ಯ ಪ್ರಕಟಣೆಗೆ ಹಣ ಕೊಡುತ್ತಿದ್ದವರೂ ಈ 'ತಮಿಳುವರ್ತಕ'ರೇ. ಶ್ರೀ ಕೃಷ್ಣರಾಯರು 'ಕಥಾಂಜಲಿ'ಯನ್ನು ಕೈಬಿಟ್ಟ ಮೇಲೆ, ಅದನ್ನು ನಡೆಸುವ ಭಾರವನ್ನು 'ತಮಿಳು ವರ್ತಕರು' ವಹಿಸಿದ್ದು ನ್ಯಾಯವಲ್ಲದೆ ಅನ್ಯಾಯವಲ್ಲ. 'ಕಥಾಂಜಲಿ'ಯು 'ತಮಿಳುವರ್ತಕರ' ಕೈಗೆ ಪುಕ್ಕಟೆ ಬರಲಿಲ್ಲ. ಅದಕ್ಕಾಗಿ ಅವರು ಹಣ ಖರ್ಚು ಮಾಡಿದ್ದಾರೆ. ಆದ್ದರಿಂದ ಸುಬೋಧದ ಸಂಪಾದಕರು ಪೂರ್ವಾಪರ ವಿವೇಚನೆಯಿಲ್ಲದೆ, 'ಕಥಾಂಜಲಿಯ ಸಂಪಾದಕರಾಗಿದ್ದ ಶ್ರೀ ಕೃಷ್ಣರಾಯರಿಗೂ, ಪ್ರಕಾಶಕರಾಗಿದ್ದ 'ತಮಿಳುವರ್ತಕ'ರಿಗೂ ಅವರು ತಮಿಳು ವರ್ತಕರಲ್ಲ; ಆಂಧ್ರದವರು ಇದ್ದ ಪರಸ್ಪರ ಸಂಬಂಧವನ್ನು ತಿಳಿಯದೆ, ತಮ್ಮ ಅಯುಕ್ತ ಸಂಪಾದಕೀಯ ಟೀಕೆಯನ್ನು ಬರೆದಿದ್ದಕ್ಕಾಗಿ ನಾವು ಅನುತಾಪ ಪಡುತ್ತೇವೆ. ಅಲ್ಲದೆ ಪರದೇಶದ ವರ್ತಕರು ಯಾರೋ ಬಂದು ನಮ್ಮ ದೇಶದಿಂದ ಏನೋ ಹೊತ್ತುಕೊಂಡು ಹೋಗುತ್ತಾರೆ, ಕನ್ನಡಿಗರು ಅದಕ್ಕವಕಾಶ ಕೊಡಬಾರದು ಎಂಬರ್ಥ ಬರುವಂತೆ ಸಂಪಾದಕರು ತಮ್ಮ ಟೀಕೆಯನ್ನು ಬರೆದಿದ್ದರೂ ಅದು ಮನಃಪೂರ್ವಕವಾಗಿ ಬರೆದುದೆಂದು ನಾವು ಹೇಳುವುದಲ್ಲ. ಜನತೆಯ ಈ ಅಯುಕ್ತ ಟೀಕೆಯನ್ನು ತಪ್ಪುದಾರಿಗೆಳೆಯಲ್ಪಡದೆ, 'ಕಥಾಂಜಲಿ'ಯು ನಿಜವಾಗಿಯೂ ಕನ್ನಡ ಸಾಹಿತ್ಯ ಸೇವೆಯನ್ನು ಮಾಡುತ್ತಿದೆಯೆಂದೂ, ಅದರಿಂದ ಕನ್ನಡನಾಡಿನ ಐಶ್ವರ್ಯವೂ ಕೊಳ್ಳೆಹೋಗುತ್ತಿಲ್ಲವೆಂದೂ, ಎಷ್ಟೋ ಜನತರುಣ ಕರ್ಣಾಟಕ ಲೇಖಕರಿಗೆ ಅದು ತನ್ನ ಸಹಾಯವನ್ನು ನೀಡಿ ಅವರನ್ನು ಮುಂದಕ್ಕೆ ತಂದಿದೆಯೆಂದೂ, 'ಕಥಾಂಜಲಿ'ಗೆ ಜನತೆಯ ಸಹಾನುಭೂತಿಯು ಅವಶ್ಯವೆಂದೂ ಬಗೆದು, ತಮ್ಮ ಅಮೋಘವಾದ ಸಹಾಯದಿಂದ 'ಕಥಾಂಜಲಿ'ಯ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿದ ಮಹನೀಯರಿಗೆಲ್ಲಾ ನಮ್ಮ ವಂದನೆಗಳನ್ನರ್ಪಿಸಿ, ಅವರು ಇನ್ನು ಮುಂದೆ ತಮ್ಮ ಉದಾರ ಸಹಾಯವನ್ನು ವೃದ್ಧಿಗೊಳಿಸಿ 'ಕಥಾಂಜಲಿ'ಯು ಚಿರಂಜೀವಿಯಾಗಿ ಬಾಳುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಇನ್ನು ಕಥಾಂಜಲಿಯ ಲೇಖಕರ ವಿಚಾರವಾಗಿ ಕೆಲವು ಮಾತುಗಳು. ನಮ್ಮ ಮೇಲೆ ಅಭಿಮಾನವಿಟ್ಟು ನಮಗೆ ತಮ್ಮ ಲೇಖನಗಳನ್ನು ಕಳುಹಿಸಿದವರನೇಕರ ಲೇಖನಗಳನ್ನು ಪ್ರಕಟಿಸಲಾಗಲಿಲ್ಲವೆಂದು ಹೇಳಲು ವಿಷಾದಿಸುತ್ತೇವೆ. ಅವುಗಳಲ್ಲನೇಕವು, ಎಲ್ಲವೆಂದೇ ಹೇಳಬಹುದು - ಪ್ರಕಟಣೆಗೆ ಅರ್ಹವಾಗಿರಲಿಲ್ಲ. ನಾವು ಆ ಕತೆಗಳನ್ನು ಪ್ರಕಟಿಸದಿದ್ದುದಕ್ಕಾಗಿ, ಆ ಕತೆಗಾರರು ಮನನೊಂದುಕೊಳ್ಳದೆ, ಸತತವಾಚನ ಲೇಖನಾದಿಗಳಿಂದ ತಮ್ಮ ಲೇಖನ ಶಕ್ತಿಯನ್ನು ವೃದ್ಧಿಗೊಳಿಸಿಕೊಂಡು ಉತ್ತಮವಾದ ಲೇಖನಗಳನ್ನು ಬರೆಯುವರೆಂದು ನಂಬುತ್ತೇವೆ.

ಕರ್ಣಾಟಕದಲ್ಲಿ ಸ್ತ್ರೀ ಲೇಖಕ(ಕಿ)ಯರ ಕೊರತೆಯು ಇನ್ನೂ ತಪ್ಪಿಲ್ಲ. ಜೀವನದ ಸುಖದುಃಖಗಳನ್ನೂ, ಗಹನ ಸಮಸ್ಯೆಗಳನ್ನು, ಸ್ತ್ರೀದೃಷ್ಟಿಯಿಂದ ಅವಲೋಕಿಸಿ. ಆ ವಿಚಾರವಾಗಿ ಸ್ತ್ರೀಯರ ಭಾವನೆಗಳನ್ನು ಪ್ರದರ್ಶಿಸಿ, ನಮ್ಮ ಸಾಹಿತ್ಯದ ದೃಷ್ಟಿಪಥವು ವಿಸ್ತಾರಗೊಳ್ಳುವಂತೆ ಮಾಡುವ ಕಾರ್ಯವು ನಮ್ಮ ತಂಗಿಯರನ್ನವಲಂಬಿಸಿದೆ. ಸುಶಿಕ್ಷಿತ ಸ್ತ್ರೀಯರನೇಕರು ಲೇಖನವನ್ನು ಬರೆಯುವುದರಲ್ಲಿ ತೊಡಗಿ, ಈ ಕೊರತೆಯನ್ನು ಹೋಗಲಾಡಿಸುವವರೆಂದು ನಂಬುತ್ತೇನೆ.

ಕೊನೆಯಲ್ಲಿ 'ಕಥಾಂಜಲಿ'ಯ ಅಭಿವೃದ್ಧಿಗೆ ಬೆಂಬಲಕೊಟ್ಟ ಪ್ರತಿವ್ಯಕ್ತಿಗೂ ಸಂಸ್ಥೆಗೂ ನಮ್ಮ ಹೃತ್ಪೂರ್ವಕ ವಂದನೆಗಳನ್ನರ್ಪಿಸಿ ಈ ಲೇಖನವನ್ನು ಕೊನೆಗಾಣಿಸುವೆವು.

## (೨) ಶ್ರೀ ಅ. ನ. ಕೃಷ್ಣರಾಯರಿಂದ

ಅಕ್ಟೋಬರ್ ೧೯೩೧

ಮಾನ್ಯ ಸಂಪಾದಕರೇ,

ಇಂದೇ ಕೈಸೇರಿದ 'ಕಥಾಂಜಲಿ'ಯ ೧೨ನೆಯ ಸಂಚಿಕೆಯ ಸಂಪಾದಕೀಯ ಲೇಖನವನ್ನು ನೋಡಿದೆ. ತಾವು ನಿರಾಧಾರವಾಗಿ ನನ್ನ ಮೇಲೆ ಹೊರಿಸಿರುವ ಆರೋಪಗಳಿಗೆ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ತಾವು ದಯೆಯಿಟ್ಟು ಬರುವ 'ಕಥಾಂಜಲಿ'ಯ ಸಂಚಿಕೆಯಲ್ಲಿ ಈ ಪತ್ರ ಪ್ರಕಟಿಸಬೇಕಾಗಿ ಪ್ರಾರ್ಥಿಸುತ್ತೇನೆ.

ನಾನು ಕಥಾಂಜಲಿಯನ್ನು ನಡುನೀರಿನಲ್ಲಿ ಕೈಬಿಟ್ಟೆನೆಂಬ ಮಾತು ಶುದ್ಧ ಸಟೆ; ನಾನು ಕಥಾಂಜಲಿ ಸಂಪಾದಕ ವೃತ್ತಿಯನ್ನು ಬಿಟ್ಟದ್ದು 'ಈ ಸರಳುಗಳ ಪೆಟ್ಟಿನಿಂದಲೂ ಜರ್ಜರಿತನಾಗಿ ಮುಳುಗಿ ಹೋಗಲಿ' ಎಂಬ ಉದ್ದೇಶದಿಂದಲೂ ಅಲ್ಲ. ತಾವು ಅನವಶ್ಯಕವಾಗಿ ಈ ಪ್ರಸ್ತಾಪವನ್ನೆತ್ತಿರುವುದರಿಂದ ನಿಜಾಂಶಗಳನ್ನು ತಿಳಿಸಲೇ ಬೇಕಾಗಿದೆ. ಕಥಾಂಜಲಿ ಸಕಾಲದಲ್ಲಿ ಬರವಿದ್ದದ್ದು; ಮುದ್ರಣದ ವಿಷಯದಲ್ಲಿ ಕೂಡ ನಾನೇ ಹೆಣಗಬೇಕಾಗಿದ್ದದ್ದು; ಬರೆಹಗಾರರಿಗಾಗುತ್ತಿದ್ದ ತಿರಸ್ಕಾರ, ಈ ವಿಚಾರಗಳಲ್ಲಿ ತಮಗೂ ನನಗೂ ಆಗಾಗ್ಗೆ ಆಗುತ್ತಿದ್ದ ವಿವಾದಗಳೂ, ಅಚ್ಚಿನಾಲಯದಲ್ಲಿ ಹಗಲಿರುಳು ಕುಳಿತು ಅಕ್ಷರಕ್ಷರವನ್ನು ಕೆಲಸಗಾರರಿಂದ ಕೂಡಿಸಿ, ಅವ್ಯವಸ್ಥೆಯಿಂದಾವೃತವಾದ ಆ ಅಚ್ಚಿನಾಲಯದಲ್ಲಿ ಆದಷ್ಟು ಅಂದವಾಗಿ ದೋಷರಹಿತವಾಗಿ ಪತ್ರಿಕೆಯು ಬರಲೆಂಬ ಆಕಾಂಕ್ಷೆಯಿಂದ ನಾನು ದುಡಿಯುತ್ತಿದ್ದದ್ದು ವಾಚಕವೃಂದಕ್ಕೆಲ್ಲಾ ತಿಳಿಯದಿದ್ದರೂ, ತಾವಾದರೂ ಚೆನ್ನಾಗಿ ಬಲ್ಲವರಾಗಿದ್ದೀರಿ. ನಾನು ೧೪ ತಿಂಗಳು ಬೇರೊಂದು ಉದ್ಯಮಕ್ಕೆ ಮನಸಕೊಡದೆ ನೆಟ್ಟಮನದಿಂದ ಕಥಾಂಜಲಿಯ ಸೇವೆಯನ್ನು ಯಾವ ಫಲವನ್ನೂ ಬಯಸದೆ ಮಾಡಿದೆ; ಮುಂದೆಯೂ ಮಾಡುತ್ತಲಿದ್ದೆ. ಆದರೆ ತಾವು ಪತ್ರಿಕೆಯು, ಹೆಚ್ಚು ಜನಾಕರ್ಷಣೀಯವಾಗಿರುವಂತೆ ಅಂದಚಂದವಿಲ್ಲದ ಚಿತ್ರಗಳನ್ನೂ, ಒರಟು ಕಾಗದವನ್ನೂ ಹಾಕಬೇಕೆಂದು ಬಯಸಲು, ಕಥಾಂಜಲಿಯು ಸ್ಥಾಪಿತವಾದ ಉದ್ದೇಶವು ಅದರಿಂದ ಸಂಪೂರ್ಣ ವಿಫಲವಾಗುವುದೆಂದು ನಾನು ತಿಳಿಸಿದೆ. ಆದರೆ ತಾವು ಯಾವ ವಿಷಾದವನ್ನೂ ಸೂಚಿಸಲಿಲ್ಲ. ಇನ್ನು 'ನಡುನೀರಿನಲ್ಲಿ ಕೈ ಬಿಡುವ ಮಾತು' ಏತಕ್ಕೆ ಬರಬೇಕು? ನಾನು ವೃತ್ತಿಯಿಂದ ನಿವೃತ್ತನಾದ ಮೇಲೂ ತಮ್ಮಲ್ಲಿಗೆ ನನ್ನಲ್ಲಿ ಬಂದಿದ್ದ ೩೯ ಬರಹಗಳನ್ನು ಕಳುಹಿಸಿಕೊಟ್ಟುದಲ್ಲದೆ, ನಾನೇ ಒಂದು ಲೇಖನವನ್ನು ಬರೆದು ಕಳುಹಿಸಿದೆ. ನನ್ನ ಒತ್ತಾಯವಿಲ್ಲದಿದ್ದ ಪಕ್ಷಕ್ಕೆ ಶ್ರೀಯುತರಾದ ಗೋಪಾಲಕೃಷ್ಣರಾಯರು, ನರಸಿಂಹಮೂರ್ತಿಗಳು, ಆನಂದ, ರಾಧಾಮೋಹನ ಇವರುಗಳು ಯಾರೂ ಕಥಾಂಜಲಿಗೆ ತಮ್ಮ ಕಥೆಗಳನ್ನು ಕಳುಹಿಸುತ್ತಿರಲಿಲ್ಲವೆಂಬುದನ್ನು ತಾವು ಚೆನ್ನಾಗಿ ತಿಳಿದಿರುವಿರಿ.

'ಸುಬೋಧ', ಸಂಪಾದಕ ಟೀಕೆಯ ನೀತಿಯನ್ನು ವಿಮರ್ಶಿಸುತ್ತಾ, ಆ ಬಗೆಯ ಟೀಕೆಗಳಿಗೆ ನಾನು ಪ್ರೇರಕನೆಂಬರ್ಥ ಬರುವಂತೆ ಕಾರಣವಾಗುವುದಲ್ಲದೆ ಬೇರೆ ಪ್ರಯೋಜನವಿಲ್ಲ. ಆದರಿಷ್ಟು ಮಾತ್ರ ತ್ರಿಕರಣಪೂರ್ವಕವಾಗಿ ಹೇಳಬಲ್ಲೆ. ಕಥಾಂಜಲಿಯ ಅಭ್ಯುದಯಕ್ಕೆ ಅಡ್ಡಿಯಾಗುವ ಯಾವ ಕಾರ್ಯವೂ ನನ್ನಿಂದಾಗಿಲ್ಲ ಮತ್ತು ನನಗೆ ತಿಳಿದಂತೆ ಯಾರೂ ಮಾಡುವುದಕ್ಕೆ ನಾನು ಅವಕಾಶ ಕೊಟ್ಟಿಲ್ಲ. ನನ್ನ 'ಅಮತಿ' ಗ್ರಂಥದ ಮೇಲೆ 'ಕಥಾಂಜಲಿ'ಯಲ್ಲಿ ಅಂತಹ ಕೊಡಲಿ ಪೆಟ್ಟಿನ ವಿಮರ್ಶೆ ಬಂದಾಗ ಕೂಡ ನನ್ನ ಪ್ರೇಮವು ವಿಚಲಿತವಾಗಲಿಲ್ಲ. ಬೇಕಾದವರು ಬೇಕಾದನ್ನು ಹೇಳಿಕೊಂಡರೆ, ಕಥಾಂಜಲಿಯು ನನ್ನ ಶ್ರಮೆಯ, ಸಾಹಸದ ಪ್ರೇಮದ ಫಲವೆಂಬುದನ್ನು ಮರೆಯಲಾರೆ. ಇಂದಿನ ಕಥಾಂಜಲಿಯ ಜೀವಂತ ಸ್ಥಿತಿಗೆ ಕಾರಣಭೂತರಾಗಿರುವವರು ನನ್ನ ಹಾಗೂ ನನ್ನ ಸಾಹಿತ್ಯ ಕ್ರಿಯೆಗಳ ವಿಚಾರದಲ್ಲಿ ಏನೇನು ಅಭಿಪ್ರಾಯಗಳನ್ನಿಟ್ಟುಕೊಂಡು ಹಲವು ವಿಧವಾಗಿ ತಿಳಿದೋ ತಿಳಿಯದೆಯೋ ನನ್ನ ಮನಸ್ಸಿಗೆ ನೋವನ್ನುಂಟು ಮಾಡಿದರೂ ನನ್ನ ಅಭಿಮಾನವು ಅಚ್ಚಳಿಯುವುದಿಲ್ಲ.

ಕೊನೆಯದಾಗಿ ನಾನು ಹೇಳುವುದೊಂದು ಮಾತು. ಕಥಾಂಜಲಿಯು ಪ್ರೋತ್ಸಾಹದ ಕ್ಷಾಮದಿಂದ ತಪಿಸುತ್ತಿದ್ದಾಗ ಮುಂದೆ ಬಂದು, ಉದಾರವಾಗಿ ಕೈ ನೀಡಿ, ಅದರ ಮೇಲೆ ನೂರಾರು ರೂಪಾಯಿಗಳನ್ನು ವೆಚ್ಚ ಮಾಡಿರುವವರು ನೀವು..... ಬೇಕಾದವರು ಬೇಕಾದ್ದನ್ನು ಅಂದುಕೊಳ್ಳಲಿ. ಅದುದರಿಂದ ಆಗುವುದು ತಾನೆ ಏನು? ಆದರೆ ಅಕಾರಣವಾಗಿ ಯಾರ ಗೋಜಿಗೂ ಹೋಗದೆ ಇರುವ ನನ್ನಂತಹ ನಿರಪರಾಧಿಗಳನ್ನು ಬಯಲಿಗೆಳೆದು ಮರುನುಡಿಗಳನ್ನಾಡುವುದು ಮಾತ್ರ ಅನುಚಿತ; ಈ ಬಗೆಯ ವರ್ತನವು ತಮ್ಮ ಉದ್ದೇಶವನ್ನು ಸಫಲಗೊಳಿಸದಿರುವುದು ಮಾತ್ರವಲ್ಲದೆ ಹಲವು ವಿಧದಲ್ಲಿ ತಮಗೆ ಹಾನಿಕರವಾಗಿ ಪರಿಣಮಿಸಬಹುದೆಂದು ಸ್ನೇಹಪೂರ್ವಕವಾಗಿ ಎಚ್ಚರಿಸಲಿಚ್ಛಿಸುತ್ತೇನೆ.

ಅ.ನ. ಕೃಷ್ಣರಾಯ

೫. ೯. ೧೯೩೧
'ಕಥಾಂಜಲಿ' ಕಾರ್ಯಾಲಯ, ಬೆಂಗಳೂರು

### (ಈ) ಶ್ರೀ ಬಿ. ಎಸ್. ಗುಪ್ತರಿಂದ

ಪ್ರಿಯ ಮಿತ್ರರಾದ ಶ್ರೀಯುತ ಅ. ನ. ಕೃಷ್ಣರಾಯರ ಸಮಕ್ಷಮಕ್ಕೆ.

ತಾವು ಸ್ನೇಹಭಾವದಿಂದ ಪ್ರೇರೇಪಿತರಾಗಿ, ನಮ್ಮ ಸಂಪಾದಕೀಯ ಲೇಖನದ ಹಲವು ಭಾಗಗಳನ್ನು ಖಂಡಿಸಿ ಬರೆದ ತಮ್ಮ ಪತ್ರವನ್ನು ಆಮೂಲಾಗ್ರವಾಗಿ ಒಮ್ಮನಸ್ಸಿನಿಂದ ಓದಿನೋಡಿದೆವು; ನಿಮ್ಮ ಪತ್ರದ ಬೆಳಕಿನಲ್ಲಿ ನಮ್ಮ ಲೇಖನವನ್ನು

ಪರಿಶೀಲಿಸಿ ನೋಡಿದೆವು; ತಮ್ಮ ಅಪೇಕ್ಷೆಯಂತೆ ನಿಮ್ಮ ಪತ್ರವನ್ನು 'ಕಥಾಂಜಲಿ'ಯಲ್ಲಿ ಪ್ರಕಟಿಸಿರುವುದಲ್ಲದೆ, ಆ ಪತ್ರಕ್ಕೆ ನಮ್ಮ ಪ್ರತ್ಯುತ್ತರವನ್ನೂ ಕೊಟ್ಟಿರುವೆವು.

ಪ್ರಿಯಮಿತ್ರರೇ, ನಾವು ತಮ್ಮ ಮೇಲೆ 'ನಿರಾಧಾರ'ವಾದ 'ಆರೋಪ'ಗಳನ್ನು 'ಹೊರಿಸಿರು'ವೆವೆಂದು ತಮ್ಮ ಪತ್ರದಲ್ಲಿ ಬರೆದಿದ್ದೀರಿ. ಇನ್ನೊಬ್ಬರ ಮೇಲೆ ನಿರಾಧಾರವಾದ ಆರೋಪಗಳನ್ನು ಹೊರಿಸುವುದು ನಮ್ಮ ಸ್ವಭಾವವೂ ಅಲ್ಲ. 'ಕಥಾಂಜಲಿ'ಯ ನೀತಿಯೂ ಅಲ್ಲ ಎಂಬುದನ್ನು ತಮಗೆ ತಿಳಿಸಬಯಸುತ್ತೇನೆ.

ತಾವು 'ಕಥಾಂಜಲಿ'ಯ ಸಂಪಾದಕತ್ವವನ್ನು ಬಿಟ್ಟ ವಿಚಾರವಾಗಿ ಹಲವು ಮಾತುಗಳನ್ನು ಹೇಳಿದ್ದೀರಿ. ತಾವು 'ಕಥಾಂಜಲಿ'ಯನ್ನು ನಡುನೀರಿನಲ್ಲಿ ಕೈಬಿಟ್ಟದ್ದು 'ಸಟೆ'ಯೆಂದೂ, 'ಕಥಾಂಜಲಿ'ಯ ಸಂಪಾದಕ ವೃತ್ತಿಯನ್ನು ಬಿಟ್ಟದ್ದು 'ಈ ಸರಳುಗಳ ಪೆಟ್ಟಿನಿಂದದು ಜರ್ಜರಿತವಾಗಿ ಮುಳುಗಿ ಹೋಗಲಿ' ಎಂಬ ಉದ್ದೇಶದಿಂದಲೂ ಅಲ್ಲ ಎಂದು ಸೂಚಿಸಿದ್ದೀರಿ. ತಮ್ಮ ಉದ್ದೇಶವು ಶ್ಲಾಘನೀಯವಾದದ್ದು. ನಾವಾವರೂ ನಮ್ಮ ಸಂಪಾದಕೀಯ ಲೇಖನದಲ್ಲಿ ತಾವು ಈ ಉದ್ದೇಶವನ್ನಿಟ್ಟುಕೊಂಡಿದ್ದಿರೆಂದಾಗಲಿ, ಇಟ್ಟಕೊಂಡುವಿರೆಂದಾಗಲೀ ಹೇಳಿಲ್ಲ. ಪರಿಸ್ಥಿತಿಯ ಸಿಂಹಾವಲೋಕನವನ್ನು ಮಾಡುತ್ತಾ 'ಕಥಾಂಜಲಿ'ಯ ಮೇಲೆ ಅಂತಹ ಸರಳುಗಳ ಪ್ರಯೋಗವಾಯಿತೆಂದು ಹೇಳಿರುವೆವು. ಇಲ್ಲಿ ಅಪಾರ್ಥಕ್ಕೆ ಕಾರಣವಿಲ್ಲ. ತಮ್ಮ ಸಂಪಾದಕೀಯ ಭರತವಾಕ್ಯವು ಅಂತಹ ಸರಳುಗಳ ಪ್ರಯೋಗಕ್ಕೆ ಕಾರಣಕಾರಿಯೆಂದು ನಾವು ನಂಬುತ್ತೇವೆ. ಸುಬೋಧದ ಸಂಪಾದಕ ಟೀಕೆಯನ್ನು ಸಹ ತಮ್ಮ ಸಂಪಾದಕೀಯ ಭರತವಾಕ್ಯವನ್ನೇ ಅಡಿಗಲ್ಲನ್ನಾಗಿ ಮಾಡಿಕೊಂಡಿದೆಯೆನ್ನುವುದು ಎಲ್ಲರಿಗೂ ತಿಳಿದ ವಿಚಾರ. ಆದರೆ ತಾವು ವೈಯಕ್ತಿಕವಾಗಿ ಅಂತಹ ಟೀಕೆ ಟಿಪ್ಪಣಿಗಳನ್ನು ಪ್ರೇರೇಪಿಸುವಿರೆಂದು ನಾವು ಭಾವಿಸುವುದಿಲ್ಲ. ಅಲ್ಲದೆ ತಾವು ಕೃತ್ಯವನ್ನು ಮಾಡಿರುವಿರೆಂದು ಯಾರು ಹೇಳಿದರೂ ನಾವದನ್ನು ನಂಬಲಾರೆವು.

'ಕಥಾಂಜಲಿ'ಯ ಪ್ರಕಟಣದ ಬಗ್ಗೆ ತಾವು ಕೆಲವು ವಿಚಾರಗಳನ್ನು ಹೇಳಿದ್ದೀರಿ. ಪತ್ರಿಕಾರಂಗದ ಕಷ್ಟಸುಖಗಳನ್ನು ಬಲ್ಲವರು ತಾವು. ಸಂಪಾದಕರ ಹಾಗೂ ಪ್ರಕಾಶಕ ತೊಂದರೆಗಳು ಎಂತಹುವೆಂಬುದು ತಮಗೆ ಗೊತ್ತು. ಅದರಲ್ಲಿಯೂ ಪತ್ರಿಕೆಯು ಆರ್ಥಿಕ ದುಸ್ಥಿತಿಯಲ್ಲಿರುವಾಗ ಸಂಪಾದಕರೂ ಪ್ರಕಾಶಕರೂ ಎಂತಹ ಕಷ್ಟ ನಿಷ್ಠೂರಗಳನ್ನು ಎದುರಿಸಬೇಕೆಂದುದನ್ನು ತಾವು ತಿಳಿಯದವರಲ್ಲ. ಹೀಗಿರುವಲ್ಲಿ ತಾವು ಮುದ್ರಣ ಮುಂತಾದ ಇತರ ವಿಚಾರಗಳಲ್ಲಿ ಮಾಡಿರುವ ಆಪಾದನೆಯ ವಿಚಾರವಾಗಿ ನಾವು ಹೆಚ್ಚು ಹೇಳಲೆಳಸುವುದಿಲ್ಲ.

ಇನ್ನು ತಾವು 'ಕಥಾಂಜಲಿ'ಯನ್ನು ಕೈಬಿಟ್ಟ ವಿಚಾರ. ಈ ಸಂದರ್ಭದಲ್ಲಿ ಟಾಗೋರ್ ಕಂಪೆನಿಯವರಿಗೂ ತಮಗೂ ನಡೆದಿದ್ದ ಹಲವು ಕರಾರುಗಳ ವಿಚಾರಗಳನ್ನು ಗಮನಕ್ಕೆ ತರಲು ಬಯಸುತ್ತೇವೆ. 'ಕಥಾಂಜಲಿ'ಯ ಪ್ರಕಟಣದಿಂದ ಲಾಭ ಬರುವವರೆಗೂ, ತಾವು ತಮ್ಮ 'ಸಂಪಾದಕೀಯ ವೃತ್ತಿ'ಗಾಗಿ ಯಾವ ಪ್ರತಿಫಲವನ್ನೂ ಅಪೇಕ್ಷಿಸುವುದಿಲ್ಲವೆಂದು ತಾವು ಒಪ್ಪಿಕೊಂಡಿದ್ದುದ್ದು ತಮಗೆ ಜ್ಞಾಪಕವಿರಬಹುದು. ಅಲ್ಲದೆ, 'ಕಥಾಂಜಲಿ' ನಷ್ಟವನ್ನೆಲ್ಲಾ ಪ್ರಕಾಶಕರೇ ವಹಿಸಬೇಕೆಂಬ ಷರತ್ತು ತಮಗೆ ನೆನಪಿರಬಹುದು. ಹೋದ ವರ್ಷದ ಪ್ರಾರಂಭದಲ್ಲಿ, ತಮ್ಮ 'ಸಂಪಾದಕ ವೃತ್ತಿಗೆ ಪ್ರತಿಫಲವು ಬೇಕೆಂದು ತಾವು ಕೇಳಿದ್ದನ್ನು ತಾವು ಮರೆತಿರಲಾರಿರಿ, 'ಕಥಾಂಜಲಿ'ಯ ತಲೆಯ ಮೇಲೆ ಸಾಲದ ಹೊರೆಯಿರುವುದರಿಂದಲೂ ವರ್ಷಾರಂಭದಲ್ಲಿ ಪತ್ರಿಕೆಯು ವೃದ್ಧಿಗೆ ಬರುವ ಸೂಚನೆಯು ತೋರದಿದ್ದುದರಿಂದಲೂ, ಅಂತಹ ಪ್ರತಿಫಲವನ್ನು ತಮಗೆ ಕೊಡಲು ಸಾಧ್ಯವಿಲ್ಲವೆಂದೂ 'ಕಥಾಂಜಲಿ'ಯ ದೆಸೆಯಿಂದ ಅದುವರೆಗೆ ಉಂಟಾಗಿದ್ದ ನಷ್ಟದಲ್ಲಿ ಸ್ವಲ್ಪ ಭಾಗವನ್ನು ವಹಿಸುವುದಾದರೆ ಪತ್ರಿಕೆಯನ್ನು ತಮಗೆ ವಹಿಸಲು ಸಿದ್ಧರಿರುವೆವೆಂದೂ, ಪ್ರಕಾಶಕರು ತಮಗೆ ತಿಳಿಸಿದ್ದನ್ನೂ ತಾವು ಮರೆತಿರಲಾರಿರಿ.

ಹೀಗೆಂದು ಮಾತ್ರಕ್ಕೆ ತಾವು 'ಕಥಾಂಜಲಿ'ಗೆ ಮಾಡಿರುವ ಸೇವೆಯನ್ನು ನಾವು ನಿರಾಕರಿಸಿರುವೆವೆಂದಲ್ಲ; ಅಥವಾ ತಾವು ತಮ್ಮ ಪತ್ರದಲ್ಲಿ ಸೂಚಿಸಿರುವಂತೆ ತಾವು 'ಸಂಪಾದಕತನ'ವನ್ನು ಬಿಟ್ಟು ಕೊಟ್ಟದ್ದಾಗಿ ನಾವು 'ಯಾವ ವಿಷಾದವನ್ನು ಸೂಚಿಸಲಿಲ್ಲವೆಂದಲ್ಲ. ತಾವು ತಮ್ಮ 'ಭರತ ವಾಕ್ಯವನ್ನು' ಹಾಡಿದ ಮುಂದಿನ ಸಂಚಿಕೆಯಲ್ಲಿಯೇ ನಾವು ತಮ್ಮ ನಿಷ್ಕ್ರಮಣಕ್ಕಾಗಿ ನಮ್ಮ ವಿಷಾದವನ್ನು ಸೂಚಿಸಿರುವುದು ನಮ್ಮ ವಾಚಕರಿಗೆ ತಿಳಿದಿರುವುದಲ್ಲದೆ, ಈ ವಿಚಾರವು ತಮ್ಮ ಗಮನಕ್ಕೆ ಬರದೆಯಿಲ್ಲ. ನಿಮ್ಮ ವಿಚಾರದಲ್ಲಿ ನಮಗೆ ಪೂಜ್ಯಭಾವನೆಯಿದೆ. ತಾವು ತಮ್ಮ 'ಸಂಪಾದಕೀಯ' ವೃತ್ತಿಯನ್ನು ಬಿಟ್ಟ ಮೇಲೆ ತಮ್ಮಲ್ಲಿದ್ದ ಕೆಲವು ಬರಹಗಳನ್ನು ನಮ್ಮಲ್ಲಿ ಕಳುಹಿಸಿಕೊಟ್ಟದ್ದು ನಿಜ. ಆದರೆ ಅದು ಸಂಪಾದಕವೃತ್ತಿಯ ಕರ್ತವ್ಯವೆಂದು ನಾವು ನಂಬುತ್ತೇವೆ. ಯಾರಾದರೂ ಸರಿ, ತಮ್ಮ ವೃತ್ತಿಯಿಂದ ನಿವೃತ್ತರಾಗುವಾಗ ಆ ವೃತ್ತಿಯ ದೃಷ್ಟಿಯಿಂದ ತಮ್ಮಲ್ಲಿ ಸಂಚಯವಾಗಿರುವ ಸಮಸ್ತ ಸ್ವತ್ತುಗಳನ್ನು ಅದರ ಮುಂದಿನ ಅಧಿಕಾರಿಗಳಿಗೆ ಬಿಟ್ಟುಕೊಡುವುದು ನೀತಿ ಮತ್ತು ಧರ್ಮ. ಈ ಸಂದರ್ಭದಲ್ಲಿ ತಮಗೆ ಈ ಒಂದು ವಿಚಾರವನ್ನು ತಿಳಿಸಬಯಸುತ್ತೇವೆ. ತಾವು ತಮ್ಮಲ್ಲಿಗೆ ಪ್ರಕಟಣೆಗಾಗಿ ಬಂದಿದ್ದ ಹಲವು ಲೇಖನಗಳನ್ನು, ವಿಮರ್ಶೆಗಾಗಿ ಬಂದಿದ್ದ ಪುಸ್ತಕಗಳನ್ನು ನಮಗೆ ಕೊಡಲಿಲ್ಲ. ಶ್ರೀಮತಿ ಪಡಕೋಣ ವಸಂತಾಬಾಯಿಯವರೂ, ಶ್ರೀಮತಿ, ವಾಣಿಯವರೂ, ಇನ್ನು ಕೆಲವರೂ, ತಮ್ಮ ಲೇಖನಗಳನ್ನು ಪ್ರಕಟಿಸಬೇಕೆಂದು ನಮಗೆ ಪತ್ರ ಬರೆದಾಗ, ಆ ಲೇಖನಗಳು ತಮ್ಮಿಂದ ನಮಗೆ ತಲುಪಿರಲಿಲ್ಲವಾಗಿ, ನಾವು ಆ ವಿಚಾರವಾಗಿ ತಮ್ಮನ್ನು ಪ್ರಶ್ನಿಸಿದ್ದು ತಮಗೆ

ಜ್ಞಾಪಕವಿರಬಹುದು. ತಮ್ಮ ಸಂಪಾದಕತ್ವದಲ್ಲಿ 'ಕಥಾಂಜಲಿ'ಯಲ್ಲಿ ವಿಮರ್ಶೆಯನ್ನು ಬಯಸಿ ಬಂದ ಪುಸ್ತಕಗಳ ಪಟ್ಟಿ ತಾವೇ ಪ್ರಕಟಿಸಿದ್ದೀರಿ. 'ಹಕ್ಕಿ ಹಾರುತಿದೆ'ಯ ವಿಮರ್ಶೆಯೊಂದನ್ನು ಬಿಟ್ಟು ಮಿಕ್ಕ ಗ್ರಂಥಗಳ ವಿಮರ್ಶೆಯನ್ನಾಗಿ, ಅಥವಾ ಗ್ರಂಥಗಳನ್ನಾಗಿ ತಾವು ನಮಗೆ ಕಳುಹಿಸಲಿಲ್ಲ. ಇದರಿಂದ 'ಕಥಾಂಜಲಿ'ಯು ಆರ್ಥಿಕ ದುಸ್ಥಿತಿಯಲ್ಲಿ ನರಳುತ್ತಿದ್ದಾಗ ತಾವು ಪ್ರತಿಫಲವನ್ನಪೇಕ್ಷಿಸಿ, ನಂತರ 'ಕಥಾಂಜಲಿ'ಯನ್ನು ಬಿಟ್ಟು ಬಿಟ್ಟಿರಿ. 'ನುರಿತ' ಸಾಹಿತಿಗಳಾದ ತಾವು 'ಕಥಾಂಜಲಿ'ಯ ಸಂಪಾದಕತ್ವಕ್ಕೆ ಭರತವಾಕ್ಯವನ್ನು ಹಾಡಿದ್ದು, ಇನ್ನೂ ಎಳೆಯತನದಲ್ಲಿರುವ 'ಕಥಾಂಜಲಿ'ಗೆ ತಡೆಯಲಾರದ ಪೆಟ್ಟೆಂಬುದರಲ್ಲಿ ಸಂದೇಹವಿಲ್ಲವೆಂದು ಈ ಮುಂದೆ ಕಥಾಂಜಲಿಯಲ್ಲಿ ಪ್ರಕಟವಾಗಿತ್ತು. (ಸಂಪುಟ ೨; ಸಂಚಿಕೆ ೩; ವಿಜ್ಞಾಪನೆ) ಆಗ ತಾವು ಆ ವಿಚಾರವಾಗಿ ಯಾವ ಆಕ್ಷೇಪಣೆಯನ್ನು ಮಾಡದೆ ಸುಮ್ಮನಿದ್ದು, ಈಗ ನಾವು ಹೇಳಿರುವ ವಿಷಯಗಳೆಲ್ಲವೂ ತಮಗೆ ತಿಳಿದಿದ್ದು, ತಾವು ಅಕಾರಣವಾಗಿ ನಮ್ಮ ಸಂಪಾದಕೀಯ ಲೇಖನವನ್ನು ಖಂಡಿಸಿರುವಿರಿ

'ಆಹುತಿ'ಯ 'ವಿಮರ್ಶೆ'ಯ ವಿಚಾರವಾಗಿ ಹಲವು ಮಾತುಗಳು. ಈ ವಿಚಾರವಾಗಿ ತಾವು 'ಆಹುತಿ' ಗ್ರಂಥದ ಮೇಲೆ ಕಥಾಂಜಲಿಯಲ್ಲಿ ಅಂತಹ ಕೊಡಲಿ ಪೆಟ್ಟಿನ ವಿಮರ್ಶೆ ಬಂದಾಗ ಕೂಡ ತಮ್ಮ 'ಪ್ರೇಮವು ವಿಚಲಿತವಾಗಲಿಲ್ಲ'ವೆಂದು ಹೇಳಿದ್ದೀರಿ. ಈ ಸಂದರ್ಭದಲ್ಲಿ 'ಕಥಾಂಜಲಿ'ಯ ವಿಮರ್ಶೆಯು 'ಆಹುತಿ'ಯನ್ನು ಕುರಿತುದಾಗಿತ್ತೇ ವಿನಾ, ಅದರ ಗ್ರಂಥಕರ್ತರನ್ನು ಕುರಿತುದಾಗಿರಲಿಲ್ಲವೆಂದೂ, 'ಕಥಾಂಜಲಿ'ಯ 'ಆಹುತಿ'ಯನ್ನು ಸಾಹಿತ್ಯದೃಷ್ಟಿಯಿಂದ ಖಂಡಿಸುವುದಾದರೂ, ತಮ್ಮ ಮೇಲೆ 'ಕಥಾಂಜಲಿ'ಗೆ ಅಭಿಮಾನವಿದೆಯೆಂದೂ ಹೇಳಬಯಸುವೆವು.

ಕಥಾಂಜಲಿಯ 'ಗ್ರಂಥವಿಮರ್ಶೆ'ಯಲ್ಲಿ ವೈಯಕ್ತಿಕ ಪ್ರೇರೇಪಣೆಗಳಿಗೆ ಎಡೆಯಿರಬಾರದೆಂಬುದೇ ನಮ್ಮ ಬಯಕೆ. 'ಕಥಾಂಜಲಿ'ಯು ಆ ಗುರಿಯನ್ನು ಸಾಧಿಸಿದ್ದಕ್ಕಾಗಿ ನಾವು ಸಂತೋಷಪಡದಿರಲಾರೆವು. ಈ ಪ್ರಸ್ತಾಪದಲ್ಲಿ ತಮ್ಮ ಇತರ ಗ್ರಂಥಗಳ ವಿಚಾರವಾಗಿ 'ಕಥಾಂಜಲಿ'ಯು ಕೊಡಲಿಯ ಪೆಟ್ಟಿನ ವಿಮರ್ಶೆಗಳನ್ನು ಮಾಡಿಲ್ಲವೆಂದೂ ಕೆಲವು ಸಂದರ್ಭಗಳಲ್ಲಿ ತಮ್ಮ ಗ್ರಂಥಗಳನ್ನು ಹೊಗಳಿದೆಯೆಂದೂ ಹೇಳಬಯಸುವೆವು. ಗ್ರಂಥದ ಖಂಡನ ಮಂಡನಗಳು, ಲೇಖಕರ ಮತ್ತು ವಿಮರ್ಶಕರ ಸ್ನೇಹ ದ್ವೇಷಗಳ ಚಿಹ್ನೆಗಳೆಂದು ಬಯಸುವುದು ಮೂರ್ಖತನವಲ್ಲದೆ ಬೇರೆಯಲ್ಲ.

ತಮ್ಮ ಒತ್ತಾಯವಿಲ್ಲದಿದ್ದಲ್ಲಿ ಹಲವು ಲೇಖಕರು ತಮ್ಮ ಕಥೆಗಳನ್ನು 'ಕಥಾಂಜಲಿ'ಗೆ ಕಳುಹಿಸುತ್ತಿರಲಿಲ್ಲೆಂದು ತಿಳಿದಿದ್ದೀರಿ. ಈ ವಿಚಾರವಾಗಿ ನಾವು ಹೇಳಬಯಸುವುದಿಷ್ಟೆ. ಸಾಹಿತ್ಯಸೇವೆಯನ್ನು ಮಾಡುತ್ತಿರುವವರಿಗೆ 'ತಮ್ಮಿಂದಾದ ಸಹಾಯವನ್ನು ಮಾಡುವುದು ಸಮಸ್ತ ಸಾಹಿತ್ಯೋಪಾಸಕರ ಕರ್ತವ್ಯವೆಂದು ನಾವು ಬಗೆಯುತ್ತೇವೆ.

ತಾವು ತಮ್ಮ ಸಂಪಾದಕೀಯ ಲೇಖನವನ್ನು ಪೂರ್ಣವಾಗಿ ಗ್ರಹಿಸದೆ ಹೋದುದಕ್ಕಾಗಿ ಈ ಪತ್ರವನ್ನು ಬರೆಯಬೇಕಾಗಿ ಬಂತು.

ಕೊನೆಯಲ್ಲಿ ತಾವು ಕಥಾಂಜಲಿಗೆ ಮಾಡಿರುವ ಸೇವೆಗಾಗಿ ತಮ್ಮನ್ನು ವಂದಿಸುವೆವಲ್ಲದೆ, ತಾವು ನಮ್ಮ ಮೇಲೆ ಮಮತೆಯಿಟ್ಟು, ಪ್ರೇಮಪುರಸ್ಕಾರವಾಗಿ ಖಂಡನಾ ಪ್ರಯತ್ನ ಬರೆದಿದ್ದುದಕ್ಕಾಗಿ, ತಮ್ಮನ್ನು ಮತ್ತೊಮ್ಮೆ ವಂದಿಸುವೆವು. ◆

## ೩೬. 'ಶಿವಾನುಭವ' ಹಳಕಟ್ಟಿಯವರು

## (೧೮೮೦-೧೯೬೪)

✍ ಶ್ರೀ ಬಿ. ಶಾಮಸುಂದರ

ಫಕೀರಪ್ಪ ಗುರುಬಸಪ್ಪ ಹಳಕಟ್ಟಿಯವರು ಧಾರವಾಡದ ನೇಕಾರರ ಒಂದು ಕುಟುಂಬದಲ್ಲಿ ಜನಿಸಿದರು. ಇವರ ತಂದೆ ಗುರುಬಸಪ್ಪನವರು. ಇವರು ಸಾಹಿತಿಗಳೂ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಸಂಸ್ಥಾಪಕ ಸದಸ್ಯರೂ ಆಗಿದ್ದರು. ಇವರ ಪೂರ್ವಜರು ಧಾರವಾಡ ಹಳಕಟ್ಟಿ ಗ್ರಾಮದವರಾಗಿದ್ದುದರಿಂದ 'ಹಳಕಟ್ಟಿ' ಎಂದು ಕರೆಯುತ್ತಿದ್ದದ್ದು ಬರುಬರುತ್ತ ಹಳಕಟ್ಟಿಯಾಯಿತು.

ಧಾರವಾಡದ ಸರ್ಕಾರಿ ಮಾಧ್ಯಮಿಕ ಶಾಲೆ ಸೇರಿ ೧೮೯೬ರಲ್ಲಿ ಮೆಟ್ರಿಕ್ ಪರೀಕ್ಷೆಯನ್ನು ಪಾಸು ಮಾಡಿದರು. ಅವರ ಜೊತೆಗೆ ಅದೇ ವರ್ಷದಲ್ಲಿ ಆಲೂರ ವೆಂಕಟರಾಯರೂ ಮೆಟ್ರಿಕ್ ಪಾಸಾದರು. (ಆಲೂರರು ಹುಟ್ಟಿದ್ದು ೧೮೮೦ ರಲ್ಲಿಯೇ.)

ಮುಂದೆ ಹಳಕಟ್ಟಿಯವರು ಎಂ.ಎ. ಪದವಿಗೆ ವ್ಯಾಸಂಗ ಮಾಡಿದರೂ ಪರೀಕ್ಷೆಗೆ ಕುಳಿತುಕೊಳ್ಳಲಿಲ್ಲ. ೧೯೦೪ರಲ್ಲಿ ಎಲ್.ಎಲ್.ಬಿ. ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ಪಾಸು ಮಾಡಿ ಬೆಳಗಾಂವಿಯಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು. ಆಮೇಲೆ ವಿಜಾಪುರಕ್ಕೆ ಬಂದು ವಕೀಲಿ ವೃತ್ತಿಯನ್ನು ಮುಂದುವರಿಸಿ ಒಳ್ಳೆ ಹೆಸರು ಪಡೆದರು. ಆಗಿನ ಸರ್ಕಾರವು ಅವರ ಕೀರ್ತಿಯನ್ನು ಗಮನಿಸಿ, ಅವರನ್ನು ಸರ್ಕಾರಿ ಪ್ರಾಸಿಕ್ಯೂಟರ್ ಆಗಿ ನೇಮಿಸಿತು.

ಆದರೆ ಕೈತುಂಬ ಹಣ ತರುವ ಈ ವೃತ್ತಿಯನ್ನು ಬಿಟ್ಟು ಹಳಕಟ್ಟಿಯವರು ತಮ್ಮ ಹೆಸರಿಗೆ ತಕ್ಕಂತೆ 'ಫಕೀರ'ರಾದರು. ಎಂದರೆ ವಚನ ಸಾಹಿತ್ಯದ ತಿರುಕರಾದರು. ಮನೆ ಮನೆ ಮುಂದೆ ನಿಂತು, ವಚನ ಮುಂತಾದ ಸಾಹಿತ್ಯದ ತಾಳೆಗರಿಗಳಿಗಾಗಿ ಕೈಚಾಚಿ ಬೇಡಿದರೆ ಜನ ಹಾಗೇ ಕರೆದಾರು! ಹಳಕಟ್ಟಿಯವರು ಹೀಗೆ ಫಕೀರರಾಗದಿದ್ದರೆ, ವಚನಸಾಹಿತ್ಯಕ್ಷೇತ್ರಕ್ಕೆ, ಕನ್ನಡಿಗರಿಗೆ ನಮ್ಮ ಇಡೀ ಕನ್ನಡ ಸಾಹಿತ್ಯಕ್ಕೆ ಎಷ್ಟು ನಷ್ಟವಾಗುತ್ತಿತ್ತು! ತಾವು ಸಂಪಾದಿಸಿದ ವಚನ ಸಾಹಿತ್ಯ ಬೆಳಕು ಕಾಣಲು ಕನ್ನಡಿಗರ ಮನೆ ಮನೆ ಮುಟ್ಟಲು ಮುದ್ರಿಸಬೇಕೆಂದು ಅದಕ್ಕಾಗಿ ತಮ್ಮ ಮನೆಯನ್ನೇ ಮಾರಿ ೨೨-೧೧-೧೯೨೫ರಂದು 'ಹಿತಚಿಂತಕ' ಮುದ್ರಣಾಲಯವನ್ನು ಸ್ಥಾಪಿಸಿದರು.

## 'ಶಿವಾನುಭವ'

ಕನ್ನಡ ಪತ್ರಿಕೋದ್ಯಮ ಮರೆಯದಂತಹ ಕೆಲಸವನ್ನು ಹಳಕಟ್ಟಿಯವರು ಮುಂದೆ ಕೈಗೊಂಡರು. ಮುಂದೆ ತಮ್ಮ ಜೀವನದಲ್ಲಿ ಸ್ಥಾಪಿಸಿದ ಎಲ್ಲಾ ಕಾರ್ಯಗಳಿಗೂ ಪತ್ರಿಕೋದ್ಯಮವನ್ನೇ ಕೇಂದ್ರವನ್ನಾಗಿ ಮಾಡಿಕೊಂಡರು. ಅದರ ಮೂಲಕವೇ ಅವರ ಸಾಹಸದ ವಿವಿಧ ಸಾಹಿತ್ಯ ರಸಗಂಗೆ ಒಂದೇ ಸಮನೆ ಹರಿದುಬಂತು. ವೀರಶೈವ ಸಾಹಿತ್ಯದ ಸರ್ವತೋಮುಖ ಬೆಳವಣಿಗೆಗೆ ಮತ್ತು ಪ್ರಚಾರಕ್ಕೆ ವಚನಸಾಹಿತ್ಯದ ಪ್ರಕಟಣೆಗೆ ಹಾಗೂ ಸಾಂಸ್ಕೃತಿಕ ಮತ್ತು ಐತಿಹಾಸಿಕ ವಿಷಯಗಳನ್ನು ಪ್ರಕಟಿಸಲು ೧೯೨೬ರಲ್ಲಿ 'ಶಿವಾನುಭವ' ತ್ರೈಮಾಸಿಕ ಪ್ರಾರಂಭಿಸಿದರು. ಶಿವಾನುಭವ ವಿದ್ವಾಂಸರ ಗಮನ ಸೆಳೆಯಿತು. ಮುಂದೆ ಈ ಪತ್ರಿಕೆ ದ್ವೈಮಾಸಿಕವಾಗಿ ಅನಂತರ ಮಾಸಪತ್ರಿಕೆಯಾಯಿತು. ಈ ರೀತಿ ಒಂದು ತ್ರೈಮಾಸಿಕ ಪತ್ರಿಕೆ ಮಾಸಪತ್ರಿಕೆಯಾಗಿ ಪ್ರಕಟವಾಗಲು ಅದನ್ನು ಪ್ರಕಟಿಸುತ್ತಿದ್ದ ಹಳಕಟ್ಟಿಯವರ ಆಸಕ್ತಿ, ಶ್ರಮದ ದುಡಿಮೆ ಕಾರಣವಾಗಿತ್ತೇ ವಿನಹ ಕನ್ನಡ ಜನರ ಪ್ರೋತ್ಸಾಹವಂತು ಅಲ್ಲವೆನ್ನಬೇಕಾಗಿದೆ. 'ಶಿವಾನುಭವ' ಬಹು ಉತ್ತಮ ಪತ್ರಿಕೆ ಎನಿಸಿಕೊಂಡಿತ್ತು ನಿಜ. ಆದರೆ ಅದರ ಚಂದಾದಾರರ ಸಂಖ್ಯೆ ಎಂದೂ ೨೦೦ ಮಂದಿಗಿಂತ ಹೆಚ್ಚಾಗಲಿಲ್ಲ. ಇದಕ್ಕೆ ಆಗಿನ ಕನ್ನಡ ಮಂದಿಯನ್ನು ದೂಷಿಸಿದರೆ ಫಲವಿಲ್ಲ. ಕನ್ನಡನಾಡಿನ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿ ಆಗ ಕನ್ನಡದ ಅಭಿವೃದ್ಧಿಗೆ ನೆರವಾಗಿರಲಿಲ್ಲ. ಇಂತಹ ಆರ್ಥಿಕ ಸಂಕಷ್ಟ ಸಮಯದಲ್ಲೂ ಹಳಕಟ್ಟಿಯವರು ಪತ್ರಿಕೆಯನ್ನು ಹಣ ಸಂಪಾದನೆಗಾಗಿ, ಲಾಭಕ್ಕಾಗಿ ಬಳಸದೆ ತಮ್ಮ ವಚನ ಸಂಪಾದನೆಯ ಪ್ರಕಟಣೆಗಾಗಿ ಕನ್ನಡ ನಾಡುನುಡಿಯ ಅಭಿವೃದ್ಧಿಗಾಗಿ ಬಳಸಿದರು. ಪತ್ರಿಕೆಯಲ್ಲಿ ಜಾಹೀರಾತುಗಳನ್ನು ಪ್ರಕಟಿಸಬಹುದಿತ್ತು. ಹಣದ ಮುಗ್ಗಟ್ಟಿನಿಂದ ಸ್ವಲ್ಪವಾದರೂ ಪಾರಾಗಬಹುದಿತ್ತು. ಆದರೆ ಫಕೀರಪ್ಪನವರ ಪತ್ರಿಕೆಯಲ್ಲಿ ಒಂದೂ ಜಾಹೀರಾತು ಪ್ರಕಟವಾಗಲಿಲ್ಲ. ಹಳಕಟ್ಟಿಯವರು ಅದನ್ನು ತಮ್ಮ ಮನಸ್ಸಿಗೆ ತೆಗೆದುಕೊಳ್ಳಲಿಲ್ಲ.

ಇಂದಿನ ಪರಿಸ್ಥಿತಿಗೆ, ಯಾವ ರೀತಿಯಲ್ಲೂ ಹೋಲಿಸಲಾಗದಂಥ ವಿಭಿನ್ನ ರಾಜಕೀಯ ಸಾಮಾಜಿಕ ಪರಿಸ್ಥಿತಿಯಲ್ಲಿ ಹಾಗೂ ಆರ್ಥಿಕ ಸಂಕಷ್ಟದಲ್ಲಿ ಹಳಕಟ್ಟಿಯವರು ಜಾಹೀರಾತಿಗೆ ಗಮನಕೊಡದೆ, ಧೃತಿಗೆಡದೆ ಪತ್ರಿಕೆ ನಡೆಸಿಕೊಂಡು ಬಂದದ್ದು ಹೆಚ್ಚು ಮಹತ್ವವೆನಿಸುತ್ತದೆ. ಇಂದಿನ ಹೆಚ್ಚು ಪಾಲು ಪತ್ರಿಕೆಗಳು ಕೇವಲ ಜಾಹೀರಾತು ಹಣವನ್ನು ಅವಲಂಬಿಸಿರುತ್ತವೆ. ಸಾರ್ವಜನಿಕ ಮತ್ತು ಖಾಸಗಿ ಉದ್ಯಮಿಗಳಿಂದ, ಸರ್ಕಾರದಿಂದ ಜಾಹೀರಾತು ಪಡೆಯಲು ಇಂದಿನ ಪತ್ರಿಕೆಗಳು ಸ್ಪರ್ಧಿಸುವುದೂ ಉಂಟು. ಇಂದಿನ ಪತ್ರಿಕೋದ್ಯಮವನ್ನು ೧೯೪೭ರ ಹಿಂದಿನ ಪತ್ರಿಕೋದ್ಯಮದೊಂದಿಗೆ ಹೋಲಿಸಿಕೊಂಡು ನೋಡಿದರೆ ನಮಗೆ ಸ್ಪಷ್ಟವಾಗಿ ತಿಳಿದುಬರುವ ವಿಷಯವೆಂದರೆ ಈಗಿನ ಅನೇಕ ಪತ್ರಿಕೆಗಳಿಗೆ ಪತ್ರಿಕೋದ್ಯಮ ಸೇವೆಗಾಗಿ ಉಳಿದಿಲ್ಲ. ಆದರೆ ಸ್ವಾತಂತ್ರ್ಯಕ್ಕೆ ಮೊದಲಿನ ಪತ್ರಿಕೆಗಳು ಜನಕಲ್ಯಾಣ, ದೇಶಾಭಿವೃದ್ಧಿ ಹಾಗೂ ಇತರ ಉದಾತ್ತ ಧ್ಯೇಯಗಳಿಂದ ಕೂಡಿರುತ್ತಿದ್ದವು. ಫಕೀರಪ್ಪನವರು ಮನೆಮಾರಿ ಮುದ್ರಣಾಲಯ ಹಾಕಿದರು. ತಮ್ಮ ಸರ್ವಶಕ್ತಿಯನ್ನು ಉಪಯೋಗಿಸಿ ಪತ್ರಿಕೆ ನಡೆಸಿದರು.

'ಶಿವಾನುಭವ'ದಲ್ಲಿ ವಚನ, ಹಾಡು ಮತ್ತು ಶಿವಶರಣರ ಕುರಿತಾದ ಸಂಶೋಧನಾತ್ಮಕ ಬರಹಗಳನ್ನು ಮಾತ್ರ ಪ್ರಕಟಿಸುತ್ತಿದ್ದರು. ಬಹು ಉತ್ತಮವಾದ ಆ ಲೇಖನಗಳನ್ನು 'ಶಿವಾನುಭವ'ದಲ್ಲಿ ಪ್ರಕಟಿಸುವುದರಿಂದಲೇ ತೃಪ್ತರಾಗದ ಇವರು ಅವುಗಳನ್ನು ಸಂಗ್ರಹಿಸಿ ಗ್ರಂಥರೂಪದಲ್ಲಿ ತಂದರೆ ಇನ್ನಷ್ಟು ಹೆಚ್ಚು ಕಾಲ ಅವು ಉಳಿದು ಜನರ ಕೈಗೆ ದೊರಕಿ ತಮ್ಮ ಉದ್ದೇಶ ನೆರವೇರಬಹುದು ಎಂಬ ಚಿಂತನೆಯಲ್ಲಿ ಶಿವಾನುಭವ ಗ್ರಂಥಮಾಲೆ ಸ್ಥಾಪಿಸಿದರು. ಆ ಗ್ರಂಥಮಾಲೆಯ ಮೂಲಕ ಸುಮಾರು ತೊಂಬತ್ತೊಂದು ಗ್ರಂಥಗಳನ್ನು ಹೊರತಂದರು.

ಹಳಕಟ್ಟಿಯವರು 'ಶಿವಾನುಭವ'ದಲ್ಲಿ 'ಹೃದಯ ನಿವೇದನೆ', 'ಸ್ಫುಟ ವಿಷಯಗಳು' ಎಂಬ ಶೀರ್ಷಿಕೆಗಳಲ್ಲಿ ಸಂಪಾದಕೀಯ ಲೇಖನ ಬರೆಯುತ್ತಿದ್ದರು. ಪತ್ರಿಕೆಯಲ್ಲಿ ಗ್ರಂಥ ವಿಮರ್ಶೆಗಳನ್ನೂ ಪ್ರಕಟಿಸುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಹಳಕಟ್ಟಿಯವರು 'ಶಿವಾನುಭವ'ದಲ್ಲಿ ತಮ್ಮ ಒಂದುನೂರ ಅರವತ್ತೆರಡು ಅಮೂಲ್ಯ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದರು. ಇತರ ಪತ್ರಿಕೆಗಳಲ್ಲೂ ಇವರ ಲೇಖನಗಳು ಪ್ರಕಟವಾಗಿದ್ದುಂಟು. ಶಿವಾನುಭವದಲ್ಲಿ ಚರ್ಚಾತ್ಮಕ ವಿಮರ್ಶಾತ್ಮಕ ಮತ್ತು ಸಂಶೋಧನಾತ್ಮಕ ವಿಚಾರಪೂರ್ಣ ಬರಹಗಳಿಗೆ ಮುಖ್ಯ ಸ್ಥಾನವಿತ್ತು. ಇವರ ಎಲ್ಲಾ ಲೇಖನಗಳೂ ಸಮಾಜ, ಶಿಕ್ಷಣ ಮತ್ತು ಧಾರ್ಮಿಕ ಸುಧಾರಣೆಗಳಿಗೆ ಸಂಬಂಧಿಸಿದವಾಗಿದ್ದವು. ಆಗಿನ ಅವರ ಲೇಖನಗಳಲ್ಲಿ ಸೂಚಿಸಿರುವ ಕೆಲವು ಸಲಹೆಗಳು

ಇಂದೂ ಉಪಯುಕ್ತವೆನಿಸಿವೆ. ಕಾಲ, ದೇಶ, ಜಾತಿ ಮತ್ತು ಗುಂಪು ಇವೆಲ್ಲವನ್ನು ಮೀರಿ ನಿಂತು ಸರ್ವರ ಹಿತದೃಷ್ಟಿಯಿಂದ ಹಳಕಟ್ಟಿಯವರು ತಮ್ಮ ಪತ್ರಿಕೆಯ ಮೂಲಕ ಕನ್ನಡನಾಡಿಗೆ, ನುಡಿಗೆ ಸೇವೆ ಸಲ್ಲಿಸಿದ್ದಾರೆ. ಆರ್ಥಿಕ ಕಷ್ಟನಷ್ಟಗಳಿಗೆ ಹೆದರದೆ 'ಶಿವಾನುಭವ' ಪತ್ರಿಕೆಯನ್ನು ತಮ್ಮ ಕೊನೆಯ ಕಾಲದ ವರೆಗೂ ನಡೆಸಿಕೊಂಡು ಬಂದರು. ೧೯೨೦ರ ವೇಳೆಗೆ ಸುಮಾರು ಒಂದು ಸಾವಿರಕ್ಕೂ ಹೆಚ್ಚು ತಾಳೆಗರಿಗಳ ಗ್ರಂಥಗಳನ್ನು ಸಂಗ್ರಹಿಸಿ ಅವುಗಳ ಸಾಹಿತ್ಯವನ್ನೆಲ್ಲ ಕಾಗದದ ಮೇಲೆ ತಂದು ಕನ್ನಡಿಗರ ಮುಂದಿಟ್ಟರು. ಒಂದು ವಿಶ್ವವಿದ್ಯಾನಿಲಯದ ಅನೇಕ ವಿದ್ವಾಂಸರು ಕೂಡಿ ಮಾಡುವಷ್ಟು ಕೆಲಸವನ್ನು ಹಳಕಟ್ಟಿಯವರು ಒಬ್ಬರೇ ಮಾಡಿದರು. ಅವರ ಸತ್ವಪೂರ್ಣ ವ್ಯಕ್ತಿತ್ವ ಇದಕ್ಕೆ ಕಾರಣವೆನ್ನಬಹುದು. 'ಶಿವಾನುಭವದಲ್ಲಿ ಪ್ರಕಟವಾದ ಕಠಿಣ ಶಬ್ದಗಳ ಅರ್ಥ ವಿವರಣೆಗಾಗಿ 'ಶಿವಾನುಭವ ಶಬ್ದಕೋಶ' ಎಂಬ ವಿವರಣಾತ್ಮಕ ನಿಘಂಟನ್ನು ಪ್ರಕಟಿಸಿದರು.

ಪತ್ರಿಕೆ ನಡೆಸುವುದು ಸುಲಭದ ಕೆಲಸವಲ್ಲ. ಅದಕ್ಕೆ ಬೇಕಾದದ್ದು ಹಣ, ಧೈರ್ಯ, ಬುದ್ಧಿ, ತ್ಯಾಗ ಮತ್ತು ಒಂದು ಗುರಿ. ಹಳಕಟ್ಟಿಯವರಲ್ಲಿ ಹಣ ಒಂದನ್ನು ಬಿಟ್ಟು ಮಿಕ್ಕೆಲ್ಲವೂ ಇದ್ದಿತು. ಸಹನಶೀಲರಾದ ಅವರು ಒಂದೊಂದು ಸಾರಿ ಹಣದ ಮುಗ್ಗಟ್ಟಿನಿಂದ ನೊಂದುಕೊಂಡಿದ್ದುಂಟು.

೧೯೫೫ರ' ಶಿವಾನುಭವ'ದ ಒಂದು ಸಂಚಿಕೆಯಲ್ಲಿ ತಮ್ಮ ಅಳಲನ್ನು ಈ ರೀತಿ ತೋಡಿಕೊಂಡಿದ್ದಾರೆ. 'ನಮ್ಮ ಸಮಾಜದಲ್ಲಿಯ ಯಾವ ಯಾವ ಸ್ವಾಮಿಗಳೂ ವಿದ್ಯಾವಂತರೂ, ವ್ಯಾಪಾರಸ್ಥರೂ, ಕೇವಲ ಕೆಲವು ಅಪವಾದಗಳನ್ನು ಬಿಟ್ಟರೆ ನಮಗೆ ಎಳ್ಳಷ್ಟು ಸಹಾನುಭೂತಿ, ಸಹಕಾರ, ಸಹಾಯ ಏನನ್ನೂ ತೋರಿಸಲಿಲ್ಲ. 'ಧರ್ಮದ ಮರ್ಮ ತಿಳಿಯದ ಸ್ವಾಮಿಗಳು, ಜ್ಞಾನವಿಲ್ಲದ ವಿದ್ಯಾವಂತರ, ಔದಾರ್ಯವಿಲ್ಲದ ವ್ಯಾಪಾರಸ್ಥರೂ ಇದ್ದ ಯಾವ ಸಮಾಜಕ್ಕೆ ಭೂಷಣವು?' ಎಂದು ಹೇಳಿರುವ ಮಾತು ಎಂದಿಗೂ ಅನ್ವಯಿಸುವ ಸತ್ಯವಾಗಿದೆ.

'ಶಿವಾನುಭವ'ದ ಮೂಲಕ ಬೆಳಕು ಕಂಡ ವಚನಗಳು, ಹರಿಹರನ ರಗಳೆ ಮತ್ತು ಇತರರ ರಗಳೆಗಳು, ಶರಣರ ಹಾಡುಗಳು ಅಂದಿನ ಜನರಿಗೆ ವಚನ ವಾಙ್ಮಯದ ವ್ಯಾಪ್ತಿಯೆಷ್ಟೆಂಬುದನ್ನು ಮೊದಲ ಬಾರಿಗೆ ಪರಿಚಯಿಸಿದವೆನ್ನಬಹುದು. ೧೯೫೧, ಫೆಬ್ರವರಿಗೆ ಶಿವಾನುಭವ ಪತ್ರಿಕೆ ತನ್ನ ೨೫ ವರ್ಷಗಳ ಸೇವೆಯನ್ನು ಮುಗಿಸಿತು. ಆಗಿನ ಕಾಲದಲ್ಲಿ ಕನ್ನಡದ ಈ ಪತ್ರಿಕೆ ಯಾರ ಹಂಗೂ ಇಲ್ಲದೆ ತನ್ನ ಸತ್ವದ ಮೇಲೇ ಉಳಿದು ಬೆಳೆದು ಬಂತು. ಅದರ ಸವಿನೆನಪಿಗಾಗಿ ೧೯೫೧ ಡಿಸೆಂಬರ್ ತಿಂಗಳಲ್ಲಿ ಹಳಕಟ್ಟಿಯವರು 'ಶಿವಾನುಭವ'ದ ಬೆಳ್ಳಿ ಸಂಚಿಕೆ ಪ್ರಕಟಿಸಿದರು.

## ಮಾರ್ಗ ಪ್ರವರ್ತಕರು

ಹಳಕಟ್ಟಿಯವರ ಅನೇಕ ಮುಖಗಳ ಸೇವೆಯಲ್ಲಿ ಒಂದು ದೃಷ್ಟಿಯಲ್ಲಿ ಎಲ್ಲವೂ ಬೇಕಾದವೆ. ಹಾಗೆ ಸಲ್ಲಿಸಿದ ಸೇವೆಗಳಲ್ಲಿ ಇವರು ಮೊದಲಿಗರೂ ಆಗಿದ್ದಾರೆ. ಬಸವಣ್ಣನವರ ವಚನಗಳನ್ನು ಪ್ರಥಮವಾಗಿ ಇಂಗ್ಲಿಷ್ ಭಾಷೆಗೆ ಭಾಷಾಂತರಿಸಿ ಪ್ರಕಟಿಸಿದವರು ಈ ಫಕೀರಪ್ಪನವರೆ ಎಂಬುದು ಅನೇಕರಿಗೆ ತಿಳಿದಿಲ್ಲ. ಇವರ ಕಾಲದಲ್ಲೇ ವಚನಗಳ ಗಾಯನವೂ ಪ್ರಾರಂಭವಾಯಿತು. ಅದಕ್ಕೆ ಇವರೇ ಮೂಲಕಾರಣ ಪುರುಷರು. ೧೯೩೮ರಲ್ಲಿ ಪಿ.ವಿ. ಪಾಟೀಲರನ್ನು (ಮುಂದೆ ಇವರು ರಾಜ್ಯಸಂಗೀತ ನಾಟಕ ಅಕಾಡೆಮಿಯಿಂದ ಪ್ರಶಸ್ತಿ ಪಡೆದವರು) ಸಿದ್ದೇಶ್ವರ ಪ್ರೌಢಶಾಲೆಯಲ್ಲಿ ಸಂಗೀತ ಶಿಕ್ಷಕರೆಂದು ಹಳಕಟ್ಟಿಯವರು ನೇಮಿಸಿದರು. ಅನಂತರ ಒಂದು ತಿಂಗಳು ಬಿಟ್ಟು ಪಾಟೀಲರನ್ನು ತಮ್ಮಲ್ಲಿಗೆ ಕರೆಸಿಕೊಂಡು ಅವರಿಗೆ 'ನೋಡಿ ಪಾಟೀಲರೇ ರಾಜಕಾರಣಿಗಳು ರಾಜಕಾರಣಿಗಳಿಗೆ ಬಡಿದಾಡಲಿ, ನಾವು ನಮ್ಮ ಧರ್ಮದ ಸಲುವಾಗಿ ಕೆಲಸ ಮಾಡೋಣ. ವಚನ ಸಾಹಿತ್ಯವನ್ನು ಪ್ರಚಾರ ಮಾಡುವ ಸಲುವಾಗಿ ಎಷ್ಟೋ ದಿವಸಗಳಿಂದ ಕಷ್ಟಪಟ್ಟು, ಶೋಧ ಮಾಡಿ, ನನ್ನ ವಕೀಲಿ ಉದ್ಯೋಗ ಬಿಟ್ಟು ಪ್ರಿಂಟಿಂಗ್ ಪ್ರೆಸ್ ಹಾಕಿ ವಚನ ಸಾಹಿತ್ಯವನ್ನು ಅಚ್ಚು ಹಾಕಿಸಿದೆನು. ಆ ಪುಸ್ತಕಗಳನ್ನು ಓದುವವರು ದಿಕ್ಕಿಲ್ಲದಂತಾಯಿತು. ಸಂಗೀತದಿಂದ ವಚನ ಸಾಹಿತ್ಯ ಪ್ರಚಾರ ಆಗಬಹುದೇನು? ವಚನ ಸಾಹಿತ್ಯ ಸಂಗೀತಕ್ಕೆ ಹೊಂದಬಹುದೇನು?' ಎಂದು ಅದು ವರೆಗೂ ಯಾರಿಗೂ ಹೊಳೆಯದಿದ್ದ ವಿಚಾರಗಳನ್ನು ಸಂಗೀತ ಮೇಸ್ಟರ ಮುಂದಿಟ್ಟು ಅವರಿಂದ ಹಾಡಿಸಿ ಅದನ್ನು ಮುಂಬಯಿಯ ಹಿಸ್ ಮಾಸ್ಟರ್ಸ್ ವಾಯ್ಸ್ ಕಂಪನಿಯಲ್ಲಿ ಧ್ವನಿಮುದ್ರಣ ಸಹ ಮಾಡಿಸಿದರು. ಈ ರೀತಿ ಇಂದು ವಚನ ಗಾಯನ ಜನಪ್ರಿಯವಾಗಲು ಸಂಗೀತದಲ್ಲೇ ಒಂದು ಭಾಗವಾಗಿ ವಚನಗಳನ್ನು ಪರಿಗಣಿಸುವಂತೆ ಮಾಡಲು ಕಾರಣರಾದವರು ಹಳಕಟ್ಟಿಯವರು. ಹಿಂದೂಸ್ತಾನಿ ಪದ್ಧತಿಯಲ್ಲಿ ಮೊದಲು ಹಾಡಿದ ವಚನಗಳೆಂದರೆ ದಯವಿಲ್ಲದ ಧರ್ಮ ಯಾವುದಯ್ಯಾ (ರಾಗ ಪಟ್‌ದೀಪ, ತಾಳ-ತ್ರಿತಾಲ್) ಇನ್ನೊಂದು ಚಕೋರಂಗೆ ಚಂದ್ರಮನ ಬೆಳಕಿನ ಚಿಂತೆ (ರಾಗ-ಭೈರವಿ, ತಾಳ-ದಾದರಾ) ಇದನ್ನು ಮೊದಲು ಹಾಡಿದ ಪಿ.ವಿ.ಪಾಟೀಲರು ಆಗ ಬಹಳಷ್ಟು ಜನಮನ್ನಣೆ ಗಳಿಸಿ ಗೌರವಕ್ಕೆ ಪಾತ್ರರಾದರು. ಅವರ ಧ್ವನಿ ಮುದ್ರಿಕೆಗಳೂ ಜನಪ್ರಿಯವಾದವು. ಈಗ ಮಲ್ಲಿಕಾರ್ಜುನ ಮನ್ಸೂರ್, ಬಸವರಾಜ ರಾಜಗುರು, ಭೀಮಸೇನ ಜೋಶಿ, ಗಂಗೂಬಾಯಿ ಹಾನಗಲ್ ಮುಂತಾದ ಪ್ರಸಿದ್ಧ ಸಂಗೀತಗಾರರು ವಚನಗಳನ್ನು ಹಾಡಿ ಜನಪ್ರಿಯಗೊಳಿಸಿದ್ದಾರೆ. ಜೊತೆಗೆ ಕರ್ನಾಟಕ (ದಕ್ಷಿಣಾದಿ) ಸಂಗೀತ ಪದ್ಧತಿಯಲ್ಲೂ ವಚನಗಳನ್ನು ಈಗ ಹೆಚ್ಚು

ಹಾಡುತ್ತಾರೆ. ಒಟ್ಟಿನಲ್ಲಿ ಇಂದು ವಚನಗಾಯನ ಎಲ್ಲರಿಗೂ ತಿಳಿದಿರುವ ಹೆಚ್ಚು ಆಕರ್ಷಣೆಯ ಜನಪ್ರಿಯ ಸಂಗೀತ ಎನಿಸಿದೆ. ಇವರ ಮೂಲಕ ಹಳಕಟ್ಟಿಯವರು ಕಂಡಿದ್ದ ಕನಸು, ಚಿಂತಿಸಿದ್ದ ಮುಂದಿನ ಭವಿಷ್ಯ ನಿಜವಾಯಿತು. ಅವರ ಅಭೀಷ್ಟದಂತೆ ಸಂಗೀತವು ವಚನ ಪ್ರಚಾರಕ್ಕೆ ಒಂದು ಮಾಧ್ಯಮವಾಯಿತು. ವಿದ್ಯಾವಂತ ಅವಿದ್ಯಾವಂತ ಎಂಬ ಭೇದವಿಲ್ಲದೆ ಎಲ್ಲರಿಗೂ ವಚನಗಳ ಪರಿಚಯವಾದವು. ಹಳಕಟ್ಟಿಯವರ ಉತ್ಸಾಹದಿಂದಾಗಿ ಪಾಟೀಲರು ೧೯೪೦ರ ಹೊತ್ತಿಗೆ ಎಪ್ಪತ್ತೈದು ವಚನಗಳಿಗೆ ರಾಗ ತಾಳಗಳನ್ನು ಸಂಯೋಜಿಸಿ ಸಂಗೀತಕ್ಕೆ ಅಳವಡಿಸಿದ್ದರು. ಅವುಗಳನ್ನೆಲ್ಲಾ ಹಳಕಟ್ಟಿಯವರು ಮುದ್ರಿಸಿ 'ಸಂಗೀತದಲ್ಲಿ ಶಿವಶರಣರ ವಚನಗಳು' ಎಂಬ ಶೀರ್ಷಿಕೆಯಲ್ಲಿ ಕಿರುಹೊತ್ತಿಗೆಯನ್ನು ತಂದರು. ಅವುಗಳನ್ನು ಜನಪ್ರಿಯಗೊಳಿಸಲು ನಾಲ್ಕಾಣೆ ಬೆಲೆಯಿಟ್ಟು, ಮಾರಾಟ ಮಾಡಿದರು. ವಚನಗಳನ್ನು ಜನಪ್ರಿಯಗೊಳಿಸಬೇಕೆಂಬ ಗುರಿಯಿತ್ತೇ ವಿನಹ ಅವರಿಗೆ ಲಾಭದ ಆಸೆಯಿರಲಿಲ್ಲ.

## 'ನವಕರ್ನಾಟಕ'

ಕರ್ನಾಟಕದ ಅಂದಿನ ಪರಿಸ್ಥಿತಿ ಬಗ್ಗೆ ಸದಾ ಚಿಂತಿತರಾಗಿದ್ದ ಹಳಕಟ್ಟಿಯವರು ನಾಡು-ನುಡಿ ಸೇವೆಗೆ ಪತ್ರಿಕೋದ್ಯಮ ಒಂದು ಉತ್ತಮ ಮಾರ್ಗವೆಂದರಿತವರು. ಸಾವಿರಾರು ಜನರ ಮನಮುಟ್ಟುವುದು ಪತ್ರಿಕೆಗಳ ಮೂಲಕ ಸಾಧ್ಯ. ಹಾಗೆ ಅವರಲ್ಲಿ ಅರಿವು ಮೂಡಿಸಲು, ನಾಡನ್ನು ಕಟ್ಟಲು ಪತ್ರಿಕೆಯೊಂದು ಬೇಕು ಎಂದು ಚಿಂತಿಸುತ್ತಿದ್ದ ಆ ಸುಮಾರಿಗೆ ಭಾರತಕ್ಕೆ ಸೈಮನ್ ಕಮಿಷನ್ ಬಂದಿತ್ತು (೧೯೨೭). ಈ ಆಯೋಗವನ್ನು ಕೆಲವರು ವಿರೋಧಿಸಿದರು. ಮತ್ತೆ ಕೆಲವರು ಸ್ವಾಗತಿಸಿದರು. ಅದರಂತೆಯೇ ಕರ್ನಾಟಕದ ಜನರಲ್ಲೂ ಎರಡು ಬಗೆ ಕಂಡು ಬಂತು. ಒಂದು ಗುಂಪು ಮೊದಲು ಸ್ವಾತಂತ್ರ್ಯ ಅನಂತರ ಕರ್ನಾಟಕ ಏಕೀಕರಣದ ವಿಷಯ ಎಂದರೆ, ಇನ್ನೊಂದರ ನಿಲುವು ಆಯೋಗದ ಮುಂದೆ ಕರ್ನಾಟಕ ಏಕೀಕರಣ ಬೇಡಿಕೆಯನ್ನೇ ಇಟ್ಟು, ಅದನ್ನೇಕೆ ಪಡೆದುಕೊಳ್ಳಬಾರದು ಎಂಬುದಾಗಿತ್ತು. ಈ ಎರಡನೆಯ ಗುಂಪಿಗೆ ಹಳಕಟ್ಟಿಯವರು ಸೇರಿದ್ದರು. ತಮ್ಮ ನಿಲುವನ್ನು ಅಭಿಪ್ರಾಯವನ್ನು ಜನರ ಮುಂದಿಟ್ಟು, ಅವರ ಬೆಂಬಲ ಪಡೆಯಬೇಕು. ಕರ್ನಾಟಕದ ಏಕೀಕರಣವಾಗಬೇಕು ಎಂದು ಹಳಕಟ್ಟಿಯವರು ತಮ್ಮ ಈ ಉದ್ದೇಶ ಸಾಧನೆಗಾಗಿ ದಿನಾಂಕ ೬-೧೦-೧೯೨೭ ವಿಜಯದಶಮಿಯಂದು 'ನವಕರ್ನಾಟಕ' ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದರ ಸಂಪಾದಕೀಯ 'ಆತ್ಮನಿವೇದನೆ'ಯಲ್ಲಿ 'ನವಕರ್ನಾಟಕ' ಪತ್ರಿಕೆಯ ಗೊತ್ತುಗುರಿಗಳನ್ನು ಕುರಿತು ಈ ರೀತಿ ಬರೆದಿದ್ದಾರೆ – ಇದರಲ್ಲಿ ರಾಜಕೀಯ, ಸಾಮಾಜಿಕ ಔದ್ಯೋಗಿಕ 'ಶೈಕ್ಷಣಿಕ' ಮುಂತಾದ ವಿಷಯಗಳಲ್ಲಿ ಕರ್ನಾಟಕಸ್ಥರು ಹ್ಯಾಗೆ ಮುಂದುವರಿಯಬೇಕು ಎಂಬುದರ ಬಗ್ಗೆ ವಿವೇಚನೆಗಳೂ ಆ ಬಗ್ಗೆ ಪ್ರಯತ್ನಗಳೂ ಈ ಪತ್ರಿಕೆಯ ದ್ವಾರಾ ಮಾಡಲ್ಪಡುವವು. ಇದು ಸಮಾಜ, ಪಂಗಡ, ಜಾತಿ, ಈ ಬಗ್ಗೆ ಯಾವ ತರದ ಭೇದ ಭಾವಗಳನ್ನು ಎಣಿಸದೆ ಯಾವುದು ಸತ್ಯವಾದದ್ದೋ ನ್ಯಾಯವಾದದ್ದೋ ಅದನ್ನೇ ನಿಷ್ಪಕ್ಷಪಾತತೆಯಿಂದಲೂ ನಿರ್ಭಯದಿಂದಲೂ ಜರುಗಿಸಲಿಕ್ಕೆ ಸಿದ್ಧವಾಗಿ ಇರುವುದು. ಇದರಲ್ಲಿ ಕರ್ನಾಟಕ ಸಂಸ್ಕೃತಿಯ ಹೆಚ್ಚಳವು ಬಹು ವಿಶದವಾಗಿ ವಾಚಕರ ಮುಂದೆ ಇಡಲ್ಪಡುವುದು. ಸರ್ವ ವಿಷಯದಲ್ಲೂ ಕರ್ನಾಟಕವು ಮುಂದುವರಿದು 'ನವಕರ್ನಾಟಕ'ವನ್ನು ಸಿದ್ಧಗೊಳಿಸುವುದೇ ಈ ಪತ್ರಿಕೆಯ ಮುಖ್ಯ ಧ್ಯೇಯವಾಗಿದೆ. ಇಷ್ಟು ಮಾತ್ರ ನಾವು ಇಲ್ಲಿ ಹೇಳಿ ಈ ಕಾರ್ಯವನ್ನು ನಮ್ಮ ಕೃತಿಯಿಂದ ಎಷ್ಟರ ಮಟ್ಟಿಗೆ ಪೂರೈಸುವೆವೆಂಬುದನ್ನು ನಿರ್ಧರಿಸುವ ಭಾರವನ್ನು ನಾವು ಕರ್ನಾಟಕಸ್ಥರಿಗೆ ಬಿಟ್ಟುಕೊಡುತ್ತೇವೆ'.

'ಸಾತ್ವಿಕ ಪತ್ರಿಕೋದ್ಯಮಿ ಡಾ. ಹಳಕಟ್ಟಿಯವರು' ಎನ್ನುವ ತಮ್ಮ ಲೇಖನದಲ್ಲಿ ಪತ್ರಿಕೋದ್ಯಮಿ ನಾಯಿಕ' ವೆಂಕಟರಾಯರು 'ದಿವಂಗತ ಡಾ. ಫ.ಗು. ಹಳಕಟ್ಟಿಯವರ ಜೀವನದ ಏರಿಳಿತಗಳನ್ನು ಪ್ರತ್ಯಕ್ಷವಾಗಿ ಕಂಡವರಿಗೆ ಅವುಗಳಲ್ಲಿ ಒಂದು ಅಂಶವು ಎದ್ದು ಕಾಣಿಸುತ್ತದೆ, ಶರಣ ಸಾಹಿತ್ಯದ ವಚನ ಸಂಶೋಧನ, ಆಳವಾದ ಅಧ್ಯಯನ ಇವುಗಳಿಂದ ಅವರ ಸ್ವಭಾವವು ರೂಪುಗೊಂಡ ಬಗೆಯೇ ಅದು. ಸಿದ್ಧಿ, ಅಸಿದ್ಧಿಗಳಲ್ಲಿ ಸಮತ್ವವನ್ನು ಉಳಿಸಿಕೊಳ್ಳುವುದೇ ಯೋಗ ಎಂದು ಭಗವದ್ಗೀತೆಯಲ್ಲಿ ಹೇಳಿದ ತತ್ವವನ್ನೇ ತಮ್ಮ ಬಾಳಿನಲ್ಲಿ ಅರಗಿಸಿಕೊಂಡಿದ್ದ ಶಿವಶರಣರ ಮಾನಸಿಕ ಆಧ್ಯಾತ್ಮಿಕ ಸಮತೋಲನದ ಪ್ರಭಾವವು ಡಾ. ಹಳಕಟ್ಟಿಯವರ ಮೇಲೆ ಚೆನ್ನಾಗಿ ಆಗಿದ್ದಿತು. ಅಂತೆಯೇ ಅವರು ತಮ್ಮ ಕೌಟುಂಬಿಕ ಜೀವನದಲ್ಲಿ ಒದಗಿ ಬಂದಿದ್ದ ಪುತ್ರವಿಯೋಗವೇ ಮೊದಲಾದ ಆಘಾತಗಳನ್ನು ಶಾಂತಿ ಸ್ಥೈರಣೆಗಳಿಂದ ಎದುರಿಸಲು ಸಮರ್ಥರಾದರು. ಹಾಗೆಯೇ ಸಾರ್ವಜನಿಕ ಜೀವನದಲ್ಲಿ ಕೂಡ ಫಲಾಪೇಕ್ಷೆಯಿಲ್ಲದೆ ಸತತೋದ್ಯೋಗವನ್ನು ಮಾಡುವುದೇ ಅವರ ಗುರಿಯಾಗಿದ್ದಿತು. ಆದುದರಿಂದಲೇ ಅವರು ಕನ್ನಡ ನಾಡಿನ ಆಗುಹೋಗುಗಳಲ್ಲಿ ತಮಗೆ ಪ್ರಾಮಾಣಿಕವಾಗಿ ಮಾಡಬೇಕೆಂದೆನಿಸಿದ ಕಾರ್ಯಗಳನ್ನು ಏಕಾಂಗವೀರರಾಗಿ ಕೈಗೊಂಡರು. ಅಂತಹ ಅನೇಕ ಕಾರ್ಯಯೋಜನೆಗಳಲ್ಲಿ ದಿ. ಹಳಕಟ್ಟಿಯವರು ಕನ್ನಡ ಪತ್ರಿಕಾ ಪ್ರಪಂಚದಲ್ಲಿ ತೋರಿದ ಅವರ ಧ್ಯೇಯನಿಷ್ಠೆ, ಅಭಿಪ್ರಾಯ ಪ್ರಾಮಾಣಿಕತೆ, ಜನಹಿತಾಶಕ್ತಿಗಳನ್ನು ಎಂದೆಂದಿಗೂ ಪತ್ರಿಕೋದ್ಯಮದ ನಿಜವಾದ ಉದ್ದೇಶವನ್ನರಿತುಕೊಂಡು ಅನುಷ್ಠಿಸುವವರಿಗೆ ಅನುಕರಣೀಯವಾಗಿವೆ' ಎಂದಿದ್ದಾರೆ. ಮುಂದೆ 'ವೈಯಕ್ತಿಕ ದೋಷ, ಅಸೂಯೆಗಳಿಗೆ ಅವರು ಪತ್ರಿಕೆಯಲ್ಲಿ ಎಂದೂ ಎಡೆಗೊಡಲಿಲ್ಲ, ಅಶ್ಲೀಲ ಬರವಣಿಗೆಗೆ ಆಸ್ಪದವಿರಲಿಲ್ಲ. ಧನಪ್ರಾಪ್ತಿಯು ಅವರ ಪತ್ರಿಕಾ ವೃತ್ತಿಯ ಗುರಿಯಾಗಿರಲಿಲ್ಲ.

ಅದೊಂದು ಪವಿತ್ರ ಸೇವೆಯೆಂದು ತಿಳಿದಿದ್ದರು. ಅವರ ಆ ಉನ್ನತವಾದ ಸಾಂಸ್ಕೃತಿಕ ಮಾರ್ಗದಲ್ಲಿ ಪತ್ರಿಕಾವೃತ್ತಿಯ ಪುನಃ ಪ್ರತಿಷ್ಠಾಪನೆಗೆ ಅವರಿಗೆ ಪತ್ರಿಕೋದ್ಯಮಿಗಳು ತೆರಬಲ್ಲ ಶ್ರೇಷ್ಠ ಕಾಣಿಕೆ' ಎಂದು ಹಳಕಟ್ಟಿಯವರನ್ನು ಕುರಿತು ಪ್ರಶಂಸಿಸಿದ್ದಾರೆ.

ಹಳಕಟ್ಟಿಯವರು 'ಶಿವಾನುಭವ' ಮಾಸಪತ್ರಿಕೆ, 'ನವಕರ್ನಾಟಕ' ವಾರಪತ್ರಿಕೆಗಳನ್ನು ನಡೆಸುತ್ತ ಬಂದರು. ಒಂದು. ನಾಡಿನ ನುಡಿ, ಸಾಹಿತ್ಯ ಸಂಸ್ಕೃತಿಯ ಗುರಿಯುಳ್ಳದ್ದಾಗಿದ್ದರೆ, ಇನ್ನೊಂದು ಕರ್ನಾಟಕದ ಏಕೀಕರಣದ ಗುರಿಯುಳ್ಳದ್ದಾಗಿತ್ತು. ಈ ಎರಡು ಮಹಾನ್ ಗುರಿಸಾಧನೆಗಳತ್ತ ಹಳಕಟ್ಟಿಯವರು ಮುಂದೆ ಇಟ್ಟ ಹೆಜ್ಜೆಯನ್ನು ಎಂದೂ ಹಿಂದೆಗೆಯಲಿಲ್ಲ. ◆

## ೩೭. 'ಕಂಠೀರವ'ದ ಹುರುಳಿ ಭೀಮರಾಯರು

✍ ಶ್ರೀ ಹ. ವೆಂ. ನಾಗರಾಜರಾವ್

> "ಶ್ರೀ ಹುರುಳಿ ಭೀಮರಾಯರು ಹೆಚ್ಚಿನ ಸಾಹಿತ್ಯ ಕೃತಿಗಳನ್ನು ರಚಿಸದಿದ್ದರೂ ಕನ್ನಡನಾಡಿನ ಪತ್ರಿಕೋದ್ಯಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಒಂದು ಸ್ಥಾನ ದೊರಕಿಸಲು ಹೆಚ್ಚಿನ ಶ್ರಮವಹಿಸಿ ದುಡಿದು ಅದರಲ್ಲಿ ಸಾರ್ಥಕತೆಯನ್ನು ಕಂಡಿದ್ದಾರೆ. ಅವರ ಜೀವನ ನಮ್ಮ ಈಗಿನ ಪತ್ರಿಕೋದ್ಯಮಿಗಳಿಗೆ ಮಾರ್ಗದರ್ಶಕವಾಗಿದೆ. ದಕ್ಷಿಣ ಕನ್ನಡ ಜಿಲ್ಲೆ ಮೂಕವಲ್ಲವೆಂದು ತೋರಿಸಿಕೊಟ್ಟ ಶ್ರೀ ಹುರುಳಿಯವರ ಸ್ಮರಣೆ ಮಾಡುವ ಅವಕಾಶ ಕಲ್ಪಿಸುವುದು ಅತ್ಯಂತ ಅಪೇಕ್ಷಣೀಯ."

ಹೀಗೆ ಹೇಳಿದವರು ಡಾ. ಶಿವರಾಮ ಕಾರಂತರು.

ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕದಲ್ಲಿಯೇ ಪತ್ರಿಕೋದ್ಯಮದ ಮೂಲಭೂಮಿ. ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ೧೮೪೩ರಷ್ಟು ಹಿಂದೆಯೇ ಅಲ್ಲಿ ಹುಟ್ಟಿತ್ತು. ಕನ್ನಡದ ಮೊಟ್ಟಮೊದಲ ಪತ್ರಿಕೆಗಳ ಕಲ್ಪನೆ ಜೀವ ತಳೆದದ್ದೆ ಈ ಕರಾವಳಿ ಪ್ರದೇಶದಲ್ಲಿ. ಕಲ್ಲಚ್ಚಿನಿಂದ ಹಿಡಿದು, ಅಚ್ಚಿನ ಮೊಳೆಗಳೂ ಮುದ್ರಣ ಯಂತ್ರಗಳೂ ಪತ್ರಿಕೆಗಳನ್ನು ಛಾಪಿಸುವ ತನಕವೂ ಕನ್ನಡ ಪತ್ರಿಕೋದ್ಯಮ ಈ ಕಡಲ ತೀರದಲ್ಲಿ ಬೆಳೆಯಿತು. ವಾರಪತ್ರಿಕೆಗಳ ಸಮೃದ್ಧ ಭೂಮಿಯೂ - ದಕ್ಷಿಣ ಕನ್ನಡವೇ. ಅವರಲ್ಲೂ ಸಾಹಿತ್ಯಕ ಪತ್ರಿಕೆಗಳು ತಮ್ಮ ಘನತೆ, ಗುಣಾಢ್ಯತೆಗಳನ್ನು ರಕ್ಷಿಸಿಕೊಂಡು ಕನ್ನಡ ಭಾಷೆಗೂ ಭಾಷಾ ಪತ್ರಿಕೋದ್ಯಮಕ್ಕೂ ಒಂದು ಹೊಸ ಕಳೆ, ಆಯಾಮವನ್ನು ಕೊಟ್ಟವು. ಶ್ರೀ ಹುರುಳಿ ಭೀಮರಾಯರು ತಮ್ಮ ೮೫ ವರ್ಷಗಳ ದೀರ್ಘ ಜೀವನದಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಪತ್ರಿಕಾವೃತ್ತಿಯಲ್ಲಿ ಶ್ರಮಿಸಿ, ಕನ್ನಡ ಪತ್ರಿಕೋದ್ಯಮವೆಂಬ ಬೃಹತ್ ಕಟ್ಟಡದ ಆಧಾರ ಸ್ತಂಭಗಳಲ್ಲಿ ಒಬ್ಬರಾದರು. ಅವರು ಗತಿಸಿದಾಗ ಬೆಂಗಳೂರಿನ ಪತ್ರಿಕೆಯೊಂದು ಅತ್ಯಂತ ವ್ಯಸನದಿಂದ ಹೀಗೆ ಬರೆಯಿತು.

'... ಐವತ್ತು ವರ್ಷಗಳ ಕಾಲ 'ಕಂಠೀರವ' ಕನ್ನಡ ವಾರಪತ್ರಿಕೆಯ ಸಂಪಾದಕರಾಗಿ ಭೀಮರಾಯರು ಆ ವೃತ್ತಿಕ್ಷೇತ್ರ ದಲ್ಲೊಂದು ನವೀನ ಸಂಪ್ರದಾಯವನ್ನೇ ಆಚರಣೆಗೆ ತಂದರು. ಸರಸ ಕನ್ನಡದಲ್ಲಿ ಹಾಸ್ಯರಸ ಬೆರೆಸಿ, ಸಾರ್ವಜನಿಕ ಸಮಸ್ಯೆಗಳನ್ನು ಕುರಿತು ಬರೆಯುವುದೊಂದು ಕಲೆಯನ್ನಾಗಿ ಮಾಡಿದರು. ಇಂತಹ 'ಗುಣಾಲಂಕೃತ' ಕನ್ನಡ ಪತ್ರಿಕಾ ಸಂಪಾದಕರ ಹೆಸರನ್ನು ಕೇಳಿದವರೆಷ್ಟು ಮಂದಿ? ಕೇಳಿದ್ದವರಲ್ಲಿ, ಅವರನ್ನು ಕಂಡಿದ್ದವರಲ್ಲಿ, ಅವರನ್ನು ಗೌರವದಿಂದ ಕಂಡು ಸಂಭಾವಿಸಿದವರೆಷ್ಟು ಮಂದಿ? ವೃದ್ಧ ಹುರುಳಿ ಭೀಮರಾಯರು 'ಮಬ್ಬಿ'ನಲ್ಲೇ ಇದ್ದುಕೊಂಡು ತಾವು ಹುಟ್ಟಿದ ನಾಡಿಗೆ ತಾವಾಡುವ ನುಡಿಗೆ, ಸೇವೆಸಲ್ಲಿಸಿ, 'ಮಬ್ಬಿ'ನಲ್ಲೇ ಮಾಯವಾದರು....ಕನ್ನಡ ನಾಡು ಹುರುಳಿ ಭೀಮರಾಯರ ಸೇವೆಯ ವೈವಿಧ್ಯ ವಿಸ್ತಾರಗಳನ್ನು ಇನ್ನು ಮುಂದಾದರೂ ತಿಳಿದುಕೊಳ್ಳಬೇಕಾಗಿದೆ .

ಹುರುಳಿ ಭೀಮರಾಯರೆಂದರೆ ಅವರೇನೂ ಹುರುಳಿ ಧಾನ್ಯದ ವ್ಯಾಪಾರಿಗಳಲ್ಲ; ಶಾರೀರಿಕವಾಗಿಯೂ ಭೀಮಕಾಯದವರೂ ಅಲ್ಲ. ಹುರುಳಿ ಎನ್ನುವುದು ಕರಾವಳಿಯ ಘಟ್ಟದ ಮೇಲಿನ ಮೇಗರವಳ್ಳಿಗೆ ಸಮೀಪದ ಒಂದು ಹಳ್ಳಿ. ದೇಹದಿಂದ ಬಡಕಲು ಕಡ್ಡಿಯಂತಿದ್ದ ಭೀಮರಾಯರು ಕನ್ನಡದ ಶಬ್ದಗಳನ್ನು ಹುರುಳಿಯಂತೆ ಹುರಿಯುತ್ತಿದ್ದರೆನ್ನುವ. ಅವರು ಮಾಡುತ್ತಿದ್ದ ಗೇಲಿಗೆ ಎಂಥವರೂ ನಡುಗುತ್ತಿದ್ದರು. ಹಾಗೆ ಅವರದು ಭೀಮಶಕ್ತಿ.

೧೯೬೪ರ ಡಿಸೆಂಬರ್ ತಿಂಗಳಲ್ಲಿ ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನಲ್ಲಿ ರಾಷ್ಟ್ರಕವಿ ಗೋವಿಂದ ಪೈಗಳ ಸ್ಮಾರಕೋತ್ಸವ ಸಮಾರಂಭ. ಆಗ ಹುರುಳಿ ಭೀಮರಾಯರು ಕವಿ ಮುದ್ದಣನ ತೈಲಚಿತ್ರ ಅನಾವರಣ ನಡೆಸಲು ಕುಂದಾಪುರಕ್ಕೆ ಬಂದಿದ್ದರು. ಕವಿ ಮುದ್ದಣನನ್ನು ಕುರಿತು ಹೀಗೆ ಮಾತನಾಡಿದರು :

"ಈವೊತ್ತು ಇಲ್ಲಿ ರಾಷ್ಟ್ರಕವಿ ಗೋವಿಂದ ಪೈ ಅವರ ಸ್ಮಾರಕೋತ್ಸವದ ಸಮಾರಂಭ ನಡೆಯುತ್ತಿದೆ. ಈ ಸನ್ನಿವೇಶದಲ್ಲಿ ಮುದ್ದಣನ ತೈಲಚಿತ್ರವನ್ನು ಅನಾವರಣಗೊಳಿಸುವ ಕಾರ್ಯಭಾಗ ನನ್ನ ಪಾಲಿಗೆ ಬಂದಿದೆ. ನನ್ನ ಜೀವನದ ಪ್ರೇಮದೀಕ್ಷೆ ಮುದ್ದಣ ಕವಿಯ ನಿರಂತರದ ಕೈಂಕರ್ಯ. ದಣುವಿಲ್ಲದೆ ಅಳಿಲ ಸೇವೆ. 'ಸೇವೆಗೆ ಬಾ' ಎಂದಲ್ಲಿಗೆ ಹೋಗಿದ್ದೇನೆ. ಇಲ್ಲಿಗೂ ಬಂದಿದ್ದೇನೆ.

– ಹೀಗೆ ಪ್ರಾರಂಭಿಸಿದ ಹುರುಳಿ ಭೀಮರಾಯರು, ತುದಿಯಲ್ಲಿ ಇನ್ನೊಂದು ಮಾತನ್ನು ಹೇಳಿದರು :

'ಕವಿಯೊಡನೆ ನಿಕಟ ಬಾಂಧವ್ಯವಿದ್ದ ಹಿರಿಯರು ಯಾರೂ ಈವೊತ್ತು ಇಲ್ಲ. ಕಿರಿಯನಾಗಿ ನಾಲ್ವೈದು ವರ್ಷಗಳ ಸ್ವಾನುಭವದಿಂದ ಹೇಳಬಲ್ಲವನೊಬ್ಬನನ್ನು ಇಂದು ಇಲ್ಲಿ ಮಹಾಕವಿಯ ತೈಲಚಿತ್ರವನ್ನು ಅನಾವರಣ ಮಾಡಿದವನನ್ನು ಮಹಾಕವಿ ತನಗಾಗಿ, ತನ್ನ ಪರವಾದ ರುಜುವಾತಿಗಾಗಿ ಉಳಿಸಿಕೊಂಡಿರುವನೋ ಏನೋ!

ಇದಾದ ನಂತರ ಹುರುಳಿ ಭೀಮರಾಯರು ಬದುಕಿದ್ದು ಕೇವಲ ಆರು ವರ್ಷಗಳು.

ಉಡುಪಿಯಲ್ಲಿ ಪ್ರಾಥಮಿಕ ಶಿಕ್ಷಣ, ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸವಾದ ನಂತರ ಉಡುಪಿಯ ಕ್ರಿಶ್ಚಿಯನ್ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರೆಸಿ ೧೯೧೦ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ಶಿಕ್ಷಣಾನಂತರ ಉಡುಪಿ ಸಂಸ್ಕೃತ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದರು. ಆಮೇಲೆ ಮಂಗಳೂರಿನ ನೆಡುಂಗಾಡಿ ಬ್ಯಾಂಕಿನಲ್ಲಿ ನೌಕರಿ. ಸ್ವಲ್ಪ ಕಾಲದಲ್ಲೇ ನೆಡುಂಗಾಡಿ ಬ್ಯಾಂಕ್, ನಿಂತುಹೋದುದರಿಂದ ಹುರುಳಿ ಭೀಮರಾಯರ ಮನಸ್ಸು ಸಾಹಿತ್ಯ, ಪತ್ರಿಕೋದ್ಯಮಗಳ ಕಡೆ ಹರಿಯಿತು.

## ಪತ್ರಿಕೋದ್ಯಮಕ್ಕೆ ಪ್ರವೇಶ

'ಕಂಠೀರವ'ವು ದಿವಂಗತ ಬೋಳಾರ ವೆಂಕಟರಾಯರು ಹುಟ್ಟು ಹಾಕಿದ ಪತ್ರಿಕೆ. ಬೋಳಾರರೂ ಹುರುಳಿಯವರೂ ಏಕದೇಹನ್ಯಾಯಿಗಳು. ಮೊದಮೊದಲು ಹೊರಗಿನಿಂದಲೇ 'ಕಂಠೀರವ' ವಾರಪತ್ರಿಕೆಗೆ ಲೇಖನಗಳನ್ನು ಒದಗಿಸುತ್ತಿದ್ದ ಹುರುಳಿಯವರು, ೧೯೩೨ರ ಅನಂತರ ಆ ಪತ್ರಿಕೆಯ ಪೂರ್ಣ ಹೊರೆಯನ್ನೇ ಹೊರಬೇಕಾಯಿತು.

'ನನ್ನ ಪಾಲಿಗೆ ಪತ್ರಿಕೋದ್ಯಮ ಬಂದದ್ದು ಕೇವಲ ಆಕಸ್ಮಿಕ' ಎಂದು ಹೇಳಿದ ಹುರುಳಿ ಭೀಮರಾಯರು, 'ಅದು ಘಟಿಸಿದ್ದು ಹೀಗೆ' ಎಂದು ಅವರೇ ೧೯೬೯ರಲ್ಲಿ ಬರೆದ ಲೇಖನವೊಂದರಲ್ಲಿ (ವಿಕ್ರಮ; ವಿಜಯದಶಮಿ ಸಂಚಿಕೆ) ತಿಳಿಸಿದ್ದಾರೆ.

"ದಿವಂಗತ ಮಂಜೇಶ್ವರ ಗೋವಿಂದ ಪೈಗಳು ೧೯೧೧ನೇ ಇಸವಿಯಲ್ಲಿ 'ಹೊಲೆಯನಾರು?' ಎಂಬ ಶಿರೋನಾಮೆಯಡಿಯಲ್ಲಿ ಒಂದು ಗದ್ಯರೂಪದ ಪದ್ಯವನ್ನು ಬರೆದಿದ್ದರು. 'ಹೊಲೆಯ ಊರ ಹೊರಗಿಹನೇ ಬಲ್ಲವರು ಹೇಳಿ' ಎಂಬುದು ಅದರ ಪ್ರಥಮ ಪಂಕ್ತಿಯಾಗಿತ್ತೆಂದು ಜ್ಞಾಪಕ. ಈ ಬರಹದಲ್ಲಿದ್ದಂತಹ ಅಭಿಪ್ರಾಯ ಕೆಲವರನ್ನು ಚುಚ್ಚಿತು. ನಾನಾಗ ಮೆಟ್ರಿಕ್ ವಿದ್ಯಾರ್ಥಿಯಾಗಿದ್ದೆ. ನನ್ನ ಹಿರಿಯ ಮಿತ್ರರನೇಕರು ಈ ಪದ್ಯವನ್ನು ನಾನು ಪ್ರತಿಭಟಿಸಲೇಬೇಕೆಂದು ಆಗ್ರಹಪಡಿಸಿದರು. ನನಗೂ ಒಂದು ಆಸಕ್ತಿ ಹುಟ್ಟಿತು. ಪದ್ಯವನ್ನು ಆಳವಾಗಿ ಪರಿಶೀಲಿಸಿ ನೋಡಿದಾಗ ಪದ್ಯದಲ್ಲಿ ಪ್ರಾಸ ಲೋಪವಾಗಿರುವುದು ಕಂಡುಬಂದಿತು. ಇದಕ್ಕಿಂತ ಹೊರತಾಗಿ ಖಂಡನಾರ್ಹವಾದಂತಹ ವಿಚಾರವೇನೂ ಅದರಲ್ಲಿ ಇರಲಿಲ್ಲ. ಹೀಗೆ ಪದ್ಯ ಪ್ರಾಸರಹಿತವಾಗಿರುವ ದೋಷವನ್ನು ಎತ್ತಿಹಿಡಿದು ಪದ್ಯ ಪ್ರಕಟವಾಗಿದ್ದ 'ಸ್ವದೇಶಾಭಿಮಾನಿ' ವಾರಪತ್ರಿಕೆಗೆ ಬರೆದು ಕಳುಹಿಸಿದೆ (ಆಗ ಶ್ರೀ ವಿ. ಎಸ್. ಕಾಮತ್ ಅವರು ಅದರ ಸಂಪಾದಕರಾಗಿದ್ದರು ). ನನ್ನ ಬರಹ ಪ್ರಕಟವಾಯಿತು. ಇದಕ್ಕುತ್ತರವಾಗಿ ಶ್ರೀ ಪೈಗಳು ತಾವು ಬಂಗಾಳಿ ಕವಿ ಮಧುಸೂಧನ ದತ್ತನ ಮಾದರಿಯಲ್ಲಿ ಪದ್ಯ ಬರೆದುದಾಗಿ ಪ್ರತಿಕ್ರಿಯೆಯನ್ನು ಅದೇ ಪತ್ರಿಕೆಯಲ್ಲಿ ಪ್ರಕಟಿಸಿದರು. ಕೆಲವು ಕಾಲ ನನ್ನಿಂದ ಪ್ರತಿಭಟನೆ, ಅವರಿಂದ ಉತ್ತರ ರೂಪದಲ್ಲಿ ಪ್ರತಿಕ್ರಿಯೆ, ಹೀಗೆ ಸಾಗಿತು.

"ಕೊನೆಗೊಮ್ಮೆ ಶ್ರೀ ಕಾಮತರು ನನ್ನ ಪತ್ರವನ್ನು ಪ್ರಕಟಿಸಲು ನಿರಾಕರಿಸಿ ಶ್ರೀ ಪೈಗಳ ಉತ್ತರದೊಂದಿಗೆ ಈ ಸಂವಾದವನ್ನು ಕೊನೆಗಾಣಿಸಿರುವುದಾಗಿ ತಿಳಿಸಿದರು. ನನಗೆ ಇದು ಸರಿ ಕಾಣದೆ ನನ್ನ ಸೋದರಮಾವನ ಮಗ ಶ್ರೀ ಕಡೆಕಾರು ರಾಜಗೋಪಾಲ ಕೃಷ್ಣರಾಯರಿಗೆ ಅದನ್ನು ಕಳುಹಿಸಿಕೊಡಲಾಗಿ ಅದನ್ನು ಶ್ರೀ ಎಂ. ವೆಂಕಟಕೃಷ್ಣಯ್ಯ ಅವರ ಸಂಪಾದಕತ್ವದಲ್ಲಿ ನಡೆಯಿಸಲಾಗುತ್ತಿದ್ದ 'ಸಾಧ್ವಿ' ಪತ್ರಿಕೆಯಲ್ಲಿ ಪ್ರಕಟಗೊಳಿಸಲಾಯಿತು. ಅಲ್ಲಿಂದ ಮುಂದೆ ನನಗೆ ಲೇಖನ-ಬರಹ-ವಿಡಂಬನೆಗಳನ್ನು ಬರೆಯುವ ಆಸಕ್ತಿ ಮೂಡಿ ('ಹತ್ತರ ಜೊತೆ ಹನ್ನೊಂದು' ಎಂಬಂತೆ) ನಾನೂ ಒಬ್ಬ ಪತ್ರಿಕೋದ್ಯಮಿಯಾಗುವಂತೆ ಸ್ವಯಂಪ್ರೇರಣೆ ಉಂಟಾಗಿ ಅದಕ್ಕೆ ಸಕಾಲದಲ್ಲಿ ದೊರೆತ ಪ್ರೋತ್ಸಾಹ ನನ್ನ ಜೀವನಕ್ಕೊಂದು ದಾರಿ ಕಲ್ಪಿಸಿಕೊಟ್ಟಿತು.

"೧೯೧೯ರಲ್ಲಿ ಶ್ರೀ ಬೋಳಾರ ವಿಠಲರಾಯರು ತಮ್ಮ ಮೋಟಾರು ಕಂಪೆನಿಯ ಜಾಹೀರಾತಿಗಾಗಿಯೇ ಎಂಬಂತೆ 'ಕಂಠೀರವ' ವಾರಪತ್ರಿಕೆಯನ್ನು ಪ್ರಥಮವಾಗಿ ಧರ್ಮಪ್ರಕಾಶ ಛಾಪಖಾನೆಯಲ್ಲಿ ಹೊರಡಿಸಿದರು. ( ಜನಸಾಮಾನ್ಯರ ಭಾಷೆಯಲ್ಲಿ

ಕಂಠೀರವ 'ಮೋಟಾರು ಪೇಪರು' ಎಂದೇ ಪ್ರಸಿದ್ಧಗೊಂಡಿತ್ತು). ಆ ಸಂದರ್ಭದಲ್ಲಿ ಶ್ರೀ ಕಡೆಕಾರು ರಾಜಗೋಪಾಲ ಕೃಷ್ಣರಾಯರು, ಬೆನಗಲ್ ರಾಮರಾಯರು, ಟಿ.ಕೆ. ಭಾರದ್ವಾಜರು ಇವರೇ ಮೊದಲಾದವರು ಸಹ ಸಂಪಾದಕತ್ವದ ಜೊತೆಯಲ್ಲಿ ನಾನೂ ಕೂಡ ಸಹಕರಿಸಿ ಲೇಖನಗಳನ್ನು ಒದಗಿಸಲು ಶುರು ಮಾಡಿದೆ. ಆಗ್ಯೆ ನಾನು ಕಲ್ಲಿಕೋಟೆಯ ಬಿ.ಜಿ.ಎಂ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕನಾಗಿದ್ದೆ. ನಾನು ಲೇಖನಗಳನ್ನು ಬರೆದು ಶ್ರೀ ಭಾರದ್ವಾಜರಿಗೆ ಅಥವಾ ವಿಠಲರಾಯರಿಗೆ ಕಳುಹಿಸುತ್ತಿದ್ದೆ. ಭಾರದ್ವಾಜರು ನನ್ನ ಆಪ್ತ ಮಿತ್ರರೂ ನಿಕಟವರ್ತಿಗಳೂ ಆಗಿದ್ದು ಪರಸ್ಪರ ವಿಚಾರವಿನಿಮಯ ಮಾಡಿಕೊಳ್ಳುತ್ತಿದ್ದೆವು. ಅವರೇ ಸ್ವತಃ 'ತಿಲಕ ಸಂದೇಶ'ದ ಸಂಪಾದರಾಗಿದ್ದರಲ್ಲದೆ ನನ್ನಿಂದ ಒಂದೆರಡು ಲೇಖನ ಅಪೇಕ್ಷಿಸಿದ್ದೂ ಉಂಟು. ಹಾಗೆ ನಾನು ಬರೆದು ಕೊಟ್ಟದ್ದೂ ಉಂಟು.'

"ಶ್ರೀ ಜೋಳಾರ ವಿಠಲರಾಯರದೊಂದು ವಿಶಿಷ್ಟ ಮರ್ಜಿ. ಅವರದ್ದು ಸ್ಪರ್ಧಾತ್ಮಕ ದೃಷ್ಟಿ. ಗೌರವಸ್ಥ ಕುಟುಂಬದಲ್ಲಿ ಜನಿಸಿದ ಅವರ ವ್ಯಕ್ತಿತ್ವ ತೇಜಃಪೂರ್ಣವಾಗಿದ್ದು. ಆ ಕುಟುಂಬದ ಗೌರವದ ಕಳೆ ಎದ್ದು ಕಾಣುವ ದೇಹ, ಅದಕ್ಕೆ ತಕ್ಕಂತೆ ನಡೆನುಡಿ. ವಯಸ್ಸಿನಲ್ಲಿ ಕಿರಿಯವನಾದರೂ ನನಗೂ ಅವರಿಗೂ ಗಳಸ್ಯ ಕಂಠಸ್ಯ. ಅವರ ತಂದೆ ತಹಸೀಲ್ದಾರರಾಗಿದ್ದು ಬ್ರಿಟಿಷ್ ಸರಕಾರದ ಬಗ್ಗೆ ಗೌರವ ಭಾವ ತಾಳಿದ್ದರು. ಅದೇ ಪ್ರವೃತ್ತಿ – ಮನೋಭಾವ ಇವರಿಗೂ ಬಂದಿತ್ತು. ವಿಠಲರಾಯರಿಗೆ ಗಾಂಧೀ ಚಳವಳಿ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಸಹಾನುಭೂತಿ ಇತ್ತೇ ವಿನಾ ಪ್ರತ್ಯಕ್ಷವಾಗಿ ಅವರು ಅದನ್ನು ಬೆಂಬಲಿಸಲೇ ಇಲ್ಲ. ಶ್ರೀಮಂತ ಧೋರಣೆಯೊಂದಿಗೆ ಬೆಳೆದ ಅವರ ಈ ಮನೋಗುಣಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವ ಸ್ವಾತಂತ್ರ್ಯ ನಮ್ಮಲ್ಲಿ ಯಾರಿಗೂ ಇರಲಿಲ್ಲ. ಸ್ವಾಭಿಮಾನಿಗೆ, ರಾಷ್ಟ್ರಹಿತ ಪ್ರತಿಪಾದಕನಾಗಬೇಕೆನ್ನುವವನಿಗೆ ಇಂತಹ ಕಟ್ಟುನಿಟ್ಟಿನ ನಿರ್ಬಂಧ ಸರಿಬೀಳದಿದ್ದರೂ, ಕಾಲಕ್ಕೆ ತಕ್ಕುದಾಗಿ ನಡೆದುಕೊಳ್ಳಬೇಕಾದ ಪಾಡು ನಮ್ಮದಾಗಿತ್ತು. ೧೯೩೩ರಲ್ಲಿ ಅವರು ನನ್ನ ಮೇಲೆ 'ಕಂಠೀರವ'ನ ಜವಾಬ್ದಾರಿಯನ್ನು ಹೊರಿಸಿದಾಗ ವಿಧಿಯಿಲ್ಲದೆ ಒಪ್ಪಿಕೊಂಡೆ.

'೧೯೩೩ರಿಂದ ೧೯೬೮ರವರೆಗೂ ನಾನು ಪತ್ರಿಕೋದ್ಯಮಿಯಾಗಿ ಸ್ವತಃ ಸಂಪಾದಕನಾಗಿ ಹಾಗೂ 'ಇಂಡಿಯನ್ ಎಕ್ಸ್‌ಪ್ರೆಸ್'ನ ಪ್ರತಿನಿಧಿಯಾಗಿ ಕೆಲಸ ಮಾಡಿದ್ದೇನೆ. ನನ್ನ ಜೀವನದ ಒಂದು ಮುಖ್ಯ ಕಾಲಖಂಡ ಪತ್ರಿಕೋದ್ಯಮಕ್ಕಾಗಿ ವ್ಯಯವಾಗಿದ್ದರೂ ಅದೊಂದು ಸಾರ್ಥಕ ಶ್ರಮವೆಂದು ನಾನು ತೃಪ್ತಿಪಟ್ಟುಕೊಳ್ಳುತ್ತೇನೆ. ಅದರಿಂದ ವೈಯಕ್ತಿಕವಾಗಿ ಲಾಭವನ್ನು ಹೊಂದದಿದ್ದರೂ ಸಮಾಜದ ಗೌರವ ದೃಷ್ಟಿಯಿಂದ ನನಗಾದ ಲಾಭ ಅತಿ ಹಿರಿದು"

ಒಮ್ಮೆ 'ಕಂಠೀರವ'ಕ್ಕೆ ತಮ್ಮನ್ನು ಪೂರ್ಣ ಅರ್ಪಿಸಿಕೊಂಡ ಮೇಲೆ ಹುರುಳಿ ಭೀಮರಾಯರು ಕೊನೆಯುಸಿರು ಇರುವ ತನಕವೂ ಆ ಪತ್ರಿಕೆಯ ಶ್ರೇಯಸ್ಸಿಗಾಗಿ ತ್ರಿಕರಣಶುದ್ಧವಾಗಿ ದುಡಿದರು. ಕೇವಲ ಸಾಹಿತ್ಯವಷ್ಟೇ ಅಲ್ಲ. ಅಂದಂದಿನ ಪ್ರಚಲಿತ ಸುದ್ದಿ-ಸಂಗತಿಗಳನ್ನು ಕುರಿತು ಬರೆದರು. ಸ್ವಭಾವತಃ ಹಾಸ್ಯ ಪ್ರವೃತ್ತಿಯವರೇ ಆಗಿದ್ದ ಹುರುಳಿಯವರು ಸಂದರ್ಭಗಳನ್ನು ಪದ್ಯಕಟ್ಟಿ ಲೇವಡಿ ಮಾಡುತ್ತಿದ್ದುದೂ ಉಂಟು. ಲೇವಡಿಯ ಚಾವಟಿ ಏಟು ಇದು :

ಮಹಾ ಚುನಾವಣೆ ಆರಂಭವಾಯ್ತು!
ಆಳುವ ಪಾರ್ಟಿಗಾ ಶಾಖ ಏರುತ್ತಾ ಬಂತು ॥
ಮಂತ್ರಿ ಶಾಸಕ ಗಂಟು ಮಾಡಿದ್ದೇ
ಹೆಚ್ಚಾಯಿತು ॥ ಮುಂದೆ ಸ್ಥಾನವೇ
ಅವರಿಗಿಲ್ಲವಾಗಿತ್ತು ॥ (ಕಂಠೀರವ ಮೇ ೩, ೧೯೬೭)

ಇಂತಹ ಎಷ್ಟೋ ಚಾವಟಿ ಏಟುಗಳ ಬಿಸಿ ರಾಜಕೀಯಸ್ಥರಿಗೆ ತಟ್ಟಿದೆ.

## ಅಗ್ರ ಲೇಖನಗಳು

'ಕಂಠೀರವ'ದ ಅಗ್ರ ಲೇಖನಗಳನ್ನು ಜನ ಕಾತರದಿಂದ ನೋಡುತ್ತಿದ್ದರು, ಗಮನಿಸುತ್ತಿದ್ದರು. ಹುರುಳಿ ಭೀಮರಾಯರಿಗೆ ಗಾಂಧೀ ಮಾರ್ಗದಲ್ಲಿ ಹೆಚ್ಚಿನ ನಿಷ್ಠೆ. ಕಾಂಗ್ರೆಸ್ಸಿನ ತತ್ತ್ವಗಳ ಕಡೆಗೂ ಅವರು ಒಲಿದಿದ್ದರು. ಆದರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಭವಿಸುತ್ತಿದ್ದ ರಾಜಕೀಯ ಏರುಪೇರುಗಳನ್ನು ಗಮನಿಸುತ್ತಿದ್ದರು. ಕಾಂಗ್ರೆಸ್ಸಿಗೆ ವಿರುದ್ಧವಾಗಿ ಜಸ್ಟಿಸ್ ಪಕ್ಷವನ್ನು ಅವರು ಬೆಂಬಲಿಸಿದ್ದೂ ಉಂಟು. ಸ್ವತಃ ಪಣತೊಟ್ಟು ಜಸ್ಟಿಸ್ ಪಕ್ಷದ ಶ್ರೀ ಮಹಾಬಲ ಹೆಗಡೆಯವರನ್ನು ಬೆಂಬಲಿಸಿ, ಚುನಾವಣೆಗಳಲ್ಲಿ ಅವರು ಗೆಲ್ಲುವಂತೆಯೂ ಮಾಡಿದರು. ಆ ಮಟ್ಟಿಗೆ 'ಕಂಠೀರವ' ಪ್ರಭಾವವನ್ನು ಹುರುಳಿ ಭೀಮರಾಯರು ಬೆಳೆಸಿದ್ದರು.

೧೯೬೨ರಲ್ಲಿ ನೆರೆಯ ಚೀಣೆ ವಿಶ್ವಾಸ ದ್ರೋಹವೆಸಗಿ ಭಾರತದ ಗಡಿ ಮೇಲೆ ಆಕ್ರಮಣ ಹೂಡಿದಾಗ ಸಂಪಾದಕರಾದ ಹುರುಳಿ ಭೀಮರಾಯರ ರಕ್ತ ಕುದಿಯಿತು. 'ಕಂಠೀರವ'ದ ೧೯೬೩ರ ಸ್ವಾತಂತ್ರ್ಯೋತ್ಸವ ಸಂಚಿಕೆಯಲ್ಲಿ ಚೀನೀಯರ ಈ

ದುರಾಕ್ರಮಣ ಖಂಡಿಸಿ ಹರಿತವಾದ ಅಗ್ರ ಲೇಖನವೊಂದನ್ನು ಬರೆದರು. ರಾಷ್ಟ್ರೀಯ ಐಕ್ಯ ಸಮಗ್ರತೆಗಳ ಅಗತ್ಯವನ್ನು ತಿಳಿಸಿದರು. ಇಂತಹ ಒಂದು ದುರಂತ ಸನ್ನಿವೇಶದಲ್ಲೂ ದೇಶದಲ್ಲಿ ನಡೆಯುತ್ತಿರುವ ಅನ್ಯಾಯ, ಅವಿವೇಕ, ದುರಾಡಳಿತಗಳನ್ನು ಕಂಡು ಮಮ್ಮಲ ಮರುಗಿದರು.

'ಇಂದಿನ ಸ್ವಾತಂತ್ರ್ಯ ದಿನಾಚರಣೆಯಂದು ಎಲ್ಲದಕ್ಕೂ ಮಿಗಿಲೆನಿಸಿ ರಾಷ್ಟ್ರರಕ್ಷಣೆ ಮತ್ತು ರಾಷ್ಟ್ರದ ಸಮಗ್ರತಾ ರಕ್ಷಣೆಗಳಿಗೆ ಪ್ರಾಧಾನ್ಯ ನೀಡಬೇಕಾದದ್ದು ಆದ್ಯ ಕರ್ತವ್ಯವೆಂದರೆ ತಪ್ಪಾಗಲಾರದು. ರಾಷ್ಟ್ರರಕ್ಷಣೆ ನಮ್ಮ ಹೊಣೆ ಎಂಬುದನ್ನು ಪ್ರತಿಯೊಬ್ಬ ಪ್ರಜೆಯೂ ಇಂದು ಒಪ್ಪಿಕೊಳ್ಳಬೇಕು. ರಾಷ್ಟ್ರ ರಕ್ಷಣೆಯಲ್ಲಿ ದೇಶದ ಸಮಗ್ರತೆ, ಆಳುವ ಪಕ್ಷದಲ್ಲಿ ಬಿಕ್ಕಟ್ಟು, ಜನರಲ್ಲಿ ಏಕೀಭಾವ ಇರಬೇಕಾದದ್ದು ಅತ್ಯವಶ್ಯ. ಆದರೆ ಹಾಗಿದೆಯೇ? ಆಳುವ ಪಕ್ಷದಲ್ಲಿ 'ಅತೃಪ್ತರ ಸಂಖ್ಯೆ' ಅಧಿಕವಾಗುತ್ತಿದೆ. ಹಲವು ರಾಜ್ಯಗಳಲ್ಲಿನ ಮಂತ್ರಿ ಸಂಪುಟಗಳಲ್ಲಿ ಬಿಕ್ಕಟ್ಟು ಕಂಡು ಬಂದಿದೆ. ಅಲ್ಲಿ ಕ್ಷೋಭೆ, ವಿವಾದದ ವಾತಾವರಣ, ಸ್ವರ್ಣ ಶಾಸನದಿಂದ ಲಕ್ಷಾಂತರ ಮಂದಿ ಅಕ್ಕಸಾಲಿಗರ ಅನ್ನಕ್ಕೆ ಕಲ್ಲು ಬಿದ್ದು, ಇನ್ನೂ ಅವರಿಗೆ ಸೂಕ್ತ ಪರಿಹಾರ ಕ್ರಮವಿಲ್ಲದೆ ಕೈತುತ್ತು ಹಾಕುವ ಅರ್ಧ ಮನಸ್ಸಿನ ಸಮಾಧಾನೋಕ್ತಿಗಳಾದರೂ ಹಾಗಿರಲಿ, ಮುಖ್ಯವಾಗಿ ರೈತವಾರಿ ಪದ್ಧತಿಯ ಜಮೀನನ್ನು 'ಎಸ್ಟೇಟ್' ಎಂದು ಪರಿಗಣಿಸಿ ಕೇಂದ್ರ ಸರಕಾರ ಪಾರ್ಲಿಮೆಂಟಿನ ಮುಂದಿಡಲು ನಿರ್ಧರಿಸಿರುವ ರಾಜ್ಯಾಂಗದ ೧೭ನೆಯ ತಿದ್ದುಪಡಿ ಅಂಗೀಕಾರ ಹೊಂದಿದ್ದು ಆದರೆ ದೇಶದಲ್ಲಿ ಈಗ ಕಾಣಬರುವ ಸಮಗ್ರತೆಯ ಮೇಲೆ ಕೂಡಾ ಅಗಾಧವಾದ ದುಷ್ಪರಿಣಾಮವೇ ಉಂಟಾಗದಿರದು. ಚೀನೀಯರ ಪಿಡುಗನ್ನು ದೂರಕ್ಕಟ್ಟಲು ರಾಷ್ಟ್ರವೆಲ್ಲ ಒಂದಾಗಿರಬೇಕಾಗಿದ್ದಾಗ ದೇಶದ ಸಮಗ್ರತೆಯನ್ನು ಕಲಕುವ ಇಂಥದೊಂದು ತಿದ್ದುಪಡಿಯನ್ನು ಇಷ್ಟೊಂದು ಅವಸರದಲ್ಲಿ ಇಂಥ ಸಂದಿಗ್ಧ ಸೂಕ್ಷ್ಮ ಪರಿಸ್ಥಿತಿಯಲ್ಲಿ ತರುವಂತೆ ಯೋಚಿಸಿದ್ದು ವಿವೇಕದ ಕೆಲಸವಲ್ಲ. ಪ್ರಕೃತ ಈ ತಿದ್ದುಪಡಿಯನ್ನು ಮುಂದಕ್ಕೆ ಹಾಕುವುದೇ ದೂರದೃಷ್ಟಿಯ ರಾಜನೀತಿ ಪಾಂಡಿತ್ಯಕ್ಕೊಂದು ಉಜ್ವಲ ಉದಾಹರಣೆಯಾದೀತು. ಭಾರತಕ್ಕೆ ಈಗ ಬೇಕಾಗಿರುವುದೂ ಅಷ್ಟೇ...'

ಮಂಗಳೂರಿನಂತಹ ಕರಾವಳಿಯ ತುದಿ ಮೂಲೆಯೊಂದರಲ್ಲಿ ಕುಳಿತು ಇಡೀ ದೇಶಕ್ಕೆ ಸಂಬಂಧಿಸಿದ ಒಂದು ಮಹತ್ ಸಮಸ್ಯೆಯನ್ನು ಕುರಿತು ಈ ಹಿರಿಯ ಸಂಪಾದಕ ಎಷ್ಟೊಂದು ಜವಾಬ್ದಾರಿಯುತವಾಗಿ ಚಿಂತಿಸಿದ್ದಾರೆ. ಬರೆದಿದ್ದಾರೆ, ಆತಂಕ ಹೊಂದಿದ್ದಾರೆ ಎನ್ನುವುದಕ್ಕೆ ಈ ಅಗ್ರಲೇಖನ ಒಂದು ಉದಾಹರಣೆ.

## ಕನ್ನಡ ಭಾಷಾಪ್ರೇಮ

'ಕಂಠೀರವ' ವಾರಪತ್ರಿಕೆಯನ್ನು ರಾಷ್ಟ್ರ ವಿಚಾರಗಳಲ್ಲಿ ತೊಡಗಿಸಿದವರು ಹುರುಳಿ ಭೀಮರಾಯರು. ಭಾಷೆ, ಸಾಹಿತ್ಯಗಳ ಉನ್ನತಿಗೂ 'ಕಂಠೀರವ'ವನ್ನು ವೇದಿಕೆಯನ್ನಾಗಿಸಿದರು. 'ಕಂಠೀರವ'ದ ಸುತ್ತ ಶ್ರೇಷ್ಠ ಲೇಖಕರ ಬಳಗವನ್ನೇ ಕಟ್ಟಿದರು. ದೇಶ ಸ್ವಾತಂತ್ರ್ಯದ ಜೊತೆಗೆ ಕನ್ನಡ ಭಾಷೆ ಹೊಸ ಅಭಿವ್ಯಕ್ತಿಗೂ 'ಕಂಠೀರವ'ವನ್ನು ಹೊಣೆ ಮಾಡಿದರು.

೧೯೩೨ರಲ್ಲಿ ಪ್ರಕಟವಾದ 'ಹಾಸನ ಟೋಪಿ ಅಥವಾ ಹಳೆಯ ಮೆಟ್ರಿಕ್' ಎಂಬ ಮಕ್ಕಳ ಕತೆಯಲ್ಲಿ ಅವರು ಈ ಮಾತುಗಳನ್ನು ಬರೆದಿದ್ದಾರೆ. ಇದೊಂದು ನೀಳ್ಗತೆ. 'ಟಾಮ್ ಬ್ರೌನ್ಸ್ ಸ್ಕೂಲ್ ಡೇಸ್' ಎಂಬ ಇಂಗ್ಲಿಷ್ ಪುಸ್ತಕವನ್ನು ಆಧರಿಸಿ ಅವರ ಈ ಪುಸ್ತಕ ಪ್ರಕಟವಾಗಿದೆ. ಕನ್ನಡ ಮಕ್ಕಳಲ್ಲಿ ತಮ್ಮ ಕನ್ನಡ ಭಾಷೆ, ಕರ್ನಾಟಕ ದೇಶಗಳಲ್ಲಿ ಪ್ರೀತಿ ಅಭಿಮಾನಗಳನ್ನು ಉಕ್ಕಿಸುವುದೇ ಅವರ ಈ 'ಹಾಸನ ಟೋಪಿ' ಮತ್ತು 'ಮುರುಕು ದಂಬೂಕು' ಎಂಬ ಎರಡು ನೀಳ್ಗತೆಗಳ ಮುಖ್ಯ ಉದ್ದೇಶ. ಒಂದು ಕತೆಯಲ್ಲಿ ಒಬ್ಬ ವಿದ್ಯಾರ್ಥಿ–ಮಕ್ಕಳಿಗೆ ಈ ಮಾತುಗಳನ್ನು ಹೇಳುತ್ತಾನೆ :

'ಪ್ರಮುಖ ಭಾಷೆಗಳೊಂದಿಗೆ ಕನ್ನಡವನ್ನು ಹೋಲಿಸುವಾಗ ಕನ್ನಡವು ಹಿಂದುಳಿದಿದೆ ಎಂಬುದು ನಿರ್ವಿವಾದ. ಆದುದರಿಂದ ಅದರ ಉನ್ನತಿಗಾಗಿ ನಾವೆಲ್ಲರೂ ಕೆಲಸ ಮಾಡಬೇಕು. ಆ ಕೆಲಸವನ್ನು ಮಾತ್ರ ನಾನೀಗ ಹೇಳುತ್ತೇನೆ. ಮೊದಲನೆಯದಾಗಿ, ಎಳೆಯ ಮಕ್ಕಳಲ್ಲಿ ಬಾಲ್ಯದಿಂದಲೇ ಕನ್ನಡದ ಅಕ್ಕರೆಯು ಬೆಳೆಯುವಂತೆ, ಅವರ ಅಭಿರುಚಿಗೆ ತಕ್ಕ ಪುಸ್ತಕಗಳನ್ನು ಸುಲಭವಾದ ಮಾತುಗಳಲ್ಲಿ ಬರೆದೋದಿಸಬೇಕು. ಇದನ್ನು ದಕ್ಷಿಣ ಕನ್ನಡದವರಾಗಲೇ ಕೈಗೊಂಡಿರುವರೆಂಬುದನ್ನು ತಿಳಿಸಲು ನಾನು ತುಂಬ ಸಂತೋಷಿಸುತ್ತೇನೆ. ಎರಡನೆಯದಾಗಿ ಧಾರವಾಡ ವಿದ್ಯಾವರ್ಧಕ ಸಂಘವೂ ಬೆಂಗಳೂರಿನ ಸಾಹಿತ್ಯ ಪರಿಷತ್ತೂ ಒಳ್ಳೊಳ್ಳೆಯ ಕರ್ನಾಟಕ ಗ್ರಂಥಗಳನ್ನು ಅಣಿ ಮಾಡಿಟ್ಟಿರುವರೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅದರಲ್ಲಿಯೂ ಬೆಂಗಳೂರಿನ ಕರ್ನಾಟಕ ಸಂಘವೊಂದು ತನ್ನ 'ಪ್ರಬುದ್ಧ ಕರ್ನಾಟಕ' ಎಂಬ ಮಾಸಪತ್ರಿಕೆಯ ಮೂಲಕ ಕನ್ನಡಿಗರಿಗೆ ಹೊಸ ರೀತಿಯ ಕನ್ನಡ ಗ್ರಂಥಗಳನ್ನು ಒದಗಿಸಿಕೊಟ್ಟು ಉಪಕರಿಸುತ್ತಿದೆ ಎಂಬ ಅಂಶವನ್ನಾದರೂ ನಾವಿಲ್ಲಿ ಸರ್ವಥಾ ಮರೆಯಬಾರದು.... ಮೂರನೆಯದಾಗಿ ಕರ್ನಾಟಕದಲ್ಲಿ ಹಿಂದೆ ಆಗಿ ಹೋದ ಉದ್ದಾಮ ಕವಿಗಳ ಸ್ಮಾರಕೋತ್ಸವಗಳನ್ನು ಉಚಿತವಾದ ಕಾಲದಲ್ಲಿ ನೀವೆಲ್ಲರೂ ಹೀಗೆಯೇ ಸಭೆ ಸೇರಿ ಉತ್ಸಾಹಪೂರ್ವಕವಾಗಿ ನಡೆಯಿಸಬೇಕು'.

೧೯೩೨ರಷ್ಟು ಹಿಂದೆ ಅವರು ಮಕ್ಕಳಲ್ಲಿ ಕನ್ನಡದ ಅಭಿಮಾನವನ್ನು ಹೀಗೆ ಬಿತ್ತಿದರು.

ವಿಶೇಷವೆಂದರೆ ಪತ್ರಕರ್ತರೂ-ಸಾಹಿತಿಗಳೂ ಆಗಿದ್ದ ಹುರುಳಿ ಭೀಮರಾಯರ ದೇಶಾಭಿಮಾನ, ಕನ್ನಡ ಮಮತೆ, ಭವಿಷ್ಯದಲ್ಲಿ ಕನ್ನಡದ ಮಕ್ಕಳು ತಮ್ಮ ತಾಯ್ನುಡಿಯ ಬಗೆಗೆ ತಳೆದಿರಬೇಕಾದ ಎಚ್ಚರ, ಮಾಡಬೇಕಾದ ಕರ್ತವ್ಯ ಈ ಎಲ್ಲವನ್ನೂ ಅವರು ಮಕ್ಕಳಿಗಾಗಿಯೇ ರಚಿಸಿದಂತಹ ಪುಸ್ತಕಗಳಲ್ಲಿ ಸಂಭಾಷಣೆಯ ರೂಪದಲ್ಲಿ ಬರೆದಿರುವುದು. ಇಲ್ಲಿ ಶಾಲೆಯದೇ ವಾತಾವರಣ: ಶಾಲೆಯ ಮಕ್ಕಳೇ ಪಾತ್ರಧಾರಿಗಳು. ಸುಮಾರು ಹತ್ತು ಪುಸ್ತಕಗಳನ್ನು ಹುರುಳಿಯವರು ಮಕ್ಕಳಿಗಾಗಿಯೇ ಬರೆದಿದ್ದಾರೆ. ಇವರಲ್ಲಿ ಮಕ್ಕಳಿಗೆ ಮನರಂಜಿಸುವ ಕಥೆ, ಸಾಹಸ ಸನ್ನಿವೇಶಗಳಿಗಿಂತ ಹೆಚ್ಚಾಗಿ ಕನ್ನಡ ಭಾಷೆಯಲ್ಲಿ ಮಕ್ಕಳನ್ನು ಹುರಿದುಂಬಿಸುವ ಮಾತುಗಳೇ ವಿಪುಲವಾಗಿವೆ. ಎಳೆಯ ಜನಾಂಗದಲ್ಲಿ, ಬೆಳೆಯುತ್ತಿರುವ ಮನಸ್ಸಿನಲ್ಲಿ ಕನ್ನಡದ ಕಿಚ್ಚನ್ನೂ, ಕೆಚ್ಚನ್ನೂ ಹೆಚ್ಚಿಸುವುದೇ ಹುರುಳಿಯವರ ಆಕಾಂಕ್ಷೆ. ಹತ್ತಿರದ ಹಾಗೂ ದೂರದ ಇನ್ನಿತರ ಭಾಷೆಗಳು ಮತ್ತು ಇಂಗ್ಲಿಷ್ ವ್ಯಾಮೋಹ ಮಕ್ಕಳನ್ನು ಹೇಗೆ ಕನ್ನಡ ಭಾಷೆಯಿಂದ ದೂರ ಸೆಳೆಯುತ್ತಿದೆ ಎಂಬುದನ್ನು ಹುರುಳಿಯವರು ಬಲ್ಲವರಾಗಿದ್ದರು. ಒಂದು 'ಕರ್ನಾಟಕ ಸಂಘ'ದ ಇತಿಹಾಸವನ್ನು ಹುರುಳಿಯವರು ಬಣ್ಣಿಸುತ್ತಾರೆ.

'ಇದು ಹತ್ತೊಂಬತ್ತನೆಯ ದಿನದ ಕಥೆ. ಕರ್ನಾಟಕ ಸಂಘದ ಸ್ಥಾಪಕನು ತನ್ನ ಗೋಳನ್ನು ಒಂದು ಕನ್ನಡಿಗರ ಸಭೆಯಲ್ಲಿ ಹೀಗೆ ತೋಡಿಕೊಳ್ಳುತ್ತಾನೆ. ಹ್ಯಾಗಾದರೂ ಒಂದು ಕರ್ನಾಟಕ ಸಂಘ ಸ್ಥಾಪನೆಯಾಯಿತು ಅಂತ ಆಯಿತು. ಆದರೆ ಆ ಮೊದಲಿನ ಸಭೆಯಲ್ಲಿಯೇ ಅದಕ್ಕೆ ಮಂಗಳವಾಗಿ ಹೋಯಿತು. ಈ ಸಭೆಗೆ ಸದಸ್ಯರಾದವರು, ಶೇಕಡಕ್ಕೆ ಶೇಕಡ ಪತ್ರಿಕೆಯಲ್ಲಿ ತಮ್ಮ ಹೆಸರು ಬರುತ್ತದಲ್ಲ ಎಂಬ ಸಂಭ್ರಮಕ್ಕೇ 'ನಾನು', 'ತಾನು' ಅಂತ ಮೇಲೊಡ್ಡಿಕೊಂಡು ಬಂದವರು; ೬ ಮಂದಿ ಉಪಾಧ್ಯಕ್ಷರ, ೧೨ ಮಂದಿ ಕಾರ್ಯದರ್ಶಿಗಳ, ೩೬ ಮಂದಿ ಕಾರ್ಯಕಾರಿ ಮಂಡಲದ ಸದಸ್ಯರ ಸ್ಥಾನಗಳಿಗೆ ಮಾಲೆ ಹಾಕಿಕೊಂಡವರು ಮತ್ತು ಖರ್ಚು ಎಲ್ಲಿ ತಲೆಯ ಮೇಲೆ ಬಿದ್ದು, ಕೈ ಸುಟ್ಟು ಹೋಗುತ್ತದೋ ಎಂದು ಹಿಂದೆ ಸರಿದು 'ಸಭೆಗೆ ಬನ್ನಿ' ಎಂದು ಹೇಳಿ ಕಳಿಸಿದಾಗ – ಒಂದು ಸಲ ನಾನೇ ಹೋಗಿ ಕೆಲವರನ್ನು ಕರೆದಾಗ – ಮನೆಯಲ್ಲಿ ಇದ್ದೂ ಇಲ್ಲವೆಂತಲೆ ಹೇಳಿಸಿಕೊಂಡವರು; ಹಿತ್ತಿಲ ಕಡೆ ಅರ್ಧ ಮಲೆಯಾಳಿ; ಕೆಲಸದ ಹೆಂಗಸು ಕೇರಳದವಳು; ಅಡಿಗೆಮನೆಯಲ್ಲಿ ಅರ್ಧ ತೆಲುಗು; ಅಡಿಗೆ ಹುಡುಗ ಆಂಧ್ರ ದೇಶದವ; ನಡುಮನೆಯಲ್ಲಿ ಪೂರಾ ತಮಿಳು; ಮನೆಮಾತು, ಮಾತೃಭಾಷೆ ಅದೇ; ಚಾವಡಿಯಲ್ಲಿ ತುಳು-ಕನ್ನಡ; ಆಳು ಘಟ್ಟದ ಕೆಳಗಿನವ; ಮತ್ತೆ ಬೀದಿಗಿಳಿದರೆ ಇಂಗ್ಲಿಷ್, ಮಧ್ಯೆ ಒಂದೊಂದು ಕುರುಡು ಶಬ್ದ. ಇಂಥವರನ್ನು ಕಟ್ಟಿಕೊಂಡು ಈ ಸಭೆ ಅಂತ ಮಾಡಿ ಎರಡು ಕೈಯಲ್ಲಿ ತಿಂದೆ'.

ಅದೇ ಸಭೆಯಲ್ಲಿ ಆ ಊರಿನ ಶಾಲೆಯ ಕನ್ನಡ ಪಂಡಿತರೂ ತಮ್ಮ ಅಮೋಘವಾದ ಭಾಷಣದಿಂದ ನೆರೆದ ಮಕ್ಕಳಲ್ಲಿ ಕನ್ನಡದ ಬಿತ್ತನ್ನು ಬಿತ್ತಿದರಂತೆ:

'ಕನ್ನಡದ ಗ್ರಹಚಾರ ಹಿಡಿದ ಅಧ್ಯಕ್ಷರೆ, (ಶಾಲೆ ಮುಖ್ಯೋಪಾಧ್ಯಾಯರು) ದಾಕ್ಷಿಣ್ಯಕ್ಕಾಗಿ ಹೊತ್ತು ಕಳೆಯುವುದಕ್ಕಾಗಿ ಇತ್ತ ಬಂದ ಮೂರು ಮುಕ್ಕಟೆ ಸಭಿಕರೆ, ಮುಖ್ಯೋಪಾಧ್ಯಾಯರ ಮಾತು ಮೀರಲಾರದೆ ಸಬೆಗೆ ಬಂದಿರುವ ಬೆರಳೆಣಿಕೆಯ ವಿದ್ಯಾರ್ಥಿಗಳೇ! ಕನ್ನಡದ ಮೇಲಿನ ಅಗಾಧ ಅನಾದರದಿಂದಲೋ ತಿರಸ್ಕಾರ ಬುದ್ಧಿಯಿಂದಲೋ ಈ ದಿನದ ಮುನ್ಸಿಪಲ್ ಚುನಾವಣೆಯ ಗಲಭೆಯಿಂದಲೋ ಈ ಸಭೆಗೆ ಹೊರಗಿನವರು ಹೆಚ್ಚು ಮಂದಿ ಬರಲಿಲ್ಲವೆಂಬುದು ವಿಷಾದಕರ; ಹೇಗೂ ಇಂದು ಎಳೆಯವರಾದರೂ ಮುಂದೆ ದೇಶದ, ಕನ್ನಡನಾಡಿನ ಸತ್ಪ್ರಜೆಗಳಾಗಿ ಬೆಳೆದು ಬಾಳುವವರಲ್ಲಿ ಕೆಲವರಾದ ನೀವಿಲ್ಲಿರುವುದು ನನಗೆ ಅತಿಶಯವಾದ ಆನಂದವನ್ನು ಉಂಟುಮಾಡಿದೆ. ಮುಖ್ಯವಾಗಿ ನಿಮ್ಮಲ್ಲಿ ಹಿರಿಯರು ಬಿತ್ತಲು ಯತ್ನಿಸುವ ಈ ಕನ್ನಡದ ಅಭಿಮಾನ ಬೀಜವು ಕ್ರಮಶಃ ಮೊಳೆತು, ಸಸಿಯಾಗಿ, ಗಿಡವಾಗಿ, ಮರವಾಗಿ, ಹೂ ಬಿಟ್ಟು ಫಲ ಕೊಡದಿರದೆಂದು ನನ್ನ ಅಖಂಡ ವಿಶ್ವಾಸ. ಅಲ್ಲದಿದ್ದರೆ ಈ ಪ್ರಯತ್ನಗಳೆಲ್ಲ ನಿಮ್ಮ ಔದಾಸೀನ್ಯದಿಂದಲೇ 'ಎಲ್ಲ ಬಣ್ಣ ಮಸಿ ನುಂಗಿತು' ಎಂಬಂತಾದೀತೆಂಬುದು ನೆನಪಿರಲಿ! ಕನ್ನಡದ ಉದ್ಧಾರ ಕಾರ್ಯವೂ ಭವಿಷ್ಯವೂ ವಿದ್ಯಾರ್ಥಿಗಳಾದ ನಿಮ್ಮ ಕೈಯಲ್ಲೇ ಇದೆ ಎಂಬುದು ಸದಾ ನಿಮ್ಮ ಸ್ಮರಣೆಯಲ್ಲಿರಲಿ!'

ಕನ್ನಡ ಮನೆಯ ಇಂದಿನ ಸ್ಥಿತಿಗತಿಗಳನ್ನು ಪತ್ರಕರ್ತ ಹುರುಳಿ ಭೀಮರಾಯರು ಹಾಸ್ಯವಾಗಿ ಇಲ್ಲಿ ಟೀಕಿಸಿದ್ದಾರೆ ಎನ್ನುವುದಕ್ಕಿಂತ ಹೆಚ್ಚಾಗಿ ಗೇಲಿ ಎಬ್ಬಿಸಿದ್ದಾರೆ ಎನ್ನಬಹುದು. ಈ ವ್ಯಂಗ್ಯ ವ್ಯಾಘ್ರನಖದಂತೆ ಅತ್ಯಂತ ಹರಿತವಾಗಿದೆ. ಹುರುಳಿಯವರು ಈ ಚಿತ್ರ ಬಣ್ಣಿಸಿ ಅರ್ಧಶತಮಾನವೇ ಕಳೆದಿದೆ! ಆದರೆ ಚಿತ್ರ ಇಂದಿಗೂ ಅಂದು ಇದ್ದಂತೆಯೇ ಇದೆ.

'ಭಾರತದ ಭೂಮಿಯಲ್ಲಿ ನಮ್ಮ ಕನ್ನಡ ವಾಙ್ಮಯವೂ, ಇತರ ಸಾಹಿತ್ಯಗಳೊಡನೆ ತಲೆ ಎತ್ತಿ ಓಡಾಡಬೇಕಾದರೆ, ತನ್ನ ಸ್ಥಾನಮಾನ, ಗೌರವ ಪ್ರತಿಷ್ಠೆಗಳನ್ನು ಉಳಿಸಿ ಬೆಳೆಸಬೇಕಾದರೆ, ದೇಶಪ್ರೇಮ, ಭಾಷಾನುರಾಗ, ಸಾಹಿತ್ಯಸೇವೆ, ಜನತೆಯ ಉದ್ಧಾರ, ಜ್ಞಾನಪ್ರಸಾರ, ಅಜ್ಞಾನ ನಿರ್ಮೂಲನ ಇವೇ ಮೊದಲಾದ ಉದಾತ್ತ ಆದರ್ಶಗಳೇ ಕನ್ನಡಿಗರ ಮೂಲ ಮಂತ್ರಗಳಾಗಬೇಕಾಗಿವೆ. ಕನ್ನಡತನವೊಂದೇ ನಿಮ್ಮ ನಿತ್ಯಾಹ್ನಿಕವಾಗಿರಬೇಕು. ಜಪತಪಧ್ಯಾನವಾಗಿರಬೇಕು ಕನ್ನಡದ ನುಡಿದೇವಿಯೇ ನಿಮ್ಮ ಕುಲದೇವರು, ಮನೆದೇವರು, ಅವಳ ಸ್ತೋತ್ರ ಆರಾಧನೆಯೇ ನಿಮ್ಮ ಪೂಜೆ ಪಾರಾಯಣ; ಹಂಪೆ ಬೇಲೂರುಗಳೆ ನಿಮ್ಮ ಕಾಶಿ ರಾಮೇಶ್ವರ, ತುಂಗಾ-ಕಾವೇರಿಗಳೇ ನಿಮ್ಮ ಗಂಗಾ ಯಮುನ; (ಹಂಪಿ) ವಿರೂಪಾಕ್ಷ

(ಬೇಲೂರು) ಚೆನ್ನಕೇಶವ ಸ್ವಾಮಿಗಳೇ (ಕಾಶಿ) ವಿಶ್ವನಾಥ (ಒಡ್ಡಿ) ಜಗನ್ನಾಥ ದೇವರು, ರನ್ನ ಪೊನ್ನ ಪಂಪಾದಿ ವರಕವಿಗಳೇ ನಿಮ್ಮ ವಂಶದ, ನಿಮ್ಮ ಗೋತ್ರದ, ನಿಮ್ಮ ಕುಲದ ಮಹಾಮುನಿಗಳು! ಇವಿಷ್ಟನ್ನು ಮರೆಯದಿರಿ; ಅಂದರೆ ನಮ್ಮ ಕನ್ನಡನಾಡ, ನುಡಿಯ ಉದ್ಧಾರಕ್ಕೆ ಬಹಳ ಕಾಲ ಹಿಡಿಯದು' ಎನ್ನುತ್ತಾರೆ ಹುರುಳಿ ಭೀಮರಾಯರು.

ತಾವು ಕೈಗೊಂಡ ಪತ್ರಿಕೋದ್ಯಮಕ್ಕೂ ಸಾಹಿತ್ಯ ರಚನೆಗೂ ಹೆಚ್ಚು ಭೇದವೆಣಿಸಿರಲಿಲ್ಲ ಹುರುಳಿ ಭೀಮರಾಯರು. ಪತ್ರಿಕೋದ್ಯಮಕ್ಕೂ ಭಾಷೆಗೂ ನಿಕಟ ಸಂಬಂಧ. ಒಂದು ಇನ್ನೊಂದಕ್ಕೆ ಪೂರಕ, ಭಾಷೆಯೊಂದು ಜೀವಂತವಿದ್ದರೆ ತಾನೆ ಪತ್ರಿಕೋದ್ಯಮ. ಭಾಷೆ ಮಾನವತೆಯ ಅತ್ಯುನ್ನತ ಸಂಸ್ಕೃತಿ, ಭಾಷೆ ಪುಷ್ಟಿಯಾಗಿದ್ದಷ್ಟೂ, ಪತ್ರಿಕೋದ್ಯಮವೂ ಪುಷ್ಟಿಯಾಗಿರುತ್ತದೆ. ಆದರೆ ಕನ್ನಡ ದೇಶದಲ್ಲಿ ನಾನಾ ಒತ್ತಡ, ನಾನಾ ವ್ಯಾಜ್ಯಗಳಿಂದ ಭಾಷೆ ಅನಾದರಣೆಗೆ ಈಡಾಗಿ, ಅದನ್ನು ಅವಲಂಬಿಸಿದ ಪತ್ರಿಕೋದ್ಯಮವೂ ಆಧುನಿಕ ಆಶೋತ್ತರಗಳಿಗೆ ಬೆಳೆಯದೆ ದುರ್ಬಲ, ದೈನ್ಯ ಸ್ವರೂಪವನ್ನೇ ಹೊಂದಿತ್ತು. ಅತ್ತ ಮಲೆಯಾಳ, ಇತ್ತ ತಮಿಳು ತೆಲುಗುಗಳ; ಅತ್ತ ಹಿಂದಿ, ಅತ್ತ ಇಂಗ್ಲಿಷ್ ಇವುಗಳ ನಡುವೆ ಸಿಲುಕಿ 'ಕಾಕ ಸಂಘಾತದೊಳ್ ಸಿಲುಕಿರ್ದ ಕೋಗಿಲೆಯ ಮರಿಯಂತೆ' ಕನ್ನಡ ಅಸಹಾಯಕತೆಯಿಂದ ಒದ್ದಾಡುತ್ತಿದ್ದುದನ್ನು ೧೯೧೯ರಷ್ಟು ಹಿಂದೆಯೇ ಕನ್ನಡ ಪತ್ರಿಕೋದ್ಯಮವನ್ನು ಪ್ರವೇಶಿಸಿದ ಹುರುಳಿ ಭೀಮರಾಯರು ಮೊದಲು ಕನ್ನಡ ಭಾಷೆ ಬಲವಾಗುವ ಹಾಗೂ ಎಲ್ಲರಿಂದಲೂ ಸಮಾನವಾಗಿ ಆದರಿಸಲ್ಪಡುವ ಅಗತ್ಯವನ್ನು ಕಂಡರು. ತಮ್ಮ ಪೀಳಿಗೆಯಷ್ಟೇ ಅಲ್ಲ, ಕರ್ನಾಟಕದಲ್ಲಿ ಮುಂಬರುವ ಪೀಳಿಗೆಗಳೂ ಸದಾ ಕನ್ನಡ ಜಾಗೃತಿಯನ್ನು ತಲೆಯಲ್ಲಿ ಧರಿಸಿರುವಂತೆ ಆಶಿಸಿದರು ಮತ್ತು ಅಂತಹ ಮಾತುಗಳನ್ನೇ ನುಡಿದರು, ಬರೆದರು. ಕನ್ನಡ ಪತ್ರಿಕಾ ಕರ್ತನಾಗಿ ಕನ್ನಡ ಭಾಷೆಯ ಬಗೆಗೆ ಹೆಚ್ಚಿನ ಕಾಳಜಿಯನ್ನು ಪ್ರಕಟಿಸಿದರು. ಡಾ. ಶಿವರಾಮ ಕಾರಂತರೆಂದಂತೆ 'ಅವರ ಜೀವನ ನಮ್ಮ ಈಗಿನ ಯುವಕ ಪತ್ರಿಕೋದ್ಯಮಿಗಳಿಗೆ ಮಾರ್ಗದರ್ಶಕವಾಗಿದೆ'.

'ಕಂಠೀರವ'ದ ದೆಸೆಯಿಂದ ಹುರುಳಿ ಭೀಮರಾಯರಿಗೂ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳಿಗೂ ನಿಕಟ ಸಂಪರ್ಕ ಒದಗಿ ಬಂತು. 'ಕಂಠೀರವ'ದ ದಸರಾ ಸಂಚಿಕೆಗಳಿಗೆ ಪೈಗಳು ತಪ್ಪದೆ ಲೇಖನ ಒದಗಿಸುತ್ತಿದ್ದರು. ಗೋವಿಂದ ಪೈಗಳಲ್ಲಿ ಹುರುಳಿಯವರಿಗಿದ್ದ ಗೌರವ ಅದೆಷ್ಟು ಅಗಾಧವಾದುದು, ಆತ್ಮೀಯತೆ ಅದೆಷ್ಟು ಆಳವಾದದ್ದು ಎಂಬುದನ್ನು ಹುರುಳಿ ಭೀಮರಾಯರೇ ಗೋವಿಂದ ಪೈಗಳ ಮೇಲೆ ಬರೆದ ಲೇಖನವೊಂದರಲ್ಲಿ ವಿವರಿಸುತ್ತಾರೆ.

"ನನ್ನ ಅವರ (ಗೋವಿಂದ ಪೈಗಳ) ಸಂಪರ್ಕ 'ಕಂಠೀರವ'ದ 'ದಸರಾ ಸಂಚಿಕೆ' ಮೂಲಕ ಆಯಿತು. ಅವರು ಹಲವಾರು ಅಮೂಲ್ಯ ಲೇಖನಗಳನ್ನು ಅದಕ್ಕೆ ಒದಗಿಸಿಕೊಟ್ಟರು. ತಮ್ಮ ಕೈ ಬರಹದ ಪ್ರತಿಯಲ್ಲಿ ಒಂದೆ ಒಂದು ಮುದ್ರಣದೋಷವೂ ಇರಕೂಡದೆಂದು ಮುದ್ರಣಕ್ಕೆ ಮುನ್ನ ಅದರ ಕರಡು ಪ್ರತಿ ಅಥವಾ ಕೊನೆಯ ಪ್ರೂಫ್‌ನ್ನು ತಾವೇ ಖುದ್ದಾಗಿ ತಿದ್ದಿಕೊಡುವ ಅಥವಾ ಟಪ್ಪಾಲ ಮೂಲಕ ಕಳುಹಿಸಿಕೊಡುವ ಕಟ್ಟುನಿಟ್ಟಾದ ಈ ಕ್ರಮಕ್ಕೆ 'ಕಂಠೀರವ'ನೂ ಒಂದು ಅಪವಾದವಾಗಿರಲಿಲ್ಲವೆನ್ನುವ. ಮುಂದೆ ಈ ಸಂಪರ್ಕ ಬೆಳೆದು, ಅವರ ಸ್ನೇಹ ಆದರ ಅಭಿಮಾನಿಗಳಿಗೆ ಪಾತ್ರರಾದ ನನಗೆ ಶ್ರೀ ದಾಮೋದರ ಬಾಳಿಗರ ಗ್ರಂಥವ್ಯವಹಾರ ಸಂಸ್ಥೆಯಲ್ಲಿ, ಅವರು ಮಂಗಳೂರಿಗೆ ಬಂದಾಗಲೆಲ್ಲ ತಮ್ಮ ದರ್ಶನ ನೀಡುತ್ತಿದ್ದರು. ಸಾಹಿತಿಗಳು ಮತ್ತು ಸಾಹಿತ್ಯ ವಿಷಯದಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾಗಿ ವ್ಯಕ್ತಪಡಿಸುತ್ತಿದ್ದರು. ಒಂದೊಂದೇ ಘನತರ ವಿಚಾರವನ್ನು ಅವರು ಎತ್ತಿಯಾಡುತ್ತಿದ್ದಂತೆ ಅವರೆಂಥ ಮಹಾ ಮೇಧಾವಿ ರಸಿಕರು! ಅವರ ಜ್ಞಾಪಕ ಶಕ್ತಿ ಎಷ್ಟು ಅಗಾಧ! ಹೊರ ಹಾಕಿದ್ದಕ್ಕೂ ಹೆಚ್ಚಾಗಿ ಒಳಗೆ ತುಂಬಿಕೊಂಡಂತಿರುವ ಆ ಜ್ಞಾನ ಸಂಪತ್ತು ಪಾಂಡಿತ್ಯಗಳ ಅಕ್ಷಯ ಪಾತ್ರೆಯೇ ಅವರು!!! - ಹೀಗೆ ವಿಸ್ಮಯ ಪಡುತ್ತಿದ್ದೆ. ವಸ್ತುತಃ ಕೆಲವೇ ಮಂದಿ ಅವರ ಆಪ್ತರಲ್ಲಿ ನಾನು ಒಬ್ಬನೆಂದು ಅವರು ಎಣಿಸಿದ್ದರು. ಇದು ನನ್ನ ಜೀವನದಲ್ಲಿನ ಒಂದು ಮಹಾಯೋಗ! - ಹೀಗೆ ಹುರುಳಿಯವರು ಬರೆದೂ ಶ್ರೀ ಗೋವಿಂದ ಪೈ ಅವರು 'ಕಂಠೀರವ' ದಸರಾ ಸಂಚಿಕೆಗಳಿಗೆ ಬರೆದಿದ್ದ ಕೆಲವು ಸರ್ವೋತ್ಕೃಷ್ಟ ಲೇಖನಗಳು ನನ್ನ ನಿತ್ಯ ಪಾರಾಯಣದ ಪವಿತ್ರ ಸಾಹಿತ್ಯವಾಗಿದೆ. ಅವು ನನ್ನಲ್ಲಿ ಹಾಗಿರುವಷ್ಟು ಕಾಲ ರಾಷ್ಟ್ರಕವಿ ಶ್ರೀ ಮಂಜೇಶ್ವರ ಗೋವಿಂದ ಪೈ ಅವರು ಈಗಲೂ ಮುಂದೆಯೂ ನನ್ನ ಭಾಗಕ್ಕೆ ಜೀವಂತರಾಗಿಯೇ ಇದ್ದಾರೆ" ಎಂದರು.

ಪ್ರಾಯಶಃ ಗೋವಿಂದ ಪೈಗಳ ಮೇಲೆ ಇಂತಹ ಆತ್ಮೀಯ ಚಿತ್ರವೊಂದು ಬೇರೆಡೆ ಸಿಕ್ಕಲಾರದು. ಹೇಳಿರುವಷ್ಟು ಈ ಕೆಲವು ವಾಕ್ಯಗಳಲ್ಲಿಯೇ ಗೋವಿಂದ ಪೈಗಳ ವ್ಯಕ್ತಿತ್ವ, ಅವರ ಹಲವಾರು ಗುಣಸ್ವಭಾವಗಳೂ ಅಡಕವಾಗಿರುವುದನ್ನು ಕಾಣಬಹುದು.

## ಸಾಹಿತ್ಯ ಸೇವೆ

'ನಾನೇನೂ ಕನ್ನಡದಲ್ಲಿ ಸಾಕಷ್ಟು ನುರಿತವನಲ್ಲ. ಗ್ರಂಥ ರಚನೆಗೆ ಬೇಕಾದ ಸಾರ್ಥಕ ಶಬ್ದ, ಸಂಪ್ರದಾಯ, ಪದಗಳ ಸಂಗ್ರಹವಾಗಲಿ, ಯಥಾ ಯೋಗ್ಯವಾದ ಭಾಷಾವ್ಯಾಕರಣವಾಗಲಿ ನನ್ನಲ್ಲಿ ಇಲ್ಲ. ಎನ್ನುವ ಹುರುಳಿ ಭೀಮರಾಯರು ಸುಮಾರು ಹತ್ತು ಕೃತಿಗಳನ್ನು - ಬಹುವಾಗಿ ಮಕ್ಕಳಿಗಾಗಿ - ಬರೆದಿದ್ದಾರೆ. ತಾರಾ (ಕಾದಂಬರಿ ೧೯೧೩); ರಜಿಯಾಬೇಗಂ (೧೯೪೪);

ಪಾಪ ಪುಣ್ಯ (ಕಾದಂಬರಿ ೧೯೨೩); ಹಾಸನ ಟೋಪಿ (ನೀಳ್ಗತೆ ೧೯೩೨); ಸ್ವಲ್ಪ ನಗಬಾರದೇ? (ಹಾಸ್ಯ) ಪಾಪ್ಪೋಸಿನ ಪಜೀತಿ; ಗುಪ್ಚಿ, ಪಾಯಸ; ಗಪ್ಪದ ಅಜ್ಜಯ್ಯ ಇವು ಮೂರು ಮಕ್ಕಳ ಕಥೆಗಳು (೧೯೩೫); ಮುರುಕು ದಂಬೂಕು (೧೯೪೭); ಆಧುನಿಕ ಭಾರತ (೧೯೪೯). ಹುರುಳಿ ಭೀಮರಾಯರದು ಸಾಹಿತ್ಯ ಸೇವೆಯಲ್ಲ; ಪತ್ರಿಕಾ ವೃತ್ತಿ. ಆದರೆ ಇವೆರಡರ ಮಧ್ಯೆಯೂ ಹೆಚ್ಚು ಭೇದವೆನಿಸದಂತೆ ದುಡಿದವರು. ಶ್ರೀ ಹುರುಳಿಯವರು ಅಧ್ಯಾಪಕ ವೃತ್ತಿಯಿಂದ ಬದುಕನ್ನು ಆರಂಭಿಸಿದವರಾದ ಕಾರಣದಿಂದ ಮಕ್ಕಳನ್ನು ಮುದಗೊಳಿಸುವ, ಮುಂದಕ್ಕೊಯ್ಯುವ ಕೈಂಕರ್ಯದಲ್ಲೂ ನಿರತರಾಗಿದ್ದರು. ಕಥಾ ರೂಪದಲ್ಲಿ ಕೆಲವನ್ನು ಹೇಳಿದ್ದಾರೆ; ಮತ್ತೆ ಕೆಲವಕ್ಕೆ ನಾಟಕ ರೂಪವನ್ನು ಬಳಸಿದ್ದಾರೆ.

ಪತ್ರಿಕಾವ್ಯವಸಾಯಿಗಳಾದ ಹುರುಳಿ ಭೀಮರಾಯರಿಗೆ ಸಹಜವಾಗಿಯೇ ಇನ್ನಿತರ ಕಲೆಗಳಲ್ಲಿಯೂ ಆಸಕ್ತಿ; ನಾಟಕ, ಯಕ್ಷಗಾನಗಳೆಂದರೆ ಗೀಳು. ರಂಗಭೂಮಿಯ ಮೇಲೆ ನಟರೂ ಆಗಿದ್ದ ಅವರು ಸ್ತ್ರೀಪಾತ್ರಧಾರಿಗಳಾಗಿದ್ದೂ ಉಂಟು. ಚಿಕ್ಕಂದಿನಿಂದಲೂ ಹಿರಿಯಣ್ಣನ ಜೊತೆಗೆ ದಶಾವತಾರ ಆಟಗಳಿಗೆ ಹೋಗಿಬರುತ್ತಿದ್ದರು. ಮನೆಯಲ್ಲಿಯೇ ನಾಟಕ, ಸಂಗೀತ, ಯಕ್ಷಗಾನಗಳ ವಾತಾವರಣವಿದ್ದುದರಿಂದ ಹುರುಳಿಯವರಿಗೆ ಆ ಬಗೆಗೆ ಆಕರ್ಷಣೆ ಒದಗಿದುದು ಅಸಹಜವೇನಲ್ಲ. ಕವಿ ಮುದ್ದಣನೆಂದರೆ ಅವರಿಗೆ ಎಲ್ಲಿಲ್ಲದ ಅಭಿಮಾನ. ಚಿಕ್ಕಂದಿನಲ್ಲಿ ಮುದ್ದಣ ಕವಿ ತಮ್ಮ ಮನೆಗೆ ಬಂದು ಹೋಗುತ್ತಿದ್ದುದನ್ನು ಅವರು ಕಂಡಿದ್ದರು. ಕರೆದಲ್ಲಿಗೆ ತೆರಳಿ ಮುದ್ದಣನ ಮೇಲೆ ಉಪನ್ಯಾಸಗಳನ್ನು ಕೊಡುತ್ತಿದ್ದರು. ನಾಟಕ ಕಲೆಯನ್ನು ಕುರಿತಾದ ಅವರ ಹಲವು ಬಿಡಿಲೇಖನಗಳು ಕರ್ನಾಟಕದ ಇನ್ನಿತರ ಪತ್ರಿಕೆಗಳಲ್ಲೂ ಪ್ರಕಟವಾಗಿವೆ. ಯಕ್ಷಗಾನ ಕಲೆ ತನ್ನ ಸಂಪ್ರದಾಯದ ಜಾಡು ಬಿಟ್ಟು ಅವನತಿಗಿಳಿಯುತ್ತದೆಯೇ – ಎನ್ನುವುದಕ್ಕೆ ಅವರು ಸಂಕಟಪಡುತ್ತಿದ್ದರು.

'ಈ ಕಲೆ (ಯಕ್ಷಗಾನ) ಈಗೀಗ ಕ್ಷೀಣಿಸುತ್ತಿದೆ. ಕಲಾವಿದರ ಕಷ್ಟಜೀವನ ಇಷ್ಟ ಜೀವನವಾಗಿ ಮಾರ್ಪಡುತ್ತಿದೆ. ಹಳೆ ಸಂಪ್ರದಾಯವನ್ನು ಒಂದೊಂದಾಗಿ ಕೈಬಿಡುತ್ತಾ ಬರುವ ಈ ಮನೋದೌರ್ಬಲ್ಯ ಅಧಿಕವಾಗುತ್ತಿದೆ. ಹಳೆ ಕ್ರಮವನ್ನೇಕೆ ಅನುಸರಿಸಬಾರದೆನ್ನುವ ಪ್ರಶ್ನೆಗೆ ಏಕೆ ಅನುಸರಿಸಬೇಕೆನ್ನುವ ಇನ್ನೊಂದು ಪ್ರಶ್ನೆಯೇ ಉತ್ತರವಾಗುತ್ತಿದೆ. ಮನಸ್ಸಿಗೆ ಬಂದದ್ದೋ ದುಡ್ಡಿಗೆ ಅನುಕೂಲವಾದದ್ದೋ 'ಸುಧಾರಣೆ' ಎನಿಸುತ್ತದೆ. ಕಲಾರಕ್ಷಣೆಯ ಗೊಡವೆ ಇಲ್ಲದ ಜನರಂಜನೆಯ ಮಾರ್ಗ ಮಾತ್ರ ಹುಡುಕಲಾಗುತ್ತಿದೆ.'

## ಬಡತನವನ್ನು ಸ್ವೀಕರಿಸಿದ ಪತ್ರಿಕಾಕರ್ತ

ಪತ್ರಿಕಾಕರ್ತನಾದವನಿಗೆ ತನ್ನ ಸುತ್ತಲ ಎಲ್ಲ ಸುದ್ದಿ – ಸಂಗತಿಗಳೂ ಸಂಬಂಧಪಟ್ಟವೆ. ರಾಜಕೀಯ ಭ್ರಷ್ಟಾಚಾರಕ್ಕೆ ತಿರುಗುತ್ತಿರುವುದು, ವ್ಯಕ್ತಿಗಳೂ, ಪ್ರಜಾಸತ್ತಾತ್ಮಕ ಸಂಘ ಸಂಸ್ಥೆಗಳೂ ಅವನತಿಗೊಳ್ಳುತ್ತಿರುವುದು, ಜನರ ದೈನಂದಿನ ಬದುಕು ದುರ್ಭರವಾಗುತ್ತಿರುವುದು, ಕಲೆಗಳು ಅಧೋಗತಿಗಿಳಿಯುತ್ತಿರುವುದು – ಈ ಎಲ್ಲಕ್ಕೂ ಪ್ರಾಮಾಣಿಕ ಪತ್ರಿಕಾಕರ್ತನ ಹೃದಯ ಸ್ಪಂದಿಸುತ್ತದೆ. ಯಕ್ಷಗಾನದ ಕ್ಷೀಣಿಸುತ್ತಿರುವ ಸ್ಥಿತಿಗೆ ಹುರುಳಿ ಭೀಮರಾಯರ ಮನಸ್ಸು ಘಾಸಿಗೊಂಡದ್ದೂ – ಪ್ರಾಮಾಣಿಕ ಪತ್ರಕರ್ತನದು.

ಅರ್ಧ ಶತಮಾನದಷ್ಟು ಅನತಿಕಾಲವೇ ಪತ್ರಿಕೋದ್ಯಮವನ್ನು ನೇಮನಿಷ್ಠೆಗಳಿಂದ ವೃತ್ತಿ ಪತ್ರಿಕೋದ್ಯಮಿಯಾಗಿ ಹಿಡಿದು ನಡೆಸಿದ ಹುರುಳಿಯವರಿಗೆ ಭೌತಿಕವಾಗಿ ಯಾವುದೇ ಸುಖ ಸಂಪದಗಳು ದೊರೆಯಲಿಲ್ಲ. ಅದಕ್ಕೆ ಪ್ರತಿಯಾಗಿ ಉಡುಪಿಯಲ್ಲಿದ್ದ ಅವರ ಮನೆತನದ ಅಲ್ಪಸ್ವಲ್ಪ ಆಸ್ತಿಯೂ ಕರಗಿ ಹೋಯಿತು. ಅವರಿಗಾಗಿ ಒಂದು ಸ್ವಂತ ಮನೆಯೂ ಇರಲಿಲ್ಲ. ಮಂಗಳೂರಿನ ಪಾಂಡೇಶ್ವರದ ಒಂದು ಬಾಡಿಗೆ ಮನೆಯಲ್ಲಿಯೇ ತಮ್ಮ ಜೀವನದ ಬಹುಭಾಗದನ್ನು ಕಳೆದರು. ಬಡತನವನ್ನೇ ಜೀವಿತ ತತ್ತ್ವವನ್ನಾಗಿ ಸ್ವೀಕಾರ ಮಾಡಿದರು.

ಹುರುಳಿಯವರು ೧೯೪೩ರಲ್ಲಿ ಮಂಗಳೂರು ಮುನ್ಸಿಪಲ್ ಕೌನ್ಸಿಲ್‌ನ ಸದಸ್ಯರಾಗಿದ್ದರು. ಮಂಗಳೂರು ಮಿತ್ರಮಂಡಲಿಯೇ ಮುಂತಾದ ಹಲವು ಸಂಘಸಂಸ್ಥೆಗಳ ಸದಸ್ಯರಾಗಿದ್ದರು.

ಹುರುಳಿಯವರ ಕುಟುಂಬ ಚಿತ್ರವೆಂದರೆ ಇಷ್ಟು. ಮೊದಲ ಹೆಂಡತಿ ಗತಿಸಿದ ಮೇಲೆ ಎರಡನೆಯ ಹೆಂಡತಿ ಗೌರಮ್ಮ ಅವರನ್ನು ವಿವಾಹವಾದರು. ಇವರಿಗೆ ಹುಟ್ಟಿದ ಮಕ್ಕಳು ನಾಲ್ಕು – ಇಬ್ಬರು ಗಂಡು, ರಾಮಚಂದ್ರ ಮತ್ತು ಸುಧಾಕರ. ಇಬ್ಬರೂ ಸಿಂಡಿಕೇಟ್ ಬ್ಯಾಂಕಿನಲ್ಲಿ ಕೆಲಸದಲ್ಲಿದ್ದಾರೆ. ಇಬ್ಬರು ಹೆಣ್ಣು ಮಕ್ಕಳು – ಅನಸೂಯಾ ಮತ್ತು ಅಹಲ್ಯ. ಅನಸೂಯ ಕತೆಗಾರ್ತಿಯಾಗಿದ್ದಾರೆ. ಮೊದಲ ಹೆಂಡತಿಯಲ್ಲಿ ಒಬ್ಬ ಮಗಳಿದ್ದಾಳೆ.

ಸೀಮಿತವಾದ ಈ 'ಕುಟುಂಬ'ಕ್ಕಿಂತಲೂ ಹುರುಳಿಯವರ ಪತ್ರಿಕೋದ್ಯಮ 'ಸಂಸಾರ' ಬಹು ದೊಡ್ಡದು. ಅತ್ಯಂತ ದೊಡ್ಡ ಬೌದ್ಧಿಕ ವರ್ಗದ ಮಿತ್ರ ಸಂಪತ್ತನ್ನು ಅವರು ಸಂಪಾದಿಸಿದರು. ಅವರೊಡನೆ ವ್ಯವಹರಿಸುವುದು ಅವರೊಡನೆ ಕೂಡಿ ಬಾಳುವುದು ಅವರಿಗೆ ಅತ್ಯಂತ ಸಂತಸದ ಹಿತ ತರುವ ಕೆಲಸವಾಗಿತ್ತು. 'ಕಂಠೀರವ' ವಾರಪತ್ರಿಕೆಯನ್ನು ಉಚ್ಚಮಟ್ಟದಲ್ಲಿ

ನಿರ್ವಹಿಸಲು ಸದಾ ಶ್ರಮಿಸುತ್ತಿದ್ದರು. ಸಹಜವಾಗಿಯೇ ಹಾಸ್ಯ ಪ್ರವೃತ್ತಿಯುಳ್ಳವರಾಗಿದ್ದ ಹುರುಳಿಯವರು ಬದುಕನ್ನು 'ಹೊರೆ'ಯೆಂದು ಬಗೆಯದೆ 'ಹರ್ಷ'ವೆಂದೇ ಸ್ವೀಕರಿಸಿದರು. ಪತ್ರಿಕೋದ್ಯಮವನ್ನು ಅವರು ಕಂಡ ರೀತಿ ಇದು:

'ಹಾಯಾಗಿ ಆರಾಮ ಕುರ್ಚಿಯಲ್ಲಿ ಕುಳಿತು ಕಾಲು ನೀಡಿ ಈ ಕಾಷ್ಟವ್ಯಸನದಿಂದ ದೂರವಿರುವಂತಿರಲಿಲ್ಲ. ಒಟ್ಟಿನಲ್ಲಿ ಪತ್ರಿಕೋದ್ಯಮವೆಂಬುದು ಜೀವನಕ್ಕೊಂದು ವ್ಯಾಪ್ತಿ – ಆದರೆ ಶ್ರದ್ಧಾಭಕ್ತಿಯಿಂದ ಶ್ರಮವಹಿಸಿ ಸಮಾಜಕ್ಕೆ ಆದರ್ಶ ಮಾರ್ಗದರ್ಶನ ನೀಡಬೇಕೆಂಬ ಧ್ಯೇಯದಿಂದ ದುಡಿಯುವ ಸಾಹಸಿಗಳಿಗೆ ಇದೊಂದು ಸಾರ್ಥಕ ಸಂತೃಪ್ತಿಯನ್ನು ನೀಡುವ ಕಾಮಧೇನುವೂ ಹೌದು. ◆

## ೩೮. ಮೊಹರೆ ಹಣಮಂತರಾಯರು

### (೧೮೯೭-೧೯೬೦)

✍ ಶ್ರೀ ಆರ್.ಕೆ. ಜೋಶಿ

ಆನೆಗಾತ್ರದ ಮೊಹರೆ ಹನುಮಂತರಾಯರು ಆನೆ ಗಾಂಭೀರ್ಯದ ನಡಿಗೆಯಿಂದಲೆ ಭರತಖಂಡದ ಉದ್ದಗಲಕ್ಕೂ ಸಂಚರಿಸಿ ಪತ್ರಿಕಾ ಸೇವೆ, ಅದರಂತೆ ರಾಷ್ಟ್ರಸೇವೆ ಗೈದ ಮಹಾಪುರುಷರಲ್ಲೊಬ್ಬರು. ಮೊಹರೆ ಅವರ ಪತ್ರಿಕಾ ಸೇವೆ, ಕೇವಲ ಉತ್ತರ ಕರ್ನಾಟಕಕ್ಕೆ ಸೀಮಿತವಾಗಿದ್ದಿಲ್ಲ; ಕರ್ನಾಟಕವನ್ನೂ ಅದು ವ್ಯಾಪಿಸಿತ್ತು; ಭಾರತೀಯ ಪತ್ರಿಕಾ ಕ್ಷೇತ್ರದಲ್ಲಿ ಕನ್ನಡ ಪತ್ರಿಕಾ ರಂಗದ ಬಾವುಟ ಹಾರಿಸಿದ ಮೊಹರೆ ಹನುಮಂತರಾಯರ ವ್ಯಕ್ತಿತ್ವ ಮರೆಯುವಂತಹದಲ್ಲ.

ಇಂಥ ವ್ಯಕ್ತಿತ್ವ ಬೆಳೆಯಲು ಅವರು ಬಾಳಿದ ರೀತಿಯೇ ಮುಖ್ಯ ಕಾರಣ. ಮೊಹರೆ ಹನುಮಂತರಾಯರು ತಿಲಕ - ಗಾಂಧೀಜಿ ಯುಗದ ಬಂಟರು. ಆ ಸಮಯದಲ್ಲಿ ಹದಿವಯಸ್ಸಿಗೆ ಬಂದವರನ್ನೆಲ್ಲ ತಿಲಕ-ಗಾಂಧೀಜಿಯ ರಾಷ್ಟ್ರೀಯ ವಿಚಾರಗಳು ಮುತ್ತುತ್ತಿದ್ದವು. ಮೊಹರೆ ಪುಣೆ ಡೆಕ್ಕನ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಪ್ರವೇಶಿಸಿದಾಗ, ತಿಲಕರ ರಾಷ್ಟ್ರೀಯ ವಿಚಾರಗಳು ನಾಡನ್ನೆಲ್ಲ ವ್ಯಾಪಿಸಿದ್ದವು. ಅವರು ಮುಂಬಯಿಯಲ್ಲಿ ಕಾಲೇಜನ್ನು ಬಹಿಷ್ಕರಿಸಿದಾಗ, ಗಾಂಧೀಜಿಯ ಅಸಹಕಾರ ಆಂದೋಲನ ಕಹಳೆ ಭಾರತದಲ್ಲಿ ದಿಗಂತವದರೆಗೂ, ಮೊಳಗಿತ್ತು. ಈ ರಾಷ್ಟ್ರೀಯ ವಿಚಾರ ಸಾಗರದಲ್ಲಿ ಮುಳುಗೆದ್ದ ಮೊಹರೆ, ಮೊದಲು ಧುಮ್ಮಿಕ್ಕಿದುದು ಸ್ವಾತಂತ್ರ್ಯ ಹೋರಾಟದಲ್ಲಿ; ಆನಂತರ ಆ ಹೋರಾಟಕ್ಕೆ ಸಾಧನವೆಂದು ಪತ್ರಿಕಾ ರಂಗವನ್ನು ಆರಿಸಿಕೊಂಡರು. ಸುದೀರ್ಘವಾದ ತಮ್ಮ ಸಾರ್ವಜನಿಕ ಜೀವನದಲ್ಲಿ ಪತ್ರಿಕಾ ರಂಗ ಹಾಗೂ ಸ್ವಾತಂತ್ರ್ಯ ಹೋರಾಟಕ್ಕೆ ಸಲ್ಲಿಸಿದ ಸೇವೆ ಅಮೋಘ. ಕೆಲ ಕಾಲದ ನಂತರ ಕರ್ನಾಟಕ ಏಕೀಕರಣ ಸೂತ್ರವೊಂದು ಅದರಲ್ಲಿ ಸೇರಿಕೊಂಡಿತು. ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕ ಇವು ಅವರು ಸಂಪಾದಕರಾಗಿದ್ದ "ಸಂಯುಕ್ತ ಕರ್ನಾಟಕ" ದಿನಪತ್ರಿಕೆಯ ಧ್ಯೇಯ ಸೂತ್ರಗಳು. ಮೊಹರೆ ಹನುಮಂತರಾಯರು ತಮ್ಮ ಸೇವಾಜೀವನದಲ್ಲಿ ಅವೆರಡನ್ನೂ ಸಾಧಿಸಿ ಕೃತಕೃತ್ಯರಾದರು. ಕೌಟುಂಬಿಕ ಜೀವನದ ಮೇಲೆ ತುಲಸೀ ಪತ್ರ ಇಟ್ಟು, ಪತ್ರಿಕಾ ರಂಗಕ್ಕೆ ಅತ್ಯಂತ ನಿಷ್ಠೆಯ ಸೇವೆ ಸಲ್ಲಿಸಿದರು.

### ಸ್ವಾತಂತ್ರ್ಯ ಹೋರಾಟದ ಆಕರ್ಷಣೆ

೧೯೧೫ರಲ್ಲಿ ಪ್ರೌಢ ಶಿಕ್ಷಣಕ್ಕೆಂದು ಮೊಹರೆ ಪುಣೆಯ ಡೆಕ್ಕನ್ ಕಾಲೇಜು ಸೇರಿದರು. ಉತ್ತರ ಕರ್ನಾಟಕದಲ್ಲಿ ಆಗಿನ್ನೂ ಕಾಲೇಜ್ ಶಿಕ್ಷಣದ ಅನುಕೂಲತೆಗಳಿದ್ದಿಲ್ಲ. ಬುದ್ಧಿವಂತ ವಿದ್ಯಾರ್ಥಿಗಳು ಹೆಚ್ಚಿನ ವ್ಯಾಸಂಗಕ್ಕಾಗಿ ಪುಣೆ-ಮುಂಬಯಿಗೆ ಹೋಗಬೇಕಾಗುತ್ತಿತ್ತು; ಪುಣೆಯ ಫರ್ಗ್ಯುಸನ್ ಕಾಲೇಜು ಖಾಸಗಿ ಸಂಸ್ಥೆ. ಆದರೆ ಗೋಖಲೆ-ತಿಲಕರ ಪ್ರಭಾವದಿಂದ ಆಕರ್ಷಕ ಕೇಂದ್ರವೆನಿಸಿತ್ತು. ಕಾಲೇಜು ಯಾವುದಿದ್ದರೂ ಪುಣೆ ನಗರವು ಮಾತ್ರ ಉದಯೋನ್ಮುಖ ಕ್ರಾಂತಿಕಾರರು ಹಾಗೂ ಸ್ವಾತಂತ್ರ್ಯ ಹೋರಾಟಗಾರರನ್ನು ತೂಗಿ ತರಬೇತುಗೊಳಿಸುವ ತೊಟ್ಟಿಲಾಗಿತ್ತು. ಲೋಕಮಾನ್ಯ ಬಾಲಗಂಗಾಧರ ತಿಲಕರು ಈ ಹೋರಾಟದ ಹರಿಕಾರರು; ನಾಡಿನಲ್ಲಿ ಇಂಥ ಕ್ರಾಂತಿಕಾರಿ ವಾತಾವರಣ ಹಬ್ಬಿದ ಸಮಯದಲ್ಲಿಯೇ ಯುವಕ ಮೊಹರೆ ಹನುಮಂತರಾಯರು ಕ್ರಾಂತಿ ಕೇಂದ್ರ ಪುಣೆ ನಗರದ ಡೆಕ್ಕನ್ ಕಾಲೇಜನ್ನು ಸೇರಿದ್ದರು. ಮೊಹರೆಯವರ ಓದು ಒಕ್ಕಲಾಗಿದ್ದರೆ, ರಾಷ್ಟ್ರೀಯ ವಿಚಾರಗಳ ಮಥನ ಮತ್ತು ಮನನ ಮುಕ್ಕಾಲು ಭಾಗವಾಗಿದ್ದಿತು. ಪಠ್ಯಪುಸ್ತಕಗಳನ್ನು ಬದಿಗಿರಿಸಿ, ಕೇಸರಿ ಪಠಣ ಮತ್ತು ಪಠ್ಯಕಾಲಿಕ ಗ್ರಂಥಗಳ ಮನನ ನಡೆಯುತ್ತಿತ್ತು. ಸಾಯಂಕಾಲ ಆಟನೋಟಗಳ ಬದಲು, ಪುಣೆಯಲ್ಲಿ ಆಗ ನಡೆಯುತ್ತಿದ್ದ ರಾಜಕೀಯ ಭಾಷಣ ಕೇಳಲು ಮುಕುರುತಿದ್ದರು. ಲೋಕಮಾನ್ಯ ತಿಲಕ, ಆ್ಯನಿ ಬೆಜಂಟ, ಮಾಲವೀಯ, ಸಿ.ಆರ್.ದಾಸ, ಬಿಪಿನ್ ಚಂದ್ರಪಾಲ ಮೊದಲಾದವರ ಭಾಷಣಗಳನ್ನು ಆಸ್ಥೆಯಿಂದ ಕೇಳುವದಲ್ಲದೆ, ಅನೇಕ ವರ್ಷಗಳ ವರೆಗೂ ಮೆಲಕು

ಹಾಕುತ್ತಿದ್ದರು. ಮೊಹರೆ ಕಷ್ಟಪಟ್ಟು ಓದಿ ೧೯೧೮ರಲ್ಲಿ ಇಂಟರ್‌ಮೀಡಿಯೇಟ್ ಪರೀಕ್ಷೆ ಪಾಸಾದರು. ಮುಂಬಯಿಗೆ ತೆರಳಿ ಪದವೀ ಅಭ್ಯಾಸಕ್ಕಾಗಿ ಎಲಫಿನ್‌ಸ್ಟನ್ ಕಾಲೇಜು ಪ್ರವೇಶಿಸಿದರು. ೧೯೨೧ ರಲ್ಲಿ ಅವರು ಬಿ.ಎ. ಪರೀಕ್ಷೆಗೆ ಕಟ್ಟಿದ್ದರು, ಆದರೆ ಪರೀಕ್ಷೆಗೆ ಶರಣು ಹೊಡೆದು, ಸ್ವಗ್ರಾಮಕ್ಕೆ ಮರಳಿದರು. ಮಗ ವಕೀಲನಾಗಿ ಮನೆತನಕ್ಕೆ ಶೋಭೆ ತರಲೆಂದು ಆಶಿಸಿದ ತಂದೆ ರಾಘಣ್ಣನಾಯಕರಿಗೆ ನಖಶಿಖಾಂತ ಖಾದಿಧಾರಿಯಾಗಿ ಬಂದಿದ್ದ ಮಗನನ್ನು ನೋಡಿ, ನಿರಾಶೆ ಆಗಬೇಕಿತ್ತು; ಆದರೆ ಆಗಲಿಲ್ಲ; ಮಗನ ವಿಚಾರ ವೈಭವಕ್ಕೆ ಮನಸೋತರು.

## ಪತ್ರಿಕಾವೃತ್ತಿ ಪ್ರಾರಂಭ

ಪುಣೆ ನಗರ ಬಿಟ್ಟು ಮುಂಬಯಿಗೆ ತೆರಳುವಾಗಲೇ ಮೊಹರೆಯವರಲ್ಲಿ ವಿಚಾರ ಕ್ರಾಂತಿಯಾಗಿತ್ತು. ಸಾರ್ವಜನಿಕ ಸೇವಾ ಮುದ್ರೆ ಅವರ ಮುಖದ ಮೇಲೆ ಮೂಡಿತ್ತು; 'ಕೇಸರಿ' ಓದಿ, ಪತ್ರಿಕೆಯ ಪ್ರಚಂಡ ಶಕ್ತಿಯ ಪರಿಚಯ ಮಾಡಿಕೊಂಡಿದ್ದರು. ಹೀಗಾಗಿ ಕಾಲೇಜಿನ ಬಿಡುವಿನ ದಿನಗಳಲ್ಲಿ ವಿಜಾಪುರಕ್ಕೆ ಆಗಮಿಸಿದಾಗ, ದೇಶಪಾಂಡೆ ಜಯರಾಮರ 'ಕರ್ನಾಟಕ ವೈಭವ' ಸಾಪ್ತಾಹಿಕದಲ್ಲಿ ಆಗಾಗ ಲೇಖನಗಳನ್ನು ಬರೆಯುತ್ತಿದ್ದರು. ಜಯರಾಯರಿಗೆ ಸಂಪಾದನೆಯ ಕಾರ್ಯದಲ್ಲಿಯೂ ನೆರವಾಗುತ್ತಿದ್ದರು. ತಾವು ಬರೆದುದು ಪತ್ರಿಕೆಯಲ್ಲಿ ಅಚ್ಚಾದುದನ್ನು ಓದಿದಾಗ ರೋಮಾಂಚನವಾಗುತ್ತಿತ್ತಂತೆ! ನಾನು ಇಷ್ಟು ಚೆನ್ನಾಗಿ ಬರೆಯಬಲ್ಲೆನೆ ಎಂದು ಅವರಿಗೇ ಅಚ್ಚರಿಯಾಗುತ್ತಿತ್ತೆಂದು ಅವರು ಹೇಳಿದ್ದು ನನ್ನ ನೆನಪಿನಲ್ಲಿದೆ.

ಅವರು ವಿಜಾಪುರಕ್ಕೆ ಮರಳಿದ ಮೇಲೆ ಸುಮ್ಮನೆ ಕುಳಿತುಕೊಳ್ಳದೆ, ಕಾಂಗ್ರೆಸ್ ಕಾರ್ಯವನ್ನೂ ಪತ್ರಿಕಾ ವ್ಯವಸಾಯವನ್ನೂ ಕೈಗೆತ್ತಿಕೊಂಡರು. ವಿಜಾಪುರದಲ್ಲಿ ಆಗಲೇ ರಾಷ್ಟ್ರೀಯ ಕಾರ್ಯರಂಗ ಅಣಿಯಾಗಿತ್ತು. ದಿವಂಗತ ಕೌಜಲಗಿ ಶ್ರೀನಿವಾಸರಾವ, ಜಯರಾವ ದೇಶಪಾಂಡೆ, ಕೌಜಲಗಿ ಹನುಮಂತರಾವ ಮತ್ತು ತಿಳಗೂಳ ರಂಗರಾವ ಮೊದಲಾದವರು ಗಾಂಧೀ ದೀಕ್ಷೆ ತೊಟ್ಟು, ವಕೀಲವೃತ್ತಿ ತೊರೆದು ರಾಷ್ಟ್ರಸೇವೆಗೆ ಸನ್ನದ್ಧರಾಗಿದ್ದರು. ಮೊಹರೆ ಹನುಮಂತರಾಯರೂ ಆ ಗುಂಪು ಸೇರಿದರು. ಸೇರಿದವರೇ ವಿಜಾಪುರ ಜಿಲ್ಲಾ ಕಾಂಗ್ರೆಸ್ ಮತ್ತು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ಸದಸ್ಯರಾದರು. ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿ, ತರುಣರ ಪಡೆಯನ್ನೇ ನಿರ್ಮಿಸಲು ಮುಂದಾದರು.

'ಕರ್ನಾಟಕ ವೈಭವ' ೧೮೯೨ರಲ್ಲಿ ಪ್ರಾರಂಭವಾಯಿತು. ಸ್ವಾತಂತ್ರ್ಯ ಹೋರಾಟದ ವಿಚಾರಗಳನ್ನು ಬಿತ್ತಿ ಬೆಳೆಯಲು ಮುಡಿಪಾಗಿತ್ತು. ಉತ್ತರ ಕರ್ನಾಟಕದಲ್ಲಿ ಹತ್ತಿಪ್ಪತ್ತು ಪತ್ರಿಕೆಗಳು ಪ್ರಕಟವಾಗುತಿದ್ದವು. ಹತ್ತೊಂಭತ್ತನೇ ಶತಮಾನದ ಕೊನೆಯಲ್ಲಿ ಹದಿನೇಳು ಕನ್ನಡ ಪತ್ರಿಕೆಗಳು ಅಸ್ತಿತ್ವದಲ್ಲಿದ್ದವೆಂದು ಮದ್ರಾಸ್ ವರದಿಯೊಂದರಿಂದ ತಿಳಿಯುತ್ತದೆ. ಆ ಹದಿನೇಳರಲ್ಲಿ 'ಕರ್ನಾಟಕ ವೈಭವ'ವೂ ಒಂದು. ಪತ್ರಿಕೆಯ ಮಾಲೀಕರು ಜಯರಾವ ದೇಶಪಾಂಡೆ ಅವರು ವಕೀಲರು ಮತ್ತು ಉಜ್ವಲ ರಾಷ್ಟ್ರಭಕ್ತರು. ಇದೇ ಸಮಯಕ್ಕೆ ಮೊಹರೆ ಅವರೂ ಈ ಪತ್ರಿಕೆಯಲ್ಲಿ ೧೯೨೧ರಲ್ಲಿ ಉಪಸಂಪಾದಕರೆಂದು ಸೇರಿದ್ದರು.

ಗಾಂಧೀ ಯುಗ ಆರಂಭದ ಹೊತ್ತಿಗೆ ನಾನಾಸಾಹೇಬ ದೇಸಾಯಿ, ಗುರುನಾಥ ಬೇವೂರ (ಹಿಂದಿನಿಂದ ಇವರು ಐ.ಸಿ.ಎಸ್. ಅಧಿಕಾರಿಗಳಾಗಿದ್ದರು). ಕೃಷ್ಣರಾವ ದೇಶಪಾಂಡೆ ಮೊದಲಾದವರು ಲೇಖನಗಳನ್ನು ಬರೆಯುತಿದ್ದರು. ಕೆಲವು ಲೇಖನಗಳು ಇಂಗ್ಲಿಷ್ ಭಾಷೆಯಲ್ಲಿಯೂ ಇರುತ್ತಿದ್ದವು. ಆ ಸಮಯದಲ್ಲಿ ಮೊಹರೆ ತಮ್ಮ ೨-೩ ಇಂಗ್ಲಿಷ್ ಲೇಖನಗಳನ್ನು ಪ್ರಕಟಿಸಿರುತ್ತಾರೆ. ಹೋಂರೂಲ್ ಚಳವಳಿಯ ಕಾವು ದೇಶವನ್ನೆಲ್ಲ ವ್ಯಾಪಿಸಿತ್ತು. ರಂಗರಾವ ತಿಳಗೂಳರು ಸಂಪಾದಕರಾಗಿದ್ದರು. ಅವರಿಗೆ ಕನ್ನಡ ಬರುತಿದ್ದಿಲ್ಲ. ಮರಾಠಿಯಲ್ಲಿ ಬರೆದುದನ್ನು ಉಪ-ಸಂಪಾದಕ ಮೊಹರೆ ಕನ್ನಡಿಸುತ್ತಿದ್ದರು. ಮುದವೀಡು ಕೃಷ್ಣರಾಯರು ಧಾರವಾಡ ಗೋಳಿಬಾರಿನ ಬಗೆಗೆ "ಧಾರಾತೀರ್ಥವಾದ ಧಾರವಾಡ" ಎಂಬ ಲೇಖನವನ್ನು ಬಿಳಿಯರ ರಕ್ತ ಹೆಪ್ಪುಗಟ್ಟುವಂತೆ ಬರೆದಿದ್ದರು. ಆ ಗೋಳಿಬಾರಿನ ವಾರ್ಷಿಕೋತ್ಸವದಲ್ಲಿ ಮೊಹರೆ ಹನುಮಂತರಾಯರು, ಆ ಲೇಖನದ ಮುಖ್ಯ ಭಾಗಗಳನ್ನು ಅಗ್ರ ಲೇಖನದಲ್ಲಿ ಸೇರಿಸಿ ತೀಕ್ಷ್ಣ ಟೀಕೆ ಮಾಡಿದ್ದರು. ಅದರ ಬಿಸಿ ಸಂಪಾದಕ ರಂಗರಾವ ತಿಳಗೂಳ ಇವರಿಗೆ ತಟ್ಟಿತು. ಆ ಲೇಖನ ೧೨೪ ಆ ಕಾಲಮಿನನ್ವಯ ರಾಜದ್ರೋಹಾತ್ಮಕವೆಂದು ಜಿಲ್ಲಾ ನ್ಯಾಯಾಧೀಶ ಬಾಲಕರಾಮ ತಿಳಗೂಳರಿಗೆ ೩೦೦ ರೂ. ದಂಡ, ತಪ್ಪಿದರೆ ಮೂರು ತಿಂಗಳ ಶಿಕ್ಷೆ ವಿಧಿಸಿದರು. ಅಲ್ಲಿಗೆ ತಿಳಗೂಳರ ಸಂಪಾದಕತ್ವ ಮುಗಿಯಿತು.

## ಬೇಡಿ ಹಾಕಿ ಮೆರವಣಿಗೆ

ಇಂತು ತೆರವಾದ 'ಕರ್ನಾಟಕ ವೈಭವ'ದ ಸಂಪಾದಕರ ಸ್ಥಾನವನ್ನು ಮೊಹರೆ ಹನುಮಂತರಾಯರು ತುಂಬಿದರು. ಇದು ಸಂಭವಿಸಿದ್ದು ೧೯೨೨ನೇ ಸೆಪ್ಟೆಂಬರದಲ್ಲಿ. ಸಂಪಾದಕತ್ವದ ಸಂಪೂರ್ಣ ಹೊಣೆ ಹೊತ್ತುಕೊಂಡ ಮೊಹರೆ ತಮ್ಮ ಹರಿತ ಲೆಕ್ಕಣಿಕೆಯನ್ನು ಎತ್ತಿಕೊಂಡು, ಅದನ್ನು ಇನ್ನಷ್ಟು ಮಸೆದು ಹರಿತಗೊಳಿಸಿದರು. ಅವರ ಲೆಕ್ಕಣಿಯ ಪರಿಣಾಮ ಮೊದಲೇ

ಸಾಮಾನ್ಯವಾದುದಾಗಿರಲಿಲ್ಲ. ಈಗ ಅವರೇ ಸಂಪಾದಕರಾದ್ದರಿಂದ, ಅವರ ಲೆಕ್ಕಣಿಕೆ ಇನ್ನೂ ಹರಿತವಾದುದರಲ್ಲಿ ಸಂದೇಹವೇನು? ಉಗ್ರ ರಾಷ್ಟ್ರೀಯತ್ವದ ಕುಲುಮೆಯಲ್ಲಿ ಹಾದು ಬಂದವರು ಮೊಹರೆ. ಸಂಪಾದಕರಾದ ಮೇಲೆ ಅವರ ತಪಸ್ಸು ಇನ್ನೂ ಉಗ್ರವಾಯಿತು. ಆಗ ವಿಜಾಪುರ ಜಿಲ್ಲೆಯ ಕಲೆಕ್ಟರನಾಗಿದ್ದ ಹೆಂಡರಸನ್‌ರ ಮೇಲೆಯೆ ಮೊದಲು ಎರಗಿದರು. ಹೆಂಡರಸನ್‌ರು ಆಗ ಕುರುಡರ ವೈದ್ಯಕೀಯ ಉಪಚಾರಕ್ಕಾಗಿ ಒಂದು ಆಸ್ಪತ್ರೆ ಕಟ್ಟಿಸುವ ಯೋಜನೆ ಹಮ್ಮಿಕೊಂಡು, ನಿಧಿ ಸಂಗ್ರಹದಲ್ಲಿ ತೊಡಗಿದ್ದರು. ಉದ್ದೇಶ ಉದಾತ್ತವಿದ್ದರೂ ಧನ ಸಂಗ್ರಹದಲ್ಲಿ ದಬ್ಬಾಳಿಕೆ ತುಂಬಿದ್ದಿತು. ಮೊಹರೆ ಹನುಮಂತರಾಯರು ಅದೇ ವಿಷಯವನ್ನೆತ್ತಿಕೊಂಡು ತೀಕ್ಷ್ಣ ಲೇಖವೊಂದನ್ನು ಪ್ರಕಟಿಸಿದರು. ಹೆಂಡರಸನ್‌ರಿಗೆ ಅಷ್ಟೇ ಸಾಕಾಗಿತ್ತು. ಅವರು ೧೯೨೩ ಎಪ್ರಿಲ್‌ನಲ್ಲಿ ಮೊಹರೆ ಅವರ ಮೇಲೆ ರಾಜದ್ರೋಹದ ಖಟ್ಲೆ ಹಾಕಿ, ತಾವೇ ಅದನ್ನು ವಿಚಾರಿಸಿ, ಆರೋಪಿಗೆ ಎರಡು ವರುಷ ಸಶ್ರಮ ಶಿಕ್ಷೆ ಹಾಗೂ ಸಾವಿರ ರೂ. ದಂಡ ವಿಧಿಸಿದರು. ಮೊಹರೆ ಅವರ ಕೆಚ್ಚು ಮುರಿಯಲು ಹೆಂಡರ್‌ಸನ್ ಡೊಂಬರಲಾಗವನ್ನೇ ಹಾಕಿದರು. ಮೊಹರೆ ಅವರ ಕೈಗೆ ಬೇಡಿ ತೊಡಿಸಿ, ಸೊಂಟಕ್ಕೆ ಹಗ್ಗ ಕಟ್ಟಿ ವಿಜಾಪುರ ಜೇಲಿನಿಂದ ನಡೆಸಿಕೊಂಡೇ ವಿಚಾರಣೆಯ ಸ್ಥಾನಕ್ಕೆ ಪೋಲೀಸರು ಅವರನ್ನು ಕರೆತಂದರು. ಹೆಂಡರಸನ್ ಶಿಕ್ಷೆ ವಿಧಿಸಿದ ಮೇಲೆ ಮೊಹರೆಯವರನ್ನು ಅದೇ ರೀತಿ ಮತ್ತೆ ಜೇಲಿಗೆ ಕರೆದೊಯ್ಯಲಾಯಿತು. ದಂಡದ ಹಣವನ್ನು ಆಗಿಂದಾಗ್ಗೆ ವಸೂಲಿ ಮಾಡಿ, ಶಿಕ್ಷೆ ಅನುಭವಿಸುವುದಕ್ಕೆ ಪುಣೆಯ ಹತ್ತಿರವಿರುವ ಯರವಡಾ ಸೆರೆಮನೆಗೆ ಕಳಿಸಿದರು. ಹೆಂಡರಸನ್ನರು ಅವರನ್ನು ಹೀಗೆ ಕ್ರೂರತನದಿಂದ ನಡೆಸಿಕೊಂಡರೂ ಮೊಹರೆ ಧೃತಿಗೆಡಲಿಲ್ಲ; ಗಾಂಧೀಜಿ ಅನುಯಾಯಿಯಾಗಿದ್ದ ಅವರು ಹಸನ್ಮುಖರಾಗಿಯೇ ಶಿಕ್ಷೆಯನ್ನು ಸ್ವಾಗತಿಸಿದರು. ಸೆರೆಮನೆಯಲ್ಲಿ ಸಹ ಅವರನ್ನು ಗೂಂಡಾ ಕೈದಿಗಳನ್ನಿಡುವ ವಿಶಿಷ್ಟ ಕೋಣೆಯಲ್ಲಿ ಇರಿಸಿದ್ದರು. ಆದರೇನು ಮೊಹರೆ ಅವರ ಉಕ್ಕಿನ ಕೆಚ್ಚು ಕಿಂಚಿತ್ತೂ ಮುಕ್ಕಾಗಿರಲಿಲ್ಲ. ವಿಜಾಪುರದ ನಾಗರಿಕರಂತೂ ಅವರ ಮೇಲೆ ಅಭಿನಂದನೆಗಳ ಸುರಿಮಳೆಯನ್ನೇ ಕರೆದರು. ಮೊಹರೆಯವರ ಬಂಧನದ ಹಿಂದೆಯೇ ಆ ಪತ್ರಿಕೆಯ ಸಂಪಾದಕರಾಗಿ ಹೊಣೆ ಹೊತ್ತಿದ್ದ ಕೌಜಲಗಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ಅಂದೇ ಸಾಯಂಕಾಲ ಪ್ರಚಂಡ ಸಾರ್ವಜನಿಕ ಸಭೆಗೂಡಿ ಮೊಹರೆಯವರನ್ನು ಅಭಿನಂದಿಸಲಾಯಿತು.

ಮೊಹರೆಯವರ ಪ್ರಸ್ತುತ ಲೇಖನದ ಪ್ರಕಾಂಡ ಕತೆ ಇಲ್ಲಿಗೇ ಮುಗಿಯಲಿಲ್ಲ. ಅದು ಆಳರಸರ ಖಂಡನೆಯ ಅತ್ಯುತ್ತಮ ಲೇಖನವೆಂದು ಉಡುಪಿಯ 'ಸಾಧ್ವಿ' ಪತ್ರಿಕೆ ಮರುಪ್ರಕಟಿಸಿದ್ದಿತು. ಅದಕ್ಕಾಗಿ ಆ ಪತ್ರಿಕೆಯ ಸಂಪಾದಕ ರಾಮರಾವ್ ಮಲ್ಯ ಹಾಗೂ ಎಚ್. ನಾರಾಯಣರಾಯರು ತಲಾ ಒಂದು ವರುಷ ಶಿಕ್ಷೆ ಅನುಭೋಗಿಸಬೇಕಾಯಿತು.

ಇಷ್ಟೆಲ್ಲ ರಾಜಕೀಯ ಅನಾಹುತಕ್ಕೆ ಕಾರಣವಾದ ಲೇಖನದ ತಲೆಬರಹ 'ಕರ್ನಾಟಕ ವೀರರೇ' ಎಂಬುದಾಗಿತ್ತು. ಅಂದಿನ ಬಿಳಿಯ ಆಡಳಿತಗಾರರು ಅದನ್ನು "Ye Warriors of Karnataka" (ಕರ್ನಾಟಕ ಯೋಧರೇ) ಎಂದು ಭಾಷಾಂತರಿಸಿ, ಅದಕ್ಕೆ ರಾಜದ್ರೋಹದ ಹಣೆಪಟ್ಟಿ ಕಟ್ಟಿದರು. ಈ ದೋಷವನ್ನು ಎತ್ತಿ ತೋರಿಸಿದರೂ ಹೆಂಡರಸನ್‌ರು ಕಿವಿಯಲ್ಲಿ ಹಾಕಿಕೊಳ್ಳಲೇ ಇಲ್ಲ.

## 'ಹೊಣೆ ನನ್ನದು-ಶಿಕ್ಷೆಗೆ ಸಿದ್ಧ'

ಮೊಹರೆ ಹನುಮಂತರಾಯರು ಕಟ್ಟಾ ಗಾಂಧೀವಾದಿಗಳು; ಅಸಹಕಾರದ ದೀಕ್ಷೆ ತೊಟ್ಟವರು. ಅಸಹಕಾರ ಸತ್ಯಾಗ್ರಹಿಗಳು ಆಳರಸರು ನಡೆಸುವ ನ್ಯಾಯ ವಿಚಾರಣೆಯಲ್ಲಿ ಭಾಗವಹಿಸದೆ, ಕೇವಲ ಒಂದು ಹೇಳಿಕೆ ನೀಡಬೇಕು ಮತ್ತು ಶಿಕ್ಷೆಯನ್ನು ನಗುಮೊಗದಿಂದಲೇ ಸ್ವಾಗತಿಸಬೇಕೆಂದು ಗಾಂಧೀಜಿಯ ಕಟ್ಟಪ್ಪಣೆ ಇದ್ದಿತು; ವಿಜಾಪುರ ನ್ಯಾಯ ವಿಚಾರಣೆಯಲ್ಲಿ ಮೊಹರೆ ಅದನ್ನು ಚಾಚೂ ತಪ್ಪದೆ ಪಾಲಿಸಿದರು. ಅವರು ಹೆಂಡರಸನ್ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಸಲ್ಲಿಸಿದ ಲೇಖಿ ಕೈಫಿಯತ್ತು ಐತಿಹಾಸಿಕವೂ ಉಲ್ಲೇಖನೀಯವೂ ಇದೆ: ಅದರ ಪೂರ್ತಿ ಪಾಠ ಇಲ್ಲಿದೆ:

(೧) ನನ್ನ ಮೇಲೆ ಖಟ್ಲೆ ಆದ ಲೇಖನವನ್ನು ನಾನೇ ಬರೆದು ಕರ್ನಾಟಕ ವೈಭವದಲ್ಲಿ ಮುದ್ರಿಸಿ ಪ್ರಕಟಿಸಿರುತ್ತೇನೆ. ಈ ವರ್ತಮಾನ ಪತ್ರದ ಸಂಪಾದಕನೂ ನಾನು ಇದ್ದೆ. ಆದ್ದರಿಂದ ಈ ಲೇಖನದ ಬಗ್ಗೆ ಪೂರ್ಣ ಹೊಣೆಗಾರಿಕೆ ನನ್ನದು.

(೨) ಪ್ರಚಲಿತ ರಾಜ್ಯ ಪದ್ಧತಿ ನಿರ್ಜೀವವೂ ಬಾದರಾಯಣವೂ ಇರುವದರಿಂದ ಈಗಿನ ೨೦ನೇ ಶತಮಾನದಲ್ಲಿ ನಮ್ಮ ಆಶೋತ್ತರ ಪೂರೈಸಲು ಯೋಗ್ಯವಾಗಿರುವುದಿಲ್ಲ. ಆದುದರಿಂದ ಇಂಥ ರಾಜ್ಯ ಪದ್ಧತಿಯೊಡನೆ ಅಸಹಕಾರ ಮಾಡಿ, ಜನತೆಗೂ ಆ ರೀತಿ ಮಾಡುವಂತೆ ಹೇಳುವದು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ. ಹೀಗೆ ಮಾಡುವಾಗ ಪ್ರಚಲಿತ ರಾಜ್ಯ ಪದ್ಧತಿ ಸುಧಾರಿಸಬೇಕೆಂಬ ಉದ್ದೇಶದಿಂದ ಅದರ ಮೇಲೆ ನನ್ನ ಟೀಕಾಸ್ತ್ರ ಹೂಡುವದೂ ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ. ಪ್ರಸ್ತುತ ಲೇಖನದಲ್ಲಿ ಕರ್ನಾಟಕದ ತರುಣರಿಗೆ ರಾಷ್ಟ್ರ ಸೇವಕರಾಗಲಿಕ್ಕೆ ಹೇಳುವಾಗ ಈಗಿನ ಸರಕಾರದ ನಿಜಸ್ವರೂಪವನ್ನು ಬಯಲಿಗೆಳೆದುದಕ್ಕೆ ನನಗೆ ಅಭಿಮಾನವೆನಿಸುತ್ತದೆ.

(೩) ನನ್ನ ತಿಳುವಳಿಕೆಯ ಪ್ರಕಾರ ಈಗ ಆಕ್ಷೇಪಿಸಲ್ಪಟ್ಟಿರುವ ಲೇಖನವು ಇ.ಪಿ.ಕೋಡಿನ ೧೨೪ ಅ ಕಲಮಿನ ಪ್ರಕಾರ ರಾಜದ್ರೋಹಾತ್ಮಕ ಆಗಲಾರದು. ಬೇರೆ ಬೇರೆ ಹೈಕೋರ್ಟುಗಳ ನಿರ್ಣಯಗಳೂ ಈ ನನ್ನ ತಿಳುವಳಿಕೆಯನ್ನು ದೃಢೀಕರಿಸುತ್ತವೆ. ಆದರೂ ಈ ೧೨೪ ಅ ಕಲಮನ್ನು ನೌಕರಶಾಹಿಯವರು ಅನೇಕ ಸಲ ತಮಗೆ ಅನುಕೂಲವಾಗುವಂತೆ ಜಗ್ಗಿ ಜಗ್ಗಿ ಅರ್ಥಮಾಡಿ, ದುರುಪಯೋಗ ಮಾಡಿಕೊಂಡ ಉದಾಹರಣೆಗಳು ನನ್ನ ಕಣ್ಮುಂದೆ ಇರುವದರಿಂದ ನನ್ನ ಈ ಲೇಖನವು ರಾಜದ್ರೋಹಾತ್ಮಕ ಆಗದೇ ಇರುವದಿಲ್ಲೆಂದು ಹೇಳುವ ನಿರರ್ಥಕ ಗೋಜಿಗೆ ಹೋಗುವುದಿಲ್ಲ.

೪) ಈ ಖಟ್ಲೆಯಲ್ಲಿಯೂ ಸರಕಾರದ ಪರವಾಗಿ ನನ್ನ ಲೇಖನದ ತಪ್ಪು ಭಾಷಾಂತರ ಹಾಜರ ಮಾಡುವುದಲ್ಲದೆ, ನನ್ನ ಹಿಂದಿನ ಸಂಪಾದಕರಿಗಾದ ಎಚ್ಚರಿಕೆ ಜಾಮೀನು ಮತ್ತು ಶಿಕ್ಷೆಯ ನಿರ್ಣಯಗಳನ್ನು ಮಂಡಿಸಿದ್ದಾರೆ. ನನ್ನ ಮೇಲಿರುವ ಖಟ್ಲೆಯಲ್ಲಿ ಇವುಗಳ ಯಾವ ಸಂಬಂಧವೂ ಇರುವದಿಲ್ಲ.

೫) ನನ್ನ ಮಾತೃಭೂಮಿಯ ಉದ್ಧಾರ ಅಹಿಂಸಾತ್ಮಕ ಅಸಹಯೋಗದಿಂದಲೂ ನೌಕರಶಾಹಿಯಿಂದ ನಮಗಾಗುವ ಆತ್ಮ ಕ್ಲೇಶದ ಯೋಗದಿಂದಲೂ ಆಗುವದೆಂದು ನನಗೆ ಪೂರ್ಣ ವಿಶ್ವಾಸವಿರುವದರಿಂದ ನನಗೆ ಈ ನ್ಯಾಯಾಲಯದಿಂದಾಗುವ ಶಿಕ್ಷೆಯನ್ನು ಅನುಭವಿಸಲಿಕ್ಕೆ ಸಿದ್ಧನಿದ್ದೇನೆ. ಈ ನ್ಯಾಯಾಲಯದ ನಿರ್ಣಯ ಏನೇ ಆಗಲಿ ನನ್ನ ಮಾತೃಭೂಮಿಯ ಸಲುವಾಗಿ ಬೇಕಾದಂಥ ಕ್ಲೇಶಗಳನ್ನು ಸಹಿಸುವ ಸಾಮರ್ಥ್ಯವನ್ನು ಪರಮಾತ್ಮನು ನನಗೆ ಕರುಣಿಸಲೆಂದು ಪ್ರಾರ್ಥಿಸುತ್ತೇನೆ. ಈ ನ್ಯಾಯಾಧೀಶರ ವಿಷಯದಲ್ಲಿ ಪ್ರೇಮಭಾವನೆಯ ಹೊರತು ಇನ್ನಾವುದೂ ಇರುವುದಿಲ್ಲ"

ಮೊಹರೆ ಹನುಮಂತರಾಯರ ಈ ಕೈಫಿಯತ್ತು ಅವರ ಉನ್ನತಮಟ್ಟದ ಧೀರೋದಾತ್ತ ಪತ್ರಿಕಾ ಧರ್ಮವನ್ನೂ ಉಜ್ವಲ ರಾಷ್ಟ್ರಭಕ್ತಿಯನ್ನೂ ಎತ್ತಿತೋರಿಸುತ್ತದೆ.

ಮೊಹರೆಯವರು ಸೆರೆವಾಸ ಮುಗಿಸಿಕೊಂಡು, ಮತ್ತೆ ಸಾರ್ವಜನಿಕ ಸೇವಾರಂಗಕ್ಕೆ ಇಳಿದುದು ೧೯೨೫ನೇ ವರುಷದ ಪ್ರಾರಂಭದಲ್ಲಿ. ಆಗ ರಾಷ್ಟ್ರದ ಪರಿಸ್ಥಿತಿ ವ್ಯತ್ಯಾಸಗೊಂಡಿತ್ತು. ಕಾಂಗ್ರೆಸ್ ಮುಂದಾಳುಗಳಲ್ಲಿ ಇಬ್ಬಣವಾಗಿತ್ತು. ಮೋತಿಲಾಲ ನೆಹರು, ಚಿತ್ತರಂಜನದಾಸ ಮೊದಲಾದವರು, ಕೌನ್ಸಿಲ್ ಪ್ರವೇಶ ಮಾರ್ಗ ಅನುಸರಿಸಬೇಕೆಂದು ಹಟತೊಟ್ಟರೆ, ಗಾಂಧೀಜಿ, ಸಿ. ರಾಜಗೋಪಾಲಾಚಾರ್ಯರಂಥವರು ಅಸಹಕಾರವೇ ಯೋಗ್ಯ ಮದ್ದು ಎಂದು ಪ್ರತಿಪಾದಿಸಿದರು. ಮೊಹರೆ, ಇವರಲ್ಲಿ ಯಾವ ಗುಂಪನ್ನೂ ಬೆಂಬಲಿಸುವುದಕ್ಕೆ ಅವಸರ ಮಾಡದೆ, ದೂರ ನಿಂತು ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು. ಜೊತೆಗೆ ಎಂದಿನಂತೆ ಕರ್ನಾಟಕ ವೈಭವದ ಸಂಪಾದಕತ್ವವನ್ನು ಮತ್ತೆ ನಿರ್ವಹಿಸಿ, ಮುಂದಿನ ಹೋರಾಟಕ್ಕೆ ಅಣಿಗೊಳಿಸುತ್ತಿದ್ದರು. ಈ ಸಮಯದಲ್ಲಿ, ಅಂದರೆ ೧೯೨೫ರಿಂದ ೧೯೩೦ ವರೆಗೆ, ಅವರ ಜೀವನ ಒಂದು ರೀತಿಯಿಂದ ಸುಗಮವಾಗಿದ್ದರೂ ಹೋರಾಟವನ್ನು ಬಿಟ್ಟುಕೊಟ್ಟಿದ್ದಿಲ್ಲ.

ಮೊಹರೆಯವರ ಪತ್ರಿಕಾಸೇವೆ ಏಕಮುಖಿವಾಗಿದ್ದಿಲ್ಲ; ಅದಕ್ಕೆ ಅನೇಕ ಮುಖಗಳಿದ್ದವು. ೧೯೨೮ರಲ್ಲಿ ಕರ್ನಾಟಕ ಪತ್ರಿಕೋದ್ಯಮಿಗಳ ಪರಿಷತ್ತನ್ನು ಬಾಗಲಕೋಟೆಯಲ್ಲಿ ಯಶಸ್ವಿಯಾಗಿ ಸಂಘಟಿಸಿದ್ದರು. ಮೊಹರೆ ಅವರ ಕಾರ್ಯದರ್ಶಿ ಮತ್ತು ಸಂಘಟಕರು. ಬೆಂಗಳೂರಿನ ಪ್ರಸಿದ್ಧ ಪತ್ರಕರ್ತ ಡಾ. ಡಿ.ವಿ. ಗುಂಡಪ್ಪನವರು ಈ ಪರಿಷತ್ತಿನ ಅಧ್ಯಕ್ಷರು. ಇದರ ಆರನೆಯ ಅಧಿವೇಶನ ೧೯೫೦ನೇ ಡಿಸೆಂಬರಿನಲ್ಲಿ ಮುಂಬಯಿ ಮಹಾನಗರದಲ್ಲಿ ಸೇರಿದಾಗ, ಮೊಹರೆ ಹನುಮಂತರಾಯರೇ ಅಧ್ಯಕ್ಷರಾಗುವ ಸುಯೋಗ ಪ್ರಾಪ್ತವಾಗಿತ್ತು.

ಆಗ ಮಹಾತ್ಮಾಗಾಂಧೀಜಿ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕೆ ಕರೆಕೊಟ್ಟರು. ಮೊಹರೆ ಅವರು ಕಾಯಾ ವಾಚಾ ಮನಸಾ ಸತ್ಯಾಗ್ರಹ ಬೆಂಬಲಿಸಿ, ಪತ್ರಿಕಾ ಲೇಖನ ಬರೆಯುವದಲ್ಲದೆ, ಸ್ವತಃ ಉಪ್ಪಿನ ಕಾಯಿದೆ ಭಂಗ ಮಾಡಿದರು. ಅದಕ್ಕಾಗಿ ಅವರಿಗೆ ಒಂದು ವರುಷ ಕಾರಾಗೃಹವಾಸ ಶಿಕ್ಷೆ ಮತ್ತು ೨೫೦ ರೂ ದಂಡ ವಿಧಿಸಲಾಯಿತು. ಅದನ್ನು ಪೂರೈಸುವಷ್ಟರಲ್ಲಿ ಮಹಾತ್ಮಾ ಗಾಂಧಿಯವರು ೧೯೩೨ರಲ್ಲಿ ಕರ ನಿರಾಕರಣ ಚಳವಳಿ ಘೋಷಿಸಿದರು. ಕಾಯಿದೆ ಭಂಗ ಚಳವಳಿ ಪ್ರಾರಂಭವಾಗುವ ಮೊದಲೆ ಅದನ್ನು ಹತ್ತಿಕ್ಕುವದು ಆಳರಸರ ಗುರಿಯಾಗಿತ್ತು. ೧೯೩೨ ಜನವರಿಯಲ್ಲಿ ಕಾಂಗ್ರೆಸು ಅಕ್ರಮವೆಂದು ಘೋಷಿಸಿ, ಅದರ ಎಲ್ಲ ಕಚೇರಿಗಳಿಗೂ ಬೀಗ ಮುದ್ರೆ ಹಾಕಿದರು. ಗಾಂಧೀಜಿಯವರನ್ನೂ ಮುಖಂಡರನ್ನೂ ಬಂಧಿಸಿದರು. ಆದರೆ ಜನತಾ ಆಂದೋಲನದ ಮುಂದೆ ದಬ್ಬಾಳಿಕೆಗೆ ಜಯ ಹೇಗೆ ಸಾಧ್ಯ? ಕಾಂಗ್ರೆಸ್ ಆದೇಶದಂತೆ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಅಧಿವೇಶನ ಸೇರಿಸಲು ವಿಜಾಪುರ ಜಿಲ್ಲಾ ಕಾಂಗ್ರೆಸ್ ಮುಂದಾಳಾದ ಮೊಹರೆ ಮೊದಲಾದವರು ನಿರ್ಣಯಿಸುವದೇ ತಡ ಅವರು ಬಂಧಿಸಲ್ಪಟ್ಟರು. ಆದರೂ ನಿಶ್ಚಿತ ದಿನದಂದು, ಅಂದರೆ ೧೯೩೨, ಮೇ ೨೮ ರಂದು ಆ ಅಧಿವೇಶನ ಹನುಮಂತಾಚಾರ್ಯ ಪುರೋಹಿತರ ಅಧ್ಯಕ್ಷತೆಯಲ್ಲಿ ಜರುಗುವುದೇನೂ ತಪ್ಪಲಿಲ್ಲ. ಮೊಹರೆಯವರ ಬಂಧನಕ್ಕೆ ಆಳರಸರು ಕೊಟ್ಟ ಕಾರಣ, ಆಕ್ಷೇಪಾರ್ಹ ಕಾಗದ ಪತ್ರಗಳು ಅವರ ಮನೆಯಲ್ಲಿ ಝಡತಿ ಕಾಲಕ್ಕೆ ಸಿಕ್ಕವೆಂದು! ಈ ಸಲ ಅವರಿಗೆ ಎರಡು ವರುಷ ಶಿಕ್ಷೆ ವಿಧಿಸಲಾಗಿತ್ತು. ಅವರು ಈ ಶಿಕ್ಷೆಯನ್ನು ವಿಜಾಪೂರ ಸೆರೆಮನೆಯಲ್ಲಿಯೇ ಕಳೆದರು. ಕಾಂಗ್ರೆಸ್ ಆಂದೋಲನದಲ್ಲಿ ನಾಮಾಂಕಿತರೆನಿಸಿದ ಕನ್ನಯ್ಯಲಾಲ ಮುನಶಿ, ಡಾ. ಜೀವರಾಜ ಮೇಥಾ, ಉಮಾಶಂಕರ ದೀಕ್ಷಿತರು

ಮೊದಲಾದವರು ಆ ಜೇಲಿನಲ್ಲಿ ಮೊಹರೆಯವರ ಸಂಗಾತಿಗಳಾಗಿದ್ದರು. ಅಲ್ಲಿ ಪ್ರಾರಂಭವಾದ ಸ್ನೇಹ ಮೊಹರೆಯವರ ಜೀವನದುದ್ದಕ್ಕೂ ಬೆಳೆದು ಬಂದಿತು. ವಿಜಾಪೂರ ಜೇಲಿನಿಂದ ಮೊಹರೆ ಬಿಡುಗಡೆ ಹೊಂದಿದ್ದು ೧೯೩೩ನೇ ಸೆಪ್ಟಂಬರದಲ್ಲಿ. ಅವರು ಕರ್ನಾಟಕ ವೈಭವದ ಸಂಪಾದಕತ್ವ ನಿರ್ವಹಿಸಿಕೊಂಡರು ಮತ್ತು ತಮ್ಮ ಹರಿತ ಲೆಕ್ಕಣಿಕೆಯನ್ನು ಮತ್ತೆ ಹಿರಿದು, ಎಂದಿನಂತೆ ಕಾರ್ಯಮಗ್ನರಾದರು.

## 'ಸಂಯುಕ್ತ ಕರ್ನಾಟಕ'ದ ಹೊಣೆ

೧೯೩೪ನೇ ವರುಷ, ಮೊಹರೆ ಹನುಮಂತರಾಯರ ಜೀವನದಲ್ಲಿ ಮಹತ್ವದ ತಿರುವು. ಜೇಲಿನಿಂದ ಬಿಡುಗಡೆಯಾಗಿ ಬಂದು ಒಂದೆರಡು ತಿಂಗಳುಗಳಾಗಿರಲಿಕ್ಕಿಲ್ಲ, ಅಷ್ಟರಲ್ಲಿ ಬೆಳಗಾವಿಯಿಂದ, 'ಸಂಯುಕ್ತ ಕರ್ನಾಟಕ'ದ ಆಡಳಿತಗಾರರಿಂದ ಕರೆ ಬಂದಿತು. 'ಸಂಯುಕ್ತ ಕರ್ನಾಟಕ' ಪತ್ರಿಕೆಯೆಂದರೆ, ಉತ್ತರ ಕರ್ನಾಟಕದ ಜನತೆಯ ಸೇವೆಗಾಗಿ ಒಂದು ದೊಡ್ಡ ದೈನಿಕ ಕಟ್ಟುವ ಕನಸಿನ ಪ್ರತೀಕ. 'ಸಂಯುಕ್ತ ಕರ್ನಾಟಕ' ಪ್ರಾರಂಭವಾದದ್ದರಿಂದ ಬೆಳಗಾವಿಗೆ ಕನ್ನಡ ದೈನಿಕ ಸಿಕ್ಕಿತೇನೋ ನಿಜ. ಆದರೆ ಅದರ ಜೀವನ ಕುಂಟುತ್ತ, ಕೂರುತ್ತ ಸಾಗಿತ್ತು. ಅದನ್ನು ಸ್ಥಾಪಿಸಿದವರಿಗೆ ದೈನಿಕ ಪತ್ರಿಕೆ ನಡೆಸಿ ಅನುಭವವಿದ್ದಿಲ್ಲ. ಮುದ್ರಣ ಸಲಕರಣೆಗಳೂ ಸಾಕಷ್ಟಿದ್ದಿಲ್ಲ. ಹೀಗಾಗಿ ಅದರ ಭವಿಷ್ಯದ ಬಗೆಗೆ ಅಲ್ಲಿಯ ಕನ್ನಡ ಮುಂದಾಳುಗಳು ಚಿಂತಿಸುತ್ತಿದ್ದರು. ಅದರ ಪೂರ್ಣ ಹೊಣೆ ಹೊತ್ತುಕೊಳ್ಳಬಲ್ಲ ಸಮರ್ಥ ಪತ್ರಿಕಾಕರ್ತ ಬೇಕಾಗಿದ್ದರು. ಮೊಹರೆ ಹನುಮಂತರಾಯರೇ ಈ ಹೊಣೆಗಾರಿಕೆಗೆ ಸಮರ್ಥರೆಂದು ನಿರ್ಣಯಿಸಿ ದಾತಾರ ಬಳವಂತರಾಯರು ಮೊದಲಾದವರು ಅವರನ್ನು ಆಹ್ವಾನಿಸಿದರು. ಕನ್ನಡ ವಾಙ್ಮಯ ಪ್ರಕಾಶನದ ಸೊತ್ತು ಅತ್ಯಲ್ಪ; ಸಾಲವೇ ಅದರ ದೊಡ್ಡ ಸೊತ್ತು. ಕಾರಣ, ದಾತಾರ ಬಳವಂತರಾಯರು ಮೊಹರೆಯವರಿಗೆ ನಿಜ ಪರಿಸ್ಥಿತಿಯನ್ನೇ ವಿವರಿಸಿದರು. "ನಿಮಗೆ ದೊಡ್ಡ ಸಂಬಳ ಕೊಡುವ ಶಕ್ತಿ ನಮ್ಮಲ್ಲಿಲ್ಲ; ಅದೇಕೆ ನಿತ್ಯದ ವೆಚ್ಚಕ್ಕೆ ಸಹ ಹಣ ಒದಗಿಸುವದೂ ಸಾಧ್ಯವಾಗಲಿಕ್ಕಿಲ್ಲ; ನಮ್ಮ ಮನೆಯಲ್ಲಿ ಊಟ ಮಾಡಿಕೊಂಡು ಪತ್ರಿಕೆ ನಡೆಸಬೇಕು" ಇದೇ ಅವರ ಮೊರೆ. ಮೊಹರೆ ಅವರಿಗೆ ದೈನಿಕದ ಮೇಲೆ ಆಶೆ; ಆದರೆ ಕಷ್ಟದಿಂದ ಕಟ್ಟಿ ಬೆಳೆಸಿದ ಸಾರ್ವಜನಿಕ ಮುಂದಾಳುತ್ವ ಮತ್ತು ತಮ್ಮದೇ ಆದ ಕರ್ನಾಟಕ ವೈಭವವನ್ನು ಬಿಟ್ಟು ಹೋಗಬೇಕಾಗುವದಲ್ಲ ಎಂಬ ಕೊರಗು ಇನ್ನೊಂದು ಕಡೆ. ಕೊನೆಗೆ ದೈನಿಕದ ಸೆಳೆತವೇ ಹೆಚ್ಚಾಯಿತು. ಆ ಸೆಳೆತದಲ್ಲಿ ದೇಶಸೇವೆಯ ಆಕರ್ಷಣೆಯೂ ಸೇರಿದ್ದಿತು. ಮೊಹರೆಯವರು ಬಳವಂತರಾಯರ ಕರಾರುಗಳಿಗೆ ಒಪ್ಪಿದರು; ಹೆಗಲಿಗೆ ಒಂದು ಚೀಲ ಹಾಕಿಕೊಂಡು, ಎಂಟಾಣೆಯ ಬಸ್ ಟಿಕೆಟ್ ಪಡೆದು ೧೯೩೪ನೇ ಜನವರಿಯಲ್ಲಿ ವಿಜಾಪೂರದಿಂದ ಬೆಳಗಾವಿಗೆ ಬಂದಿಳಿದರು. ಬೆಳಗಾವಿಯ ಮುಂದಾಳುಗಳು ದೈನಿಕದ ಎಲ್ಲ ಹೊಣೆಗಾರಿಕೆಯನ್ನು ಅವರಿಗೆ ಒಪ್ಪಿಸಿ, ನಿಶ್ಚಿಂತರಾದರು. ೧೯೩೪ನೇ ಫೆಬ್ರುವರಿಯಲ್ಲಿ ಮೊಹರೆ ಹನುಮಂತರಾಯರು ಸಂಪಾದಕರೆಂದು ಘೋಷಿಸಿ, ಪೂರ್ಣ ಹೊಣೆಗಾರಿಕೆಯನ್ನು ವಹಿಸಿಕೊಂಡರು. ಕೆಲವು ಸವೆದ ಮೊಳೆಗಳು, ಕೈಯಿಂದ ತಿರುಗುವ ಚಿಕ್ಕ ಮುದ್ರಣ ಯಂತ್ರ ಇದೇ ಭಂಡವಲು. ಇಷ್ಟರಿಂದಲೆ ಸಮಗ್ರ ಕರ್ನಾಟಕದಲ್ಲಿ ಜಾಗ್ರತೆಯ ಗಂಟೆ ಬಾರಿಸುವಂಥ ದೊಡ್ಡ ದೈನಿಕ ಕಟ್ಟುವ ಮಹಾಕಾರ್ಯಕ್ಕೆ ಮುಂದಾದುದು ಮೊಹರೆ ಅವರ ಆತ್ಮವಿಶ್ವಾಸವನ್ನು ಪ್ರದರ್ಶಿಸುತ್ತದೆ.

ಸ್ವಂತ ಹಾಗೂ ಪತ್ರಿಕೆಯ ಜೀವನ ನಿರೀಕ್ಷೆ ಮೀರಿ ಕಷ್ಟಮಯವಾಗಿತ್ತು. ಅನೇಕ ಸಲ ಕಾಗದ ಕೊಳ್ಳಲು, ಸಂಬಳ ಕೊಡಲು, ಪಾರ್ಸಲ್ ಮತ್ತು ಅಂಚೆ ವೆಚ್ಚಕ್ಕೆ ಸಹ ಹಣ ಇರುತ್ತಿರಲಿಲ್ಲ. ಇಂಥ ನಿಕೃಷ್ಟ ಪರಿಸ್ಥಿತಿ ಬಂದೊದಗಿದ ಸಮಯದಲ್ಲಿ, ಮೊಹರೆ ಕೈಚೆಲ್ಲಿ ಕುಳಿತುಕೊಳ್ಳಲಿಲ್ಲ. ತಮ್ಮ ರಿಸ್ಟವಾಚದ ಚಿನ್ನದ ಸರವಣಿಯನ್ನು ಯಾರಿಗೂ ಗೊತ್ತಾಗಬಾರದೆಂದು ಬೇರೆಯವರ ಹೆಸರಿನಲ್ಲಿ ಅಡವು ಇಟ್ಟು, ಹಣ ತಂದು ಅಗತ್ಯದ ವೆಚ್ಚ ಪೂರೈಸಿದ್ದರು. ಜೀವನದ ಸವಾಲನ್ನೇ ಎದುರಿಸುತ್ತಿದ್ದ ಮೊಹರೆ ಅವರಿಗೆ ಎಂಥ ತ್ಯಾಗವೂ ದೊಡ್ಡದೆನಿಸುತಿದ್ದಿಲ್ಲ.

ಅವರ ವೈಯಕ್ತಿಕ ಜೀವನವೂ ಅಷ್ಟೆ. ಮೊದ ಮೊದಲು ದಾತಾರ ಬಳವಂತರಾಯರಲ್ಲಿಯೇ ಊಟ ಮಾಡುತ್ತಿದ್ದುದರಿಂದ ಯಾವ ಕೊರತೆಯೂ ಇದ್ದಿಲ್ಲ. ಚಹಾ ಕಾಫಿ ಅಭ್ಯಾಸ ಇದ್ದಿಲ್ಲ. ವೈಯಕ್ತಿಕ ಬೇಕು-ಬೇಡಗಳೂ ಕಡಿಮೆ. ಸರಳ ಖಾದಿ ಉಡುಗೆ ತೊಡುಗೆ. ಮುಂದೆ ಮಾರುತಿ ಗಲ್ಲಿಯಲ್ಲಿದ್ದ ಮುದ್ರಣಾಲಯ ಚವ್ಹಾಣ ಕಟ್ಟಡಕ್ಕೆ ಸ್ಥಳಾಂತರವಾದ ಮೇಲೆ ಅವರು ಅದರಲ್ಲಿಯೇ ವಾಸಿಸುತಿದ್ದರು. ಕೈಯಿಂದ ಅಡಿಗೆ ಮಾಡಿಕೊಳ್ಳುತ್ತಿದ್ದರು. ನಿರಗ್ನಿ ಆಹಾರವೂ ಅವರಿಗೆ ಒಗ್ಗಿತ್ತು. ಶೇಂಗಾ, ಕಡಲೆ, ಕಬ್ಬು ಮೊದಲಾದವು ಸಿಕ್ಕರೆ, ಅಂದಿನ ಊಟ ಅವುಗಳಿಂದಲೇ. ಹೀಗೆ ಮನೆ ಮಾರು ತೊರೆದು, ವೈಯಕ್ತಿಕ ಸುಖೋಪಭೋಗಗಳನ್ನು ಮರೆತು, ಸಂಯುಕ್ತ ಕರ್ನಾಟಕದ ಅಭಿವೃದ್ಧಿಯ ಭಾರವನ್ನು ಹೆಗಲ ಮೇಲೆ ಹೊತ್ತುಕೊಂಡಿದ್ದರು. ನಿದ್ರೆಯ ಸಮಯ ಬಿಟ್ಟರೆ, ಹಗಲು-ರಾತ್ರಿ ಅದರದೇ ಚಿಂತೆ; ಅದರದೇ ಸೇವೆ.

ಈ ಅವಧಿಯಲ್ಲಿ ಪತ್ರಿಕೆಯನ್ನು ಲೋಕಪ್ರಿಯಗೊಳಿಸಲು ಬಗೆಬಗೆಯ ಕ್ರಮಗಳನ್ನು ಯೋಜಿಸಿದ್ದರು. ಸ್ವದೇಶ ಹಾಗೂ ಪರದೇಶಗಳ ಸುದ್ದಿಗಳನ್ನು ಅಸೋಸಿಯೇಟೆಡ್ ಪ್ರೆಸ್ ಆಫ್ ಇಂಡಿಯಾ ಹಾಗೂ ರಾಯಟರ ಸಂಸ್ಥೆಯ ಮುಖಾಂತರ ವ್ಯವಸ್ಥೆ ಮಾಡಿದ್ದರು. ಜಿಲ್ಲೆಗಳಲ್ಲಿ ಸ್ವಂತ ಸುದ್ದಿಗಾರರನ್ನಿರಿಸಿದ್ದರು. ತಾವು ಸ್ವತಃ "ವಾರದ ಸಂಚಾರ' ಎಂಬ ಶೀರ್ಷಿಕೆಯ ಅಡಿಯಲ್ಲಿ

ವಿಡಂಬನ ಮತ್ತು ಹಾಸ್ಯ ಪ್ರಧಾನ ಚುಟುಕಗಳನ್ನು ಅರ್ಧಮುಕ್ಕಾಲು ಕಾಲಂ ಬರೆಯುತ್ತಿದ್ದರು. ಕರ್ನಾಟಕ ವೈಭವದಲ್ಲಿ ಅವರು ಈ ಮೊದಲು ಬರೆಯುತ್ತಿದ್ದ "ಅಪ್ಪಾ ಭಟ್ಟನ ಹೊತ್ತಿಗೆ"ಯ ಅಪರಾವತಾರವಿದು. ಈ ಹಾಸ್ಯಯುಕ್ತವಾದ ವಿಡಂಬನ ಓದುಗರ ಮನ ಸೂರೆಗೊಂಡಿತ್ತು. ಇದೇ ಸಮಯಕ್ಕೆ ಅಂದರೆ ೧೯೩೪ ನವಂಬರದಲ್ಲಿ ಕೇಂದ್ರ ಅಸೆಂಬ್ಲಿ (ಇಂದಿನ ಲೋಕಸಭೆಯ ಮೊದಲಿನ ಸಂಸ್ಥೆ)ಯ ಹಾಗೂ ೧೯೩೫ನೇ ಭಾರತ ರಾಜ್ಯಾಂಗ ಕಾನೂನಿನ ಪ್ರಕಾರ ೧೯೩೭ ಫೆಬ್ರುವರಿಯಲ್ಲಿ ರಾಜ್ಯ ವಿಧಾನ ಸಭೆ ಚುನಾವಣೆಗಳು ನಡೆದವು. ಈ ಎರಡು ಚುನಾವಣೆಗಳಲ್ಲಿ ಕಾಂಗ್ರೆಸ್ ಪ್ರಮುಖ ಪಾತ್ರ ನಿರ್ವಹಿಸಿದ್ದರಿಂದ, ಸಂಯುಕ್ತ ಕರ್ನಾಟಕವೂ ಅದಕ್ಕೆ ತಕ್ಕಂತೆ ರಭಸದ ಪ್ರಚಾರ ಕೈಕೊಳ್ಳಬೇಕಾಯಿತು. ಯುದ್ಧ ವಾರ್ತೆಯ ನಂತರ, ಚುನಾವಣೆ ಸುದ್ದಿಯೇ ಓದುಗರಿಗೆ ಹೆಚ್ಚು ಆಕರ್ಷಕ. ಆದುದರಿಂದ 'ಸಂಯುಕ್ತ ಕರ್ನಾಟಕ' ಪ್ರಚಾರ ಮತ್ತು ಪ್ರಸಾರ ತಾನಾಗಿಯೇ ಬೆಳೆಯಿತು.

ವಾರ್ತಾ ಪ್ರಕಟಣೆಯ ವೈವಿಧ್ಯತೆಯ ಜೊತೆಗೆ, ಕರ್ನಾಟಕದ ಪ್ರಗತಿಯನ್ನು ಗುರಿಯಾಗಿಸಿಕೊಂಡು, ಆಗಾಗ ವಿಶೇಷ ಲೇಖನಗಳನ್ನು ಬರೆಯುತ್ತಿದ್ದರು.

ಒಂದೆರಡು ಉದಾಹರಣೆಗಳು. ೧೯೩೪ರಲ್ಲಿ ಮಹಾತ್ಮಾ ಗಾಂಧಿಯವರು ನಾಡಿನಾದ್ಯಂತ ಹರಿಜನ ಪ್ರವಾಸ ಕೈಕೊಂಡಿದ್ದರು. ಹರಿಜನೋದ್ಧಾರ, ದೇವಾಲಯ ಪ್ರವೇಶ ಕುರಿತು ಅವರು ಭಾಷಣ ಮಾಡುತ್ತಿದ್ದರು. ಸ್ವಾಭಾವಿಕವಾಗಿಯೇ ಇದು ಕೆಲ ಸನಾತನಿಗಳ ಮನಸ್ಸಿಗೆ ಬರಲಿಲ್ಲ. ಹರಿಜನ ಚಳವಳಿ ವಿರುದ್ಧ, ವಿಶೇಷತಃ ದೇವಾಲಯ ಪ್ರವೇಶ ವಿರುದ್ಧ ಅಲ್ಲಲ್ಲಿ ಕೂಗು ಕೇಳಬರುತ್ತಿತ್ತು. ಮೊಹರೆ ಅವರು ಅದೇ ವಿಷಯವನ್ನೆತ್ತಿಕೊಂಡು, ೧೯೩೪ ನವಂಬರ್ ತಿಂಗಳಲ್ಲಿ 'ಸಂಯುಕ್ತ ಕರ್ನಾಟಕ'ದಲ್ಲಿ ಸುದೀರ್ಘ ಲೇಖನ ಬರೆದಿರುತ್ತಾರೆ. ಅಸ್ಪೃಶ್ಯತೆಗೆ ಶಾಸ್ತ್ರದಲ್ಲಿ ಅವಕಾಶವಿಲ್ಲವೆಂದು ಪಂ. ಮದನ ಮೋಹನ ಮಾಲವೀಯರಂಥ ಕಟ್ಟಾ ಸನಾತನಿಗಳೂ ಕಾಂಗ್ರೆಸ್ ಮುಂದಾಳುಗಳೂ ಒಪ್ಪಿರುವುದರಿಂದ, ಕಾಂಗ್ರೆಸ್ ನೀತಿ ಯಾವ ರೀತಿಯಿಂದಲೂ ಯಾವ ಪ್ರಜೆಗಳಿಗೂ ಬಾಧಕವಿಲ್ಲೆಂದು ಮೊಹರೆ ಅದರಲ್ಲಿ ಪ್ರತಿಪಾದಿಸಿರುವರು.

ಇಂದಿಗೆ ಐವತ್ತುನಾಲ್ಕು ವರುಷಗಳ ಹಿಂದೆ ಸಹ ಕಾರವಾರ ಬಂದರ ನಿರ್ಮಾಣ ಹಾಗೂ ಹುಬ್ಬಳ್ಳಿ-ಕಾರವಾರ ರೈಲು ವಿಚಾರ, ಚರ್ವಿತ ಚರ್ವಣದ ವಿಷಯಗಳಾಗಿದ್ದವು. ಬ್ರಿಟಿಶರು ಮತ್ತು ಪೋರ್ಚುಗೀಸರು ಒಂದಾಗಿ, ಕಾರವಾರಕ್ಕೆ ಸಿಗಲಿದ್ದ ಬಂದರು ಮತ್ತು ರೈಲು ಪೋರ್ಚುಗೀಸರ ಉಡಿಯಲ್ಲಿ ಹೇಗೆ ಬಿದ್ದವೆಂಬುದನ್ನು ಮೊಹರೆ ಅವರು ೧೯೩೪ ಮೇ ತಿಂಗಳಲ್ಲಿ ಬರೆದ ಒಂದು ಲೇಖನದಲ್ಲಿ ಮಾರ್ಮಿಕವಾಗಿ ವಿವರಿಸಿರುತ್ತಾರೆ. ಕಾರವಾರ ಬಂದರ ನಿರ್ಮಾಣ ಯೋಜನೆ ಸಾಕಷ್ಟು ಮೊದಲೇ ರೂಪುಗೊಂಡಿದ್ದರೂ ೧೮೭೮ರಲ್ಲಾದ ಬ್ರಿಟಿಶ್ - ಪೋರ್ತುಗೀಜ ಒಪ್ಪಂದದ ಪರಿಣಾಮವಾಗಿ ಕೈ ಬಿಡಲ್ಪಟ್ಟಿತೆಂದು ವಿಷಾದದಿಂದ ಉಲ್ಲೇಖಿಸಿರುವರು. ಆದಾಗ್ಯೂ ಕಾರವಾರ ಬಂದರನ್ನು ಈಗಲೂ ನಿರ್ಮಿಸಿ, ಹುಬ್ಬಳ್ಳಿ-ಕಾರವಾರ ರೈಲು ಹಾಕಿದರೆ ಹಾನಿಯಾಗುವದಿಲ್ಲೆಂದು ಅಭಿಪ್ರಾಯ ವ್ಯಕ್ತ ಮಾಡಿರುವರು. ಮೊಹರೆ ಅವರು ಈ ಲೇಖನ ಬರೆದ ಸಮಯದಲ್ಲಿ ಭಾರತೀಯ ರೈಲುಗಳೆಸ್ನೂ ಖಾಸಗಿ ಒಡೆತನಕ್ಕೆ ಸೇರಿದ್ದವು. ಹೆಚ್ಚಾಗಿ ಎಲ್ಲ ವಿದೇಶಿ ಕಂಪನಿಗಳೇ. ಅದೇ ಕಂಪನಿಗಳಿಗೆ ಈ ರೈಲು ಹಾಕುವದಕ್ಕೆ ಸರಕಾರ ಕೇಳಿಕೊಳ್ಳಬೇಕು; ಅವರಾರೂ ಒಪ್ಪದಿದ್ದರೆ, ಭಾರತೀಯ ಕಂಪನಿಗೆ ಕೊಡಬಹುದೆಂದು ಸೂಚಿಸಿದುದು ಅವರ ಎದೆಗಾರಿಕೆಯನ್ನು ಎತ್ತಿ ತೋರಿಸುತ್ತದೆ. ಅರ್ಧ ಶತಮಾನದ ನಂತರವೂ ಕಾರವಾರ ರೈಲಿನ ಸಮಸ್ಯೆ, ಹಾಗೆಯೆ ಉಳಿದಿರುವುದು ಕನ್ನಡಿಗರ ದುರ್ದೈವವೇ ಸರಿ.

ಮೊಹರೆ ಅವರು ಹೀಗೆ ತಮ್ಮ ಬುದ್ಧಿ ವೈಭವವನ್ನೆಲ್ಲ ಪತ್ರಿಕೆಗೆ ಧಾರೆ ಎರೆದರೂ ಪ್ರಗತಿ ನಿರೀಕ್ಷಿಸಿದಷ್ಟು ಸಾಧ್ಯವಾಗಲಿಲ್ಲ. ಉತ್ತರ ಕರ್ನಾಟಕದ ಅಂಚಿನಲ್ಲಿದ್ದ ಬೆಳಗಾವಿ ನಗರ, ಪತ್ರಿಕಾ ಪ್ರಸರಣೆ ಹಾಗೂ ಸಾರಿಗೆ ಅನುಕೂಲತೆ ದೃಷ್ಟಿಯಿಂದ ಕೇಂದ್ರ ಬಿಂದುವಾಗುವದು ಸಾಧ್ಯವೇ ಇದ್ದಿಲ್ಲ. ಆದುದರಿಂದ ಮೊಹರೆ ಹನುಮಂತರಾಯರೂ ಟ್ರಸ್ಟೀ ದಿವಾಕರರೂ, ದೀರ್ಘಾಲೋಚನೆ ಮಾಡಿ ಹಾಗೂ ಬೆಳಗಾವಿ ಸ್ನೇಹಿತರ ಮನವೊಲಿಸಿ ಸಂಯುಕ್ತ ಕರ್ನಾಟಕ ಪತ್ರಿಕೆಯನ್ನು ಬೆಳಗಾವಿಯಿಂದ ಹುಬ್ಬಳ್ಳಿಗೆ ಸ್ಥಳಾಂತರಿಸಲು ನಿರ್ಣಯಿಸಿದರು. ಆ ಪ್ರಕಾರ ಸಂಯುಕ್ತ ಕರ್ನಾಟಕದ ಬಹುಭಾಗ ಸಿಬ್ಬಂದಿ ಯಂತ್ರೋಪಕರಣ ಸಹಿತ ೧೯೩೭ ಆಗಸ್ಟದಲ್ಲಿ ಹುಬ್ಬಳ್ಳಿಗೆ ಬಂದಿಳಿದರು. ಸಂಯುಕ್ತ ಕರ್ನಾಟಕದ ಜೀವನದಲ್ಲಿ ಇದು ಮಹತ್ವದ ಬದಲಾವಣೆ. ಈ ಬದಲಾವಣೆ ಮುಂದಿನ ಯಶಸ್ಸಿನ ಮಾರ್ಗ ಮಾಡಿಕೊಟ್ಟಿತೆಂದು ಹೇಳಬಹುದು.

ಮೊಹರೆ ಹನುಮಂತರಾಯರು ಈ ಪತ್ರಿಕೋದ್ಯಮದಲ್ಲಿ ನಿಜವಾದ ಸವಾಲನ್ನೆದುರಿಸಬೇಕಾಯಿತು. ತಮ್ಮ ಪತ್ರಿಕೆಯ ಅಭಿವೃದ್ಧಿ ಹೊಣೆ ಒಂದು ಕಡೆಗಾದರೆ, ಆಗ ಹುಬ್ಬಳ್ಳಿಯಲ್ಲಿದ್ದ ಎರಡು ದಿನಪತ್ರಿಕೆಗಳೊಡನೆ ಸ್ಪರ್ಧಿಸುವ ಹೊಣೆಗಾರಿಕೆ ಇನ್ನೊಂದು ಕಡೆ. 'ಲೋಕಮತ' ಹಾಗೂ 'ತರುಣಕರ್ನಾಟಕ'. ಇವೆರಡು ದೈನಿಕಗಳು ಹುಬ್ಬಳ್ಳಿಯಲ್ಲಿ ಸ್ಥಾಪಿತವಾಗಿ ಕೆಲವು ವರುಷಗಳಾಗಿದ್ದರಿಂದ ಬೇರು ಬಿಟ್ಟಿದ್ದವು. 'ಸಂಯುಕ್ತ ಕರ್ನಾಟಕ' ಹುಬ್ಬಳ್ಳಿಗೆ ಹೊಸದು... ಈ ಪತ್ರಿಕೆಯಲ್ಲಿ ನಿಜವಾದ ಅಂತಃಸತ್ವ ಬೆಳೆಯದೆ, ಸ್ಪರ್ಧೆ ಸಾಧ್ಯವಿದ್ದಿಲ್ಲ. ಕಾಂಗ್ರೆಸ್ ಮೂಲಕ ರಾಷ್ಟ್ರ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ಕೊಡುವದು 'ಸಂಯುಕ್ತ ಕರ್ನಾಟಕ'ದ ಮೂಲ ಧ್ಯೇಯ. ಆದಾಗ್ಯೂ ಸತ್ಯವನ್ನೇ ಪ್ರತಿಪಾದಿಸಿ, ಸಮಾಜದ ಎಲ್ಲ ವರ್ಗಗಳೊಡನೆ ಸ್ನೇಹ ಬೆಳೆಸುವ ಸೂತ್ರವನ್ನು ಎಂದೂ ಮರೆಯಲಿಲ್ಲ. ನಿರ್ಭೀತಿಯಲ್ಲಿಯೂ ಈ ಪತ್ರಿಕೆಯದು ಎತ್ತಿದ ಕೈ. ಸುದ್ದಿ ಪ್ರಕಟಣೆಯಲ್ಲಿ

ಪೂರ್ಣ ಪ್ರಾಮಾಣಿಕತೆ. ಅಗತ್ಯವೆನಿಸಿದಾಗ ನಿರ್ದಾಕ್ಷಿಣ್ಯದ ಟೀಕೆಯೂ ಬತ್ತಳಿಕೆಯಿಂದ ತೂರಿ ಬರುತ್ತಿತ್ತು. ಆದರೆ ವ್ಯಕ್ತಿಗತ ಟೀಕೆಗೆ ಅವಕಾಶವಿದ್ದಿಲ್ಲ. ಟೀಕೆಗೆ ಗುರಿಯಾದವರ ಮನಸ್ಸು ನೋಯದಂತೆ ನೀತಿ ನಿಯಮವನ್ನು ಮಾತ್ರ ಖಂಡಿಸಲಾಗುತಿತ್ತು. ಕಾಂಗ್ರೆಸಿಗೇ ಬೆಂಬಲವಿದ್ದರೂ ಎದುರು ಪಕ್ಷದವರ ಅಭಿಪ್ರಾಯಕ್ಕೂ ಸ್ಥಳವಿದ್ದಿತು. ಹೀಗಾಗಿ 'ಸಂಯುಕ್ತ ಕರ್ನಾಟಕ'ವು ತನ್ನ ನಿತ್ಯ ಜೀವನದಲ್ಲಿ, ಯಾರನ್ನೂ ಎದುರು ಹಾಕಿಕೊಳ್ಳದೆ, ಎಲ್ಲೆಲ್ಲಿಯೂ ಸ್ನೇಹಿತರನ್ನೇ ನಿರ್ಮಾಣ ಮಾಡಿತು. ಇನ್ನೊಂದು ರಾಜ್ಯದಿಂದ ಬಂದ ಸ್ನೇಹಿತರೊಬ್ಬರು ಮೊಹರೆಯವರನ್ನು ಕುರಿತು, "ನಿಮ್ಮ ಪತ್ರಿಕೆಯ ಧ್ಯೇಯವೇನು?" ಎಂದು ಪ್ರಶ್ನಿಸಿದರು. "ಸಕಲರೊಡನೆ ಸ್ನೇಹವೃದ್ಧಿ" ಎಂದು ಮೂರೇ ಶಬ್ದಗಳಲ್ಲಿ ಉತ್ತರವಿತ್ತರು. ಮೊಹರೆ ಅವರ ಈ ನಿಷ್ಪಕ್ಷಪಾತ ನೀತಿ ಅವರಿಗೆ ಗೆಲುವನ್ನೇ ತಂದುಕೊಡಲಾರಂಭಿಸಿತು.

ಪತ್ರಿಕೆ ಹುಬ್ಬಳ್ಳಿಗೆ ಬಂದು ಒಂದು ವರುಷ ಕಳೆಯುವಷ್ಟರಲ್ಲಿ ಹೊಸ ಚೈತನ್ಯ ತುಂಬಿಕೊಂಡಂತಾಯಿತು; ಸ್ಪರ್ಧೆ ಎದುರಿಸುವ ಸಾಮರ್ಥ್ಯವೂ ಉಂಟಾಗಿತ್ತು. ಅದೇ ರೀತಿ ಕೆಲ ಮಟ್ಟಿಗೆ ಆರ್ಥಿಕ ಸ್ಥಿತಿ ಸಹ ಸುಧಾರಿಸಿತ್ತು. ಅದುವರೆಗೆ ಸಿಬ್ಬಂದಿಯವರಿಗೆ ತಿಂಗಳಲ್ಲಿ ಎರಡು ಕಂತುಗಳಲ್ಲಿ ಸಂಬಳ ಹಂಚಲಾಗುತ್ತಿತ್ತು. ಈಗ ಒಂದೇ ಕಂತಿನಲ್ಲಿ ಕೊಡುವ ಶಕ್ತಿ ಹೊಂದಿದ್ದಿತು. ಸುದ್ದಿ–ಸಮಾಚಾರದ ವೈವಿಧ್ಯತೆ, ಮನನೀಯ ಲೇಖನಗಳು, ನಿಷ್ಪಕ್ಷಪಾತ ಟೀಕೆ ಟಿಪ್ಪಣಿ ಪತ್ರಿಕೆಯನ್ನು ಆಗಲೇ ಲೋಕಪ್ರಿಯಗೊಳಿಸಿದ್ದವು. ಪರಿಸರ ವಾತಾವರಣವೂ ದಿನದಿನಕ್ಕೆ ಉತ್ತೇಜಕವಾಗುತ್ತಿತ್ತು. ೧೯೩೯ರಲ್ಲಿ ದ್ವಿತೀಯ ಮಹಾಯುದ್ಧ ತನ್ನ ಉರಿನಾಲಗೆಯನ್ನು ಎಲ್ಲ ಖಂಡಗಳಿಗೂ ಚಾಚಿದ್ದರಿಂದ ಪತ್ರಿಕೋದ್ಯಮಕ್ಕೆ ಶುಕ್ರದೆಶೆ ಪ್ರಾಪ್ತವಾಯಿತು. ಜನತೆಯಲ್ಲಿ ಸುದ್ದಿಯ ಹಸಿವು ನಿರೀಕ್ಷೆ ಮೀರಿ ಬೆಳೆಯಲಾರಂಭಿಸಿತ್ತು. ಈಗಿನಂತೆ ಆಗ ಅಷ್ಟು ರೇಡಿಯೋ ಸೌಕರ್ಯವಿರಲಿಲ್ಲ; ದೂರದರ್ಶನವಂತೂ ಇದ್ದೇ ಇಲ್ಲ. ಸುದ್ದಿಗಾಗಿ ಎಲ್ಲರೂ ಪತ್ರಿಕೆಗಳನ್ನೇ ಅವಲಂಬಿಸಬೇಕಾಗಿತ್ತು. ರೈಲ್ವೆ ಇಂಜಿನ್ ಚಾಲಕನಾಗಿದ್ದ ಆಂಗ್ಲೋ ಇಂಡಿಯನ್‌ನೊಬ್ಬನು ಬೆಳಗಿನ ನಾಲ್ಕು ಗಂಟೆಗೆ ಬೆಂಗಳೂರು ಕಡೆ ಹೊರಡುತ್ತಿದ್ದ ಎಕ್ಸ್‌ಪ್ರೆಸ್‌ನಲ್ಲಿ ತಾನು ಇಂಜಿನ್ ಏರುವ ಮೊದಲು ಅದೇ ತಾನೇ ಮುದ್ರಣವಾಗಿ ರವಾನೆಯಾಗುತ್ತಿದ್ದ 'ಸಂಯುಕ್ತ ಕರ್ನಾಟಕ'ದ ಪ್ರತಿಯೊಂದನ್ನು ಕ್ರಯಕ್ಕೆ ತೆಗೆದುಕೊಂಡು, ಕನ್ನಡ ಬಲ್ಲವರಿಂದ ಸುದ್ದಿ ಓದಿಸಿ ತಿಳಿದುಕೊಳ್ಳುತ್ತಿದ್ದನು. ಹಳ್ಳಿಗಳಲ್ಲಿ ನಿತ್ಯಪತ್ರಿಕೆ ಬರುವದನ್ನು ನಿರೀಕ್ಷಿಸುವ ಹಾಗೂ ಅದು ಬಂದನಂತರ ಶಾಲಾಶಿಕ್ಷಕನು ಎಲ್ಲರನ್ನೂ ಸುತ್ತ ಕೂಡಿಸಿಕೊಂಡು ಓದಿ ಹೇಳುವ ದೃಶ್ಯ ಸಾಮಾನ್ಯವಾಗಿತ್ತು. "ಆದುದರಿಂದ ಕನ್ನಡ ಶಾಲಾ ಶಿಕ್ಷಕರ ಸುದ್ದಿ ಎಷ್ಟೇ ಚಿಕ್ಕದಿದ್ದರೂ ಅದಕ್ಕೆ ಸ್ಥಳಕೊಡಿ; ಅವರೇ ನಮ್ಮ ನಿಜವಾದ ಪ್ರಚಾರಕರು" ಎಂದು ಮೊಹರೆಯವರು ಸಂಪಾದಕ ವರ್ಗದವರನ್ನುದ್ದೇಶಿಸಿ ಯಾವಾಗಲೂ ಹೇಳುತಿದ್ದರು.

## ಸರ್ಕಾರದ ಹಿಡಿತ

ಯುದ್ಧಾರಂಭದೊಡನೆ ಸುದ್ದಿ ಪೂರ್ವ ಪರಿಶೀಲನೆಯೂ ಜಾರಿಯಾಗಿತ್ತು. ಆದರೆ ಯುರೋಪದಲ್ಲಿ ಯುದ್ಧ ಜರಗುತಿದ್ದುದರಿಂದ ಇಲ್ಲಿಯ ಅಧಿಕಾರಿಗಳಲ್ಲಿ ಸಹ ಅಷ್ಟು ಆಸ್ಥೆ ಇದ್ದಿಲ್ಲ. ಆಗ ಈ ಜಿಲ್ಲೆಯಲ್ಲಿ ಎಲ್ಲ ಉಚ್ಚ ಅಧಿಕಾರಿಗಳು ಭಾರತೀಯರೇ ಆಗಿದ್ದರು. ಮುಂದೆ ೧೯೪೦ ರಲ್ಲಿ ಮಹಾತ್ಮಾ ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹ ಆರಂಭಿಸಿದಾಗ ಸ್ವಲ್ಪ ಬಿಗುಮಾನ ಉಂಟಾಯಿತು. ಆ ಸಮಯಕ್ಕೆ ಬ್ರಿಟನ್ ಹೊರ್ತು ಉಳಿದೆಲ್ಲ ಯುರೋಪಿಯನ್ ರಾಷ್ಟ್ರಗಳು ಹಿಟ್ಲರನ ಪಾದಾಕ್ರಾಂತವಾಗಿದ್ದರಿಂದ, ಆಳರಸರಲ್ಲಿ ಕಳವಳವೂ ಉಂಟಾಗಿತ್ತು. ಭಾರತ ಸ್ವಾತಂತ್ರ್ಯದ ಕಟ್ಟಾ ದ್ವೇಷಿಯಾಗಿದ್ದ ವಿನ್‌ಸ್ಟನ್ ಚರ್ಚಿಲ್‌ರು ಪ್ರಧಾನಮಂತ್ರಿಗಳಾಗಿ, ಬ್ರಿಟಿಶ್ ಸಾಮ್ರಾಜ್ಯದ ಉತ್ತರಪೂಜೆ ಮಾಡಲು ತಾವು ಪ್ರಥಮ ಸಚಿವರಾಗಿಲ್ಲ ಎಂದು ಘೋಷಿಸಿ, ಭಾರತೀಯರನ್ನು ಕೆರಳಿಸಿದ್ದರು. ಅದಕ್ಕೆ ಉತ್ತರವೆನ್ನುವಂತೆ ಗಾಂಧೀಜಿ, ೧೯೪೨ರಲ್ಲಿ ಆಗಸ್ಟದಲ್ಲಿ ಕ್ವಿಟ್ ಇಂಡಿಯಾ ಚಳುವಳಿ ಪ್ರಾರಂಭಿಸಿದರು. ಆಗ ಮಾತ್ರ ಬ್ರಿಟಿಶ್‌ರಿಗೆ ಬಿಸಿ ತಗಲಿ, ಭಾರತದಲ್ಲಿ ದಬ್ಬಾಳಿಕೆಯ ಸೂತ್ರವನ್ನೇ ಹಮ್ಮಿಕೊಂಡರು. ಈ ತುಮುಲದಲ್ಲಿ ಪತ್ರಿಕೆಗಳು ಅನೇಕಾನೇಕ ಸಂಕಟಗಳನ್ನು ಎದುರಿಸಬೇಕಾಯಿತು. ಸುದ್ದಿ ಹಸಿವು ಹೆಚ್ಚಿದಂತೆ ಅದನ್ನು ಪೂರೈಸುವ ಕಾಗದ ಮತ್ತು ಮುದ್ರಣ ಸಲಕರಣೆಗಳು ಸಿಗುತಿದ್ದಿಲ್ಲ. ಆದರೂ ಮೊಹರೆ ಎದೆ ಗುಂದಲಿಲ್ಲ. ಮುದ್ರಣ ಕಾಗದ ಅಲಭ್ಯವಾದಾಗ, ಕೈಯಿಂದ ಮಾಡಿದ ಕಾಗದವನ್ನೂ ಉಪಯೋಗಿಸಿದ್ದುಂಟು. ಇದೆಲ್ಲಕ್ಕಿಂತ ಹೆಚ್ಚಾಗಿ ಸುದ್ದಿ ಪೂರ್ವ ಪರಿಶೀಲನೆ ಅತ್ಯಂತ ಕಠೋರವಾಗಿತ್ತು. ಅದನ್ನು ಚಾಚು ತಪ್ಪದೆ ಅನುಸರಿಸಿದರೆ, ನಾಡಿನ ನಿಜಸ್ಥಿತಿಯೇ ಗೊತ್ತಾಗುತಿದ್ದಿಲ್ಲ. ಭಾರತೀಯ ಪತ್ರಿಕೋದ್ಯಮಕ್ಕೆ ಪರೀಕ್ಷಾ ಕಾಲವೇ ಒದಗಿ ಬಂದಿತ್ತು. ಗಾಂಧೀಜಿ, "ಮಾಡು ಇಲ್ಲವೆ ಮಡಿ" ಎಂದು ರಾಜಕೀಯ ಸಂದೇಶ ಕಳಿಸಿದ್ದರು; ಆ ಸ್ಥಿತಿ ಪತ್ರಿಕೋದ್ಯಮಕ್ಕೂ ತಗಲಿತ್ತು. ಆಗ ಭಾರತದ ಎಲ್ಲ ಪ್ರಮುಖ ಪತ್ರಿಕೆಗಳ ಸಂಪಾದಕರು ಸೇರಿ ಅಖಿಲ ಭಾರತ ಪತ್ರಿಕಾ ಸಂಪಾದಕರ ಪರಿಷತ್ತನ್ನು ಸಂಘಟಿಸಿದರು. ಅದರ ಪ್ರಥಮ ಅಧ್ಯಕ್ಷರಾಗಿದ್ದ ಮದ್ರಾಸ್ "ಹಿಂದು" ಸಂಪಾದಕ ಕಸ್ತೂರಿ ಶ್ರೀನಿವಾಸನ್ನರು ಮೊಹರೆ ಹನುಮಂತರಾಯರನ್ನು ಕಾರ್ಯಸಮಿತಿ ಸದಸ್ಯರನ್ನಾಗಿ ಆರಿಸಿದ್ದರು. ಮೊಹರೆ ಅವರ ಕೀರ್ತಿ ಆಗಲೇ ಭಾರತಮಟ್ಟಕ್ಕೆ ಏರಿದ್ದಿತು. ಈ ಸಂಪಾದಕರು ಆಗ ವೈಸರಾಯರಾಗಿದ್ದ ಲಾರ್ಡ್ ವೇವಲರನ್ನು ಕಂಡು ಪರಿಸ್ಥಿತಿ ನಿವೇದಿಸಿದರು. ಬ್ರಿಟನ್ನಿನಲ್ಲಿ ಪತ್ರಿಕೆಗಳಿಗೆ ಹಾಗೂ ಬಿ.ಬಿ.ಸಿ.ಗೆ ಇದ್ದ ಸುದ್ದಿ ಸ್ವಾತಂತ್ರ್ಯ

ಭಾರತೀಯ ಪತ್ರಿಕೆಗಳಿಗೆ ಇಲ್ಲ ಎಂದು ನಿವೇದಿಸಿದರು. ಹಿಂದಕ್ಕೆ ಕಾರವಾರದಲ್ಲಿ ಕೆಲಸ ಮಾಡಿದ್ದ ಮ್ಯಾಕ್ಸವೆಲ್ಲರು ಈ ಸಮಯದಲ್ಲಿ ಗೃಹ ಸಚಿವರಿದ್ದುದರಿಂದ, ಮೊಹರೆಯವರು ಅವರನ್ನು ಪ್ರತ್ಯೇಕವಾಗಿ ಕಂಡು, ಧಾರವಾಡದ ಸುದ್ದಿಪೂರ್ವ ಪರಿಶೀಲನಾಧಿಕಾರಿ ಕಲೆಕ್ಟರ ಧಾರವಾಡದಲ್ಲಿರುತ್ತಿದ್ದರೆ, ನಮ್ಮ ಪತ್ರಿಕೆ ೧೨ ಮೈಲು ದೂರ ಹುಬ್ಬಳ್ಳಿಯಲ್ಲಿರುತ್ತದೆ; ಸುದ್ದಿ ಪೂರ್ವ ಪರಿಶೀಲನೆ ಹೇಗೆ ಸಾಧ್ಯ ಎಂದು ಪ್ರಶ್ನಿಸಿದ್ದರು. ಸಂಪಾದಕರ ಈ ಸಂದರ್ಶನದ ಪರಿಣಾಮವಾಗಿ, ಪೂರ್ವ ಪರಿಶೀಲನೆ ಕಠೋರತೆ ಸ್ವಲ್ಪ ಸಡಿಲವಾಯಿತು; ಪೂರ್ಣ ಹೋಗಲಿಲ್ಲ. ಆಗ ಧಾರವಾಡದಲ್ಲಿ ಕಲೆಕ್ಟರರಾಗಿದ್ದ ಎ. ಎಲ್. ಪಯಾಸ್ ಸಹಾನುಭೂತಿ ಪರರಾಗಿದ್ದರಿಂದ 'ಸಂಯುಕ್ತ ಕರ್ನಾಟಕ'ಕ್ಕೆ ಅಷ್ಟು ತೊಂದರೆಯಾಗಲಿಲ್ಲ.

ಮೊಹರೆಯವರ ವೈಯಕ್ತಿಕ ಪ್ರಭಾವ, ಪ್ರಸಂಗಾವಧಾನ ಬುದ್ಧಿ, ಅಧಿಕಾರಿಗಳ ಮೇಲೆ ಸಮ್ಮೋಹನ ಬೀರುತ್ತಿತ್ತು. ಅದೇ ಸಮಯಕ್ಕೆ ಕನ್ನಡಿಗರಾದ ಎಚ್.ವಿ. ಆರ್. ಅಯ್ಯಂಗಾರ್ ಮುಂಬಯಿ ರಾಜ್ಯದಲ್ಲಿ ಗೃಹಕಾರ್ಯದರ್ಶಿಗಳಾಗಿದ್ದರು. ಅವರ ಅಧ್ಯಕ್ಷತೆಯಲ್ಲಿ ಸುದ್ದಿಪೂರ್ವ ಪರಿಶೀಲನಾ ಸಲಹಾ ಸಮಿತಿ ಕಾರ್ಯ ಮಾಡುತ್ತಿತ್ತು. ಮೊಹರೆಯವರೂ ಅದರ ಸದಸ್ಯರು. ಆದಾಗ್ಯೂ 'ಸಂಯುಕ್ತ ಕರ್ನಾಟಕ'ದ ಸುದ್ದಿ ಮತ್ತು ಲೇಖನಗಳು ಅಲ್ಲಿ ತೀಕ್ಷ್ಣ ಪರೀಕ್ಷೆಗೆ ಒಳಗಾಗುತ್ತಿದ್ದವು. ಸಂಯುಕ್ತ ಕರ್ನಾಟಕವನ್ನು ಓದಬಲ್ಲ ಗೃಹಕಾರ್ಯದರ್ಶಿ ಇರುವದರಿಂದ ನೋಡಿ ಬರೆಯಿರೆಂದು ಅವರು ನಮಗೆ ಆಗಾಗ ಎಚ್ಚರಿಕೆ ಕೊಡುತ್ತಿದ್ದರು. ೧೯೪೨ ಆಗಸ್ಟ್ ಚಳವಳಿ ಆರಂಭವಾದೊಡನೆ, ಆರ್. ಆರ್.ದಿವಾಕರರು ಭೂಗತರಾಗಿ ಹೋರಾಟಕ್ಕೆ ಇಳಿದಿದ್ದರಿಂದ, ಪತ್ರಿಕೆಯ ಎಲ್ಲ ಹೊಣೆಗಾರಿಕೆಯೂ ಮೊಹರೆ ಅವರ ಮೇಲೆ ಬಿದ್ದಿತು. ಅವರು ಆ್ಯಕ್ಟಿಂಗ ಟ್ರಸ್ಟಿ ಕೂಡ ಆಗಿದ್ದರು. ಪತ್ರಿಕೆಯ ದೈನಂದಿನ ಸುದ್ದಿ ಮತ್ತು ಬರಹಗಳ ಮೇಲೆ ಕಣ್ಣಿಡುವುದಲ್ಲದೆ ವ್ಯವಸ್ಥಾಪನದ ಮೇಲ್ವಿಚಾರಣೆಯನ್ನೂ ನೋಡಬೇಕಾಗಿತ್ತು. ಚಳವಳಿಯ ಸುದ್ದಿ ಹಾಗೂ ಲೇಖನಗಳನ್ನು ಸಂಸ್ಕರಿಸುವಾಗ, ಮೊಹರೆಯವರ ದಕ್ಷತೆ ಎದ್ದು ಕಾಣುತ್ತಿತ್ತು. ಮುಖ್ಯ ವಿಷಯಗಳ ಬಗ್ಗೆ ತಾವೇ ಟೀಕೆ ಟಿಪ್ಪಣಿಗಳನ್ನು ಬರೆಯುತ್ತಿದ್ದರು. ಪತ್ರಿಕೆ ಸಕಾಲಕ್ಕೆ ಹೊರಡುವದೆಂದರೆ, ಪ್ರಸವ ವೇದನೆಯಷ್ಟು ಕಷ್ಟವಾಗುತ್ತಿದೆಯೆಂದು ವಿನೋದವಾಗಿಯೂ ಗಂಭೀರವಾಗಿಯೂ ಹೇಳುತಿದ್ದರು. ೧೯೪೦ರಲ್ಲಿ ವೈಯಕ್ತಿಕ ಸತ್ಯಾಗ್ರಹ ಸುರುವಾದಾಗ, ಸಂಯುಕ್ತ ಕರ್ನಾಟಕ, ಅದರ ಸಂಪಾದಕರು ಮತ್ತು ಟ್ರಸ್ಟಿಗಳ ಮೇಲೆ ಸರಕಾರದ ಕಣ್ಣಿತ್ತು. ಆಗ ಏನಾದರೂ ನಿರ್ಬಂಧಕಾಜ್ಞೆ ಹೊರಡಿಸಿದರೆ ಇಲ್ಲವೆ ಜಾಮೀನ ಕೇಳಿದರೆ, ಪತ್ರಿಕೆಯನ್ನೆ ಮುಚ್ಚುವ ಪ್ರಸಂಗವಿದ್ದಿತು. ಆಗ ಸಾರ್ವಜನಿಕ ಪ್ರಕಟಣೆ ಹೊರಡಿಸಿ, ೧೦,೦೦೦ ರೂ. ಆಪದ್ಧನ ಸಂಗ್ರಹಿಸಲಾಯಿತು. ಈ ನಿಧಿ ಮೂಲಕ ಸ್ವಲ್ಪ ಉಸಿರಾಡಿಸುವಂತಾದರೂ ಮುಳ್ಳಿನ ಮೇಲೆ ನಡೆಯುವದು ತಪ್ಪಲಿಲ್ಲ. ಕ್ವಿಟ್ ಇಂಡಿಯಾ ಚಳವಳಿ ಪ್ರಾರಂಭವಾದ ಮೇಲಂತೂ ತೊಂದರೆ ಇನ್ನೂ ಹೆಚ್ಚಾಯಿತು. ಪತ್ರಿಕೆಯ ಭವಿಷ್ಯ ತೂಗುಯ್ಯಾಲೆಯಲ್ಲಿತ್ತು. ಅಕಸ್ಮಾತ್ ಮುಚ್ಚಿದರೆ ಏನು ಮಾಡಬೇಕೆಂದು ಆಲೋಚಿಸಿ, ಕೆಲಸಗಾರರಿಗಾಗಿ ಕೆಲಮಟ್ಟಿಗೆ ವ್ಯವಸ್ಥೆ ಮಾಡಲಾಗಿತ್ತು. ಪರಿಸ್ಥಿತಿ ಹೀಗೆ ಗಂಭೀರವಾಗಿದ್ದರೂ 'ಸಂಯುಕ್ತ ಕರ್ನಾಟಕ'ದ ಸುದ್ದಿಗಳು ಹಾಗೂ ಬರಹಗಳು ಪೂರ್ಣ ಎಲ್ಲೆ ಮೀರಿರಲಿಲ್ಲ.

ಆದಾಗ್ಯೂ ಒಂದು ಪ್ರಸಂಗ ಮೈಮೇಲೆ ಬಂದಿದ್ದಿತು; ಅದು ಸಹ ಮೊಹರೆಯವರು ಮುಂಬಯಿಗೆ ಹೋದಾಗ. ಸಂಯುಕ್ತ ಕರ್ನಾಟಕದ ಅಂಗವಾದ ಕರ್ಮವೀರ ಸಾಪ್ತಾಹಿಕದಲ್ಲಿ ಹರಿಜನ ಲೇಖನಗಳನ್ನು ಮುಂದಾಗಿ ತರಿಸಿಕೊಂಡು ಪ್ರಕಟಿಸುತ್ತಿದ್ದೆವು. ಆಗಸ್ಟ ಚಳವಳಿ ಆರಂಭವಾದಾಗ ಕೆ.ಜಿ. ಮಶ್ರೂವಾಲ ಬರೆದ ವಿಧ್ವಂಸಕತೆಯ ಪ್ರಚೋದನೆ ಲೇಖನ 'ಕರ್ಮವೀರ'ದಲ್ಲಿ ಪ್ರಕಟವಾಗಿದೆಯೆಂದು ಸರಕಾರವು ನಿರ್ಣಯಿಸಿ, ಆ ಪತ್ರಿಕೆಯ ಝಡತಿ ಮಾಡಿ, ಮುದ್ರಣಾಲಯಕ್ಕೆ ಬೀಗಮುದ್ರೆ ಹಾಕಬೇಕೆಂದು ಮುಂಬಯಿಯಿಂದ ಧಾರವಾಡಕ್ಕೆ ಆಜ್ಞೆ ಬಂದಿತ್ತು. ಅದರ ಸುಳಿವು ನಮಗೂ ಹತ್ತಿದ್ದರಿಂದ, ಕಾರ್ಯಾಲಯದಲ್ಲಿ ಯಾವದೇ ಆಕ್ಷೇಪಾರ್ಹ ಕಾಗದ ಉಳಿಯದಂತೆ ನೋಡಿಕೊಂಡಿದ್ದೆವು. ಒಂದು ದಿನ ಮಧ್ಯಾನ್ಹ ಮೂರು ಗಂಟೆಗೆ ಹೋಮ್ ಇನ್ಸ್‌ಪೆಕ್ಟರ್ ಕುಮಟಾ ಅವರು ಕಾರಿನ ತುಂಬ ಪೋಲೀಸರನ್ನು ಕರೆದುಕೊಂಡು ನಮ್ಮ ಕಾರ್ಯಾಲಯದ ಬಾಗಿಲಲ್ಲಿ ಬಂದಿಳಿದರು. ಮೊಹರೆ ಅವರ ಅನುಪಸ್ಥಿತಿಯಲ್ಲಿ ನಾನೇ ಅವರನ್ನು ಎದುರುಗೊಳ್ಳಬೇಕಾಯಿತು. ಪೋಲೀಸರೊಡನೆ ಪತ್ರಕರ್ತರ ನಿತ್ಯ ವ್ಯವಹಾರ ಇರುವದರಿಂದ ಅವರಲ್ಲಿ ಒಬ್ಬಿಬ್ಬರು ಪರಿಚಿತರಿದ್ದರು.

## ರಾಷ್ಟ್ರಮಟ್ಟದ ಖ್ಯಾತಿ

'ಸಂಯುಕ್ತ ಕರ್ನಾಟಕ' ಇಷ್ಟೊತ್ತಿಗಾಗಲೆ ಮೈ-ಕೈ ತುಂಬಿಕೊಂಡಿದ್ದಿತು. ಸ್ವಾತಂತ್ರ್ಯ ಹೋರಾಟದ ಅಗ್ರಮಾನ್ಯ ಪತ್ರಿಕೆಗಳಲ್ಲಿ ಇದೂ ಒಂದೆಂದು ಕೀರ್ತಿ ಹಬ್ಬಿದ್ದಿತು. ಪ್ರಸಾರ ಸಾವಿರ ಸಾವಿರ ಸಂಖ್ಯೆಯಲ್ಲಿ ಏರತೊಡಗಿತ್ತು. ಆರ್ಥಿಕ ಸ್ಥಿತಿಯೂ ಸುಧಾರಿಸಿತ್ತು. ಏರಿಕೆಗೆ ತಕ್ಕಂತೆ ಹೊಸ ಹೊಸ ಮುದ್ರಣ ಯಂತ್ರಗಳನ್ನು ಜೋಡಿಸಲಾಗಿತ್ತು. ಸುದ್ದಿಗಾಗಿ ಟೆಲಿಪ್ರಿಂಟರಿನ ವಿಶೇಷ ವ್ಯವಸ್ಥೆ ಮಾಡಲಾಗಿತ್ತು. ಇಂತು ಮೊಹರೆಯವರು ಪತ್ರಿಕೆಯ ಸರ್ವಾಂಗೀಣ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದ್ದರೂ ತಮ್ಮ ಚಟುವಟಿಕೆಯ ಹರವನ್ನು ಕರ್ನಾಟಕದ ಆಚೆಗೂ ಪಸರಿಸಿದ್ದರು. ಅಖಿಲ ಭಾರತ ಪತ್ರಿಕಾ ಸಂಪಾದಕರ

ಪರಿಷತ್ತಿನ ಸ್ಥಾಯಿ ಸಮಿತಿಯಲ್ಲಿ ಅವರು ಮುಂದಿನ ಹದಿನೈದು ವರುಷಗಳ ವರೆಗೂ ಕೆಲಸ ಮಾಡಿದರು. ಇಂಡಿಯನ್ ಮತ್ತು ಈಸ್ಟರ್ನ್ ನ್ಯೂಜ ಪೇಪರ್ ಸೊಸಾಯಿಟಿಯ ಸದಸ್ಯತ್ವವನ್ನು ಸಂಯುಕ್ತ ಕರ್ನಾಟಕಕ್ಕೆ ಕೊಡಿಸಿದರು. ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾದ ಸದಸ್ಯ ಮತ್ತು ಡೈರೆಕ್ಟರರಾಗಿದ್ದರು. ಆಡಿಟ್ ಬ್ಯೂರೋ ಆಫ್ ಸರ್ಕುಲೇಶನ್ ಸದಸ್ಯತ್ವವನ್ನೂ ನಮ್ಮ ಪತ್ರಿಕೆ ಹೊಂದಿದ್ದಿತು. ಇಂಟರ್‌ನ್ಯಾಷನಲ್ ಪ್ರೆಸ್ ಇನ್‌ಸ್ಟಿಟ್ಯೂಟದ ಸದಸ್ಯರೂ ಆಗಿದ್ದರು. ಹೀಗೆ ವೃತ್ತಪತ್ರಗಳ ಉನ್ನತ ಸಂಸ್ಥೆಗಳಲ್ಲಿ ಪತ್ರಿಕೆಗೆ ಮೊಹರೆ ಪ್ರಾತಿನಿಧ್ಯ ತಂದುಕೊಂಡಿದ್ದರಿಂದ, ನಮ್ಮ ಪತ್ರಿಕೆ ರಾಷ್ಟ್ರಮಟ್ಟದ ಪತ್ರಿಕೆ ಎನಿಸಿದ್ದಿತು. ಅಂಥ ಮಹಾಗೌರವ ತಂದುಕೊಟ್ಟ ಶ್ರೇಯಸ್ಸು ಮೊಹರೆಯವರದು. ೧೯೫೬ರಲ್ಲಿ ದಿಲ್ಲಿಯಲ್ಲಿ ಐ.ಇ.ಎನ್.ಎಸ್. ಸೊಸಾಯಿಟಿಯ ಅಂತಸ್ತಿನ ಹೊಸ ಕಟ್ಟಡದ ಉದ್ಘಾಟನೆ ಮೊಹರೆಯವರ ಅಧ್ಯಕ್ಷತೆಯಲ್ಲಿ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದರಿಂದ ನೆರವೇರಿದುದು ಚರಿತ್ರಾರ್ಹ. ಮೊಹರೆಯವರು ಉನ್ನತ ಮಟ್ಟದಲ್ಲಿ ಓಡಾಡುತಿದ್ದರಿಂದ, ಡಾ. ರಾಜೇಂದ್ರ ಪ್ರಸಾದ, ಡಾ. ರಾಧಾಕೃಷ್ಣನ್ ಮೊದಲಾದ ಧುರೀಣರು, ಕೆ.ಶ್ರೀನಿವಾಸನ್, ಸಿ. ಆರ್. ಶ್ರೀನಿವಾಸನ್, ಸ್ಟಾಲಿನ್ ಶ್ರೀನಿವಾಸನ್, ದೇವದಾಸ ಗಾಂಧಿ ರಾಮನಾಥ ಗೋಯೆಂಕಾ, ಎಸ್. ಸದಾನಂದ, ಫ್ರಾನ್ಸಿಸ್ ಲೋ, ಅರ್ಥರ ಮೂರ್, ಮೊದಲಾದ ಸಂಪಾದಕರು, ಸರ್ ಗುರುನಾಥ ಬೇವೂರ, ಎಚ್.ವಿ. ಆರ್. ಅಯ್ಯಂಗಾರ, ಎ.ವಿ. ಪೈ ಮೊದಲಾದ ಅಧಿಕಾರಿಗಳು ಅವರ ಸ್ನೇಹಿತರಾಗಿದ್ದರು. ಮುಂಬಯಿ ರಾಜ್ಯದಲ್ಲಿ ಬಿ.ಜಿ. ಖೇರ, ಮುರಾರಜಿ ದೇಸಾಯಿ, ಜೀವರಾಜ ಮೇಥಾ, ಕೆ.ಎಂ. ಮುನಶಿ ಮೊದಲಾದವರಿಗೂ ಅವರಿಗೂ ನಿಕಟ ಸ್ನೇಹವಿತ್ತು. ೧೯೫೦ನೇ ಮೇ ತಿಂಗಳಲ್ಲಿ ದಿಲ್ಲಿಯಲ್ಲಿ ಕೂಡಿದ್ದ ಭಾರತ ಪಾಕಿಸ್ತಾನ ಸಂಪಾದಕರ ಸಮ್ಮೇಳನದ ಸದಸ್ಯರೂ ಆಗಿದ್ದರು ಮೊಹರೆ. ಪತ್ರಿಕಾ ರಂಗದ ಆಚೆಗೂ ಅವರ ಚಟುವಟಿಕೆಗಳು ಹಬ್ಬಿದ್ದವು. ೧೯೪೬ರಲ್ಲಿ ಬ್ಯಾಂಕ್ ಆಫ್ ಕರ್ನಾಟಕ ಸ್ಥಾಪನೆಗೆ ನೆರವಾಗಿದ್ದು ಹಿಂದಿನಿಂದ ಅದರ ಅಧ್ಯಕ್ಷರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯ ರೂಪುಗೊಳಿಸಲು ಮುಂಬಯಿ ಸರಕಾರವು ೧೯೪೮ರಲ್ಲಿ ನ್ಯಾ. ಲೋಕೂರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಆಯೋಗದ ಸದಸ್ಯರು ಇವರಾಗಿದ್ದರು. ಮುಂದೆ ಕರ್ನಾಟಕ ಪತ್ರಿಕೋದ್ಯಮಿಗಳಿಗೆ ವಿಶ್ವವಿದ್ಯಾಲಯ ಸೆನೇಟಿನಲ್ಲಿ ಪ್ರಾತಿನಿಧ್ಯ ಕೊಡಿಸಿ, ಪತ್ರಿಕೋದ್ಯಮಿ ಸಂಘದಿಂದ ತಾವು ೧೯೬೦ ರವರೆಗೂ ಸಿನೇಟ್ ಸದಸ್ಯರಾಗಿದ್ದರು.

೧೯೩೯ರಿಂದ ಭಾರತದಲ್ಲಿ, ಹೊರಗಡೆ ಮಹತ್ವದ ಘಟನೆಗಳಾದವು. ಎರಡನೆಯ ಮಹಾಯುದ್ಧ, ಕ್ವಿಟ್ ಇಂಡಿಯಾ ಹೋರಾಟ, ಭಾರತದ ಸ್ವಾತಂತ್ರ್ಯ, ಹೈದರಾಬಾದಿನ ನಿಜಾಮನನ್ನು ಮಣಿಸಿದ್ದು, ಕರ್ನಾಟಕ ಏಕೀಕರಣ, ಭಾರತದ ಸಂವಿಧಾನ ರಚನೆ - ಎಲ್ಲ ೧೭ ವರ್ಷಗಳಲ್ಲಿ ಆಗಿ ಹೋದವು. ಕರ್ನಾಟಕ ಏಕೀಕರಣ ಒಂದು ಮಹತ್ವದ ಸಾಧನೆ. ಈ ಸಂದರ್ಭಗಳಲ್ಲೆಲ್ಲ ನಮ್ಮ ಪತ್ರಿಕೆಯ ಪಾತ್ರ ಹಿರಿದಾಗಿತ್ತು. ಮೊಹರೆಯವರು ಈ ಸಂದರ್ಭಗಳನ್ನೆಲ್ಲ ವಿನಿಯೋಗಿಸಿ, ಪತ್ರಿಕೆ ಸರ್ವಾಂಗ ಸುಂದರವಾಗುವಂತೆ ಶ್ರಮಿಸಿದರು. ಯಾವ ಅವಕಾಶವನ್ನೂ ಅವರು ಹಾಗೆಯೆ ಬಿಟ್ಟುಕೊಡುತಿದ್ದಿಲ್ಲ. ಮುಂಬಯಿ ಮತ್ತು ಮೈಸೂರ ಅಸೆಂಬ್ಲಿ ಸಭೆಗಳಿಗೆ, ಕಾಂಗ್ರೆಸ್ ಮತ್ತು ಎ.ಐ.ಸಿ.ಸಿ. ಅಧಿವೇಶನಗಳಿಗೆ, ಕನ್ನಡ ಸಾಹಿತ್ಯ ಸಮ್ಮೇಳನಗಳಿಗೆ ಸ್ವಂತ ಹಾಗೂ ವಿಶೇಷ ಪ್ರತಿನಿಧಿಗಳನ್ನು ಕಳಿಸಿ, ಸಂಯುಕ್ತ ಕರ್ನಾಟಕದ ವರದಿಗಳ ಮೇಲ್ಮೆಯನ್ನು ಮೆರೆಸುತಿದ್ದರು. ಕಾಂಗ್ರೆಸ್ ಅಧಿವೇಶನದ ಸಮಯದಲ್ಲಿ ರಾಷ್ಟ್ರೀಯ ಮನೋವೃತ್ತಿಯ ಯುನಾಯಿಟೆಡ್ ಪ್ರೆಸ್ ಆಫ್ ಇಂಡಿಯಾ ಎಂಬ ವಾರ್ತಾಸಂಸ್ಥೆಯ ವರದಿಗಳನ್ನು ತರಿಸಿ ಪ್ರಕಟಿಸುತ್ತಿದ್ದರು. ಕಾಂಗ್ರೆಸ್ ಅಧಿವೇಶನದಂಥ ವಿಶೇಷ ಸಂದರ್ಭದಲ್ಲಿ ಮೊಹರೆಯವರಿಗೆ ಎಲ್ಲಿಲ್ಲದ ಉತ್ಸಾಹ; ಸ್ವತಃ ಸುದ್ದಿಗಳನ್ನು ಪರಿಶೀಲಿಸಿ, ಟೀಕೆ ಟಿಪ್ಪಣಿಗಳನ್ನು ಬರೆಯುತ್ತಿದ್ದರು. ಮುದ್ರಣಕಾರ್ಯ ಮುಗಿದು ಪತ್ರಿಕೆಗಳು ರವಾನೆಯಾಗುವ ವರೆಗೆ ಪ್ರೆಸ್ಸಿನಲ್ಲಿಯೇ ಉಳಿಯುತಿದ್ದರು; ಅನೇಕ ಸಲ ಅಲ್ಲಿಯೇ ಮಲಗುತಿದ್ದರು, ಮುದ್ರಣ ಯಂತ್ರ ನಿಂತರೆ, ಅವರಿಗೆ ಎಚ್ಚರವಾಗುತ್ತಿತ್ತು. ಮುದ್ರಣ ಯಂತ್ರದ ಸಪ್ಪಳವೇ ತಮ್ಮ ಜೋಗುಳವೆನ್ನುತ್ತಿದ್ದರು. ಹೀಗೆ ಅವಿಶ್ರಾಂತ ಶ್ರಮ ಹಾಗೂ ಬುದ್ಧಿವಂತಿಕೆಯಿಂದ ಅವರು ಸಂಯುಕ್ತ ಕರ್ನಾಟಕವನ್ನು ಕಟ್ಟಿ, ಬೆವರಿನ ನೀರಿನಿಂದ ಪೋಷಿಸಿ ಬೆಳೆಸಿದರು. ಅದು ೧೯೫೮ರಲ್ಲಿ ರಜತ ಮಹೋತ್ಸವ ಆಚರಿಸುವ ಸಮಯಕ್ಕೆ ಮೊದಲಿನ ಎರಡು ಹಾಗೂ ೧೯೪೭ರಲ್ಲಿ ಮತ್ತು ಅನಂತರ ಪ್ರಾರಂಭವಾದ ಎರಡು ದೈನಿಕಗಳ ಸ್ಪರ್ಧೆಗಳನ್ನು ಎದುರಿಸಿ, ನಾಡಿನ, ರಾಜ್ಯದ ಮೆಚ್ಚಿಕೆಯ ಪಾತ್ರವಾಗಿ ಬೆಳೆದು ನಿಂತಿದ್ದಿತು. ಜೊತೆಗೆ ಕರ್ಮವೀರ ಸಾಪ್ತಾಹಿಕ ಹಾಗೂ ೧೯೫೬ರಲ್ಲಿ ಪ್ರಾರಂಭವಾದ ಕಸ್ತೂರಿ ಡೈಜೆಸ್ಟುಗಳೂ ಪ್ರಗತಿಯ ಶಿಖರ ತಲುಪಿದ್ದವು. ಅವರು ಸಂಪಾದಕತ್ವದ ಹೊಣೆ ಹೊತ್ತುಕೊಂಡಾಗ ಕೇವಲ ೨೦೦ ಪ್ರಸಾರವಿದ್ದ ಸಂಯುಕ್ತ ಕರ್ನಾಟಕ ರಜತ ಮಹೋತ್ಸವ ಸಮಯಕ್ಕೆ ೪೦,೦೦೦ ತಲುಪಿ, ಕರ್ನಾಟಕದಲ್ಲಿಯೇ ಅಗ್ರಮಾನ್ಯ ಪತ್ರಿಕೆಯೆನಿಸಿತ್ತು. ಅದರ ಬೆಳವಣಿಗೆ ನಿರೀಕ್ಷಿಸಿದವರೆಲ್ಲ ಮೊಹರೆಯವರ ತ್ಯಾಗ ಮತ್ತು ಶ್ರಮವನ್ನು ಹೊಗಳುತಿದ್ದರು; ನಿತ್ಯವೂ ಮೊಹರೆಯವರು ಸಂಪಾದಕ ವರ್ಗದ ಸಭೆ ಸೇರಿಸಿ, ಪತ್ರಿಕೆಯ ಅಂದಿನ ಲೋಪದೋಷಗಳನ್ನು ಚರ್ಚಿಸಿ, ಅವುಗಳ ಪುನರಾವೃತ್ತಿಯಾಗದಂತೆ ಎಚ್ಚರಿಸುತ್ತಿದ್ದರು. ಮೇಲ್ಮೆ ಇದ್ದಲ್ಲಿ ತಪ್ಪದೆ ಮೆಚ್ಚಿಗೆ ವ್ಯಕ್ತ ಮಾಡುತಿದ್ದರು. ಸಂಪಾದಕೀಯವನ್ನು ಅವರೇ ಬರೆಯಲಿ ಅಥವಾ ಸಹಾಯಕ ಸಂಪಾದಕರು ಬರೆಯಲಿ, ಅದು ಸಂಯುಕ್ತ ಕರ್ನಾಟಕದ ಅಭಿಪ್ರಾಯವೆನಿಸುತ್ತಿತ್ತು. ವಿಷಯವನ್ನು ಸಾಕಷ್ಟು ಚರ್ಚಿಸಿ ಒಂದು ಅಭಿಪ್ರಾಯಕ್ಕೆ ಬಂದ ನಂತರ, ಆ ವಿಚಾರಕ್ಕನುಸರಿಸಿ ಅಗ್ರಲೇಖನ ಬರೆಯಲಾಗುತ್ತಿತ್ತು. ಹೀಗಾಗಿ ಸಂಪಾದಕ ವರ್ಗದ ವೈಯಕ್ತಿಕ ಅನಿಸಿಕೆಗಳಿಗೆ ಆಸ್ಪದವಿರುತ್ತಿದ್ದಿಲ್ಲ. ಇಷ್ಟೊಂದು ಸಾಧನೆಗೈದು

೧೯೫೮ ಏಪ್ರಿಲ್ ತಿಂಗಳಲ್ಲಿ ಆತ್ಮತೃಪ್ತಿಯಿಂದ ರಜತ ಮಹೋತ್ಸವ ಆಚರಿಸಿದರು. ಆದರೆ ಒಮ್ಮೆ ಜಾರಿಬಿದ್ದು ತೊಡೆಯಿಂದ ಎಲುಬು ಮುರಿದು ಕಷ್ಟಪಟ್ಟರು. ಹೀಗಾಗಿ ರಜತ ಮಹೋತ್ಸವದ ಹೊತ್ತಿಗೆ, ಅವರಲ್ಲಿ ಮೊದಲಿನ ಆರೋಗ್ಯ ಮತ್ತು ಉತ್ಸಾಹ ಉಳಿದಿರಲಿಲ್ಲ. ೧೯೫೮ ನವಂಬರದಲ್ಲಿ ನಿವೃತ್ತರಾದರು. ಅವರಲ್ಲಿ ವಿರಸ ಇಲ್ಲದಿರಲಿಲ್ಲ. ಆದಾಗ್ಯೂ ಅವರ ಕನಸಿನ ಮಗ ಎನಿಸಿದ್ದ ಬೆಂಗಳೂರು ಮುದ್ರಣ ೧೯೫೯ ಜನವರಿ ೨೬ ರಂದು ಪ್ರಾರಂಭವಾಯಿತು. ಅವರು ಅದರಲ್ಲಿ ಭಾಗವಹಿಸಿದ್ದರು. ಮುಂದೆ ೧೯೬೦ರಲ್ಲಿ ಬೆಂಗಳೂರಿನಲ್ಲಿ ಹಿರಿಯ ಮಗನ ಬಳಿ ಇದ್ದಾಗ, ಬೌರಿಂಗ್ ಆಸ್ಪತ್ರೆಯಲ್ಲಿ ಜುಲೈ ೨೭ ರಂದು ವೈಕುಂಠವಾಸಿಗಳಾದರು. ಅವರ ನಿಧನಕ್ಕೆ ಕಣ್ಣೀರಿನ ಕೋಡಿಯೇ ಹರಿಯಿತು. ಕೇವಲ ಪತ್ರಿಕಾಕರ್ತರಿಂದಲ್ಲ; ರಾಷ್ಟ್ರೀಯ ಮುಂದಾಳುಗಳೂ ಅಶ್ರುತರ್ಪಣ ಕೊಟ್ಟಿರುತ್ತಾರೆ.

## ೩೯. 'ಜಯಂತಿ'ಯ ಬೆಟಗೇರಿ ಕೃಷ್ಣಶರ್ಮರು

ಶ್ರೀ ಪಿ. ಆರ್. ಮುತಾಲಿಕ

ಬೆಟಗೇರಿ ಕೃಷ್ಣಶರ್ಮರು ಪತ್ರಿಕೋದ್ಯಮಕ್ಕೆ ಬಂದದ್ದು ಯಾವ ಆಕಸ್ಮಿಕದಿಂದಲೂ ಅಲ್ಲ; ಯಾವ ಪವಾಡದಿಂದಲೂ ಅಲ್ಲ. ಪತ್ರಿಕೋದ್ಯಮ ಅವರ ವ್ಯಕ್ತಿತ್ವದ ಒಂದು ಅವಿಭಾಜ್ಯವಾದ ಅಂಶವಾಗೇ ಇತ್ತು. ಪತ್ರಿಕೋದ್ಯಮಕ್ಕೆ ಸಾಹಿತ್ಯಿಕವಾದ ಒಂದು ಇಮೇಜನ್ನು ಕೊಟ್ಟು ಕನ್ನಡ ಸಾಹಿತ್ಯದ ಎಷ್ಟೋ ಪ್ರಕಾರಗಳು ತಮ್ಮ ಪತ್ರಿಕೆಯಲ್ಲೇ ಊರ್ಜಿತವಾಗುವಂತೆ ಮಾಡಿದ್ದು ಅವರಲ್ಲಿಯ ಇನ್ನೊಂದು ಅಷ್ಟೇ ಪ್ರಬಲವಾಗಿದ್ದ ಸಾಹಿತ್ಯಿಕವಾದ ಅಂಶ. ಮೂಲತಃ ಬೆಟಗೇರಿಯವರು ಸೃಜನಶೀಲರು. ಅವರ ಸೃಜನಶೀಲತೆಯ ಒಂದು ಮುಖ ಪತ್ರಿಕೋದ್ಯಮದಲ್ಲಿ ಕಂಡರೆ, ಅದರ ಇನ್ನೊಂದು ಮುಖ ಅವರ ಸಾಹಿತ್ಯಸೃಷ್ಟಿಯಲ್ಲಿ ಕಾಣಸಿಗುವದು. ಈ ಎರಡೂ ಕ್ರಿಯೆಗಳನ್ನು ಏಕವ್ಯಕ್ತಿ ಏಕಕಾಲಕ್ಕೆ ಮಾಡುತ್ತಿದ್ದುದರಿಂದ, ಅವರ ಈ ಎರಡು ಅಭಿವ್ಯಕ್ತಿ ಮಾಧ್ಯಮಗಳನ್ನು ಒಂದರಿನ್ನೊಂದನ್ನು ಬೇರ್ಪಡಿಸುವುದು ಸಾಧುವಲ್ಲ-ಸಾಧ್ಯವೂ ಇಲ್ಲ. ಸುಮಾರು ಇಪ್ಪತ್ಮೂರು ವರ್ಷಗಳವರೆಗೆ ಅಖಂಡವಾಗಿ ನಡೆಸಿದ ( ಒಮ್ಮೆ ಸಹ ಸಂಯುಕ್ತ ಸಂಚಿಕೆಯಾಗಿ ಪ್ರಕಟವಾಗದೆ ) ಬೆಟಗೇರಿಯವರೂ, 'ಜಯಂತಿ'ಯೂ ಕನ್ನಡದ ಪಾಲಿಗೆ Mythವೇ ಆಗಿ ಬಿಟ್ಟಿದೆ. ಕನ್ನಡ ಕೃತಿಗಳಿಗೆ ಪತ್ರಿಕೆಗಳಿಗೆ ತನ್ನದೇ ಆದ ವಾಚಕ ಬಳಗವೇ ಇಲ್ಲದ ಕಾಲದಲ್ಲಿ ವಾಚಕವೃಂದವನ್ನು ಸೃಷ್ಟಿಸುವುದರ ಜೊತೆಗೆ ಕನ್ನಡ ಸಾಹಿತ್ಯದ ಕೆಲ ಹೊಸ ಪ್ರಮುಖ ಚಳುವಳಿಗಳನ್ನೂ ಒಳಗೊಂಡು, ಕನ್ನಡ ಸಾಹಿತ್ಯದ ಕೆಲ ಹೊಸ ಪ್ರಕಾರಗಳ ಉಗಮಕ್ಕೂ ಕಾರಣೀಭೂತವಾದ ಪತ್ರಿಕೆ - ಅವರ ಹಿಂದಿರುವ ವ್ಯಕ್ತಿ ಇಂದು Mythವೇ ಆದರೆ ಆಶ್ಚರ್ಯವೇನಿದೆ? ಈ ಇಪ್ಪತ್ಮೂರೂ (೧೯೩೭-೬೦) ವರ್ಷದ ಸಂಚಿಕೆಗಳನ್ನು ತಿರುವಿ ಹಾಕಿದಾಗ ಕೆಲ ಕುತೂಹಲಕರ ಅಂಶಗಳು ವಿದಿತವಾಗುವವು. ಆ ಹಲಕೆಲ ಅಂಶಗಳನ್ನು 'ಜಯಂತಿ' ಪತ್ರಿಕೆಯ ಹಿನ್ನೆಲೆಯಲ್ಲಿ ನೋಡುವದು ಈ ಲೇಖನದ ಉದ್ದೇಶ.

ಬೆಟಗೇರಿಯವರು ಅಪ್ಪಟ ಆದರ್ಶವಾದಿಗಳು - ಸ್ವಾತಂತ್ರ್ಯಪೂರ್ವ ಭಾರತದಲ್ಲಿ೧ ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರಗಳೆಲ್ಲದರಲ್ಲೂ ಪ್ರವಹಿಸುತ್ತಿದ್ದ ಆದರ್ಶಗಳು ಒಂದು 'integrated' ರೂಪದಲ್ಲಿ ಬೆಟಗೇರಿಯವರ ವ್ಯಕ್ತಿತ್ವವನ್ನು ರೂಪಿಸುತ್ತಿದ್ದವು - ಎಂಬುದು ಸ್ಪಷ್ಟ. ಈ ಕಾರಣಕ್ಕಾಗಿಯೇ ಸ್ವಾತಂತ್ರ್ಯಪೂರ್ವದ 'ಜಯಂತಿ' ಸಂಚಿಕೆಗಳ ವಿವಿಧ ಶೀರ್ಷಿಕೆಗಳು - ಆ ಮೂಲಕ ಪ್ರತಿಪಾದಿಸ ಬಯಸಿದ ಅಂಶಗಳು ಒಂದು ದೃಷ್ಟಿಯಿಂದ ಆದರ್ಶೀಕರಣ ಸೂತ್ರಕ್ಕೆ ಒಳಪಟ್ಟಿದ್ದರೆ (ಒಳಪಟ್ಟಿವೆ ಸಹ) ಅದು ತೀರಾ ಸಹಜವಾದ ಪ್ರತಿಕ್ರಿಯೆ. ಆದರೂ ಇಲ್ಲಿ ಒಂದು ಅಂಶವನ್ನು ಗಮನಿಸದಿದ್ದರೆ ಅನುಚಿತವಾದೀತು. ಬೆಟಗೇರಿಯವರದು ಎಂದೂ 'ಯುಟೋಪಿಯನ್' ಆದರ್ಶವಾಗಿರಲಿಲ್ಲ; ತೀವ್ರ ಸಂವೇದನಾಶೀಲ ಆದರ್ಶವಾಗಿತ್ತು - ಈ ಸಂವೇದನಾಶೀಲತೆಯೇ ಅವರ ಆದರ್ಶೀಕರಣ ಕ್ರಿಯೆಗೆ ಒಂದು ವಾಸ್ತವಿಕ ತಳಹದಿಯನ್ನು ನೀಡಿದ್ದು, ೧೯೩೭ರಿಂದ ೬೦ರ ವರೆಗಿನ ದಶಕಗಳು ಭಾರತೀಯ ಒಟ್ಟಾರೆ ಜೀವನದಲ್ಲೇ ಸಾಕಷ್ಟು ಏರುಪೇರುಗಳನ್ನು ಕಂಡ ದಶಕಗಳು. ರಾಜಕೀಯವಾಗಿ, ಸಾಮಾಜಿಕವಾಗಿ ವ್ಯವಸ್ಥೆಗಳೇ ಬದಲಾದ ದಶಕಗಳು - ಈ ಬದಲಾವಣೆ ಕ್ರಿಯೆ ಈ ಎಲ್ಲ ಮಟ್ಟಗಳಲ್ಲೂ ಇಷ್ಟು ಸಾರ್ವತ್ರಿಕವಾಗಿ ನಡೆದಿರುವಾಗ ಬೆಟಗೇರಿಯವರಂತಹ ಸಂವೇದನಾಶೀಲ ಸಾಹಿತಿಯ ಪ್ರತಿಕ್ರಿಯೆಯನ್ನು ಗಮನಿಸುವದೂ ಕುತೂಹಲಕರವಾದ ಅಂಶ. 'ಜಯಂತಿ' ಈ ಅವಧಿಯ ಇಂಥ ಬದಲಾಗುತ್ತಿದ್ದ - ಬದಲಾದ ರಾಜಕೀಯ,

ಸಾಮಾಜಿಕ ವ್ಯವಸ್ಥೆಯ ದಾಖಲೆಯೂ ಅಹುದು, ಈ ಅವಧಿಯಲ್ಲಿ ಬೆಟಗೇರಿಯವರ ಮಾನಸಿಕ ಬೆಳವಣಿಗೆಯ ದಾಖಲೆಯೂ ಅಹುದು. 'ಜಯಂತಿ'ಯ 'ಸಂಪಾದಕೀಯ'ಗಳಲ್ಲಿ ಕಂಡುಬರುವ ಏಕರೂಪತೆ (Consistancy) ಇದನ್ನು ದೃಢೀಕರಿಸುವದು. ಇದು ಜಯಂತಿಯ ಒಂದು ಮುಖ ಮಾತ್ರ. ಯಾಕೆಂದರೆ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಇದು ದಾಖಲೆಗೊಳಿಸುವುದು. ಈ ಶತಮಾನದ ಮೂರನೆಯ ದಶಕದಲ್ಲಿಯೇ ಪ್ರವರ್ಧಮಾನಕ್ಕೆ ನವೋದಯ ಸಾಹಿತ್ಯದಿಂದ ಹಿಡಿದು ಪ್ರಗತಿಶೀಲರನ್ನೊಳಗೊಂಡು ಐವತ್ತರ ದಶಕದಲ್ಲೇ ಮೊಳಕೆಯೊಡೆದ ನವ್ಯರ ಮಾಸಲೆಯನ್ನು ನೀಡುವುದರೊಂದಿಗೆ 'ಜಯಂತಿ' ಸಾಹಿತ್ಯಿಕವಾಗಿಯೂ ಪ್ರಾತಿನಿಧಿಕವಾದದ್ದು. ಈ ಇಪ್ಪತ್ಮೂರು ವರುಷಗಳಲ್ಲಿಯ 'ಜಯಂತಿ'ಯ ಲೇಖಕ ಬಳಗವನ್ನು ನೋಡಿದಾಗ ಈ ಮಾತು ಅತಿಶಯೋಕ್ತಿ ಅನ್ನಿಸಲಿಕ್ಕಿಲ್ಲ.

ಈ ಕೆಲ ಅಂಶಗಳ ಹಿನ್ನೆಲೆಯಲ್ಲಿ 'ಜಯಂತಿ'ಯನ್ನು ಮತ್ತೊಮ್ಮೆ ಪರಿಶೀಲಿಸಿದಾಗ 'ಜಯಂತಿ'ಗೆ ಬರಿಯ ಐತಿಹಾಸಿಕ ಮಹತ್ವ ಮಾತ್ರವಲ್ಲ ಒಂದು ಗುರುತರ ಕ್ರಿಯೆಯನ್ನು ನಿರ್ವಹಿಸಿದ ಹೆಮ್ಮೆಯ ಮಹತ್ವವಿದೆ. 'ಜಯಂತಿ' ಇಂದಿಗೂ 'ರೆಲೆವಂಟ್' ಆಗಲು ಬೆಟಗೇರಿಯಂತಹ ವ್ಯಕ್ತಿಯು ಸಾಹಿತ್ಯದ ಬಗ್ಗೆ ತಳೆದಿದ್ದ ನಿರ್ದಿಷ್ಟ ಧೋರಣೆಗಳೂ ಕಾರಣ. ಹಾಗೆ ನೋಡಿದರೆ ಒಂದು ದೃಷ್ಟಿಯಿಂದ (ಸಹಜವಾಗೇ) ಬೆಟಗೇರಿಯವರ ಪ್ರಮುಖ ಸಾಹಿತ್ಯಸೃಷ್ಟಿಯಾದದ್ದೂ 'ಜಯಂತಿ'ಯಲ್ಲೇ! 'ಜಯಂತಿ'ಗೆ ಸಾಹಿತ್ಯಕವಾದ ಇಮೇಜನ್ನು ನೀಡಿದ್ದರಿಂದ, ಪತ್ರಿಕೆಯ ಉದ್ದೇಶವೂ ಅವರ ಸಾಹಿತ್ಯಸೃಷ್ಟಿಯ ಉದ್ದೇಶಕ್ಕಿಂತ ಬಹಳ ಭಿನ್ನವೇನೂ ಆಗಿರಲಿಲ್ಲ. ಅವರೇ ಒಂದು ಸಂಪಾದಕೀಯದಲ್ಲಿ ಹೇಳುವಂತೆ –

> "ಪತ್ರಿಕಾ ಸಂಪಾದಕನ ವ್ಯವಸಾಯವೆಂದರೆ ಅದೊಂದು ಸಾಮಾಜಿಕ ಸಂಸ್ಕೃತಿಯ ಶಿಕ್ಷಣದ ವ್ಯವಸಾಯ. ಸಮಾಜದ ಘಟಕಗಳಾದ ವ್ಯಕ್ತಿ-ವ್ಯಕ್ತಿಗಳಿಗೆಲ್ಲ ನಿಜವಾದ ಜ್ಞಾನ ವಿಜ್ಞಾನದ ಪರಿಚಯ ಮಾಡಿಕೊಟ್ಟು ಅದರ ಮನಸ್ಸು-ಹೃದಯಗಳನ್ನು ಆದರ್ಶದತ್ತ ತಿರುಗಿಸುವದು ಆತನ ಕರ್ತವ್ಯ. ತ್ಯಾಗ, ತಪಸ್ಸು, ತಿಳುವಳಿಕೆಗಳೇ ವ್ಯಕ್ತಿಯ ಆದರ್ಶದ ಸಾಧನಗಳೆಂಬುದನ್ನು ಉತ್ಕಟ ಭಾವನೆಯಿಂದ ಪ್ರಚಾರ ಮಾಡುವವನೇ ನಿಜವಾದ ಸಂಪಾದಕ" *(ಜಯಂತಿ, ಜುಲೈ ೧೯೫೩)*

.... ಈ ಒಂದು ಉದ್ದೇಶಕ್ಕೆ ಬದ್ಧರಾದರು ಬೆಟಗೇರಿಯವರು. 'ಜಯಂತಿ'ಯ ಎಲ್ಲ ಸಂಚಿಕೆಗಳು ಈ ದಿಶೆಯಲ್ಲೇ ಪ್ರಯತ್ನಗಳು ಅನವಶ್ಯಕವಾಗಿ. ಎಂತಲೆ 'ಜಯಂತಿ' ನಿಸ್ಸಂದೇಹವಾಗಿ ಸದಭಿರುಚಿಯ ಪತ್ರಿಕೆ. ಬಹುಶಃ ಇಂದು 'ಸದಭಿರುಚಿ' ಎಂಬ ಪದದ ಬಳಕೆಯೇ ಅಪ್ಯಾಯಮಾನವಾಗಿ ಕಾಣಬಹುದೇನೋ; ಯಾಕೆಂದರೆ ಎಂದೆಂದೂ ಗುಪ್ತವಾಗದ, ಹದಿವಯದ ಹುಡುಗ -ಹುಡುಗಿಯರು ಓದಿ ವಿಕೃತ ಮನವನ್ನು ಬೆಳೆಸಿಕೊಳ್ಳುವ 'ಗುಪ್ತ ಸಮಾಲೋಚನೆ'ಯಂಥ ಶೀರ್ಷಿಕೆಗಳೂ, ವಿಕೃತ ಕಾಮುವನ್ನೆಲ್ಲ ಧಾರಾಳವಾಗಿ ನಿರ್ಭಿಡೆಯಿಂದ ವರ್ಣಿಸಿದ ಕತೆಗಳನ್ನೊಳಗೊಂಡರೂ 'ಕುಟುಂಬದ ಎಲ್ಲರೂ ಕುಳಿತು ಸಂಕೋಚವಿಲ್ಲದೆ ಓದಬಹುದಾದ' ಎಂಬ ಮುಂತಾದ ತಾವೇ ಸೃಷ್ಟಿಸಿದ ಲೇಬಲ್ಲುಗಳನ್ನು ಹಚ್ಚಿಕೊಂಡು 'ಸದಭಿರುಚಿ'ಯ ಪತ್ರಿಕೆಗಳು ಎಂದು ಕರೆದುಕೊಳ್ಳುತ್ತಿರುವ ಈ ಸಮಯದಲ್ಲಿ ಈ ಪದದ ಬಳಕೆಯೂ ಬರಿಯ 'ರಿಚುವಲ್' ಆಗಿಬಿಟ್ಟಿದೆ. ಆದರೆ 'ಜಯಂತಿ'ಯ ಕೆಲ ಸಂಚಿಕೆಗಳನ್ನಾದರೂ ಬರಿಯ ಕುತೂಹಲಕ್ಕಾಗಿಯಾದರೂ ಓದಿದವನಿಗೆ ಈ ಪದದ ಪೂರ್ತಿ ಅರ್ಥವಾದೀತು.

'ಸಂಪಾದಕೀಯ'ಗಳು 'ಜಯಂತಿ' ಯ ಅಮೂಲ್ಯ ದಾಖಲೆಗಳು. ರಾಜಕೀಯ ಸಾಮಾಜಿಕ-ಸಾಹಿತ್ಯಿಕ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿರುತ್ತಿದ್ದ ಸಂಪಾದಕೀಯಗಳು ಆಯಾ ಕ್ಷೇತ್ರಗಳಲ್ಲಿನ ಬೆಳವಣಿಗೆ ಕುರಿತು ಬೆಟಗೇರಿಯವರ ಪ್ರಾಮಾಣಿಕ ಸ್ಪಂದನೆಗಳು – ಕೆಲ ಸಲ ಇವು ಹೊಗಳಿಕೆಗಳೂ – ಕೆಲ ಸಲ ಟೀಕೆಗಳೂ – ಆಗಿರುತ್ತಿದ್ದವು. ಇಲ್ಲಿಯ ವಿಚಾರಧಾರೆ ಸಂಪಾದಕರ 'ಒರಿಜಿನಲ್' ವೈಚಾರಿಕತೆಗೆ ಸಾಕ್ಷಿ. ದೀಪಾವಳಿ ಕುರಿತು ಬೆಟಗೇರಿಯವರು ಸ್ವಾತಂತ್ರ್ಯಪೂರ್ವದ ಸಂಚಿಕೆಯೊಂದರಲ್ಲಿ ಬರೆದ ಸಂಪಾದಕೀಯವು ಆ ಮುಂದೆ ಮಾನವೀಯವಷ್ಟೇ ಅಲ್ಲ – ಕತ್ತಲೆ – ಬೆಳಕಿನ ಸಂಕೇತಗಳು ಪಾರತಂತ್ರ್ಯದ ಕತ್ತಲೆ – ಸ್ವಾತಂತ್ರ್ಯದ ಬೆಳಕನ್ನೂ ಸೂಚಿಸುವವು. ಆ ಮುಂದೆ ಸಂಪಾದಕೀಯವೂ – ಅವರೇ ಬರೆಯುತ್ತಿದ್ದ ಸಾಮಾಜಿಕ ಸಂವಚನಗಳೂ ನಂತರ ಸಾಕಷ್ಟು ಮೊನಚಾಗಿಯೇ ಬರಲು ಆರಂಭ ಮಾಡಿದವು. 'ಬಿದಿರೆಯಲ್ಲಿ ಸಾಹಿತ್ಯ ಜಾತ್ರೆ', 'ಬಝಾರಿ ಕಾಮ ಸಾಹಿತ್ಯ' – ಮುಂತಾದ ಸಂಪಾದಕೀಯಗಳನ್ನು, 'ಬಹುಮತದ ಯುಗ' ಎಂಬ ಸಾಮಾಜಿಕ ಸಂವಚನವನ್ನೂ ಇಲ್ಲಿ ಉಲ್ಲೇಖಿಸಬಹುದಾಗಿದೆ.

ಹೃದಯ – ಮನಸ್ಸಿನ ಸಂಸ್ಕಾರಕ್ಕೆ ಅವಶ್ಯಕ ingrediant ಆದ ವೈಚಾರಿಕತೆಗಾಗಿಯೇ ಸಂಚಿಕೆಯಲ್ಲಿ ಲೇಖನಗಳು ಇದ್ದೇ ಇರುತ್ತಿದ್ದವು. ಈ ಲೇಖನಗಳು ರಾಜಕೀಯ ಆರ್ಥಿಕ ವ್ಯವಸ್ಥೆಗಳನ್ನು ಕುರಿತು ಸಿ.ಡಿ. ದೇಶಪಾಂಡೆ, ಹಿತ್ತಲಮನಿ, ಜಿದರಕುಂದಿ ವೆಂಕಟರಾಯರಂತಹರು ಬರೆದ ಲೇಖನಗಳೂ – ಕಲೆ – ಸಾಹಿತ್ಯ, ಅಧ್ಯಾತ್ಮ ಕುರಿತು ಕಾರಂತ, ಕಾಯ್ಕಿಣಿ, ವಿಶ್ವನಾಥ ಹೆಗಡೆ, ಬಿ. ಎಚ್. ಶ್ರೀಧರ, ಗೋಕಾಕ, ಮುಂತಾದವರು ಬರೆದ ಲೇಖನಗಳೂ ಉಲ್ಲೇಖಾರ್ಹ. ಸಾಹಿತ್ಯಿಕವಾಗಿ ಎರಡು ಕಾರಣಕ್ಕಾಗಿ 'ಜಯಂತಿ' ಅಪೂರ್ವವಾದದ್ದು. ಒಂದು, ಸೃಜನಶೀಲತೆಯನ್ನು ಪ್ರೋತ್ಸಾಹಿಸಿದ್ದು; ಎರಡು ಕನ್ನಡದಲ್ಲೇ

ಮೊತ್ತ ಮೊದಲ ಬಾರಿಗೆ 'ವಿಮರ್ಶೆಯ ಶಿಕ್ಷಣರಂಗ' ಶೀರ್ಷಿಕೆಯಲ್ಲಿ ಪ್ರಾಯೋಗಿಕ ವಿಮರ್ಶೆಯನ್ನು ಆರಂಭಿಸಿದ್ದು.

ಸೃಜನಶೀಲ ಕ್ರಿಯೆಯನ್ನು ಪ್ರೋತ್ಸಾಹಿಸುವ ಮೊದಲ ಹಜ್ಜೆಯಾಗಿ ಸಣ್ಣ ಕಥಾಸ್ಪರ್ಧೆಗಳನ್ನು ಏರ್ಪಡಿಸಿದ್ದು - ಆ ಸ್ಪರ್ಧೆಗಳಲ್ಲಿ ಮಿರ್ಜಿ ಅಣ್ಣಾರಾಯ, ಭಾರತೀಸುತರಂತಹರು ಬೆಳಕಿಗೆ ಬಂದದ್ದು ಕನ್ನಡ ಕಥಾ ಸಾಹಿತ್ಯಕ್ಕೆ 'ಜಯಂತಿ'ಯ ಸೇವೆ. ಸಣ್ಣಕತೆಗಳಲ್ಲದೆ - ನೀಳ್ಗತೆಗಳೂ, ಏಕಾಂಕಗಳೂ, ರೂಪಕಗಳೂ, ಕವನಗಳೂ ಅದೂ ಕಾರಂತ, ಬೇಂದ್ರೆ, ಬೆಟಗೇರಿ ಆದಿಯಾಗಿ ದೇಸಾಯಿ, ಕಾರ್ನಾಡ, ಅರವಿಂದ ನಾಡಕರ್ಣಿ, ಚಂಪಾ ವರೆಗಿನ ವ್ಯಾಪ್ತಿಯೇ ಸಾಕು - 'ಜಯಂತಿ'ಯ ಹಿರಿಮೆಗೆ!

ಇಲ್ಲಿಯ ವರೆಗಿನ ಈ ಪ್ರಾಯೋಗಿಕ ಪರಿಚಯದಿಂದಲೇ 'ಜಯಂತಿ'ಯ ಮಟ್ಟದ ಪರಿಚಯವಾಗಿರಲು ಸಾಕು. ಒಣ ಉಪಚಾರಕ್ಕಾಗಿ ಈ ಮಾತನ್ನು ಹೇಳುತ್ತಿಲ್ಲ. ಅಖಂಡವಾಗಿ ಇಪ್ಪತ್ತೊಮ್ಮರು ವರ್ಷಗಳವರೆಗೆ ಸಂಸ್ಕೃತಿಯ ಪ್ರತಿನಿಧಿಯಾಗಿ ಕನ್ನಡಿಗರಲ್ಲಿ ಒಳ್ಳೆಯ ಸಂಸ್ಕಾರವನ್ನು ತನ್ಮೂಲಕ ಉಂಟುಮಾಡಲು ಹೆಣಗಿದ 'ಜಯಂತಿ'ಯು ಅದರ ಹಿಂದಿದ್ದ ಬೆಟಗೇರಿಯವರೂ ಅನನ್ಯ ಆಸ್ತಿಯಲ್ಲದೆ - ಇನ್ನೇನು? ಇಷ್ಟಿದ್ದೂ 'ಜಯಂತಿ'ಯನ್ನು ಕನ್ನಡಿಗರೇ ತಿರಸ್ಕರಿಸಿದರು ಎಂಬುದು ಬಹುಶಃ ಬಹಳ ದೊಡ್ಡ 'ಐರನಿ'. 'ಮಾತೃಭೂಮಿ' - 'ಜಯ ಕರ್ನಾಟಕ'ಗಳಲ್ಲಿ ಆರಂಭಿಸಿದ್ದ ಕಾರ್ಯವನ್ನು ಬೆಟಗೇರಿಯವರು 'ಜಯಂತಿ'ಯಲ್ಲಿ ತಮ್ಮನ್ನೇ ತಾವು ಪೂರ್ತಿಯಾಗಿ ತೊಡಗಿಸಿಕೊಳ್ಳುವುದರ ಮೂಲಕ ಮುಗಿಸಿದ್ದಾರೆ. ಈ ದಿಶೆಯಲ್ಲಿ ಬೆಟಗೇರಿಯವರದು ನಿಜಕ್ಕೂ ಸಂತೃಪ್ತ ಮನಸ್ಸು, ಸಾರ್ಥಕ ಬದುಕು. ಪತ್ರಿಕೋದ್ಯಮವನ್ನು ಎಂದೂ ವ್ಯಾವಹಾರಿಕ ಮಟ್ಟಕ್ಕೆ ತರಲೊಪ್ಪದೆ ಈ ನಿರಾಕರಣೆಯಿಂದಲೇ ಬಹುಶಃ ಅವರು ತಕ್ಕಮಟ್ಟಿಗೆ ತಿರಸ್ಕೃತರಾದರೂ, ಅದು ಗೌಣ. ಭವಿಷ್ಯತ್ತು ಇತಿಹಾಸದಷ್ಟು, ವರ್ತಮಾನದಷ್ಟು ಕ್ರೂರವಾಗಿರದು - ಕ್ರೂರವಾಗಿಲ್ಲ. ಅಲ್ಲಿ ಸಾಹಿತಿ - ಪತ್ರಿಕೋದ್ಯಮಿ ಬೆಟಗೇರಿ ಕೃಷ್ಣಶರ್ಮರು ಅನನ್ಯ ಅಸಾಧಾರಣ! ◆

## ೪೦. ಟೀಯೆಸ್ಸಾರ್

✍ ಶ್ರೀ ಎಂ.ಬಿ. ಸಿಂಗ್

೧. ಆರಂಭದಿಂದಲೂ ಕನ್ನಡಿಗರ, ಕನ್ನಡದ ಹಿತವನ್ನು ಕಾಯ್ದ 'ಪ್ರಜಾವಾಣಿ'ಯ ಜನನವಾದುದು ೧೯೪೮ರಲ್ಲಿ ಕನ್ನಡಿಗರನ್ನು, ಕನ್ನಡವನ್ನು ಬೆಳೆಸುತ್ತಾ ಅದು ತಾನೂ ಬೆಳೆಯಿತು. ಪ್ರಜಾವಾಣಿಯನ್ನು ಆ ಎತ್ತರಕ್ಕೆ ಕೊಂಡೊಯ್ದ ಧೀಮಂತರಲ್ಲಿ ಟಿ. ಎಸ್. ಸತ್ಯನಾರಾಯಣರ ಪಾಲು ಹಿರಿದು. 'ಟೀಯೆಸ್ಸಾರ್' ಎಂದೇ. ಅಭಿಮಾನಿಗಳ, ಸ್ನೇಹಿತರ ಬಾಯಲ್ಲಿ ನಲಿದಾಡುತ್ತಿದ್ದವರು. ಪತ್ರಿಕೋದ್ಯಮದ ಆ ಕಾಲ ಇಂದಿನಂತಲ್ಲ. ಇಂದು ಎಲ್ಲೋ ನಡೆದ ಸುದ್ದಿ ಕ್ಷಣ ಮಾತ್ರದಲ್ಲಿ ಪತ್ರಿಕಾ ಕಛೇರಿಗೆ ಬಂದು ತಲುಪುತ್ತದೆ. ಆದರೆ ಅದು ಟೆಲಿಪ್ರಿಂಟರಿಗೂ ಹಿಂದಿನ ಕಾಲ. ಅಂತಹ ಕಾಲದಲ್ಲಿ ಎಂತೆಂತಹ ಸುದ್ದಿಗಳನ್ನೊಳಗೊಂಡು ಪ್ರಜಾವಾಣಿ ಪ್ರಕಟವಾಗುತ್ತಿತ್ತು. ಎಲ್ಲರ ಮೆಚ್ಚಿಕೆಗೆ ಪಾತ್ರವಾಗಿತ್ತು. ಉನ್ನತ ಮಟ್ಟದ ವರದಿಗಳು, ತನಿಖಾ ವರದಿಗಳು, ಚಿತ್ರಗಳು, ತುಂಡು ಸುದ್ದಿಗಳು ಮುಖ್ಯವಾಗಿ 'ಛೂಬಾಣ' ಇವುಗಳಿಂದ ಪ್ರಜಾವಾಣಿ ಮುಂಚೂಣಿಯಲ್ಲಿತ್ತು. ದೂರದ ಊರುಗಳಿಂದ ವರದಿ ಕಳಿಸುತ್ತಿದ್ದ ಪತ್ರಕರ್ತರು, ಪತ್ರಿಕೆಯ ಮಾರಾಟದ ಏಜೆಂಟರು, ಸಂಪಾದಕೀಯದ ಮಂದಿ, ಇವರೆಲ್ಲರಿಗೆ ಮುಂದಾಳುವಾಗಿ ಟೀಯೆಸ್ಸಾರ್!

೨. ಸಿ. ವಿ. ರಾಜಗೋಪಾಲ್, ಎಂ. ಬಿ. ಸಿಂಗ್ ಹಾಗೆಯೇ ಇನ್ನೂ ಹಲವರನ್ನು ಪ್ರಜಾವಾಣಿ ಬಳಗಕ್ಕೆ ಸೇರಿಸಿ ಅವರುಗಳೂ ಪತ್ರಿಕೆಯೂ ಬೆಳೆಯಲು ಕಾರಣರಾದವರು ಟೀಯೆಸ್ಸಾರ್. ಅವರು ಯುವ ಪತ್ರಿಕಾಕರ್ತರಿಗೆ ನೀಡುತ್ತಿದ್ದ ಪ್ರೋತ್ಸಾಹ ಅನನ್ಯಿತವಾದದ್ದು. ರಾಯರನ್ನು ಪರಿಚಯಿಸುವಾಗ ನಮ್ಮಲ್ಲಿ ಯಾರಿಗೂ ಅವರನ್ನು ಬಾಸ್ ಎನ್ನಲು ಮನಸ್ಸು ಬಾರದು. ಬಾಸ್ - ಅದು ಪದನಿಮಿತ್ತ ಮಾತ್ರ. ಆದರೆ ವಾತ್ಸಲ್ಯಮಯಿ ಸೋದರ, ಆತ್ಮೀಯ ಬಂಧು, ಹಿತೈಷಿ ಗುರು, ಮಾರ್ಗದರ್ಶಕ ಈ ಎಲ್ಲವೂ ಸಮ್ಮಿಳನಗೊಂಡ ಅಪೂರ್ವ ವ್ಯಕ್ತಿತ್ವ ಟೀಎಸ್ಸಾರ್.

೩. ಟೀಯೆಸ್ಸಾರ್ ಅವರಂತೆಯೇ ಸ್ಮರಣೀಯರಾದ ಇನ್ನೊಬ್ಬ ಮಹಾಪುರುಷ ದಿ| ಕೆ. ಎ. ನೆಟ್ಟಕಲ್ಲಪ್ಪ. ಪ್ರಜಾವಾಣಿ ಪತ್ರಿಕಾ ಸಮೂಹದ ನಿರ್ದೇಶಕ-ಕಾರ್ಯದರ್ಶಿ. ಇವರಿಬ್ಬರೂ 'ಪ್ರಜಾವಾಣಿ' ಪತ್ರಿಕಾ ಸಮೂಹದ ಅಶ್ವಿನೀ ದೇವತೆಗಳು. ಪ್ರಜಾವಾಣಿ ಬಳಗದ ಪತ್ರಿಕೆಗಳ ಯಶಸ್ಸಿನ ರೂವಾರಿಗಳು. ಅಂದಿನ ಪ್ರಜಾವಾಣಿಯ ಸಂಪಾದಕ ಬಳಗ ವಿಶಿಷ್ಟವಾದುದು. ಕೆ. ಎಸ್. ರಾಮಕೃಷ್ಣಮೂರ್ತಿ, ವೈ. ಎನ್. ಕೆ, ಜಯಶೀಲರಾವ್, ರಾಜಗೋಪಾಲ, ಸೂರಿ,

ರಾಮಣ್ಣ ಇವರೆಲ್ಲಾ ಸಮವಯಸ್ಸಿನ ಯುವಕರು. ಪುಟಿದೇಳುವ ಉತ್ಸಾಹಶೀಲರು. ಈ ಉತ್ಸಾಹವೇ ಪ್ರಜಾವಾಣಿಯ ಯಶಸ್ಸಿನ ಮೂಲಾಧಾರವೆನ್ನುವುದನ್ನು ರಾಯರು ಹಾಗೂ ನೆಟ್ಟಕಲ್ಲಪ್ಪ ಮನಗಂಡಿದ್ದರು. ಕನ್ನಡ ಪತ್ರಿಕೋದ್ಯಮದಲ್ಲಿ ಹೊಸ ಅಲೆ ಮೂಡಿಸಿದ ಕೀರ್ತಿ, ಶ್ರೇಯಸ್ಸು ಟೀಯೆಸ್ಸಾರ್ ಮತ್ತು ಅವರ ಉತ್ಸಾಹಿ ಯುವ ಬಳಗದ್ದು.

೪. ಅವರೆಂದೂ ಯುವ ಪತ್ರಕರ್ತರ ಉತ್ಸಾಹಕ್ಕೆ ಕಡಿವಾಣ ಹಾಕಲಿಲ್ಲ. ಹೊಸ ಜಾಡಿನಲ್ಲಿ ನಡೆದ ಪತ್ರಿಕೆ ಬೆಳೆಯಿತು. ತಾವೂ ಬೆಳೆದರು. ಜೊತೆಯಲ್ಲಿ ನಮ್ಮನ್ನೂ ಬೆಳೆಸಿದರು. ಟೀಯೆಸ್ಸಾರ್ ಅವರ ಅಪೂರ್ವ ಗುಣವೆಂದರೆ ಅವರಿಗೆ ತಮ್ಮ ಸಹೋದ್ಯೋಗಿಗಳ ಬಗೆಗೆ ಇದ್ದ ಕಾಳಜಿ.

೫. ಅವರು ಸಹೋದ್ಯೋಗಿಗಳನ್ನು ಕುಟುಂಬದವರಂತೆ ನೋಡಿಕೊಳ್ಳುತ್ತಿದ್ದರು. ಯಾವುದೇ ವಿಷಯದಲ್ಲಿ ಮತಭೇದ, ಬಿರುಸಿನ ಮಾತುಗಳು, ಕೆಲಸ ಬಿಟ್ಟು ಹೋಗುವಷ್ಟು ಬೇಸರ, ಎರಡು ದಿನ ಕೆಲಸಕ್ಕೆ ಗೈರು ಹಾಜರ್, ಕ್ಷಮಾಶೀಲ, ಹೆಂಗರುಳಿನ ಟೀಯೆಸ್ಸಾರ್ ಮನೆಗೆ ಬರುತ್ತಿದ್ದುದು ಗ್ಯಾರಂಟಿ. ಆ ವೇಳೆಗೆ ವಯೋಧರ್ಮದ ಪೊಗರು ಇಳಿದಿರುತ್ತಿತ್ತು. "ಏ, ಗೂಬಾ ನಡೀ ಆಫೀಸಿಗೆ" ಎಂದು ನಗುನಗುತ್ತಾ ಆಜ್ಞಾಪಿಸಿದಾಗ, ಹೆಡೆ ಮುಚ್ಚಿದ ನಾಗನಾಗಿ ಗಾರುಡಿಗನನ್ನು ಹಿಂಬಾಲಿಸುತ್ತಿದ್ದರು, ಸಹೋದ್ಯೋಗಿಗಳು. ಸಹೋದ್ಯೋಗಿಗಳ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರು. ಅವರ ಆಗು ಹೋಗುಗಳಲ್ಲಿ ಒಂದಾಗುತ್ತಿದ್ದರು.

## ಛೂಬಾಣ

'ಛೂಬಾಣ' ಎನ್ನುವುದು ರಾಯರು ನಿಯಮಿತವಾಗಿ ಬರೆಯುತ್ತಿದ್ದ ವ್ಯಂಗ್ಯಪೂರ್ಣವಾದ ಅಂಕಣ. ಅವರ ಒಂದು ಮಾದರಿ 'ಕವನ ಕುತೂಹಲ'.

## ಕವನ ಕುತೂಹಲ

ಕರ್ನಾಟಕದ ಗತವೈಭವವನ್ನು ಕೊಂಡಾಡುವ ಹಳೆಯ ಕವಿತೆಗಳಂತೆ ಆಧುನಿಕ ಕವಿಗಳು ದೊಡ್ಡ ದೊಡ್ಡ ಯೋಜನೆಗಳಂಥ ಪ್ರಸ್ತುತ ವೈಭವಗಳ ಮೇಲೆ ಕವನ ಬರೆದರೆ ಸಾವಿರಾರು ಬಹುಮಾನ ಕೊಡುವ ಸೂಚನೆ ಕೊಟ್ಟಿದ್ದಾರೆ. ಮುಖ್ಯಮಂತ್ರಿ ಅರಸು-ಘಟಪ್ರಭಾ ಸುರಂಗದ ಗುದ್ದಲಿ ಪೂಜೆ ಮಾಡುತ್ತ "ಘಟಪ್ರಭ ನೋಡಯ್ಯ, ಸಾಗರದಂಥ ಜಲಾಶಯ, ತಂತ್ರಶಕ್ತಿ ಸಮನ್ವಯ .... ಘಟಪ್ರಭ ನೋಡಯ್ಯ" ಎಂಬ ಆಶು ಕವಿತೆ ಹಾಡಿರುವುದರಿಂದ ಮಿಕ್ಕ ಆಶು ಕವಿಗಳು ಆ ಸಂಬಂಧದ ಬಹುಮಾನದ ಆಶೆಯನ್ನು ಕೈಬಿಡಬಹುದು!....

...... ಅಥವಾ ಅದೇ ಘಟಪ್ರಭ ಕುರಿತು ಬೇರೆ ಭಾವನೆಯ ಆಶು ಕವಿತೆಗಳನ್ನು ಬರೆದು ಬಹುಮಾನ ಗಿಟ್ಟಿಸಲು ಒಂದು ಕೈ ನೋಡಬಹುದು!

(ಜಯತು ಜಯವಿಠಲಾ ಎಂಬ ಧಾಟಿಯಲ್ಲಿ)

ಚಟಚಟನೆ ಬಾರಯ್ಯ, ಘಟಪ್ರಭ ನೋಡಯ್ಯ।
ಮನ ತುಂಬ ಹಾಡಯ್ಯ। ಬಹುಮಾನ ಬೇಡಯ್ಯ।
ಭವತು ಭವ್ಯವಿದಯ್ಯಾ।

ಘಟಪ್ರಭ ಆಶುಕವಿತೆ ಬರೆಯಲು ಮುಂದಾದ ಆಶುಕವಿಗಳು ಅದೇ ಧಾಟಿಯಲ್ಲಿ ನಮ್ಮ ನಗರಗಳ ಸ್ಲಂ ಅಥವಾ ಕೊಳಕು ಪ್ರದೇಶಗಳನ್ನು ಕಂಡು, ಸ್ಫೂರ್ತಿಗೊಂಡು ಮನಸಾರೆ ಹಾಡಬಹುದು:

ಸ್ಲಮ್ಮು ನೋಡು, ಸ್ಲಮ್ಮು ನೋಡು, ಸ್ಲಮ್ಮು ನೋಡಯ್ಯಾ
ಅಲ್ಲಿ ಸ್ಲಮ್ಮು ಎಲ್ಲ ಸ್ಲಮ್ಮು
ಎಲ್ಲ ಕಡೆ ಸ್ಲಮ್ಮೆ ಕಂಡೆಯಯ್ಯಾ,
ಜಯತು ಜಯ ಸ್ಲಮ್ಮೆನಯ್ಯಾ॥

ಇದೇ ರೀತಿಯಲ್ಲಿ ಜನಪ್ರಿಯ ಚಿತ್ರಗೀತೆಯನ್ನನುಸರಿಸಿ ವಿಧಾನಸೌಧದ ಮೇಲೆ ವಿಧವಿಧವಾದ ಆಶುಕವಿತೆಗಳನ್ನು ಬರೆಯಬಹುದು. ಉದಾಹರಣೆಗೆ-

ಕನ್ನಡ ನಾಡಿನ ವಿಧಾನ ಸೌಧ । ನಿಜಲಿಂಗಪ್ಪಗೆ ವಿಷಾದ ಸೌಧ ।
ಅರಸು ನಂಬಿದವರ್ಗೆ ಉದಾರ ಸೌದ
ಕನ್ನಡನಾಡಿಗೊಂದೆ ವಿಧಾನಸೌಧ ।
ಫೈಲು ಹೋದರೆ ವಿಧಾನ ಸೌಧ ।
ಪುಢಾರಿಗಳಿಗೇ ವ್ಯವ್‌ಧಾನ ಸೌಧ । ನಮ್ಮ ಸೌಧ ನಮ್ಮ ಸೌಧ,
ನಮ್ಮದೇ ಸೌಧಾ॥ .... ಇತ್ಯಾದಿ.

## ೪೧. ಪಾ.ವೆಂ. ಆಚಾರ್ಯರು

✍ ವಿವಿಧರಿಂದ

ಹಿಂದಿನ ಕರ್ಮವೀರದಲ್ಲಿ 'ಲಾಂಗೂಲಾಚಾರ್ಯ'ರಾಗಿ, ಕಸ್ತೂರಿ ಡೈಜೆಸ್ಟಿನಲ್ಲಿ ಯಶಸ್ವೀ ಸಂಪಾದಕರಿದ್ದ ತಪ್ಪಿಸಿಂದಾಗಿ ಬೇರೆ ಬೇರೆ ಕಾವ್ಯನಾಮಗಳನ್ನು ಇಟ್ಟುಕೊಂಡು ಬರೆಯುತ್ತಿದ್ದ ಪಾಡಿಗಾರು ವೆಂಕಟರಮಣಾಚಾರ್ಯರಿಗೆ ಗೋಯೆಂಕಾ ಹೆಸರಿನ ಪತ್ರಿಕಾ ಪ್ರಶಸ್ತಿ ಲಭಿಸಿದ್ದಿತು.

ಅವರ ಮೇಲಿನ ಒಂದು ವ್ಯಕ್ತಿಚಿತ್ರದ ಲೇಖನ, ಅವರ ಸಂದರ್ಶನ ಹಾಗೂ ಗೋಯೆಂಕಾ ಪ್ರಶಸ್ತಿಯ ಪರಿಚಯ - ಇವಿಷ್ಟು ಮುಂದಿನ ಪುಟಗಳಲ್ಲಿವೆ. ಇವುಗಳ ಲೇಖಕರು ಅನುಕ್ರಮವಾಗಿ ಪ್ರೊ. ಕು. ಶಿ. ಹರಿದಾಸ ಭಟ್ಟರು, 'ಶ್ರೀ' ಪದ್ರೆಯವರು ಹಾಗೂ ಡಾ. ಹಾ. ಮಾ. ನಾಯಕರು.

### ಪಾ. ವೆಂ. ಆಚಾರ್ಯ

ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ಅಖಿಲ ಭಾರತ ಮಟ್ಟದ ಗೋಯೆಂಕಾ ಪ್ರಶಸ್ತಿಯನ್ನು ಪಡೆದ ಪಾಡಿಗಾರು ವೆಂಕಟರಮಣ ಆಚಾರ್ಯರು ಪ್ರತಿಭಾವಂತ ಪತ್ರಕರ್ತನೆಂದು ಹೆಸರು ಗಳಿಸಿದವರು.

ಆಚಾರ್ಯರು ಉಡುಪಿಯ ಬಡಕುಟುಂಬವೊಂದರಲ್ಲಿ ಫೆಬ್ರುವರಿ ೬, ೧೯೧೫ರಲ್ಲಿ ಜನಿಸಿದರು. ಆಗಿನ ಮೆಟ್ರಿಕ್ ವರೆಗೆ ಕಲಿತರು. ಆದರೆ ಸಂಸ್ಕೃತವೂ ಸೇರಿದಂತೆ ಅನೇಕ ವಿಷಯಗಳಲ್ಲಿ ಆಸಕ್ತಿಯನ್ನು ತಾಳಿ, ಓದಿಯೇ ಓದಿದರು. ಪತ್ರಿಕಾ ವೃತ್ತಿಯು ಅವರ ತರುಣ ವಯದಿಂದಲೇ ಸೆಳೆಯಿತು. ಉಡುಪಿಯ 'ಅಂತರಂಗ' ಪತ್ರಿಕೆಯಲ್ಲಿ, ಧಾರವಾಡದ ಜಯಕರ್ನಾಟಕದಲ್ಲಿ ಕತೆ-ಕವಿತೆಗಳನ್ನು ಬರೆಯತೊಡಗಿದರು. ಆರಂಭದ ಈ ಪತ್ರಿಕಾ ವ್ಯವಸಾಯಕ್ಕೆ ತುಳು ಸಾಹಿತ್ಯದ ಅಧ್ವರ್ಯು ಶ್ರೀ ಪಣೆಯಾಡಿಯವರದೇ ಮಾರ್ಗದರ್ಶನ.

ನೌಕರಿಯನ್ನು ಅರಸಿಕೊಂಡು ಪಾವೆಂ ೧೯೪೨ರಲ್ಲಿ ಹುಬ್ಬಳ್ಳಿಗೆ ಬಂದರು. ಲೋಕಶಿಕ್ಷಣ ಟ್ರಸ್ಟಿನವರ 'ಕರ್ಮವೀರ' ಸಾಪ್ತಾಹಿಕದಲ್ಲಿ ಸಹಸಂಪಾದಕರಾಗಿ ಅವರ ನಿಯಮಿತ ವೃತ್ತಿಜೀವನಕ್ಕೆ ಮೊದಲಾಯಿತು. ಆಗ 'ಲಾಂಗೂಲಾಚಾರ್ಯ' ಹೆಸರಿನಿಂದ ಪ್ರತಿವಾರವೂ 'ಓದುಗರೊಡನೆ ಹರಟೆ' ಹೊಡೆಯುತ್ತಿದ್ದರು. ಆ ಕಾವ್ಯನಾಮವು ಕರ್ನಾಟಕದಲ್ಲಿ ಮನೆಮಾತಾಯಿತು. ಟ್ರಸ್ಟಿನವರು ಕನ್ನಡದಲ್ಲಿ ಒಂದು ಡೈಜೆಸ್ಟ್ ಪತ್ರಿಕೆಯನ್ನು ಹೊರತರುವ ಆಶಯ ಹೊಂದಿದಾಗ, ಅದಕ್ಕೆ ಪಾ.ವೆಂ. ಆಚಾರ್ಯರೇ ಸಂಪಾದಕರಾಗಿ ನಿಯುಕ್ತರಾದರು. ಅದುವೆ 'ಕಸ್ತೂರಿ'. ಅದರ ಆರಂಭದ ವರ್ಷ - ೧೯೫೬ರಿಂದ ಅಖಂಡ ೧೮ ವರ್ಷಗಳ ಕಾಲ ಆ ಪತ್ರಿಕೆಯನ್ನು ವಿಶಿಷ್ಟ ರೀತಿಯಿಂದ ನಡೆಸಿಕೊಂಡು ಬಂದರು. ಪ್ರತಿ ತಿಂಗಳೂ ಅವರಲ್ಲಿ ಜೀವನಚರಿತ್ರೆ, ವಿಜ್ಞಾನ ವಿಷಯಗಳು, ದೇಶವಿದೇಶ ಪರಿಚ[illegible], ಜಗತ್ತಿನ ವೈಚಿತ್ರ್ಯಗಳು, ಶಬ್ದ ಭಂಡಾರ, ಪುಸ್ತಕ ಸಂಗ್ರಹ - ಮುಂತಾದವನ್ನು ವ್ಯವಸ್ಥಿತ ರೀತಿಯಲ್ಲಿ, ತಾವೇ ಪ್ರತಿ [illegible]ಕೆಯಲ್ಲಿ ನಾಲ್ಕಾರು ಲೇಖನಗಳನ್ನು ಬರೆಯಬೇಕಾಗುತ್ತಿತ್ತು. ೧೯೭೪ರಲ್ಲಿ ನಿವೃತ್ತರಾದ ಮೇಲೆ ಪಾವೆಂ. ವೈಚಾರಿಕ ಲೇಖನಗಳನ್ನು ಬರೆಯುವತ್ತ ಮನಗೊಟ್ಟರು. ರಾಜಕೀಯ ವಿಶ್ಲೇಷಣೆಯಲ್ಲಿಯೂ ಅವರು ಪಳಗಿದ್ದರೆನ್ನುವುದಕ್ಕೆ 'ಸ್ವತಂತ್ರ ಭಾರತ' ಎನ್ನುವ ಗ್ರಂಥವು ಸಾಕ್ಷಿಯಾಗಿದೆ.

ಪಾವೆಂ ಆಚಾರ್ಯರನ್ನು ಪ್ರಥಮತಃ ಖ್ಯಾತನಾಮ ಹರಟೆಗಾರ ಎಂದೇ ತಿಳಿಯಲಾಗುತ್ತದೆ. ಅವರಷ್ಟು ಹರಟೆಗಳನ್ನು (ಸುಮಾರು ೬೦೦). ಕನ್ನಡದಲ್ಲಿ ಬೇರೆ ಯಾರೂ ಬರೆದಂತಿಲ್ಲ. ಯಾರದೇ ಮನನೋಯಿಸದಂಥ ವಿಡಂಬನೆಯ ಮೊನಚುಳ್ಳ, ಜೊತೆಗೆ ಅವರ ವಿಸ್ತಾರಿತ ವಾಚನದ ಹಿನ್ನೆಲೆಯುಳ್ಳ ಅವರ ಹರಟೆಗಳು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯೆನಿಸಿವೆ.

ದಿ. ೮ ಎಪ್ರಿಲ್ ೧೯೯೨ರಂದು ಪಾವೆಂ ಅಸುನೀಗಿದರು. ಅವರ ಮರಣಾನಂತರ ಪಾವೆಂ ವಿಶ್ವಸ್ತ ಸಮಿತಿಯವರು ಅವರ ಸಮಗ್ರ ಬರವಣಿಗೆಯನ್ನು ಪ್ರಕಟಿಸುವ ಯೋಜನೆಯನ್ನೆತ್ತಿಕೊಂಡು ಡಾ. ಶ್ರೀನಿವಾಸ ಹಾವನೂರರ ಸಂಪಾದಕತ್ವದಲ್ಲಿ ಹೊರತಂದರು. ೧೯೯೯-೨೦೦೨ ಈ ಅವಧಿಯಲ್ಲಿ ಹಾಗೆ ಹೊರಬಂದ ಕೃತಿಗಳೆಂದರೆ : 'ಉಡುಪಿಯ ಪರಿಸರದಲ್ಲಿ' 'ಆಯ್ದ ಎರಡು ಲಲಿತ ಪ್ರಬಂಧ ಸಂಕಲನಗಳು', 'ಇವರೇ ಲಾಂಗೂಲಾಚಾರ್ಯರು!' 'ಬ್ರಾಹ್ಮಣರೇನು ಮಾಡಬೇಕು; ಮತ್ತಿತರ ಚಿಂತನ ಪ್ರಬಂಧಗಳು', 'ಚಿತ್ರ-ವಿಚಿತ್ರ ಈ ಜಗತ್ತು', 'ಹಿಂದೂ ಮುಸ್ಲಿಂ ಹಾಗೂ ಇತರ ಕತೆಗಳು', 'ವಿಜ್ಞಾನ ವಿಸ್ಮಯ ಮತ್ತು ಲೋಕ ವಿಖ್ಯಾತರು' ಮತ್ತು 'ಬಯ್ಯಮಲ್ಲಿಗೆ' ಎಂಬ ತುಳು ಕವನಸಂಗ್ರಹ. ಈ ಯಾದಿಗೆ ಈಚಿನ 'ಓದುಗರೊಡನೆಯ ಹರಟೆಗಳು' ಎಂಬುದನ್ನೂ ಸೇರಿಸಬೇಕು.

✍ ಶ್ರೀ. ಹಾ.

## ಗೊಯೆಂಕಾ ಪ್ರಶಸ್ತಿ ಗೆದ್ದ ಪಾವೆಂ

✍ ಪ್ರೊ. ಕು.ಶಿ. ಹರಿದಾಸ ಭಟ್ಟ

ಪಾ. ವೆಂ. - ಪಾಡಿಗಾರು ವೆಂಕಟರಮಣ ಆಚಾರ್ಯ - ಲಾಂಗೂಲಾಚಾರ್ಯ - ಕಸ್ತೂರಿ ಸಂಪಾದಕ. ಇವೆಲ್ಲ ಪಾವೆಂ ಬೀಜಾಕ್ಷರದ ವಿಸ್ತರಣೆಗಳು, ವಿಕಸನಗಳು. ಕರ್ನಾಟಕದ ಅತ್ಯತ ಮನೆಮಾತಾಗಿರುವ ಪಾವೆಂ ಅಖಿಲ ಭಾರತ ಖ್ಯಾತಿಯನ್ನು ಗೆದ್ದುಕೊಂಡವರು, ಪತ್ರಿಕೋದ್ಯಮದ ಅತ್ಯುನ್ನತ ಗೋಯೆಂಕಾ ಪ್ರಶಸ್ತಿ ಅವರನ್ನು ಹುಡುಕಿಕೊಂಡು ಬಂದಿತು. ಇಷ್ಟೊಂದು ಸಪಾತ್ರ ಪ್ರಶಸ್ತಿ ಪ್ರದಾನ ಎಂದೂ ನಡೆದಿರಲಿಲ್ಲ. ಇಂದು ಎಲ್ಲರೂ ಹೇಳುವಂತೆ ಪ್ರಶಸ್ತಿ-ವಿಜಯಲಕ್ಷ್ಮಿ ಆಚಾರ್ಯರ ಕೊರಳಮಾಲೆಯಾಯಿತು. ವಯೋಮಾನದಿಂದಲೂ ಅಲ್ಲದೆ ಜೀವನ ಸಂಗಾತಿಯಂತಿರುವ ದಮ್ಮಿನ ಕಾಯಿಲೆಯಿಂದಲೂ ಜರ್ಜರಿತರಾದ ಆಚಾರ್ಯರ ದೇಹಶಕ್ತಿ ಈ ಮಾಲೆಯನ್ನು ಲೀಲಾಜಾಲವಾಗಿ ಹೊರಬಲ್ಲುದು. ನಿಮಗೆ ಗೋಯೆಂಕಾ ಪ್ರಶಸ್ತಿ ಸಿಕ್ಕಿದೆ ಎಂದು ಮೊದಲಾಗಿ ಅವರಿಗೆ ಯಾರಾದರೂ ಹೇಳಿದ್ದಿದ್ದರೆ 'ಹೌದೇ ಎಂದು ಉದ್ಗರಿಸಿದ ಬಳಿಕ ಆಚಾರ್ಯರು ಗೊಯೆಂಕಾ ಎಂದರೇನು ಎಂಬ ಪದಾರ್ಥ(ಪದದ ಅರ್ಥ) ಚಿಂತನೆಯ ಬೆನ್ನು ಹಿಡಿದು ಸಾಗಿರುತ್ತಾರೆ! ಗೊಯೆಂಕಾ ಯಾವ ಭಾಷೆಯ ಪದ? ಸಿಂಧಿಯೋ, ಗುಜರಾತಿಯೋ? ಹಿಂದಿಯೋ?, ಬಂಗಾಳಿಯೋ? ಯಾವುದಾದರೇನಂತೆ ಅವರು ತಲಸ್ಪರ್ಶಿ ಚಿಂತನೆಗೆ ಆಚಾರ್ಯರು ಮನವಿಟ್ಟರೆ ಸಾಕು, ವಾಗ್ದೇವಿಯ ಭಂಡಾರದ ಮುದ್ರೆಯೊಡೆದಂತೆಯೆ.

ವರ್ಷಾನುಗಟ್ಟಲೆಯಿಂದ ದಮ್ಮು ಪೀಡಿತರಾದ ಆಚಾರ್ಯರು ಅದನ್ನು ಹೋಲಿಸಿ ತಮ್ಮ ಪದ-ಅರ್ಥ ಚಿಂತನೆಯನ್ನೂ ಪತ್ರಿಕೋದ್ಯಮದ ವೃತ್ತಿ ಪ್ರವೃತ್ತಿಗಳನ್ನೂ ಏಕಪ್ರಕಾರವಾಗಿ ನಿರ್ವಹಿಸಿದ್ದಾರೆ. ನಾಡಿನ ಪ್ರತಿಭಾವಂತ ಬರಹಗಾರರಲ್ಲಿ ಅಗ್ರಗಣ್ಯರಾಗಿರುವ ಆಚಾರ್ಯರಿಗೆ ದೈವದತ್ತವಾಗಿ ಬಂದ ಸ್ಮರಣಶಕ್ತಿ ಮತ್ತು ಪದಪ್ರಭುತ್ವ ಸಾಧಿತವಾಗಿದೆ. ಅವರ ನಿಶಿತಮತಿಯ ಹರವು ದೊಡ್ಡದು, ಆಳ ಆಗಾಧ. ಪಾವೆಂ ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಇಂದಿನ ಹಾಗೆ ಫ್ರೀಶಿಪ್ - ಸ್ಕಾಲರ್‌ಶಿಪ್‌ಗಳು ಇದ್ದಿದ್ದರೆ ಆಚಾರ್ಯರು ಪತ್ರಿಕೋದ್ಯಮದ ಬಲೆಗೆ ಸಿಲುಕದೆ ವೈದ್ಯರೋ ಇಂಜಿನಿಯರೋ ಆಗಿ ಬಿಡುತ್ತಿದ್ದರು. ಅರ್ಹತೆಗೆ ನೂರರಲ್ಲಿ ಒಂದು ಸಿಗುವಂಥ ಪ್ರಸಂಗದೊಳಗೂ ಅದು ಆಚಾರ್ಯರಿಗೇ ವರವಾಗಿ ಬಿಡುತ್ತಿತ್ತು. ವೈಯಕ್ತಿಕ ಬಡತನದಂತೆ ಭಾರತ ದೇಶವೂ ಬಡತನದಲ್ಲಿದ್ದ ಆ ಕಾಲದಲ್ಲಿ 'ಅಂತರಂಗ' ಸಾಪ್ತಾಹಿಕದ ಬರಹಗಾರರಾಗಿ ತರಬೇತಿ ಪಡೆದಿದ್ದರು. ಪಾವೆಂ ಜೀವನದಲ್ಲಿ ಎಲ್ಲವೂ ಸ್ವಯಾರ್ಜಿತಗಳೇ. ಹಾಗಾಗಿ ಏನಾದರೊಂದು ಉದ್ಯೋಗ ಅಗತ್ಯವಾಗಿತ್ತು. ಆಗ ಅನ್ನಾಹಾರಗಳನ್ನು ನೀಡಿದ ಉದ್ಯೋಗ ಪತ್ರಿಕೋದ್ಯಮ. ಹುಟ್ಟೂರಿನಿಂದ ಸುಮಾರು ೨೦೦ ಮೈಲು ದೂರದ ಹುಬ್ಬಳ್ಳಿಯಲ್ಲೇ ಸಿಕ್ಕ ಈ ಉದ್ಯಮವನ್ನು ಅವರು ತನ್ನನ್ನು ಹಿಡಿದುಕೊಂಡ ದಮ್ಮಿನಷ್ಟೆ ಭದ್ರವಾಗಿ ಹಿಡಿದುಕೊಂಡರು. ನಾನವರನ್ನು ಬುದ್ಧಿ ತಿಳಿದು ನೋಡಿದಂದಿನಿಂದ (೧೯೪೦) ಇಂದಿನವರೆಗೂ ಅವರು ಪತ್ರಿಕಾ ವ್ಯವಹಾರವನ್ನು ಬಿಟ್ಟಿಲ್ಲ. ದಮ್ಮೂ ಅವರನ್ನು ಬಿಡಲಿಲ್ಲ.

ಉತ್ತರ ಕರ್ನಾಟಕ ಭಾಗದ ಪ್ರಮುಖ ದಿನಪತ್ರಿಕೆಯಾದ ಸಂಯುಕ್ತ ಕರ್ನಾಟಕದ ಕರ್ಮವೀರದಲ್ಲಿ ಉದ್ಯೋಗ ಹಿಡಿಯುವುದಕ್ಕೆ ಮೊದಲೇ ಪಾವೆಂ ಉಡುಪಿಯ ಶ್ರೀ ಎಸ್.ಯು. ಪಣೆಯಾಡಿಯವರ 'ಅಂತರಂಗ'ದ ಬರವಣಿಗೆಗೂ ಸ್ವಪ್ರೇರಣೆ, ಸ್ವಪ್ರಚೋದನೆಗಳೇ ಕಾರಣವೆನ್ನಬಹುದು. ಹುಟ್ಟಿನಿಂದಲೇ ಬರಹಗಾರರೂ ಚಿಂತನಶೀಲರೂ ಆದ ಪಾವೆಂ ಗೆ ಒಂದು ವೇದಿಕೆ ಬೇಕಾಗಿತ್ತು - ಖಾಯಂ ವರಮಾನ ಬರುವಂಥ, ಅದೆಷ್ಟೇ ಅಲ್ಪವಾದರೂ ಜೀವನವನ್ನು ಸಹ್ಯಗೊಳಿಸುವಂಥ ಒಂದು ಕೆಲಸ ಬೇಕಾಗಿತ್ತು. ಅದನ್ನು ಮೊಹರೆ ಹಣಮಂತರಾಯರ 'ಸಂಯುಕ್ತ ಕರ್ನಾಟಕ' ಅವರೊಳಗೆ ಅಂತರ್ಗತವಾಗಿದ್ದ

'ಕರ್ಮವೀರ' ಒದಗಿಸಿಕೊಟ್ಟವು. ಆಮೇಲೆ ಆಚಾರ್ಯರು ಬೇರೆ ಕಡೆಗೆ ಕಣ್ಣು ಹಾಯಿಸಲಿಲ್ಲ, ಹಿಂದೆ ಹೊರಳಲಿಲ್ಲ. ತನ್ನ ಪ್ರವೃತ್ತಿಗೆ ಮನೋಧರ್ಮಕ್ಕೆ ತಕ್ಕುದಾದ ಒಂದು ವೃತ್ತಿ ದೊರೆಯಿತೆಂದು ಅದನ್ನೇ ಗಟ್ಟಿಯಾಗಿ ನೆಮ್ಮಿಕೊಂಡರು. ಅಡಿಯಿಂದ ಮುಡಿತನಕ ಪತ್ರಿಕಾ ವ್ಯವಸಾಯದ ಸಾಧ್ಯತೆಗಳನ್ನು ದುಡಿಸಿಕೊಂಡರು. ತಮ್ಮ ಅಂಕಣದಿಂದಲೂ ಸಂಪಾದನ ಕಾರ್ಯ ಚಾತುರ್ಯದಿಂದಲೂ ಕರ್ಮವೀರವನ್ನು ಬೆಳಗಿದರು. ಕಸ್ತೂರಿಯ ಮೂಲಕ ಕನ್ನಡ ಜನಮನೋರಂಗದ ಕಸ್ತೂರಿಯೇ ಆಗಿ ಭದ್ರನೆಲೆಯನ್ನು ನಿರ್ಮಿಸಿಕೊಂಡರು. ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ರಾಯ್ಟರಿಂದ ಬಂದ ಆಂಗ್ಲ ಸುದ್ದಿಯನ್ನು ತಕ್ಷಣ ಹಾಗೂ ಸಮರ್ಪಕವಾಗಿ ಅನುವಾದಿಸಿ ಕೊಡಬೇಕಾದರೆ 'ಕರ್ಮವೀರ'ದಲ್ಲಿ ಅಡಗಿರುತ್ತಿದ್ದ ಆಚಾರ್ಯರನ್ನು ಮೊರೆಹೋಗುತ್ತಿದ್ದರಂತೆ.

ಸುಮಾರು ಮೂರು ದಶಕಗಳಷ್ಟು ಕಾಲ ಪಾವೆಂ ಸಂಪಾದಿಸುತ್ತಿದ್ದ ಕಸ್ತೂರಿಯನ್ನು ಕನ್ನಡದ ರೀಡರ್ಸ್ ಡೈಜೆಸ್ಟ್ ಆಗಿ, ಏಕಮೇವಾದ್ವಿತೀಯವಾಗಿ ಬೆಳೆಸಿದ ಕೀರ್ತಿ ಪಾವೆಂ ಒಬ್ಬರಿಗೇ ಮೀಸಲು. ಅವರು ಕನ್ನಡ ಲೇಖಕರ ದೊಡ್ಡ ಬಳಗವನ್ನಷ್ಟೆ ಕಟ್ಟಿದುದಲ್ಲದೆ ಕಸ್ತೂರಿಯ ಮೂಲಕವೇ ಅಖಿಲ ಕರ್ನಾಟಕದ ಗಮನಕ್ಕೆ ಬಂದರು. ಉತ್ತರ ಕರ್ನಾಟಕದ ಪತ್ರಿಕೆಗೆ 'ಮೈಸೂರು ಕಡೆ' ಅಷ್ಟೊಂದು ಪ್ರಸಾರಣೆ ಇದ್ದಿಲ್ಲವಾದ ಆ ಕಾಲದಲ್ಲಿ ಕಸ್ತೂರಿಯ ಸುಗಂಧ ಎಲ್ಲೆಡೆಗೂ ವ್ಯಾಪಿಸುವಂಥಾದ್ದು ಪಾವೆಂ ಅವರ ದೊಡ್ಡ ಸಿದ್ಧಿ. ಜನಮನವನ್ನು ವಿವಿಧ ವಿಷಯಗಳ ಕಡೆಗೆ ಮನ ಸೆಳೆವಂತೆ ತಾನೇ ನಾನಾ ಹೆಸರಲ್ಲಿ ಬರೆದದ್ದು ಇದೀಗ ಜನಜನಿತವಾಗಿದೆ. ಕಸ್ತೂರಿಯ ವಿಷಯವೈವಿಧ್ಯ ಒಂದು ಉತ್ತಮ ಚೇತನದ ಅಭಿರುಚಿಯನ್ನು ಸಾಕ್ಷೀಕರಿಸುತ್ತದೆ. ರಾಜಕೀಯವಿರಲಿ, ನಿತ್ಯ ಜೀವನಾವಶ್ಯಕ ವಿಷಯಗಳಿರಲಿ, ಸಾಮಾಜಿಕ ಸಮಸ್ಯೆಗಳಿರಲಿ ಎಲ್ಲವನ್ನೂ ರುಚಿಕರವಾಗಿ ವಿಶ್ಲೇಷಿಸುವ (ತಾನೇ) ಹಾಗೂ ಕಸ್ತೂರಿ ಬಳಗದ ಲೇಖಕರಿಗೆ ತನ್ನ ಉನ್ನತ ಮಟ್ಟದ ನಿರೀಕ್ಷೆಯಿಂದಲೇ ಅವರ ಬರವಣಿಗೆಯ ಮಟ್ಟವನ್ನು ಎತ್ತರಿಸಬಲ್ಲ ಆಚಾರ್ಯರ ಗುರುಶಕ್ತಿಯನ್ನು ನಾನು ಸ್ವಾನುಭವದಿಂದ ಬಲ್ಲೆ. ನನ್ನ ಲೇಖನ ವ್ಯವಸಾಯದ ಹೊಸದರಲ್ಲಿ ಆಚಾರ್ಯರ ಕರ್ಮವೀರದಲ್ಲಿ ಸ್ಥಳ ಗಿಟ್ಟಿಸಿಕೊಂಡವನು ನಾನು. ವಿದೇಶೀ ಪತ್ರಿಕೆಗಳನ್ನು ಅನುಕರಿಸಿ ಏನೇನೋ ಲೇಖನಗಳನ್ನು ಬರೆಯುತ್ತಿದ್ದೆ. ಅದನ್ನೆಲ್ಲ ಸ್ವಾಗತಿಸಿದ್ದು ನನಗೆ ಆ ದಿನಗಳಲ್ಲಿ ತೀರ ಪ್ರೋತ್ಸಾಹಕವೆನಿಸಿತ್ತು. ನನ್ನಂತೆ ಇನ್ನೂ ಅನೇಕರು ಕಸ್ತೂರಿಯಲ್ಲಿ ತಮ್ಮ ಲೇಖನ ಸ್ವೀಕೃತವಾಗುವುದನ್ನೇ ಒಂದು ಪ್ರಶಸ್ತಿ ಎಂಬುದಾಗಿ ಭಾವಿಸುತ್ತಿದ್ದರು. ಆದ್ದರಿಂದ ಗೊಯೆಂಕಾ ಪ್ರಶಸ್ತಿ ಈ ಬಾರಿ ಬರೇ ಒಬ್ಬ ಪತ್ರಿಕೋದ್ಯಮಿಗೆ ಸಂದದ್ದಲ್ಲ - ಅದು ಪತ್ರಿಕೋದ್ಯಮದ ದ್ರೋಣಾಚಾರ್ಯನಿಗೆ ಸಂದದ್ದು. ಇಂಗ್ಲಿಷಿನಲ್ಲಿ 'ಕವಿಗಳ ಕವಿ' ಎಂಬ ಮಾತೊಂದಿದೆಯಷ್ಟೆ - ಅದರರ್ಥ ಕವಿಗಳಿಗೆ 'ನಿಮ್ಮಲ್ಲಿ ಯಾರು ಕವಿ' ಎಂದು ಕೇಳಿದಾಗ ಆಯ್ಕೆಯಾಗುವ ಮಹಾನುಭಾವ ಎಂದು. ಪಾವೆಂ ಈ ನುಡಿಗಟ್ಟಿನಂತೆ 'ಪತ್ರಿಕೋದ್ಯಮಿಗಳ ಪತ್ರಿಕೋದ್ಯಮಿ'. ಆದರ್ಶ ಪತ್ರಿಕೋದ್ಯಮಿ. ಇಂಗ್ಲಿಷ್ - ದೇಶ ಭಾಷೆ ಎರಡರನ್ನೂ ತುಲನೆ ಮಾಡಿ ತೂಕ ಮಾಡಿದರೂ ಗೆದ್ದು ಬರಬೇಕಾದ ಸತ್ವಶಾಲಿ.

ಪತ್ರಿಕೋದ್ಯಮಕ್ಕೆ ಬೇಕಾದ ಪಾಂಡಿತ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ, ಮಟ್ಟದಲ್ಲಿ ಪಾವೆಂ ಪಾಂಡಿತ್ಯವುಳ್ಳವರಾಗಿದ್ದಾರೆ. ಸಾಮಾನ್ಯವಾಗಿ ಸಾಮಾನ್ಯ ಜ್ಞಾನ - ಹತ್ತು ಹಲವು ವಿಷಯಗಳೆಲ್ಲ ಇದ್ದರೆ ಪತ್ರಿಕಾ ವ್ಯವಸಾಯಕ್ಕೆ ಸಾಕು ಎನ್ನುವ ವಾದ ಒಂದಿದೆ. ಪಾವೆಂ ಅಂಥಾದ್ದನ್ನೊಲ್ಲರು. ಅವರದು ನಿಜಕ್ಕೂ ಒಂದು ವಿಶಿಷ್ಟ ಪ್ರತಿಭೆ. ವಿಶ್ವಕೋಶದ ಮನಸ್ಸು - ಎನ್‌ಸೈಕ್ಲೊಪೆಡಿಕ್ ಎನ್ನುವ ರೀತಿಯದು. ಕೆಮರಾ ಕಣ್ಣಿನಂತೆ ತನ್ನ ಕಣ್ಣಿಗೆ ಬರುವ ಸಕಲವನ್ನು ಒಳಗೊಳ್ಳುವ ಬಗೆಯದು. ಒಂದು ಇನ್ನೊಂದನ್ನು ಇನ್ನೊಂದು ಮತ್ತೊಂದನ್ನು ದರ್ಶಿಸುವ, ಸ್ಪರ್ಶಿಸುವ ನೆನಪಿನ ಸರಮಾಲೆ. ವಿಶ್ವವಿದ್ಯಾಲಯದ ಪಂಡಿತರು ನಿಜಕ್ಕೂ ಹೇಗಿರಬೇಕೋ ಅಂಥ ಚಿತ್ತವೃತ್ತಿ ಪಾವೆಂ ಅವರದು. ಪದಾರ್ಥ ಚಿಂತಾಮಣಿಯನ್ನು ಅವರು ಹೆಣೆದದ್ದು ಪರಿಶ್ರಮ ಮತ್ತು ಪ್ರತಿಭೆಯ ಪರಸ್ಪರ ಹೊಂದಾಣಿಕೆಯಿಂದ ಚಿರಕಾಲ ನಿಲ್ಲುವ ಕೃತಿ ಅದು. ಮೇರು ಸದೃಶವಾದ ಅದನ್ನು ಅನುಕರಿಸಲು ಹೋದವರೆಲ್ಲ ಯಾವ ಗರ್ತದಲ್ಲಿರುತ್ತಾರೆಂದು ಓದುಗರು ಕೂಡಲೇ ಗುರುತಿಸಬಲ್ಲರು. ಅಂದರೆ ಆಚಾರ್ಯರ ಅನ್ವೇಷಣೆಯಲ್ಲಿ ಅವರು ತೊಡಗಿಸುವ ವಿಚಿಕಿತ್ಸಕ ಮನೋಧರ್ಮ ಸೃಜನಶೀಲ ಪ್ರತಿಭೆ ಎಲ್ಲರಿಗೂ ದಕ್ಕುವುದಿಲ್ಲ. ವಿಸ್ತಾರವಾದ ಓದು, ಗಹನವಾದ ಚಿಂತನ, ಕಿಲುಬು ಹಿಡಿಯದ ಮನಸ್ಸು ಇದಕ್ಕೆ ಮುಖ್ಯ. ಪಾವೆಂ ಬರವಣಿಗೆ ಕನ್ನಡಿಗರಿಗೆ ದೊರೆತ ಒಂದು ಸಂಪತ್ತು. ಇಂಗ್ಲಿಷ್ ಮಾತ್ರ ಬಲ್ಲವರು ತಮಗೀ ರಸಕವಳ ಲಭ್ಯವಾಗದೆ ಹೋಯಿತೆಂದು ವಿಷಾದ ಪಡಬೇಕು.

ಏನನ್ನಾದರೂ ಪಾವೆಂ ಜತೆ ಚರ್ಚಿಸುವುದೆಂದರೆ ಕಷ್ಟ. ಅವರು ನೀವು ಪರಮಾವಧಿ ಮುಟ್ಟುವ ಮಟ್ಟದಿಂದ ಮುಂದಿನ ಸೋಪಾನದಿಂದಲೇ ತೊಡಗುತ್ತಾರೆ. ಹೊರಮೈಯ ವಾದಗಳು, ಜುಜುಬಿ ಆಕ್ಷೇಪಗಳು ಎಲ್ಲವನ್ನು ನಿರರ್ಥಕಗೊಳಿಸುವ ತರ್ಕಶಕ್ತಿ ಅವರಲ್ಲಿತ್ತು. ದೂರದ ವಸ್ತು ವಿಷಯಗಳನ್ನು ಸದ್ಯೋಜಾತ ಪ್ರಸಂಗಕ್ಕೆ ರಿಲೆವೆಂಟ್ ಆಗಿಯೇ ಅನ್ವಯಿಸಬಲ್ಲ ಸಮೀಕರಣ ಶಕ್ತಿ ಇತ್ತು. ಸಮಸ್ಯೆಯ ಮರ್ಮಸ್ಥಾನವನ್ನು ಗುರುತಿಸಬಲ್ಲ ವಿಶಿಷ್ಟ ಪರಿಣತಿ ಇತ್ತು. ಆಚಾರ್ಯರದು ಪರಿಪಕ್ವ ಮನಸ್ಸು. ಆದರೂ ಹುರುಪು, ಹುಮ್ಮಸ್ಸು-ಜ್ಞಾನಸಂಗ್ರಹ, ವಿತರಣೆ, ಪ್ರಸರಣೆಗಳ ಕುರಿತು ಒಂದಿಷ್ಟೂ ಕಡಿಮೆ ಇಲ್ಲ. ಅವರ ಅನ್ವೇಷಣೆಗೆ ಚಿರತಾರುಣ್ಯ.

ಪತ್ರಿಕಾ ವ್ಯವಸಾಯದ ಮೂಲಕ ಪಾವೆಂ ಅವರಿಂದ ಕನ್ನಡ ಗದ್ಯಸಾಹಿತ್ಯಕ್ಕೆ ವಿಶಿಷ್ಟ ಸೇವೆ ಸಂದಿದೆ. ಅವರು ದಕ್ಷಿಣ ಕನ್ನಡದ ಕಲಿಕೆ ಕನ್ನಡ ಶೈಲಿಯನ್ನು ವಿಸರ್ಜಿಸಿ ಎರಸೀಮೆಯ ಜೋಳದ ಕಡ್ಡಿಯಂತೆ ಹುಪ್ಪುಪುಷ್ಟವಾಗಿರುವ ಗಂಡು ಕನ್ನಡವನ್ನು ರೂಢಿಸಿಕೊಂಡರು; ಬೆಳೆಸಿದರು. ಉತ್ತರ ಕರ್ನಾಟಕದ ಗದ್ಯ ಒರಟು ಎಂಬ ಅಪವಾದವನ್ನು ಪಾವೆಂ ನಿರ್ಮೂಲ ಮಾಡಿದರು.

ಇಂಥ ಕಸುವುಳ್ಳ ಗದ್ಯ ಹೇಗೆ ಸೃಷ್ಟಿಯಾಗುತ್ತದೆ? ಅದು ಬರೇ ಬರವಣಿಗೆಯ ಶೈಲಿಯಲ್ಲ; ಜೀವನ ಶೈಲಿಯ ವಾಚನ –ಚಿಂತನ ಶೈಲಿಯ ಪ್ರತಿಬಿಂಬ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಸಮಷ್ಟಿರೂಪದಲ್ಲಿ ಚಿಂತನಶೀಲರಾಗಿರುವ ಸಾಹಿತಿಗಳೆಂದರೆ ಒಬ್ಬ ಶಿವರಾಮ ಕಾರಂತರು, ನಂತರ ಪಾವೆಂ. ಕಸ್ತೂರಿಯ ಸಂಪಾದಕತ್ವ ಒದಗಿದ ಮೇಲಂತೂ ಅವರಿಗೆ ಕಡ್ಡಾಯವಾಗಿ ವಿಸ್ತೃತ ಓದುಗಾರಿಕೆ ಅನಿವಾರ್ಯವಾಯಿತು. ಯಾವುದೇ ವಿಷಯದ ಅನುವಾದ, ಸಂಗ್ರಹ ದೀಢೀರ್ ಆಗಬೇಕಾದರೆ ಆಚಾರ್ಯರ ಮೊರೆ ಹೋಗಬೇಕೆಂಬುದು 'ಸಂಯುಕ್ತ ಕರ್ನಾಟಕದವರ' ಮನೆಮಾತಾಗಿತ್ತು. ಕಾರಣವೆಂದರೆ ಓದಿದ ವಿಷಯಗಳು ತನ್ನಷ್ಟಕ್ಕೆ ಸಂಗ್ರಹಗೊಂಡು ಆಚಾರ್ಯರ ಮೆದುಳಿನ ಕಂಪ್ಯೂಟರಿನಲ್ಲಿ ಸ್ಥಿರವಾಗಿ ನಿಲ್ಲುತ್ತಿತ್ತು. ಅಪ್ರಯತ್ನ ಗಥಿತವಾದ ಇಂಥ ಗದ್ಯವೇ ಪಾವೆಂ ಅವರ ಕೊಡುಗೆ.

ಕನ್ನಡ ಕಾವ್ಯಪರಂಪರೆ ಉಜ್ವಲವಾದದ್ದು ಹೌದು. ಆದರೆ ಕನ್ನಡ ಗದ್ಯಪ್ರಪಂಚದಲ್ಲಿ ಕೃಷಿ ಮಾಡಿದವರು ಕಡಿಮೆ. ಕವಿಯಾದವ ಋಷಿ, ಪ್ರವಾದಿ, ಹೊಸಯುಗದ ಬಾಯಿ, ಕಣ್ಣು ಏನೆಲ್ಲ ಆದಾನು; ಆದರ ನಿತ್ಯ ಜೀವನದ ನಿರಂತರ ಪ್ರವಾಹದಲ್ಲಿ ನಾಗರಿಕರು ತಿಳಿವಿನಿಂದ ಬದುಕನ್ನು ಸಾಗಿಸಲು, ಗದ್ಯವೇ ಹೃದ್ಯ. ಗದ್ಯದ ಮೂಲಕವೇ ನಾಗರಿಕನಿಗೆ ಜ್ಞಾನ-ವಿಜ್ಞಾನರಸವನ್ನು ಉಣಬೇಕು. ಈಚೆಗಿನ ಐವತ್ತು ವರ್ಷಗಳಲ್ಲಿ ಪತ್ರಿಕೆಗಳ ಮೂಲಕ ಕನ್ನಡ ಗದ್ಯವನ್ನು ತಿಕ್ಕಿ, ತೀಡಿ ಒಪ್ಪವಾಗಿಡುವ ಕೆಲಸ ನಡೆದಿದೆ. 'ಪತ್ರಿಕೆಗಳ ಗದ್ಯ' ಎಂಬಷ್ಟು ಮಟ್ಟಿಗೆ ಒಂದು ನಿಷ್ಕೃಷ್ಟ ರೂಪ ತಾಳಿದೆ. ಈ ಗದ್ಯೇತಿಹಾಸದಲ್ಲಿ ಪಾವೆಂ ಅವರಿಗೊಂದು ವಿಶಿಷ್ಟ ಸ್ಥಾನವುಂಟು. ಸಮಾಜದ ಓರೆಕೋರೆಗಳನ್ನು ವಿನೋದಪರವಾಗಿ ಆದರೂ ನಿಶ್ಚಿತವಾಗಿ ಗದ್ಯದಲ್ಲಿ ಎರಕ ಹೊಯ್ಯುವುದು ಹೇಗೆಂದು ತೋರಿಸಿಕೊಟ್ಟಿದ್ದಾರೆ. ಅವರ ಶೈಲಿಯ ತೇಜಸ್ಸಿನ ಹಿಂದೆ, ಅವರ ವಿಚಾರದ ಸ್ಪಷ್ಟತೆ ಮತ್ತು ವ್ಯಕ್ತಿತ್ವದ ಮಾರ್ದವ ಅಡಗಿರುವುದನ್ನು ಗಮನಿಸಬೇಕು.

ಇಂತು ಕನ್ನಡ ಪತ್ರಿಕಾರಂಗಕ್ಕೇನೆ ಒಂದು ಹೊಸ ಮುಖ, ಆಯಾಮ ಒದಗಿಸಿದ ಅವರ ಸ್ವೋಪಜ್ಞತೆಯನ್ನು ಲಾಂಗೂಲ್ಯವನ್ನು ಪತ್ರಿಕಾ ಪ್ರಪಂಚ ನಿಡುಗಾಲ ಕೊಂಡಾಡುವುದು.

## ಗೋಯೆಂಕಾ ಪ್ರಶಸ್ತಿ

✍ ಡಾ. ಹಾ. ಮಾ. ನಾಯಕ

'ಗೋಯೆಂಕಾ ಪ್ರಶಸ್ತಿ' ನಮ್ಮ ದೇಶದಲ್ಲಿ ಸದ್ಯಕ್ಕೆ ಅತ್ಯಂತ ದೊಡ್ಡ ಪತ್ರಿಕೋದ್ಯಮ ಪ್ರಶಸ್ತಿ; ತುಂಬ ಪ್ರತಿಷ್ಠಿತವಾದುದೂ ಹೌದು. 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕಾ ಸಮೂಹದ ಅಧ್ಯಕ್ಷರಾಗಿದ್ದ ರಾಮನಾಥ ಗೋಯೆಂಕಾ ಅವರ ಮಗ ಭಗವಾನ್‌ದಾಸ್ ಗೋಯೆಂಕಾ (೧೯೨೩-೭೯) ಅವರ ಸ್ಮಾರಕವಾದ ಈ ಪ್ರಶಸ್ತಿಯನ್ನು ನೀಡುವ ಸಲುವಾಗಿಯೇ ೧೯೮೦ರಲ್ಲಿ ಪ್ರತಿಷ್ಠಾನವೊಂದನ್ನು ಸ್ಥಾಪಿಸಲಾಯಿತು. ಪತ್ರಿಕೋದ್ಯೋಗಿಯೊಬ್ಬ ತನ್ನ ಉದ್ಯಮದಲ್ಲಿ ತೋರಬಹುದಾದ ಶ್ರೇಷ್ಠತೆಯನ್ನು ಗಮನಿಸಿ ಈ ಪ್ರಶಸ್ತಿಯನ್ನು ನೀಡಲು ನಿರ್ಧರಿಸಿ ಕ್ರಮ ಕೈಗೊಳ್ಳಲಾಯಿತು. ಈ ಶ್ರೇಷ್ಠತೆ – ಧೈರ್ಯ, ಸಾಹಸ, ಶಕ್ತಿ, ಸಾಮರ್ಥ್ಯ, ವೈಚಾರಿಕತೆ, ಶೈಲಿ, ವಿಶ್ಲೇಷಣೆಯ ಗುಣ, ಸಾಮಾಜಿಕ ಕಳಕಳಿ, ರಾಷ್ಟ್ರೀಯ ಜಾಗೃತಿ, ನವೀನತೆ ಮೊದಲಾದ ಯಾವುದೇ ಗುಣಕ್ಕೆ ಸಂಬಂಧಿಸಿದ್ದಾಗಿರಬಹುದು. ಇದೆಲ್ಲವನ್ನೂ ಗಮನಕ್ಕೆ ತಂದುಕೊಂಡೇ ಸಮಿತಿ ಆಯ್ಕೆ ಮಾಡುತ್ತದೆ. ಇದುವರೆಗಿನ ಯಾವ ಆಯ್ಕೆಯೂ ಚರ್ಚಾಸ್ಪದವಾಗಲಿಲ್ಲ ಎಂಬುದು ಸಂತೋಷದ ಮಾತು.

ಬಿ.ಡಿ. (ಭಗವಾನ್ ದಾಸ್) ಗೋಯೆಂಕಾ ಸ್ವತಃ ಒಬ್ಬ ಪತ್ರಿಕೋದ್ಯಮಿಯಾಗಿದ್ದರು. ಇಂಡಿಯನ್ ಅಂಡ್ ಈಸ್ಟರ್ನ್ ನ್ಯೂಸ್ ಪೇಪರ್ಸ್ ಸೊಸೈಟಿಯ ಅಧ್ಯಕ್ಷರೂ ಆಗಿದ್ದರು. ಅವರ ನೆನಪನ್ನು ಶಾಶ್ವತಗೊಳಿಸುವುದರೊಂದಿಗೆ, ಭಾರತೀಯ ಪತ್ರಿಕೋದ್ಯಮದ ಮಟ್ಟವನ್ನು ಉತ್ತಮಗೊಳಿಸಬೇಕೆಂಬ ಉದ್ದೇಶದಿಂದ ರಾಮನಾಥ ಗೋಯೆಂಕಾ ಈ ಪ್ರಶಸ್ತಿಯನ್ನು ಆರಂಭಿಸಿ, ನಮ್ಮ ಪತ್ರಿಕೋದ್ಯಮದ ಒಂದು ಕೊರತೆಯನ್ನು ತುಂಬಿದರು. ೧೯೮೩ರಲ್ಲಿ ಮೊದಲ ಬಾರಿಗೆ ಈ ಪ್ರಶಸ್ತಿಯನ್ನು ಇಂಗ್ಲಿಷ್ ಪತ್ರಕರ್ತ ವಿ.ಕೆ. ನರಸಿಂಹನ್ ಅವರಿಗೆ ನೀಡಲಾಯಿತು. ಭಾರತೀಯ ಭಾಷೆಗಳು ಯಾವಾಗಲೂ ಇಂಗ್ಲಿಷಿನೊಂದಿಗೆ ಸ್ಪರ್ಧಿಸಬೇಕಾದ ಒಂದು ವಿಚಿತ್ರ ವಾತಾವರಣ ನಮ್ಮಲ್ಲಿದೆ. ಇಂಗ್ಲಿಷಿಗಿರುವ ಅನುಕೂಲಗಳು, ಪ್ರತಿಷ್ಠೆ ನಮ್ಮ ಭಾಷೆಗಳಿಗಿಲ್ಲ. ಇದು ಪತ್ರಿಕೋದ್ಯಮಕ್ಕೂ ಹೊರತಾದುದಲ್ಲ ಎಂಬುದನ್ನು ಬಹುಬೇಗನೆ ರಾಮನಾಥ ಗೋಯೆಂಕಾ ಗ್ರಹಿಸಿದರು; ಪ್ರಾದೇಶಿಕ ಭಾಷೆಗಳ ಪತ್ರಕರ್ತರು ಸಹಜವಾದ ಕೆಲವಾರು ಸೀಮಿತಗಳಿಂದ ಇಂಗ್ಲಿಷ್ ಪತ್ರಕರ್ತರೊಡನೆ ಸ್ಪರ್ಧಿಸುವುದು ಕಷ್ಟ

ಎನ್ನುವುದನ್ನು ಗಮನಿಸಿದರು. ಆದ್ದರಿಂದ ಮರುವರ್ಷವೇ ಮತ್ತೊಂದು ಪ್ರಶಸ್ತಿಯನ್ನು ಆರಂಭಿಸಿದರು. ಒಂದು ಇಂಗ್ಲಿಷಿಗೆ; ಇನ್ನೊಂದು ಭಾರತೀಯ ಭಾಷೆಗಳಿಗೆ. ಭಾರತೀಯ ಭಾಷೆಗಳಿಗೇ ಎರಡೂ ಪ್ರಶಸ್ತಿ ಲಭಿಸಬಹುದು; ಆದರೆ ಇಂಗ್ಲಿಷಿಗೆ ಮಾತ್ರ ಎರಡೂ ಪ್ರಶಸ್ತಿ ಹೋಗುವಂತಿಲ್ಲ ಎಂದು ನಿರ್ಧಾರವಾಯಿತು. ಇದರಿಂದ ದೇಶಭಾಷೆಗಳ ಪತ್ರಿಕೋದ್ಯಮಕ್ಕೆ ವಿಶೇಷ ಮಾನ್ಯತೆ ದೊರೆತಂತಾಯಿತು.

ದೇಶಭಾಷೆಗಳ ಮೊದಲನೆಯ ೧೯೮೪ರ ಪ್ರಶಸ್ತಿಯನ್ನು ಭೋಪಾಲಿನ ಹಿಂದೀ ಪತ್ರಕರ್ತ ರಾಜ್‌ಕುಮಾರ್ ಕೇಶ್ವಾನಿ ಅವರಿಗೆ ಕೊಡಲಾಯಿತು. ಕೇವಲ ಮೂವತ್ತೈದನೆಯ ವಯಸ್ಸಿನಲ್ಲಿಯೇ ಕೇಶ್ವಾನಿ ಈ ರಾಷ್ಟ್ರೀಯ ಪ್ರಶಸ್ತಿ ಪಡೆದರು! ಜಗತ್ತಿನಲ್ಲಿಯೇ ಒಂದು ದಾಖಲೆಯಾದ ಭೋಪಾಲ್ ದುರಂತವನ್ನು, ಅದು ನಡೆಯುವುದಕ್ಕೆ ನಾಲ್ಕು ವರ್ಷಗಳ ಮೊದಲೇ ಗ್ರಹಿಸಿ ಎಚ್ಚರಿಸಿ ಬರೆದ ಏಕಮಾತ್ರ ಪತ್ರಕರ್ತ ಕೇಶ್ವಾನಿ ಆಗಿದ್ದರು! ಕೇಶ್ವಾನಿಯವರಂಥ ದಿಟ್ಟ ಧೀರ ಪತ್ರಕರ್ತರನ್ನು ಹುಡುಕಿ ಆಯ್ಕೆ ಮಾಡಿದ್ದು ಗೋಯೆಂಕಾ ಪ್ರಶಸ್ತಿ ಸಮಿತಿಯ ಒಂದು ಮಹಾಸಾಧನೆಯಾಗಿತ್ತು.

ಇಂಥದೊಂದು ಮಹತ್ತ್ವದ ಪ್ರಶಸ್ತಿಯನ್ನು ಈಗ ಪಾವೆಂ ಪಡೆದಿದ್ದಾರೆ. ಒಂದು ಅರ್ಥದಲ್ಲಿ ಅವರೀಗ ನಿವೃತ್ತರು; ಇನ್ನೊಂದು ಅರ್ಥದಲ್ಲಿ ಅವರಂಥವರಿಗೆ ನಿವೃತ್ತಿ ಎಂಬುದೇ ಇಲ್ಲ! ಅವರು ವೃತ್ತಿಯಲ್ಲಿದ್ದಾಗ ಮಾಡಿ ಹೋದ ಕೆಲಸ ನಮ್ಮ ಸಮಕಾಲೀನ ಕನ್ನಡ ಪತ್ರಿಕೋದ್ಯಮದಲ್ಲಿ ತುಂಬ ಮಹತ್ತ್ವದ್ದು. ಅವರನ್ನು ಗೋಯೆಂಕಾ ಪ್ರಶಸ್ತಿಗೆ ಆಯ್ಕೆ ಮಾಡಿದ್ದು ಸಮಿತಿಯ ನಿಷ್ಪಕ್ಷಪಾತ ಧೋರಣೆಗೆ ಒಂದು ಸಾಕ್ಷಿ.

## ಪಾ.ವೆಂ. ಸಂದರ್ಶನ

'ಶ್ರೀ' ಪಡ್ರೆ ಅವರಿಂದ

ಶ್ರೀ ಪಡ್ರೆ : 'ಕಸ್ತೂರಿ' ನಿಮ್ಮ ಸಂಪಾದಕತ್ವದಲ್ಲಿ ಬಹಳಷ್ಟು ಖ್ಯಾತಿ ಪಡೆದಿತ್ತು. ಯಾವ ಕಾರಣಗಳಿಂದಾಗಿ ಈ ಯಶಸ್ಸು ಸಾಧ್ಯವಾಯಿತು ಎನ್ನಬಲ್ಲಿರಾ?

ಪಾವೆಂ : ಮೊದಲನೆಯದಾಗಿ 'ಕಸ್ತೂರಿ' ಪ್ರಾರಂಭವಾಗುವ ಹೊತ್ತಿಗೆ ಕರ್ನಾಟಕದಲ್ಲಿ ಅಂಥಾ ಒಂದು ಪತ್ರಿಕೆಯ ಅಗತ್ಯವಾಗಿತ್ತು. ಸ್ವಾತಂತ್ರ್ಯ ಬಂದ ನಂತರ ನಮ್ಮ ದೇಶದಲ್ಲಿ ಆಗಿದ್ದ ಅನೇಕ ಬದಲಾವಣೆಗಳು ಇದಕ್ಕೆ ಕಾರಣ. ಇಂಗ್ಲೀಷನ್ನೇ ಅವಲಂಬಿಸಿದ ಜನರಿಗೆ ಓದಲಿಕ್ಕೆ ಬೇಕಾದಷ್ಟು ಉತ್ತಮ ದರ್ಜೆಯ ಪುಸ್ತಕಗಳು ಸಿಗುತ್ತಿದ್ದುವು. ದೇಶ ಭಾಷೆಗಳಲ್ಲಿ ಸಾಕಷ್ಟು ವಿದ್ಯಾವಂತರಾಗಿದ್ದವರಿಗೆ ಇಂಗ್ಲಿಷಿನಲ್ಲಿ ದೊರಕತಕ್ಕಂಥಾ ವಿಷಯಗಳನ್ನು ಅರಗಿಸಲಿಕ್ಕೆ ಸಾಧ್ಯವಿಲ್ಲ ಅಂತನ್ನೋ ಸ್ಥಿತಿಯಲ್ಲಿದ್ದಾಗ ಕನ್ನಡದಲ್ಲಿ ಇಂಥಾ ಒಂದು ಪತ್ರಿಕೆಯನ್ನು ಸ್ವೀಕರಿಸಲು ಜನ ತಯಾರಾಗಿದ್ದರು.

'ಕಸ್ತೂರಿ'ಗೆ ನಾನು ಮೊದಲನೇ ಸಂಪಾದಕನಾದ ಕಾರಣ ಅದರ ಧ್ಯೇಯ ಧೋರಣೆಗಳನ್ನು ನಿಶ್ಚಯ ಮಾಡಲಿಕ್ಕೆ ಸ್ವಾತಂತ್ರ್ಯವಿತ್ತು. ಆ ಕಾಲದಲ್ಲಿ ಸುಮಾರು S.S.L.C.ಯ ಮಟ್ಟದಿಂದ ಮೇಲೆ ಮತ್ತು Graduationನಿಂದ ಕೆಳಗಿನ, ಮಧ್ಯಮ ವಿದ್ಯಾಭ್ಯಾಸದ ಜನ ನಮ್ಮ ದೇಶದಲ್ಲಿ, ಕರ್ನಾಟಕದಲ್ಲಿ ಹೆಚ್ಚುತ್ತಾ ಇದ್ದಾರೆ ಅಂತ ನನಗನ್ನಿಸಿತ್ತು. ಇಂತವರನ್ನೇ ದೃಷ್ಟಿಯಲ್ಲಿಟ್ಟುಕೊಂಡು 'ಕಸ್ತೂರಿ'ಯನ್ನು ಸಂಪಾದಿಸಬೇಕೆಂದು ನಿರ್ಣಯ ಮಾಡಿದೆ. ಓದುಗರು 'ಕಸ್ತೂರಿ'ಯನ್ನು ಮೆಚ್ಚಬೇಕಾದರೆ ಸ್ವಲ್ಪ ಕಾಲ ಹಿಡಿಯಿತು. ಮೊದಲಿನ ಆರು ತಿಂಗಳು 'ಕಸ್ತೂರಿ' ಇನ್ನೂ ಜನಪ್ರಿಯತೆ ಸಂಪಾದಿಸಲಿಲ್ಲ. ವರ್ಷ ಉರುಳುವುದರೊಳಗೆ ಅದು ೪-೫,೦೦೦ ಓದುಗರನ್ನು ಪಡೆಯಿತು. ಎರಡನೇ ವರ್ಷದ ಕೊನೆಗೆ ಆಗಿನ ಪತ್ರಿಕೆಗಳ ಪ್ರಸಾರವನ್ನು ಮೀರಿ ೭,೦೦೦ಕ್ಕೂ ಮಿಕ್ಕಿ ಮಾರಾಟವಾದ ಕಸ್ತೂರಿ ಓದುಗರಿಗೆ ಮೆಚ್ಚುಗೆಯಾಯಿತು. ಅಂದಿನಿಂದ 'ಕಸ್ತೂರಿ' ಹಿಡಿದ ಮಾರ್ಗದಲ್ಲೇ ಮುಂದುವರಿದರೆ ಯಶಸ್ಸು ಸಂಪಾದಿಸುತ್ತದೆ ಅನ್ನೋ ವಿಶ್ವಾಸ ನನಗೆ ಹುಟ್ಟಿತು.

ಎರಡನೆಯದಾಗಿ 'ಕಸ್ತೂರಿ'ಯ ಸಂಪಾದನೆಯಲ್ಲಿ ನಾನು ನನ್ನ ವಿಚಾರದಲ್ಲಿದ್ದಂಥಾ ಎಲ್ಲಾ ಕಲ್ಪನೆಗಳನ್ನೂ ಉಪಯೋಗ ಮಾಡಿಕೊಂಡೆ. ಮೊದಲನೆಯದು ವಿಷಯದ ವೈವಿಧ್ಯ. ಈ ವೈವಿಧ್ಯಕ್ಕಾಗಿ ನಾನು ಬಹಳ ಓದನ್ನು ಮಾಡಬೇಕಾಯಿತು. ಜೊತೆಗೆ ನನ್ನೊಡನೆ ಕೆಲಸ ಮಾಡುತ್ತಿದ್ದವರನ್ನು ನಾನು ಬಹಳ ಪೀಡಿಸುತ್ತಿದ್ದೆ. ಸಹೋದ್ಯೋಗಿಗಳನ್ನು ಒತ್ತಾಯಿಸಿ, ಬಂದ ಸ್ವದೇಶೀ-ವಿದೇಶೀ ಪತ್ರಿಕೆಗಳನ್ನೆಲ್ಲಾ ಓದಿಸಿ, ಎಲ್ಲೆಲ್ಲಿ ಸ್ವಾರಸ್ಯದ ವಿಚಾರಗಳು ಸಿಗುತ್ತವೋ ಅವನ್ನೆಲ್ಲಾ ಸಂಗ್ರಹಿಸಿ ಆರಿಸಿದ ಲೇಖನಗಳನ್ನು ಕೊಡೋದಕ್ಕೆ ಪ್ರಾರಂಭಿಸಿದೆ. ಈ ಸಂದರ್ಭದಲ್ಲಿ ನಾನು ನನ್ನ ಪ್ರಥಮ ಸಹೋದ್ಯೋಗಿಯಾಗಿದ್ದ ಶ್ರೀ ಜಿ.ಜಿ. ಹೆಗಡೆಯವರ ಹೆಸರನ್ನು

ಹೇಳಲೇಬೇಕಾಗುತ್ತದೆ. ಅವರು ಹಿಂದಿ, ಇಂಗ್ಲಿಷ್, ಮರಾಠಿ ಮೊದಲಾದ ಭಾಷೆಗಳಲ್ಲಿ ಬಂದ ಪತ್ರಿಕೆಗಳನ್ನೆಲ್ಲಾ ಓದಿ ಅವುಗಳಲ್ಲಿರುವ ವೈಶಿಷ್ಟ್ಯದ ವಿಚಾರಗಳನ್ನೆಲ್ಲಾ ಗುರುತು ಮಾಡಿ ಕೊಡುತ್ತಿದ್ದರು. ಇಬ್ಬರೂ ಸೇರಿ ಲೇಖನ ಹಾಕಬೇಕೋ ಬೇಡವೋ ಎಂದು ನಿಶ್ಚಯ ಮಾಡುತ್ತಿದ್ದೆವು. ನಾನೂ ಇಂಗ್ಲಿಷ್, ಹಿಂದಿ, ಬೆಂಗಾಲಿ ಹಾಗೂ ಸ್ವಲ್ಪ ಮಟ್ಟಿಗೆ ಮರಾಠಿ ಗೊತ್ತಿರುವವನಾಗಿದ್ದ ಕಾರಣ ಬೇರೆ ಬೇರೆ ಭಾಷೆಗಳ ಸ್ವಾರಸ್ಯ ಸಮಾಚಾರಗಳ ಸಂಗ್ರಹ ಸುಲಭವಾಯಿತು. ಈ ಎಲ್ಲಾ ವಿಚಾರಗಳ ಪ್ರಯೋಜನ ತೆಗೆದುಕೊಂಡು 'ಕಸ್ತೂರಿ'ಯನ್ನು ಸಂಪಾದಿಸಲು ಶುರು ಮಾಡಿದೆ.

ಸಂಸ್ಥಾಪಕ ಮಂಡಲಿಯಲ್ಲಿ ನನ್ನ ಸಂಪಾದಕೀಯ ನಿರ್ಣಯಗಳನ್ನು ಪ್ರಶ್ನಿಸುವವರು ಯಾರೂ ಇದ್ದಿಲ್ಲ. ಸಂಪೂರ್ಣವಾಗಿ ನನ್ನ ಸ್ವಾತಂತ್ರ್ಯವನ್ನು ಅವರು ಮನ್ನಿಸಿಕೊಂಡಿದ್ದರು. ಇದೂ ಒಂದು ರೀತಿಯಲ್ಲಿ ಸಹಾಯ ಮಾಡಿತು.

ನನ್ನ ದೃಷ್ಟಿಯಲ್ಲಿ ಯಾವದೂ Perfect ಅಂತ ಅನಿಸೋದೇ ಇಲ್ಲ. ಸಂಪೂರ್ಣ ಸಮಾಧಾನ ಇಲ್ಲದೆ ಯಾವಾಗಲೂ ಪರಿಪೂರ್ಣತೆಯ ಕಡೆಗೆ ನುಗ್ಗಬೇಕು ಅನ್ನಿಸಹತ್ತಿದ್ದರಿಂದ ನನಗೆ ಸುಧಾರಣೆ ಮಾಡಲು ಸಾಧ್ಯವಾಯಿತು.

ಪದ್ರೆ : ಹದಿನೆಂಟು ವರ್ಷಗಳಷ್ಟು ದೀರ್ಘಾವಧಿಯ ನಿಮ್ಮ ಸಂಪಾದಕತ್ವದಲ್ಲಿ, ಸಾಧಿಸಬೇಕೆಂದಿದ್ದುದನ್ನೆಲ್ಲಾ ಸಾಧಿಸಲಾಗಿದೆಯೆ? ಅಥವಾ ಕೊನೆಗೂ ಪೂರೈಸದ ಆಸೆಗಳಿದ್ದುವೆ?

ಪಾವೆಂ : ಬಹಳವಾಗಿ ಸಾಧಿಸಲು ಸಾಧ್ಯವಾಗದುದು ಇದೆ. ಮೊದಲನೆಯದಾಗಿ, ನನ್ನ ತಾರುಣ್ಯದಲ್ಲಿ ಜನ ಯಾವುದನ್ನು ಓದಬಯಸುತ್ತಿದ್ದರೋ ಅದನ್ನು ಅವರೀಗ ಇಷ್ಟಪಡುವುದಿಲ್ಲ ಎಂದು ನನಗೆ ಒಂದರೆಡು ವರ್ಷಗಳಲ್ಲಿ ಅನಿಸಿತು. Higher middle classನಲ್ಲಿದ್ದಂಥಾ ಜನ ಜಗತ್ತಿನಲ್ಲಿ, ವಿದೇಶಗಳಲ್ಲಿ ಅಥವಾ ನಮ್ಮಲ್ಲಿ ನಡೆಯುತ್ತಿದ್ದ ಯಾವುದೇ ಘಟನೆಗಳನ್ನು ಚಿತ್ತವಿಟ್ಟು ಓದುತ್ತಿದ್ದರು. ಈಗ ಪ್ರಾಯಕ್ಕೆ ಬಂದ ಜನಾಂಗದವರಿಗೆ ವಿದೇಶೀ ಮಾನಸಿಕ ಸಂಪರ್ಕಗಳು ಕಡಿಮೆಯಾಗುತ್ತಾ ಹೋಗಿವೆ. ಉದಾಹರಣೆಗೆ ನಾವು ಶಾಲೆಗೆ ಹೋಗುತ್ತಿದ್ದಾಗ European History ಕಲಿಯಬೇಕಾಗಿತ್ತು. ಕ್ರಮೇಣ Indian History ಹಾಗೂ ಕೊನೆಗೆ ಕರ್ನಾಟಕದ ಇತಿಹಾಸಕ್ಕೆ ಮಹತ್ವ ಸಿಗಲಿಕ್ಕೆ ಸುರುವಾಯಿತು. ಹೀಗಾಗಿ ವಿದೇಶೀ ಮೂಲಗಳ ವಿಚಾರಗಳಲ್ಲಿ ಜನರಿಗೆ ಅಷ್ಟೊಂದು ಆಸಕ್ತಿಯಿರಲಿಲ್ಲ. ನಮ್ಮ ದೇಶದಲ್ಲೇ ಆಗತಕ್ಕಂಥಾ ವೈಜ್ಞಾನಿಕ ಹಾಗೂ ಮತ್ತಿತರ ಸಾಹಸಗಳು ಹಾಗೂ ಪ್ರಾಂತದ ಸಂಗತಿಗಳಿಗೆ ಮಹತ್ವ ಕೊಟ್ಟು ವಿಷಯ ಸಂಗ್ರಹ ಮಾಡಿಕೊಡಬೇಕೆಂಬುದು ನನ್ನ ಆಸೆ ಆಗಿತ್ತು. ಆದರೆ ಎಷ್ಟು ಪ್ರಯತ್ನ ಪಟ್ಟರೂ ಇಂಥಾ ಲೇಖನ ಬರೆಯಬಲ್ಲಂಥಾ ಜನರಾಗಲೀ, ಮಾಹಿತಿ ಒದಗಿಸಬಲ್ಲಂಥಾ ಸಂಸ್ಥೆಯಾಗಲೀ ದೊರೆಯಲಿಲ್ಲ.

Readers Digest ನವರು Roam Editors ಅಂತ ನೇಮಕ ಮಾಡುತ್ತಾರೆ. ಜಗತ್ತಿನಲ್ಲೆಲ್ಲಾ ತಿರುಗಿ ಏನೇನು ನಡೆಯುತ್ತದೆ ಎಂಬುದನ್ನು ಅವರು ವರದಿ ಮಾಡುತ್ತಾರೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಅಲ್ಪವಾದರೂ ಕರ್ನಾಟಕದಲ್ಲಾದರೂ ಸಂಚಾರ ಮಾಡಿ ವಿಷಯ ಸಂಗ್ರಹ ಮಾಡತಕ್ಕಂಥವರನ್ನು ನೇಮಿಸಬೇಕೆಂದು ನಾನು ಸಂಸ್ಥೆಗೆ ಸೂಚಿಸಿದೆ. ಆದರೆ ಆರ್ಥಿಕ ಮುಗ್ಗಟ್ಟು ಹಾಗೂ ಈ ಕಠಿಣತರ ಶ್ರಮ ವಹಿಸಲು ಸಿದ್ಧವಾಗುವಂಥವರ ಅಭಾವದಿಂದಾಗಿ ಈ ರೀತಿಯ ಮನಸ್ಸಿಗೆ ತೃಪ್ತಿಕರವಾಗುವ ಲೇಖನ ತಯಾರು ಮಾಡಲು ಸಾಧ್ಯವಾಗಲಿಲ್ಲ. ಇನ್ನೊಂದು ಕೊರತೆ ಎಂದರೆ, ಇಂದಿಗೂ ನಮ್ಮ ದೇಶದಲ್ಲಿ ಆಗತಕ್ಕಂಥಾ ವಿಚಾರಗಳ ಬಗ್ಗೆ ಲೇಖನಗಳು ಬರುವುದು ಕಮ್ಮಿ ಅನಿಸ್ತಾ ಇದೆ. Intelligent ಆಗಿ ನಮ್ಮಲ್ಲಿ ಆಗತಕ್ಕಂಥಾದ್ದನ್ನು Highlight ಮಾಡಿ ಬರೆಯುವವರು ನಮ್ಮಲ್ಲಿ ಸಾಕಷ್ಟಿಲ್ಲ; ಅದಕ್ಕೆ ಬೇಕಾದಂತ ಪ್ರತಿಫಲ ಕೊಡೋ ಶಕ್ತಿಯೂ ಪತ್ರಿಕೆಗಳಿಗಿಲ್ಲ.

ಈಗಿನವರು ಬಹಳ ಮಟ್ಟಿಗೆ ಶಾಶ್ವತವಾದುದಕ್ಕಿಂತ ತಾತ್ಕಾಲಿಕವಾದುದರ ಕಡೆಗೇ ಹೆಚ್ಚು ಗಮನ ಹರಿಸುತ್ತಿದ್ದಾರೆ. ಮೂಲಭೂತವಾಗಿ ನಮ್ಮ ದೇಶದ ಏಳಿಗೆಗೆ ಬೇಕಾಗುವಂಥ ವಿಷಯಗಳಿಗೆ ಸ್ವಲ್ಪ ಗಮನ ಕಡಿಮೆ. ಪತ್ರಿಕೆಗಳ ಧೋರಣೆಯೂ ಆ ದೃಷ್ಟಿಯಿಂದಲೇ ನಿರ್ಣಯಿಸಬೇಕಾದ ಕಾರಣ ಎಷ್ಟೋ ಸಲ ನಮಗೆ ಏನು ಕೊಡಬೇಕು ಅನ್ನಿಸುತ್ತದೋ ಅದನ್ನು ಕೊಡಲಾಗುವುದಿಲ್ಲ. ಇದಕ್ಕಿಂತ ದೊಡ್ಡ ಕೊರತೆಗಳಿವೆ ಅನ್ನಿಸುವುದಿಲ್ಲ.

ಪದ್ರೆ : ನೀವು ದಿನವಿಡೀ ಸಾಹಿತ್ಯಸೇವೆಗಾಗಿ ಮೀಸಲಾಗಿಡುತ್ತಿದ್ದಿರಿ. ಈ ಒತ್ತಡದ ಕೆಲಸಗಳ ನಡುವೆ ನಿಮಗೆ ಸಂತೋಷ ತರುತ್ತಿದ್ದ ಗಳಿಗೆಗಳಾವುವು?

ಪಾವೆಂ : ಮೊದಲನೆಯದಾಗಿ ದಿನವಿಡೀ ಸಾಹಿತ್ಯ ಸೇವೆ ಅನ್ನೋ ಮಾತನ್ನ ನಾನು ಒಪ್ಪೋದಿಲ್ಲ. ಸೇವೆ ಅನ್ನೋ ಶಬ್ದವೇ ಕೆಟ್ಟ ಅರ್ಥವನ್ನು ಕೊಡಲಿಕ್ಕೆ ಸುರು ಮಾಡಿದೆ, ಈ ದೇಶದಲ್ಲಿ. ಯಾಕೆಂದರೆ ಯಾರಾದರೂ ಪರರನ್ನು ವಂಚಿಸಬೇಕಾಗಿದ್ದರೆ - ಸೇವೆ ಅನ್ನೋ ಹೆಸರಿನಿಂದಲೇ ವಂಚಿಸುತ್ತಾರೆ. ಈ ಕಾರಣದಿಂದಲೇ ಸೇವೆ ಅನ್ನೋ ಹೆಸರೇ ನನಗೆ ಯಾಕೋ ಮನಸ್ಸಿಗೆ ಬರೋದಿಲ್ಲ. ಸಾಹಿತ್ಯ ಸೇವೆ ಅನ್ನೋಕೆ ಇನ್ನೊಂದು ವಿರೋಧ ಅಂದ್ರೆ, ಸಾಹಿತ್ಯವನ್ನು ಸೇವಿಸಬೇಕು ಅನ್ನೋ ದೃಷ್ಟಿಯಿಂದಲೇ ಯಾರೂ ಸೇವಿಸುವುದಿಲ್ಲ. ಆ ದೃಷ್ಟಿಯಿಂದಲೇ ಕೆಲಸ ಮಾಡಿದರೆ ಅದರಿಂದ ಸಾಹಿತ್ಯ ಸೇವೆ ಆಗೋದಿಲ್ಲ. ಸಾಹಿತ್ಯದ ಮೇಲೆ ನಿಜವಾದ ಆಸಕ್ತಿಯಿದ್ದರೆ, ಅದರಿಂದ ತೃಪ್ತಿ ಬರುತ್ತಿದ್ದರೆ, ಇಡೀ ದಿನ ಅದರ ಮೇಲೆಯೇ ಕೇಂದ್ರೀಕರಿಸಬಹುದು. ನಾನೂ ಈ ದೃಷ್ಟಿಯಿಂದ ಸಾಹಿತ್ಯದಲ್ಲಿ ಕೆಲಸ ಮಾಡಿದೆನೇ ಹೊರತು ಸಾಹಿತ್ಯ ಸೇವೆ ಅಂತಲ್ಲ. ನಾನು ಮಾಡಿದ ಕೆಲಸವನ್ನು ಯಾರಾದರೂ ಮೆಚ್ಚಿ ಹೇಳಿದರೆ ಸಂತೋಷವಾಗುತ್ತದೆ. ಸಾಹಿತ್ಯದ ಕಾರ್ಯದಲ್ಲಿ ಆಸಕ್ತನಾಗಿದ್ದ ಕಾರಣ ನನ್ನ ಜ್ಞಾನದ ಸೀಮೆ ಸಾಕಷ್ಟು ಬೆಳೆಯಿತು. 'ಕಸ್ತೂರಿ' ಸುರುವಾದುದರಿಂದ ನನಗೆ ಬರೆಯುವುದಕ್ಕಿಂತ, ಓದಲಿಕ್ಕೆ ಹೆಚ್ಚು ಅವಕಾಶ ಸಿಕ್ಕಿದ ಕಾರಣ ಅದು ಸಮಾಧಾನ ತಂದಿತೆಂದು ಹೇಳಬಹುದು.

ಪದ್ರೆ : ಸಂಪಾದಕರಾಗಿ ನಿಮಗೆ ಸಿಹಿ, ಕಹಿ ಹಾಗೂ ಸ್ವಾರಸ್ಯಕರ ಅನುಭವಗಳಾಗಿರಬೇಕು. ಕೆಲವನ್ನು ಹೇಳುವಿರಾ?

ಪಾವೆಂ : ಕಹಿ ಅನುಭವಗಳು ನನಗೆ ಹೆಚ್ಚಾಗಿ ಬರಲಿಲ್ಲ. ಮೊದಲೇ ಹೇಳಿದ ಹಾಗೆ Managementನಿಂದ ಯಾವ ತೊಂದರೆಯೂ ಆಗಲಿಲ್ಲ. ಒಟ್ಟಿನ ಮೇಲೆ ನನ್ನ ಬರವಣಿಗೆಯಲ್ಲಿ ಅಥವಾ ಸಂಗ್ರಹಿಸಿ ಪ್ರಕಟಿಸಿದ ಲೇಖನಗಳಲ್ಲಿ ಆಕ್ಷೇಪಾರ್ಹವಾದುವುಗಳು ಅಥವಾ ನಿಸ್ಸಾರವಾದವುಗಳು ಬಹಳ ಕಡಿಮೆ. ಕೆಲವೊಂದು ಎಳಸು ಲೇಖಕರನ್ನು ಬಿಟ್ಟರೆ, ಉಳಿದವರೆಲ್ಲಾ ನನ್ನ ಸೂಚನೆ, ನಿರ್ಣಯಗಳನ್ನು ಸಂತೋಷದಿಂದ ಒಪ್ಪುತ್ತಾ ಇದ್ದರು.

ಪತ್ರಿಕಾ ವ್ಯವಸಾಯದಲ್ಲಿ ಹೆಚ್ಚಾಗಿ Reportingಗೆ ಹೋದವರಿಗೆ ಸ್ವಾರಸ್ಯಕರ ಅನುಭವಗಳಾಗುತ್ತವೆ. ಕುರ್ಚಿಯಲ್ಲಿ ಕುಳಿತು ಕೆಲಸ ಮಾಡುವವರಿಗೆ ಅಂಥಾ ಅನುಭವ ಕಡಿಮೆ. ಓದು-ಬರವಣಿಗೆಗಳಲ್ಲಿ ಆಸಕ್ತಿ ಇಲ್ಲವಾದರೆ ಸಂಪಾದಕನ ಕೆಲಸ Boring. ನಾನು 'ಕರ್ಮವೀರ'ದಲ್ಲಿ ಕೆಲಸ ಮಾಡುತ್ತಿದ್ದಾಗ ಒಮ್ಮೆ ವಿಶ್ವಕಥಾ ಸ್ಪರ್ಧೆ ನಡೆಯಿತು. ಕನ್ನಡದ ಕತೆಗಳನ್ನು ಆಮಂತ್ರಿಸಲು 'ಕರ್ಮವೀರ'ದಲ್ಲಿ ಪ್ರಚಾರ ನಡೆಯಿತು. ಆಗ ಒಬ್ಬಾತ ಒಂದು ಹಳ್ಳಿ ಕತೆ ಬರೆದು ಕಳುಹಿಸಿ "ಇದನ್ನು ಕರ್ಮವೀರ" ದೀಪಾವಳಿ ಸಂಚಿಕೆಯಲ್ಲಿ ಹಾಕ್ರಿ, ಆಗದಿದ್ರೆ ಜಗತ್ ಕಥಾಸ್ಪರ್ಧೆಗೆ ಕಳಿಸ್ರಿ" ಅಂತ ಬರೆದಿದ್ದ. ಹಾಗೆಯೇ ಇನ್ನೊಮ್ಮೆ ಹೆಸರಿನ ಮುಂದೆ 'ಅಯ್ಯ' ಎನ್ನೋದಕ್ಕೆ ಬದಲು 'ಅಪ್ಪ' ಅಂತ ಮುದ್ರಿಸಿದ್ದಕ್ಕೆ ಒಬ್ಬರು ರಿಜಿಸ್ಟರ್ಡ್ ನೋಟೀಸ್ ಕಳಿಸಿದ್ದರು. 'ಅಯ್ಯ' ಅಂದ್ರೆ ಗೌರವ ಹೆಚ್ಚು. 'ಅಪ್ಪ' ಅಂದ್ರೆ ಕಡಿಮೆ ಅಂತ....

ಪದ್ರೆ : ಕನ್ನಡ ಪತ್ರಿಕೋದ್ಯಮದ ಬಗ್ಗೆ ತಮಗೇನು ಅನ್ನಿಸುತ್ತದೆ?

ಪಾವೆಂ : ಪತ್ರಿಕೋದ್ಯಮ - ಕನ್ನಡದಲ್ಲಿ ಈಗ ಅವಶ್ಯಕತೆಗಳ ದೃಷ್ಟಿಯಿಂದ ಸುಧಾರಿಸುತ್ತಾ ಇದೆ. ಅನೇಕ ಪತ್ರಿಕೆಗಳು ಇಂಗ್ಲಿಷಿನ ಮಟ್ಟಕ್ಕೆ ಬರಲಿಕ್ಕೆ ಪ್ರಯತ್ನ ಮಾಡ್ತಿವೆ. ಬುದ್ಧಿವಂತರೂ - ಅನೇಕರು ಸೇರಿರೋದರಿಂದ ಸಾಹಿತ್ಯದ ಗುಣವೂ ಪತ್ರಿಕೋದ್ಯಮದಲ್ಲಿ ಸಾಕಷ್ಟು ಹೆಚ್ಚಿದೆ. ದೇಶದ ಆಗು-ಹೋಗುಗಳನ್ನು ಪ್ರಧಾನವಾಗಿಟ್ಟುಕೊಂಡು ನಾವು ಮತ್ತು ನಮ್ಮ ಹಿಂದಿನವರು ಮಾಡಿದ ಮಹತ್ವದ ಕಾರ್ಯಗಳಿಗೆ ಸಂಬಂಧಿಸಿದ ಹಾಗೆ ಪತ್ರಿಕೆಗಳು ತಯಾರಾಗಬೇಕು. ವಿಜ್ಞಾನದಲ್ಲಾಗಲೀ, ವೈದ್ಯಕೀಯ ಶಾಸ್ತ್ರದಲ್ಲಾಗಲೀ ನಮ್ಮಲ್ಲಿ ಸಾಕಷ್ಟು ಕೆಲಸಗಳಾಗಿವೆ. ಗ್ರಂಥಗಳನ್ನು ಹುಡುಕಿದರೆ ಅವು ಸಿಗಲಿಕ್ಕೂ ಸಿಗಬಹುದು. ನಮ್ಮಲ್ಲಿ Text books ಬರೆಯುವವರಾಗಲೀ ಲೇಖನ ಬರೆಯುವವರಾಗಲೀ ಹಿಂದಿನವರ ವಿಷಯಗಳಲ್ಲಿ Refer ಮಾಡಬೇಕಾದರೆ Greek, Roman refer ಮಾಡ್ತಾರೆಯೇ ಹೊರತು - ನಮ್ಮದರ ಕುರಿತು ಬರೆಯುವುದಿಲ್ಲ. ಉದಾಹರಣೆಗೆ Atomic Scienceನಲ್ಲಿ ಹೆಚ್ಚಾಗಿ ಕಾಣುವುದು ಗ್ರೀಕರ ವಿಚಾರಗಳೇ ಹೊರತು ಭಾರತೀಯ ವಿಜ್ಞಾನಿಗಳು ಈ ಬಗ್ಗೆ ವಿಚಾರಿಸಿದ್ದಾರೆ ಅಂತ ಹೇಳೋಲ್ಲ.

ಪದ್ರೆ : ಪತ್ರಿಕೋದ್ಯಮದ ಮಟ್ಟವನ್ನು ಸುಧಾರಿಸಲು ತಮ್ಮ ಸಲಹೆಗಳೇನು?

ಪಾಪೆಂ : ಆಸಕ್ತಿಯಿಂದ ಕೆಲಸ ಮಾಡುವವರು ಹಾಗೂ ಪತ್ರಿಕೋದ್ಯಮವನ್ನು ಮೆಚ್ಚಿಕೊಂಡು ಕೆಲಸಕ್ಕೆ ಸೇರುವವರು ಹೆಚ್ಚಾಗಿ ಬರಬೇಕು. ಕೆಲವು ಪತ್ರಿಕೆಗಳ ಹೊರತು ಉಳಿದವುಗಳ ಕಾರ್ಯಕರ್ತರನ್ನು ಆರಿಸಿಕೊಳ್ಳುವಾಗ, ಅವರಿಗೆ ಆ ವಿಷಯದಲ್ಲಿ Aptitude ಇದೆಯೋ ಅನ್ನುವುದನ್ನು ನೋಡಿಕೊಳ್ಳುವುದಿಲ್ಲ. ಎಲ್ಲೋ ಕೆಲವು ಲೇಖನಗಳನ್ನು ಬರೆದಿದ್ದಾನೆ. ನೌಕರಿಯಿಲ್ಲದೆ ಒದ್ದಾಡ್ತಿದ್ದಾನೆ ಅಥವಾ ಇನ್ಯಾರದೋ ವಶೀಲಿ ಹಚ್ಚಿಕೊಂಡು ಬಂದಿದ್ದಾನೆ ಅಂತ ನೇಮಕ ಮಾಡುವುದು ಎಷ್ಟೋ ಬಾರಿ, ಪತ್ರಿಕೋದ್ಯಮವನ್ನು Serious ಆಗಿ ಒಂದು Profession ಅಂತ ತಿಳ್ಕೊಳ್ಳುವವರನ್ನು ಹೆಚ್ಚಾಗಿ ಸೇರಿಸಿಕೊಂಡರೆ ಉತ್ತಮ. ಇದು ನಮ್ಮ ದೇಶದಲ್ಲಿ ಸಂಪೂರ್ಣವಾಗಿ ಸಂಪಾದಕರ ಕೈಯಲ್ಲಿ ಇರೋಲ್ಲ; ಮ್ಯಾನೇಜ್‌ಮೆಂಟಿಗೆ ಸೇರಿದ ವಿಚಾರವಿದು. ಈ ಉದ್ಯೋಗ ಲಾಭಮಾತ್ರವಲ್ಲದೆ ಹೆಸರನ್ನೂ ತರಬೇಕು ಅನ್ನೋ ಜನ ಹೆಚ್ಚಾಗಿ ಬರಬೇಕು.

ಪದ್ರೆ : ಕನ್ನಡದಲ್ಲಿನ ವ್ಯಂಗ್ಯಚಿತ್ರಗಳ ಬಗ್ಗೆ ತಮ್ಮ ಅಭಿಪ್ರಾಯವೇನು?

ಪಾಪೆಂ : ಕನ್ನಡದಲ್ಲಿ ಸಾಹಿತ್ಯ, ಪತ್ರಿಕೋದ್ಯಮ ಎಷ್ಟರ ಮಟ್ಟಕ್ಕೇರಿದೆಯೋ, ಕನಿಷ್ಠ ಅಷ್ಟರ ಮಟ್ಟದಲ್ಲಿ ಉತ್ತಮ ವ್ಯಂಗ್ಯಚಿತ್ರ ಬರೆಯುವವರಿದ್ದಾರೆ. ಈಗ ಸಾಮಾನ್ಯವಾಗಿ ರಾಜಕೀಯ ಹಾಗೂ ಸಾಮಾಜಿಕ ರಂಗಗಳಲ್ಲಿ ವ್ಯಂಗ್ಯಚಿತ್ರಗಳು ಬರುತ್ತಿವೆ. ಇನ್ನೂ ಅನೇಕ ರಂಗಗಳಲ್ಲಿ ವ್ಯಂಗ್ಯಚಿತ್ರಕಾರರು ಪ್ರವೇಶಿಸುವ ಸಾಧ್ಯತೆಯಿದೆ. ಮನುಷ್ಯ ಹೊರ ತೋರಿಕೆಗೆ ಏನು ಮಾಡುತ್ತಿದ್ದಾನೋ, ಅದಕ್ಕೆ ವಿರುದ್ಧವಾಗಿ ಮನಸ್ಸಿನಲ್ಲಿ ಆಲೋಚಿಸುತ್ತಿರುತ್ತಾನೆ ಅಂತ ತೋರಿಸೋ cartoon series ಒಂದನ್ನು ನೋಡಿದ್ದೆ. ಹೊರ ತೋರಿಕೆಗೆ ನಡೆಯುವಂಥಾದ್ದನ್ನು ರೇಖೆಗಳ ಮೂಲಕ ಹಾಗೂ ಮನಸ್ಸಿನಲ್ಲಿ ಆಗ ತಕ್ಕಂಥಾದ್ದನ್ನು ಕರಿ ಛಾಯೆಯ ಮೂಲಕ ವ್ಯಂಗ್ಯಚಿತ್ರಕಾರ ತೋರಿಸಿದ್ದಾನೆ. ಒಂದು ಸ್ವಾರಸ್ಯಕರ cartoon ನೆನಪು ಆಗೋದಂದ್ರೆ, ಮುಂದಿನಿಂದ ಒಬ್ಬಳು ಹುಡುಗಿ ಬರೇ ಬಿಕಿನಿ ಹಾಗೂ ಮೊಲೆಕಟ್ಟು ಕಟ್ಟಿ ಹೋಗ್ತಿದ್ದಾಳೆ; ಹಿಂದಿನಿಂದ ಒಬ್ಬ ಹುಡುಗ ಇದ್ದಾನೆ. ಅವನ ನೆರಳು ಹೋಗಿ ಅವಳ ಮೊಲೆಕಟ್ಟನ್ನು ಬಿಚ್ಚಿ ಬಿಡಬೇಕೆಂದು ಆಲೋಚಿಸುತ್ತದೆ. ಈ ತರದ ಹೊಸ ಹೊಸ Inventive cartoon ನಮ್ಮದೇ ಆದ ಹೊಸ Ideas ವ್ಯಂಗ್ಯಚಿತ್ರಗಳಲ್ಲಿ ಬರಬೇಕು. ಕನ್ನಡದ ವ್ಯಂಗ್ಯಚಿತ್ರಗಳು ಉಳಿದ ಯಾವುದೇ ಭಾಷೆಯವುಗಳ ಮಟ್ಟಕ್ಕಿಂತ ಕಡಿಮೆಯಿಲ್ಲ ಅನ್ನಿಸ್ತದೆ.

ಪದ್ರೆ : ಕೊನೆಯದಾಗಿ, ಯುವಪೀಳಿಗೆಯ ಬರಹಗಾರರಿಗೆ ತಮ್ಮ ಸಂದೇಶವೇನು?

ಪಾಪೆಂ : ಯಾವ ಪೀಳಿಗೆಯವರೂ ಇನ್ನೊಂದು ಪೀಳಿಗೆಯವರಿಗೆ ಸಂದೇಶಕೊಡಲು ಸಮರ್ಥರಾಗಿರುವುದಿಲ್ಲ. ಅಂಥ ಸಂದೇಶಗಳಿಂದ ಪ್ರಯೋಜನವೂ ಇಲ್ಲ. ಹಿಂದಿನ ಪೀಳಿಗೆಯ ಹೆಗಲ ಮೇಲೆ ನಿಂತು ನಾವು ಮುಂದಿನ ಪೀಳಿಗೆಯನ್ನು ಬೆಳೆಸಬೇಕೇ ಹೊರತು, ಹಿಂದಿನವರ Ideaಗಳನ್ನು ಮುಂದಿನವರು ಬೆಳೆಸಿಕೊಂಡು ಹೋಗುವುದು ನಿಷ್ಪ್ರಯೋಜಕ. ಜೀವನದಲ್ಲಿ ನಿಜವಾದ ಅನುಭವ ಪಡೆಯಿರಿ ಎಂಬ ಸಂದೇಶ ಕೊಡಬಲ್ಲೆ. ನಮ್ಮಲ್ಲಿಂದು ಕೇವಲ ಭಾವನಾತ್ಮಕ ಬರವಣಿಗೆ ನಡೀತಾ ಇದೆ. ಜನ ಅದನ್ನು ಮೆಚ್ಚುತ್ತಾರೆ. ಆದರೂ ಸಾಹಿತ್ಯ ಅಥವಾ ಯಾವುದೇ ಕಲಾತ್ಮಕ ವ್ಯವಸಾಯ ಮುಂದೆ ಬರಬೇಕಾದರೆ ಅನುಭವ ಸಂಪಾದನೆ ಮುಖ್ಯ. ನಿಜವಾದ ಜೀವನಾನುಭವ ಹ್ಯಾಗಿದೆ ಅನ್ನೋದನ್ನ ಸಾಹಿತಿಗಳು ಅಧ್ಯಯನ ಮಾಡಲಿಕ್ಕೆ ಪ್ರಯತ್ನಿಸಿದರೆ ಸಾರ್ಥಕ. ನಮ್ಮ ಲೇಖಕರು ದೇಶ ಸಂಚಾರ ಮಾಡದೆ ಕೂತಲ್ಲೇ ಕಲ್ಪನೆ ಮಾಡಿ ಬರೆಯುವುದು ಹೆಚ್ಚು. ಪಾಂಡಿತ್ಯಕ್ಕೆ ಮಹತ್ವ ಇಲ್ಲ ಅನ್ನೋ ತಿಳುವಳಿಕೆ ತಪ್ಪು. ಹಿಂದಿನವನ್ನು ಓದಬೇಕು ಅನ್ನೋದಾಗಲೀ, ಅನೇಕ ವಿಷಯಗಳ ತಿಳುವಳಿಕೆ ಲೇಖಕನಿಗೆ ಬೇಕಾಗುತ್ತದೆ ಅನ್ನೋದಾಗಲೀ ನಮ್ಮಲ್ಲಿ ಹೆಚ್ಚಾಗಿ ಜನರಿಗೆ ಇನ್ನೂ ತಿಳಿದ ಹಾಗೆ ಕಾಣುವುದಿಲ್ಲ. ಅನೇಕ ವಿಷಯಗಳಲ್ಲಿ ನಮ್ಮಲ್ಲಿ ಸಾಹಿತ್ಯಸೃಷ್ಟಿ ಮಾಡಬಹುದು; ಆದರೆ ಅದು ಆಗ್ತಾ ಇಲ್ಲ. ಉದಾಹರಣೆಗೆ ನಾನೀಗ HOTEL ಅನ್ನೋ ಕಾದಂಬರಿ ಓದಿ ಮುಗಿಸಿದೆ. ದೊಡ್ಡ ಪ್ರಮಾಣದಲ್ಲಿ ನಡೆಯುವ ಹೋಟೇಲೊಂದರಲ್ಲಿ ಏನೇನು ಆಗುತ್ತದೆ ಎಂಬುದನ್ನು ಕೇಂದ್ರೀಕರಿಸಿ ಲೇಖಕರು ಚೆನ್ನಾಗಿ ಬರೆದಿದ್ದಾರೆ. ಬೇರೆ ಬೇರೆ ರಂಗಗಳಲ್ಲಿ ಬರುವ ಅನುಭವಗಳನ್ನು ಕೇಂದ್ರೀಕರಿಸಿ ಸಾಹಿತ್ಯ ನಿರ್ಮಾಣ ಮಾಡಿದರೆ ಚೆನ್ನಾಗಬಹುದು. ಪರಿಶ್ರಮ ಹೆಚ್ಚು ಬೇಕು ಅಂತ ಇನ್ನೊಂದು ಸಂದೇಶ ಹೇಳಬಹುದು.

◆

# ೪೨. 'ನುಡಿ'ಯ ಬಲ್ಲಾಳರು

ಕ್ರಿ.ಶ. ೧೯೪೭ರ ಜೂನ್ ತಿಂಗಳು. ದೇಶಕ್ಕೆ ಸ್ವಾತಂತ್ರ್ಯ ಸಮೀಪಿಸುತ್ತಿದ್ದ ತಿಂಗಳು. ಸ್ವಾತಂತ್ರ್ಯ ಬರುವ ಮುನ್ನ ದೇಶವ ವಿಭಜನೆಯಾಗಬೇಕು. ವಿಭಜನೆ ಯಾತಕ್ಕಾಗಿ? ಶಾಂತಿ ಸ್ಥಾಪನೆಗಾಗಿ. ಈ ವಿಭಜನೆಗೆ ಬದ್ಧ ವಿರೋಧಿಯಾಗಿದ್ದ ಕಾಂಗ್ರೆಸ್ ಪಾಕಿಸ್ತಾನದ ಸ್ಥಾಪನೆಗೆ ಸಮ್ಮತಿಸಿದೆ. ಯಾತಕ್ಕಾಗಿ? ಅದೇ ಶಾಂತಿಗಾಗಿ?

## ಏನಿದರ ಅರ್ಥ?

"ಕಾಂಗ್ರೆಸ್ ಹೋರಾಟದ ಮಾರ್ಗವನ್ನು ಬಿಟ್ಟು, ಸಂಧಾನದ ಹಾದಿ ಹಿಡಿಯಿತಲ್ಲವೆ? ನೆಹ್ರೂ ಹೇಳುತ್ತಿದ್ದಾರೆ. 'ನನ್ನ ಮನಸ್ಸಿನ ವಿರುದ್ಧ ನಾನಿದಕ್ಕೆ ಒಪ್ಪಿದ್ದೇನೆ' ಎಂದು. ದೃಢ ನಿರ್ಧಾರದಿಂದ ಬ್ರಿಟಿಷರ ವಿರುದ್ಧ ಹೋರಾಡಿದ ನೆಹ್ರೂ ಈಗ ಹೀಗೆ ಹೇಳುವುದು ಅವರ ಇಬ್ಬಂದಿತನ ತೋರಿಸುತ್ತದಲ್ಲವೆ? ಅದಿರಲಿ, ಅವರಿಗೆ ಈ ಅಧಿಕಾರವನ್ನು ಕೊಟ್ಟವರಾರು? ಜಿನ್ನಾರ ಪಾಕಿಸ್ತಾನದ ಬೇಡಿಕೆಯ ಹಿಂದೆ ಮುಸ್ಲಿಮರ ನಿಜವಾದ ಹಿತಾಸಕ್ತಿ ಇಲ್ಲ – ಎಂಬುದು ಕಾಂಗ್ರೆಸ್ಸಿಗೆ ಅರಿವಾಗದೆ ಹೋಯಿತಲ್ಲ! ಮುಸ್ಲಿಮ್ ಜನತೆಗೂ ಅಷ್ಟೇ ಅನ್ವಯಿಸುವ ದಟ್ಟ ದಾರಿದ್ರ್ಯ ಮತ್ತು ಅಖಂಡ ಅಜ್ಞಾನ ಇರುವಾಗ ಅದರ ನಿವಾರಣೆಗೆ ಪ್ರಾಶಸ್ತ್ಯವಿರಬೇಕು. ಅದು ಬಿಟ್ಟು, ಜಾತೀಯತೆಗೆ, ಕೋಮುವಾದಕ್ಕೆ ಅಗ್ರತೆ ದೊರೆಯಿತಲ್ಲವೆ?

"ಇಸ್ಲಾಮ್ ತಳಹದಿಯೊಂದರ ಮೇಲೆ ಪಾಕಿಸ್ತಾನದ ನಿರ್ಮಾಣ ಅಂದಾಗ ಅಲ್ಲಿ ಉಳಿಯುವ ಹಿಂದೂಗಳ, ಇತರ ಅಲ್ಪ ಸಂಖ್ಯಾತರ ಗತಿ? ಅದನ್ನು ಚರ್ಚಿಸಲು ಕಾಂಗ್ರೆಸ್ ನಾಯಕರು ಹಿಂಜರಿಯುತ್ತಾರೆ. ಅಲ್ಪಸಂಖ್ಯಾತ ಅನ್ಯಮತೀಯರಿಗೆ ಹಿಂದುಸ್ತಾನದಲ್ಲಿ ಸಮಾನತೆ, ಸ್ವಾತಂತ್ರ್ಯ ಇರುವಂತೆ ಅಲ್ಲಿಯವರಿಗೆ ಇರುವುದು ಶಕ್ಯವೇ ಇಲ್ಲ. ಹಾಗೆಂದು ನಮ್ಮಲ್ಲಿದ್ದ ಅಲ್ಪಸಂಖ್ಯಾತರನ್ನು ಕೆಟ್ಟ ರೀತಿಯಿಂದ ನಡೆಸಿಕೊಳ್ಳಬೇಕೆಂದೇನೂ ಅಲ್ಲ. ಈ ಸಮಸ್ಯೆಗೆ ಪರಿಹಾರವೆಂದರೆ, ನಮ್ಮದನ್ನು ಸಮೃದ್ಧ ಹಾಗೂ ಪ್ರಬಲ ರಾಷ್ಟ್ರವಾಗಿ ರೂಪಿಸಬೇಕು. ಆಗ ಪಾಕಿಸ್ತಾನಕ್ಕೆ ಅಲ್ಪಸಂಖ್ಯಾತರನ್ನು ಕೆಟ್ಟ ರೀತಿಯಿಂದ ನಡೆಸಿಕೊಳ್ಳುವರೆ ಧೈರ್ಯ ಸಾಲದು".

ಮೇಲ್ಕಂಡ ಪ್ರಗಲ್ಭ ಹಾಗೂ ದೂರದೃಷ್ಟಿಯ ಲೇಖನವೊಂದು 'ಯಾವ ಬೆಲೆ ಶಾಂತಿಗಾಗಿ?' ಎಂಬ ಶೀರ್ಷಿಕೆಯಡಿ, ಮುಂಬಯಿಯಲ್ಲಿ ಅದೇ ಆಗ ಪ್ರಾರಂಭವಾಗಿದ್ದ 'ನುಡಿ' ವಾರಪತ್ರಿಕೆಯಲ್ಲಿ ಪ್ರಕಟವಾಯಿತು. ಬರೆದವರು ನಿ. ವ್ಯಾ. ಬಲ್ಲಾಳ ಎಂಬ, ಬರಿಯ ಮೆಟ್ರಿಕ್ ಪಾಸಾಗಿದ್ದ, ಸ್ಟೆನೋಗ್ರಾಫರ್ ವೃತ್ತಿಯಲ್ಲಿದ್ದ ವ್ಯಕ್ತಿ. ಬಲ್ಲಾಳರಿಗೆ ಆಗ ಕೇವಲ ೨೪ ವರ್ಷ. ಅದು ಅವರ ಪ್ರಥಮ ರಾಜಕೀಯ ಲೇಖನ.

'ನುಡಿ ಕೂಟ'ದವರಿಗೆ ಸಂಭ್ರಮವೋ ಸಂಭ್ರಮ. ಕೆಲ ದಿನಗಳಲ್ಲಿ ಓರ್ವ ಪೊಲೀಸ್ ಅಧಿಕಾರಿಯು ಬಂದು "ಯಾರು ಈ ಲೇಖನ ಬರೆದದ್ದು? ಹಾಗೆಲ್ಲ ಪ್ರಕಟಿಸತಕ್ಕದ್ದಲ್ಲ"ಎಂದು ಎಚ್ಚರ ಹೇಳಿದ. ನುಡಿಯ ಸಂಪಾದಕರಾಗಲೀ ಬಲ್ಲಾಳರಾಗಲೀ ಅದನ್ನು ಗಣನೆಗೆ ತರಲಿಲ್ಲ. ಸ್ವತಂತ್ರವಾದ ನಿರ್ದಾಕ್ಷಿಣ್ಯದ ಲೇಖನಗಳು ನುಡಿಯಲ್ಲಿ ಬರತೊಡಗಿದವು.

'ನುಡಿಕೂಟ' ಎಂದೆನಷ್ಟೆ, ಅದೊಂದು ಜನಜಾಗೃತಿಯಾಗಬೇಕೆನ್ನುವ ಸ್ವಾತಂತ್ರ್ಯದ ಹಂಬಲವಿರುವ ಪ್ರಜ್ಞಾವಂತ ತರುಣರ ಕೂಟ. ಎಲ್ಲರೂ ಬಡ ಮಧ್ಯಮ ವರ್ಗದವರು. ಕೆಲವರು ರಾತ್ರಿ ಶಾಲೆಗಳ ಶಿಕ್ಷಕರು. ಪತ್ರಿಕೆಯನ್ನು ಹೊರಡಿಸಲು ಹಣಕಾಸು ಎಳ್ಳಷ್ಟೂ ಇಲ್ಲದವರು. ಹುಮ್ಮಸ್ಸು ಒಂದೇ ಅವರ ಬಂಡವಾಳ. ಆ ಕೂಟದಲ್ಲಿ ರಾಮಚಂದ್ರರಾವ್, ಹನುಮೇಶ ಆಚಾರ್ಯ, ರಾಮಚಂದ್ರ ಉಚ್ಚಿಲ್ ಹಾಗೂ ಎಂ.ವಿ. ಕಾಮತರು, ಜೊತೆಗೆ ಎಚ್. ಸೋಮನಾಥ – ಇವರು ಎದ್ದು ಕಾಣುವಂತೆ ಶ್ರಮಿಸುತ್ತಿದ್ದವರು.

ಇವರಾರಿಗೂ ಕನ್ನಡ ಪತ್ರಿಕಾರಂಗದ ಹಿಂದಿನ ಅನುಭವವಿದ್ದಿಲ್ಲ. ಮುದ್ರಿಸುವುದಕ್ಕೆ ಕನ್ನಡ ಮೊಳೆಗಳನ್ನು ತರಿಸಬೇಕು. ಕಾಗದ ಬೇಕು, ಮುದ್ರಣಾಲಯ ಇರಬೇಕು, ಜಾಹೀರಾತು ತರಬೇಕು. ಮುದ್ರಿತ ಸಂಚಿಕೆಗಳ ವಿತರಣ ಗೊತ್ತುಪಡಿಸಬೇಕು. ಮುಖ್ಯವಾಗಿ ಲೇಖಕೀಯ ಬಳಗ ಇರಬೇಕು. ಇವೊಂದನ್ನೂ ಪೂರ್ವಭಾವಿಯಾಗಿ ಅಣಿಗೊಳಿಸದೇ 'ನುಡಿ' ಪತ್ರಿಕೆ ಹೊರಡಲಾರಂಭಿಸಿತು. ಇಂದು, ೧೯೯೦ರ ದಶಕದಲ್ಲಿ ಯಾರಾದರೂ ಇಂಥ ಪರಿಸ್ಥಿತಿಯಲ್ಲಿ; ಪತ್ರಿಕೆಯೊಂದನ್ನು ಹೊರಡಿಸಬಯಸಿದರೆ, ಅವರನ್ನು 'ವ್ಯವಹಾರಶೂನ್ಯ; ಮೂರ್ಖ' ಎಂದು ಬಗೆಯುತ್ತೇವೆ. ನುಡಿಕೂಟದವರಿಗೆ ಹಾಗೆ ಹೇಳುವಂತಿರಲಿಲ್ಲ. ದೇಶೋದ್ಧಾರ, ನಾಡು-ನುಡಿಗಾಗಿ ತ್ಯಾಗ ಮುಂತಾದ ಆದರ್ಶಗಳಿಂದ ಜನ ಪ್ರೇರಿತರಾಗಿದ್ದ ಕಾಲವದು.

'ನುಡಿ'ಯನ್ನು, ಉತ್ಸಾಹದ ಆತುರದಿಂದಾಗಿ ಮೇ ೧೯೪೭ರಿಂದಲೇ ಹೊರಡಿಸುವ ವಿಚಾರವೇನೋ ಇತ್ತು. ಆದರೆ ಮುದ್ರಿಸಲು ಕನ್ನಡ ಮೊಳೆಗಳು ಬಂದಿರಲೇ ಇಲ್ಲ. ಆ ತಿಂಗಳ ಕೊನೆಗೆ ಬಂದುವಾದರೂ ಕಲಸು ಮೇಲೋಗರವಾಗಿದ್ದುವು. ಹೀಗಾಗಿ ಕಾರ್ಯಕರ್ತರು ಇಡೀ ರಾತ್ರಿ ಅವನ್ನು ವಿಂಗಡಿಸಿ ಆ ಆ 'ಖಾನೆ'ಗಳಿಗೆ ಹಾಕಿದರು. ಮುಂದಿನ ೨-೩ ದಿನಗಳಲ್ಲಿಯೇ ಮೊದಲ ಸಂಚಿಕೆ ಜೂನ್ ೧ರ ದಿನಾಂಕವನ್ನು ಹೊತ್ತು ಹೊರಬಂದಿತು. ಅದಕ್ಕೆ ಸಂಪಾದಕರಾಗಿ 'ಕಸ್ತೂರಿ ಕೋಟ' ಎಂಬವರ ಹೆಸರಿದ್ದಿತು.

ಆ ಮೊದಲ ಸಂಚಿಕೆಯನ್ನು ಕಂಡಂದಿನಿಂದ ಬಲ್ಲಾಳರು 'ನುಡಿ'ಯಲ್ಲಿ ಆಸ್ಥೆ ತಾಳಿದ್ದರು. ಉಡುಪಿಯಲ್ಲಿದ್ದಾಗಲೇ ಅವರು ಪತ್ರಿಕೋದ್ಯಮಿಯಾಗುವ ಹಂಬಲವನ್ನಿಟ್ಟುಕೊಂಡವರು. ಅಧ್ಯಯನ, ಚಿಂತನ, ಲೇಖನ - ಇವು ಮೂರನ್ನೂ ಏಕಕಾಲಕ್ಕೆ ಚಲಾಯಿಸಬಹುದಾದ ಉದ್ಯಮ ಅದು. ಅಂತಾಗಿ ಕೂಡಲೇ ಲೇಖನ ಕಾರ್ಯಕ್ಕೆ ತೊಡಗಿದರು. ಆರಂಭದ ಸಂಚಿಕೆಯೊಂದರಲ್ಲಿ ಮೇಲೆ ಹೇಳಿದ ಲೇಖನ ಪ್ರಕಟವಾದಂದಿನಿಂದ, ಹಾಗೆ ಬರೆಯುವ ಅದಮ್ಯ ಆಸೆಯಿಂದಾಗಿ ಅವರ ಲೇಖನಿ ಪಳಗಿತು. ಅವರ ಉಚ್ಚಮಟ್ಟದ ಬರವಣಿಗೆಯಿಂದ ಪತ್ರಿಕೆಗೆ ಘನತೆ ಬಂದಿತು.

ಡಿಸೆಂಬರ್ ೧೯೪೭ರಲ್ಲಿ ಕಾಸರಗೋಡಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಏರ್ಪಟ್ಟಿತ್ತು. ಆ ವೇಳೆಗೆ ಪತ್ರಿಕೆಗೆ ರಾಮಚಂದ್ರರಾಯರು ಸಂಪಾದಕರಾಗಿದ್ದರು. ಸಂಪಾದಕೀಯ ಬರೆಯುತ್ತಿದ್ದರು. ಈಗಾದರೆ ಸಾಹಿತ್ಯಕ್ಕೆ ಸಂಬಂಧಿಸಿದ ಸಂಪಾದಕೀಯ ಬರೆಯಬೇಕಲ್ಲ! ಬಲ್ಲಾಳರಿಗೇ ಆ ಕುರಿತು ಬರೆಯ ಹೇಳಿದರು. ಪರಿಣಾಮ? ಆಗಿನಿಂದ ಪತ್ರಿಕೆಯ ಕೊನೆಯ ಸಂಚಿಕೆಯ ವರೆಗೂ ಅವರದೇ ಸಂಪಾದಕೀಯ! ಜೊತೆಗೆ ಪ್ರಚಲಿತ ಘಟನೆಗಳ ಬಗ್ಗೆ, ಸಾಹಿತ್ಯ ವಿಚಾರಗಳ ಬಗ್ಗೆ ಲೇಖನಿಸುವುದಂತೂ ಇದ್ದೇ ಇತ್ತು. ಹೀಗಾಗಿ ನುಡಿಯ ಅರ್ಧದಷ್ಟು ಪುಟಗಳಿಗೆ ಬಲ್ಲಾಳರ ಬರಹಗಳೇ ಇರುತ್ತಿದ್ದವು.

ಆರಂಭದಿಂದ 'ನುಡಿ'ಯ ಕಚೇರಿ ಹಾಗೂ ಮುದ್ರಣ ಕಾರ್ಯ ಮುಂಬಯಿಯ ಫೋರ್ಟ್‌ನಲ್ಲಿ ನಡೆಯುತ್ತಿದ್ದದ್ದು, ಮಾತುಂಗಾಕ್ಕೆ (ಬಲ್ಲಾಳರು ವಾಸವಾಗಿದ್ದ ಉಪನಗರಕ್ಕೆ) ಸ್ಥಳಾಂತರಗೊಂಡ ಮೇಲೆ, ಪತ್ರಿಕೆಯ ಡಮ್ಮಿ ತಯಾರಿಕೆ, ಪುಟ ವಿನ್ಯಾಸ, ಕರಡು ತಿದ್ದುವಿಕೆ ಇವು ಕೂಡ ಅವರ ಕೊರಳಿಗೆ ಬಿದ್ದುವು. ಪರಿಣಾಮವಾಗಿ ಬಲ್ಲಾಳರು ಪೂರ್ಣಸ್ವರೂಪದ ಪತ್ರಿಕೋದ್ಯಮಿಯಾಗಿಬಿಟ್ಟರು. ಅದರಿಂದ 'ನುಡಿ'ಗೆ ಪ್ರಯೋಜನವಾಯಿತೆಂಬುದಂತೂ ಸರಿಯೇ. ಆದರೆ 'ನುಡಿ'ಯಿಂದ ಅವರಿಗೆ ಅಪ್ರತ್ಯಕ್ಷ ಪ್ರಯೋಜನವಾದದ್ದು ಅಷ್ಟೇ ಮಹತ್ವದ್ದು.

ಪತ್ರಿಕೆಯಲ್ಲಿ ಕ್ರಮೇಣ ಗ್ರಂಥವಿಮರ್ಶೆ, ಒಳನಾಡಿನ ಜಿಲ್ಲೆಗಳ ವಾರ್ತೆ, ಪ್ರತ್ಯೇಕ ಕ್ರೀಡಾಪುಟ ಬರತೊಡಗಿದುವು. 'ಪತ್ರಿಕೋದ್ಯಮಿಯ ಪ್ರೇಮಪತ್ರ', 'ಪಯಣದ ಹಾದಿಯಲ್ಲಿ', 'ಮಾನವತೆ ಸತ್ತಿಲ್ಲ' ಮುಂತಾದ ಸ್ಥಿರ ಶೀರ್ಷಿಕೆಗಳು ಕಾಣಿಸಿಕೊಂಡವು. ಪ್ರೇಮಪತ್ರದ ಅಂಕಣ ಖಾಸ ಬಲ್ಲಾಳರದೇ. ನಿರಂಜನರು ಮೊದಲ ಅಂಕಣಕಾರರಾಗಿದ್ದರೆ, ಬಲ್ಲಾಳರು ನಿಸ್ಸಂಶಯವಾಗಿ ಎರಡನೆಯವರು. 'ಪಯಣದ ಹಾದಿಯಲ್ಲಿ' ಬಿಡಿ ವಿಚಾರಗಳ ಪ್ರಸ್ತಾಪ. ಬೇರೆಯವರೂ ಆಗಾಗ ಈ ಹಾದಿಯಲ್ಲಿ ನಡೆದವರಿದ್ದರು.

'ಮಾನವತೆ ಸತ್ತಿಲ್ಲ' ಎಂಬುದು ಬಲ್ಲಾಳರದೇ ನವೀನ ಕಲ್ಪನೆ. ಮಾದರಿಯೆಂದು ಒಂದರ ಸಾರವನ್ನು ಕೊಡುವ : ಸಿಸಿಲ್ ಎಂಬ ೮ ವರ್ಷದ ಐರ್ಲಂಡಿನ ಹುಡುಗ ಗಾಂಧೀಜಿಯ ಬಗ್ಗೆ ಗೌರವವನ್ನಿಟ್ಟುಕೊಂಡಿದ್ದ. ಅವರ ಕೊನೆಯಾದಾಗ ಅವನು ತುಂಬಾ ದುಃಖಿಸಿದ. ಅದನ್ನೇ ತನ್ನ ಬಾಲಭಾಷೆಯಲ್ಲಿ ಬರೆದ 'ಭಾರತದ ಪ್ರಧಾನಿಯವರಿಗೆ' - ಎಂದು ವಿಳಾಸ ಬರೆದು ಕಳುಹಿಸಿದ. ಏಳೆಂಟು ತಿಂಗಳು ಕಳೆದ ಮೇಲೆ ಅವನಿಗೊಂದು ಲಕೋಟೆ ಬಂತು. ಅದರಲ್ಲಿ ಗಾಂಧೀಜಿಯ ಸ್ಮರಣಾರ್ಥ ಇದ್ದ ಎರಡು ಅಂಚೆ ಚೀಟಿಗಳು ಮತ್ತು ನೆಹರೂರ ಪತ್ರ! ಈ ಎರಡೂ ಪ್ರಸಂಗಗಳಲ್ಲಿ ಮಾನವತೆಯದೇ ಮೇಲುಗೈ, ತಾನೇ.

'ದುಡಿಮೆಯ ಕೂಗು' - ಕಾರ್ಮಿಕರ ಹಿತಾಸಕ್ತಿಯನ್ನು ವ್ಯಕ್ತಪಡಿಸುವ ಸ್ಥಿರ ಶೀರ್ಷಿಕೆ, ಇಲ್ಲಿದೆ ಒಂದು ಉದಾಹರಣೆ:

"ಕಾರ್ಮಿಕ ಮಂತ್ರಿ ಜಗಜೀವನರಾಮರವರು ಮುಷ್ಕರ ಹೂಡಲಿರುವ ರೈಲ್ವೆ ಕೆಲಸಗಾರರ ಕುರಿತು 'ಸರಕಾರದ ಇತರ ನೌಕರರಿಗಿಂತ ರೈಲ್ವೆ ಕೆಲಸಗಾರರಿಗೆ ಸಾಕಷ್ಟು ಸವಲತ್ತು ಕೊಡಲಾಗಿದೆ. ಅವರು ಕೃತಘ್ನರು' ಎಂದಿದ್ದಾರೆ. ಇದರಲ್ಲಿ ಏನೂ ಸತ್ಯಾಂಶವಿಲ್ಲ. ಅವರನ್ನು ಕೃತಘ್ನರು ಎಂಬುದರಲ್ಲಿ ನಮ್ಮ ಸಣ್ಣತನವೇ ಎದ್ದು ಕಾಣುತ್ತದೆ. ಜಗಜೀವನರಾಮರು ಕೆಳಗಿನ ಪ್ರಶ್ನೆಗಳಿಗೆ ಉತ್ತರ ಹೇಳಲಿ:

- ಅತಿ ಪ್ರಸರಣಕ್ಕೆ ಯಾರು ಕಾರಣರು?
- ಜೀವನ ವಸ್ತುಗಳ ವಿಪರೀತ ಬೆಲೆಗೆ ಯಾರು ಕಾರಣರು? ರೈಲ್ವೆ ಕೆಲಸಗಾರರಿಗೆ ಸಿಕ್ಕುತ್ತಿದ್ದ ಕಡಿಮೆ ಬೆಲೆಯ ದವಸ-ಧಾನ್ಯಗಳನ್ನು ನಿಲ್ಲಿಸಲು ಯಾರು ಕಾರಣರು?
- ಜೀವನಸ್ತರದ ಸಂಖ್ಯೆಗೆ ಸರಿಯಾಗಿ ತುಟ್ಟಿ ಭತ್ಯೆ ಕೊಡದಿರುವ ಪೇ ಕಮಿಷನ್ನಿನ ದೀರ್ಘನಿದ್ರೆಗೆ

ಯಾರು ಕಾರಣರು?

– ಇವೆಲ್ಲ ತಮ್ಮ ತಪ್ಪುಗಳಿರುವಾಗ ಕೆಲಸಗಾರರನ್ನು ಕೃತಜ್ಞತೆ ಇಲ್ಲದವರೆಂದು ಕರೆಯುವುದರಲ್ಲಿ

ಯಾವ ಪುರುಷಾರ್ಥವಿದೆ?"

ಬಲ್ಲಾಳರ ಈ ರೀತಿಯ ಬರವಣಿಗೆಯು ಸಮತಾವಾದವನ್ನು ಪುರಸ್ಕರಿಸುತ್ತದಲ್ಲವೆ? ಅದರಂತೆ ಮಾಲಿಕ-ಕಾರ್ಮಿಕ ಸಂಘರ್ಷವು 'ನುಡಿ'ಯಲ್ಲಿ ಮೇಲಿಂದ ಮೇಲೆ ಚಿತ್ರಿತವಾಗುತ್ತಿತ್ತು. ಬಲ್ಲಾಳರ 'ಬಂಡಾಯ' ಕಾದಂಬರಿಯ ಹಿನ್ನೆಲೆ ಇದೇ.

'ಚಕ್ರದೃಷ್ಟಿ' ಎನ್ನುವ ಇನ್ನೊಂದು ಅಂಕಣದ ಲೇಖಕರು – ಇಂದಿಗೂ ಹಿರಿಯ ಪತ್ರಿಕೋದ್ಯಮಿಯಾಗಿ ರಂಜಿಸುತ್ತಿರುವ ಎಂ.ವಿ. ಕಾಮತರು. 'ನುಡಿ'ಯ ಸಂಸ್ಥಾಪಕರಲ್ಲೊಬ್ಬರಾದ ಅವರು ಪತ್ರಿಕೆಗೆ ತನು, ಮನ, ಧನ – ಮೂರನ್ನೂ ಮುಕ್ತವಾಗಿ ಕೊಟ್ಟವರು. Free Press Journal ಪತ್ರಿಕೆಯಲ್ಲಿದ್ದವರಾಗಿ, ಯಾವುದೇ ವಿಶೇಷ ಸುದ್ದಿ ಸಂಭವಿಸಿದರೆ 'ನುಡಿ'ಗೂ ಅದನ್ನು ಒದಗಿಸುತ್ತಿದ್ದರು. ಕೆಲ ಕಾಲ – ಎಂದರೆ ೧೯೪೯ರ ಪೂರ್ವಾಯಣ ಕಾಲದಲ್ಲಿ ದಿಲ್ಲಿಗೆ, FPJಯ ಪ್ರತಿನಿಧಿಯಾಗಿ ಹೋದರು. ಆಗ 'ನುಡಿ'ಯ ವಿಶೇಷ ಪ್ರತಿನಿಧಿಯೂ ಆದರು! ದೇಶದ ರಾಜಧಾನಿಯಲ್ಲಿ ನಮ್ಮ ಪ್ರತಿನಿಧಿ ಇದ್ದಾರೆ ಎಂದು ಹೇಳುವ ಯಾವ ಕನ್ನಡ ಪತ್ರಿಕೆಯೂ ಆಗ ಇರಲಿಲ್ಲ. ಅದರಂತೆ ದೇಶದ ಹಿರಿಯ ನಾಯಕರ ಸಂದರ್ಶನ ಪಡೆದು ವರದಿ ಮಾಡುವ ಪತ್ರಿಕೆಯೂ ಇರಲಿಲ್ಲ. 'ನುಡಿ'ಯ ಪ್ರತಿನಿಧಿ ಕಾಮತರು ದಿಲ್ಲಿಯಿಂದ ಮಹಾನ್ ಮಾನವತಾವಾದಿ ಎಂ.ಎನ್.ರಾಯ್ ಅವರ ಸಂದರ್ಶನ ಪಡೆದು ಬರೆದು ಕಳುಹಿಸಿದ್ದುದು ಪತ್ರಿಕೆಗೆ ಒಂದು ಹೆಮ್ಮೆಯ ವಿಷಯವಾಗದೇನು?

ನುಡಿಯ ಬೌದ್ಧಿಕ ಬೆಳವಣಿಗೆಯಲ್ಲಿ ಕಾಮತ-ಬಲ್ಲಾಳರ ಜೋಡಿಯ ಕೊಡುಗೆ ಹಿರಿದಾದದ್ದು. ಇವರಿಬ್ಬರ ಆಗಿನ ಒಡನಾಟದ ಒಂದೆರಡು ಸಂದರ್ಭಗಳನ್ನು ಹೇಳಲೆ?

ಜನವರಿ ೩೦, ೧೯೪೮ರಂದು ಸಂಜೆ ಗಾಂಧೀಜಿಯ ಕೊಲೆಯಾದಾಗ ಕಾಮತರು ತಮ್ಮ ಕಚೇರಿಗೆ ಬಂದಿದ್ದ ವಿವರಗಳನ್ನು ಆ ಕೂಡಲೇ ಒದಗಿಸಿದ್ದರು. ಅದನ್ನು ಬಳಸಿಕೊಂಡು ಬಲ್ಲಾಳರು ಮರುದಿನ ಬೆಳಿಗ್ಗೆ ಒಂದು ವಿಶೇಷ ಪುರವಣಿಯನ್ನು ಸಿದ್ಧಪಡಿಸಿ ಪ್ರಕಟಿಸಿದರು. ಅದೇ ವರ್ಷ ಸೆಪ್ಟೆಂಬರದಲ್ಲಿ ಹೈದರಾಬಾದಿನ ನಿಜಾಮರ ಶರಣಾಗತಿ. ಸಂಜೆ ೬ ಗಂಟೆಗೆ ಫ್ರೀಪ್ರೆಸ್ ಕಚೇರಿಗೆ ಅದರ ವಿವರಗಳು ತಲುಪಿದಾಗ ಕಾಮತರು ಟೆಲಿಪ್ರಿಂಟರಿನಲ್ಲಿ ಮೂಡಿಬಂದ ಆ ಸುದ್ದಿಯ ಕಾಗದ ಪ್ರತಿಯನ್ನು ಹಿಡಿದುಕೊಂಡು, ನುಡಿಯು ಮುದ್ರಣಗೊಳ್ಳುತ್ತಿದ್ದ ಪ್ರೆಸ್ಸಿಗೆ ಧಾವಿಸಿದರು. ಅದಾಗಲೇ ಅಲ್ಲಿಗೆ ಬಲ್ಲಾಳರ ಆಗಮನವಾಗಿತ್ತು. ಪ್ರಸಕ್ತ ಸಂಚಿಕೆಗೆಂದು ಬರೆದಿದ್ದ ಸಂಪಾದಕೀಯವನ್ನು ಬದಿಗಿರಿಸಿದರು; ನಿಜಾಮನ ಶರಣಾಗತಿಯನ್ನು ಕುರಿತು ಕಾಮತರೇ ಸಂಪಾದಕೀಯ ಬರೆಯಬೇಕೆಂದು ಹೇಳಿದರು. ಆಯ್ತು. ಒಂದು ಸಣ್ಣ ಸ್ಟೂಲ್ ಮೇಲೆ ಕುಳಿತು ಕಾಮತರು ಪಟಪಟನೆ ಬರೆದು ಒಂದೊಂದು ಕಾಗದದ ತುಂಡನ್ನು, ಇನ್ನೊಂದು ಸ್ಟೂಲ್ ಮೇಲೆ ಕುಳಿತಿದ್ದ ಬಲ್ಲಾಳರಿಗೆ pass on ಮಾಡುವುದು; ಬಲ್ಲಾಳರು ಅದನ್ನು ಕನ್ನಡಕ್ಕೆ ಅನುವಾದಿಸುವುದು; ಅದೇ ಅನುವಾದದ ಕಾಗದವನ್ನು ಮೊಳೆ ಜೋಡಿಸುವವನಿಗೆ ಕೊಡುವುದು.....

ಅಬ್ಬಾ; ಅದೆಂಥ ಸಂಪಾದಕೀಯ! ಅದರಲ್ಲಿ ಹೈದರಾಬಾದ್ ಸಂಸ್ಥಾನದ ಪ್ರದೇಶವನ್ನು ಮಹಾರಾಷ್ಟ್ರ, ಕರ್ನಾಟಕ, ತೆಲಂಗಾಣಗಳಿಗೆ ಆ ಆ ಭಾಷಾನ್ವಯ ಹಂಚಿಹಾಕಬೇಕು ಎಂಬ ಸೂಚನೆಯನ್ನು ಅಷ್ಟೊಂದು ಮುಂದಾಗಿ ಮಾಡಲಾಗಿತ್ತು – ಯಾವುದೇ ಇಂಗ್ಲಿಷ್ ದೈನಿಕಕ್ಕಿಂತ ಮೊದಲಿಗೆ, ಈ ಸೂಚನೆ. ಜೊತೆಗೆ 'ದೇಶದ್ರೋಹೀ ನಿಜಾಮನನ್ನು ಗಲ್ಲಿಗೇರಿಸಬೇಕು' ಎಂಬ ಉಗ್ರ ಸೂಚನೆಯೂ ಅದರಲ್ಲಿತ್ತು! ಅವನ ಬಗ್ಗೆ ಸಹಾನುಭೂತಿಯುಳ್ಳವರಾರೂ ದೇಶದಲ್ಲಿ ಇರಲಿಲ್ಲ, ನಿಜ. ಆದರೂ ಇಂಥ ಉಗ್ರಗಾಮೀ ವಿಚಾರ ಮಂಡಿಸಬಾರದೆಂದು ಪ್ರೆಸ್ ಕೌನ್ಸಿಲ್‌ನವರು, ಅದರಂತೆ ಸರಕಾರವೂ ಎಚ್ಚರಿಕೆ ನೀಡುವಷ್ಟು ದುಡುಕಿನದಾಗಿತ್ತು ಆ ಮಾತು.

ಬೌದ್ಧಿಕ ಒಡನಾಟವಿದ್ದಲ್ಲಿ ಭಿನ್ನಾಭಿಪ್ರಾಯ ತಲೆ ಎತ್ತುವುದು ಸಹಜ. ಬಲ್ಲಾಳರು, ಅದರಂತೆ ನುಡಿಕೂಟದ ಇತರರು ಕರ್ನಾಟಕ ಏಕೀಕರಣಕ್ಕೆ ಬದ್ಧರಾಗಿ ಹತ್ತಾರು ಬಾರಿ ಆ ಕುರಿತು ಸಂಪಾದಕೀಯ ಬರೆದರು. ಅದೇ ಎಂ.ವಿ. ಕಾಮತರು ಭಾಷಾನ್ವಯ ಪ್ರಾಂತರಚನೆಯ ತತ್ವಕ್ಕೇ ಕಡು ವಿರೋಧಿಗಳು. 'ನುಡಿ'ಯ ಸಂಸ್ಥಾಪಕರು ಹಾಗೆ ಬೇಡ ಎಂದರೆ ಸಮಸ್ಯೆಯೇ ಸೈ. ಆದರೆ ಬಲ್ಲಾಳರು ಸ್ವಲ್ಪವೂ ಜಗ್ಗಲಿಲ್ಲ. ಕೊನೆಗೆ 'ನಾನೇ ಸೋತೆ' ಎಂಬುದಾಗಿ ಕಾಮತರು ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿದ್ದಾರೆ. ಅದೇ ಕಾಮತರು ಇಡೀ ಕರಾವಳಿಯನ್ನು ಒಳಗೊಳ್ಳುವ 'ಅಪರಾಂತ' ಹೆಸರಿನ ಒಂದು ಪ್ರಾಂತವಾಗಬೇಕೆಂದು ಸೂಚಿಸಿದಾಗ ಬಲ್ಲಾಳರು ಅವರಿಂದ ಆ ಲೇಖನ ಬರೆಯಿಸಿ ನುಡಿಯಲ್ಲಿ ಪ್ರಕಟಿಸಿದರು.

'ನುಡಿ' ಪತ್ರಿಕೆಗೆ ಒಳನಾಡಿನ ಪತ್ರಿಕೆಗಳಿಂದಲೇ ಮನ್ನಣೆ! 'ಕೊಡಗು', 'ಕೃಷ್ಣಸೂಕ್ತಿ', 'ನವಸಂದೇಶ' ಮುಂತಾದವು ನುಡಿಯ ಸಂಪಾದಕೀಯಗಳನ್ನು ಮರುಮುದ್ರಿಸುತ್ತಿದ್ದವು, ಇಲ್ಲವೆ ಉದ್ಧರಿಸುತ್ತಿದ್ದವು. ಒಂದು ಪತ್ರಿಕೆಯಂತೂ ನುಡಿಯ ಹೆಸರನ್ನು ಹೇಳದೇ, ತನ್ನದೇ ಸಂಪಾದಕೀಯ ವೆಂಬಂತೆ ಮರುಮುದ್ರಿಸಿತ್ತು! ವಿಶೇಷವಾಗಿ ಹೇಳಬೇಕಾದ ಇನ್ನೊಂದು ಪತ್ರಿಕೆ ಎಂದರೆ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ'. ಕರ್ನಾಟಕ ಏಕೀಕರಣ ಸಮಿತಿಯಂತೂ ನುಡಿಯ ಫೈಲುಗಳನ್ನು ಬದಿಯಲ್ಲಿ

ಇಟ್ಟುಕೊಂಡು ತಮಗೆ ಬೇಕೆಂದಾಗ refer ಮಾಡುತ್ತಿದ್ದರು. ಇತ್ತ ಕೃಷ್ಣಕುಮಾರ (ಕಲ್ಲೂರ) ರು ಕರ್ನಾಟಕದ ಸರ್ವತೋಮುಖ ಬೆಳವಣಿಗೆಯ ದೃಷ್ಟಿಯಿಂದ ಬರೆದ ಮೌಲಿಕವಾದ ಲೇಖನಗಳೂ ಪತ್ರಿಕೆಯ ಘನತೆಯನ್ನು ಹೆಚ್ಚಿಸಿದುವು.

ಬಲ್ಲಾಳರ ಸಂಪಾದಕೀಯಗಳ, ಇತರ ಲೇಖನಗಳ ಹರಹು ತುಂಬಾ ವೈವಿಧ್ಯಮಯವಾಗಿದ್ದಿತು. ಚೀನಾದಲ್ಲಿಯ ಹೊಸ ಮಾವೋ ಸರಕಾರ, ಒಲಿಂಪಿಯಾ ಪಂದ್ಯ ಇಂಥವೂ ಅವರ ಮಂಥನ ಲೇಖನಕ್ಕೆ ವಸ್ತುವಾದುವು. ಯಾವ ವಿಷಯವೇ ಇರಲಿ, ತಪ್ಪು ದಾರಿ ಇಲ್ಲವೆ ಅನ್ಯಾಯ ಕಂಡುಬಂದರೆ ಅವರ ಲೇಖನಿ ಖಡ್ಗದೋಪಾದಿಯಲ್ಲಿ ಕೆಲಸ ಮಾಡುತ್ತಿತ್ತು. ವಿಧಾಯಕ ಸೂಚನೆಗಳೂ ಇರುತ್ತಿದ್ದವು. .

ಈ ಮಾತಿಗೆ ಪುಷ್ಟಿಯಾಗಿ ಕೆಲ ಮಾದರಿಗಳನ್ನು ಕೊಡುವಾ:

ಸಂದರ್ಭ: ಭಾಷಾವಾರು ಪ್ರಾಂತ ರಚನೆಯಾಗುವ ಕುರಿತು ನೇಮಕವಾದ ತ್ರಿಮೂರ್ತಿ ಸಮಿತಿಯು ತಯಾರಿಸಿದ ಸುದೀರ್ಘ ಪ್ರಶ್ನಾವಳಿಯ ೧೯ನೆಯ ಪ್ರಶ್ನೆ ಹೀಗಿದ್ದಿತು : 'ಭಾಷಾವಾರು ಪ್ರಾಂತ ರಚನೆಯಾದರೆ ಹಿಂದುಸ್ತಾನ-ಪಾಕಿಸ್ತಾನಗಳ ಮಧ್ಯೆ ಆದಂತೆ ಜನ ಸ್ಥಳಾಂತರ ಮಾಡಬಹುದೆ?' ಮೇಲ್ನೋಟಕ್ಕೆ ಇದೊಂದು ಹೌದು ಇಲ್ಲ ಎಂದು ಹೇಳಬಹುದಾಗಿ ಕಂಡರೂ ಬಲ್ಲಾಳರು ಮಾತ್ರ ಅದರ ಹಿಂದಿನ, ಸಣ್ಣತನವನ್ನು ಉಪದ್ವ್ಯಾಪವನ್ನು ಗ್ರಹಿಸಿ, ಹೀಗೆ ಪ್ರತಿಕ್ರಿಯಿಸಿದರು :

> "ಇದಕ್ಕೆ ದೂರದರ್ಶಿತ್ವವೆನ್ನಬೇಕೇ, ನೈಜ ಧೋರಣೆಯೆನ್ನಬೇಕೇ, ಅಥವಾ ಚಂಚಲ ಮನೋಭಾವವೆನ್ನಬೇಕೇ ಏನೆಂದು ನಮಗೆ ತಿಳಿದಿಲ್ಲ. ಆದರೆ ಒಂದು ಮಾತು ತಿಳಿದಿದೆ: ಭಾರತದ ಜನತೆಯ ಮೇಲೆ ಜನನಾಯಕರಿಗೆ ವಿಶ್ವಾಸವಿಲ್ಲ.
>
> ಜನತೆಯ ಸ್ಥಳಾಂತರ ಪ್ರಶ್ನೆ ಪಾಕಿಸ್ತಾನದಿಂದಾಗಿ ಯಾಕೆ ಬಂತು, ಆ ಪ್ರಶ್ನೆಯ ಪೂರ್ವಾಪರಗಳೇನು ಎಂಬುದನ್ನು ಸ್ವಲ್ಪವೂ ವಿಚಾರಿಸದೆ ಆ ಪ್ರಶ್ನೆಯನ್ನು ಭಾಷಾವಾರು ಪ್ರಾಂತ ರಚನೆಗೂ ಅನ್ವಯಿಸಿದುದು ಎತ್ತಿ ತೋರಿಸುವುದು ಅಲ್ಪ ಬುದ್ಧಿಯನ್ನು; ಚಾಣಾಕ್ಷತನವನ್ನಲ್ಲ.
>
> ಜಾತೀಯತೆಯಿಂದುಂಟಾದ ಅಸಹ್ಯ ವಾತಾವರಣದಲ್ಲಿ ಪ್ರಾಣ-ಮಾನಗಳು ಅರಕ್ಷಿತವಾದಾಗ ಜನತೆ ಭದ್ರತೆಯೆಡೆ, ಭಾರತದೆಡೆ ಧಾವಿಸಿದಾಗ ಉಂಟಾದ ಪ್ರಶ್ನೆ ಸ್ಥಳಾಂತರದ ಪ್ರಶ್ನೆ. ಈ ಪ್ರಶ್ನೆಯನ್ನು ಭಾಷಾವಾರು ಪ್ರಾಂತಗಳಿಗೂ ಅನ್ವಯಿಸುವುದರಿಂದ ಭಾಷಾವಾರು ಪ್ರಾಂತಗಳನ್ನಪೇಕ್ಷಿಸುವವರ ರಾಷ್ಟ್ರಪ್ರೇಮವನ್ನು, ಈ ಸಮಿತಿ ಶಂಕಿಸುತ್ತಿದೆಯೆಂದು ತಿಳಿದರೆ ತಪ್ಪಲ್ಲ.
>
> ಜಾತೀಯತೆಯನ್ನು ಭಾಷಾಭಿಮಾನವನ್ನು ಪಾಕೀಸ್ತಾನವನ್ನೂ ಭಾಷಾವಾರು ಪ್ರಾಂತ್ಯವನ್ನೂ ಒಂದೇ ತಕ್ಕಡಿಯಲ್ಲಿಟ್ಟು ತೂಗಲೆತ್ನಿಸುವ ಈ ಸಮಸ್ಯೆಯಿಂದ ಭಾಷಾವಾರು ಪ್ರಾಂತ ರಚನೆಯ ಸಮಸ್ಯೆ ಬಗೆಹರಿಸಲ್ಪಡದು."

ಸಂದರ್ಭ: ೧೯೪೯-೫೦ರ ಮುಂಗಡ ಪತ್ರ.

> "ರಾಷ್ಟ್ರದ ಔದ್ಯೋಗೀಕರಣ ಹಾಗೂ ಅಧಿಕೋತ್ಪಾದನೆಗಳ ಹಿತದೃಷ್ಟಿಯಿಂದ ಬಂಡವಳಿನ ಕಡೆ ಸಹಾನುಭೂತಿಯನ್ನು ತೋರಬೇಕು ಎಂಬ ಮನೋಭಾವ ಬಲವಾದುದರಿಂದ ಬಂಡವಾಳ ತೆರಿಗೆಯ ರಿಯಾಯಿತಿಗಳನ್ನು ತೋರಿ ಅತಿ ಪ್ರಸರಣವನ್ನು ಕೊನೆಗಾಣಿಸಬೇಕು ಎಂಬುದು ಸರಕಾರದ ಆಸೆಯೇನೋ.
>
> ಬಂಡವಳಿಗೆ ತೋರಿಸುವ ಪ್ರತಿಯೊಂದು ರಿಯಾಯಿತಿಯಿಂದ ಉಂಟಾಗುವ ಕೊರತೆ ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಸಾಮಾನ್ಯ ಜೀವಿಯನ್ನು ಕಾಡುತ್ತದೆ. ಜನತೆಯ ಕೊಳ್ಳುವ ಶಕ್ತಿಯನ್ನು ಕಡಿಮೆ ಮಾಡಿ ಅತಿ ಪ್ರಸರಣವನ್ನು ಕೊನೆಗೊಳಿಸಲು, ಬಂಡವಳಿಗೆ ರಿಯಾಯಿತಿ ತೋರಿದರೆ ಕೆಲಸವಾಗದು. ಅತಿ-ಪ್ರಸರಣವನ್ನು ಕೊನೆಗಳಿಸಲು ಉಪಯೋಗಿಸಬೇಕಾದ ಮುಖ್ಯ ಶಸ್ತ್ರ ಇದು ಅಲ್ಲ. ಸಾಮಾನ್ಯ ಕೆಲಸಗಾರನಿಗೆ ಸರಿಯಾದ ಜೀವನ ವೇತನ ದೊರಕದೆ, ಸಾಮಾನ್ಯ ಜೀವಿಯು ಕೊಳ್ಳುವ ಶಕ್ತಿಯ ಕ್ಷೇತ್ರದೊಳಗೆ ಅವಶ್ಯಕ ವಸ್ತುಗಳ ಬೆಲೆಗಳು ಬಾರದೆ, ಬಂಡವಳಿನ ಕಡೆ ನಮ್ಮ ಸರಕಾರ ತೋರುವ ಸಹಾನುಭೂತಿ ಕೊನೆಗಾಣದೆ ಯಾವ ಮುಂಗಡ ಪತ್ರವೂ ನಮಗೆ ಸಮಾಧಾನ ಕೊಡದು."

ಸಂದರ್ಭ: ಕಡ್ಡಾಯ ಸೈನ್ಯ ಶಿಕ್ಷಣವನ್ನು ಕುರಿತದ್ದು:

"ಹೈದರಾಬಾದು ಸಮಸ್ಯೆಯ ಜಟಿಲತೆಯನ್ನು ಮನಗಾಣುವಾಗ, ಕಾಶ್ಮೀರ ಪ್ರಶ್ನೆಯಲ್ಲಿ ಭಾರತ ಸಹಿಸಬೇಕಾದ ಕಷ್ಟ ನಿಷ್ಠುರಗಳನ್ನು ತಿಳಿದುಕೊಂಡಾಗ ಒಂದು ಸತ್ಯದ ಅರಿವಾಗುತ್ತದೆ.

ಆ ಸತ್ಯ ಭಾರತದ ಭವಿಷ್ಯವನ್ನು ನಿರ್ಧರಿಸುವ ಸತ್ಯ. ರಾಷ್ಟ್ರಪಿತ ಬಾಪು ನಮಗೆ ಕೊಟ್ಟ ಅಹಿಂಸೆಯ ಅಸ್ತ್ರವನ್ನು

ಆಂತರಿಕ ಶಾಂತಿಗಾಗಲೀ ಅಂತರ್‌ರಾಷ್ಟ್ರೀಯ ವ್ಯವಹಾರಕ್ಕಾಗಲೀ ಉಪಯೋಗಿಸುವುದು ಸಾಧ್ಯವಾಗದ ಮಾತು, ಅಂದು.

ಬಾಪು ನಮ್ಮೊಡನೆ ಇದ್ದಷ್ಟು ಕಾಲ, ಅವರ ನೇತೃತ್ವದಡಿ ಅಹಿಂಸೆಯು ಮಹಾ ಅಸ್ತ್ರ ಪರಿಣಾಮಕಾರಿಯಾಗಿತ್ತು. ಆದರೆ ಬಾಪೂ ಇಲ್ಲದ ಇಂದಿನ ಭಾರತದಲ್ಲಿ ಇದು ಅಸಾಧ್ಯ. ಇದು ನಮ್ಮ ಶಕ್ತಿಹೀನತೆಯ ಕುರುಹಾಗಿರಬಹುದು. ಆದರೆ ಸತ್ಯ.

ಸಾರ್ವತ್ರಿಕ ಅಕ್ಷರ ಪ್ರಸಾರ ಇಂದು ಎಷ್ಟು ಅಗತ್ಯವೋ ಅಷ್ಟೇ ಸಾರ್ವತ್ರಿಕ ಸೈನ್ಯ ಶಿಕ್ಷಣವೂ ಅಗತ್ಯವಾಗಿದೆ. ತನ್ನ ಭದ್ರತೆಯ ದೃಷ್ಟಿಯಿಂದಲೇ ಭಾರತ ಈ ಹಾದಿ ಹಿಡಿದು ಸಾಗಬೇಕಾಗಿದೆ. ಜಾಗತಿಕ ಶಾಂತಿಯ - ಮುಖ್ಯವಾಗಿ ಏಶ್ಯಾದ ಶಾಂತಿಯ ದೃಷ್ಟಿಯಿಂದ ಜಗತ್ತು ಇದನ್ನು ತಿಳಿಯಬೇಕಾಗಿದೆ, ಭಾರತ ಬರೇ ರಾಷ್ಟ್ರವಲ್ಲ - ಒಂದು ಶಕ್ತಿ, ಎಂದು".

ಬಲ್ಲಾಳರು ಬರೆದ ವಿವಿಧ ವಿಷಯಗಳ ಮೇಲಿನ ಸಂಪಾದಕೀಯಗಳನ್ನು ತಿರುವಿ ಹಾಕಿದಾಗ, ಅವರ ಒಟ್ಟಿನ ಧೋರಣೆ ಏನೆಂಬುದನ್ನು ಗುರುತಿಸುವುದು ತೀರಾ ಸುಲಭ. ಅವೆಂದರೆ ಗಾಂಧೀಜಿಯ ತತ್ತ್ವಗಳಲ್ಲಿ ಅಖಂಡ ನಿಷ್ಠೆ. ಪ್ರತಿಯೊಬ್ಬ ಭಾರತೀಯನಿಗೆ ಅನ್ನ - ವಸ್ತ್ರ, ಶಿಕ್ಷಣ ಹಾಗೂ ವಿಚಾರ ಸ್ವಾತಂತ್ರ್ಯ ಇವು ದೊರೆಯಬೇಕು, ಶೋಷಣೆ, ಅನ್ಯಾಯ ತೊಲಗಬೇಕು. ಆ ಮೂಲಕ ಭಾರತವು ಬಲಿಷ್ಠ ರಾಷ್ಟ್ರವಾಗಿ ಮೆರೆಯಬೇಕೆನ್ನುವುದು ಅವರ ಹಾರ್ದಿಕ ಅಪೇಕ್ಷೆಯಾದದ್ದು ಕಂಡುಬರುತ್ತದೆ. ಇದರಿಂದ ಬಲ್ಲಾಳರು ಎಡಪಂಥೀಯರೆಂದು ಯಾರಿಗಾದರೂ ಅನಿಸಿದರೂ ಅದರಲ್ಲಿ ತಥ್ಯಾಂಶವಿದೆ.

೧೯೫೦ರ ಜನವರಿ: ಪತ್ರಿಕೆ ಎರಡೂವರೆ ವರ್ಷಗಳನ್ನು ದಾಟಿತ್ತು. ಒಳನಾಡಿನ ವಿದ್ವಾಂಸರು ಪತ್ರಿಕೆಯನ್ನು ಮನಸಾರೆ ಮೆಚ್ಚಿದ್ದರು. "ತ್ರಿಮೂರ್ತಿ ಸಮಿತಿಯ ವರದಿಯನ್ನು ಸರಿಯಾಗಿ ಒರೆಗೆ ಹಚ್ಚಿದವರು ನೀವೇ" ಎಂದು ಶಂ.ಬಾ. ಜೋಶಿಯವರು ಬರೆದಿದ್ದರು. ಇಂಥ ಅದೆಷ್ಟೋ ಪತ್ರಗಳು 'ನುಡಿ' ಕಚೇರಿಗೆ ಬಂದದ್ದುಂಟು. ನಿರಂಜನ, ಮಂಗಳವೇಢೆ, ಶ್ರೀನಿವಾಸರಾಯರು, ಶಿವರಾಮ ಕಾರಂತ, ಜಿನರಾಜ ಹೆಗಡೆ ಮುಂತಾದವರು 'ನುಡಿ'ಯನ್ನು ಆದರಿಸುವವರಾಗಿದ್ದರು.

ಈ ವರ್ಗದ ಜೊತೆಗೆ ನುಡಿಯನ್ನು ಗಮನಿಸುತ್ತಿದ್ದ ಇನ್ನೊಂದು ವರ್ಗ ಸರಕಾರೀ ಅಧಿಕಾರಿಗಳದ್ದು. ಕನ್ನಡ ಬಲ್ಲ ಮಂತ್ರಿಗಳೂ ಪತ್ರಿಕೆಯನ್ನು ಓದಿ, "ಸರಕಾರವನ್ನು ಅತಿಯಾಗಿ ಟೀಕಿಸಬೇಡಿರಿ" - ಎಂಬ ಹಿತವಚನವನ್ನು ಹೇಳಿದ ಪ್ರಸಂಗಗಳೂ ಇದ್ದುವು. ಮುಂಬಯಿ ರಾಜ್ಯದ ಹಾಗೂ ಕೇಂದ್ರ ಸರಕಾರದ ಟೀಕೆಗಳಿರುವ ಎಲ್ಲ ಗಣ್ಯ ನಗಣ್ಯ ಅಂಶಗಳು ಸರಕಾರೀ ಭಾಷಾಂತರ ಕಚೇರಿಯಿಂದ ಅನುವಾದಗೊಂಡು ಸಂಬಂಧಪಟ್ಟ ಖಾತೆಗಳಿಗೆ ರವಾನೆಯಾಗುತ್ತಿದ್ದುವು.

ಅವುಗಳ ಫಲಶ್ರುತಿಯೆಂಬಂತೆ ಒಂದೆರಡು ಪ್ರಸಂಗಗಳನ್ನು ಹೇಳಬಹುದು:

ಸ್ವಾತಂತ್ರ್ಯಕ್ಕೆ ೨-೩ ವರ್ಷ ಮೊದಲಿನಿಂದ ಮುಂಬಯಿ ಆಕಾಶವಾಣಿಯಲ್ಲಿ ಪ್ರತಿದಿನ ಅರ್ಧ ತಾಸಿನ ವರೆಗೆ ಕನ್ನಡ ಕಾರ್ಯಕ್ರಮ ಬಿತ್ತರಿಸಲಾಗುತ್ತಿತ್ತು. ೧೯೪೯ರಲ್ಲಿ ಧಾರವಾಡ ಆಕಾಶವಾಣಿ ಆರಂಭವಾಯಿತು. ಆ ನೆಪ ಮಾಡಿಕೊಂಡು ಮುಂಬಯಿಯ ಕನ್ನಡ ಕಾರ್ಯಕ್ರಮವನ್ನು ನಿಲ್ಲಿಸಬೇಕೆಂದಾಗ ಬಲ್ಲಾಳರು ಆಧಾರ ಸಹಿತವಾಗಿ ಆ ವಿಚಾರವನ್ನು ಖಂಡಿಸಿ ಸಂಪಾದಕೀಯವನ್ನು ಬರೆದರು. ಅದರ ಪರಿಣಾಮವಾಗಿ ಇರಬೇಕು, ಸರಕಾರವು ಮುಂಬಯಿಯ ಕನ್ನಡ ಕಾರ್ಯಕ್ರಮವನ್ನು ನಿಲ್ಲಿಸಲಿಲ್ಲ. ಈಗೂ ಅದು ಮುಂದುವರಿದಿದೆ.

ಕೇಂದ್ರ ಸರಕಾರದಲ್ಲಿ ದಿವಾಕರರು ವಾರ್ತಾ-ಪ್ರಸಾರ (ಬಾನುಲಿ) ಮಂತ್ರಿಗಳಾದರು. ಏಕೀಕರಣದ ಅಧ್ವರ್ಯುಗಳಾದ ದಿವಾಕರರು ಮಂತ್ರಿಗಳಾದ ಮೇಲೆ ಮೊದಲಿನಂತ ಹೋರಾಡಲಾರರು! ಈ ಕುರಿತು 'ನುಡಿ'ಯ ಮೊದಲ ಪುಟದಲ್ಲಿಯೇ 'ಕೇಂದ್ರದ ಮಂತ್ರಿಪದಕ್ಕೆ ಕರ್ನಾಟಕ ಏಕೀಕರಣದ ಬಲಿದಾನ' ಎಂಬ ಶೀರ್ಷಿಕೆಯ ಕೆಳಗೆ ಅಗ್ರಲೇಖನ ಪ್ರಕಟವಾಗಿತ್ತು. ಅದಕ್ಕೆ ಕೆಲವು ತಿಂಗಳ ಹಿಂದೆ, ದಿಲ್ಲಿಯಲ್ಲಿ ಆರಂಭಿಸಲಿರುವ ಕನ್ನಡ ವಾರ್ತಾ ಬಿತ್ತನೆಗೆ, 'ನುಡಿ'ಗೆ ಆಗಾಗ ಲಲಿತ ಲೇಖ ಬರೆಯುತ್ತಿದ್ದ ಒಬ್ಬರು ನೇಮಕವಾಗಿದ್ದರು. ಈ ಸಂಬಂಧದ ಆರ್ಡರ್ ಹೊರಡುವುದರಲ್ಲಿತ್ತು. ಆದರೆ ಅವರು ತಮ್ಮ ಪತ್ರಿಕಾ ಅನುಭವವೆಂದು 'ನುಡಿ'ಯನ್ನು ಹೆಸರಿಸಿದ್ದರು. ಮಂತ್ರಿ ದಿವಾಕರರನ್ನು ಟೀಕಿಸಿದ ಪತ್ರಿಕೆ ! ಅದು ತಿಳಿದ ಕೂಡಲೇ ಅವರ ನೇಮಕವನ್ನು ರದ್ದುಗೊಳಿಸಲಾಯಿತು.

ಹೀಗೆ, ಒಳನಾಡಿನ ಹಿರಿಯರೂ, ಅತ್ತ ಸರಕಾರವೂ 'ನುಡಿ'ಗೆ ಮನ್ನಣೆಯಿತ್ತರೂ, ವಾಚಕವರ್ಗ ಮಾತ್ರ 'ನುಡಿ'ಯನ್ನು ದೂರವಿಟ್ಟಿದ್ದಿತು! ಪತ್ರಿಕಾ ಪ್ರಸರಣ ೧,೨೦೦-೧,೩೦೦ ಪ್ರತಿಗಳಿಗೆ ಸೀಮಿತವಾಗಿದ್ದಿತು. ವೆಚ್ಚ ಏರುತ್ತ ಹೋಯಿತು, ದೊಡ್ಡ ಜಾಹೀರಾತುಗಳನ್ನು ದೊರಕಿಸಬೇಕೆಂದರೆ 'ನಿಮ್ಮ ಪತ್ರಿಕೆಗೆ ಮೂರು ವರ್ಷ ತುಂಬಿದ ನಂತರವೇ' ಎಂದು ಹೇಳಲಾಯಿತು. ಮೊದಲಿನಿಂದಲೂ ದುಡ್ಡಿನ ಅಭಾವ. ನುಡಿಕೂಟದವರು ಕೈಯಿಂದ ಅಷ್ಟಿಷ್ಟು ಹಾಕುತ್ತಲೇ ಇದ್ದರು. ಸಹಕಾರೀ ಬ್ಯಾಂಕಿಗೆ, ಸಾಲಕ್ಕಾಗಿ ಅರ್ಜಿ ಹಾಕುವ ಯತ್ನವೂ ನಡೆಯಿತು.

ಎಷ್ಟು ದಿನ ಹೀಗೇ ನಡೆಯಬೇಕು? ಪತ್ರಿಕಾ ಪ್ರಸರಣ ಹೆಚ್ಚಿಸುವುದೊಂದೇ ದಾರಿ. ಅದಾಗಬೇಕಾದರೆ, ಜನಸಾಮಾನ್ಯರಿಗೆ ಹಿಡಿಸುವ ಲೇಖನಗಳಿಗೆ ಹೆಚ್ಚು ಇಂಬುಗೊಡಬೇಕು. ಪುಟಗಳನ್ನು ಹೆಚ್ಚಿಸಿ, ಮಹಿಳಾ ಪುಟ, ವಾಚಕರ

ಪ್ರಶ್ನೆ-ಉತ್ತರ, ಮುಖ್ಯವಾಗಿ ಒಂದು ಧಾರಾವಾಹಿ ಕಾದಂಬರಿ ಇವುಗಳನ್ನು ತರಬೇಕೆಂದು ಕೂಟದ ಪ್ರಮುಖರು ನಿರ್ಧರಿಸಿದರು. ವಾಚಕ ಪ್ರಶ್ನೋತ್ತರವನ್ನು ಸೋಮನಾಥರು ವಹಿಸಿಕೊಂಡರು. ಮಹಿಳಾ ಪುಟದ ಜವಾಬ್ದಾರಿ ನನ್ನದಾಯಿತು.

ಉಳಿದದ್ದು ಕಾದಂಬರಿ. ಆ ವೇಳೆಗೆ ನನ್ನ ಒಂದೆರಡು ಕತೆಗಳೂ ನೀಳ್ಗತೆಗಳ ಒಂದು ಸಂಕಲನವೂ ಪ್ರಕಟವಾಗಿತ್ತು. ಸಣ್ಣಕತೆಗೆ ಮುಂದಿನದು ನೀಳ್ಗತೆ - ಆ ಮುಂದಿನ ಹೆಜ್ಜೆ ಕಾದಂಬರಿ ತಾನೇ. 'ನುಡಿ'ಗಾಗಿ ಕಾದಂಬರಿಯನ್ನು ನಾನು ಬರೆಯತಕ್ಕದ್ದು ಎಂದರು ಬಲ್ಲಾಳರು. ನಾನು ಹೆಮ್ಮೆಪಟ್ಟೆ. ಅವರಿಗೆ, ಅಕ್ಕನಿಗಿಂತ ಮೊದಲು ತಂಗಿಯ ಮದುವೆ ಆದದ್ದರ, ಕುಟುಂಬದಲ್ಲಿ ಆದ ಅದರ ಪರಿಣಾಮದ ಒಂದು ಘಟನೆ ಹೇಳಿದೆ. 'ಚೆನ್ನಾಗಿದೆ ಬರೀರಿ" ಎಂದರು. ನಾವಿಬ್ಬರೂ ಆಗ ವಾಸವಾಗಿ ಇದ್ದದ್ದು 'ಶಾರದಾ ಭವನ' ಎಂಬ ಲಾಜಿಂಗ್‌ನಲ್ಲಿ. ಶಾಂತ ವಾತಾವರಣವನ್ನು ಅರಸಿಕೊಂಡು ಒಂದು ರವಿವಾರ, ಈಗಿನ ಶೀವ್ ಎಂಬಲ್ಲಿಯ ಒಂದು ದಿಬ್ಬದ ಮೇಲಿರುವ ಮರುಕು ಮಂಟಪಕ್ಕೆ ಹೋದೆವು. ಜೊತೆಗೆ ಒಂದು ಹೊರೆ ಇಡ್ಲಿ, ವಡೆ ಕಟ್ಟಿಸಿಕೊಂಡು, ಕಾಫಿಯ ಥರ್ಮಾಸ್ ತುಂಬಿಸಿಕೊಂಡಿದ್ದೆವು. ಆ ದಿನ ಸಂಜೆಯ ವರೆಗೆ ಮೇಲಿನ theme ಇಟ್ಟುಕೊಂಡು ಬರೆಯಲು ಯತ್ನಿಸಿದೆ. ಸಾಧ್ಯವಾಗಲಿಲ್ಲ. ಕಾದಂಬರಿ ನನ್ನ ತುತ್ತಲ್ಲ ಎನಿಸಿತು. ಹೇಗೂ ಬಲ್ಲಾಳರೂ 'ಬದುಕಿನ ಆದರ್ಶ' ಮೊದಲಾದ ಕೆಲವು ಉತ್ತಮ ಕತೆಗಳನ್ನು ಬರೆದು ಪ್ರಕಟಿಸಿದ್ದರು. ಅವರಿಗೆ ಹೇಳಿದ "ಆರಂಭದ ಎಳೆಯೇ ಸಿಕ್ತಾ ಇಲ್ಲ. ನೀವು ಮೊದಲ ಪ್ರಕರಣ ಬರೆದುಕೊಡಿರಿ, ನಾನು ಮುಂದುವರಿಸುವೆ" ಎಂದೆ. ಮುಂದಿನ ವಾರ ನಿರ್ಧಾರದಿಂದ ಕೂತು ಬರೆದರು. ಅದನ್ನು ಹಿಡಿದುಕೊಂಡು 'ನುಡಿ'ಯ ಕಚೇರಿಯಲ್ಲಿದ್ದ ಹನುಮೇಶ, ರಾಮಚಂದ್ರ ಉಚ್ಚಿಲರಿಗೆ ಓದಲು ಕೊಟ್ಟೆ - ನಾನು ಬಲ್ಲಾಳರಿಗೆ ಸುಳ್ಳು ಹೇಳಿದ್ದನ್ನು ಮತ್ತು ಮುಂದುವರಿಸುವ ಅಸಹಾಯಕತೆಯನ್ನೂ ವಿವರಿಸಿದೆ. ಬಲ್ಲಾಳರು ಬರೆದಷ್ಟನ್ನೇ ಮುದ್ರಣಕ್ಕೆ ಕೊಟ್ಟೆವು. ಆಗ ಅದಕ್ಕೆ ಕೊಟ್ಟ ಶೀರ್ಷಿಕೆ 'ಕನವರಿಸದ ಕುಂಕುಮ' ಬರೆದವರು 'ರಾಜೀವ!' (ಅವರ ಶ್ರೀಮತಿಯ ಹೆಸರು ರಾಜೀವಿ ಎಂದು) ಹಾಗೆ ಮುದ್ರಣಗೊಂಡು ಪ್ರಕಟವಾದ ಮೇಲೆ, ಅವರು ನನ್ನನ್ನು ತರಾಟೆಗೆ ತೆಗೆದುಕೊಳ್ಳಬೇಕೆಂದಾಗ, ನಗೆಯಲ್ಲಿ ತೇಲಿಸಿದೆ.

'ಅನುರಕ್ತೆ' - ಅವರ ಪ್ರಥಮ ಕಾದಂಬರಿ ಮೈದಾಳಿದ್ದು ಹೀಗೆ.

ಈ ಕಾದಂಬರಿ, ಮತ್ತಿತರ ಹೊಸ ಶೀರ್ಷಿಕೆಗಳನ್ನೊಳಗೊಂಡು, ಪುಟಗಳನ್ನು ಹೆಚ್ಚಿಸಿಕೊಂಡು 'ನುಡಿ' ಜನವರಿ ೨೬, ೧೯೫೦ರಿಂದ ನವೀನ ರೂಪದಿಂದ ಹೊರಡತೊಡಗಿತು. ಮುಂದಿನ ೨-೩ ತಿಂಗಳಲ್ಲಿ ಅದರ ಪ್ರಸರಣ ಹೆಚ್ಚಾಯಿತೊ ಇಲ್ಲವೊ ನೆನಪಿಲ್ಲ. ಮೇ ತಿಂಗಳಿನಲ್ಲಿ Free Press Journalನ ಮಾಲಿಕರಾದ ಸದಾನಂದರು, 'ನುಡಿ'ಯನ್ನು ತಾವು ನಡೆಸುವುದಾಗಿ ಅಪೇಕ್ಷೆ ವ್ಯಕ್ತಪಡಿಸಿದರು. 'ಇದ್ದುದಿದ್ದಂತೆ' (as is where is) ಎಂದರೆ ನುಡಿಯ ಯಾವ ಹಿಂದಿನ ಹೊಣೆ ಇಲ್ಲದೆ ತಾವು ನಡೆಸುವುದೆಂದು ಗೊತ್ತಾಯಿತು. ಈ ಹೊಸ ಯೋಜನೆಯ ಹಿಂದೆ ತೆರೆಯ ಮರೆಯಲ್ಲಿ ಸನ್ನಾಹ ನಡೆಸಿದವರು 'ನುಡಿ'ಯ ಅದೇ ತ್ರಿಮೂರ್ತಿಗಳು ರಾಮಚಂದ್ರರಾವ್, ಹನುಮೇಶ ಮತ್ತು ಎಂ. ವಿ. ಕಾಮತರು. ಪತ್ರಿಕೆಯ ಸಂಪಾದಕತ್ವದ ಕೆಲಸವನ್ನು ಮುಂದುವರಿಸಲು ಇಬ್ಬರು - ಮೂವರ ನೇಮಕಕ್ಕೂ ಆಸ್ಪದ ದೊರೆಯಿತು. ಯಾರು ಹೋಗಬೇಕು? ಬಲ್ಲಾಳರಂತೂ ಅಗತ್ಯವಾಗಿ ಬೇಕು. ಆದರೆ ಅವರು ಈಗಾಗಲೇ ಕಾಲ್ಟೆಕ್ಸ್ ಕಂಪನಿಯಲ್ಲಿ ಇದ್ದವರು. ಆ ನೌಕರಿಯಲ್ಲಿ ಇದ್ದಾಗಲೂ ಸಂಪಾದಕೀಯದ ಕೆಲಸ ಮಾಡುತ್ತಿದ್ದರಲ್ಲವೆ. ಇದ್ದ ನೌಕರಿಯನ್ನು ಬಿಟ್ಟು ಬರುವ ಅಗತ್ಯವಿರಲಿಲ್ಲ. ಇತರರಿಗೂ ತಂತಮ್ಮ ನೌಕರಿ ಇದ್ದಿತು. ಆಗ ಅನುದ್ಯೋಗಿಯಾಗಿ ಇದ್ದವ ನಾನೊಬ್ಬನೇ! ಆದ್ದರಿಂದ ಅಧಿಕೃತವಾಗಿ ನಾನು FPJ ಕಚೇರಿಯಲ್ಲಿ ಸೇರಿದೆ. ಜೂನ್ ೧ ರಿಂದ ಈ ಹೊಸ ಏರ್ಪಾಡು. ಪತ್ರಿಕೆ ಬಡ ತವರು ಮನೆಯಿಂದ ಶ್ರೀಮಂತ ಅತ್ತೆಯ ಮನೆಗೆ ಹೋದಂತೆ ನುಡಿಕೂಟದವರಿಗೆ ಅನಿಸಿತು.

ಜುಲೈ ಕೊನೆಯ ವಾರ. ಬಲ್ಲಾಳರು ಎಂದಿನಂತೆ ಆ ವಾರದ ಸಂಚಿಕೆಗೆಂದು ಸಂಪಾದಕೀಯವನ್ನು ಬರೆದು ನನಗೆ ಕೊಟ್ಟರು. ನಮ್ಮ ಮೊದಲಿನ ಮುದ್ರಣಾಲಯದಲ್ಲಿ ಆ ಸಂಚಿಕೆಯ ಮುದ್ರಣ ನಡೆದಿತ್ತು. ಅಲ್ಲಿಯ ಕೆಲಸ ಮುಗಿಸಿ FPJ ಕಚೇರಿಗೆ ಹೋದೆ. ಬರಸಿಡಿಲಿನಂತೆ ಹಟಾತ್ತನೆ ಎರಗಿದ್ದ ಸುದ್ದಿ. ಸದಾನಂದರು ನುಡಿಯ ಜವಾಬ್ದಾರಿಯನ್ನು ಇನ್ನು ಮುಂದಕ್ಕೆ ಹೊರಲಿಚ್ಛಿಸುವುದಿಲ್ಲ - ಎಂದು! ಎರಡೇ ತಿಂಗಳಲ್ಲಿ ಅವರು ಹೀಗೇಕೆ ಮಾಡಿದರೆಂಬುದು ಇಂದಿಗೂ ಸ್ಪಷ್ಟವಾಗಿಲ್ಲವಾದರೂ, ತೆರೆಯಲ್ಲಿ ಅವರಿಗೆ ಅದಾರೊ ಚುಚ್ಚಿಕೊಟ್ಟರು ಎಂಬುದಷ್ಟೇ ಗೊತ್ತು.

ನುಡಿ ಕೂಟದವರೇ ಆಗಸ್ಟ್ ೧೯೫೦ರಿಂದ ಮುಂದುವರಿಸಬಾರದೇಕೆ? ಎಂಬ ಬಗ್ಗೆ ಸದಸ್ಯರಲ್ಲಿ ಆ ಕೂಡಲೇ ಚರ್ಚೆ ನಡೆಯಿತು. ಹರಿದ ಎಳೆಯನ್ನು ಹೊಂದಿಸಿಕೊಂಡು, ಹದಿಮೂರು ಸಾವಿರ ರೂ.ಗಳ ಹಿಂದಿನ ಸಾಲವನ್ನು ಇಟ್ಟುಕೊಂಡು ಹೇಗೆ ಮುಂದುವರಿಯಬೇಕು - ಎಂಬ ಹತಾಶೆಯಲ್ಲಿ 'ನುಡಿ'ಗೆ ಅಂತಿಮ ವಿದಾಯ ಹೇಳುವುದು ಅನಿವಾರ್ಯವೆನಿಸಿತು. 'ಇದು ನಮ್ಮ ಕೊನೆಯ ಸಂಚಿಕೆ' ಎಂದು ವಾಚಕರಿಗೆ ತಿಳಿಸಲೂ ಆಗದೆ ಹೋಯಿತು.

ಹೀಗೆ 'ನುಡಿ' - ಮುಂಬಯಿ ಕನ್ನಡಿಗರ ಮುಖವಾಣಿಯಾಗಿದ್ದ ನುಡಿ, ಪ್ರಗಲ್ಭ ವಿಚಾರಸರಣಿಯ ಸಂಪಾದಕೀಯಗಳನ್ನೊಳಗೊಂಡಿದ್ದ ನುಡಿ, ಅನುರಕ್ತೆ - ಕಾದಂಬರಿಯನ್ನು ಧಾರಾವಾಹಿಯಾಗಿ ಅರ್ಧದಷ್ಟು ಮಾತ್ರ ಪ್ರಕಟಿಸಿದ್ದ

'ಸುಡಿ' ಹಠಾತ್ತನೆ ನಿಂತು ಹೋಯಿತು!

ಅದಾಗಿ ಒಂದು ರವಿವಾರ 'ಸುಡಿ' ಕಚೇರಿಯಲ್ಲಿ ನಾವು ಸೇರಿ ಪತ್ರಿಕೆಯ Post Mortem ಮಾಡುವ ತರಹ ಹಿಂದಿನ ಪ್ರಸಂಗಗಳ ಬಗ್ಗೆ ಮಾತಿನಲ್ಲಿ ತೊಡಗಿದ್ದೆವು. ಆಗ ಅಲ್ಲಿನ ಜಿ.ಜಿ. ಕುಲಕರ್ಣಿ ಎನ್ನುವವರು ಬಂದರು. ಅವರು ಮುಂಬಯಿ ಸರ್ಕಾರದ ವಾರ್ತಾ ಮತ್ತು ಪ್ರಸಾರ ಇಲಾಖೆಯ ಉಪನಿರ್ದೇಶಕರು. 'ಅಯ್ಯೊ. ಪತ್ರಿಕೆಯಲ್ಲಿ ಈ ಹಿಂದೆ ಪ್ರಕಟವಾಗಿದ್ದ ಯಾವದೊಂದು ಸರಕಾರೀ ಟೀಕೆಯ ಬಗ್ಗೆ ಆಕ್ಷೇಪವೆತ್ತಲು ಬಂದಿದ್ದಾರೆ' ಎಂದೆನಿಸಿ ಸುಮ್ಮನಿದ್ದೆವು. ಆದರೆ ಕುಲಕರ್ಣಿಯವರು ಹೇಳಿದ ವಿಷಯ ಬೇರೆಯೇ ಇದ್ದಿತು.

"ನಮ್ಮ ಮುಖ್ಯಮಂತ್ರಿ ಮೊರಾರ್ಜಿಯವರು ಪ್ರತಿ ಹದಿನೈದು ದಿನಕ್ಕೊಮ್ಮೆ Press Conference ಕರೀತಾರಪ್ಪ. 'ಸುಡಿ'ಯ ಸಂಪಾದಕರು ಒಮ್ಮೆಯೂ ಬಂದಿಲ್ಲ. ಅವರಿಗೆ ಅಧಿಕೃತವಾಗಿ ಆಮಂತ್ರಣ ಕೊಡಲು ಬಂದಿದ್ದೇನೆ".

ಇದಲ್ಲವೆ ವ್ಯಂಗ್ಯ?

ಪತ್ರಿಕೆ ನಿಂತ ಮೇಲೆ ಕೂಟದ ಸದಸ್ಯರೆಲ್ಲ ತಂತಮ್ಮ ವೃತ್ತಿಯಲ್ಲಿ ತೊಡಗಿಕೊಂಡರು. ಕೆಲ ಕಾಲದ ಮೇಲೆ ರಾಮಚಂದ್ರರಾವ್ ಮತ್ತು ಸೋಮನಾಥ ತೀರಿಕೊಂಡರು. ಕ್ರೀಡಾಪುಟವನ್ನು ಯಶಸ್ವಿಯಾಗಿ ನಡೆಸುತ್ತಿದ್ದ ವಿದ್ವಾನ್ ರಾಮಚಂದ್ರ ಉಚ್ಚಿಲ್ ಈಗೂ ವಿವಿಧ ವಿಷಯಗಳ ಮೇಲೆ ಬರೀತಿದ್ದಾರೆ. ಎಂ.ವಿ. ಕಾಮತರ ಆಂಗ್ಲ ಪತ್ರಿಕಾ ಲೇಖನ ಪ್ರಸಿದ್ಧವೇ ಇದೆ.

ಇತ್ತ ಬಲ್ಲಾಳರು ತಮ್ಮ ಕಾದಂಬರಿಯನ್ನು ಮುಂದುವರಿಸಿದರು. ಕ್ರಿ.ಶ. ೧೯೫೬ರಲ್ಲಿ ಅದು ಪ್ರಕಟವಾಯಿತು. 'ಸುಡಿ' ಮಾತ್ರ ಅವರ ಮನಸ್ಸಿನಲ್ಲಿ ತುಟಿಯುತ್ತಲೇ ಇತ್ತು. ಆ ಪತ್ರಿಕೋದ್ಯಮದ ಹಿನ್ನೆಲೆಯನ್ನಿಟ್ಟುಕೊಂಡು 'ಹೇಮಂತಗಾನ' ಬರೆದರು. ಅದನ್ನು ಸುಡಿಯ ತ್ರಿಮೂರ್ತಿಗಳಿಗೇ ಅರ್ಪಣೆ ಮಾಡಿದರು. ೧೯೫೪ರಲ್ಲಿ ಪ್ರಕಟವೂ ಆಯಿತು. ಬಲ್ಲಾಳರು ಶ್ರೇಷ್ಠ ಕಾದಂಬರಿಕಾರರು - ಎಂಬ ಪ್ರತೀತಿ ನೆಲೆಗೊಂಡಿತು.

'ಹೇಮಂತಗಾನ'ವನ್ನು ಕುರಿತು ಮುಂಬಯಿಯಲ್ಲಿ ಒಂದು ವಿಚಾರ ಸಂಕಿರಣ ಏರ್ಪಟ್ಟಿತ್ತು. ಅಂದು ಎಚ್.ವೈ. ಶಾರದಾಪ್ರಸಾದರು ಅಧ್ಯಕ್ಷರು, ಎಂ. ವಿ. ಕಾಮತರು ಮುಖ್ಯ ಅತಿಥಿಗಳು, ಕಾದಂಬರಿಯನ್ನು ಕುರಿತು ಕೆಲವರು ತಮ್ಮ ಅನಿಸಿಕೆಗಳನ್ನು ಹೇಳಿದರು. ಜೊತೆಗೆ 'ಸುಡಿ'ಯನ್ನು ಪ್ರಸ್ತಾಪ ಮಾಡಲೇಬೇಕಲ್ಲವೆ. 'ಅದೊಂದು ವ್ಯರ್ಥ ಸಾಹಸ' ಎಂಬ ಧಾಟಿಯಲ್ಲಿ ಒಬ್ಬರು ಹೇಳತೊಡಗಿದರು. ಆ ಮುಂದೆ ಕಾಮತರ ಭಾಷಣವಾಗಬೇಕು, ಎದ್ದು ನಿಂತರು. ಅರೆ ಕ್ಷಣ ಮೌನ. ಕಾದಂಬರಿಯನ್ನು ಮೇಲೆತ್ತಿ ಹಿಡಿದು "If anyone says that all the trouble taken by ಸುಡಿ was futile, I can only say that the achievement is this."

ಭಾವಪರವಶರಾದ ಕಾಮತರು ಆ ಮುಂದೆ ಮಾತನಾಡಲಾಗದೆ ಕುಳಿತುಬಿಟ್ಟರು. ◆

✍ ಶ್ರೀ. ಹಾ.

## ೪೩. ಅಂಕಣ ಧುರೀಣ ಹಾ. ಮಾ. ನಾಯಕರು

✍ ಡಾ. ಪ್ರಧಾನ ಗುರುದತ್ತ

ಅಂಕಣ ಲೇಖನ ಹಾ.ಮಾ.ನಾ. ಅವರಿಗೆ ತುಂಬ ಪ್ರಿಯವಾಗಿರುವ ಪ್ರಕಾರ; ಸುಮಾರು ಇಪ್ಪತ್ತೈದು ವರ್ಷಗಳಿಂದ ಕೃಷಿ ಮಾಡಿಕೊಂಡು ಬಂದಿರುವ ಪ್ರಕಾರ. ಅವರಿಂದಾಗಿಯೇ ವಿಶ್ವವಿದ್ಯಾನಿಲಯದ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತಿತರ ಸಾಹಿತ್ಯಿಕ ಸಂಸ್ಥೆಗಳ ಮನ್ನಣೆಯನ್ನು ಪಡೆದುಕೊಂಡಂಥ ಪ್ರಕಾರ. ಹೀಗಾಗಿ, ಐವತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿರುವ ಅವರ ಕೃತಿ ಸಮುದಾಯದಲ್ಲಿ ಹನ್ನೊಂದು ಪುಸ್ತಕಗಳು ಅಂಕಣ ಬರಹಗಳ ಸಂಕಲನಗಳೇ ಆಗಿವೆ. 'ಗ್ರಂಥಲೋಕದ ಸುತ್ತಮುತ್ತ', 'ಸಾಹಿತ್ಯ ಸಲ್ಲಾಪ', 'ಸಲ್ಲಾಪ', 'ಸಂಪುಟ', 'ಸಂಪದ', 'ಸ್ಪಂದನ', 'ಸಮೂಹ', 'ಸಂಪರ್ಕ', 'ಸಾಂಪ್ರತ', 'ಸಂವಹನ' ಮತ್ತು 'ಸಂಪ್ರತಿ' - ಇವೇ ಆ ಹನ್ನೊಂದು ಸಂಕಲನಗಳು. ಇವುಗಳಲ್ಲಿ 'ಸಂಪ್ರತಿ' ಒಂದೇ ವರ್ಷದಲ್ಲಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ, ಐ.ಬಿ.ಎಚ್. ಪ್ರಶಸ್ತಿಯನ್ನೂ ತನ್ನದಾಗಿಸಿಕೊಂಡ ಅಂಕಣ ಬರಹಸಂಕಲನ. ಇದಕ್ಕಿಂತ ಹತ್ತು ವರ್ಷಗಳ ಹಿಂದೆಯೇ ಅವರ 'ಸಲ್ಲಾಪ' ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಪ್ರಶಸ್ತಿಯನ್ನು ಗಳಿಸಿತ್ತು ಎಂಬುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ಹೀಗಾಗಿ, 'ಸಂಪ್ರತಿ', 'ಸಲ್ಲಾಪ'ದ ವಿಕ್ರಮವನ್ನು, ದಾಖಲೆಯನ್ನು ಮುಂದುವರಿಸಿದೆ; 'ಇಮ್ಮಡಿ'ಯಾಗಿಸಿದೆ.

ಒಂದು ಅರ್ಥದಲ್ಲಿ ಬರವಣಿಗೆಯ ಬಗೆಗಿನ ಹಾ.ಮಾ.ನಾ. ಅವರ ದೃಷ್ಟಿಕೋನವೇ ಅರ್ಥಪೂರ್ಣವಾಗಿದೆ. ಆತ್ಮಸುಖಕ್ಕಾಗಿ (`ಸ್ವಾಂತಃಸುಖಾಯ') ಬರೆಯುತ್ತೇನೆ ಎಂಬ ನಿರ್ಲಿಪ್ತತೆಯನ್ನಾಗಲೀ, ಲೋಕವನ್ನು ಉದ್ಧಾರ ಮಾಡಬೇಕೆಂದು (`ಜನ ಕೇಳ್ಲಿ ಬದುಕಲಿ') ಬರೆಯುತ್ತೇನೆ ಎಂಬ ಅಹಂಭಾವವನ್ನಾಗಲೀ, ಒಳಗಿನ ಒತ್ತಡವನ್ನು ತಡೆಯಲಾರದೆ ತಾನಾಗಿ ಚಿಲುಮೆಯಂತೆ ಚಿಮ್ಮಿ ಬಂದ ಅಪೂರ್ವಸೃಷ್ಟಿಯೇ ತಮ್ಮ ಬರಹ ಎಂಬ ಬೂಟಾಟಿಕೆಯನ್ನಾಗಲೀ ಅವರು ಮೆರೆಯಹೋಗುವುದಿಲ್ಲ. ಇಂಥ ಸೋಗುಗಳಿಗೆ ಬದಲಾಗಿ, ಅವರು ತಮ್ಮ ಸರಳ ವ್ಯಕ್ತಿತ್ವಕ್ಕೆ ಅನುರೂಪವಾಗಿ, ಹೀಗೆನ್ನುತ್ತಾರೆ: "ನಾನು ನನ್ನ ಭಾವ, ಭಾವನೆ, ಆಲೋಚನೆ, ಚಿಂತನೆಗಳನ್ನು ನನಗೇ ಸ್ಪಷ್ಟಪಡಿಸಿಕೊಳ್ಳಲು ಬರೆಯುತ್ತೇನೆ. ಈ ಸ್ಪಷ್ಟಗೊಂಡ ಸೃಷ್ಟಿಯಿಂದ ನನ್ನ ಓದುಗರಿಗೆ ಸಂತೋಷ, ತಿಳಿವಳಿಕೆಗಳು, ಜೊತೆಗೆ ಅವರ ವಿಚಾರವನ್ನು ಉಜ್ಜಿಕೊಳ್ಳಲು ಒಂದು ಅವಕಾಶ ದೊರೆಯಬಹುದೆಂದು ಆಶಿಸುತ್ತೇನೆ. ನನ್ನ ಸಾಹಿತ್ಯ ಸೃಷ್ಟಿ ಎಲ್ಲವೂ ನಾನು ನನ್ನ ಓದುಗರೊಡನೆ ನಡೆಸುವ ಸಂವಾದ. ಆದರೆ ಅದರಲ್ಲಿ ವಾದವಿರುವುದಿಲ್ಲ, ಸಲ್ಲಾಪವಿರುತ್ತದೆ". ('ಸಿಂಚನ', ಪು. ೪೯) ವಾದವೇ ಅದರ ಉದ್ದೇಶವಾಗಿದ್ದರೆ, ಬಹುಶಃ ಎಂದೋ ಅದು ಓದುಗರಲ್ಲಿ ವಿಕರ್ಷಣೆಯನ್ನುಂಟು ಮಾಡಿಬಿಡುತ್ತಿತ್ತು. ಅದು ಓದುಗರ ತೀವ್ರ ಆಸಕ್ತಿಯ ಕೇಂದ್ರವಾಗಿ ಉಳಿದುಕೊಂಡಿರುವುದಕ್ಕೆ ಅದು 'ಸಂವಾದ'ವಾಗಿ, 'ಸಲ್ಲಾಪ'ವಾಗಿ ಬೆಳೆದು ಬಂದಿರುವುದೇ ಕಾರಣವೆಂದು ಭಾವಿಸಿದ್ದೇನೆ.

ಈ ಬರಹದ ಅಂದರೆ, ಅಂಕಣ ಪ್ರಕಾರದ ಕಡೆಗೆ ತಾವು ಬಂದ ಬಗೆಯನ್ನು ಹಾ.ಮಾ.ನಾ. ಅವರೇ ಹೀಗೆ ವಿವರಿಸಿದ್ದಾರೆ: "ನಾಲ್ಕು ದಶಕಗಳಿಗೂ ಹಿಂದೆಯೇ ನಾನು ಈ ಅಂಕಣ ಬರವಣಿಗೆಗೆ ತೊಡಗಿದೆ. ನಾನು ಇಂಟರ್ಮೀಡಿಯೆಟ್ ತರಗತಿಯ ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿಯೇ ಸ್ಥಳೀಯ ಮಾಸಪತ್ರಿಕೆಯೊಂದರಲ್ಲಿ ಅಂಕಣ ಬರಹವನ್ನು ಆರಂಭಮಾಡಿದೆ. ಈ ಲೇಖನಮಾಲೆಯಲ್ಲಿ ಕನ್ನಡದ ಆ ಕಾಲದ ಸುಪ್ರಸಿದ್ಧ ಮಾಸ್ತಿ, ಬೇಂದ್ರೆ ಮೊದಲಾದ ಲೇಖಕರನ್ನು ಕುರಿತು ಬರೆದೆ; ಕನ್ನಡ ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಬರೆದೆ. ಆ ಬರಹಗಳು ಓದುಗರನ್ನು ಆಕರ್ಷಿಸಿದ್ದು ನನ್ನ ಅದೃಷ್ಟ. ಆದರಿಂದಲೇ ನಾನು ಈ ಬರಹ ಪ್ರಕಾರಕ್ಕೆ ಬಂದೆ. ಸತತವಾಗಿ ಕೃಷಿ ಮಾಡಿದೆ."

ಪ್ರಕಾರವನ್ನು ಹೀಗೆ ಆಯ್ದುಕೊಂಡ ಹಾ. ಮಾ. ನಾ. ಅವರು ವಸ್ತುವಿನ ಆಯ್ಕೆಯ ವಿಚಾರದಲ್ಲಿಯೂ ತಮ್ಮ ಸಾಹಿತ್ಯಿಕ-ಸಾಂಸ್ಕೃತಿಕ ಸದಭಿರುಚಿಯನ್ನು ಮೆರೆದಿದ್ದಾರೆ. ಅವರೇ ಇದರ ಬಗ್ಗೆ ಈ ಮಾತುಗಳನ್ನು ಆಡಿದ್ದಾರೆ : "ಸಮಕಾಲೀನ ಜೀವನದ ಯಾವ ಮುಖವಾದರೂ ಅಂಕಣದ ವಸ್ತುವಾಗಬಹುದು. ನಮ್ಮ ದೇಶದ ವಿವಿಧ ಭಾಷೆಗಳಲ್ಲಿ ಅಂಕಣ ಬರಹದ ವಸ್ತು ಸಾಮಾನ್ಯವಾಗಿ ರಾಜಕೀಯವಾಗಿದೆ. ನಾನು ಮಾತ್ರ ಅದನ್ನು ಗಂಭೀರವಾಗಿ ನನ್ನ ಬರವಣಿಗೆಗೆ ತೆಗೆದುಕೊಂಡಿಲ್ಲ. ಸಾಹಿತ್ಯ ಸಂಸ್ಕೃತಿಗಳೇ ನನ್ನ ಅಂಕಣದ ಪ್ರಧಾನ ವಸ್ತು". ಮುಂದುವರಿದು ಅವರು ಹೇಳುತ್ತಾರೆ: "ನನ್ನ ವಸ್ತುವಿನ ಆಯ್ಕೆ ವ್ಯಾಪಕವಾದದ್ದು. ಅದು ಕನ್ನಡಕ್ಕೆ, ಭಾರತಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಇಡೀ ಜಗತ್ತಿನ ಸಾಂಸ್ಕೃತಿಕ ವಲಯವನ್ನು, ಸಾಹಿತ್ಯ ಕ್ಷೇತ್ರವನ್ನು ತನ್ನ ತೆಕ್ಕೆಗೆ ತೆಗೆದುಕೊಂಡದ್ದು".

ಈ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ವಲಯ ಎಂದೂ ಬರಡಾಗದಿರುವಂಥದು, ನಿತ್ಯ ನೂತನವಾಗಿರುವಂಥದು, ಸತತವಾಗಿ ಹೊಸ ಹೊಸ ದಿಗಂತಗಳನ್ನು ತೆರೆದು ತೋರುತ್ತಿರುವಂಥದು. ಆದ್ದರಿಂದಲೇ ಅದು ವೈವಿಧ್ಯಮಯವಾದ ಸೌಂದರ್ಯದಿಂದ ಸದಾಕಾಲವೂ ಕಂಗೊಳಿಸುತ್ತಲೇ ಇರುತ್ತದೆ. ಅದು ಪ್ರಶಸ್ತಿಯ ಪಟ್ಟಿಯಲ್ಲಿ ಸೇರಿಕೊಂಡಿದ್ದರೂ ಅಷ್ಟಾಗಿ ಯಾರ ಗಮನಕ್ಕೂ ಬರದೆ ಹೋಗಬಹುದಾದಂಥ, ಒಬ್ಬ ನಿಷ್ಠಾವಂತ ಅಧ್ಯಾಪಕನ ಎಲೆಮರೆಯ ಕಾಯಿಯಂಥ ಸಾಧನೆಯನ್ನು ಕುರಿತದ್ದಾಗಿರಬಹುದು; ತಮ್ಮ ಸಾಹಿತ್ಯಕ್ಕಾಗಿ ನೊಬೆಲ್ ಪ್ರಶಸ್ತಿಯನ್ನು ಗಳಿಸಿದ ನೈಜೀರಿಯಾದ ವೊಲೆ ಸೊಯಿಂಕ ಅವರ ಬಗೆಗಿನ ಲೇಖನವಾಗಿರಬಹುದು; ಕನ್ನಡಕ್ಕೆ ಸಂದ ಕಬೀರ್ ಸಮ್ಮಾನವಾಗಿರಬಹುದು; ಯಾವುದೇ ಭಾಷೆ-ಸಾಹಿತ್ಯಗಳಿಗೆ ಅಲಂಕಾರ ಪ್ರಾಯರಾಗಬಹುದಾದಂಥ ಬಂಗಾಳಿಯ ಪ್ರಮಥನಾಥ ಬಿಷಿ, ಅಥವಾ ಧೀಮಂತ ಪತ್ರಕರ್ತರೂ ಮಹಾ ಸಾಹಿತಿಯೂ ಆಗಿ ತೆಲುಗರಲ್ಲಿ ಮನೆಮಾತಾಗಿರುವಂಥ ಅಪೂರ್ವ ವ್ಯಕ್ತಿತ್ವದ ನಾರ್ಲ ವೆಂಕಟೇಶ್ವರ ರಾವ್, ಅಥವಾ ಪತ್ರಿಕೋದ್ಯಮದ ಕ್ಷೇತ್ರದಲ್ಲಿನ ಸತ್ಯಶೋಧನ ವಿಕ್ರಮಕ್ಕಾಗಿ ಪ್ರಶಸ್ತಿಯನ್ನು ಗಳಿಸಿದ (ಭೋಪಾಲ್ ದುರಂತದ ಬಗೆಗಿನ ಪ್ರಕಟಣೆಗಳು) ಹಿಂದೀ ಪತ್ರಕರ್ತ ರಾಜಕುಮಾರ್ ಕೇಶ್ವಾನಿ, ಅಥವಾ ಮಠಾಧೀಶರಿಗೂ, ಭಕ್ತಸಮೂಹಕ್ಕೂ ಎಚ್ಚರಿಕೆಯನ್ನು ನೀಡುವ 'ಆತ್ಮನಿವೇದನೆ'ಯಂಥ ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳ ದಿನಚರಿ, ಅಥವಾ ದ್ರಾವಿಡ ಭಾಷಾ ವಿಜ್ಞಾನದ ಕ್ಷೇತ್ರದಲ್ಲಿನ ಅವಿಸ್ಮರಣೀಯ ಹೆಸರುಗಳಲ್ಲಿ ಒಂದಾಗಿ ಬಿಟ್ಟಿರುವ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರಾಧ್ಯಾಪಕ ಥಾಮಸ್ ಬರೋ, ಅಥವಾ ಕನ್ನಡಕ್ಕೆ ಬೆರಳಚ್ಚು ಯಂತ್ರವನ್ನು ರೂಪಿಸಿದ ಕನ್ನಡದ ನಮ್ರ ಸೇವಕ ಅನಂತಸುಬ್ಬರಾವ್, ಅಥವಾ ವೈದ್ಯಕೀಯ ವಿಜ್ಞಾನವನ್ನು ಕನ್ನಡದಲ್ಲಿ ಬೆಳೆಸುವ ಸಲುವಾಗಿ ಅಹರ್ನಿಶಿ ದುಡಿಯುತ್ತಿರುವ ಡಾ. ಪಿ. ಎಸ್. ಶಂಕರ್,

ಅಥವಾ ಈ ಶತಮಾನದ ಮಹಾನ್ ಭಾರತೀಯರಲ್ಲಿ ಒಬ್ಬರೆಂದು ಪರಿಗಣಿತರಾಗಿರುವ ಮದ್ರಾಸಿನ 'ಕಲಾಕ್ಷೇತ್ರ'ದ ಶ್ರೀಮತಿ ರುಕ್ಮಿಣಿದೇವಿ ಅರುಂಡೇಲ್ ಅಥವಾ ನಿತ್ಯಸಂಗ್ರಾಮದ 'ಕಲಾವಿದರಾಗಿದ್ದ ಚಲನಚಿತ್ರ ನಟ ಉದಯಕುಮಾರ್, ಅಥವಾ ಶ್ರೇಷ್ಠ ಚಲನಚಿತ್ರ ನಿರ್ದೇಶಕ ಪುಟ್ಟಣ್ಣ ಕಣಗಾಲ್, ಅಥವಾ ಅಪರೂಪದ ಅಂತಃಕರಣದ ಮಹಿಳಾ ಸಾಹಿತಿ ಗೀತಾ ಕುಲಕರ್ಣಿ ಅಥವಾ ಇಂಗ್ಲೀಷ್ ಭಾಷೆಯಲ್ಲಿ ಕುಮಾರವ್ಯಾಸನನ್ನು ಅವತರಿಸಿದ ಡಿ. ಶೇಷಗಿರಿರಾವ್, ಅಥವಾ ಕನ್ನಡದ ಬೆಳಕಾಗಿದ್ದ ಮಾಸ್ತಿ ಅಥವಾ ೧೫೦ನೆಯ ಜಯಂತಿಯ ಸೌಭಾಗ್ಯಕ್ಕೆ ಪಾತ್ರರಾದ ರವೀಂದ್ರನಾಥ ಠಾಕೂರ್, ಅಥವಾ ಕನ್ನಡ ಭಾಷಾ ಸಾಹಿತ್ಯಕ್ಷೇತ್ರದ ಸಾಧಕರಾದ ಬಾಗಲೋಡಿ ದೇವರಾಯ ಅಥವಾ ರಾವ್ ಬಹದ್ದೂರ್ ಅಥವಾ ವಿಶುಕುಮಾರ್, ಅಥವಾ ಎಲ್. ಗುಂಡಪ್ಪ, ಅಥವಾ ಜಯದೇವಿ ತಾಯಿ ಲಿಗಾಡೆ, ಅಥವಾ ಜಯತೀರ್ಥ ರಾಜಪುರೋಹಿತ ಅಥವಾ ಎಂ.ಬಿ. ಕೊಟ್ರಶೆಟ್ಟಿ ಅವರನ್ನು ಕುರಿತ ಬರಹವಾಗಿರಬಹುದು. ಹಾ.ಮಾ.ನಾ. ಅವರ ಅಂಕಣದ ವೈವಿಧ್ಯ ವ್ಯಾಪ್ತಿ ಮತ್ತು ಜೀವಂತಿಕೆಗಳನ್ನು ನಿದರ್ಶಿಸಲು ಈ ಪಟ್ಟಿಯನ್ನು ಹೆಚ್ಚಾಗಿ ಬೆಳೆಸಬೇಕಾದ ಅಗತ್ಯವೇನೂ ಇಲ್ಲ.

ಅವರ ಕಣ್ಣು ಯಾವಾಗಲೂ ಸಾಧನೆಯ ಶಿಖರಗಳತ್ತಲೇ ನೆಟ್ಟಿರುತ್ತದೆ. ಅದಕ್ಕೆ ದೇಶ, ಭಾಷೆ, ಕಾಲಗಳ ಯಾವುದೇ ಸೀಮಿತಗಳಿಲ್ಲ. ಎಲ್ಲಿ ಉತ್ಕೃಷ್ಟವಾದುದು; ಉದಾತ್ತವಾದುದು, ಉದಾಹರಣಯೋಗ್ಯವಾದುದು, ಅನುಪಮವಾದುದು, ಆದರ್ಶವಾದುದು, ಆತಂಕಕ್ಕೆ ಕಾರಣವಾಗುವಂಥದು, ಅಪಾಯಕಾರಿಯಾಗಿರುವಂಥದು, ಆಸ್ಫೋಟಕವಾಗಿರುವಂಥದು ಇರುತ್ತದೆಯೋ ಅಲ್ಲೆಲ್ಲ ಅವರ ಕಣ್ಣು ಹರಿಯುತ್ತದೆ; ಅವರ ಮನಸ್ಸು ತುಡಿಯುತ್ತದೆ, ಮಿಡಿಯುತ್ತದೆ. ಕಳಕಳಿಯನ್ನು ತೋರುತ್ತದೆ; ಎಚ್ಚರಿಕೆಯನ್ನು ನೀಡುತ್ತದೆ: ಮಾರ್ಗದರ್ಶನ ಮಾಡುತ್ತದೆ; ವಿವೇಕದ ಮಾತುಗಳನ್ನು ತಿಳಿಯಹೇಳುತ್ತದೆ. ವ್ಯಕ್ತಿಗಳು, ಸಂಗತಿಗಳು ಮತ್ತು ಸಮಸ್ಯೆಗಳ ವಿಷಯದಲ್ಲಿ ಇಷ್ಟೊಂದು ಮಟ್ಟಿಗೆ ತೊಡಗಿಸಿಕೊಳ್ಳುವುದು, ಇಡೀ ಸಮಾಜ ಅವುಗಳೊಡನೆ ಸ್ಪಂದಿಸುವಂತೆ ಮಾಡುವುದು ಸಾಮಾನ್ಯವಾದ ಸಂಗತಿಯೇನೂ ಅಲ್ಲ. ಇಂಥ ವಿಚಾರಗಳನ್ನು ಆಯ್ದುಕೊಂಡು, ಅವುಗಳಿಗೆ ಸಂಬಂಧಿಸಿದಂತೆ ಲಭ್ಯವಾಗಬಹುದಾದ ಎಲ್ಲ ಮಾಹಿತಿಯನ್ನೂ ಸಂಗ್ರಹಿಸಿ, ಅವನ್ನು ವ್ಯವಸ್ಥಿತವಾದ, ಕಲಾತ್ಮಕವಾದ ರೀತಿಯಲ್ಲಿ ಮಂಡಿಸಿ, ವಿವರಣೆ-ವಿಶ್ಲೇಷಣೆಗಳನ್ನು ಕೊಟ್ಟು, ಓದುಗರನ್ನು ಚಿಂತನಶೀಲರನ್ನಾಗಿಸುವ ಮಹಾಸಾಹಸವನ್ನು ಹಾ.ಮಾ.ನಾ ಅವರು ಕೈಗೊಂಡಿದ್ದಾರೆ. ಅದನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡೂ ಬಂದಿದ್ದಾರೆ. ತಮ್ಮ ಈ ಧ್ಯೇಯವನ್ನು ಅವರು ಈ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾರೆ:

"ಈ ಬರಹಗಳಲ್ಲಿ ನಾನು ಯಾವತ್ತೂ ಒಂದು ಸ್ವಂತ ದೃಷ್ಟಿಕೋನವನ್ನು ಬಿಂಬಿಸಲು ಯತ್ನಿಸಿದ್ದೇನೆ. ಬರಹಗಳು ವಿಪುಲ ಮಾಹಿತಿಯನ್ನು ಒಳಗೊಂಡಿರುತ್ತವೆ. ಅಂಕಣಕಾರನ ಅಭಿಪ್ರಾಯಗಳನ್ನು ಒಳಗೊಂಡಿರುತ್ತವೆ. ಇವನ್ನು ಎಷ್ಟರ ಮಟ್ಟಿಗೆ ಸುಂದರವಾಗಿ, ಕಲಾತ್ಮಕವಾಗಿ, ಪರಿಣಾಮಕಾರಿಯಾಗಿ ಹೇಳಬಹುದೆಂಬುದನ್ನು ತೋರಿಸಲು ನಾನು ಪ್ರಯತ್ನಿಸಿದ್ದೇನೆ". ಇದರ ಹಿಂದೆ ಅಡಗಿರುವುದು ತಮ್ಮ ವ್ಯಾಪಕ ಅಧ್ಯಯನವನ್ನು, ಬಹುಶ್ರುತತ್ವವನ್ನು ಮೆರೆಯಬೇಕೆಂಬ ಅಹಂಭಾವವೇನೂ ಅಲ್ಲ. ಅವರು ವಿನಮ್ರರಾಗಿ ಹೇಳುತ್ತಾರೆ: "ಕನ್ನಡ ಓದುಗರಿಗೆ ಸುಲಭವಾಗಿ ದೊರೆಯದ ಸಂಗತಿಗಳನ್ನು ಪರಿಚಯಿಸಬೇಕು, ವಿಶ್ಲೇಷಿಸಬೇಕು ಎಂಬ ಆಸೆಯಿಂದ ನಾನು ಈ ಕೆಲಸ ಮಾಡಿದ್ದೇನೆ. ನಮ್ಮ ಜನರ ದೃಷ್ಟಿ ವಿಶಾಲವಾಗಬೇಕು, ಅದರಲ್ಲಿ ಚಿಂತನಶೀಲತೆ ವರ್ಧಿಸಬೇಕು ಎಂಬುದೇ ನನ್ನ ಅಪೇಕ್ಷೆ. ಅದಕ್ಕಾಗಿ ನನ್ನ ಬರವಣಿಗೆಯಲ್ಲಿ ಒಂದು ಹೊಸ ಮಾರ್ಗವನ್ನು ಹಿಡಿದಿದ್ದೇನೆ. ಅದೆಂದರೆ ಹೇಳುವುದನ್ನು ಆದಷ್ಟೂ ಆಕರ್ಷಕವಾಗಿ ಹೇಳಬೇಕೆಂಬುದು".

ಈ ವಿಧಾನವನ್ನು ಹಾ.ಮಾ.ನಾ. ಅವರು ಆಶ್ರಯಿಸಿರುವುದಕ್ಕೆ ಕಾರಣವೂ ಉಂಟು. ನಮ್ಮಲ್ಲಿ ಪಾಂಡಿತ್ಯ ಬಹುತೇಕವಾಗಿ ಹೊರೆಯಾಗಿ ಪರಿಣಮಿಸಿ, ಓದುಗರು ಪಂಡಿತರನ್ನು ಕಂಡರೆ ಭಯಮಿಶ್ರಿತ ಗೌರವದಿಂದ ದೂರಸರಿಯುವಂತಾಗುತ್ತದೆ; ಸಂಶೋಧಕರನ್ನು ಕಂಡರೆ ಬೆದರಿ ನಿಲ್ಲುವಂತಾಗುತ್ತದೆ. ಅವರ ಸಂಶೋಧನೆ-ಪಾಂಡಿತ್ಯಗಳು ಸರಸವಾಗಿ ಸಮರಸಗೊಂಡು ಹರಿದುಬಂದು ಓದುಗರ ಹೃನ್ಮನಗಳನ್ನು ಗೆಲ್ಲುವಂಥ ವಿಧಾನ ಅಪರೂಪವಾಗಿ ತೀ. ನಂ. ಶ್ರೀಕಂಠಯ್ಯನವರಂಥವರಲ್ಲಿ ಮಾತ್ರ ಕಾಣದೊರೆಯುತ್ತದೆ. ಹಾಮಾನಾ ಅವರು ಇಂಥ ಇನ್ನೊಂದು ಉಜ್ವಲ ನಿದರ್ಶನ, ಸ್ವತಃ ಇಂಥ ಕ್ಲೇಶಗಳನ್ನು ಅನುಭವಿಸಿದ್ದುದರಿಂದ ಅವರು ಸರಸತೆಯ ಮಾರ್ಗದಿಂದ ಸರಸ್ವತಿಯನ್ನು ಜನಸಾಮಾನ್ಯರ ಬಳಿಗೆ ಹರಿಸಬೇಕೆಂದು ನಿರ್ಧರಿಸಿದರು. ಅವರ ಮಾತುಗಳಲ್ಲಿಯೇ ಹೇಳಬೇಕೆಂದರೆ, "ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಓದುತ್ತಿದ್ದಾಗ, ಅಧ್ಯಾಪಕನಾಗಿ ಓದನ್ನು ಮುಂದುವರಿಸಿದಾಗ, ತಿಳಿದಿದ್ದನ್ನು ವಿದ್ಯಾರ್ಥಿಗಳೊಂದಿಗೆ ಹಂಚಿಕೊಳ್ಳುತ್ತಿದ್ದಾಗ, ಘನವಾದ ಆಲೋಚನಾ ವಿನ್ಯಾಸಗಳು ಎಷ್ಟರಮಟ್ಟಿಗೆ ಬಿಗಿಯಾಗಿರುತ್ತವೆಂಬುದನ್ನು ಕಂಡುಕೊಂಡೆ. ಆದ್ದರಿಂದ, ಓದುಗರಿಗೆ ಭಾರವಾಗದೆ ಸಾಧಿಸಬೇಕಾಗಿರುವುದನ್ನು ಸಾಧಿಸಬೇಕೆಂದು ಮನಸ್ಸುಮಾಡಿದೆ. ಅಡೆತಡೆಗಳಿಲ್ಲದೆಯೇ ಹೊರೆಯಾಗದೆಯೇ ಸೃಜನಶಕ್ತಿಯನ್ನು ಅಭಿವ್ಯಕ್ತಗೊಳಿಸುವುದು ನನ್ನ ಉದ್ದೇಶವಾಗಿತ್ತು......... ನನ್ನ ಸೃಜನಶೀಲ ಮನಸ್ಸಾಗಲಿ, ಅಧ್ಯಯನ, ಸಂಶೋಧನೆಗಳ ಕೆಲಸವಾಗಲಿ ನೇರವಾಗಿ ಓದುಗರ ಹೃದಯವನ್ನು ಮುಟ್ಟಿದ್ದರೆ, 'ಹೇಳದೆ ವಿದ್ಯೆಯನ್ನು ಕಲಿಸುವ ಗುರುವಾಗಿದ್ದರೆ' ನನ್ನ ಕೆಲಸ ಸಫಲವಾಯಿತೆಂದೇ ನನ್ನ ಭಾವನೆ"ಎಲ್ಲದೆ, ನಮ್ಮ ಸಮಾಜಕ್ಕೇ ಶತ್ರುವಾಗಿಬಿಡಬಹುದಾಗಿತ್ತು. ಸರಸ್ವತಿಯ ನಿರ್ಮಲ

ತೀರ್ಥವಲ್ಲಿ ಮಿಂದು ತೃಪ್ತರಾದ ಅವರು ಸೀಮಿತ ಸಂಖ್ಯೆಯ ವಿದ್ವದ್ ಲೇಖನಗಳಿಗೆ ತಮ್ಮನ್ನು ಸೀಮಿತಗೊಳಿಸಿಕೊಂಡು ಬಿಟ್ಟಿದ್ದರೆ, ವಿದ್ವದ್-ವಲಯದಲ್ಲಿ ಮಾತ್ರವೇ ತಮ್ಮ ಭಾವನ್ನು ಒತ್ತಿಬಿಟ್ಟಿದ್ದರೆ, ಕನ್ನಡ ಜನತೆ ನಿಜವಾಗಿಯೂ ಸಾಂಸ್ಕೃತಿಕವಾಗಿ ಬಡವಾಗಿಬಿಡುತ್ತಿತ್ತು. ಆದರೆ, ಅವರು ಹಾಗೆ ಮಾಡದೆ ತಮ್ಮ ಓದಿನ ಸ್ವಾದುಫಲವನ್ನು ಕನ್ನಡ ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಹಾಮಾನಾ ಅವರ ಈ ಓದಿಕೆಯಲ್ಲಿ ಇನ್ನೊಂದು ವೈಶಿಷ್ಟ್ಯವೂ ಉಂಟು. ಅದು ಅವರಲ್ಲಿ ಅನಿವಾರ್ಯವಾದ ಯಾಂತ್ರಿಕ ಕರ್ಮವಾಗಿರದೆ ಹೃದಯವನ್ನು ಹದಗೊಳಿಸುವ ಪ್ರೀತಿಯ ಕಾಯಕವಾಗಿರುತ್ತದೆ. ಜೊತೆಗೆ ಯಾವುದೇ ಪೂರ್ವಾಗ್ರಹಗಳಿಂದ ಬಾಧಿತವಾಗಿರದ ಉನ್ಮುಕ್ತ ಮನಸ್ಸಿನಿಂದ, ಆಸಕ್ತಿ-ಕುತೂಹಲಗಳಿಂದ ಅವರು ಪುಸ್ತಕಗಳನ್ನು ಕೈಗೆತ್ತಿಕೊಳ್ಳುತ್ತಾರೆ. ಹೀಗಾಗಿ ಅವರ ಪರಿಶೀಲನೆ ಈ ಎಲ್ಲ ಗುಣಗಳನ್ನೂ ಆತ್ಮೀಕರಿಸಿಕೊಳ್ಳುತ್ತವೆ; ದೋಷೈಕದೃಷ್ಟಿಯಿಂದ ದೂರವಾಗಿ ಗುಣಗ್ರಾಹಕತೆಯ ವೈಶಿಷ್ಟ್ಯವನ್ನು ಮೆರೆಯುತ್ತದೆ; ಸಮತೋಲನ ಮನೋಧರ್ಮದ ಪ್ರತೀಕವೂ ಆಗುತ್ತದೆ. ಈ ಅನುಭವ ಬಹುಮಟ್ಟಿಗೆ ಅವರ ಓದುಗರಿಗೂ ಮನದಟ್ಟಾಗುವುದು ಅವರ ಈ ವಿಮರ್ಶಾವಿಧಾನದ ಹಿರಿಮೆಯೇ ಹೌದು. ತಮ್ಮ ಈ ಮನೋಧರ್ಮದ ಬಗ್ಗೆ ಅವರೇ ಒಂದೆಡೆ ಹೀಗೆ ಹೇಳಿಕೊಂಡಿದ್ದಾರೆ:

> "ಓದು ಯಾವತ್ತೂ ನನಗೆ ಯಾಂತ್ರಿಕವಲ್ಲ. ಅದು ಅನುಭವಗಳನ್ನು ವಿಸ್ತರಿಸುವ, ತಿಳುವಳಿಕೆಯ ಆಳ-ಅಗಲಗಳನ್ನು ಹೆಚ್ಚಿಸುವ ಒಂದು ಪ್ರಕ್ರಿಯೆ. ಆದ್ದರಿಂದಲೇ ನಾನು ಅದನ್ನು ಗಂಭೀರವಾಗಿ ತೆಗೆದುಕೊಳ್ಳುತ್ತೇನೆ...... ನಾನು ಓದುವುದಕ್ಕೆ ಎತ್ತಿಕೊಳ್ಳುವ ಪ್ರತಿಯೊಂದು ಪುಸ್ತಕವೂ ನನಗೆ ಮೆಚ್ಚಿನದಾಗಿರುತ್ತದೆ. ಆಸಕ್ತಿ, ಕುತೂಹಲ, ಮೆಚ್ಚುಗೆಗಳಿಂದಲೇ ನಾನು ಪ್ರತಿಯೊಂದು ಪುಸ್ತಕವನ್ನೂ ಓದುತ್ತೇನೆ....... 'ಇಷ್ಟವಿಲ್ಲದೆ ನಾನು ಯಾವ ಪುಸ್ತಕವನ್ನೂ ಓದಿಗೆ ತೆಗೆದುಕೊಳ್ಳುವುದಿಲ್ಲ. ಮೆಚ್ಚದ ಪುಸ್ತಕವನ್ನು ಯಾಕೆ ಓದಬೇಕು?' ಈ ಮೆಚ್ಚುಗೆಯಲ್ಲಿಯೂ ತರತಮಗಳು ಉಂಟಾಗುವುದು ಸಹಜ. ಅನಿವಾರ್ಯ. ಎಲ್ಲ ಪುಸ್ತಕಗಳೂ ಒಂದೇ ಬಗೆಯ ಸಂತೋಷವನ್ನೂ, ಸಮಾಧಾನವನ್ನೂ ಕೊಡಲಾರವು. ಆದರೆ, ಒಂದು ಪುಸ್ತಕವನ್ನು ಓದುತ್ತಿರುವಾಗ ಅದರ ಬಗೆಗೆ ನಾನು ಮೆಚ್ಚುಗೆಯನ್ನು ಕಳೆದುಕೊಳ್ಳಲಾರೆ. ಅದನ್ನು ಕಳೆದುಕೊಂಡಾಗ ಓದಿನ ಸುಖ, ಸ್ವಾರಸ್ಯ ಹಾಳಾಗುತ್ತದೆ".

ಅಂಕಣ ಲೇಖನಗಳು ಮೂಲತಃ ಹಾಮಾನಾ ಅವರ ಪ್ರತಿಕ್ರಿಯೆಗಳು-ತಮ್ಮ ಸುತ್ತಣ ಜಗತ್ತಿನಲ್ಲಿ ನಡೆಯುವ ವಿಶಿಷ್ಟ ಘಟನೆಗಳ, ವಿದ್ಯಮಾನಗಳ, ಮಹತ್ವದ ವ್ಯಕ್ತಿಗಳ ಬಗೆಗಿನ ಅವರ ಪ್ರತಿಕ್ರಿಯೆಗಳು, ಅನಿಸಿಕೆಗಳು. ಆದರೆ ಈ ಪ್ರತಿಕ್ರಿಯೆ ಕೇವಲ ವರದಿಯಾಗದಂತೆ, ಏಕಪಕ್ಷೀಯವಾಗದಂತೆ, ನೀರಸವಾಗದಂತೆ ನೋಡಿಕೊಳ್ಳುವ ಎಚ್ಚರವೂ ಅವರಲ್ಲಿದೆ. ಇದೇ ಅವರ ಸರಸತೆಯ ಸಾಹಿತ್ಯಿಕತೆಯ ಸ್ವಾರಸ್ಯ. ಅವರೇ ಒಂದೆಡೆ ಈ ಅಂಶವನ್ನು ಸ್ಪಷ್ಟಪಡಿಸಿದ್ದಾರೆ: "ನನ್ನನ್ನು ಒಬ್ಬ ಅಂಕಣಕಾರನೆಂದು ವಿಮರ್ಶಕರು ಕರೆಯುತ್ತಾರೆ. ಪತ್ರಿಕೆಗಳ ಅಂಕಣಗಳಲ್ಲಿ ನಿಯತವಾಗಿ ಬರೆಯುತ್ತೇನೆಂಬ ದೃಷ್ಟಿಯಿಂದ ಅದು ಸರಿ. ಆದರೆ ನಾನು ಅಂಕಣ ಲೇಖನಗಳನ್ನು ಬರೆಯುವಾಗಲೂ ಸಾಹಿತ್ಯಿಕ, ವಿಮರ್ಶಕ ದೃಷ್ಟಿಯನ್ನು ಕಡೆಗಣಿಸುವುದಿಲ್ಲ. ಅದನ್ನು ಬರಿಯ ವರದಿಯನ್ನಾಗಿಸುವುದಿಲ್ಲ. ಈ ಬಗೆಯ ಬರಹಗಳಲ್ಲಿ ಸಾಹಿತ್ಯದ ಸೊಗಸನ್ನು ಅನೇಕರು ಗುರುತಿಸಿದ್ದಾರೆ. ಅಂಕಣ ಬರಹಗಳಲ್ಲಿ ಅಂದಂದಿನ ಅನೇಕ ಸಂಗತಿಗಳಿಗೆ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುತ್ತೇನೆ. ಈ ಅಭಿವ್ಯಕ್ತಿಯ ಕ್ರಮವನ್ನೇ ಜನರು ಮೆಚ್ಚಿದ್ದಾರೆ. ಸಾಹಿತ್ಯ ಮಾಡಬಹುದಾದ ಕೆಲಸವನ್ನೇ ಈ ಅಂಕಣ ಬರಹಗಳು ಅನೇಕ ರೀತಿಯಲ್ಲಿ ನಿರ್ವಹಿಸುತ್ತವೆ. ಒಂದು ನಿರ್ದಿಷ್ಟ ಅವಧಿಯಲ್ಲಿ ಇವು ಸಿದ್ಧಗೊಳ್ಳಬೇಕಾಗಿ ಬರುವುದರಿಂದ ಎಲ್ಲ ಬರಹಗಳಲ್ಲಿಯೂ ಒಂದೇ ಮಟ್ಟವನ್ನು ನಿರೀಕ್ಷಿಸಲು ಬರುವುದಿಲ್ಲ ಎಂಬುದು ನಿಜವಾದರೂ, ಅವುಗಳು ಗುರಿಯನ್ನು ತಲುಪದೆ ಹೋಗುವುದಿಲ್ಲ...."

ಹಾ.ಮಾ.ನಾ. ಅವರು ತಮ್ಮ ಮಾಹಿತಿಯನ್ನು, ಸಂಶೋಧನೆಯನ್ನು, ವಿದ್ವತ್ತನ್ನು ಹೇಗೆ ಕಲೆಯಾಗಿಸುತ್ತಾರೆ ಎಂಬುವಕ್ಕೆ ಕೆಲವೇ ಕೆಲವು ನಿದರ್ಶನಗಳನ್ನು ನೋಡಬಹುದು. ಅವರ ಎಲ್ಲ ಬರಹಗಳೂ ಲಲಿತಪ್ರಬಂಧಕ್ಕೆ ಅತ್ಯುತ್ತಮ ಉದಾಹರಣೆಗಳಂತೆ ಇರುವಂಥವು; ಅನುಪಮವಾದ ಶಬ್ದಚಿತ್ರಗಳಾಗಿರುವಂಥವು. ಉದಾಹರಣೆಗೆ, ರಾವ ಬಹದ್ದೂರ್ ಅವರನ್ನು ಕುರಿತ ಈ ಶಬ್ದಚಿತ್ರವನ್ನು ನೋಡಿ:

> "ಗಿಡ್ಡನೆಯ ವ್ಯಕ್ತಿ; ಎತ್ತೆತ್ತಲೋ ತಿರುಗಿ ಕೂರುತಿದ್ದ ಗಾಂಧಿ ಟೋಪಿ. ಸದಾ ನಸ್ಯದ ಕೆಂಧೂಳಿನಿಂದ ರಾರಾಜಿಸುತ್ತಿದ್ದ ಬಿಳಿಯ ಖಾದಿ ಅಂಗಿ; ಖಾದಿ ಪಂಚೆ ಕಚ್ಚೆ. ಇದೇ ಅವರ ವೇಷ. ಅವರೊಬ್ಬ ಸ್ವಯಂ ನಿರ್ಮಿತ ವ್ಯಕ್ತಿ. ಮುಗ್ಧತೆಗೂ ವ್ಯವಹಾರ ಕೌಶಲಕ್ಕೂ ಅವರಲ್ಲಿ ಸ್ಪರ್ಧೆ ಇದ್ದಂತಿತ್ತು. ಬಹು ಸಂದರ್ಭಗಳಲ್ಲಿ ಈ ಸ್ಪರ್ಧೆಯಿಂದಲೇ ಅವರು ನೋಯುತ್ತಿದ್ದರು. ನಿಜವಾದ ವ್ಯವಹಾರ ಜ್ಞಾನ ಇದ್ದಿದ್ದರೆ, ಅವರು ಹೆಚ್ಚು ಸುಖವಾಗಿರಬಹುದಾಗಿತ್ತೇನೋ. ಅನೇಕ ಪತ್ರಿಕೆಗಳೊಡನೆ, ರಾಜಕಾರಣಿಗಳೊಡನೆ ಅವರು ಸಂಬಂಧ ಹೊಂದಿ ನಿರಾಶರಾಗಿದ್ದರು. ಹಣದ

ಅಪಚಟಣೆಯಿಂದ ಯಾವಾಗಲೂ ಸರಳುತ್ತಿದ್ದರು. ಇತರರ ಮಾತುಗಳನ್ನು ಸುಲಭವಾಗಿ ನಂಬುತ್ತಿದ್ದರು. ಆದರೆ, ಅವರು ಬಯಸುತ್ತಿದ್ದುದು ದೊರೆಯುತ್ತಿರಲಿಲ್ಲ. ಬಹುಶಃ ಇದೆಲ್ಲದರಿಂದ ಅವರು ಕೊನೆಯ ದಿನಗಳಲ್ಲಿ ಕಂಗೆಟ್ಟು ಹೋಗಿದ್ದರು. `ಬದುಕು ಎಷ್ಟು ಬೆಳೆದರೂ ದೈವದ ತೊಟ್ಟಿಲಲ್ಲಿ ಆಡುವ ಮಗು' ಎಂದು ಅವರೇ ಒಂದೆಡೆ ಬರೆದಿದ್ದಾರೆ. ಅದೇ ಅವರ ಜೀವನ ಶ್ರದ್ಧೆಯಾಗಿತ್ತು. ಆದರಿಂದಲೇ ಸ್ವಲ್ಪವಾದರೂ ಸಮಾಧಾನವಿತ್ತು". (`ಸಂಪ್ರತಿ', ಪು. ೯)

'ಗ್ರಾಮಾಯಣ' ಖ್ಯಾತಿಯ ರಾವ್ ಬಹದ್ದೂರ್ ಅವರ ವ್ಯಕ್ತಿತ್ವವನ್ನು ಇದಕ್ಕಿಂತ ಹೆಚ್ಚು ಹಾರ್ದಿಕವಾಗಿ, ಸಮರ್ಪಕವಾಗಿ ಚಿತ್ರಿಸುವುದು ಕಷ್ಟ ಎಂದೇ ನಾನು ನಂಬಿದ್ದೇನೆ.

'ಆತ್ಮ ನಿವೇದನೆ'ಯಂಥ ಅಪೂರ್ವ ಗ್ರಂಥವೊಂದು ಹೊರಬಂದಾಗ, ಅದರ ಸಾಮಾಜಿಕ ಮತ್ತು ಧಾರ್ಮಿಕ ಪ್ರಸ್ತುತತೆಯನ್ನೂ, ಮಹತ್ವವನ್ನೂ ಗುರುತಿಸಿದ ಹಾ.ಮಾ.ನಾ. ಅವರು ಅದನ್ನು ಪರಿಚಯಿಸಿಕೊಡುವ ರೀತಿಯನ್ನು ನೋಡಿ:

"ಶಿಷ್ಯರ ಹಣವನ್ನು ತೆಗೆದುಕೊಂಡು ಹೋಗಿ, ಮಠದಲ್ಲಿರುವ ತಮ್ಮ ಅಣ್ಣ-ತಮ್ಮಂದಿರ ಹೆಂಡಿರು ಮಕ್ಕಳಿಗೆ ಹಾಕುವ ನಾಮಧಾರಿ ಗುರುಗಳು ಸಮಾಜದಿಂದ ತೊಲಗದವರೆಗೆ ನಮಗೆ ಕಲ್ಯಾಣವಿಲ್ಲ.... ಮಠಗಳಲ್ಲಿ ಸಂಭೋಗ, ತೊಟ್ಟಿಲು ಕಟ್ಟುವುದು ಇತ್ಯಾದಿ ಗೃಹಸ್ಥಧರ್ಮ ಕಾರ್ಯಗಳು ನಡೆಯುವಾಗ ಆ ಮಠಗಳು ಪಾಪಕ್ಷೇತ್ರವಾಗುವುದರಲ್ಲಿ ಸಂದೇಹವಿಲ್ಲ. ಆ ಪಾಪಕ್ಷೇತ್ರಗಳಲ್ಲಿ ಬಂದು ನಮಸ್ಕರಿಸುವ ಶಿಷ್ಯವರ್ಗಕ್ಕೆ ಕಲ್ಯಾಣವಾಗುತ್ತದೆಂಬುದು ಶುದ್ಧ ಅಸಂಗತ..... ಸಾಮಾಜಿಕರು ಇಂತಹ ನೀಚ ಪದ್ಧತಿಯನ್ನು ತೊಲಗಿಸದಿದ್ದರೆ ಖಂಡಿತವಾಗಿಯೂ ಕಲ್ಯಾಣವಿಲ್ಲ. ನಮ್ಮ ಸಮಾಜದಂತಹ ಮೂಢರು ಪ್ರಪಂಚದಲ್ಲಿಯೇ ಇಲ್ಲವೆಂದು ಹೇಳಬೇಕಾಗುತ್ತದೆ - ಗುರು ಎಂಬುದೊಂದು ಶಬ್ದಮಾತ್ರ ಉಳಿಯಿತು, ಗುರುವಿನ ಅಂತಸ್ತು ಹೋಯಿತು. ಗುರುಗಳು ಸ್ತ್ರೀಯರ ಪದತಳದಲ್ಲಿ ಬಿದ್ದರು. ಯಾರ್ಯಾರೆಂದು ಹೇಳೋಣ? ಎಲ್ಲರೂ ವ್ಯಭಿಚಾರಿಗಳು. ನಾನು ಕಂಡ ಹಾಗೆ ಎಲ್ಲರೂ ದುರಾಚಾರಿಗಳು - ಈಗಿನ ಗುರುಗಳು ಮಾಡಿದಷ್ಟು ಪಾಪವನ್ನು ಮತ್ತಾರೂ ಮಾಡುತ್ತ ಇಲ್ಲ - ಹೆಂಗಸೆಂದರೆ ಬಾಯ್ತೆರೆಯುತ್ತಾ ಇದೆ ಗುರು ವರ್ಗ. ಈ ಗುರುವರ್ಗವನ್ನು ಕಂಡರೆ ನನಗೆ ಹೇಸಿಗೆ ಯಾಗುತ್ತದೆ".

ಇಂಥ ಆಘಾತಕಾರಿ ಉದ್ಧರಣವನ್ನು ಕೊಟ್ಟು ಓದುಗರನ್ನು ಬೆಚ್ಚಿಸುವ ಹಾ.ಮಾ.ನಾ. ಅವರು ತಮ್ಮ ಈ ಅಂಕಣಕ್ಕೆ ಎಂಥ ಕಲಾತ್ಮಕ ಆರಂಭವನ್ನು ಕೊಡುತ್ತಾರೆ ಎಂಬುದನ್ನು ನೋಡಿ. ಅವರು ಹೀಗೆ ಬರೆಯುತ್ತಾರೆ:

"ಮಠಗಳ ದುರವಸ್ಥೆಯನ್ನು, ಮಠಾಧೀಶರ ದುರ್ವ್ಯವಹಾರಗಳನ್ನು ಕುರಿತ, ಮಠಾಧೀಶರಿಗೂ, ಭಕ್ತಸಮೂಹಕ್ಕೂ ಎಚ್ಚರಿಕೆ ನೀಡುವ, ಸುಧಾರಣೆಗೆ ಕರೆಕೊಡುವ, ಮಠಪರಿಸರದ ವಾಸ್ತವ ಸ್ಥಿತಿಗತಿಗಳಿಗೆ ಹೇಸುವ ಈ ಮಾತುಗಳನ್ನು ಯಾರು ಹೇಳಿರಬಹುದು?

"ನನಗೆ ಗೊತ್ತು. ನೀವು ತಲೆ ಕೆರೆದುಕೊಳ್ಳುತ್ತೀರಿ. ಮಠಾಧೀಶರನ್ನು ಟೀಕಿಸಿ ಕತೆ ಕಾದಂಬರಿ ಬರೆದ ಲೇಖಕರುಗಳನ್ನೆಲ್ಲ ನೆನಪಿಸಿಕೊಳ್ಳಲು ಪ್ರಯತ್ನಿಸುತ್ತೀರಿ. ಮಠಗಳ ವಿರುದ್ಧ ಚಳವಳಿ ನಡೆಸುವ ಸಂಘಸಂಸ್ಥೆಗಳ ನಾಯಕರ ಹೆಸರುಗಳಿಗೆ ಹುಡುಕಾಡುತ್ತೀರಿ. ನಾಸ್ತಿಕ ನೇತಾರರಿಗಾಗಿ ಪರದಾಡುತ್ತೀರಿ. ಈ ಮಾತುಗಳನ್ನು ಹೇಳಿದವರು ಅವರಾರೂ ಅಲ್ಲ, ಒಬ್ಬ ಮಠಾಧೀಶರೇ ಎಂದು ಹೇಳಿದರೆ ನೀವು ನಂಬಲಾರಿರಿ! ಆದರೆ, ನಾನು ಹೇಳುತ್ತೇನೆ - ನೀವು ನಂಬಬೇಕು.

"ಮಠಾಧೀಶರನ್ನು ಚುಚ್ಚುವ, ತಿವಿಯುವ, ನಾಚುವಂತೆ ಮಾಡುವ ಈ ಮಾತುಗಳನ್ನು ಹೇಳಿದವರು, ಅಲ್ಲ, ಬರೆದವರು ನಮ್ಮ ನಾಡಿನ ಸುಪ್ರಸಿದ್ಧ ಮಠಗಳಲ್ಲಿ ಒಂದಾದ ಸಿರಿಗೆರೆಯ ಶ್ರೀ ತರಳಬಾಳು ಜಗದ್ಗುರು ಬೃಹನ್ಮಠದ ಹಿರಿಯ ಗುರುಗಳಾದ ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳವರು!"

ಹೊಸಗನ್ನಡ ಗದ್ಯಶೈಲಿಯ ಅತ್ಯುತ್ತಮ ರೂವಾರಿಗಳಲ್ಲಿ ಒಬ್ಬರಾದ ಹಾ.ಮಾ.ನಾ. ಅವರ ವಿಶಿಷ್ಟ, ಅನನ್ಯ ಶೈಲಿಯ ಒಂದು ಮುಖ ಇದು. ಅದು ಸಂದರ್ಭಾನುಗುಣವಾಗಿ ಕಿಡಿಯಾಗಬಹುದು, ಸ್ಫಟಿಕದ ಪ್ರಭೆಯೂ ಆಗಬಹುದು, ಅಂತರ್ಯದ ತುಡಿತದ ಮರುಕವೂ ಆಗಬಹುದು, ಎಚ್ಚರಿಕೆಯ ಚಾಟಿಯ ಏಟೂ ಆಗಬಹುದು. ಉದಾಹರಣೆಗೆ ಬೆಳಗಾವಿಯ ಬಗೆಗಿನ ನಮ್ಮ ಧೋರಣೆಯನ್ನು ಟೀಕಿಸುವ ಪರಿಯನ್ನು ನೋಡಿ:

"ಸೆರಗಿನಲ್ಲಿ ಕೆಂಡ ಕಟ್ಟಿಕೊಂಡ ನಗರ ನಮ್ಮ ನಾಡಿನಲ್ಲಿ ಇದ್ದರೆ, ಅದು ಬೆಳಗಾವಿ. ಅದು ನ್ಯಾಯವಾಗಿ ಕರ್ನಾಟಕದಲ್ಲಿರುವುದು, ಅನ್ಯಾಯವಾಗಿ ಮಹಾರಾಷ್ಟ್ರೀಯರು ಅದನ್ನು ನುಂಗಿ ನೊಣೆಯಲು ಪ್ರಯತ್ನಿಸುತ್ತಿರುವುದು ಇದಕ್ಕೆ ಕಾರಣ. ಸಮಸ್ಯೆಯೇ ಅಲ್ಲದ ಬೆಳಗಾವಿ ಅರುವತ್ತು ವರ್ಷಗಳಿಗಿಂತ ಹೆಚ್ಚು ಕಾಲದಿಂದ ಸಮಸ್ಯೆಯಾಗಿ ಉಳಿದಿದೆ! ಅದು ಕರ್ನಾಟಕದ ಹಕ್ಕು. ಮಹಾರಾಷ್ಟ್ರದ ಪ್ರತಿಷ್ಠೆ, ಎಲ್ಲ ಸಮಿತಿ, ಆಯೋಗ, ಐತೀರ್ಪುಗಳ ಪರೀಕ್ಷೆಗಳನ್ನೂ ಯಶಸ್ವಿಯಾಗಿ ಎದುರಿಸಿ ಬೆಳಗಾವಿ ಕರ್ನಾಟಕದ ಭಾಗವಾಗಿ ಬೆಳೆದಿದೆ. ತರ್ಕವನ್ನು ಲೆಕ್ಕಿಸದೆ ತೋಳಬಲವನ್ನು ಮುಂದೆ ಮಾಡಿ ಮರಾಟಿಗರು ಅದನ್ನು ತಮ್ಮದನ್ನಾಗಿಸಿಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಿದ್ದಾರೆ.

"ಕನ್ನಡಿಗರ ಸಹಜ ದೌರ್ಬಲ್ಯದಿಂದಾಗಿ, ಮೀನ ಮೇಷ ಎಣಿಸುವ ಪ್ರವೃತ್ತಿಯಿಂದಾಗಿ, ಇತರ ಪ್ರದೇಶಗಳಲ್ಲಿ ಕಾಣದ ಮಹಾಭಾರತೀಯತೆಯಿಂದಾಗಿ, ಕನ್ನಡ ಭಾಷೆ ಸಂಸ್ಕೃತಿಗಳ ಬಗೆಗಿನ ದಿವ್ಯ ನಿರ್ಲಕ್ಷ್ಯದಿಂದಾಗಿ ಮರಾಟಿಗರಿಗೆ ತಮ್ಮದೇ ನ್ಯಾಯ ಎಂದು ತೋರುವಂತಾಗಿದೆ. ಇದರಿಂದಾಗಿ ಆಗಾಗ ಬೆಳಗಾವಿ ಉರಿಯುತ್ತದೆ. ಆರಿಸುವ ಯತ್ನವನ್ನು ಯಾರೂ ಗಂಭೀರವಾಗಿ ಮಾಡಿಲ್ಲ. ಎಲ್ಲ ಆದ ಮೇಲೂ ಬೂದಿಯಲ್ಲಿ ಕಿಡಿಗಳು ಅಡಗಿಯೇ ಇರುತ್ತವೆ. ಎಲ್ಲಿಯವರೆಗೆ ಕನ್ನಡಿಗರು ಬೂದಿಯನ್ನು ತೋಯಿಸಿ ಪ್ರವಾಹದಲ್ಲಿ ತೇಲಿಸಿ ಬಿಡುವುದಿಲ್ಲವೋ ಅಲ್ಲಿಯವರೆಗೂ, ಮರಾಟಿಗರು ಗಾಳಿಹಾಕಿ ಕಿಡಿಗಳನ್ನು ಕೆಂಡವಾಗಿಸುತ್ತಲೇ ಇರುತ್ತಾರೆ".

ಇದು ಕನ್ನಡದ ಬಗೆಗಿನ ಅವಿಚಾರಿತ ಭಾವಾವೇಶ ಅಥವಾ ಅಂಧಾಭಿಮಾನದ ಪರಿಣಾಮವೇನೂ ಅಲ್ಲ. 'ಕನ್ನಡ ವಿಶ್ವವಿದ್ಯಾಲಯ' ಎಂದ ಒಡನೆಯೇ ಅದರ ಬಗೆಗಿನ ಕನಸುಗಳಲ್ಲಿ ಮೈಮರೆತು ವಾಸ್ತವತೆಯನ್ನು ಮರೆಯುವ ವಿದ್ವಾಂಸರಲ್ಲಿ ಒಬ್ಬರಾಗದೆ, ವಸ್ತುಸ್ಥಿತಿಯ ಬಗ್ಗೆ ಕನ್ನಡಿಗರನ್ನು ಎಚ್ಚರಿಸುವಲ್ಲಿ ಮುಂದಾಗುವ ಹಾ.ಮಾ.ನಾ. ಅವರು, ಈ ಕಾರಣಕ್ಕಾಗಿಯೇ ಹಲವರ ವಿರೋಧವನ್ನು ಕಟ್ಟಿಕೊಳ್ಳಲೂ ಹಿಂದೆಗೆಯುವುದಿಲ್ಲ. ಅಂಥ ಅವರ ನಿರ್ಭೀತ, ನಿಷ್ಪಾಕ್ಷಿಕ, ನಿರ್ದುಷ್ಟ ನಿಲುವೇ ಅವರನ್ನು ವಿಶಿಷ್ಟರನ್ನಾಗಿಸುತ್ತದೆ. ಅವರು ಈ ಬಗ್ಗೆ ನಿಚ್ಚಳವಾಗಿ ಹೀಗೆಂದು ಸಾರುತ್ತಾರೆ:

"ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದ ಅಭಿವೃದ್ಧಿ ಒಂದು ಮುಖ್ಯವಾದ ಧ್ಯೇಯವೇ ಆಗಿದೆ. ಅದು ಬರಿಯ ಧ್ಯೇಯವಾಗಿರದೆ ತಕ್ಕಷ್ಟು ಕಾರ್ಯರೂಪಕ್ಕೂ ಬಂದಿದೆ. ನೆರೆ ರಾಜ್ಯಗಳಲ್ಲಿ ಇಂಥ ಕೆಲಸ ಆದದ್ದಿಲ್ಲ..... ಆದರೆ, ಕರ್ನಾಟಕದಲ್ಲಿ ಕನ್ನಡ ವಿಶ್ವವಿದ್ಯಾನಿಲಯದ ಅಗತ್ಯವಿಲ್ಲ. ಬಳಿಗ ಹೇಳುವ ವಿಶ್ವವಿದ್ಯಾನಿಲಯದ ಕಾರ್ಯಗಳನ್ನೆಲ್ಲ ಕನ್ನಡ ಅಧ್ಯಯನಕ್ಕೆ ಮೀಸಲಾದ ಒಂದು ಸಂಸ್ಥೆಯೇ ನಿರ್ವಹಿಸಬಹುದು. ಅದಕ್ಕಾಗಿಯೇ ವಿಶ್ವವಿದ್ಯಾನಿಲಯ ಯಾಕೆ?

"...... ಆಗಬೇಕಾದ ಕೆಲಸವೆಂದರೆ ನಮ್ಮ ರಾಜ್ಯದ ಎಲ್ಲ ವಿಶ್ವವಿದ್ಯಾನಿಲಯಗಳನ್ನು ಕನ್ನಡದ ವಿಶ್ವವಿದ್ಯಾನಿಲಯಗಳನ್ನಾಗಿ ಮಾಡುವುದು. ಇದನ್ನು ಬಿಟ್ಟು ಕನ್ನಡಕ್ಕಾಗಿ ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಕೇಳಿದರೆ ಸರ್ಕಾರಕ್ಕೆ ಜವಾಬ್ದಾರಿಯಿಂದ ಕಳಚಿಕೊಳ್ಳಲು ಒಂದು ನೆವ ಸಿಕ್ಕಿದ ಹಾಗಾಗುತ್ತದೆ; ಮಿಕ್ಕ ವಿಶ್ವವಿದ್ಯಾನಿಲಯಗಳಿಗೆ ಕನ್ನಡದಿಂದ ನುಣುಚಿಕೊಳ್ಳಲು ಅವಕಾಶ ಕಲ್ಪಿಸಿದ ಹಾಗಾಗುತ್ತದೆ.... ಯಾವ ಮಾತು ಬಂದರೂ, ಎಲ್ಲರೂ ಕನ್ನಡ ವಿಶ್ವವಿದ್ಯಾನಿಲಯದ ಕಡೆ ಕೈ ತೋರಿಸಿ ಕೈ ತೊಳೆದುಕೊಂಡು ಬಿಡಬಹುದು! ನಾವು ನಮ್ಮ ರಾಜ್ಯದ ಎಲ್ಲ ವಿಶ್ವವಿದ್ಯಾನಿಲಯಗಳೂ ಕನ್ನಡ ಮಾಧ್ಯಮದ ತರಗತಿಗಳನ್ನು ತೆರೆಯುವಂತೆ ನೋಡಿಕೊಳ್ಳುವುದು, ಕನ್ನಡದ ಅಭಿವೃದ್ಧಿಗಾಗಿ ಕಾರ್ಯಪ್ರವೃತ್ತವಾಗುವಂತೆ ಮಾಡುವುದು ತುರ್ತಿನ ಅಗತ್ಯವಾಗಿದೆ".

ಅನೇಕ ವೇಳೆ ಹಾಮಾನಾ ಅವರಿಗೆ ಈ ಅಂಕಣ ಲೇಖನಗಳನ್ನು ಸಿದ್ಧ ಪಡಿಸಲು ಸಿಗುವ ಕಾಲಾವಕಾಶ ತೀರ ಕಡಿಮೆಯಾಗಿರುತ್ತದೆ. ಅನೇಕ ಮಹತ್ವದ ಘಟನೆಗಳು ನಡೆದುಹೋದಾಗ ಯಾವುದನ್ನು ಆಯ್ದುಕೊಳ್ಳಬೇಕೆಂಬ ಸಮಸ್ಯೆಯೂ ಎದುರಾಗುತ್ತದೆ.* ಆದರೆ, ಇಂಥ ಎಲ್ಲ ಸಂದರ್ಭಗಳಲ್ಲಿಯೂ ಅವರ ಆಯ್ಕೆ ನಮ್ಮನ್ನು ಅಚ್ಚರಿಗೊಳಿಸುತ್ತದೆ. ಜನತೆಯ ಅಭಿರುಚಿಯನ್ನು ಪರಿಷ್ಕರಿಸುವಂಥ ಕಾರ್ಯವನ್ನು ಸಾಹಿತಿ ಕೈಗೆತ್ತಿಕೊಳ್ಳಬೇಕೆಂಬ ಎಲಿಯಟ್ಟನ ಸೂಕ್ತಿಯನ್ನು ಸಮರ್ಥಿಸುವಂತೆ ಅವರು ವಿಷಯಗಳನ್ನು ಆಯ್ದಿರುತ್ತಾರೆ. ಸಂಗ್ರಹಿಸುವ ಮಾಹಿತಿಯಂತೂ ನಮ್ಮನ್ನು ದಿಗ್ಭ್ರಮೆಗೊಳಿಸುವಂತಿರುತ್ತದೆ :

> "ಸಾಮಾನ್ಯವಾಗಿ ಅಂಕಣಬರಹಗಳನ್ನು ಪತ್ರಿಕಾ ಸಾಹಿತ್ಯವೆಂದೂ, ಪತ್ರಿಕಾ ಸಾಹಿತ್ಯವನ್ನು ಅವಸರದ ಸೃಷ್ಟಿಯೆಂದೂ ಕೆಲವರು ಜರಿಯುತ್ತಾರೆ; ಅದು ಸಾಹಿತ್ಯ ಅಲ್ಲವೆಂದೂ, ಕಲೆಯಾಗಲಾರದೆಂದೂ ಅಭಿಪ್ರಾಯಪಡುತ್ತಾರೆ. ಅಂಕಣಗಳು ಪತ್ರಿಕೆಗಳಲ್ಲಿ, ನಿಯತಕಾಲಿಕಗಳಲ್ಲಿ ಪ್ರಕಟವಾಗುವುದು ನಿಜ. ಅವು ನಿಯತ ಕಾಲದಲ್ಲಿ ಸಿದ್ಧಗೊಳ್ಳಬೇಕೆಂಬುದೂ ನಿಜ. ಅಂದ ಮಾತ್ರಕ್ಕೆ ಅವು ಮೌಲಿಕವಲ್ಲ ಎನ್ನುವುದು ಮಾತ್ರ

---

* ಅಂಕಣಬರೆಹದ ನಿರ್ಬಂಧಗಳನ್ನೂ, ಸೀಮಿತಗಳನ್ನೂ, ಅದರ ಬಗೆಗಿನ ಆಕ್ಷೇಪಗಳನ್ನೂ, ಅದರ ಸಾಧ್ಯಾಸಾಧ್ಯತೆಗಳನ್ನೂ ಇತರರಿಗಿಂತ ಚೆನ್ನಾಗಿ ಹಾಮಾನಾ ಅವರೇ ಬಲ್ಲವರಾಗಿದ್ದಾರೆ. ಅಂಕಣಬರೆಹವನ್ನು ಕುರಿತ, ಅದೇ ಹೆಸರಿನ ಅಂಕಣಲೇಖನದಲ್ಲಿ ಅವರು ಹೇಳಿರುವ ಮಾತುಗಳು ಈ ದೃಷ್ಟಿಯಿಂದ ತುಂಬ ಗಮನಾರ್ಹವಾಗಿವೆ.

ಸರಿಯಲ್ಲ. ಅದು ಮೌಲಿಕವೆ, ಅಲ್ಲವೆ ಎನ್ನುವುದು ಅಂಕಣಕಾರನ ಶಕ್ತಿ ಸಾಮರ್ಥ್ಯಗಳನ್ನೂ ಅವಲಂಬಿಸಿರುತ್ತದೆ. ಸೃಜನಶೀಲ ಸಾಹಿತ್ಯ ಎಂಬ ಹೆಸರಿನಲ್ಲಿ ಪ್ರಕಟವಾಗುವುದೆಲ್ಲ ಹೇಗೆ ಶ್ರೇಷ್ಠವಾಗಲಾರದೋ ಹಾಗೆಯೇ ಅಂಕಣಬರಹವೆಲ್ಲ ಶ್ರೇಷ್ಠವಾಗಿರುವುದೂ ಸಾಧ್ಯವಿಲ್ಲ. ಆದರೆ ಅದು ಅಂಕಣಬರಹ ಆದ ಮಾತ್ರಕ್ಕೆ ತನ್ನೆಲ್ಲ ಮೌಲಿಕತೆಯನ್ನೂ ಕಳೆದುಕೊಳ್ಳುವುದಿಲ್ಲ ಎಂಬುದನ್ನು ಮರೆಯಬಾರದು. ಕಲೆ ಕಲಾವಿದನ ಸೃಷ್ಟಿ; ಕಲೆಯ ಮಹತ್ವ ಕಲಾವಿದನ ಶಕ್ತಿಯನ್ನು ಅವಲಂಬಿಸಿರುತ್ತದೆ'.

ಮಾಹಿತಿಯನ್ನು ಅವರು ಹೇಗೆ ಕಲೆಯಾಗಿಸುತ್ತಾರೆ ಎಂಬುದಕ್ಕೆ ಅವರದೇ ಆದ ಒಂದು ನಿದರ್ಶನವನ್ನು ಕೊಡಬಯಸುತ್ತೇನೆ. ಅದು ಅವರಿಗೆ ರಾಜ್ಯ ಪ್ರಶಸ್ತಿ ಬಂದಿದ್ದ ಸಂದರ್ಭ. ಅವರಲ್ಲಿ ಮುಚ್ಚುಮರೆ ಏನೂ ಇಲ್ಲದಿರುವುದರಿಂದ ಧೈರ್ಯವಾಗಿ ಹೇಳುತ್ತಾರೆ. ಆ ಪ್ರಸಂಗ ಹೀಗಿದೆ:

"ಕೆಲವು ವರ್ಷಗಳ ಕೆಳಗೆ ನನಗೂ ಈ ರಾಜ್ಯಪ್ರಶಸ್ತಿ ಬಂದಿತ್ತು. ಆಗ ಅದರೊಡನೆ ಐದುಸಾವಿರ ರೂಪಾಯಿಗಳನ್ನು ಕೊಡುತ್ತಿದ್ದರು. ನಾನು ಆ ಹಣವನ್ನು ತೆಗೆದುಕೊಳ್ಳಬಾರದೆಂದು ನಿರ್ಧರಿಸಿದೆ. ಸರ್ಕಾರದ ಆಯ್ಕೆಯ ಕ್ರಮಕ್ಕೆ ನನ್ನ ವಿರೋಧವಿತ್ತು. ಆಗ ನನ್ನ ಪ್ರಿಯ ಮಿತ್ರರಾದ ಸುಪ್ರಸಿದ್ಧ ಲೇಖಕರೊಬ್ಬರು ನನ್ನೊಡನೆ ಬಹುವಾಗಿ ಚರ್ಚಿಸಿ ನಾನು ಆ ಹಣವನ್ನು ಪಡೆಯುವಂತೆ ಮನವೊಲಿಸಲು ಯತ್ನಿಸಿದರು. 'ನಿಮ್ಮ ನಿಲುವು ನಿಮಗೆ ಸರಿ. ಆದರೆ, ಮುಂದೆ ಈ ಪ್ರಶಸ್ತಿ ಸ್ವೀಕರಿಸುವವರನ್ನು ನೀವು ಪೇಚಿಗೆ ಸಿಕ್ಕಿಸುತ್ತಿದ್ದೀರಿ. ಹಾಗೆ ಮಾಡಬೇಡಿ' ಎಂಬುದು ಅವರ ಮಾತಾಗಿತ್ತು. ನಾನು ಅವರಿಗೆ ಒಂದೇ ಮಾತು ಹೇಳಿದೆ. 'ನಾನು ತೀರ್ಮಾನ ತೆಗೆದುಕೊಂಡಿದ್ದೇನೆ. ನನ್ನ ಮನಸ್ಸೇ ನನಗೆ ಒಡೆಯ'. ಮುಖ್ಯಮಂತ್ರಿಗಳು ನನಗೆ ಸೂಚಿಸಿದ್ದರು: 'ನೀವು ಹಣ ತೆಗೆದುಕೊಂಡು ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ದಾನ ಮಾಡಿಬಿಡಿ'. ನಾನು ಅವರಿಗೆ ಹೇಳಿದೆ: 'ಸರ್ಕಾರದ ದಾಖಲೆಗಳಲ್ಲಿ ನಾನು ಹಣ ಪಡೆದದ್ದು ಉಲ್ಲೇಖವಾಗುತ್ತದೆ. ಅದು ನನಗೆ ಇಷ್ಟವಿಲ್ಲ. ಆದ್ದರಿಂದ ನಾನು ಹಾಗೆ ಮಾಡಲಾರೆ".

ಈ ವಸ್ತುಸ್ಥಿತಿಯ ವರ್ಣನೆ ನೀರಸವಾಗಿ ಕೊನೆಗೊಳ್ಳಬಹುದಾಗಿತ್ತು. ಹಾಗಷ್ಟೇ ಆಗಿದ್ದರೆ ಅದು ಯಾವುದೋ ಒಂದು ಬಗೆಯ ಧೋರಣೆ ಎಂದೂ ಎನ್ನಿಸಿಕೊಳ್ಳಬಹುದಾಗಿತ್ತು. ಆದರೆ,

'ಮರುವರ್ಷ ನನ್ನ ಆ ಸ್ನೇಹಿತರಿಗೆ ರಾಜ್ಯಪ್ರಶಸ್ತಿ ಬಂತು. ಅವರು ಐದುಸಾವಿರ ರೂಪಾಯಿಗಳನ್ನೂ ಪಡೆದರು. ಅವರು ಪೇಚಿಗೆ ಸಿಕ್ಕಿದಂತೆ ನನಗೇನೂ ತೋರಲಿಲ್ಲ. ಅವರಿಗೂ ಅವರ ಮನಸ್ಸೇ ಒಡೆಯ! ಅದನ್ನು ಯಾರು ಪ್ರಶ್ನಿಸಲಾರರು. ಪ್ರಶಸ್ತಿಗಳ ಬೆನ್ನು ಹತ್ತುವವರಿಗೂ ಒಂದು ಮನಸ್ಸು ಇದೆಯಲ್ಲ!"

ಎಂಬ ಈ ಮಾತು ನವಿರಾದ ಹಾಸ್ಯ ಮತ್ತು ವ್ಯಂಗ್ಯದ ಪರಿಣಾಮಕಾರಿ ಅಂತ್ಯವನ್ನು ತಂದುಕೊಟ್ಟು ಇಡೀ ಪ್ರಸಂಗವನ್ನು ಕಲಾತ್ಮಕವಾಗಿಸಿಬಿಡುತ್ತದೆ.

ಅವರ ಅಂಕಣಬರೆಹಗಳಲ್ಲಿ ಹಾ.ಮಾ.ನಾ. 'ಹಾಮಾನಾ ಅವರ ಪ್ರಕ್ಷೇಪಣ' (projection) ಅನೇಕರು ಹುಬ್ಬೇರಿಸುವಂತೆ ಮಾಡಿರುವುದೂ ಉಂಟು. "ಅವರು ಹಿಂದೆ ನಿಂತು, ಪ್ರತಿಪಾದ್ಯ ವಸ್ತು ಅಥವಾ ವ್ಯಕ್ತಿಯನ್ನು ಮುಂದೆ ಮಾಡಬೇಕಾಗಿತ್ತು" ಎಂದು ಆಕ್ಷೇಪಿಸಿರುವುದೂ ಉಂಟು. ಆದರೆ, ಇದೇ ಹಾ.ಮಾ.ನಾ. ಅವರ ಅಂಕಣಗಳ ಒಂದು ವೈಶಿಷ್ಟ್ಯ. ಅವರ ಬರೆಹಗಳಲ್ಲಿ ಕಾಣಿಸಿಕೊಳ್ಳುವ ಅನೇಕ ವ್ಯಕ್ತಿಗಳ, ಪ್ರಸಂಗಗಳ ವೈಯಕ್ತಿಕ ಪರಿಚಯ. ಸಂಪರ್ಕ ಅವರಿಗೆ ಏರ್ಪಟ್ಟಿರುವುದೇ ಇದಕ್ಕೆ ಕಾರಣ. ಇದರಿಂದಾಗಿ, ಆ ಬರೆಹಗಳಿಗೆ ಒಂದು ಬಗೆಯ ವೈಯಕ್ತಿಕ ಸಂಸ್ಪರ್ಶ (personal touch) ಮತ್ತು ಆತ್ಮೀಯತೆ ಉಂಟಾಗಿದೆ, ಉಂಟಾಗುತ್ತದೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಅವರ ಅಂಕಣದ ಒಂದು ತಂತ್ರವಾಗಿಯೂ ಇದನ್ನು ನಾವು ಪರಿಗಣಿಸಬೇಕಾಗುತ್ತದೆ. ಇದರ ಬಗ್ಗೆ ಅವರೇ ಹೀಗೆ ಹೇಳಿಕೊಂಡಿದ್ದಾರೆ: "ಅಂಕಣ ಬರಹಗಳನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸಬಹುದೆಂದು ತೋರುತ್ತದೆ. ಒಂದು ಬಗೆಯದು, ಎಲ್ಲ ಬರಹಗಳಂತೆ ಸಾಮಾನ್ಯವಾದ ಬರಹ. ಇನ್ನೊಂದು ಬಗೆಯದು ಸ್ವಂತ ಅಂಕಣ. ಇದು ಅಂಕಣಕಾರನ ಸ್ವಂತ ಅನುಭವದ ಚಿತ್ರಣ. ಇದರಲ್ಲಿ ಆಗಾಗ 'ನಾನು' ಎಂಬುದು ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಈ ನಾನು ಅನುಭವದ ಭಾಗಿತ್ವವನ್ನು ಹೇಳುತ್ತದೆಯೇ ಹೊರತು, ಲೇಖಕನ ಅಹಂಕಾರವನ್ನು ಸೂಚಿಸುವುದಿಲ್ಲ. ಇಂಥ ಅಂಕಣ ಆತ್ಮೀಯ ಬರಹವಾಗುತ್ತದೆ. ಲೇಖನಕ್ಕೂ ಓದುಗನಿಗೂ ಅಂಕಣಕಾರ ಸೇತುವೆಯಾಗಿ ನಿಲ್ಲುತ್ತಾನೆ. ಇದರಿಂದ ಬರಹದ ಸ್ವಾರಸ್ಯ ಸಹಜವಾಗಿಯೇ ಹಿಗ್ಗುತ್ತದೆ".

ಹಾ.ಮಾ.ನಾ. ಅವರ ಸೃಜನಶೀಲ ವ್ಯಕ್ತಿತ್ವ ಎಂಥ ಸುಂದರ ಶಬ್ದಚಿತ್ರಗಳನ್ನು ಸೃಷ್ಟಿಸಿ ಓದುಗರ ಹೃನ್ಮನಗಳನ್ನು

ಸೂರೆಗೊಳ್ಳುತ್ತದೆಂಬುದಕ್ಕೆ ನೂರಾರು ನಿದರ್ಶನಗಳು ಸಿಗುತ್ತವೆ - ಯಾವುದನ್ನು ಆಯುವುದು ಎಂಬುದೇ ಸಮಸ್ಯೆಯಾಗುವಷ್ಟರ ಮಟ್ಟಿಗೆ. ಉದಾಹರಣೆಗೆ,

ಟಿ. ಎಸ್. ವೆಂಕಣ್ಣಯ್ಯನವರನ್ನು ಕುರಿತ ಅಂಕಣದಲ್ಲಿನ -

"ಅನೇಕ ಅನುಭವಗಳು ದಂತಕಥೆಗಳಂತೆ ತೋರುತ್ತವೆ. ಅದೇ ವೆಂಕಣ್ಣಯ್ಯನವರ ವ್ಯಕ್ತಿತ್ವದ ಹೆಚ್ಚಳ. ಅವರು ಕಲ್ಲು ಹೃದಯದವರೆಂದು ಕಾಣುವಷ್ಟರ ಮಟ್ಟಿಗೆ ಸ್ಥಿತಪ್ರಜ್ಞರು; ವ್ಯವಹಾರಶೂನ್ಯರೆಂಬ ಮಟ್ಟಿಗೆ ಉದಾರಚಿತ್ತರು; ತಮ್ಮದೇನೂ ಇಲ್ಲವೇನೋ ಎನ್ನುವಷ್ಟು ಮಟ್ಟಿಗೆ ಅನ್ಯರ ಕಷ್ಟಸಂಕಟಗಳಲ್ಲಿ ಪಾಲುದಾರರು. ಅವರಿಂದ ನೆರವು ಪಡೆದವರು, ಪ್ರೋತ್ಸಾಹ ಪಡೆದವರು, ಅನ್ನ ಪಡೆದವರು ಅದೆಷ್ಟೋ ಜನ. ವೆಂಕಣ್ಣಯ್ಯನವರು ಅವರ ಲೆಕ್ಕ ಇಡಲಿಲ್ಲ. ತಾವು ಏನು ಮಾಡುತ್ತಿದ್ದರೋ ಅದು ಇನ್ನೊಬ್ಬರಿಗೆ ಗೊತ್ತಾಗದಿರುವಂತೆ ಅವರು ಎಚ್ಚರ ವಹಿಸುತ್ತಿದ್ದರು".

- ಈ ಮಾತುಗಳಾಗಲೀ,

"ಠಾಕೂರರು ಒಂದು ಮಹಾಪರ್ವತ; ಒಂದು ಕಡಲು. ನಾವು ಪರ್ವತದ ಬುಡದಲ್ಲಿ ನಿಂತು ನೋಡಿದರೆ ಆ ನೋಟಕ್ಕೆ ಕೊನೆ ಇರುವುದಿಲ್ಲ. ಎಲ್ಲಿ ನಿಂತು ನೋಡುತ್ತಿದ್ದೇವೆ, ಯಾವ ಭಾಗ ನೋಡುತ್ತಿದ್ದೇವೆ ಎಂಬುದನ್ನು ಆಧರಿಸಿರುತ್ತದೆ ಆ ನೋಟ. ಕಡಲ ದಡದಲ್ಲಿ ನಿಂತವರಿಗೆ ಅದರ ಕೊನೆ ಕಾಣುವುದಿಲ್ಲ....."

"ಹೃದಯಗಳು ಹರಿದು ಹೋಗಿರುವ ಈ ಕಾಲದಲ್ಲಿ ಅವನ್ನು ಸೇರಿಸುವ ಮಾಂತ್ರಿಕಶಕ್ತಿ ಠಾಕೂರರ ಸೃಷ್ಟಿಯಲ್ಲಿದೆ. ಗೋಡೆಗಳನ್ನು ಕಟ್ಟುವ ಚಿತ್ತವೃತ್ತಿ ಬೆಳೆಯುತ್ತಿರುವ ಈ ದಿನಗಳಲ್ಲಿ ವಿಶ್ವಮಾನವನ ದನಿ ಅವರ ವಿಚಾರಗಳಲ್ಲಿವೆ. ಜಗತ್ತು ವಿನಾಶದ ಅಂಚನ್ನು ಮುಟ್ಟುತ್ತಿದೆಯೋ ಎಂಬ ಭಯ ಕಾಡುತ್ತಿರುವ ನಮ್ಮ ಸಂದರ್ಭದಲ್ಲಿ ಠಾಕೂರರ ಕಾವ್ಯ ಭರವಸೆಯನ್ನು ಕೊಡುತ್ತದೆ. ನಾವು ಒಬ್ಬರೆ ಇರಬಹುದು. ಆದರೆ ತಲೆ ಎತ್ತಿ ನಿಲ್ಲಲು ಕಲಿತು ನಡೆಯಬೇಕು. ಇದು ಕವಿಯ ಸಂದೇಶ...."

- ಎಂಬ ಸಮಾಪನ ಭಾಗವಾಗಲೀ ಹಾ.ಮಾ.ನಾ. ಅವರ ಸೃಜನಶೀಲತೆಗೆ ಕನ್ನಡಿ ಹಿಡಿಯುತ್ತವೆ; ಮಾಹಿತಿ, ಸಂಶೋಧನೆ, ವಿಮರ್ಶೆ ಮತ್ತು ಸೃಜನಶೀಲತೆಗಳು ಅವರಲ್ಲಿ ಹೇಗೆ ಸಂಗಮಿಸಿವೆ ಎಂಬುದಕ್ಕೆ ಸಾಕ್ಷಿಯಾಗುತ್ತವೆ, ಇದೇ ಅವರ ಬರೆಹವನ್ನು ಪತ್ರಿಕಾ ಸಾಹಿತ್ಯದಂತೆ ಕೇವಲ ಸಾಮೂಹಿಕ ಸಾಹಿತ್ಯವಾಗಿಸದೆ, ಸಾರ್ವಕಾಲಿಕ ಸಾಹಿತ್ಯವಾಗಿಸುವ ರಹಸ್ಯ.

ಇತರ ಅಂಕಣಕಾರರಲ್ಲಿ ಅಷ್ಟಿಷ್ಟು ಮಾಹಿತಿ ಇರಬಹುದು; ಸಾಹಿತ್ಯ ಗುಣವೂ ಕ್ವಚಿತ್ತಾಗಿ ಕಾಣಬಹುದು. ಆದರೆ, ಹಾ.ಮಾ.ನಾ. ಮಾಹಿತಿಗೆ ಕಲಾತ್ಮಕ ಸೌಂದರ್ಯವನ್ನು, ಸಾಹಿತ್ಯಿಕ ಮೇಲ್ಮೆಯನ್ನು, ಸಮತೋಲನದ ಶ್ರೇಷ್ಠತೆಯನ್ನು, ವಸ್ತುನಿಷ್ಠ ಪರಿಪ್ರೇಕ್ಷ್ಯವನ್ನು ತಂದುಕೊಟ್ಟಿದ್ದಾರೆ.* ಇದು ಅತ್ಯಂತ ಅಧಿಕೃತವಾದ ಸಾಂಸ್ಕೃತಿಕ ಸಾಹಿತ್ಯಿಕ ದಾಖಲೆಯಾಗಿ ಉಳಿಯುತ್ತದೆ. ಉಪಕಾರಕವಾದ, ಉದ್ಬೋಧಕವಾದ, ಉದ್ಧಾರಕವಾದ ಶಕ್ತಿಯಾಗಿ ಉಳಿಯುತ್ತದೆ.

ಆಕರಗಳ ದೋಷದಿಂದ, ಕೆಲವೊಮ್ಮೆ ಕಣ್ತಪ್ಪಿನಿಂದಲೂ, ಕೆಲವೊಂದು ತಪ್ಪುಗಳು ನುಸುಳಿಕೊಂಡಿರಬಹುದಾದರೂ ಇಂಥ ಕೆಲವು ಲೋಪದೋಷಗಳು ಪ್ರಕಟಣೆಯ ಅನಂತರದಲ್ಲಿ ತಮ್ಮ ಗಮನಕ್ಕೆ ಬಂದಾಗ, ಅವನ್ನು ಅವರು ಖಂಡಿತವಾಗಿಯೂ ಒಪ್ಪಿ ತಿದ್ದಿಕೊಂಡಿರುವುದುಂಟು. ಕೆಲವು ಸಂದರ್ಭಗಳಲ್ಲಿ ಅಧಿಕೃತವೆಂದು ಭಾವಿಸಿದ ಆಕರಗಳಲ್ಲಿಯೇ ಅಂಥ ತಪ್ಪು ಉಲ್ಲೇಖಗಳು ಕಾಣಿಸಿಕೊಂಡಿದ್ದು, ಅವು ಹಾ.ಮಾ.ನಾ. ಅವರನ್ನು ಮೋಸಗೊಳಿಸಿರುವ ಸಂದರ್ಭಗಳೂ ಉಂಟು. ಹಾಗೆಂದು ದೋಷವರ್ಗಾವಣೆಯಿಂದ ತಮ್ಮ ಜವಾಬ್ದಾರಿಯನ್ನು ನೀಗಿಸಿಕೊಳ್ಳುವ ಜಾಯಮಾನವೇನೂ ಹಾಮಾನಾ ಅವರದ್ದಲ್ಲ. ಅದು ಆ ಸಂದರ್ಭಗಳು ಒಡ್ಡುವ ಸೀಮಿತತೆಯ ನಿದರ್ಶನಗಳು ಅಷ್ಟೆ.

ಕೊನೆಯದಾಗಿ, ಇನ್ನೊಂದು ಅಂಶವನ್ನು ಪ್ರಸ್ತಾವಿಸಬೇಕು. 'ಸಂಪ್ರತಿ' ಕೇಂದ್ರ ಸಾಹಿತ್ಯ ಅಕಾಡೆಮಿಯ ಸಾಹಿತ್ಯಿಕ ಪ್ರಶಸ್ತಿಯನ್ನು ಪಡೆದ ಕೃತಿಯಷ್ಟೇ. ಇದರಿಂದಾಗಿ, 'ಅಂಕಣಬರೆಹ ಎಲ್ಲಿಯಾದರೂ ಸಾಹಿತ್ಯ ಅನ್ನಿಸಿಕೊಳ್ಳುತ್ತದೆಯೇ?' ಎಂದು ಕೆಲವು ವ್ಯಕ್ತಿಗಳು ಸಂದೇಹಿಸಿದ್ದೂ, ಆ ಮೂಲಕ 'ಸಾಹಿತ್ಯೇತರ ಕೃತಿ'ಯೊಂದಕ್ಕೆ ಪ್ರಶಸ್ತಿ ನೀಡಿದ್ದು ಸರಿಯಲ್ಲ ಎಂಬ ಅನಿಸಿಕೆಗಳನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ತೇಲಿಬಿಟ್ಟಿದ್ದೂ ಉಂಟು. ಜಾಗತಿಕ ಸಾಹಿತ್ಯೇತಿಹಾಸದಲ್ಲಿನ ಬೆಳವಣಿಗೆಯನ್ನು ದೃಷ್ಟಿಯಲ್ಲಿರಿಸಿಕೊಂಡು ಹಾ.ಮಾ.ನಾ. ಅವರೇ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಟ್ಟಿದ್ದಾರೆ. ಹೀಗಾಗಿ ಅವರ ಈ

---

* ಅಂಕಣಬರೆಹದ ಈ ವೈಶಿಷ್ಟ್ಯವನ್ನು ಹಾ.ಮಾ.ನಾ. ತಮ್ಮದೇ ಆದ ರೀತಿಯಲ್ಲಿ ಸ್ಪಷ್ಟಪಡಿಸಿದ್ದಾರೆ. ಅವರೆನ್ನುತ್ತಾರೆ: "ಸಾಮೂಹಿಕವಾದದ್ದು ಮರೆಯಾಗುತ್ತದೆ; ಶಾಶ್ವತ ಚಿಂತನೆ ಚಿರವಾಗುತ್ತದೆ. ಜನಪ್ರಿಯತೆಯಿಂದ ಯಾವ ಕೃತಿಯೂ ಮೌಲಿಕವಾಗಿ ಕುಗ್ಗುವುದಲ್ಲ. ಜನಪ್ರಿಯವಾಗದ್ದೆಲ್ಲ ಶ್ರೇಷ್ಠವಲ್ಲ! ಅಂಕಣಬರಹಗಳನ್ನು ಈ ದೃಷ್ಟಿಯಿಂದ ನೋಡಬೇಕು. ಅತ್ಯುತ್ತಮ ಸಾಹಿತ್ಯ ಯಾವುದರಿಂದ ಲಭಿಸುತ್ತದೆಂದು ನಾವು ಭಾವಿಸುತ್ತೇವೆಯೋ, ಆ ಗುಣಗಳು ಅಂಕಣಬರಹದಲ್ಲಿಯೂ ಕಾಣಿಸಿಕೊಂಡಾಗ ಅದೇಕೆ ಉತ್ತಮ ಸಾಹಿತ್ಯವಾಗುವುದಿಲ್ಲ?"

ಮಾತನ್ನು ಉದ್ಧರಿಸಿದರೆ ಸಾಕಾಗುತ್ತದೆ: "ಸಾಹಿತ್ಯ ಅಕಾಡೆಮಿ ಅಂಕಣಬರಹಗಳನ್ನು ಪುರಸ್ಕರಿಸಬಹುದೇ ಎಂಬ ವಾದವೊಂದುಂಟು ಎಂಬುದು ನನಗೆ ಗೊತ್ತಿದೆ. ಅಕಾಡೆಮಿ ಅಂಕಣಬರಹಗಳ ಸಾಹಿತ್ಯಿಕ ಗುಣವನ್ನಷ್ಟೆ ಪುರಸ್ಕರಿಸುತ್ತದೆ ಎಂದು ನನ್ನ ಭಾವನೆ. ಒಂದು ಹೊಸ ಪ್ರಯೋಗ ನಡೆವಾಗ ಅದನ್ನು ಎಲ್ಲರೂ ಮೆಚ್ಚುತ್ತಾರೆ, ಆದರಿಸುತ್ತಾರೆ ಎಂದು ತಿಳಿಯುವುದು ತಪ್ಪು. ಮಹಾಕಾವ್ಯಗಳಿಗಿಂತಲೂ ರುದ್ರ ನಾಟಕವೇ ಹೆಚ್ಚು ಸಾಹಿತ್ಯಿಕವಾದದ್ದು ಎಂದು ಅರಿಸ್ಟಾಟಲ್ ವಾದಿಸುತ್ತಾನೆ. ಕಾದಂಬರಿ ಪ್ರಕಾರ ರೂಪುಗೊಂಡಾಗ ಅದನ್ನು 'ಕಲೆ'ಯೆಂದು ಕರೆಯಲಾಗದೆ 'ಅರ್ಧ ಕಲೆ' ಎಂದವರುಂಟು. ನಮ್ಮಲ್ಲೇ, ನಮ್ಮ ಕನ್ನಡದಲ್ಲೇ ಗೋವಿಂದ ಪೈ ಅವರಂಥವರು ಪ್ರಾಸವನ್ನು ತ್ಯಜಿಸಿ ಪದ್ಯ ಬರೆದಾಗ ಅದು ಕಾವ್ಯವಲ್ಲ ಎಂದವರಿದ್ದಾರೆ. ಪಂಜೆ ಮಂಗೇಶರಾಯರಂಥವರು ಲಲಿತ ಪ್ರಬಂಧದ ಬರವಣಿಗೆಗೆ ತೊಡಗಿದ ಸಂದರ್ಭದಲ್ಲಿ 'ಇದು ಸಾಹಿತ್ಯವೆ?' ಎಂದು ಮೂಗು ಮುರಿದವರೂ ಇದ್ದಾರೆ! ಇಂದಲ್ಲ ನಾಳೆ ಅಂಕಣಬರಹವೂ ಒಂದು ಸಾಹಿತ್ಯ ಪ್ರಕಾರವೆಂದು ಸ್ಥಾಪಿತವಾಗುತ್ತದೆ. 'ಅವಸರದ ಸಾಹಿತ್ಯ' ಎಂದು ಟೀಕೆಗೊಳ್ಳುವ ಬರಹ ಶಾಶ್ವತ ಸಾಹಿತ್ಯವೆನ್ನಿಸಿಕೊಳ್ಳುತ್ತದೆ ಎಂದು ನನ್ನ ನಿರೀಕ್ಷೆ".



ಅನುಬಂಧ (೧)

## ಏನೂ ಮಾಹಿತಿ ಸಿಕ್ಕದ ಪತ್ರಿಕೆಗಳು

ಅನುರೂಪ
ಅಪರ್ಣಾ
ಅಕ್ಷರಕ್ರಾಂತಿ
ಆಕಾಶದರ್ಶಕ
ಆರಕ್ಷ
ಇಂದಿನ ಭಾರತ
ಉದಯಭಾನು
ಎದುರು ಶನಿ
ಎಚ್ಚರಿಕೆ(ಬೆಂ.)
ಕಕ್ಕಯ್ಯ ಪ್ರಸಾದ
ಕಥಾಮಂಜರಿ
ಕನ್ನಡಕಾವ್ಯ ಸಂಕಲನ
ಕನ್ನಡ ಕಡುಗಲಿ(ಡಾ. ಗೇರಿ)
ಕನ್ನಡ ನಾಡು
ಕನ್ನಡ ಹಿರಿಮೆ(ಮೈ)
ಕನಸು ನೆನಸು
ಕಮಲ
ಕಲಾನಿಧಿ
ಕಲ್ಲುಸಕ್ಕರೆ
ಕಲಿಸಾರದ
ಕಲೆಗಾರ
ಕರುಣಾಮೃತ
ಕಾಂಚನಗಂಗಾ
ಕಾರ್ಯಕರ್ತ
ಕಾಲಚಕ್ರ
ಕಾಲಸೂಚಿ
ಕಾವ್ಯಭಾನು
ಕಾಳಿಂಗಸರ್ಪ
ಕುಬೇರವಾಣಿ
ಕೊಂಕುವಾಣಿ
ಕೋಮಲವಾಣಿ
ಕ್ರಾಂತಿಕಿರಣ
ಕ್ರಾಂತಿನಾಯಕ
ಗಣರಾಜ್ಯ
ಗುಂಡು
ಗುಡುಗು
ಗ್ರಾಮಗುಡಿ
ಚಂಡಮಾರುತ
ಚಂದ್ರದೀಪ
ಚಂದ್ರವಳ್ಳಿ
ಚಕ್ರಧಾರಿ
ಚಾಣಕ್ಯತಂತ್ರ
ಚಾಮುಂಡೇಶ್ವರಿ
ಚಿತ್ರಪ್ರಕಾಶ
ಚಿನ್ನದ ಗುಡಿ
ಚೂಡಾಮಣಿ
ಚೇತನಸ್ಫೂರ್ತಿ
ಭೂಬಾಣ
ಜನತಾ ಮೌಲ್ಯ
ಜನತಾ ಸಂಕಿರಣ
ಜನತಾ ಸೇವಾ
ಜನನಾಯಕ
ಜೀತ
ಜೀವನದರ್ಶಿ
ಜೈಶಕ್ತಿ
ಟಿಪ್ಪೂ ಟೈಮ್
ತಂಬೂರ ನ್ಯೂಸ್
ತರ್ತು ಪರಿಸ್ಥಿತಿ
ನಗರದಲ್ಲಿ ಇಂದು
ನಗರ ವಿಚಾರ
ನವೀನತೆ
ನವನವೀನ ಜಗತ್
ನೇತ್ರ
ನೇತ್ರಾವತಿ
ಪಂಚಕಲ್ಯಾಣ
ಪಂಚರತ್ನ
ಪಂಜು
ಪದ್ಮಪ್ರಭಾ
ಪರಿಣಾಮ
ಪರ್ವತವಾಣಿ
ಪರಿವರ್ತಕ
ಪವಿತ್ರ
ಪರಿಸ್ಥಿತಿ
ಫಲಿತಾಂಶ
ಪ್ರಚಂಡ ಭೈರವಿ
ಪ್ರಚಾರಕ್ರಾಂತಿ
ಪ್ರಣಾಮ
ಪ್ರಾಚೀನ ಚರಿತ್ರೆ
ಪುಣ್ಯಕೋಟಿ
ಪುಣ್ಯಪುರುಷ
ಪುಣ್ಯಭೂಮಿ
ಪ್ರೇಮಜ್ವಾಲೆ
ಬಂಧನ
ಬಜಂತ್ರಿಕೂಟ
ಬಡ ಬಾಡಿಗೆದಾರ
ಬಡ ರೈತ
ಬಲಿದಾನ
ಬಂಗಿಬಂಧು
ಭಾಗ್ಯವತಿ
ಭಾರತ ಸೇವಕ ಸಮಾಜ
ಭಾರತ ಕೇಸರಿ
ಭಾರತ ವೃಂದ
ಬುದ್ಧಜೀವಿ
ಬೆಟ್ಟದ ಹುಲಿ
ಭುವನೇಶ್ವರಿ
ಮದದಿನೀ
ಮರೆಯಾದ ವಾರ್ತೆ
ಮಹಿಳಾ ಅಭ್ಯುದಯ
ಮೃಡವಾಣಿ
ಯಾಜ್ಞವಲ್ಕ್ಯ
ರಂಗೋಲಿ
ರಕ್ತಕ್ರಾಂತಿ
ರಕ್ಷಣಾಸಂಕೇತ
ರಾಜಕೀಯ
ರಾಜವರ್ಧಿನೀ
ರಾಜ್ಯ ಉತ್ಥಾನ
ರಾಜ್ಯ ದೂತ
ರಾಷ್ಟ್ರಪ್ರೇಮಿ
ರಾಷ್ಟ್ರವಾಣಿ
ರಾಹುಕೇತು
ರೂಪತಾರಾ
ರೂಪಶಿಲ್ಪಿ
ಲೇಖಕಿ
ವೆಂಕಜ್ಯೋತಿ
ವರ್ಧಮಾನ
ವಾಯುವಾಣಿ
ವಾರ್ತಾಕಡಲು
ವೀರಖಡ್ಗ
ವಾರ್ತಾ ಪ್ರಪಂಚ
ವಿಚಾರವರ್ಧಿನಿ
ವಿನಾಯಕ
ವಿಶ್ವಮಂಗಲ
ವೀಕ್ಷಕ
ವೀರಖಡ್ಗ
ವೈಶಾಲಿ
ವೈಶ್ಯಸಮಾಜ
ಶಿಕ್ಷಣ ಸುಧಾರಕ
ಶುಕ್ರದೆಸೆ
ಶುಭಾಶಯ
ಶೂರ್ಪನಖಾ
ಶೈಲಿ
ಶ್ರಮಜೀವಿ
ಶ್ರೀಧರವಾಣಿ
ಶ್ರೀಪಾದ
ಶ್ರೀರಮಣ
ಶ್ರೀವೆಂಕಟೇಶ್ವರ
ಸನ್ಮಾನ
ಸಮತಾ
ಸಿಡಿಲಶಬ್ದ
ಸಮುದಾಯ
ಸುಭಾಷಿತ
ಸೇವಾಧರ್ಮ
ಸಿಟಿ ಸಮಾಚಾರ
ಸ್ವಯಂ ಸಹಾಯ
ಸ್ವಯಂ ಸೇವಕ
ಸ್ವಯಂಪ್ರಭಾ
ಸ್ವಯಂ ಸಿದ್ಧಾರ್ಥ
ಹಂಸಧ್ವನಿ
ಹಂಸಲೇಖ

---

ಸೂಚನೆ: ಈ ಪತ್ರಿಕೆಗಳ ಬಗ್ಗೆ ಮಾಹಿತಿ ಗೊತ್ತಿದ್ದವರು ಇಲ್ಲವೆ ಯಾವುದೊಂದು ಸಂಚಿಕೆ ಇಟ್ಟುಕೊಂಡವರು ದಯಮಾಡಿ ಸಂಪಾದಕರನ್ನು ಸಂಪರ್ಕಿಸುವುದು.

ಅನುಬಂಧ (೨)

## ಪತ್ರಿಕಾ ಸಂಪುಟಗಳ / ಸಂಚಿಕೆಗಳ ಲಭ್ಯತೆ

ಪ್ರಸ್ತಾವನೆಯಲ್ಲಿ ಹೇಳಿದಂತೆ, ಉಲ್ಲೇಖಿಗೊಂಡಿರುವ ಪತ್ರಿಕೆಗಳು ಯಾವುದೇ ಒಂದೆಡೆ ಶೇಕಡ ೫೦ಕ್ಕಿಂತ ಹೆಚ್ಚು ಸಿಗುವುದಿಲ್ಲ. ಯಾವುದೊಂದು ಪತ್ರಿಕೆ ಬೇಕೆಂದಾಗ ಕಿಂಚಿತ್ತಾದರೂ ನೆರವಾಗಲೆಂದು, ಅಂಥ ಆಕರಗಳನ್ನು ಇಲ್ಲಿ ಕಾಣಿಸಲಾಗಿದೆ.

ನಾಡಿನ, ಅದರಂತೆ ಹೊರನಾಡಿನ ಕನ್ನಡ ವಿಭಾಗಗಳಿರುವ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಲ್ಲಿ ಕೆಲವಾದರೂ ಬೈಂಡ್ ಮಾಡಿದ ಸಂಪುಟಗಳು ವ್ಯವಸ್ಥಿತವಾಗಿ ನೋಡಸಿಗುತ್ತವೆ. ವಿಶ್ವವಿದ್ಯಾಲಯದ ಕನ್ನಡ ವಿಭಾಗಗಳಲ್ಲಿಯೂ ದೊರೆಯಬಹುದು. ಉದಾ.ಗೆ ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ, ದ.ಕ. ಜಿಲ್ಲೆಯ 'ಸ್ವದೇಶಾಭಿಮಾನಿ' ಮತ್ತು 'ನವಯುಗ' ಎಂಬ ಪ್ರಸಿದ್ಧ ಪತ್ರಿಕೆಗಳ ನಾಲ್ಕು ದಶಕಗಳ ಕಾಲದ ಸಂಪುಟಗಳಿವೆ. ಧಾರವಾಡದ ವಿ.ಎಸ್. ಗಿಡ್ನವರ್ ಎನ್ನುವವರು ತಾವು ಚಂದಾಹಣ ಕೊಟ್ಟು ತರಿಸುತ್ತಿದ್ದ ಪತ್ರಿಕೆಗಳನ್ನು ಸೊಗಸಾಗಿ ಬೈಂಡ್ ಮಾಡಿಸಿ ಇರಿಸಿದ್ದವುಗಳೂ ಈ ಕನ್ನಡ ಅಧ್ಯಯನ ಕೇಂದ್ರದಲ್ಲಿವೆ.

ಕನ್ನಡಕ್ಕೆ ಪ್ರಾಧಾನ್ಯವಿರುವ ಕೆಲವು ಸಂಸ್ಥೆಗಳು, ವಿಶೇಷತಃ ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪಿತವಾದವುಗಳು ಅಪೂರ್ವ ಸಂಪುಟಗಳನ್ನೂ ಕಾಯ್ದಿರಿಸಿದ್ದಾರೆ. ಮೊದಲಲ್ಲಿ ಹೆಸರಿಸಬೇಕಾದವುಗಳೆಂದರೆ –ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ಇನ್ನಿತರ ಕೆಲವು ಸಂಸ್ಥೆಗಳಿವು:

ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ
ಮಿಥಿಕ್ ಸೊಸೈಟಿ, ಬೆಂಗಳೂರು
ಗೋಖಲೆ ಸಾರ್ವಜನಿಕ ಸಂಸ್ಥೆ, ಬೆಂಗಳೂರು
ತಮಿಳುನಾಡು ಆರ್ಕೈವ್ಸ್, ಚೆನ್ನೈ

ವಿದೇಶಗಳಲ್ಲಿ ಕನ್ನಡ ಪತ್ರಿಕಾ ಸಂಪುಟಗಳಿರುವುದು ಸಂತೋಷದ ಸಂಗತಿ. ಕನ್ನಡದ ಮೊತ್ತಮೊದಲಿನ ಪತ್ರಿಕೆ 'ಮಂಗಳೂರು ಸಮಾಚಾರ'ವು ಸಿಕ್ಕಿದ್ದು ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ. ಇಂಗ್ಲಂಡಿನಲ್ಲಿ, ಆಕ್ಸ್‌ಫರ್ಡ್ ವಿ.ವಿ. ಹಾಗೂ ಓರಿಯೆಂಟಲ್ ಎಂಡ್ ಆಫ್ರಿಕನ್ ಸ್ಟಡೀಸ್ ಇನ್‌ಸ್ಟಿಟ್ಯೂಟ್ ಮುಂತಾದ ಕಡೆಗಳಲ್ಲಿರುವ ಕನ್ನಡ ಪತ್ರಿಕೆಗಳ ಸಮೂಹ ಸೂಚಿಯನ್ನು ತಯಾರಿಸಿದ್ದಾರೆ. ಅದರಂತೆ ಬಾಸೆಲ್ ಮಿಶನ್ನಿನ ಆರ್ಕೈವ್ಸ್‌ನಲ್ಲಿಯೂ ಕೆಲವು ಮಹತ್ವಪೂರ್ಣ ಸಂಪುಟಗಳಿವೆ.

ಇನ್ನೀಗ ವ್ಯಕ್ತಿಗಳು. ವೈಯಕ್ತಿಕವಾಗಿ ಸಂಪುಟ ಸ್ವರೂಪದಲ್ಲಿ ಇರಿಸಿಕೊಂಡವರು ತೀರ ಕಡಿಮೆ. ಬಿಡಿ ಸಂಚಿಕೆಗಳು ಮಾತ್ರ ಅವರಿವರಲ್ಲಿ ಸಿಗುತ್ತವೆ. ನಮ್ಮ ಗಮನಕ್ಕೆ ಬಂದ ಅಂಥ ಕೆಲವರ ಹೆಸರುಗಳನ್ನು ಈ ಕೆಳಗೆ ಕೊಟ್ಟಿದೆ.

| | |
|---|---|
| ಉಮೇಶರಾವ್ ಎಕ್ಕಾರು | ಜವಳಿ ರಂಗರಾವ್, ತೀರ್ಥಹಳ್ಳಿ |
| ಟಿ.ಬಿ. ಕೇಶವರಾವ್, ಬಳ್ಳಾರಿ | ಬಿ.ವಿ. ಮೂರ್ತಿ, ಮೇಗರವಳ್ಳಿ |
| ಪಂಡಾರಿ ಚೆಲ್ಲಪ್ಪನ್ | ಬೆಳಗಲಿ ವಿನಾಯಕರಾವ್ ದೇಸಾಯಿ |
| ಬಿ. ಆರ್. ಲಕ್ಷ್ಮೀನಾರಾಯಣ, ಸಾಗರ | ಆರ್.ಜಿ. ರಾಯ್ಕರ್, ಶಿರಸಿ. |
| ಎಂ.ಎಸ್. ಸುಬ್ಬರಾವ್ | ರುಕ್ಮಿಣಿ ಉಡುಪ, ಕುಂದಾಪುರ |
| ಶ್ರೀನಿವಾಸ ಹಾವನೂರ | ಮೋಹನ ಹೆಗಡೆ |

ಸರಕಾರೀ ವಲಯದವೆಂದು, ಕರ್ನಾಟಕದ ಜಿಲ್ಲಾ ಗಜೆಟಿಯರುಗಳನ್ನು ಅವಶ್ಯವಾಗಿ ಪರಿಗಣಿಸಬೇಕು. ಅದರಂತೆ ದಿಲ್ಲಿಯಲ್ಲಿರುವ ಪತ್ರಿಕಾ ರಿಜಿಸ್ಟ್ರಾರರ ಕಚೇರಿಯಲ್ಲಿಯೂ ಹಳೆಯ. ಕನ್ನಡ ಪತ್ರಿಕೆಗಳ ಸಂಪುಟಗಳಿವೆ.

ಕೊನೆಯದಾಗಿ ಕಾಣಿಸಬೇಕಾದದ್ದು, ಪತ್ರಿಕಾ ಅಕಾಡೆಮಿಯವರು ಪ್ರಕಟಿಸಿದ ಪ್ರಕಟನೆಗಳು. ವಿಶೇಷತಃ (ಅ) ಪತ್ರಿಕಾಲೋಕದ ಧೀಮಂತರು (ಆ) ಕಾಲು ಶತಮಾನ ಕಂಡ ಕನ್ನಡ ಪತ್ರಿಕೆಗಳು, ಹಾಗೂ ಈಚೆಗೆ ಹೊರತಂದ (ಇ) ಜಿಲ್ಲಾವಾರು ಸಮೀಕ್ಷೆಯುಳ್ಳ ಕರ್ನಾಟಕ ಪತ್ರಿಕಾ ಇತಿಹಾಸದ ಸಂಪುಟಗಳು. ◆

# ಕನ್ನಡ ಪತ್ರಿಕಾ ಸೂಚಿ

**ಅಂಕುಶ** ಮರೇವಾಡ
ಮಾಸ ೩೨x೨೦ ಪು.೪

ಸುದ್ದಿ/ರಾಜಕೀಯ ೧೯೪೭ . .
--೭೮-?

ಸಂ. ಪ. ಚಂದಶೇಖರ ಗ ಹುರಳಿ
ಮು. ಲಲಿತ ಮುದಣಾಲಯ, ಧಾರವಾಡ.
೧

**ಅಂಚೆವಾಣಿ** ಬೆಂಗಳೂರು
ಮಾಸ ೨೪x೧೦ ಪು.೧೪

ಸುದ್ದಿ/ಅಂಚೆವಾರ್ತೆ ೧೯೫೯-೬೭ . .

ಸಂ. ರಾಮಚಂದ ರಾವ್ ಕೆ.
ಪ. ಬೆಂ. ವಲಯ ಅಂಚೆಯ ನೌಕರರ ಸಂಘ
ಮು. ಶೀ ಪವರ್ ಪೆಸ್, ಬೆಂಗಳೂರು.
೨

**ಅಂತರಂಗ** ಉಡುಪಿ
ವಾರ,ಮಾಸ ೨೪x೧೮ ಪು.೪೮

ಸಾಹಿತ್ಯ/ಸಮ್ಮಿಶ್ರ ೧೯೩೮-೪೯ . .

ಸ್ಥಾ. ವಿ. ಎಸ್. ಫಣಿಯಾಡಿ
ಸಂ. ಕೆ. ಎಚ್. ಶೆಟ್ಟಿ ಮತ್ತು ಎಂ. ಬಿ. ಹೆಗಡೆ
ಪ್ರ. ಪಿ. ವೆಂಕಟರಾಮಯ್ಯ, ಕೆ. ಹೈದರ್
ಮು. ಮಣಿಪಾಲ ಪವರ್ ಪೆಸ್, ಉಡುಪಿ.
೩

**ಅಕ್ಷರಾಂಜಲಿ** ಮೈಸೂರು
ಮಾಸ ೧೮x೧೨ ಪು.೩೨

ಸುದ್ದಿ/ಶೈಕ್ಷಣಿಕ ೧೯೧೫ . .

ಸಂ. ಯು. ಎಸ್. ಶೀಕಂಠಯ್ಯ
ಪ. ಅಕ್ಷರ ಶಾಲಾ, ಮೈಸೂರು.
ಮು. ಜಿ. ಟಿ. ಎ. ಪೆಸ್.
೪

**ಅಖಿಲ ಭಾರತ ಪತ್ರಿಕೆ** ಬೆಂಗಳೂರು
ಮಾಸ ೧೮x೧೨ ಪು.೪೦

ಅರವಿಂದ ಪಂಥ ೧೯೭೧ . .

ಸಂ. ಎಸ್. ಆರ್. ಮಳಗಿ (೧೯೯೬ರ ವರೆಗೆ)
ಪ. ರಸಿಕ ಕಾಮದಾರ/ಎಸ್. ವಿ. ಸಬನೀಸ
ಮು. ರಮೇಶ ಪಿಂಟಿಂಗ್ ಪೆಸ್, ಬೆಂಗಳೂರು.
ವಿ.ಮಾ. ಪಾಂಡಿಚೆರಿಯ ಅರವಿಂದಾಶ್ರಮದ ಮುಖಪತ್ರ.
ಅಲ್ಲಿಯ 'All India Magazine'ದ ಪತಿರೂಪ.
೫

**ಅಗ್ನಿ** ಮೂಲ್ಕಿ
ಪಕ್ಷ ೩೯x೨೫ ಪು.೮

ಸಮ್ಮಿಶ್ರ ೧೯೬೮ . .

ಸಂ. ಕೆ. ಎಮ್. ಜಿ. ಹುಸೇನ.
ಪ. ಅಗ್ನಿ ಕಾರ್ಯಾಲಯ, ಉಡುಪಿ.
ಮು. ಉದಯ ಪಿಂಟರ್ಸ್/ವಿಜಯ ಪಿಂಟರ್ಸ್, ಮಂಗಳೂರು.
೬

**ಅಜಂತ** ಕಾಸರಗೋಡು
ಮಾಸ ೧೮x೧೪ ಪು.೪೦

ಸಮ್ಮಿಶ್ರ ೧೯೬೬ . .

ಸಂ. ಎಂ. ವ್ಯಾಸ; ಎಂ. ಗಂಗಾಧರಭಟ್ಟ
ಪ. ಎಂ. ಶುಭಾಕರ ಶಾನಭಾಗ್
ಮು. ಶೀನಿವಾಸ ಮುದಣಾಲಯ, ಕಾಸರಗೋಡು.
೭

**ಅಡಿಕೆ ಸಂಚಿಕೆ** ಕೊಝಿಕೋಡು(ಕೇರಳ)
ತ್ರೈಮಾಸಿಕ ೨೭x೨೨ ಪು.೪೦

ಅಡಿಕೆ ಕೃಷಿ ೧೯೪೯-೬೦ . .

ಸಂ. ಬಿ. ಎಸ್. ವರದರಾಜನ್ (ಕಾರ್ಯದರ್ಶಿ)
ಪ. ಭಾರತ ಕೇಂದ ಅಡಿಕೆ ಸಮಿತಿ, ಕೊಝಿಕೋಡು.
೮

**ಅನಂತ ಚೈತನ್ಯ** ಅಶ್ವತ್ಥಪುರ (ದ.ಕ.)
ಮಾಸ ೨೧X೧೩ ಪು.೨೬

ಧಾರ್ಮಿಕ ೧೯೬೩ . .

ಸಂ. ವಿ. ಅಶ್ವತ್ಥಾಮ ಭಟ್ಟ; ಕೆ. ತಯಂಬಕರಾವ್
ಪ್ರ. ದೇಶಸ್ಥ ಬ್ರಾಹ್ಮಣ ಪರಿಷತ್ತು, ಅಶ್ವತ್ಥಪುರ.
ಮು. ವಿವೇಕಾನಂದ ಪ್ರೆಸ್, ಮೂಡಬಿದರೆ.
೯

**ಅನುಭವ ಮಂಟಪ** ವಿಜಾಪುರ
ಮಾಸ ೨೧X೧೨ ಪು.೪೮

ವೀರಶೈವ ೧೯೬೮ . .

ಸಂ. ಎಚ್. ಟಿ. ಸಾಸನೂರ; ಪಿ. ವಿ. ವಜ್ರಮಟ್ಟಿ
ಪ್ರ. ಗುರುಕುಲ ಪ್ರಕಾಶನ, ವಿಜಾಪುರ.
ಮು. ಶಕ್ತಿ ಮುದ್ರಣಾಲಯ; ಇತರ.
೧೦

**ಅಪ್ಸರಾ** ಮಂಗಳೂರು
ಪಕ್ಷ,ಮಾಸ ೨೦X೧೬ ಪು.೪೦

ಸಮ್ಮಿಶ್ರ ೧೯೬೧-೬೪ . .

ಸಂ.ಪ್ರ. ಎಂ. ಕೃಷ್ಣಗೋಪಾಲ; ವಹಾಬ ದೊಡ್ಡಮನಿ
ಮು. ಮಹಾವೀರ ಮುದ್ರಣಾಲಯ, ಮಂಗಳೂರು
ವಿ.ಮಾ. ಪಾಕ್ಷಿಕವಾಗಿ ಪ್ರಾರಂಭ. ೧೯೬೨ರಿಂದ ಮಾಸಪತ್ರಿಕೆಯಾಯಿತು.
೧೧

**ಅಭಯ** ಅಂಕೋಲಾ
ವಾರ ೩೨X೨೦ ಪು.೬

ಸುದ್ದಿ ೧೯೬೪ . .

ಮು. ಶ್ರೀರಾಮ ಪ್ರಿಂಟಿಂಗ್ ಪ್ರೆಸ್, ಕಾರವಾರ.
೧೨

**ಅಭಿರುಚಿ** ಗುಲಬರ್ಗಾ
ಮಾಸ ೨೨X೧೪ ಪು.೧೬

ಸಾಹಿತ್ಯ ೧೯೭೨ . .

ಸಂ.ಪ. ಅರವಿಂದ ಆರ್ಯ; ತುಳಸೀದೇವಿ
ಮು. ಚಂದನ ಪ್ರಿಂಟರ್ಸ್, ಗುಲಬರ್ಗಾ.
ವಿ.ಮಾ. ಕೆಲವು ಕಾಲದ ನಂತರ ರಾಯಚೂರಿನಿಂದ ಪ್ರಕಟವಾಗುತ್ತಿತ್ತು.
೧೩

**ಅಮರವಾಣಿ** ರಾಯಚೂರು
ಮಾಸ ೨೦X೧೨ ಪು.೪೮

ವೀರಶೈವ ೧೯೪೯ . .

ಸಂ. ಬಿ. ಎಂ. ವೀರೇಶ್ವರಶಾಸ್ತ್ರಿ, ಎಸ್. ಎಂ. ಹುಣಶ್ಯಾಳ
ಪ್ರ. ಎಸ್. ಶಿವಾನಂದ
ವಿ.ಮಾ. ಆರೋಗ್ಯ, ನಿಸರ್ಗವಾಣಿ, ಇತ್ಯಾದಿ ಶೀರ್ಷಿಕೆಗಳು ಇದ್ದವು. ಏಳು ಜನ ಪ್ರೊಫೆಸರರ ಸಲಹಾ ಮಂಡಳಿ ಇದ್ದಿತು.
೧೪

**ಅಮಾನತ್** ಮಂಗಳೂರು
ವಾರ ೩೮X೨೫ ಪು.೬

ಸಮ್ಮಿಶ್ರ ೧೫-೮-೧೯೭೦ . .

ಸಂ.ಪ್ರ. ಎಮ್. ರಹೀಮ್
ಮು. ಯುನಿವರ್ಸಿಟಿ ಪ್ರಿಂಟರ್ಸ್, ಮಂಗಳೂರು.
೧೫

**ಅಮೃತಾರ್ಪಣ** ಬೆಂಗಳೂರು
ವಾರ ೩೮X೨೫ ಪು.೪

ಸಮ್ಮಿಶ್ರ ೧೯೭೦ . .

ಸಂ.ಪ. ಕೆ. ಎನ್. ಅಡವೀಶಾಚಾರ್
ಮು. ಸಿದ್ಧಲಿಂಗೇಶ್ವರ ಮು. ಬೆಂಗಳೂರು.
೧೬

**ಅಮೆರಿಕನ್ ರಿಪೋರ್ಟರ್** ಮದ್ರಾಸ್
ಪಕ್ಷ ೪೧X೨೯ ಪು.೧೨

ಅಮೆರಿಕ-ಭಾರತ ಸಂಬಂಧ ೧೯೭೧ . .

ಸಂ. ಎಡ್ವರ್ಡ್ ಟಿ. ಕೊನಿಯನ್
ಪ. ಯು. ಎಸ್. ಐ. ಎಸ್. ಮದ್ರಾಸ್
ಮು. ವಡಪಳನಿ ಪ್ರೆಸ್, ಧರ್ಮಪ್ರಕಾಶ ಪ್ರೆಸ್
ವಿ.ಮಾ. ಭಾರತದ ಬೇರೆ ಭಾಷೆಗಳಲ್ಲಿಯೂ ಪ್ರಕಟನೆ.
೧೭

**ಅರುಣ** ಮಂಗಳೂರು
ಮಾಸ,ವಾರ ೩೬X೨೫ ಪು.೩೨/೮

ರಾಜಕೀಯ/ಕಮ್ಯೂನಿಜಮ್ ೧೯೪೭-೭೫ . .

ಸಂ.ಪ. ಯು. ಎನ್. ಶ್ರೀನಿವಾಸ ಭಟ್ಟ
ಮು. ಅರುಣ ಪ್ರೆಸ್, ಮಂಗಳೂರು.
ವಿ.ಮಾ. ೧೯೫೮ ಜನೆವರಿಯಿಂದ ವಾರಪತ್ರಿಕೆಯಾಗಿ.
೧೮

**ಅರುಣ** ಬೆಂಗಳೂರು
ಮಾಸ ೨೦x೧೩ ಪು.೨೬

ಸಮ್ಮಿಶ್ರ ೧೯೪೭-೭೭ . .

ಸಂ. ಎಸ್. ಆರ್. ಭಟ್ಟ
ಪ. ಎಂ. ಎಸ್. ಕೃಷ್ಣನ್.
ಮು. ಜನಶಕ್ತಿ ಪ್ರಿಂಟರ್ಸ್.
೧೯

**ಅರುಣ** ಮೈಸೂರು
ದಿನ ೩೬x೫೫ ಪು.೨

ಸುದ್ದಿ ೧೯೪೭-೭೯ . .

ಸಂ. ಎಚ್. ಕೆ. ಕುಮಾರಸ್ವಾಮಿ.
ಪ. ಕೆ. ರಾಮಣ್ಣ.
ಮು. ಕುಮಾರ ಮುದ್ರಣ; ಅರುಣ ಮುದ್ರಣಾಲಯ (೧೯೪೮ರಿಂದ)
ವಿ.ಮಾ. ೧೯೭೭ರಂದು ರಜತ ಮಹೋತ್ಸವ.
೨೦

**ಅರುಣೋದಯ** ಬೆಂಗಳೂರು
ಮಾಸ ೧೮x೧೨ ಪು.೩೦

ಕ್ರೈಸ್ತ/ಸಮ್ಮಿಶ್ರ ೧೯೬೨-೬೮,೧೯೮೬ . .

ಸಂ. ಬಿ. ಎಚ್. ರೈಸ್.
ಪ್ರ. ಬೆಂ. ಟ್ರ್ಯಾಕ್ಟ್ ಆ್ಯಂಟ್ ಬುಕ್ ಸೊಸೈಟಿ.
ವಿ.ಮಾ. ದೇಶಿ ಕ್ರೈಸ್ತರ ಶಿಕ್ಷಣ, ಜ್ಞಾನಾರ್ಜನೆಯ ಉದ್ದೇಶ. (ಹೆಚ್ಚಿನ ವಿವರಗಳಿಗೆ 'ಹೊಸಗನ್ನಡ ಅರುಣೋದಯ' ಪುಟ ೫೧೧-೧೨ ನೋಡುವುದು.)
೨೧

**ಅರುಣೋದಯ** ಬೆಳಗಾವಿ
ವಾರ ? ಪು.೪೨

ಸಮ್ಮಿಶ್ರ ೧೯೩೨-೩೬ . .

ಸಂ.ಪ್ರ. ವೆಂಕಟೇಶ ಪಂಡಿತ
ಮು. ಸೀತಾರಾಮ ಪ್ರಿಂಟಿಂಗ್ ಪ್ರೆಸ್, ಬೆಳಗಾಂವಿ.
ವಿ.ಮಾ. ೧೯೩೬ರಲ್ಲಿ ವಿಜಯನಗರ ಸ್ಮಾರಕ ಮಹೋತ್ಸವ ಸಂಚಿಕೆ ಪ್ರಕಟಿತ.
೨೨

**ಅರ್ಥ ವಿಕಾಸ** ಹುಬ್ಬಳ್ಳಿ
ವಾರ ೩೮x೨೫ ಪು.೬

ವಾಣಿಜ್ಯ ೧೯೭೯-೮೦ . .

ಸಂ. ಕೃ. ಪ. ಜೋಶಿ
ಮು. ಶ್ರೀ ಶಕ್ತಿ ಮುದ್ರಣ, ಹುಬ್ಬಳ್ಳಿ.
೨೩

**ಅರ್ಥಸಾಧಕ ಪತ್ರಿಕೆ** ಮೈಸೂರು,ಬೆಂಗಳೂರು
ವಾರ,ಮಾಸ ೪೪x೨೮,೨೮x೧೪ ಪು.೩೨,೪೦

ವಾಣಿಜ ೧೯೧೫-೨೪ . .

ಸಂ. ಹನುಮಂತೇಗೌಡ.
ಪ. ಅರ್ಥಸಾಧಕ ಸಭೆ, ಬೆಂಗಳೂರು; ಸಂಪದಭ್ಯುದಯ ಸಭೆ, ಮೈಸೂರು.
ಮು. ಐರಿಷ್ ಮುದ್ರಣಾಲಯ, ಬೆಂಗಳೂರು ಸರಕಾರಿ ಪ್ರೆಸ್, ಮೈಸೂರು.
೨೪

**ಅಲಂಕಾರ** ಬೆಳಗಾಂವಿ
ಪಕ್ಷ. ೩೮x೨೫ ಪು.೪
ಸಮ್ಮಿಶ್ರ.
ಸಂ.ಪ. ಎಂ. ಎನ್. ಸೋಮಶೇಖರ.
ಮು. ಶ್ರೀ ಪವರ್ ಪ್ರೆಸ್, ಬೆಳಗಾವಿ.
೨೫

**ಅಲ್ಪಸಂಖ್ಯಾತರ ವಾಣಿ** ಮಂಡ್ಯ
ವಾರ ೩೮x೨೬ ಪು.೪

ಅಲಸಂಖ್ಯಾತರು ೧೯೬೭ . .

ಸಂ.ಪ. ಆರ್. ಎಲ್. ವಾಸುದೇವರಾವ.
ಮು. ವಾಣಿ ಮುದ್ರಣ, ಮಂಡ್ಯ; ಹೊಯ್ಸಳ ಪ್ರಿಂಟರ್ ಬೆಂಗಳೂರು.
೨೬

**ಅಲ್ಪಸಂಖ್ಯಾತರು** ಬೆಂಗಳೂರು
ಮಾಸ ೨೪x೧೮ ಪು.೧೦

ಅಲಸಂಖ್ಯಾತರು ೧೯೫೯ . .

ಸಂ.ಪ. ಬಿ. ಭೀಮರಾಜು.
ಮು. ಪಿ. ಬಿ. ಸುಬ್ಬಯ್ಯ ಪ್ರೆಸ್, ಬೆಂಗಳೂರು.
೨೭

**ಅವಕಾಶತೋಷಿಣೀ** ಮೈಸೂರು
ಮಾಸ ೨೧x೧೫ ಪು.೩೨
ಸಾಹಿತ/ಸಮ್ಮಿಶ್ರ ೧೯೦೬-೨೫ . .
ಸಂ. ಬಿ. ವೆಂಕಟಾಚಾರ್, ಬಿ. ಎಸ್. ಮೂರ್ತಿ
ಪ.ಮು. ಎಲ್. ರಾಮಚಂದರಾವ, ಜಿ. ಟಿ. ಎ. ಪ್ರೆಸ್; ಮೈಸೂರು ಪ್ರೆಸ್.
ವಿ.ಮಾ. ಬಿ. ವೆಂ. ಅವರ ಅನುವಾದಿತ ಕೃತಿಗಳ ಧಾರಾವಾಹಿ ಪ್ರಕಟಣೆ.
೨೮

**ಅಶೋಕ** (ಕಲ್ಲಚ್ಚಿನದು) ಹೆಗ್ಗೋಡು
ವಾರ ೩೩x೨೨ ಪು.೪
ಸಮ್ಮಿಶ್ರ/ಕೃಷಿ ೧೯೪೮-೪೮
ಸಂ.ಪ. ಕೆ. ವಿ. ಸುಬ್ಬಣ್ಣ, ಎಂ. ಡಿ. ಸುಬ್ಬರಾವ್.
೨೯

**ಅಶೋಕ** (ಕಲ್ಲಚ್ಚು ಮುದ್ರಣ) ಮೈಸೂರು
ದಿನ ೩೭x೨೫ ಪು.೨
ಸುದ್ದಿ/ಸಮ್ಮಿಶ್ರ ೧೯೬೩-೭೪ . .
ಸಂ.ಪ್ರ. ಎನ್. ಶ್ರೀನಿವಾಸ ಮೂರ್ತಿ; ಬಿ. ಎಸ್. ರವೀಂದನಾಥ.
ಮು. ಅಶೋಕ ಪ್ರಿಂಟರ್ಸ್; ಆಲೋಕ ಪ್ರಿಂಟರ್ಸ್.
೩೦

**ಅಶ್ವಿನಿ** ಬೆಂಗಳೂರು
ವಾರ ೩೬x೨೫ ಪು.೪
ಸುದ್ದಿ ೧೯೭೧-೭೬ . .
ಸಂ.ಪ. ಡಿ. ಗೋಪಾಲನ್.
ಮು. ಹೊಯ್ಸಳ ಪ್ರೆಸ್, ಬೆಂಗಳೂರು
೩೧

**ಆಂದೋಲನ** ಧಾರವಾಡ,ಮೈಸೂರು
ವಾರ,ದಿನ ೩೨x೨೫ ಪು.೮
ಸುದ್ದಿ/ಸಮ್ಮಿಶ್ರ ೧೯೭೨-೭೮ . .
ಸಂ.ಪ್ರ. ರಾಜಶೇಖರ ಕೋಟಿ.
ಮು. ಪಗತಿ ಆಫ್‌ಸೆಟ್ ಮುದ್ರಣ, ಮೈಸೂರು; ಅಂಜಲಿ ಪ್ರಿಂಟಿಂಗ್ ಪ್ರೆಸ್, ಧಾರವಾಡ.
ವಿ.ಮಾ. ಧಾರವಾಡ ಪ್ರಕಟಣೆ ೧೯೭೩ರಲ್ಲಿ ನಿಂತ ಮೇಲೆ, ಕೆಲಕಾಲದ ಅನಂತರ ಧಾರವಾಡ, ಮೈಸೂರುಗಳಲ್ಲಿ ಏಕಕಾಲಕ್ಕೆ ಪ್ರಕಟಿತ. ೧೯೭೮ರಿಂದ ದೈನಿಕವಾಗಿ ಮೈಸೂರಿನಿಂದ ಮಾತ್ರ ಪ್ರಕಟವಾಗುತ್ತಿದೆ.
೩೨

**ಆತ್ಮಗಳ ಬೆಲೆ** ನರೇಗಲ್ಲ
ಮಾಸ ೨೫x೧೯ ಪು.೪
ಕ್ರೈಸ್ತ ೧೯೭೨-೭೭ . .
ಸಂ. ಡಿ. ಸತ್ಯಾನಂದ.
ಪ. ಸುವಾರ್ತಾ ಸೇವಕರ ಅನ್ಯೋನ್ಯ ಸಂಘ.
ಮು. ಶಿವನಾರಾಯಣ ಪ್ರೆಸ್, ಗದಗ.
೩೩

**ಆತ್ಮ ಮಿತ್ರ** ಮಂಗಳೂರು
ಮಾಸ ? ?
ಧಾರ್ಮಿಕ ೧೯೬೬ . .
ಸಂ. ಕೆ. ನೆ. ಭಕ್ತಾನಂದ ಸ್ವಾಮಿ.
೩೪

**ಆತ್ಮ ವಿಚಾರ** ಮೈಸೂರು
ಮಾಸ ೨೪x೧೮ ಪು.೩೨
ಧಾರ್ಮಿಕ ೧೯೫೦-೫೯
ಸಂ.ಪ್ರ. ಎಂ. ಎಲ್. ನಾಗಣ್ಣ.
ಮು. ಜೈಹಿಂದ್ ಮುದ್ರಣ, ಮೈಸೂರು.
ವಿ.ಮಾ. ಆತ್ಮ ವಿಚಾರ ಹೆಸರಿನ ಗ್ರಂಥ ಪ್ರಕಟನೆಯೂ ಇದ್ದಿತು. ಮೂರು ತಿಂಗಳ ಮಟ್ಟಿಗೂ ಚಂದಾ ಅನುಕೂಲತೆ.
೩೫

**ಆತ್ಮ ಸ(ಶ)ಕ್ತಿ** ಮದ್ರಾಸ
ಮಾಸ ೨೧x೧೪ ಪು.೨೪
ಧಾರ್ಮಿಕ
ಸಂ. ವಾಸುದೇವರಾವ ಗಾಯಕವಾಡ.
ಪ್ರ. ಎಂ. ಸಂಬಂಧಂ ಮೊದಲಿಯಾರ.
ಮು. ಮಾಣಿಕ ವಿಲಾಸ ಪ್ರೆಸ್, ಮದ್ರಾಸ.
ವಿ.ಮಾ. ತಮಿಳಿನ ಸಂಪರ್ಕದ ಕಾರಣದಿಂದ ಭಾಷೆ ಅಶುದ್ಧವಾಗಿತ್ತು.
೩೬

**ಆತ್ಮಾನಂದ** ಮೈಸೂರು
ಮಾಸ ೨೫x೧೭ ಪು.೧೬
ಧಾರ್ಮಿಕ ೧೯೧೦ . .
ಸಂ.ಪ. ಕೆ. ನರಸಿಂಹಯ್ಯ.
ಮು. ಕೆ. ನರಸಿಂಹಯ್ಯ ಕಂಪನಿ ಪ್ರಿಂಟರ್ಸ್.
ವಿ.ಮಾ. ಅದ್ವೈತಾನುಭೂತಿ, ಮುಂತಾದ ಕೃತಿಗಳ ಪ್ರಕಟಣೆ.
೩೭

**ಆತ್ಮಾಹ್ಲಾದಿನೀ** ಚಿಕ್ಕಮಗಳೂರು
ಮಾಸ ೨೧x೧೪ ಪು.೪೦

ಧಾರ್ಮಿಕ ೧೯೨೨ . .

ಸಂ.ಪ. ಜಿ. ಅಪಮೇಯ ಅಯಂಗಾರ್.
ಮು. ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು.
ಶೀರ್ಷಿಕಾ ಶ್ಲೋಕ : 'ಅಶೇಷ ಜಗದಾಹ್ಲಾದ ಜ್ಞಾನಸಂಪತ್ ಪವರ್ಧಿನೀ ಶುಭಾತ್ಮಾಹ್ಲಾದಿನೀ ಸಂಶಯ ಜೀಯಾದಾ ಚಂದ್ರತಾರಕಂ'.
೩೮

**ಆದರ್ಶ** ಮುಂಬಯಿ
ಮಾಸ ೨೪x೧೮ ಪು.೨೪

ಸಾಹಿತ್ಯ/ಸಮ್ಮಿಶ್ರ ೧೯೪೯ . .

ಸಂ. ಜಿ. ವಿ. ರಂಗಸ್ವಾಮಿ
ಪ.ಮು. ಆದರ್ಶ ಮುದ್ರಣಾಲಯ, ಮಾತುಂಗಾ, ಮುಂಬಯಿ.
೩೯

**ಆಧ್ಯಾತ್ಮ ಪ್ರಕಾಶ** ಹೊಳೆನರಸೀಪುರ,ಬೆಂಗಳೂರು
ಮಾಸ ೨೧x೧೪ ಪು.೪೮

ಧಾರ್ಮಿಕ ೧೯೩೦-೭೮ . .

ಸ್ಥಾ. ಸಚ್ಚಿದಾನಂದ ಸ್ವಾಮೀಜಿ
ಸಂ. ವೈ. ನರಸಪ್ಪ, ಎಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ
ಪ್ರ. ಯಲ್ಲಂಬಳಸೆ ಸುಬ್ರಾಯ ಶರ್ಮ
ಮು. ಆಧ್ಯಾತ್ಮ ಪಕಾಶ ಪ್ರೆಸ್.
೪೦

**ಆನಂದ** ಬಂಟ್ವಾಳ
ಪಕ್ಷ,ಮಾಸ ೧೮x೧೧ ಪು.೨೪
ಸಾಹಿತ್ಯ/ಸಮ್ಮಿಶ್ರ ೧೯೧೬-೧೭?
ಸಂ.ಪ. ಎಂ. ಎನ್. ಕಾಮತ್.
ಮು. ವಿಕ್ಟೋರಿಯಾ ಮುದ್ರಾಶಾಲೆ.
ವಿ.ಮಾ. ವಿದ್ಯಾರ್ಥಿ ಲೇಖಕರಿಗೂ ಅವಕಾಶ.
ಶೀರ್ಷಿಕಾ ಶ್ಲೋಕ: 'ಸತ್ಯಂ ವದ ಧರ್ಮಂ ಚರ'.
೪೧

**ಆನಂದ** ಬೆಂಗಳೂರು
ಮಾಸ ೨೧x೧೪ ಪು.೫೪

ಸಾಹಿತ್ಯ ೧೯೬೬ . .

ಸಂ.ಪ. ಸಿ. ವಿ. ಕೃಷ್ಣಸ್ವಾಮಿ.
ಮು. ಬಂಗಲೂರಿಯಾನಾ ಪ್ರೆಸ್.
೪೨

**ಆನಂದ ಚಂದ್ರಿಕೆ** ಕೆಲಮಂಗಲಂ(ತಮಿಳುನಾಡು)
ಮಾಸ,ವಾರ ೨೪x೧೮ ಪು.೨೪

ಧಾರ್ಮಿಕ ೧೯೧೬-೩೨ . .

ಸ್ಥಾ. ಸಂ. ಕಾರುಪಲ್ಲಿ ಶಿವರಾಮದಾಸ.
ಪ. ಟಿ. ಆರ್. ವೈದ್ಯೇಶ್ವರಯ್ಯ
ವಿ.ಮಾ 'Illustrated monthly publication of excellent books' ಆ ಪಕಾರ, 'ಜಗನ್ನಾಥ ಪಂಡಿತರಾಯ ಚರಿತೆ', 'ಪರಮಾರ್ಥ ಪಕಾಶ', 'ವೇದವಾಣಿ' ಮುಂತಾದ ಗ್ರಂಥಗಳು ಪ್ರಕಟಿತ.
೪೩

**ಆನಂದ ಜ್ಯೋತಿ** ಬೆಂಗಳೂರು
ವಾರ,ಮಾಸ ೧೮x೧೨ ಪು.೪೦
ಧಾರ್ಮಿಕ ೧೯೪೭-೫೦
ಸಂ.ಪ. ಎಂ. ಶಿವರಾಮ; ಎಂ. ರಾಮಯ್ಯ.
ಮು. ಓರಿಯಂಟಲ್ ಪ್ರೆಸ್, ಬೆಂಗಳೂರು.
ವಿ.ಮಾ. ೧೯೪೮ರಿಂದ ಮಾಸಿಕ.
೪೪

**ಆಯುರ್ವೇದ** ತೀರ್ಥಹಳ್ಳಿ
ಮಾಸ ೨೧x೧೪ ಪು.೧೮

ಆಯುರ್ವೇದ ೧೯೨೫ . .

ಸಂ. ಪಿ. ಸೂರ್ಯನಾರಾಯಣ ಶಾಸ್ತ್ರಿ
ಪ. ಜವಳಿ ರಂಗರಾವ್ ಸೋದರರು, ಭುವನೇಂದ್ರ ಆಯುರ್ವೇದ ವೈದ್ಯಶಾಲೆ.
ಮು. ರಾಧಾಕೃಷ್ಣ ಮುದ್ರಣಾಲಯ.
ವಿ.ಮಾ. ಆಯುರ್ವೇದ ಗ್ರಂಥಗಳ ಪ್ರಕಟಣೆ.
೪೫

**ಆಯುರ್ವೇದ** ಹಿರಿಯಡ್ಕ,ಮೈಸೂರು
ಮಾಸ ೨೧x೧೪ ಪು.೨೬

ಆಯುರ್ವೇದ ೧೯೪೭-೬೦ . .

ಸಂ. ಕೆ. ಆರ್. ಪುರಾಣಿಕ; ಎಂ. ಎಸ್. ನಾಗೇಶರಾವ.
ಮು. ಶ್ರೀರಾಮ ಪ್ರಿಂಟಿಂಗ್ ಪ್ರೆಸ್, ಕಾರ್ಕಳ.
ಧ್ಯೇಯವಾಕ್ಯ: "ನ ನಿಶ್ಚಿತಾರ್ಥತ್ ವಿರಮತಿ ಧೀರಾಃ".
ವಿ.ಮಾ. ಬೇರೆ ಬೇರೆ ಪ್ರೆಸ್ಸುಗಳಲ್ಲಿ ಮುದಿತ. ೧೯೫೨-೫೩ರಲ್ಲಿ ಮಾತ್ರ ಮೈಸೂರಲ್ಲಿ ಪ್ರಕಟಣೆ.
೪೬

**ಆಯುರ್ವೇದ ಮಾರ್ತಾಂಡ** ಶಿವಮೊಗ್ಗ
ಮಾಸ ೨೧×೧೪ ಪು.೨೦

ಆಯುರ್ವೇದ ೧೯೩೫ . .

ಸಂ.ಪ. ವೈ. ಪಾರ್ಥನಾರಾಯಣ ಪಂಡಿತ.
೪೭

**ಆರಾಧನೆ** ಶಿರಸಿ
ಮಾಸ ೨೧×೧೪ ಪು.೪೮

ಧಾರ್ಮಿಕ ೧೯೬೨-೬೭ . .

ಸ್ಥಾ.ಸಂ. ಶ್ರೀಧರ ಬೈಲೂರು, ವಿ. ಎಸ್. ಮಾಡಗೇರಿ
ಪ್ರ. ಶ್ರೀ ಮಾರಿಕಾಂಬಾ ದೇವಾಲಯ, ಶಿರಸಿ.
ಮು. ಲಕ್ಷ್ಮೀನಾರಾಯಣ ಪ್ರೆಸ್.
೪೮

**ಆರಾಧ್ಯ ಧರ್ಮೋಜ್ಜೀವಿನೀ**
ಮೈಸೂರು,ಚಾಮರಾಜನಗರ
ಮಾಸ ೨೧×೧೪ ಪು.೨೪

ವೀರಶೈವ ೧೯೨೦-೨೨ . .

ಸಂ. ಕೆ. ಸಿ. ನಂಜುಂಡಾರಾಧ್ಯ.
ಪ್ರ. ಆರಾಧ್ಯ ಧರ್ಮೋಜ್ಜೀವಿನೀ ಸಭಾ.
ಮು. ಜಿ. ಟಿ. ಎ. ಪ್ರೆಸ್, ಮೈಸೂರು; ಭಾರತೀ ಭವನ ಪ್ರೆಸ್, ಚಾಮರಾಜನಗರ.
ಧ್ಯೇಯವಾಕ್ಯ: 'ಧರ್ಮ ಏವ ತೋಹಂತಿ ಧರ್ಮೋ' ರಕ್ಷತಿ ರಕ್ಷಿತಃ'
ಹೆ.ಮಾ. ಆರಾಧ್ಯ ಪಂಥಕ್ಕೆ ಸಂಬಂಧಿಸಿದ ಶ್ರೀಕರ ಭಾಷ್ಯ, ಆರಾಧ್ಯ ಚರಿತೆ ಮುಂತಾದವುಗಳ ಪ್ರಕಟನೆ. ೧೯೨೨ರಲ್ಲಿ ಚಾಮರಾಜನಗರಕ್ಕೆ ಸ್ಥಳಾಂತರಿತ.
೪೯

**ಆರೋಗ್ಯ ಚಂದ್ರಿಕೆ** ಮದ್ರಾಸ
ಮಾಸ ೨೫×೧೬ ಪು.೨೦

ಆರೋಗ್ಯ ೧೯೨೨-೩೪ . .

ಸಂ. ವಿ. ರಾಮರಾವ್
ಪ. ಯು. ಕೃಷ್ಣರಾವ್.
ಮು. ಆ್ಯಂಟಿ ಸೆಪ್ಟಿಕ್ ಪ್ರೆಸ್, ಮದ್ರಾಸ; ಎ. ಪಿ. ಪ್ರೆಸ್ ಮುಂತಾದವು.
೫೦

**ಆರೋಗ್ಯ ಮಂದಿರ** ಧಾರವಾಡ
ಮಾಸ ೨೪×೧೮ ಪು.೪೨

ಆರೋಗ್ಯ ೧೯೩೯-೪೦ . .

ಸಂ. ಭಾಸ್ಕರ ಸದಾಶಿವ ಗೋರೆ; ಗುಂಡಾಚಾರ್ಯ ಭಿ. ಸವಣೂರ.
ಮು. ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ.
ವಿ.ಮಾ. ಧೂತಪಾಪೇಶ್ವರ, ಪನವೇಲ - ಇವರಿಂದ ಪುರಸ್ಕೃತ. ಮರಾಠಿ, ಹಿಂದೀ ಭಾಷೆಗಳಲ್ಲಿಯೂ ಪ್ರಕಟಗೊಳ್ಳುತ್ತಿತ್ತು.
೫೧

**ಆರ್ಯ ಕರ್ಣಾಟಕ** ಮದನಪಲ್ಲಿ(ಮದ್ರಾಸ)
ಮಾಸ ೨೪×೧೮ ಪು.೨೮

ಸಮ್ಮಿಶ್ರ ೧೯೨೮ . .

ಸಂ.ಪ್ರ. ಸರೋವರ ಶೇಷಾಚಾರ್ಯ.
೫೨

**ಆರ್ಯಧರ್ಮ ಪ್ರಕಾಶ** ನಡಹಳ್ಳಿ(ಶಿವಮೊಗ್ಗ)
ಮಾಸ ೨೧×೧೪ ಪು.೩೦

ಧಾರ್ಮಿಕ ೧೯೧೪-೧೮ . .

ಸಂ.ಪ್ರ. ನಡಹಳ್ಳಿ ವೆಂಕಪ್ಪ
ಮು. ಲಕ್ಷ್ಮೀವಿಲಾಸ ಮುದ್ರಾಕ್ಷರ ಶಾಲೆ.
೫೩

**ಆರ್ಯಧರ್ಮ ಸಂಗ್ರಹ** ಮೈಸೂರು
ಮಾಸ ೨೧×೧೪ ಪು.೧೬
ಸಾಹಿತ್ಯ/ಸಮ್ಮಿಶ್ರ ೧೯೩೭-
ಸಂ.ಪ್ರ. ಚಾವಲಿ ವೆಂಕಟರಮಣಶಾಸ್ತ್ರಿ
ವಿ.ಮಾ. ಚಾ. ವೆಂ. ಅವರು ಈ ಹಿಂದೆ ಹೊರಡಿಸುತ್ತಿದ್ದ 'ಕಾದಂಬರೀ ಸಂಗಹ'ವನ್ನು ನಿಲ್ಲಿಸಿ, ಇದನ್ನು ಆರಂಭಿಸಿದರು. (೬-೫-೧೯೩೭)
೫೪

**ಆರ್ಯಮತ ಸಂಜೀವಿನಿ** ಮೈಸೂರು
ಮಾಸ ೧೮×೧೨ ಪು.೨೦

ಶ್ರೀವೈಷ್ಣವ ೧೮೮೯-೯೯ . .

ಸಂ.ಪ. ಎಂ. ರಾಮಾನುಜ ಅಯ್ಯಂಗಾರ್.
ಮು. ಸದ್ವಿದ್ಯಾಮಂದಿರ ಮುದ್ರಾಶಾಲೆ.
೫೫

**ಆರ್ಯ ಮಹಿಳಾ** ಶೃಂಗೇರಿ
ಮಾಸ ೨೪x೧೮ ಪು.೪೦

ಧಾರ್ಮಿಕ ೧೯೧೨ . .

ಸಂ.ಪ. ವೀರಕೇಸರಿ ಸೀತಾರಾಮಶಾಸ್ತ್ರಿ; ಎಂ. ಸೀತಾರಾಮ ಜೋಯ್ಸ್.
೫೬

**ಆರ್ಯ ವೈದ್ಯ** ಹುಬ್ಬಳ್ಳಿ
ಮಾಸ ೨೫x೧೯ ಪು.೩೬
ಆಯುರ್ವೇದ ೧೯೩೮-೧೯೪೬-೫೩
ಸಂ. ಅನಂತ ಹಲಸೀಕರ
ಪ. ನಿಖಿಲ ಕರ್ನಾಟಕ ಆಯುರ್ವೇದ ಪ್ರಸಾರಕ ಮಂಡಲ.
ಮು. ಆಶಾ ಪ್ರೆಸ್; ಬಳ್ಳೊಳ್ಳಿ ಪ್ರೆಸ್, ಇತ್ಯಾದಿ.
ವಿ.ಮಾ. 'ಅಷ್ಟಾಂಗ ಹೃದಯ', 'ವಾಗ್ಭಟ ಗ್ರಂಥ' ಕೃತಿಗಳು ಪ್ರಕಟಿತ. ಕೆಲ ವರ್ಷ ಪತ್ರಿಕೆ ಸ್ಥಗಿತ. ೧೯೪೬ರಿಂದ ಮತ್ತೆ ಆರಂಭ.
೫೭

**ಆಶಾಜ್ಯೋತಿ** ಮೂಲ್ಕಿ
ಮಾಸ ೨೪x೧೮ ಪು.೨೪

ಸಾಹಿತ್ಯ/ಸಮ್ಮಿಶ್ರ. ೧೯೫೪ . .

ಸಂ. ಎ. ಎಮ್. ಎನ್. ಕಾಮತ.
೫೮

**ಆಶಾವಾದಿ** ಮಂಗಳೂರು
ವಾರ ೪೩x೨೯ ಪು.೪

ಸಮ್ಮಿಶ್ರ ೧೯೫೨-೭೫ . .

ಸಂ.ಪ. ಕೆ. ವಿ. ಭಟ್ಟ
ಮು. ಆಶಾವಾದಿ ಪ್ರಿಂಟಿಂಗ್ ಪ್ರೆಸ್, ಇತ್ಯಾದಿ.
೫೯

**ಆಹಾರ ವಿಜ್ಞಾನ** ಮೈಸೂರು
ತ್ರೈಮಾಸ,ಮಾಸ ೨೪x೧೮ ಪು.೨೦
ಆಹಾರ ವಿಜ್ಞಾನ ೧೯೫೬-೭೪
ಸಂ. ಬಿ. ವಿ. ಸುಬ್ಬರಾಯಪ್ಪ; ಬಿ. ಎಲ್. ಆಮ್ಲ
ಪ. ಕೇಂದ್ರ ಆಹಾರ ಸಂಶೋಧನಾಲಯ (CFTRI) ಮೈಸೂರು.
ಮು. ವೆಸ್ಲಿ ಪ್ರೆಸ್, ಇತ್ಯಾದಿ.
೬೦

**ಇಂದ್ರಧನುಸ್** ಪುತ್ತೂರು
ಮಾಸ ೨೧x೧೪ ಪು.೬೪

ಸಮ್ಮಿಶ್ರ ೧೯೬೨-೬೩ . .

ಸ್ವಾ: ರಘು, ಪುತ್ತೂರು
ಸಂ.ಪ. ಕೆ. ರಾಮಕೃಷ್ಣ
ಮು. ಶಾಂತಾ ಪ್ರಿಂಟಿಂಗ್ ವರ್ಕ್ಸ್, ಮಂಗಳೂರು.
೬೧

**ಇತಿಹಾಸ** ಮೈಸೂರು
ವಾರ್ಷಿಕ ೨೧x೧೪ ಪು.೫೨

ಸಂಶೋಧನೆ ೧೯೬೬ . .

ಸಂ. ಬಿ. ಶೇಕ್ ಅಲಿ; ಜಿ. ರಂಗಸ್ವಾಮಯ್ಯ; ಕೆ. ಸದಾಶಿವ ಶೆಟ್ಟಿ
ಪ. ಸ್ನಾತಕೋತ್ತರ ಇತಿಹಾಸ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ
ಮು. ಹರ್ಷ ಪ್ರಿಂಟರ್ಸ್, ಮೈಸೂರು.
ವಿ.ಮಾ. ವಿದ್ಯಾರ್ಥಿ ಸಂಶೋಧಕರಿಗೆ ನೆರವು.
೬೨

**ಇಳಿದು ಬಾ ತಾಯೆ** ಬೆಂಗಳೂರು
ಪಕ್ಷ ೩೭x೨೫ ಪು.೨೮

ಸಮ್ಮಿಶ್ರ. ೧೯೭೨ . .

ಸಂ. ರಾಮದಾಸ
ಪ. ಕನ್ನಡ ಪಕ್ಷ, ಬೆಂಗಳೂರು
ಮು. ಮೆಹೆಂದಳೆ ಮುದ್ರಣಾಲಯ
೬೩

**ಈಡಿಗ** ಮಂಗಳೂರು
ಮಾಸ ೨೮x೨೧ ಪು.೧೨

ಈಡಿಗ ಜನಾಂಗ . . ೧೯೫೯-೬೦ . .
೬೪

**ಉಕ್ಕಿನವಾರ್ತೆ** ಭದ್ರಾವತಿ
ಮಾಸ ೨೮x೨೨ ಪು.೪

ಕಬ್ಬಿಣ ಉದ್ಯಮ ೧೯೫೯-೭೬ . .
ಸಂ. ಟಿ. ಎನ್. ರಘುಚಂದ
ಪ. ವಿಶ್ವೇಶ್ವರಯ್ಯ ಉಕ್ಕಿನ ಕಾರಖಾನೆ, ಭದ್ರಾವತಿ.
ಮು. ಮಂಜುನಾಥ ಪ್ರಿಂಟರ್ಸ್, ಶಿವಮೊಗ್ಗ.
೬೫

**ಉಜ್ವಲ** ಬೆಂಗಳೂರು
ವಾರ ೩೭x೨೫ ಪು.೬
ಸಮ್ಮಿಶ್ರ ೧೯೬೮ . .
ಸಂ. ಆರ್. ಕೃಷ್ಣಪ್ಪ
ಪ.ಮು. ಆರ್. ಕೆ. ಪ್ರಿಂಟರ್ಸ್ ಪ್ರಕಾಶನ.
೬೬

**ಉತ್ಥಾನ** ಬೆಂಗಳೂರು
ಮಾಸ ೨೧x೧೪ ಪು.೧೦೪
ಸಮ್ಮಿಶ್ರ ೧೯೬೪
ಸಂ. ಮೈ. ಚ. ಜಯದೇವ; ಎಸ್. ವೆಂಕಟರಾವ್; ಎಸ್. ರಾಮಸ್ವಾಮಿ, ಮುಂತಾದವರು.
ಪ. ರಾಷ್ಟ್ರೋತ್ಥಾನ ಪರಿಷತ್ತು, ಬೆಂಗಳೂರು.
ಮು. ರಾಷ್ಟ್ರೋತ್ಥಾನ ಮುದ್ರಣಾಲಯ.
ವಿ.ಮಾ. ೧೯೭೮ರಲ್ಲಿ ಕೆಲಕಾಲ ದ್ವೈಮಾಸಿಕವಾಗಿ ಪ್ರಕಟಿತ. ಆರ್. ಎಸ್. ಎಸ್. ಒಲವಿನ ಪತ್ರಿಕೆ.
೬೭

**ಉತ್ಸಾಹಿ** ಧಾರವಾಡ
ಮಾಸ ೨೫x೧೯ ಪು.೨೮
ಸಮ್ಮಿಶ್ರ ೧೯೬೨-೬೩
ಸಂ. ಲಕ್ಷ್ಮಣಕುಮಾರ ಸಣ್ಣೆಲ್ಲಪ್ಪನವರ, ಲಕ್ಷ್ಮಣಕುಮಾರ
ಮು. ಭಾಗ್ಯೋದಯ ಪ್ರೆಸ್.
೬೮

**ಉದಯ** ಗುಲಬರ್ಗಾ
ದಿನ ೫೦x೩೬ ಪು.೨/೪
ಸುದ್ದಿ/ಸಮ್ಮಿಶ್ರ ೧೯೨೯-೭೭ . .
ಸಂ. ಪ್ರ. ಎಸ್. ಸಿ. ಮಿರ್ಜಿ
ಮು. ಉದಯ ಪ್ರಿಂಟರಿ, ವಿಜಾಪುರ.
ವಿ.ಮಾ. ಬಾಗಲಕೋಟ, ವಿಜಾಪುರಗಳಿಂದಲೂ ಏಕಕಾಲಕ್ಕೆ ಪ್ರಕಟಿತ. ಇದೇ ಹೆಸರಿನ ವಾರಪತ್ರಿಕೆಯೂ ಕೆಲ ಕಾಲ ಪ್ರಕಟವಾಗುತ್ತಿತ್ತು.
೬೯

**ಉದಯಚಂದ್ರ** ಮಂಗಳೂರು
ವಾರ ೨೪x೧೮ ಪು.೨೪
ಸಮ್ಮಿಶ್ರ ೧೯೫೦ . .
ಸಂ.ಪ. ಎಸ್. ಎಸ್. ವಡೆಯರ್.
ಮು. ಎಚ್. ಎಫ್. ವಡೆಯರ್.
೭೦

**ಉದಯ ಭಾರತ** ಮಂಗಳೂರು
ತ್ರೈಮಾಸ,ಮಾಸ,ಪಕ್ಷ ೨೪x೧೮ ಪು.೨೪
ಸಮ್ಮಿಶ್ರ ೧೯೨೭-೫೨
ಸಂ. ಅಲೆವೂರು ಶೇಷಪ್ಪಯ್ಯ
ಪ. ಶ್ರೀನಿವಾಸ ಪು. ಭಟ್ಟ (ವೈದಿಕ ಧರ್ಮ ಪರಿಷತ್ತು)
ಮು. ಕೆನರಾ ಪ್ರಿಂಟಿಂಗ್ ಪ್ರೆಸ್; ಧರ್ಮಪ್ರಕಾಶ ಮುದ್ರಾಲಯ.
೭೧

**ಉದಯ ಭಾರತ** ಮೈಸೂರು
ಮಾಸ ೨೪x೧೮ ಪು.೨೪
ಸಾಹಿತ್ಯ/ಸಮ್ಮಿಶ್ರ ೧೯೨೯-೩೧ . .
ಸಂ.ಪ್ರ. ಶೇಷಪ್ಪಯ್ಯ, ಎಂ. ಶಿವರಾಮರಾವ್.
ಮು. ವರ್ಧಮಾನ ಪವರ್ ಪ್ರೆಸ್.
೭೨

**ಉದಯರವಿ** ಸಾಗರ
ತ್ರೈಮಾಸ ೨೮x೨೨ ಪು.೧೨
ಸುದ್ದಿ/ಸಮ್ಮಿಶ್ರ ೧೯೫೯-೬೦ . .
ಸಂ. ಎಂ. ತಿಮ್ಮಪ್ಪ
ಪ್ರ. ಸಾಗರ ತಾಲೂಕು ಅಭಿವೃದ್ಧಿ ಮಂಡಳ
ಮು. ವಿಜಯ ಪ್ರಿಂಟರ್ಸ್, ಶಿಕಾರಿಪುರ; ದುರ್ಗಿಗುಡಿ ಪ್ರಿಂಟರ್ಸ್, ಶಿವಮೊಗ್ಗ
೭೩

**ಉದಯರಾಗ** ಸಾಗರ
ಮಾಸ ೨೮x೧೮ ಪು.೨೪
ಸುದ್ದಿ/ಸಮ್ಮಿಶ್ರ ೧೯೫೯-೬೦? . .
ಸಂ. ಉಳ್ಳೂರು ಸುಬ್ಬರಾವ್; ಕೆ. ಎಚ್. ಸಾಗರ.
ಪ. ಯು. ಸುಬ್ಬರಾವ್ (ಕಿರಿಯರ ಬಳಗ).
ಮು. ಶಿವಮೊಗ್ಗ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್.
೭೪

**ಉದಯವಾಣಿ** ಮಣಿಪಾಲ
ದಿನ ೫೭x೪೧ ಪು.೮+
ಸುದ್ದಿ/ಸಮ್ಮಿಶ್ರ ೧೯೭೯-
ಸಂ. ಟಿ. ಸತೀಶ ಯು. ಪೈ
ಪ್ರ. ಮಣಿಪಾಲ ಪ್ರಕಾಶನ.
ಮು. ಮಣಿಪಾಲ ಪವರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
೭೫

**ಉದ್ಯೋಗ** ಆಲಮಟ್ಟಿ
ಮಾಸ ೨೧x೧೪ ಪು.೧೨

ಸುದ್ದಿ/ಉದ್ಯಮ ೧೯೩೦ . .

ಸಂ.ಪ್ರ. ಹರ್ದೇಕರ ಮಂಜಪ್ಪ
೭೬

**ಉದ್ಯೋಗ** ಧಾರವಾಡ
ಮಾಸ ೨೧x೧೪ ಪು.೨೦

ಸುದ್ದಿ/ಉದ್ಯಮ ೧೯೬೮ . .

೭೭

**ಉಷಾ** ಬೆಂಗಳೂರು
ಮಾಸ ೨೪x೧೮ ಪು.೪೮

ಸಾಹಿತ್ಯ/ಸಮ್ಮಿಶ್ರ ೧೯೪೦-೫೨ . .

ಸಂ. ಬಸವರಾಜ ಕಟ್ಟೀಮನಿ, ಎಸ್. ನಂಜಪ್ಪ
ಪ. ಪಿ. ಮೋಹನ.
ಮು. ಗಜಲಕ್ಷ್ಮೀ ಮುದ್ರಣ.
೭೮

**ಉಷಾ II** ಬೆಂಗಳೂರು
ಮಾಸ ೩೬x೨೫ ಪು.೨

ಸಮ್ಮಿಶ್ರ ೧೯೭೨-೭೫ . .

ಸಂ. ವಿ. ನಾಗರಾಜ.
ಪ್ರ. ಎಸ್. ಎನ್. ಬೈರೇಗೌಡ.
ಮು. ಗಜಲಕ್ಷ್ಮೀ ಪ್ರೆಸ್.
ವಿ.ಮಾ. ಎರಡೇ ಪುಟಗಳ ಮಾಸಪತ್ರಿಕೆ.
೭೯

**ಉಳಿತಾಯ** ಬೆಂಗಳೂರು
ಮಾಸ ೨೦x೧೫ ಪು.೩೦

ಸುದ್ದಿ/ಉಳಿತಾಯ ೧೯೬೬ .

ಪ್ರ. ಮೈಸೂರು ಸರಕಾರ.
ಮು. ಸರಕಾರೀ ಮುದ್ರಣಾಲಯ, ಬೆಂಗಳೂರು.
೮೦

**ಎಕ್ಸಾಮಿನರ್** ಚಿಕ್ಕಬಳ್ಳಾಪುರ
ಮಾಸ ೧೯x೧೩ ಪು.೨೪

ಶೈಕ್ಷಣಿಕ ೧೯೪೬ . .

ಸಂ.ಪ. ನಾರಾಯಣರಾವ್.
ಮು. ಎಕ್ಸಾಮಿನರ ಮುದ್ರಣ.
೮೧

**ಎಚ್ಚರ** ದಾವಣಗೆರೆ
ವಾರ ೨೮x೨೧ ಪು.೪

ಸುದ್ದಿ/ಪ್ರಾದೇಶಿಕ ೧೯೭೪-೭೫ . .

ಸಂ.ಪ. ಅಜ್ಜಪ್ಪ ಇಟಗಿ.
ಮು. ಶೋಭ ಪ್ರಿಂಟಿಂಗ್ ಪ್ರೆಸ್.
೮೨

**ಎಚ್ಚರಿಕೆ** ಶಿವಮೊಗ್ಗ
ದಿನ ೩೮x೨೫ ೧/೨ ಪು.೪

ಸುದ್ದಿ/ಪ್ರಾದೇಶಿಕ ೧೯೬೨ . .

ಸಂ.ಪ. ಎಂ. ನಾಗೇಂದ್ರ ರಾವ್; ಪಿ. ಹಾಲೇಶಿ .
ಮು. ಎಚ್ಚರಿಕೆ ಮುದ್ರಣಾಲಯ.
೮೩

**ಎಸ್. ಎಸ್. ಎಲ್. ಸಿ. ಬಂಧು** ಧಾರವಾಡ
ಮಾಸ ೨೧x೧೪ ಪು.೧೬೦

ಶೈಕ್ಷಣಿಕ ೧೯೬೯ . .

ಸಂ. ಬಸವರಾಜ ವಿಭೂತಿ.
ಪ್ರ. ಬಂಧು ಪ್ರಕಾಶನ.
ಮು. ಜ್ಞಾನೇಶ್ವರ ಪ್ರಿಂಟಿಂಗ್ ಪ್ರೆಸ್.
೮೪

**ಎಸ್. ಎಸ್. ಸಿ. ಮ್ಯಾಗಝಿನ್** ಧಾರವಾಡ
ಮಾಸ ೨೧x೧೪ ಪು.೧೪೦

ಶೈಕ್ಷಣಿಕ ೧೯೫೧ . .

ಸಂ.ಪ. ಬಿ. ಎನ್. ಹುದ್ದಾರ.
ಮು. ಭಾರತ ಪ್ರಿಂಟಿಂಗ್ ಪ್ರೆಸ್.
ವಿ.ಮಾ. ಚಂದಾದಾರರಿಗೆ ವಿವಿಧ ವಿಷಯಕ ಗ್ರಂಥಗಳನ್ನು ಹಾಗೂ ಪ್ರಶ್ನೆಪತ್ರಿಕೆಗಳನ್ನು ನೀಡುತ್ತಿದ್ದರು.
೮೫

**ಏಲಕ್ಕಿ** ಕೋಚೀನ್(ಕೇರಳ)
ಮಾಸ ೨೫x೨೦ ಪು.೪೪

ಕೃಷಿ/ಏಲಕ್ಕಿ ೧೯೬೮-೮೦ . .

ಸಂ. ಕೆ. ಆರ್. ಕುರುಪ್, ಸಿ. ಪಿ. ಸಲೀಂ, ಬಿ. ಎಚ್. ಕೊಪರ್
ಪ. ಪಲಕ್ಕಿ ಬೋರ್ಡ್.
ಮು. ಅಮರ ಕೇರಳ ಇಂಡಸ್ಟ್ರೀಸ್.
೮೬

**ಐಕ್ಯರಂಗ** ಮಂಗಳೂರು
ವಾರ ೩೮x೨೫ ಪು.೪.೬.೮

ಸುದ್ದಿ/ಎಡಕಮ್ಯುನಿಸ್ಟ ೧೯೬೩-೭೩ . .

ಸಂ.ಪ. ಪಿ. ರಾಮಚಂದ್ರರಾವ್
ಮು. ಶ್ರೀ ಮಂಗಳಾದೇವಿ ಪ್ರೆಸ್, ಬೋಳಾರ.
೮೭

**ಒಕ್ಕಲಿಗ** ಮುಂಬಯಿ
ಮಾಸ ೨೪x೧೮ ಪು.೪೮

ಕೃಷಿ ೧೯೪೮-೫೧ . .

ಸಂ.ಪ. ಮುಂಬಯಿ ಸರಕಾರದ ಪ್ರಸಿದ್ಧಿ ಶಾಖೆ.
೮೮

**ಒಕ್ಕಲಿಗರ ಪತ್ರಿಕೆ** ಬೆಂಗಳೂರು
ವಾರ ೩೮x೨೫ ಪು.೪

ಕೃಷಿ, ಒಕ್ಕಲಿಗ ೧೯೦೭-೭೧ . .

ಸಂ. ಎಂ. ಕೆ ತಿಮ್ಮೇಶಪ್ರಭು.
ಪ. ಎಂ. ಸಿ. ಲಿಂಗೇಗೌಡ.
ಮು. ಒಕ್ಕಲಿಗರ ಸಂಘ ಪವರ ಪ್ರೆಸ್.
೮೯

**ಒಕ್ಕಲಿಗರ ಬಂಧು** ಮೈಸೂರು
ವಾರ ೨೪x೧೮ ಪು.೨೪

ಕೃಷಿ ೧೯೧೧ . .

ಸಂ.ಪ. ಎಸ್. ವೆಂಕಟರಾಮಯ್ಯ
೯೦

**ಒಕ್ಕಲಿಗರೂ ಒಕ್ಕಲುತನವೂ** ಧಾರವಾಡ
ಮಾಸ ೧೮x೧೨ ಪು.೧೬

ಕೃಷಿ ೧೯೧೧-೩೦ . .

ಸಂ. ದೇಸಾಯಿ ಹೊಸಾಪೂರ ಮಠ, ಮಲ್ಹಾರ ಲಿಂಗೋ ಕುಲಕರ್ಣಿ
ಪ. ಜಿಲ್ಹಾ ಶೇತಕೀ ಸಂಘ.
ಮು. ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್; ಮಹಾವೀರ ಮುದ್ರಣ, ಮುಂತಾದವು.
೯೧

**ಒಳನೋಟ** ಮಂಗಳೂರು
ವಾರ ೩೮x೨೫ ಪು.೪

ಸುದ್ದಿ ೧೯೬೧ . .

ಸಂ. ಜೆ. ಎಂ. ಲೋಬೋ ಪ್ರಭು.
೯೨

**ಓಂ ಪ್ರಕಾಶ** ಬೆಂಗಳೂರು
ಮಾಸ ೨೦x೧೬ ಪು.೧೨

ಸಮ್ಮಿಶ್ರ ೧೯೭೧-೭೮ . .

ಸಂ.ಪ. ಜೆ. ಉಮಾಶಂಕರ.
ಮು. ಅಂಬಿಕಾ ಪ್ರಿಂಟಿಂಗ್ ಪ್ರೆಸ್.
ವಿ.ಮಾ. 'ಗೌರೀ ಪ್ರಕಾಶ' ದೈನಿಕವನ್ನು ನಡೆಸುತ್ತಿದ್ದರು.
೯೩

**ಕಂಕಣ** ಹುಬ್ಬಳ್ಳಿ
ಮಾಸ ೨೪x೧೮ ಪು.೪೦
ಸಮ್ಮಿಶ್ರ ಮಾರ್ಚ್ ೧೯೪೯-
ಸಂ. ಎಂ. ಬಿ. ಬೂದಿಹಾಳಮಠ
ಪ. ಶೇ. ಗೋ. ಕುಲಕರ್ಣಿ
ಮು. ಸಾಧನ ಮುದ್ರಣಾಲಯ, ಧಾರವಾಡ.
೮೪

**ಕಂಠೀರವ** ಮಂಗಳೂರು
ವಾರ ೩೮x೨೫ ಪು.೪

ಸಮ್ಮಿಶ್ರ ೧೯೧೯-೩೬, ೧೯೩೬-೬೬ . .

ಸ್ಥಾ.ಸಂ. ಬೋಳಾರ ವಿಠಲರಾವ್; ಹುರುಳಿ ಭೀಮರಾವ್
ಪ. ಬೋಳಾರ ವಿಠಲರಾವ್
ಮು. ಮಂಗಳೂರು ಪ್ರೆಸ್.
ವಿ.ಮಾ. ರಾಜಗೋಪಾಲ ಕೃಷ್ಣರಾವ್, ಡಿ. ಕೆ. ಭಾರದ್ವಾಜ. ಎಂ. ಎನ್. ಕಾಮತ್ ಮುಂತಾದವರು ಲೇಖಕರು. ಉಗ್ರ ಲೇಖನಗಳಿಂದ ಸರಕಾರಕ್ಕೆ ತಲೆನೋವನ್ನು ತರಿಸಿತ್ತು.
೮೫

**ಕಂಠೀರವ** ಶಿವಮೊಗ್ಗ
ದಿನ ೪೩x೨೮ ಪು.೨

ಸುದ್ದಿ/ಸಮ್ಮಿಶ್ರ ೧೯೭೨-೭೯ . .

ಸಂ.ಪ. ಎನ್. ಮುನಿಸ್ವಾಮಪ್ಪ
ಮು. ವಿಜಯಾನಂದ ಮುದ್ರಣಾಲಯ.
೯೬

**ಕಂದ** ಉಡುಪಿ
ಮಾಸ ೨೪x೧೮ ಪು.೨೪

ಬಾಲಸಾಹಿತ್ಯ ೧೯೫೧ . .

ಸಂ. ಆರ್. ಎಸ್. ಮೈಲಾಯ; ಡಿ. ಆರ್. ನಾದ.
೯೭

**ಕಣಿಯರ ಪತ್ರಿಕೆ** ಚಾಮರಾಜನಗರ
ಮಾಸಿಕ ೨೪x೧೮ ೧/೨ ಪು.೨೪

ಕಣಿಯರು ೧೯೨೭ . .

ಸಂ.ಪ. ತಗಡೂರ ರಾಮಚಂದ್ರರಾಯರು.
ಮು. ಸತ್ಯಾಗ್ರಹ ಮುದ್ರಾಲಯ, ಮೈಸೂರು.
ವಿ.ಮಾ ಸರಕಾರವು ಇವರ ಮುದ್ರಣಾಲಯವನ್ನು ಮುಟ್ಟುಗೋಲು ಹಾಕಿಕೊಂಡಿತು (೧೯೨೮).
ಧ್ಯೇಯವಾಕ: "ದುಷ್ಟ ನಿಗ್ರಹ ರಾಜಾರಾಂ ಶಿಷ್ಟ ಪಾಲನಾ ಸೀತಾರಾಂ".
೯೮

**ಕತೆಗಾರ** ಬೆಂಗಳೂರು
ಮಾಸ ೨೪x೧೪, ೧೯x೧೪ ಪು.೩೨, ೪೮

ಸಾಹಿತ್ಯ ೧೯೩೨-೬೬ . .

ಸ್ಥಾ.ಸಂ. ಎಂ. ಎನ್. ನಾರಾಯಣರಾಯರು.
ಪ. ಆರ್. ಎನ್. ನ್ಯೂಸ್ ಏಜೆನ್ಸಿ.
ಮು. ಸುಧಾ ಪ್ರಿಂಟರ್ಸ್; ಒಕ್ಕಲಿಗ ಸಂಘದ ಮುದ್ರಣಾಲಯ
ವಿ.ಮಾ. ಎಂ. ಎನ್. ಗೋಪಾಲರಾಯರು (೧೯೩೮), ಜಿ. ಎ. ನರಸಿಂಹಮೂರ್ತಿ ಮುಂತಾದವರು ಸಂಪಾದಕರಾಗಿದ್ದರು. ಹೆಚ್ಚಿನ ಜನರನ್ನು ಆಕರ್ಷಿಸಿದ ಜನಪ್ರಿಯ ಕಥಾಸಾಹಿತ್ಯದ ಪತ್ರಿಕೆ.
ಧ್ಯೇಯವಾಕ್ಯ: "ಪ್ರಪಂಚದ ಸೊಗಸು ತೋರ್ಪುದೆ ನಮ್ಮ ಕಸುಬು".
೯೯

**ಕತ್ತಲು ಬೆಳಕು** ಬೆಂಗಳೂರು
ಪಕ್ಷ ೩೮x೨೪ ಪು.೪
ಸುದ್ದಿ ೧೯೬೯-೭೮
ಸಂ.ಪ. ಟಿ. ಎಲ್. ರಾಜ
ಮು. ಶ್ರೀ ವನಜ ಮುದ್ರಣ, ಬೆಂಗಳೂರು.
೧೦೦

**ಕಥಾಂಜಲಿ** ಬೆಂಗಳೂರು
ಮಾಸ ೧೮x೧೨ ಪು.೨೮

ಸಾಹಿತ್ಯ ೧೯೨೯-೩೧ . .

ಸ್ಥಾ. ಬಿ. ಎನ್. ಗುಪ್ತ
ಸಂ. ಅ. ನ. ಕೃಷ್ಣರಾಯರು
ಪ. ಕಥಾಂಜಲಿ ಕಾರ್ಯಾಲಯ.
ವಿ.ಮಾ. ಅ. ನ. ಕೃ. ಮತ್ತು ಬಿ. ಎನ್. ಗುಪ್ತ ಇವರ ನಡುವಿನ ಪತ್ರ ವ್ಯವಹಾರಕ್ಕೆ ಭಾಗ ೨ರಲ್ಲಿಯ ಲೇಖ ನೋಡಿರಿ.
ಧ್ಯೇಯವಾಕ್ಯ: "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ".
೧೦೧

**ಕಥಾಂಜಲಿ** ಮಂಗಳೂರು
ಮಾಸ ೨೧x೧೪ ಪು.೪೦

ಸಾಹಿತ್ಯ ೧೯೨೯-೩೦ . .

೧೦೨

**ಕಥಾಂಜಲಿ** ಹುಬ್ಬಳ್ಳಿ
ಮಾಸ ೨೪x೧೮ ಪು.೬೦

ಸಾಹಿತ್ಯ ೧೯೩೪-೪೦ . .

ಸಂ ಎಸ್. ವೆಂಕಟಾಚಲಪತಿ.
ಪ. ಎಂ. ಪಟ್ಟಾಭಿರಾಮ, ಅ. ನ. ಕೃಷ್ಣರಾಯರು.
ಮು. ಪಂಚಾಮೃತ ಪವರ ಪ್ರೆಸ್.
೧೦೩

**ಕಥಾಕುಂಜ** ಬೆಳಗಾವಿ
ಮಾಸ ೨೫x೧೯ ಪು.೬೦

ಸಾಹಿತ್ಯ ೧೯೩೪-೩೭ . .

ಸ್ಥಾ. ಜೋಶಿ ಅರವಿಂದರಾಯರು.
ಸಂ. ಪ್ರಾಟಿ ಶಾಮರಾಯರು.
೧೦೪

**ಕಥಾ ಕುಸುಮಾವಲಿ** ಹುಬ್ಬಳ್ಳಿ
ಮಾಸ ೨೪X೧೮ ಪು.೪೦

ಸಾಹಿತ್ಯ ೧೯೩೮ . .

ಸಂ. ಸಿ. ಎಸ್. ಕುಲಕರ್ಣಿ
೧೦೫

**ಕಥಾಚಂದ್ರಿಕೆ** ಬೆಂಗಳೂರು
ಮಾಸ ೨೫X೧೯ ಪು.೪೦

ಸಾಹಿತ್ಯ ಜನ.೧೯೪೨-೪೩ . .

ಸಂ.ಪ. ಜಿ. ಎಸ್. ಕೃಷ್ಣರಾವ್
ಮು. ಸ್ವತಂತ್ರ ಕರ್ನಾಟಕ ಪ್ರೆಸ್, ಬೆಂಗಳೂರು
೧೦೬

**ಕಥಾವಳಿ** ಬೆಂಗಳೂರು
ಮಾಸ ೧೮X೧೨ ಪು.೮೦

ಸಾಹಿತ್ಯ ೧೯೩೭-೫೬ . .

ಸಂ.ಪ. ಒ. ವಿ. ಗುಪ್ತ
ವಿ.ಮಾ. 'ಮಕ್ಕಳ ಬಳಗ' ಎಂಬ ಬೇರೆ ವಿಭಾಗವು ಜೊತೆಗೆ ಇತ್ತು.
೧೦೭

**ಕಥಾಸಂಗ್ರಹ** ಹಿಚಕಡ(ಅಂಕೋಲಾ)
ಮಾಸ ೨೧ ೧/೨X೧೪ ಪು.೧೬

ಸಾಹಿತ್ಯ ೧೯೫೩-೫೬ . .

ಸಂ.ಪ್ರ. ವಾಮನ ಅನಂತ ಹೊದಿಕೆ. ಸರ್ವೋದಯ ಕೈಪಿಡಿ ಪುಸ್ತಕ ಮಾಲೆ.
ಮು. ಶ್ರೀ ಗಜಾನನ ಪ್ರಿಂಟಿಂಗ್ ಪ್ರೆಸ್ - ಅಂಕೋಲಾ.
ವಿ.ಮಾ. ಉತ್ತರ ಕನ್ನಡ ಜಿಲ್ಲಾ ಸರ್ವೋದಯ ಯೋಜನೆಯನ್ವಯ ಪ್ರಕಟಿತ.
೧೦೮

**ಕನಕ** ಬೆಂಗಳೂರು
ಮಾಸ ೨೯X೨೨ ಪು.೨೪

ಬಾಲ ಸಾಹಿತ್ಯ ೧೯ . .

ಸಂ. ಹೊಯ್ಸಳ.
ಪ. ಕನಕ ಕಾರ್ಯಾಲಯ.
ಮು. ಅಂಬಿಕಾ ಪ್ರಿಂಟರ್ಸ್, ಬೆಂಗಳೂರು.
೧೦೯

**ಕನಕ II** ಬೆಂಗಳೂರು
ವಾರ ೩೬X೨೫ ಪು.೪

ಸುದ್ದಿ/ಕುರುಬ ಜನಾಂಗ ಜೂ.೧೯೭೨-೭೮ . .

ಸಂ. ಶಶಿಕಲಾ ಎನ್ ತೋಂಟಾಪುರ.
೧೧೦

**ಕನ್ನಡ ಕಂದ** ಧಾರವಾಡ
ಮಾಸ ೨೪X೧೮ ಪು.೧೬

ಬಾಲ ಸಾಹಿತ್ಯ ೧೯೩೭ . .

ಸಂ. ಕರವೀರ ಮುಮ್ಮಿಗಟ್ಟಿ
ಪ. ಮೇವುಂಡಿ ಮಲ್ಲಾರಿ
ಮು. ಚಂದ್ರೋದಯ ಪ್ರೆಸ್; ಕಲಾಸಿಂಧು ಮುದ್ರಣಾಲಯ.
ವಿ.ಮಾ. ಪ್ರಾರಂಭಿಸಿ ಆರು ತಿಂಗಳಿಗೆ ಪತ್ರಿಕೆಯನ್ನು ಮೇವುಂಡಿಯವರಿಗೆ ವಹಿಸಿಕೊಟ್ಟರು.
೧೧೧

**ಕನ್ನಡ ಕಡುಗಲಿ** ಬೆಂಗಳೂರು
ಮಾಸ ೩೬X೨೫ ಪು.೪

ಸಮ್ಮಿಶ್ರ ೧೯೬೪-೭೮ . .

ಸಂ.ಪ್ರ. ರುಮಾಲೆ ಬಸಪ್ಪ
ಮು. ಭಾವನಾ ಮುದ್ರಣ.
೧೧೨

**ಕನ್ನಡ ಕೇಸರಿ** ಕುಂದಾಪುರ
ಮಾಸ ೨೪X೧೮ ಪು.೩೬

ಸಮ್ಮಿಶ್ರ ೧೯೬೪ . .

ಸಂ.ಪ್ರ. ಹೆರಂಜೆ ರಘುರಾಮ ಹೆಗಡೆ
ಮು. ದಿನೇಶ್ ಪ್ರಿಂಟರ್ಸ್, ಬ್ರಹ್ಮಾವರ.
೧೧೩

**ಕನ್ನಡ ಕೇಸರಿ** ಹುಬ್ಬಳ್ಳಿ
ವಾರ ೫೫X೩೭ ೧/೨ ಪು.೪

ಸಮ್ಮಿಶ್ರ ೧೯೦೮-೦೯ . .

ಸಂ. ಕೆರೂರು ವಾಸುದೇವಾಚಾರ್ಯ; ನಾ. ಸು. ಹರ್ಡೀಕರ.
ಪ. ಬಿಂದುನಾರಾಯಣ ಮುತಾಲಿಕ ದೇಸಾಯಿ.
ಮು. ಶ್ರೀಕೃಷ್ಣ ಮುದ್ರಣಾಲಯ - ಧಾರವಾಡ.
೧೧೪

**ಕನ್ನಡ ಕೋಕಿಲೆ** ನರೇಗಲ್(ಧಾರವಾಡ)
ಮಾಸ ೨೪x೧೯ ಪು.೨೯

ಸಾಹಿತ್ಯ/ಸಮ್ಮಿಶ್ರ ೧೯೩೮ . .

ಸಂ.ಪ್ರ. ಗುರುಪಾದ ಮಠ.
೧೧೫

**ಕನ್ನಡ ಕೋಗಿಲೆ** ಮಂಗಳೂರು
ಮಾಸ ೨೦x೧೪ ಪು.೩೨

ಸಾಹಿತ್ಯ/ಸಮ್ಮಿಶ್ರ ೧೯೧೬-೧೯ . .

ಸಂ.ಪ್ರ. ಪಿ. ಭೋಜರಾಯ; ಮುಳಿಯ ತಿಮ್ಮಪ್ಪಯ್ಯ
ಮು. ಎಂ. ಟಿ. ಎ. ಶಾರದಾ ಪ್ರೆಸ್.
ವಿ.ಮಾ. ಉತ್ತಮ ಸಾಹಿತ್ಯ ಮಟ್ಟದ ಪತ್ರಿಕೆ ಎಂದು ಹೆಸರಾಗಿತ್ತು.
೧೧೬

**ಕನ್ನಡ ಗುಡಿ** ಮುಂಬಯಿ,ದೆಹಲಿ
ತ್ರೈಮಾಸ ೨೪x೧೮ ಪು.೪೦

ಸಾಹಿತ್ಯ/ಹೊರನಾಡು ಕನ್ನಡಿಗರು ೧೯೪೯-೫೮ . .

ಸಂ.ಪ್ರ. ವರದರಾಜ ಆದ್ಯ; ಎಚ್. ಎಸ್. ಪಾಟೀಲ
ಮು. ಉಷಾ ಪ್ರೆಸ್, ಮೈಸೂರು.
ವಿ.ಮಾ. ಹೊರನಾಡ ಕನ್ನಡಿಗರ ಸಮ್ಮೇಳನ ಕಾಲಕ್ಕೆ ವಿಶೇಷಾಂಕಗಳನ್ನು ಹೊರತಂದಿದೆ.
೧೧೭

**ಕನ್ನಡ ಜ್ಞಾನಬೋಧಕವು** ಧಾರವಾಡ,
(The Canarese Magazine) ಬೆಳಗಾವಿ
ಮಾಸ ೧೫x೧೦ ಪು.೨೪

ಸಾಹಿತ್ಯ/ಶೈಕ್ಷಣಿಕ ನವೆಂ.೧೮೬೧-೬೩ . .

ಸ್ಥಾ.ಸಂ. ವೆಂಕಟರಂಗೋ ಕಟ್ಟಿ.
ಪ್ರ. Canarese Vernacular Society, ಬೆಳಗಾವಿ
ಮು. ದುರ್ಗಾ ಪ್ರಸಾದ ಮಿಸರ್ ಕಲ್ಲಚ್ಚಿನ ಮುದ್ರಣ, ಬೆಳಗಾವಿ. (೨) ಜ್ಞಾನಬೋಧಕ ಪ್ರೆಸ್, (೩) ಸನ್ಮಾರ್ಗ ದರ್ಶಕ ಪ್ರೆಸ್, ಧಾರವಾಡ.
ವಿ.ಮಾ. (೧) ಧಾರವಾಡದ ಪ್ರಥಮ ಮಾಸಿಕ (೨) ಮರಾಠಿಯ ಕೆಲ ಲೇಖನಗಳೂ ಪ್ರಕಟವಾಗಿವೆ.
೧೧೮

**ಕನ್ನಡ ಜ್ಯೋತಿ** ಬೆಂಗಳೂರು
ಮಾಸ ೨೦x೧೮ ೧/೨ ಪು.೩೬

ಸಮ್ಮಿಶ್ರ ೧೯೩೭-೩೮ . .

ಸಂ. ಬಿ. ಎಲ್. ಮುನಿಯಪ್ಪ.
ಪ್ರ. ಬಿ. ಸತ್ಯನಾರಾಯಣ ಶರ್ಮ.
ಮು. ದಿ ಪವರ್ ಪ್ರಿಂಟಿಂಗ್ ವರ್ಕ್ಸ್.
೧೧೯

**ಕನ್ನಡ ತಾಯಿ** ಬೆಳಗಾವಿ
ವಾರ ೩೨x೨೦ ೧/೨ ಪು.೪

ಸಮ್ಮಿಶ್ರ ೧೯೬೪-೭೩ . .

ಸಂ.ಪ್ರ. ಪ್ರಭಾಕರ ಆನಿಗೋಳ.
ಮು. ಶಾರದಾ ಪ್ರಿಂಟಿಂಗ್ ಪ್ರೆಸ್.
೧೨೦

**ಕನ್ನಡ ತಾಯಿ** ಬೆಂಗಳೂರು
ಮಾಸ ೩೬x೨೫ ಪು.೪

ಸುದ್ದಿ/ಸಮ್ಮಿಶ್ರ ೧೯೭೨-೭೮

ಸಂ.ಪ್ರ. ಮಾ. ಭೀ. ಶೇಷಗಿರಿರಾವ್.
ಮು. ಕಾವೇರಿ ಮುದ್ರಣ.
೧೨೧

**ಕನ್ನಡ ನಡೆಗನ್ನಡಿ** ಬೆಂಗಳೂರು
ಮಾಸ ೨೪x೧೮ ೧/೨ ಪು.೨೪
ಸಾಹಿತ್ಯ ೧೮೯೫-೧೯೦೮
ಸಂ. ಎಂ. ಗೋಪಾಲಯ್ಯಂಗಾರ್.
ಪ್ರ. ಎಂ. ಶ್ರೀನಿವಾಸಯ್ಯಂಗಾರ್.
೧೨೨

**ಕನ್ನಡ ನಿಬಂಧಮಾಲೆ** ಬಾಗಲಕೋಟೆ
ಮಾಸ ೨೧ ೧/೨x೧೪ ಪು.೨೪

ಸಾಹಿತ್ಯ ೧೯೧೯ . .

೧೨೩

**ಕನ್ನಡ ನುಡಿ** ಮೈಸೂರು
ಮಾಸ ೨೪x೧೮ ಪು.೨೪

ಸಾಹಿತ್ಯ/ಶೈಕ್ಷಣಿಕ ೧೮೯೫-೯೬ . .

ಸಂ. ವೆಂಕಟಸುಬ್ಬಾಚಾರ್ಯ
೧೨೪

**ಕನ್ನಡ ನುಡಿ** ಮುಂಬಯಿ
ಮಾಸ ೨೪x೧೮ ಪು.೩೬

ಸಾಹಿತ್ಯ/ಹೊರನಾಡು ೧೯೨೪ . .

ಸಂ. ಬಿ. ಸುಬ್ರಹ್ಮಣ್ಯಂ.
ಪ. ಆರ್. ಬೆಳ್ಳಾವೆ.
ಮು. ಬ್ರಿಟಿಷ್ ಇಂಡಿಯಾ ಪ್ರೆಸ್.
ವಿ.ಮಾ. ಒಂದೇ ಸಂಚಿಕೆ ಹೊರಟು ನಿಂತಿತು.
೧೨೫

**ಕನ್ನಡ ನುಡಿ** ಬೆಂಗಳೂರು
ವಾರ,ಮಾಸ,ಪಕ್ಷ, ೩೪x೨೨ ೧/೨ ಪು.೮
ಮಾಸ ೨೪x೧೮, ೨೭x೨೨ ೧/೨

ಸಾಹಿತ್ಯ/ಸುದ್ದಿ ೪-೧೦-೧೯೩೮ . .

ಸಂ. ಮೋ. ಸುಬ್ರಹ್ಮಣ್ಯ ಶಾಸ್ತ್ರಿ; ಅ. ನ. ಕೃಷ್ಣರಾಯರು, ಇತರರು.
ಪ್ರ. ಕನ್ನಡ ಸಾಹಿತ್ಯ ಪರಿಷತ್ತು.
ಮು. ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ.
ವಿ.ಮಾ. ಬಿ. ಎಂ. ಶ್ರೀಯವರ ಸಲಹೆಯಂತೆ ಕ. ಸಾ. ಪರಿಷತ್ತಿನ ಕಾರ್ಯ ಚಟುವಟಿಕೆಯ ಮುಖಪತ್ರವಾಗಿ ಪ್ರಾರಂಭ. (೨) ೪-೧೦-೧೯೩೮ರಿಂದ ವಾರಪತ್ರಿಕೆ, ಆಗಸ್ಟ ೧೦೫೦ರಿಂದ ಮಾಸಪತ್ರಿಕೆ, ೧೧-೧೧-೧೯೬೯ರಿಂದ ಪಾಕ್ಷಿಕ. ೧೯೭೮ರ ನಂತರ ಪುನಃ ಮಾಸಿಕವಾಯಿತು. (೩) ಪಿ. ವೆಂಕೋಬರಾವ್ ೧೯೪೫ರಿಂದ, ವೀ. ಸೀತಾರಾಮಯ್ಯ ೧೯೫೫ರಿಂದ, ಅನ್ನದಾನಯ್ಯ ಪುರಾಣಿಕ ೧೯೬೧ರಿಂದ, ಜಿ. ವೆಂಕಟಸುಬ್ಬಯ್ಯ, ಉಃ ಶ್ರೀನಿವಾಸರಾವ್ ಕೊರಟಿ, ಆರ್. ರಾಚಪ್ಪ ೧೯೬೯ರಿಂದ. ಹಿ. ಮಾ. ನಾಗಯ್ಯ - ೧೯೭೭ರಿಂದ ಸಂಪಾದಕರಾಗಿ ದುಡಿದರು.
೧೨೬

**ಕನ್ನಡ ನುಡಿಗನ್ನಡಿ** ಮದ್ರಾಸು
ಮಾಸ ೧೮x೧೨ ಪು.೨೪

ಸಾಹಿತ್ಯ ೧೯೦೩-೦೭ . .

ಸಂ. ಎಚ್. ಚೆನ್ನಕೇಶವ ಅಯ್ಯಂಗಾರ್
ಪ. ತುಲಸೀ ರಾಮದಾಸ್.
ಮು. ಇಂಡಿಯಾ ಪ್ರಿಂಟಿಂಗ್ ವರ್ಕ್ಸ್.
ವಿ.ಮಾ. ೧೯೦೩ ಡಿಸೆಂಬರದಲ್ಲಿ ಪಾರಂಭವಾಗಿ ೫ ತಿಂಗಳು ನಡೆದು ನಿಂತಿತು. ಪುನಃ ೧೯೦೬ರಲ್ಲಿ ಆರಂಭ. ೧-೭-೧೯೦೭ರಲ್ಲಿ ೪೦೦೦ ಪತಿಗಳನ್ನು ಪ್ರಕಟಿಸಿರುವುದಾಗಿ ಹೇಳಿದೆ.
೧೨೭

**ಕನ್ನಡ ಪ್ರಭ** ಬೆಂಗಳೂರು
ದಿನ ೫೮x೪೧ ಪು.೪, ೬
ಸುದ್ದಿ/ಸಮ್ಮಿಶ್ರ ೧ ನವೆಂಬರ್, ೧೯೬೭-
ಸಂ. ಎನ್. ಎಸ್. ಸೀತಾರಾಮಶಾಸ್ತ್ರಿ; ಕೆ. ಎಸ್. ರಾಮಕೃಷ್ಣ ಮೂರ್ತಿ, ಖಾದಿ ಶಾಮಣ್ಣ, ಇತರರು.
ಪ್ರ. ಕೆ. ಶಂಕರನ್ ನಾಯರ್.
ಮು. ಇಂಡಿಯನ್ ಎಕ್ಸ್‌ಪ್ರೆಸ್ ಪ್ರೆಸ್.
ವಿ.ಮಾ. ಕಾದಂಬರಿಯನ್ನು ಧಾರಾವಾಹಿಯಾಗಿ ದೈನಿಕದಲ್ಲಿ ಪ್ರಥಮವಾಗಿ ಪ್ರಕಟಿಸಿತು.
೧೨೮

**ಕನ್ನಡ ಪ್ರಾಥಮಿಕ ಶಿಕ್ಷಣ** ಧಾರವಾಡ
ಮಾಸ ೨೩x೧೮ ಪು.೪೦

ಶೈಕ್ಷಣಿಕ ೧೯೨೯-೫೫

ಸಂ. ಹನುಮಂತರಾವ್ ಗೋ. ದೇಶಪಾಂಡೆ, ಇತರರು.
ಪ್ರ. ಟ್ರೇನಿಂಗ್ ಕಾಲೇಜು, ಧಾರವಾಡ.
ಮು. ಕರ್ನಾಟಕ ಪ್ರಿಂಟಿಂಗ್ ಪ್ರೆಸ್.
ವಿ.ಮಾ. ೧೮೬೫ರಲ್ಲಿ "ಮಠಪತ್ರಿಕೆ"ಯಾಗಿತ್ತು. ಅನೇಕ ಹೆಸರುಗಳಿಗೆ ಬದಲಾಗಿ ೧೯೨೯ - ೫೫ರ ವರೆಗೆ ಮೇಲಿನ ಹೆಸರಿನಿಂದ ಪ್ರಕಟವಾಯಿತು. (೨) ವಿಶ್ವನಾಥರಾವ್ ಕಾಳೆ, ವೆ. ನರಸಿಂಗರಾವ್ ಕೆ. ಜಿ. ಕುರ್ತಕೋಟಿ, ಎಂ. ಜಿ. ಹಂದ್ರಾಳ, ಎಂ. ಪಿ. ಜಾಲಿ ಮುಂತಾದವರು ಸಂಪಾದಕರಾಗಿದ್ದರು.
೧೨೯

**ಕನ್ನಡ ಯುವಜನವಾಣಿ** ಬೆಂಗಳೂರು
ವಾರ,ಪಕ್ಷ,ದಿನ ೩೮x೨೫, ೫೦x೩೬ ಪು.೨೪

ಸುದ್ದಿ ೧೯೬೯-೭೯ . .

ಸಂ. ಮು. ವಸಂತಯ್ಯ ಗೌಡ.
ಪ್ರ. ಎಂ. ವಿ. ಗೌಡ.
ಮು. ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ವಿವೇಕ ಮುದ್ರಣಾಲಯ.
ವಿ.ಮಾ. ಪ್ರಾರಂಭವಾದ ಒಂದು ವರ್ಷದ ನಂತರ ಪಾಕ್ಷಿಕವಾಯಿತು. ೧-೧-೧೯೭೯ರಿಂದ ಸಂಜೆಯ ದೈನಿಕವಾಯಿತು.
೧೩೦

**ಕನ್ನಡ ಲಾ ರಿಪೋರ್ಟು** ಮೈಸೂರು
ಮಾಸ ೨೨x೧೮ ಪು.೧೬

ಕಾನೂನು ೧೯೦೮ . .

ಸಂ.ಪ್ರ. ಎಂ. ಮಲ್ಲಾರಾಧ್ಯ
ಮು. ವೆಸ್ಲಿಯನ್ ಮಿಷನ್ ಪ್ರೆಸ್ - ಮೈಸೂರು.
ಧ್ಯೇಯವಾಕ್ಯ: 'ನ್ಯಾಯ ಏವ ಜಯತೇ'.
ಹೆ.ಮಾ. ಬ್ರಿಟಿಷ್ - ಮೈಸೂರು ಸರಕಾರೀ ನ್ಯಾಯಾಲಯಗಳಲ್ಲಿಯ ನಿಶ್ಚಿತ ಕಾನೂನುಗಳ ಮೂಲಸಾರ, ಹಾಗೂ ಭಾರತದ ಹೆಸರಾಂತ ನ್ಯಾಯಾಲಯದ ತೀರ್ಪುಗಳನ್ನು ಅನುವಾದಿಸಿ ಪ್ರಕಟಿಸುತ್ತಿತ್ತು.
೧೫೦೦ ಪ್ರತಿಗಳ ಪ್ರಸಾರ ಇತ್ತೆಂದು ಹೇಳಿದೆ.
೧೩೧

**ಕನ್ನಡ ವಾಣಿ** ಮಂಗಳೂರು
ದಿನ ೪೪x೩೦ ಪು.೪

ಸುದ್ದಿ ೧೯೬೧-೬೪ . .

ಸಂ.ಪ್ರ. ವಿ. ಜೆ. ಪಿ. ಸಾಲ್ಡಾನ್ಹಾ
ಮು. ಪ್ರಭಾತ್ ಪ್ರಿಂಟರ್ಸ್.
ವಿ.ಮಾ. ವಿ. ನರಸಿಂಹರಾವ್, ಪಾ. ಗೋಪಾಲಕೃಷ್ಣರು ಸಹ ಸಂಪಾದಕರಾಗಿದ್ದರು.
೧೩೨

**ಕಂನಡ ವಾರ್ತಿಕ** ಮಂಗಳೂರು
(Canarese Messenger)
ಪಕ್ಷ ? ಪು.೮

ಸುದ್ದಿ ೧೮೫೭ . .

ಸಂ. ಹೆರ್ಮನ್ ಮೊಗ್ಲಿಂಗ್
ಪ್ರ. ಬಾಸೆಲ್ ಮಿಶನ್, ಮಂಗಳೂರು.
ಮು. ಬಾಸೆಲ್ ಮಿಶನ್ ಪ್ರೆಸ್.
ವಿ.ಮಾ. ೧೮೫೭ರ ದಂಗೆಯ ಕಾಲಕ್ಕೆ ಸುದ್ದಿಗಳನ್ನು ಕೊಡುವ ಉದ್ದೇಶದಿಂದ ಈ ಪತ್ರಿಕೆ ಹೊರಟಂತೆ ಕಾಣುತ್ತದೆ. ಇದು 'ಮಂಗಳೂರು ಸಮಾಚಾರ'ದ ಅನಂತರ ಮೊಗ್ಲಿಂಗ್ ಹೊರಡಿಸಿದ ಎರಡನೆಯ ಪತ್ರಿಕೆ. ವರ್ಷಾಂತದಲ್ಲಿ ನಿಂತಿತು.
೧೩೩

**ಕನ್ನಡ ಶಾಲಾ ಪತ್ರಕವು** ಬೆಳಗಾವಿ
ಮಾಸ ೧೯x೧೧ ಪು.೨೪
ಶೈಕ್ಷಣಿಕ ೧೮೬೫-೯೮
ಸ್ಥಾಸಂ. ಡೆಪ್ಯೂಟಿ ಚನಬಸಪ್ಪ
ಪ್ರ. ಶಿಕ್ಷಕರ ಸರಕಾರಿ ತರಬೇತಿ ಕಾಲೇಜು, ಧಾರವಾಡ
ಮು. ಬೆಳಗಾವಿ ಸಮಾಚಾರ ಪ್ರೆಸ್, ಬೆಳಗಾವಿ; ಕರ್ನಾಟಕ ಬುಕ್ ಡಿಪೋ ಪ್ರೆಸ್, ಧಾರವಾಡ.
ವಿ.ಮಾ. ಮುಂಬಯಿ ಕರ್ನಾಟಕದ ಬೆಳಗಾವಿಯ ಶಿಕ್ಷಕರ ಟ್ರೇನಿಂಗ್ ಕಾಲೇಜಿನಲ್ಲಿ ಸ್ಥಾಪನೆ. ಮೊದಲು 'ಮಠಪತ್ರಿಕೆ' (೧೮೬೪) ಎಂಬ ಹೆಸರು. ನಂತರ 'ಶಾಲಾಪತ್ರಿಕೆ' (೧೮೬೭), 'ಕನ್ನಡ ಶಿಕ್ಷಕ' (೧೮೭೧), 'ಕನ್ನಡ ಶಾಲಾ ಪತ್ರಿಕೆ', 'ಕನ್ನಡ ಪ್ರಾಥಮಿಕ ಶಿಕ್ಷಣ' (೧೯೨೯), 'ಜೀವನ ಶಿಕ್ಷಣ' (೧೯೫೬ರಿಂದ)ವಾಗಿ ಈಗಲೂ ಪ್ರಕಟ. ಕನ್ನಡದ ಮೊಟ್ಟ ಮೊದಲ ಶೈಕ್ಷಣಿಕ ಹಾಗೂ ಶತಕ ಕಂಡ ಪತ್ರಿಕೆ.
೧೩೪

**ಕನ್ನಡ ಶಿಕ್ಷಿಕೆ** ಧಾರವಾಡ
ಮಾಸ ೨೧x೧೮ ಪು.೪೨

ಶೈಕ್ಷಣಿಕ ೧೯೧೫-೨೮ . .

ಸಂ. ಕೆ. ಲ್ಯಾಕ್‌ಸ್ಟನ್, ಇತರರು
ಪ್ರ. ಶಿಕ್ಷಕಿಯರ ತರಬೇತಿ ಕಾಲೇಜು, ಧಾರವಾಡ
ಮು. ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ, ಮಹಾವೀರ ಪ್ರೆಸ್, ಬೆಳಗಾವಿ.
ಧ್ಯೇಯವಾಕ್ಯ: "ಸ್ತ್ರೀಯರಿಗೆ ವಿದ್ಯೆ ಕಲಿಸಿದರೆ ಜನಾಂಗಕ್ಕೇ ಶಿಕ್ಷಣ ನೀಡಿದಂತಾಗುವುದು".
೧೩೫

**ಕಂನಡ ಸಮಾಚಾರವು** ಬಳ್ಳಾರಿ
ಪಕ್ಷ ೨೫x೧೮ ಪು.೬

ಸುದ್ದಿ/ಸಮ್ಮಿಶ್ರ ೧೮೪೪ . .

ಸಂ. ಹರ್ಮನ್ ಮೋಗ್ಲಿಂಗ್
ಪ್ರ. ಬಾಸೆಲ್ ಮಿಶನ್ ಸಂಸ್ಥೆ - ಮಂಗಳೂರು
ಮು. ಲಂಡನ್ ಮಿಶನ್ ಪ್ರೆಸ್, ಬಳ್ಳಾರಿ.
ವಿ.ಮಾ. ಕನ್ನಡದ ಪ್ರಥಮ ಪತ್ರಿಕೆ 'ಮಂಗಳೂರು ಸಮಾಚಾರ'ವನ್ನು ಕಲ್ಲಚ್ಚಿನಲ್ಲಿ ಹೊರತಂದ ಹರ್ಮನ್ ಮೊಗ್ಲಿಂಗ್ (೧೮೪೩), ಅವನ್ನು ಬಿಡಿ ಮೊಳೆಗಳಿಂದ ಮುದ್ರಿಸಿದರೆ, ಹೆಚ್ಚು ಜನಕ್ಕೆ ತಲುಪುವುದೆಂದು ಯೋಚಿಸಿ, ಬಳ್ಳಾರಿಯ ಲಂಡನ್ ಮಿಶನ್ನಿನ ರೀವ್ಸ್‌ನಿಗೆ ಒಪ್ಪಿಸಿದನು (೧೮೪೪). ಕೆಲ ತಿಂಗಳಾದ ಮೇಲೆ ರೀವ್ಸ್ ತೀರಿಕೊಂಡನಾದ್ದರಿಂದ ಪತ್ರಿಕೆ ನಿಂತಿತು. ಇದು ಕನ್ನಡದ ದ್ವಿತೀಯ ಪತ್ರಿಕೆ.
೧೩೬

**ಕನ್ನಡ ಸಹಕಾರಿ** ಮಂಗಳೂರು
ಮಾಸ ೨೪x೧೭ ಪು.೩೦

ಸಹಕಾರ ತತ್ವ ೧೯೧೮-೭೨ . .

ಸಂ. ಹಿ. ರಾಮರಾಯ ಮಲ್ಯ; ಯು. ಶಾಂತಾರಾಮರಾವ್, ವಿ. ನರಸಿಂಹರಾವ್, ಮುಂತಾದವರು.
ಪ. ದ. ಕ. ಜಿಲ್ಲಾ ಸಹಕಾರೀ ಅಭಿವೃದ್ಧಿ ಸಂಘ, ಮಂಗಳೂರು.
ಮು. ಕರ್ನಾಟಕ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್.
ಧ್ಯೇಯವಾಕ್ಯ: "ತನಗೆಲ್ಲರೆಲ್ಲರಿಗೆ ತಾನೊಲ್ಮೆಯಿಂದಾ ಅನುವಾಗಿ ಬೆರೆಸಿಹುದೆ ಸಹಕಾರವೆಂದಾ".
ವಿ.ಮಾ. ದ. ಕ. ಜಿಲ್ಲಾ ಸಹಕಾರಿ ಯೂನಿಯನ್‌ನ ಮುಖಪತ್ರ.
೧೩೭

**ಕನ್ನಡ ಸಹಕಾರಿ** ಪುತ್ತೂರು(ದ.ಕ.)
ಮಾಸ ೨೧x೧೮ ಪು.೨೪

ಸಹಕಾರ ತತ್ವ ೧೯೧೯ . .

ಸಂ. ಉಳ್ಳಾಲ ಮಂಗೇಶರಾವ, ಮುಂತಾದವರು.
ಮು. ಸದಾನಂದ ಕೋ-ಆಪರೇಟಿವ್ ಮುದ್ರಾಲಯ.
೧೩೮

**ಕನ್ನಡ ಸುವಾರ್ತೆ** ಮುಂಬಯಿ
ವಾರ ೫೧x೩೮ ಪು.೪

ಸುದ್ದಿ/ಸಮ್ಮಿಶ್ರ ೧೮೮೩-೮೬ . .

ಪ್ರ. ಮಂಗೇಶ ಶಾಂತಪ್ಪ ನಾಡಕರ್ಣಿ.
ಮು. ಕರ್ನಾಟಕ ಛಾಪಖಾನೆ, ಮುಂಬಯಿ;ಭಾರತೀ ಪ್ರೆಸ್.
ವಿ.ಮಾ. ಸಂಪಾದಕರ ಹೆಸರನ್ನು ಅಧಿಕೃತವಾಗಿ ಹೇಳಿಲ್ಲ. ಸುಪ್ರಸಿದ್ಧ ಶಾಮರಾವ ವಿಠ್ಠಲ ಕೈಕಿಣಿಯವರ ಸಂಬಂಧ ಪರೋಕ್ಷವಾಗಿ ಇದ್ದಂತೆ ಕಾಣುತ್ತದೆ. ಆಗಿನ ರಾಜಕೀಯ ವಿದ್ಯಮಾನಗಳಿಗೆ ಸ್ಪಂದಿಸುತ್ತಿತ್ತು. ಬ್ರಿಟಿಷ್ ಸರಕಾರದ ಕಾರ್ಯವನ್ನು ನಿರ್ಭೀತಿಯಿಂದ ಟೀಕಿಸುತ್ತಿತ್ತು. (ಹೆಚ್ಚಿನ ವಿವರಗಳಿಗೆ 'ಹೊಸಗನ್ನಡದ ಅರುಣೋದಯ'ವನ್ನು ನೋಡಬಹುದು).

ಮೊದಲ ೫ ವರ್ಷ ಮುಂಬಯಿ ಕೇಂದ್ರ ಸಹಕಾರೀ ಸಂಸ್ಥೆ ಆರ್ಥಿಕ ನೆರವನ್ನು ನೀಡಿದ್ದಿತು. ಆ ಕಾರಣದಿಂದ ಸಂಪಾದಕ ಸಮಿತಿಯಲ್ಲಿ ದ. ಕ. ಜಿ. ಹಾಗೂ ಕರ್ನಾಟಕ ಸೀಮೆಯ ಸದಸ್ಯರಿದ್ದರು. ಅಂಥ ಕೆಲವು ಹೆಸರುಗಳು: ಮೊಳಹಳ್ಳಿ ಶಿವರಾವ, ಮಂಜೇಶ್ವರ ಅನಂತರಾವ, ಸಿ. ಎನ್. ವೆಂಕಪ್ಪಯ್ಯ, ಜೊತೆಗೆ ಕೆ. ಬಿ. ಅಂಕಲಗಿ, ಆರ್. ಎಸ್. ಹುಕ್ಕೇರಿಕರ, ಪಿ. ಎಚ್. ಗುಂಜಾಳ, ಮುಂತಾದವರು. ಮುಂಬಯಿ ಸಂಬಂಧ ಮುಗಿದ ಮೇಲೆ ೧೯೨೫ರಿಂದ ಉಳ್ಳಾಲ ಮಂಗೇಶರಾಯರೂ ೧೯೩೯ರಿಂದ ಮಂಜೇಶ್ವರ ಅನಂತರಾಯರೂ ಸಂಪಾದಕರಾಗಿದ್ದರು. ಪತ್ರಿಕೆಯಲ್ಲಿ ಗೋವಿಂದ ಪೈ, ಪಂಜೆ, ಹಟ್ಟಿಯಂಗಡಿ ನಾರಾಯಣರಾವ ಮುಂತಾದ ಪ್ರಸಿದ್ಧ ಲೇಖಕರ ಬರಹಗಳು ಪ್ರಕಟವಾಗಿವೆ.
೧೩೯

**ಕನ್ನಡ ಸೇನಾನಿ** ಬೆಂಗಳೂರು
ಮಾಸ ೩೬x೨೫ ಪು.೪

ಸಮ್ಮಿಶ್ರ ೧೯೬೯-೭೮ . .

ಸಂ.ಪ್ರ. ಸಂಪತ್ ಕುಮಾರ, ಕೆ.
ಮು. ಮಂಜುಳಾ ಮುದ್ರಣಾಲಯ, ಜೆ. ಎಂ. ಲೇನ್, ಬೆಂಗಳೂರು.
೧೪೦

**ಕನ್ನಡವೇ ದೇವರು** ಬೆಂಗಳೂರು
ಪಕ್ಷ ೩೭x೨೫ ಪು.೬

ಸುದ್ದಿ ೧೯೬೯-೭೦ . .

ಸಂ.ಪ್ರ. ನ. ಕೃ. ಸಂಪಂಗಿ.
ಮು. ಭಾಗ್ಯ ಪ್ರಿಂಟರ್ಸ್.
೧೪೧

**ಕನ್ನಡಿ** ಅಥಣಿ
ವಾರ ೩೮x೨೫ ಪು.೪

ಸಮ್ಮಿಶ್ರ ೧೯೬೩-೬೮ . .

ಸಂ.ಪ. ಎಸ್. ಎಸ್. ಆಣೆಪ್ಪನವರ
ಸಹ ಸಂ. ಮೋಹನ. ಶಿ. ಆಣೆಪನವರ.
ಮು. ಪುರಾತನೇಶ್ವರ ಮುದ್ರಣಾಲಯ.
ಧ್ಯೇಯವಾಕ್ಯ: "ಸತ್ಯವೇ ಗುರಿ ಪ್ರೇಮವೇ ದಾರಿ" - ಗಾಂಧೀಜಿ. ಅಥಣಿಯ ಮುರುಘೇಂದ್ರ ಶಿವಯೋಗಿಗಳ ಕೃಪೆಯಲ್ಲಿ ಹುಟ್ಟಿದ ಪತ್ರಿಕೆ.
೧೪೨

**ಕನ್ನಡಿಗ** ಬಾಗಲಕೋಟೆ
ವಾರ,ವಾರಕ್ಕೆರಡು ೩೫x೧೮ ಪು.೮

ಸುದ್ದಿ/ಸಮ್ಮಿಶ್ರ ೧೯೨೫ . .

ಸಂ. ಶ್ರೀನಿವಾಸರಾವ ಮಂಗಳವೇಢೆ.
ವಿ.ಮಾ. ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಪತ್ರಿಕೆ. 'ನವಜೀವನ ಪತ್ರಿಕೆ'ಯೂ ಇದರಲ್ಲಿ ಸೇರಿತ್ತು. 'Young India' ಪತ್ರಿಕೆಯ ಲೇಖನ ಅನುವಾದ ಬರೆಹವೂ ಇರುತ್ತಿತ್ತು.
೧೪೩

**ಕನ್ನಡಿಗ** ಹುಬ್ಬಳ್ಳಿ
ವಾರ,ಮಾಸ ೩೭x೨೫ ಪು.೪,೬

ಸುದ್ದಿ/ಸಮ್ಮಿಶ್ರ ೧೯೩೭-೭೦ . .

ಸಂ. ಹುಬ್ಬೇಶ್ವರ ಮೇದಿ, ನಾರಾಯಣ ಸೋಫಾ.
ಪ್ರ. ವಿಶ್ವಭಾರತಿ ಪ್ರಕಟನಾಲಯ.
ಮು. ವಾಣಿ ವಿಲಾಸ ಪವರ ಪ್ರಿಂಟಿಂಗ್ ಪ್ರೆಸ್.
ಧ್ಯೇಯವಾಕ್ಯ: "ಸತ್ಯದ ಹೊರತು ಯಾವ ಧರ್ಮವೂ ನನಗೆ ತಿಳಿಯದು" - ಗಾಂಧೀಜಿ ತಿಳಿಯಲಿಚ್ಛಿಸುವುದಿಲ್ಲ
೧೪೪

**ಕನ್ನಡಿಗರ ಜ್ಞಾನ ದೀಪಿಕೆ** ಮೈಸೂರು
ಮಾಸ ೧೮x೧೨ ಪು.೨೪

ಸಮ್ಮಿಶ್ರ ಮೇ ೧೯೨೨-೨೯ . .

ಸಂ.ಪ. ಎಂ. ತಿರುನಾರಾಯಣನ್
ಮು. ಶ್ರೀನಿವಾಸ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.
ವಿ.ಮಾ. ಮೈಸೂರು ಪತ್ರಿಕಾ ಶಾಸನದ ಬಿಸಿ ತಟ್ಟಿತ್ತು. ಹೆಚ್ಚು ಕಾಲ ಬಾಳಲಿಲ.
೧೪೫

**ಕಪಾಲಿ** ಬೆಂಗಳೂರು
ಮಾಸ ೩೬x೨೫ ಪು.೪

ಸುದ್ದಿ ೧೯೬೨-೭೬ . .

ಸಂ. ವಿ. ರಾಮರಾಜು
ಪ್ರ. ಕೇ. ಸಂ. ಗೋಪಿನಾಥ.
ಮು. ಸುಧಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್.
೧೪೬

**ಕರ್ತವ್ಯ** ಚೆನ್ನಪಟ್ಟಣ(ಬೆಂಗಳೂರು)
ಮಾಸ ೨೨ ೧/೨x೧೪ ಪು.೧೨

ಸುದ್ದಿ/ಸಮ್ಮಿಶ್ರ ೧೯೩೧ . .

೧೪೭

**ಕರ್ತವ್ಯ** ಬೆಂಗಳೂರು
ಪಕ್ಷ ೩೬x೨೫ ಪು.೪
ಸಮ್ಮಿಶ್ರ ೧೯೭೨-೭೮
ಸಂ.ಪ್ರ. ಎನ್. ಎಚ್. ಮೃತ್ಯುಂಜಯ.
ಮು. ಮೆಜೆಸ್ಟಿಕ್ ಮುದ್ರಣಾಲಯ.
೧೪೮

**ಕರ್ಣಾಟಕ ಕಾವ್ಯಕಲಾನಿಧಿ** ಮೈಸೂರು
ಮಾಸ ೨೪x೧೮ ಪು.೪೦

ಸಾಹಿತ್ಯ ೧೯೦೮-೧೬ . .

ಸಂ. ಎಂ. ರಾಮಾನುಜ ಅಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್.
ಪ. ಎಂ. ಎ. ಕೃಷ್ಣಸ್ವಾಮಿ ಅಯ್ಯಂಗಾರ್.
ಮು. ಕರ್ನಾಟಕ ಪ್ರಿಂಟಿಂಗ್ ಪ್ರೆಸ್.
ವಿ.ಮಾ. ೧೮೯೨ರಿಂದ ೧೯೦೮, 'ಕರ್ಣಾಟಕ ಕಾವ್ಯಮಂಜರಿ' ಹೆಸರಿನ ಮಾಸಿಕವಾಗಿತ್ತು. (೨) ೭೦-೭೫ಕ್ಕೂ ಹೆಚ್ಚು ಕಾವ್ಯ ಗ್ರಂಥಗಳು ಧಾರಾವಾಹಿಯಾಗಿ ಪ್ರಕಟವಾದುವು.
೧೪೯

**ಕರ್ಣಾಟಕ ಕಾವ್ಯಮಂಜರಿ** ಮೈಸೂರು
ಮಾಸ ೨೧x೧೫ ಪು.೪೦

ಸಾಹಿತ್ಯ ೧೮೯೨-೧೯೦೮

ಸಂ. ಎಸ್. ಜಿ. ನರಸಿಂಹಾಚಾರ್, ಎಂ. ಎ. ರಾಮಾನುಜ ಅಯ್ಯಂಗಾರ್.
ಪ. ಸದ್ವಿದ್ಯಾ ಮಂದಿರ, ಮೈಸೂರು.
ಮು. ಸ್ಟಾರ್ ಪ್ರೆಸ್.
ವಿ.ಮಾ. ಮುಂದೆ ಇದು 'ಕಾವ್ಯ ಕಲಾನಿಧಿ' ಎಂದಾಗಿ ನಡೆಯಿತು. (೧೯೦೮-೧೯)
ಧ್ಯೇಯವಾಕ್ಯ: "ವಿದ್ಯಯಾಮೃತಮಶ್ನುತೇ ಉಪನಿಷತ್".
೧೫೦

**ಕರ್ನಾಟಕ ಕೇಸರಿ** ಪುತ್ತೂರು(ದ.ಕ.)
ಮಾಸ ೨೧ ೧/೨x೧೪ ಪು.೩೨

ಸಾಹಿತ್ಯ ೧೯೨೭-೨೯ . .

ಸಂ. ಮಂಜೇಶ್ವರ ಅನಂತರಾವ್, ಎಸ್. ಆನಂದರಾವ್.
ಪ. ಎಚ್. ಅನಂತ ಕಾಮತ್.
ಮು. ಹರಿಹರ ಮುದ್ರಾಲಯ.
ಧ್ಯೇಯವಾಕ್ಯ: "ಮಾನಮಹತಾಮಗೇಸರಃ".
೧೫೧

**ಕರ್ನಾಟಕ ಕೇಸರಿ** ಬಳ್ಳಾರಿ
ವಾರ ೫೪x೪೦ ಪು.೪

ಸುದ್ದಿ/ರಾಜಕೀಯ ೧೯೩೧-೩೨ . .

ಸಂ. ಟೇಕನಾರ್ಯ ಸುಬ್ರಹ್ಮಣ್ಯಂ.
ಪ್ರ. ಟಿ. ಬಿ. ಕೇಶವರಾಯರು.
೧೫೨

**ಕರ್ನಾಟಕ ಕೇಸರಿ** ಬೆಂಗಳೂರು
ವಾರ/ಪಕ್ಷ ೩೬x೨೫ ಪು.೪
ಸಮ್ಮಿಶ್ರ ೧೯೬೯-೭೭
ಸಂ.ಪ್ರ. ಆರ್. ಕೆ. ರಾಜು
ಮು. ಸೀತಾರಾಮ ಮುದ್ರಣಾಲಯ
೧೫೩

**ಕರ್ನಾಟಕ ಕ್ರೈಸ್ತ ಬಂಧು** ಮಂಗಳೂರು
ಮಾಸ ಪು.೨೪

ಕ್ರೈಸ್ತ ೧೯೩೨-೪೦ . .

ಸಂ. ಕೆ. ಆರ್. ಕರ್ನಾಡಕರ.
ಪ್ರ.ಮು. ಬಾಸೆಲ್ ಮಿಶನ್, ಮಂಗಳೂರು.
೧೫೪

**ಕರ್ನಾಟಕ ಗ್ರಂಥಮಾಲೆ** ಮೈಸೂರು
ಮಾಸ ೧೮೧೨ ಪು.೨೪
ಸಾಹಿತ್ಯ ೧೮೯೩-೧೯೧೯
ಸಂ. ಬಾಪೂ ಸುಬ್ಬರಾವ್, ಬಿ. ಕೃಷ್ಣಪ್ಪ, ಎಂ. ಶ್ಯಾಮರಾವ್.
ಪ. ಜಿ. ಟಿ. ಎ. ಮೈಸೂರು.
ಮು. ಶ್ರೀನಿವಾಸ ಎಲಕ್ಟ್ರಿಕ್ ಪ್ರೆಸ್.
ವಿ.ಮಾ. ಪ್ರಸಿದ್ಧ ಇಂಗ್ಲಿಷ್, ಬಂಗಾಲಿ, ಸಂಸ್ಕೃತ ಸಾಹಿತ್ಯ ಕಾದಂಬರಿ ಅನುವಾದ ಪ್ರಕಟ.
೧೫೫

**ಕರ್ನಾಟಕ ಗ್ರಂಥಾಲಯ** ಧಾರವಾಡ
ತ್ರೈಮಾಸ ೧೮x೧೨ ಪು.೪೮

ಗಂಥಾಲಯ ೧೯೬೮-೭೯ . .

ಸಂ. ಎಸ್. ಆರ್. ಗುಂಜಾಳ.
ಪ್ರ. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ ಸಂಘ, ಧಾರವಾಡ.
೧೫೬

**ಕರ್ನಾಟಕ ಚಂದ್ರಿಕೆ** ಮೈಸೂರು
ಮಾಸ ೨೧x೧೪ ಪು.೧೬

ಸಾಹಿತ್ಯ ೧೯೧೬-೨೯ . .

ಸಂ. ನಂ. ಶ್ರೀಕಂಠಶಾಸ್ತ್ರಿ
ಪ. ಜಿ. ಟಿ. ಎ.
ಮು. ಕೆ. ಎನ್. ನರಸಿಂಹಯ್ಯ ಪ್ರೆಸ್, ಜಿ. ಟಿ. ಎ. ಪ್ರೆಸ್
ವಿ.ಮಾ. ಹತ್ತಾರು ಕಾದಂಬರಿಗಳು ಪ್ರಕಟವಾದವು.
೧೫೭

**ಕರ್ನಾಟಕ ಜನಜೀವನ ಹಾಗೂ ಅರ್ಥಸಾಧಕ ಪತ್ರಿಕೆ** ಬೆಂಗಳೂರು
ಅರ್ಧವಾರ,ಮಾಸ ? ?

ಸುದ್ದಿ/ಆರ್ಥಿಕ ೧೯೦೯-೨೩ . .

ವಿ.ಮಾ. 'ಕರ್ನಾಟಕ ಜನಜೀವನ' ಎಂದಿತ್ತು, ಮುಂದೆ ಅರ್ಥಸಾಧಕ ಪತ್ರಿಕೆಯೂ ಸೇರಿತು.
೧೫೮

**ಕರ್ನಾಟಕ ಜಯಹಿಂದ್** ಜಮಖಂಡಿ
ವಾರ ? ?

ಸುದ್ದಿ/ರಾಜಕೀಯ ೧೯೪೮-೪೯ . .

ಸಂ. ಬಿ. ಡಿ. ಜತ್ತಿ
೧೫೯

**ಕರ್ನಾಟಕ ಜ್ಞಾನಮಂಜರೀ** ಬೆಳಗಾವಿ
ಮಾಸ ೧೮x೨೪ ಪು.೨೪

ಸಮ್ಮಿಶ್ರ ೧೮೭೪ - ೭೫ . .

ಸಂ.ಪ. ಭಿಕಾಜಿ ಹರಿ ಸಾವಂತ್.
ಮು. ಬೆಳಗಾಂವ ಸಮಾಚಾರ ಛಾಪಖಾನೆ.
ವಿ.ಮಾ. 'ಬಾಣ ಕಾದಂಬರಿ', 'ಚಂದ್ರಹಾಸ', 'ಶಿವಾಜಿಯ ಚರಿತೆ' ಮುಂತಾದ ಧಾರಾವಾಹಿಗಳಿದ್ದವು.
೧೬೦

**ಕರ್ನಾಟಕ ಜೀವನ** ಬೆಂಗಳೂರು
ಮಾಸ ? ?

ಸಮ್ಮಿಶ್ರ ೧೯೧೬ . .

ಸಂ. ಡಿ. ವಿ. ಗುಂಡಪ್ಪ
೧೬೧

**ಕರ್ನಾಟಕ ಟಾಯಿಮ್ಸ** ಧಾರವಾಡ
ವಾರ ? ಪು.೨೦

ಸುದ್ದಿ/ಸಮ್ಮಿಶ್ರ ೧೯೦೮-೨೦,೧೯೩೫ . .

ಸಂ. ಎಚ್. ಎಸ್. ಶಿವಲಿಂಗಶಾಸ್ತ್ರಿ.
ಪ. ಮೆ. ಕರ್ನಾಟಕ ಟಾಯಿಮ್ಸ.
೧೬೨

**ಕರ್ನಾಟಕ ತಾರೆ** ಬೆಂಗಳೂರು
ಮಾಸ ೨೧x೧೪ ಪು.೨೬

ಕ್ರೈಸ್ತ ೧೯೫೯-೭೫ . .

ಸಂ. ಫಾದರ್ ಅಂತಪ್ಪ
ಪ. ಸೇಂಟ್ ಥೆರೇಸಾ ಚರ್ಚ್, ಬೆಂಗಳೂರು.
ಮು. ಸೇಂಟ್ ಮೇರಿ ಮುದ್ರಣಾಲಯ.
೧೬೩

**ಕರ್ನಾಟಕ ದೂತ** ಬೆಂಗಳೂರು
ಮಾಸ,ವಾರ ೩೭x೨೫ ಪು.೪

ಸುದ್ದಿ ೧೯೬೯ . .

ಸಂ. ಆರ್. ದತ್ತೂರಾವ್.
ಪ. ಅನುಸೂಯಾಶಮ.
ಮು. ಅಭಿನವ ಪ್ರೆಸ್.
೧೬೪

**ಕರ್ನಾಟಕ ಧುರೀಣ** ಕುಮಟಾ
ವಾರ,ಮಾಸ ೨೮x೨೨ ಪು.೧೬

ಸಮ್ಮಿಶ್ರ ೧೯೧೯-೬೧ . .

ಸ್ಥಾ.ಸಂ.ಪ. ವಿ. ಎಂ. ಮಿರ್ಜಾನಕರ, ಗಣೇಶ ರಾಮಯ್ಯ ಯಾಜಿ.
ಮು. ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ್.
ವಿ.ಮಾ. ಉ. ಕ. ಜಿಲ್ಲೆಯ ದೀರ್ಘಕಾಲೀನ ಪತ್ರಿಕೆ. ಮಾಸ-ವಾರ ಪತ್ರಿಕೆಯಾಗಿ ಬೇರೆ ಬೇರೆ ಕಾಲದಲ್ಲಿ ಸಂಪಾದಕರುಗಳು ಬದಲಾಗುತ್ತಾ ಸಾಗಿ ಬಂದ ಪತ್ರಿಕೆ.
೧೬೫

**ಕರ್ನಾಟಕ ನವಜೀವನ** ವಿಜಾಪುರ
ಮಾಸ ೧೮x೧೫ ಪು.೪೦

ಸುದಿ/ಸಾಹಿತ್ಯ ೧೯೨೮ . .

ಸಂ. ಫ. ಗು. ಕಟ್ಟಿ
ಪ. ಬಿ. ಸಿ. ಪುರಾಣಿಕ.
ಮು. ಹಿತ ಚಿಂತಕ ಪ್ರೆಸ್, ಲೋಕಮಾನ್ಯ ಪ್ರಿಂಟಿಂಗ್ ಪ್ರೆಸ್.
೧೬೬

**ಕರ್ನಾಟಕ ಪತ್ರ** ಬೆಳಗಾವಿ,ಧಾರವಾಡ
ವಾರ ? ?

ಸುದ್ದಿ/ಸಾಹಿತ್ಯ ೧೮೮೩-೧೯೦೬ . .

ಸಂ. ವೆಂಕಟರಂಗೋ ಕಟ್ಟಿ; ಗ. ಹು. ಹೊನ್ನಾಪೂರಮಠ
ಪ. ಸಿವನಪ್ಪ ದೇಸಾಯಿ.
೧೬೭

**ಕರ್ನಾಟಕ ಪ್ರೇಮಿ** ಬೆಂಗಳೂರು
ಮಾಸ ೩೬x೨೫ ಪು.೪

ಸಮ್ಮಿಶ್ರ ೧೯೭೨-೭೮ . .

ಸಂ.ಪ. ಆರ್. ಕೃಷ್ಣಮೂರ್ತಿ.
ಮು. ಶ್ರೀನಿವಾಸ ಮುದ್ರಣಾಲಯ, ಬೆಂಗಳೂರು.
೧೬೮

**ಕರ್ನಾಟಕ ಫಿಲಂ** ಮದರಾಸು
ಮಾಸ ೨೨ ೧/೨x೧೮ ೧/೨ ಪು.೫೦

ಚಲನಚಿತ್ರ ೧೯೭೧ . .

ಸಂ. ರಾಮಚಂದ್ರನ್; ಶ್ರೀ ಗುರು
ಮು. ಪಿಯಾ ಪ್ರಿಂಟರ್ಸ್
ಹೆ.ಮಾ. ಒಂದು ವರ್ಷಕ್ಕೂ ಹೆಚ್ಚು ನಡೆಯಲಿಲ್ಲ.
೧೬೯

**ಕರ್ನಾಟಕ ಬಂಧು** ಬಳ್ಳಾರಿ
ಮಾಸ ೧೮x೧೫ ಪು.೧೬

ಸಮ್ಮಿಶ್ರ ೧೯೨೫-೨೫ . .

ಸಂ. ವೈ. ನಾಗೇಶ ಶಾಸ್ತ್ರಿ; ಟಿ. ವೀರಮಲ್ಲಪ್ಪ
ಪ. ಎಸ್. ಎಂ. ಸಿಂದಗಿ.
ಮು. ಕೊರೋನೇಶನ್ ಪ್ರೆಸ್.
ಹೆ.ಮಾ ಕರ್ನಾಟಕ ಏಕೀಕರಣದ ಉದ್ದೇಶ ಇರಿಸಿಕೊಂಡು ಪ್ರಾರಂಭವಾದರೂ ಹೆಚ್ಚು ಕಾಲ ನಡೆಯಲಿಲ್ಲ.
೧೭೦

**ಕರ್ನಾಟಕ ಬಂಧು** ಗದಗ
ಮಾಸ,ವಾರ ೩.೭x೨೪ ಪು.೨೪

ಸಮ್ಮಿಶ್ರ ೧೯೨೯-೬೯ . .

ಸಂ.ಪ. ಸಿ. ವಿ. ಹಿರೇಮಠ, ರಾಜೇಂದಸ್ವಾಮಿ ಹಿರೇಮಠ.
ಮು. ಕರ್ನಾಟಕ ಬಂಧು ಪ್ರಿಂಟಿಂಗ್ ಪ್ರೆಸ್, ಗದಗ.
೧೭೧

**ಕರ್ನಾಟಕ ಬಂಧು** ಮುಂಬಯಿ
ಮಾಸ,ವಾರ ೨೩x೧೮ ಪು.೧೮

ಸುದ್ದಿ ೧೯೩೪-೩೫ . .

ಸಂ. ಧರಣೇಂದ್ರ ಕುಮಾರ ಶಾಸ್ತ್ರಿ
ಪ. ಈಸ್ಟರ್ನ್ ಪಬ್ಲಿಷಿಂಗ್ ಹೌಸ್.
೧೭೨

**ಕರ್ನಾಟಕ ಭಾರತಿ** ಧಾರವಾಡ
ತ್ರೈಮಾಸ ೨೧x೧೨ ಪು.೧೮೦
ಸಾಹಿತ್ಯ/ಸಂಶೋಧನೆ ೧೯೬೮-
ಸಂ. ಆರ್. ಸಿ. ಹಿರೇಮಠ; ಇತರರು.
ಪ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಮು. ಮನೋಹರ ಮುದ್ರಣಾಲಯ, ಧಾರವಾಡ; ಸಂಯುಕ್ತ ಕರ್ನಾಟಕ ಪ್ರೆಸ್, ಹುಬ್ಬಳ್ಳಿ.
ವಿ.ಮಾ. ಇದರ ಜೊತೆಗೆ 'ಮಾನವಿಕ ಭಾರತಿ', 'ವಿದ್ಯಾರ್ಥಿ ಭಾರತಿ', 'ವಿಜ್ಞಾನ ಭಾರತಿ'ಗಳನ್ನು ಹೊರತರುತ್ತಿದೆ.
೧೭೩

**ಕರ್ನಾಟಕ ಭಾಷಾ ಸೇವಕ** ವಿಜಾಪುರ
ಮಾಸ ೨೧x೧೪ ಪು.೩೬

ಸಾಹಿತ್ಯ ೧೮೯೪ . .

ಸಂ. ಶೇಷಗಿರಿರಾವ್ ಕೊಣ್ಣೂರ; ಹಣಮಂತರಾವ್ ಸಗರ; ಕೃಷ್ಣರಾವ್ ಹುನಗುಂದ.
ವಿ.ಮಾ. ಸಂಸ್ಕೃತ, ಇಂಗ್ಲಿಷ್ ಸಾಹಿತ್ಯ ಕೃತಿಗಳ ಸಾರ ಸಂಗ್ರಹ ನೀಡುತ್ತಿದ್ದರು.
೧೭೪

**ಕರ್ನಾಟಕ ಮಿತ್ರ** ಬೆಳಗಾವಿ
ವಾರ ೨೧x೧೪ ?

ಸಮ್ಮಿಶ್ರ ೧೯೧೯ . .

ಸಂ. ನಾರಾಯಣ ಶರ್ಮ.
೧೭೫

**ಕರ್ನಾಟಕ ವಾಣಿ** ಮಂಡ್ಯ
ವಾರ ೪೪x೨೮ ೧/೨ ಪು.೪

ಸಮ್ಮಿಶ್ರ ೧೯೨೫ . .

ಸಂ. ಎನ್ ಟಿ. ಹಿರಿಯಣ್ಣ
೧೭೬

**ಕರ್ನಾಟಕ ವಾಣಿ** ಬೆಂಗಳೂರು
ವಾರ ೩.೪x೨೫ ಪು.೪

ಸುದ್ದಿ/ಸಮ್ಮಿಶ್ರ ೧೯೬೪-೭೭ . .

ಸಂ.ಪ. ವಿ. ಸತ್ಯವೀರಮೂರ್ತಿ.
ಮು. ಶ್ರೀ ಪವರ ಪ್ರೆಸ್, ಬೆಂಗಳೂರು.
ವಿ.ಮಾ. ೧೯೭೭ರ ತುರ್ತು ಪರಿಸ್ಥಿತಿಯಲ್ಲಿ ಪ್ರಕಟನೆ ನಿಂತಿತ್ತು.
೧೭೭

**ಕರ್ನಾಟಕ ವಾಣಿ II** ಬೆಂಗಳೂರು
ದಿನ ೪೪x೨೮ ಪು.೪

ಸುದ್ದಿ/ಸಮ್ಮಿಶ್ರ ೧೯೨೭ . .

ಸಂ. ಸಿ. ಎ. ಅಶ್ವತ್ಥನಾರಾಯಣ
೧೭೮

**ಕರ್ನಾಟಕ ವಾಣೀವಿಲಾಸ** ಮೈಸೂರು
ದ್ವೈಮಾಸ ೨೧x೧೩ ಪು.೧೨

ಸಾಹಿತ್ಯ ೧೮೮೮ . .

ಸಂ. ಪ್ರ. ಲಕ್ಕೂರ ಸುಬ್ಬರಾಯರು.
ಮು. ಶ್ರೀ ಕೃಷ್ಣರಾಜೇಂದ ಪ್ರೆಸ್.
ವಿ.ಮಾ. ಮಹಿಳೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಲೇಖನಗಳು, ಕೆಲ ನಾಟಕಗಳು ಪ್ರಕಟವಾಗಿವೆ.
೧೭೯

**ಕರ್ನಾಟಕ ವಿಕಾಸ** ಬೆಂಗಳೂರು
ಮಾಸ ೨೧x೧೪,೨೯ ೧/೨x೨೧ ಪು.೪೦

ಗ್ರಾಮೀಣಾಭಿವೃದ್ಧಿ ೧೯೫೯-೭೯ . .

ಪ.ಸಂ. ಬಿ. ಜಿ. ಕುಲಕರ್ಣಿ.
ಸಂ. ಎಂ. ಚನ್ನಯ್ಯ.
ಪ. ಕರ್ನಾಟಕ ಸರಕಾರ.
ಮು. ಸರಕಾರಿ ಮುದ್ರಣಾಲಯ, ಬೆಂಗಳೂರು.
ಹೆ.ಮಾ. ವಿವಿಧ ಜಿಲ್ಲೆಗಳ ಅಭಿವೃದ್ಧಿವಾರ್ತೆ, 'ಯಂಗ್ ಇಂಡಿಯಾ'ದ ಗಾಂಧೀಜಿಯವರ ಬರೆಹದ ಅನುವಾದ ತುದಿಯಲ್ಲಿತ್ತು.
೧೮೦

**ಪ್ರಬೋಧ** ಬೆಳಗಾವಿ,ಧಾರವಾಡ
ಮಾಸ ೨೨x೧೪ ಪು.೮೦

ವೀರಶೈವ ಮೇ ೧೯೮೯-೨೮ . .

ಸಂ. ಶಿ. ಶಿ. ಬಸವನಾಳ, ಎಚ್. ಎಫ್. ಕಟ್ಟೀಮನಿ.
ಪ. ವೀರಶೈವ ತರುಣ ಸಂಘ, ಬೆಳಗಾವಿ.
ಮು. ಮಹಾವೀರ ಮುದ್ರಣ ಶ್ರೀ ತೋಂಟದ ಸಿದ್ಧಲಿಂಗ ವಿಜಯ ಮುದ್ರಾಲಯ.
ಹೆ.ಮಾ. ಹರ್ಡೀಕರ ಮಂಜಪ್ಪನವರ ಸಲಹೆಯಿಂದ ಬೆಳೆಯಿತು. ವೀರಶೈವ ಸಮಾಜದಲ್ಲಿ ತುಂಬ ಮಹತ್ವದ ಪಾತ್ರ ವಹಿಸಿದ ಪತ್ರಿಕೆ.
೬೨೨

**ಪ್ರಬೋಧ** ತೀರ್ಥಹಳ್ಳಿ
ಮಾಸ ೨೨x೧೪ ೧/೨ ಪು.೮,೧೦

ಸನಾತನ ೧೯೪೨ . .

ಸಂ. ಗುಂಡ್ಮಿ ಆರ್. ಮಹಾಬಲ ಭಟ್, ವೆಂಕಟರಮಣ ಶಾಸ್ತ್ರಿ, ಚಾಮರಾಜನಗರ.
ಪ. ಮೈಸೂರು ದೇಶೀಯ ಸ್ವರಾಜ್ಯ ಸಂಘ, ತೀರ್ಥಹಳ್ಳಿ.
ಮು. ಶ್ರೀ ಕಂಠೇಶ್ವರ ಪ್ರೆಸ್, ಚಾಮರಾಜನಗರ.
ಹೆ.ಮಾ. ಮುಳಬಾಗಿಲ ಜಗದ್ಗುರು ಸಚ್ಚಿದಾನಂದತೀರ್ಥ ಸ್ವಾಮಿಗಳ ಕೃಪಾಶಯ ಇತ್ತು. "ಕಾದಂಬರೀ ಸಂಗ್ರಹ"ದ ಪುರವಣಿಯಾಗಿ ಈ ಪತ್ರಿಕೆ.
೬೨೩

**ಪ್ರಬೋಧಕ** ಮುಂಬಯಿ
ಮಾಸ ೨೦x೧೩ ಪು.೭೦
ಸಾಹಿತ್ಯ/ಸಮ್ಮಿಶ್ರ ೧೯೩೦-೩೨
ಸಂ.ಪ. ಬಿ. ಸಿ. ಎಸ್ ಸ್ವಾಮಿ.
ಮು. ಜಿ. ಟಿ. ಎ. ಪ್ರೆಸ್, ಮೈಸೂರು.
ಹೆ.ಮಾ. ಎನ್. ಮೂರ್ತಿರಾವ್, ಕುವೆಂಪು, ಆಲೂರು ವೆಂಕಟರಾವ್, ಎಂ. ವಿ. ಸೀತಾರಾಮಯ್ಯ ಮುಂತಾದವರ ವಿಚಾರಪ್ರಬುದ್ಧ ಲೇಖನಗಳಿದ್ದವು. ಕಥೆ-ವಿಜ್ಞಾನ-ಆರೋಗ್ಯ ವಿಷಯಕ ಬರೆಹಗಳಿಂದ ಕೂಡಿತ್ತು. ಸಂಪಾದಕರ ಅಕಾಲ ಮರಣದಿಂದ ಪತ್ರಿಕೆ ನಿಂತಿತು.
೬೨೪

**ಪ್ರಬೋಧವಾಣಿ** ಮಂಗಳೂರು
ತ್ರೈಮಾಸ ೨೧x೧೩ ೧/೨ ಪು.೬೦

ದೈವಜ್ಞ ಸಮಾಜ ೧೯೬೮ . .

ಪ. ಪ್ರಬೋಧವಾಣಿ ಕಾರ್ಯಾಲಯ
ಹೆ.ಮಾ. ಕರ್ನಾಟಕ ದೈವಜ್ಞ ಶಾಖೆಯ ಮುಖಪತ್ರವು.
೬೨೫

**ಪ್ರಭಾತ** ಧಾರವಾಡ
ಮಾಸ ೨೦x೧೩ ಪು.೩೨
ಸಾಹಿತ್ಯ ೧೯೧೮-೨೧
ಸಂ.ಪ. ವೈ. ಬಿ. ಜಠಾರ.
ಹೆ.ಮಾ. ಕೇವಲ ಕವಿತೆಗಳನ್ನು ಮಾತ್ರ ಪ್ರಕಟಿಸಬೇಕೆನ್ನುವ ಪ್ರಾಯೋಗಿಕ ಪತ್ರಿಕೆ. ಜಾಹೀರಾತುಗಳೂ ಕವಿತೆಯಲ್ಲೇ! ಶಾಂತಕವಿಗಳು ಇದಕ್ಕೆ ಪ್ರೇರಕರು. ಬೇಂದ್ರೆಯವರ ಆರಂಭದ ಕವಿತೆಗಳೂ ಪ್ರಕಟವಾಗಿವೆ.
೬೨೬

**ಪ್ರಭಾತ** ಮಂಗಳೂರು
ವಾರ,ಸಂಜೆಯ ದೈನಿಕ ೨೫x೧೮,೫೫x೨೭ ಪು.೮
ಸುದ್ದಿ/ಸಾಹಿತ್ಯಕ ೧೯೩೫-
೧೯೭೮-

ಸ್ಥಾ. ಕುದ್ಮಿ ವಾಸುದೇವ ಶೆಣೈ.
ಸಂ. ಎಚ್. ಮನಮೋಹನ ಕಾಮತ್.
ಮಾಲೀಕರು; ಪ. ಎಂ. ಅನಂತ ಪ್ರಭು, ವೇಣುಮಾಧವ ಆರ್. ಕಾಮತ.
ಮು. ಆಚಾರ್ಯ ಪ್ರೆಸ್, ಮಂಗಳೂರು.
ಹೆ.ಮಾ. ಜಿಲ್ಲೆಯ ಜನಪ್ರಿಯ ಪತ್ರಿಕೆ.
೬೨೭

**ಪ್ರವಾಸಿ** ಮಂಗಳೂರು
ಮಾಸ ೨೫x೧೯ ಪು.೩೦

ಸಾಹಿತ್ಯ/ಸಮ್ಮಿಶ್ರ ೧೯೫೩-೫೬ . .

ಸಂ. ಕೆ. ಶ್ರೀನಿವಾಸ ಉಪಾಧ್ಯ.
ಪ. ಬಿ. ಈಶ್ವರ ಭಟ್ಟ.
ಮು. ಸಿದ್ಧಾರ್ಥ ಪ್ರಿಂಟರ್ಸ್, ಮಂಗಳೂರು.
೬೨೮

**ಪ್ರಶಾಂತವಾಣಿ** ಶಿರಸಿ
ಮಾಸ ೧೮x೧೦ ಪು.೩೦-೩೬
ಧಾರ್ಮಿಕ ೨೮-೧೧-೧೯೬೬-೬೮
ಸಂ. ಆರ್. ಜಿ. ಭಟ್ಟ.
ಸಂಚಾಲಕ: ವಿ. ಎನ್. ಆಚಾರ್ಯ
ಪ. ಪ್ರಶಾಂತಿ ಧರ್ಮಸಭಾ, ಶಿರಸಿ.
ಮು. ಶ್ರೀ ಲಕ್ಷ್ಮೀನಾರಾಯಣ ಪ್ರೆಸ್. ಶಿರಸಿ.
೬೨೯

**ಪ್ರಶಾಂತಿ** ಶಿವಮೊಗ್ಗ
ಮಾಸ ೧೮x೧೨ ೧/೨ ಪು.೩೨-೪೦
ಧಾರ್ಮಿಕ ೧೯೬೩-೭೧ . .
ಸಂ. ನಾ. ಕಸ್ತೂರಿ, ಎಚ್. ಎಂ. ಶಿವರಾಂ.
ಪ್ರ. ಸತ್ಯ ಸಾಯಿ ಮಂಡಲಿ, ಶಿವಮೊಗ್ಗ.
ಮು. ಶ್ರೀದುರ್ಗಾ ಪ್ರೆಸ್, ಶ್ರೀ ಸತ್ಯ ಸಾಯಿ ಪ್ರೆಸ್, ಶಿವಮೊಗ್ಗ
**೬೩೦**

**ಪ್ರಸಂಗ** ಬಂಟ್ವಾಳ
ಮಾಸ ೧೮x೧೩ ಪು.೩೨
ಯಕ್ಷಗಾನ/ಸಮ್ಮಿಶ್ರ ೧೯೧೬-೧೮ . .
ಪ್ರ. ಪ್ರಸಂಗ ಕಾರ್ಯಾಲಯ, ಪೊಳಲಿ (ದ.ಕ.)
ಮು. ವಿಕ್ಟೋರಿಯಾ ಮುದ್ರಾಶಾಲೆ, ಬಂಟ್ವಾಳ
ಹೆ.ಮಾ. ಬೆಳಕಿಗೆ ಬಾರದ ಯಕ್ಷಗಾನ ಪ್ರಸಂಗಗಳನ್ನು ಹೊರತರಲು ಇದೊಂದು ಯೋಜನೆಯಾಗಿತ್ತು.
**೬೩೧**

**ಪ್ರಸಾದ** ಗದಗ
ಮಾಸ ೨೪x೧೮ ಪು.೩೨
ಸಾಹಿತ್ಯ/ಸಮ್ಮಿಶ್ರ ೧೯೩೯ . .
ಸಂ.ಪ್ರ. ತಟ್ಟಿ ಕೃಷ್ಣರಾಯರು.
**೬೩೨**

**ಪ್ರಸಾದ** ಮೈಸೂರು
ತ್ರೈಮಾಸ ೨೦x೧೪ ಪು.೧೭೦
ವೀರಶೈವ ೧೯೬೮-೭೦ . .
ಸಂ. ಎಚ್. ಗಂಗಾಧರನ್
ವ್ಯಸಂ. ಎಚ್. ಸಿ. ಬಸವಣ್ಣ
ಪ್ರ. ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾವಿದ್ಯಾಪೀಠ, ಸುತ್ತೂರು ಮಠ.
ಮು. ಜೆ. ಎಸ್. ಎಸ್. ಪ್ರಿಂಟಿಂಗ್ ಪ್ರೆಸ್, ಮೈಸೂರು.
**೬೩೩**

**ಪ್ರಾಚೀನ ಕರ್ನಾಟಕ** ಧಾರವಾಡ
ಷಾಣ್ಮಾಸಿಕ ೨೪x೧೬ ಪು.೬೦-೮೦
ಸಂಶೋಧನೆ/ಇತಿಹಾಸ ೧೯೩೨-೩೬ . .
ಸಂ. ನ. ಶ್ರೀ. ಕಮಲಾಪೂರ.
ಪ್ರ. ಕಾರ್ಯದರ್ಶಿ ಕ. ಇತಿಹಾಸ ಸಂಶೋಧನ ಮಂಡಳ, ಧಾರವಾಡ.
ಮು. ವಿಜಯ ಮುದ್ರಾಲಯ, ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ.
ಹೆ.ಮಾ. ಆಲೂರ ವೆಂಕಟರಾಯರು ಮುಂತಾದವರು ಇದಕ್ಕೆ ಸಹಾಯಕ ಬರೆಹಗಾರರೂ.
ಇತಿಹಾಸ ಸಂಶೋಧನೆ ಮುಖ್ಯ ಉದ್ದೇಶವಾಗಿತ್ತು. ಚನ್ನಪ್ಪ ಉತ್ತಂಗಿ, ನಾ. ಶ್ರೀ ರಾಜಪುರೋಹಿತ ಮುಂತಾದವರು ಬರೆಯುತ್ತಿದ್ದರು. ಇಂಗ್ಲಿಶ್‌ನಲ್ಲಿಯೂ ಹೊರಡುತ್ತಿತ್ತು.
**೬೩೪**

**ಪ್ರಾಣಿದಯಾ ಪ್ರಚಾರಕ** ಬೆಂಗಳೂರು
ಮಾಸ ೧೮x೧೨ ಪು.೧೬-೨೪
ಪ್ರಾಣಿದಯಾ ನ.೧೯೩೩-೩೬
ಸಂ. ಗುಂಡೂರಾವ್ ಖಾದಿ.
ಪ್ರ. ಪ್ರಾಣಿದಯಾ ಪ್ರಚಾರಕ ಸಂಘ, ಬೆಂಗಳೂರು.
**೬೩೫**

**ಪ್ರಾಥಮಿಕ ಶಿಕ್ಷಕ** ಧಾರವಾಡ
ಮಾಸ ೨೧x೧೮ ಪು.೩೨
ಶಿಕ್ಷಣ ೧೯೧೯ . .
ಸಂ. ವೈಜನಾಥ ವಾ. ಮರಾಠೆ, ಕಟಗೇರಿ.
ಪ್ರ. ಧಾರವಾಡ ಜಿಲ್ಹಾ ಶಿಕ್ಷಕರ ಸಂಘ, ಶಿಕ್ಷಕ ಹಿತಚಿಂತಕ ಸಂಘ.
ಮು. ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ.
**೬೩೬**

**ಪ್ರಾಥಮಿಕ ಶಿಕ್ಷಣ** ಬೆಂಗಳೂರು
ತ್ರೈಮಾಸ ೨೦x೧೪ ಪು.೯೬
ಶಿಕ್ಷಣ ೧೯೬೩-೭೮ . .
ಸಂ. ಜೆ. ಎಂ. ಟಿ. ರಾಜನ್, ಕೆ. ರಾಮಚಂದ್ರಮೂರ್ತಿ
ಪ್ರ. ರಾಜ್ಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಇಲಾಖೆ.
ಮು. ಸರಕಾರಿ ಮುದ್ರಣಾಲಯ.
**೬೩೭**

**ಪ್ರಾರ್ಥಿಸು** ಬೆಂಗಳೂರು
ಮಾಸ ೨೫x೧೮ ೧/೨ ಪು.೧೨
ಕ್ರೈಸ್ತ ೧೯೫೭-೭೬
ಸಂ. ರಾಬರ್ಟ್ ಲೂಯಿಸ್, ಜಿ. ಗುರುಪ್ರಸಾದ.
ಪ್ರ. ಐ. ಇ. ಎಚ್. ಸಿ. ಬೆಂಗಳೂರು.
ಮು. ಜನತಾ ಪ್ರಿಂಟರ್ಸ್, ಜೀವಜ್ಯೋತಿ ಪ್ರಿಂಟರ್ಸ್, ಬೆಂಗಳೂರು.
**೬೩೮**

**ಪ್ರೇಕ್ಷಕ** ಮುಂಬಯಿ
ದ್ವೈಮಾಸ,ಮಾಸ ೨೪x೧೮ ಪು.೨೬

ಸಾಹಿತ್ಯ/ಸಮ್ಮಿಶ್ರ ೧೯೬೬-೬೭ . .

ಸಂ. ಎ. ಸಿ. ಕುಂದರ್, ಗೋಪಾಲ ಶೆಟ್ಟಿ.
ಪ. ಭಾಸ್ಕರ ಜ. ಶೆಟ್ಟಿ, ಮುಂಬಯಿ.
ಮು. ಉದಯ ಪ್ರಿಂಟರ್ಸ್, ಆರತಿ ಆರ್ಟ್ಸ್ ಪ್ರಿಂಟರ್ಸ್.
೬೩೯

**ಪ್ರೇಮ** ತುಂಗಭದ್ರ-ಪ್ರೇಮಾಯತನ,ಧಾರವಾಡ
ತ್ರೈಮಾಸ,ಮಾಸ ೨೦x೧೪ ಪು.೪
ಸಾಹಿತ್ಯ ಫೆ.೧೯೨೪/೨೫-೧೯೪೩
ಸಂ.ಪಂ. ತಾರಾನಾಥ.
ಸಂಚಾಲಕ. ಕುಲಕರ್ಣಿ ಶ್ರೀನಿವಾಸ.
ಪ. ಕನ್ನಡ ಅಮಚೂರ ನಾಟ್ಯ ಸಂಘ. ಆರ್. ಚಿದಂಬರರಾವ್, ಧಾರವಾಡ.
ಮು. ಬೆಂಗಳೂರು ಪ್ರೆಸ್, ಬೆಂಗಳೂರು.
ಧ್ಯೇಯವಾಕ್ಯ: 'ವಿದಯಾ ಅಮೃತಮಶ್ನುತೆ'.
ಹೆ.ಮಾ. ಮೊದಲ ಮೂರು ವರ್ಷ ತುಂಗಭದ್ರಾದಿಂದ ಹೊರಟಿತು. ನಂತರ ಬೆಂಗಳೂರಿಗೆ ಸ್ಥಳಾಂತರವಾಯಿತು. ಕೆಲಕಾಲ ಸ್ಥಗಿತವಾಗಿ ಪುನರಾರಂಭವಾಯಿತು. ಇಂಗ್ಲಿಷ್ ವಿಭಾಗ ಪ್ರತ್ಯೇಕವಾಗಿ ಕೆಲಕಾಲ ಪ್ರಕಟವಾಗುತ್ತಿತ್ತು.
೬೪೦

**ಫೆಡರಲ್ ಇಂಡಿಯಾ ಎಂಡ್ ಇಂಡಿಯನ್ ಸ್ಟೇಟ್ಸ್** ಬೆಂಗಳೂರು
ವಾರ ೩೮x೨೫ ಪು.೪
ಸುದ್ದಿ/ರಾಜಕೀಯ ೧೯೩೮-
ಸಂ. ಎ. ಶ್ರೀಕಂಠಯ್ಯ.
ಹೆ.ಮಾ. ೧೯೩೭ರಲ್ಲಿ ಇದೇ ಹೆಸರಿನ ಇಂಗ್ಲಿಷ್ ದೈನಿಕವಾಗಿತ್ತು. ೧೯೩೮ರಿಂದ ಕನ್ನಡ ಪ್ರಕಟನೆಯನ್ನು ಆರಂಭ ಮಾಡಿತು.
೬೪೧

**ಬಡವರ ಬಂಧು** ಮಂಗಳೂರು
ಮಾಸ,ವಾರ ೨೫x೧೮ ಪು.೧೬,೨೪
ಸಾಹಿತ್ಯ/ಸಮ್ಮಿಶ್ರ ಸ.೧೯೩೨೩೫
ಸಂ. ಮಂಗಳೂರು ಜಾರಪ್ಪ
ಸಹ. ಸಂ. ಬಿ. ನರಸಪ್ಪ
ಮು. ಶಾರದಾ ಪ್ರೆಸ್; ಬಡವರ ಬಂಧು ಪ್ರೆಸ್, ಮಂಗಳೂರು.
ಧ್ಯೇಯವಾಕ್ಯ: "Service of the poor is the service of the God."
ಹೆ.ಮಾ. ಪತ್ರಿಕೆ ಪ್ರಾರಂಭವಾಗಿ ನಾಲ್ಕನೇ ವರ್ಷ ತನ್ನದೇ ಮುದ್ರಣಾಲಯ ಹೊಂದಿತು.
ಪರೋಪಕಾರಕ್ಕಾಗಿಯೇ ಸೇವೆ ಸಲಿಸಿದ ಪತ್ರಿಕೆ.
೬೪೨

**ಬನಶಂಕರಿ** ಧಾರವಾಡ
ಮಾಸ ೨೪x೧೮ ಪು.೨೪

ಸಾಹಿತ್ಯ/ಸಮ್ಮಿಶ್ರ ೧೯೨೭-೨೮ . .

ಪ. ಬನಶಂಕರಿ ಕಾರ್ಯಾಲಯ.
೬೪೩

**ಬನಶಂಕರಿ** ಗುಳೇದಗುಡ್ಡ(ವಿಜಾಪುರ)
ಮಾಸ ೨೪x೧೮ ಪು.೩೦

ಸುದ್ದಿ/ಪ್ರಾದೇಶಿಕ ೧೯೫೯ . .

ಸಂ. ಆರ್. ಪಿ. ಘಟಕಾಂಬಳೆ.
ಪ. ತಾಲೂಕಾ ಅಭಿವೃದ್ಧಿ ಮಂಡಳ.
ಮು. ಬಾಲಾಜಿ ಪ್ರಿಂಟಿಂಗ್ ಪ್ರೆಸ್, ಗುಳೇದಗುಡ್ಡ.
೬೪೪

**ಬಸವರಾಜ** ಹಾವೇರಿ
ಮಾಸ,ವಾರ ೨೪x೧೮ ಪು.೨೪

ವೀರಶೈವ ೧೯೨೮-೩೫ . .

ಸಂ. ಚನ್ನಬಸಪ್ಪ ಮುರಿಗೇಂದಪ್ಪ ಹಾಲಪ್ಪನವರ.
ಪ. ವಿ. ಸಿ. ಯಗಟಿ.
ಮು. ಬಸವ ತತ್ವ ಪ್ರಕಾಶ ಮಾಲೆ.
೬೪೫

**ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ವಾರ್ತೆ** ಬಳ್ಳಾರಿ
ಮಾಸ ೨೮x೨೦ ೧/೨ ಪು.೨೦

ಸುದ್ದಿ/ಪ್ರಾದೇಶಿಕ ೧೯೬೯ . .

ಸಂ. ಬಿ. ಎಂ. ಚಂದ್ರಶೇಖರಯ್ಯ
ಪ. ಬಳ್ಳಾರಿ ಜಿಲ್ಲಾ ಬೋರ್ಡ ಅಭಿವೃದ್ಧಿ ಮಂಡಳ.
೬೪೬

**ಬಳ್ಳಾರಿ ಜಿಲ್ಲಾ ಸಮಾಚಾರ** ಬೆಂಗಳೂರು
ವಾರ ೩೮x೨೦ ಪು.೨೦

ಸುದ್ದಿ/ಪ್ರಾದೇಶಿಕ ೧೯೭೦ . .

ಸಂ. ಸಿ. ಜಿ. ಹಂಪಣ್ಣ.
೬೪೭

**ಬಳ್ಳಾರಿ ಭಾರತಿ** ಬಳ್ಳಾರಿ
ವಾರ ೩೮x೨೪ ೧/೨ ಪು.೪

ಸುದ್ದಿ/ಪ್ರಾದೇಶಿಕ ೧೯೧೨ . .

ಸಂ.ಪ್ರ. ಕರಿಬಸವಶಾಸ್ತ್ರಿ
ಮು. ಶಂಕರವಿಲಾಸ ಪ್ರೆಸ್, ಬಳ್ಳಾರಿ.
ಹೆ.ಮಾ. ಬಳ್ಳಾರಿಯ ಪ್ರಥಮ ಸಾಪ್ತಾಹಿಕ.
**೬೪೮**

**ಬಾಲಕಿರಣ** ಬೆಂಗಳೂರು
ಮಾಸ ೧೪x೧೧ ಪು.೧೬

ಬಾಲಸಾಹಿತ್ಯ ಜನ.೧೯೬೩ . .

ಸಂ. ನ. ವಿ. ಆಚಾರ್.
ಪ್ರ. ವಿನಾಯಕ ವಿದ್ಯಾರ್ಥಿ ಸಂಘ, ವಿಜಯಪುರ.
ಮು. ಮಲ್ಲಿಕಾ ಮುದ್ರಣಾಲಯ, ಶಿಡ್ಲಘಟ್ಟ.
**೬೪೯**

**ಬಾಲಚಂದ್ರ** ಮಂಗಳೂರು,ಉಡುಪಿ
ಪಕ್ಷ,ಮಾಸ ೨೬x೨೧ ಪು.೧೬

ಶಿಕ್ಷಣ ೧೯೨೯-೩೨, ೧೯೪೨ . .

ಸ್ಥಾ. ಉಳ್ಳಾಲ ಮಂಗೇಶರಾಮ.
ಪ್ರ. ದ.ಕ. ಜಿಲ್ಲಾ ಅಧ್ಯಾಪಕರ ಸಂಘ.
ಮು. ಜೆ. ಜೆ. ರೇಗೋ, ಕೊಡಿಯಾಲ ಬೈಲು ಪ್ರೆಸ್, ಮಂಗಳೂರು.
ಹೆ.ಮಾ. ಮಂಗಳೂರಿನ ಅಧ್ಯಾಪಕರ ಸಂಘದಿಂದ ಕೆಲ ಕಾಲ ಮಾತ್ರ ನಡೆಯಿತು. ಆಮೇಲೆ ಕೆ. ಆರ್. ಶೆಣೈ ಹಾಗೂ ಕೆ. ಹೊನ್ನಯ್ಯ ಶೆಟ್ಟರು ೧೯೪೨ರಿಂದ ಹೊರತಂದರು. ಜನಪ್ರಿಯ ಲೇಖನಗಳು ಪ್ರಕಟವಾಗಿವೆ.
**೬೫೦**

**ಬಾಲಪತ್ರ** ಮಂಗಳೂರು
ಮಾಸ ೨೦x೧೨ ಪು.೪೦
ಕ್ರೈಸ್ತ ೧೯೭೦-೭೧
ಪ್ರ. ಬಾಸೆಲ್ ಮಿಶನ್ ಸಂಸ್ಥೆ.
ಮು. ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು.
**೬೫೧**

**ಬಾಲಬಂಧು** ಬೆಂಗಳೂರು
ಮಾಸ ೧೩x೧೦ ೧/೨, ೧೮x೧೨ ೧/೨ ಪು.೩೬,೨೬

ಬಾಲಸಾಹಿತ್ಯ ೧೯೫೦-೫೯, ೧೯೭೭ . .

ಸಂ. ಜೆ. ಟಿ. ಶ್ರೀಕಂಠಯ್ಯ, ಎನ್. ಡಿ. ರಾಮಮೂರ್ತಿ.
ಪ್ರ. ಆರ್. ಎಸ್. ನ್ಯೂಸ್, ಏಜನ್ಸಿ.
ಮು. ಶ್ರೀ ಪವರ ಪ್ರೆಸ್, ಬೆಂಗಳೂರು.
**೬೫೨**

**ಬಾಲಮಿತ್ರ** ಧಾರವಾಡ
ಮಾಸ ೧೮x೧೨ ಪು.೨೪

ಬಾಲಸಾಹಿತ್ಯ ೧೯೨೧ . .

ಸಂ. ವಲ್ಲಭ ಮಹಾಲಿಂಗ ತಟ್ಟಿ.
ಪ್ರ. ಪ್ರಾಕ್ಟೀಸಿಂಗ್ ಟ್ರೇನಿಂಗ್ ಕಾಲೇಜು, ಧಾರವಾಡ.
ಮು. ಪ್ರಸಾದ ರಾಘವ ಪ್ರೆಸ್, ಧಾರವಾಡ.
**೬೫೩**

**ಬಾಲಮಿತ್ರ** ಮದ್ರಾಸ್
ಮಾಸ ೨೦x೧೬ ಪು.೭೦

ಬಾಲಸಾಹಿತ್ಯ ೧೯೫೬ . .

ಸಂ.ಪ್ರ. ಬಿ. ವಿ ರಾಧಾಕೃಷ್ಣ
ಮು. ಪದ್ಮಶ್ರೀ ಪ್ರಿಂಟರ್ಸ್, ಮದ್ರಾಸ್.
ಹೆ.ಮಾ. ಜನಪ್ರಿಯತೆಯಲ್ಲಿ ಚಂದಮಾಮದ ಮಟ್ಟದಲ್ಲಿ ಬರುವ ಪತ್ರಿಕೆ.
**೬೫೪**

**ಬಾಲಸಾಹಿತ್ಯ** ಹುನಗುಂದ
ಮಾಸ ೨೪x೧೯ ಪು.೨೮

ಬಾಲಸಾಹಿತ್ಯ ೧೯೫೬ . .

**೬೫೫**

**ಬಿಂದು** ಬೆಂಗಳೂರು
ಮಾಸ ೨೧x೧೩ ಪು.೬೪

ಸಾಹಿತ್ಯ/ಸಮ್ಮಿಶ್ರ ಮಾ.೧೯೬೯ . .

ಸಂ.ಪ್ರ. ಬಿ. ರಾಘವರಾವ್.
ಮು. ಶ್ರೀ ಪವರ ಪ್ರೆಸ್, ಬೆಂಗಳೂರು.
**೬೫೬**

**ಬಿರುಗಾಳಿ** ಬೆಂಗಳೂರು
ವಾರ ೫೧x೩೭ ಪು.೨
ಸುದ್ದಿ/ಸಮ್ಮಿಶ್ರ ಎ.೧೯೫೮-
ಸಂ.ಪ. ಎಚ್. ವೆಂಕಟರಾಮಯ್ಯ
ಮು. ಬಿರುಗಾಳಿ ಮುದ್ರಣ, ಸೀಗೇಬೇಲಿ.
೬೫೭

**ಬುಧಜನ ಮನೋರಂಜನಿ** ತೋಪಿನಕೆರೆ(ಹಾಸನ)
ಮಾಸ ? ?
ಜೈನ/ಪ್ರಾಚೀನ ಸಾಹಿತ್ಯ ೧೮೯೦-೯೪
ಸಂ. ಬಿ. ಪದ್ಮರಾಜ ಪಂಡಿತ.
೬೫೮

**ಬುದ್ಧವಾಣಿ** ಬೆಂಗಳೂರು
ಪಕ್ಷ ೩೬x೨೫ ಪು.೨
ಧಾರ್ಮಿಕ ೧೯೭೨-
೧೯೭೬ . .
ಸಂ.ಪ್ರ. ವಿ. ಕೃಷ್ಣಮೂರ್ತಿರಾಜು.
ಮು. (೧) ಜನತಾ ಮುದ್ರಣ, (೨) ಜನಮತ ಪ್ರೆಸ್, ಬೆಂಗಳೂರು.
೬೫೯

**ಬುಲಿಟಿನ್** (ಹಸ್ತಪತಿ-ಗ್ರಂಥಾಲಯ) ಮದರಾಸು
ತ್ರೈಮಾಸ ೨೭x೨೧ ಪು.೪೮
ಸಂಶೋಧನಾ ಸಾಹಿತ್ಯ-ಹಸ್ತಪತಿ ೧೯೪೮-೭೨-
ಪ. ಮದರಾಸು ಸರಕಾರದ ಹಸ್ತಪತಿ, ಗ್ರಂಥಾಲಯ.
ಹೆ.ಮಾ. ೧೯೭೨ರ ವರೆಗೆ ನಡೆದಂತೆ ಕಂಡುಬರುತ್ತದೆ. ಇಂಗ್ಲಿಷ್, ಸಂಸ್ಕೃತ, ತಮಿಳು, ಮಲಯಾಳಂ ಹಾಗೂ ಕನ್ನಡ ಭಾಷೆಗಳಲ್ಲಿ ಬೇರೆ ಬೇರೆ ಹೊರಡುತ್ತಿತ್ತು
೬೬೦

**ಬುಲೆಟಿನ್ (ಭಾರತ ಕೇಂದ್ರ ತೆಂಗಿನ ಸಮಿತಿ)** ಎರ್ನಾಕುಲಂ
ಮಾಸ ೨೭ ೧/೨x೨೧ ೧/೨, ೨೩x೧೮ ಪು.೧೬,೨೮
ಕೃಷಿ-ತೆಂಗು ೧೯೫೩-೫೮ . .
ಸಂ. ಕೆ. ಗೋಪಾಲನ್, ಡಾ. ಪಿ. ಜೆ. ಶ್ರೀಹರಿ.
ಪ. ಕಾರ್ಯದರ್ಶಿ, ಭಾರತ ಕೇಂದ್ರ ತೆಂಗಿನ ಸಮಿತಿ, ಎರ್ನಾಕುಲಂ.
ಮು. ಶ್ರೀನಿವಾಸ ಪ್ರಿಂಟಿಂಗ್ ವರ್ಕ್ಸ್, ಕಾಸರಗೋಡು.
ಹೆ.ಮಾ. ಭಾರತ ಸರಕಾರದ ಕೇಂದ್ರ ಆಹಾರ ಮತ್ತು ವ್ಯವಸಾಯ ಮಂತ್ರಿಮಂಡಲದ ಆಶಯದಲ್ಲಿ
೬೬೧

**ಬೃಹಜ್ಯೋತಿ** ಜುಮನಾಳ
ಮಾಸ ೨೦x೧೩ ಪು.೨೪
ಸಾಹಿತ್ಯ/ಸಮ್ಮಿಶ್ರ ೧೯೧೧ . .
ಸಂ.ಪ. ಬ್ರಹ್ಮಶ್ರೀ ಸಿ. ನಾಗಶಾಸ್ತ್ರಿ
೬೬೨

**ಬೃಹತ್ ಹೋರಾಫಲ ಚಿಂತಾಮಣಿ** ಬೆಂಗಳೂರು
ಮಾಸ ೨೦ ೧/೨x೧೩ ಪು.೩೬
ಜ್ಯೋತಿಷ್ಯ ೧೯೩೧ . .
ಸಂ. ಶ್ರೀನಿವಾಸ ರಾವ್ ಜೋಶಿ.
ಪ. ಶ್ರೀ ಜೋಶಿ ಸರ್ವಸಂಗ್ರಹ ಜ್ಯೋತಿಷ್ಯಕರು.
ಮು. ವೆಂಕಟಾದ್ರಿ ಮುದ್ರಣಾಲಯ.
ಹೆ.ಮಾ. ಜ್ಯೋತಿಷ್ಯ ಪರಿಶೋಧಕರಾಗಿ ಪಂಡಿತ ವೆಂಕಟ ನಾರಾಯಣ ಶಾಸ್ತ್ರಿಯವರು ಕಾರ್ಯ ನಿರ್ವಹಿಸುತ್ತಿದ್ದರು.
೬೬೩

**ಬೃಹತ್ ಹೋರಾಸ್ತ್ರೀ ಜಾತಕಫಲ ಚಿಂತಾಮಣಿ** ಧಾರವಾಡ
ಮಾಸ ೨೦x೧೮ ಪು.೪೮
ಜ್ಯೋತಿಷ್ಯ ೧೯೩೨ . .
ಸಂ. ಶ್ರೀನಿವಾಸ ರಾವ್ ಜೋಶಿ.
ಪ್ರ. ಸರ್ವಸಂಗ್ರಹ ಜ್ಯೋತಿಷಾಲಯ.
ಹೆ.ಮಾ. ಸಂಪಾದಕರು ಬೆಂಗಳೂರಲ್ಲಿ ಹೊರಡಿಸುತ್ತಿದ್ದ ಪತ್ರಿಕೆಯನ್ನು ಧಾರವಾಡಕ್ಕೆ ತಂದು ಮುಂದುವರಿಸಿದರು.
೬೬೪

**ಬೆಂಗಳೂರು ದೇಶೀಯ ವಿದ್ಯಾಶಾಲಾ ಪತ್ರಿಕಾ** ಬೆಂಗಳೂರು
ತ್ರೈಮಾಸ ೧೮x೧೨ ಪು.೨೪
ಶಿಕ್ಷಣ/ಸಾಹಿತ್ಯ ೧೯೨೩ . .
ಸಂ.ಪ. ದೇಶೀಯ ಶಿಕ್ಷಣ ಸಂಘ, ದೇಶೀಯ ವಿದ್ಯಾಶಾಲಾ, ಬೆಂಗಳೂರು.
೬೬೫

**ಬೆಳಕು** ಮೈಸೂರು
ವಾರ ೩೭x೨೫ ಪು.೪

ಶಿಕ್ಷಣ ೧೯೪೨ . .

ಸಂ. ವಿ. ಶ್ರೀನಿವಾಸನ್.
ಪ್ರ. ಮೈಸೂರು ಸಂಸ್ಥಾನ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.
ಮು. ಮೈಸೂರು ಸಂಸ್ಥಾನ ವಯಸ್ಕರ ಶಿಕ್ಷಣ ಮುದ್ರಣಾಲಯ, ಮೈಸೂರು.
ಹೆ.ಮಾ. ಪ್ರಸಾರ ಸಂಖ್ಯೆ ಐದು ಸಾವಿರವನ್ನು ಮೀರಿತ್ತು, ಎಚ್. ವಿ. ಸುಬ್ಬರಾಮಯ್ಯ ಕುಮಾರಸ್ವಾಮಿ, ಪಿ. ಆರ್. ನಾಗಪ್ಪ, ಆರ್. ಬೋರಯ್ಯನವರು ಇದಕ್ಕೆ ಸೇವೆ ಸಲ್ಲಿಸಿದವರು. ಎಚ್. ಜಿ. ರಾಮಸ್ವಾಮಿ ಅಯ್ಯಂಗಾರರು ವ್ಯವಸ್ಥಾಪಕರಾಗಿದ್ದರು.
೬೬೬

**ಬೆಳಕು** ಹುಬ್ಬಳ್ಳಿ
ವಾರ ೩೬x೨೪ ಪು.೮

ಸಮ್ಮಿಶ್ರ ೧೯೪೫ . .

ಸಂ. ಗೌರೀಶ ಕಾಯ್ಕಿಣಿ.
ಹೆ.ಮಾ. ಬಡವರ ಹಿತದೃಷ್ಟಿಯಿಂದ ಹೊರಟ ಪತ್ರಿಕೆ.
೬೬೭

**ಬೈರಾಗಿ** ಮುಂಬಯಿ
ಮಾಸ ೨೫x೧೯ ಪು.೪೨

ಸಾಹಿತ್ಯ/ಸಮ್ಮಿಶ್ರ ೧೯೬೬ . .

ಸಂ. ಎಚ್. ಕೆ. ದೇಶಪಾಂಡೆ.
ಪ್ರ. ಸಾಗರ ಪ್ರಕಾಶನ.
ಮು. ರವಿ ಮುದ್ರಣಾಲಯ, ಬೆಳಗಾವಿ.
೬೬೮

**ಬೋಧಕ ಬೋಧಿನೀ** ಬೆಂಗಳೂರು
ಮಾಸ ೨೦x೧೩ ಪು.೩೦

ಕ್ರೈಸ್ತ ೧೯೦೫-೨೭ . .

ಪ. ಬೆಂಗಳೂರು ಬುಕ್ ಟ್ರಾಕ್ಟ್ ಸೊಸೈಟಿ.
ಮು. ವೆಸ್ಲಿಯನ್ ಮಿಶನ್ ಮುದ್ರಾಲಯ, ಮೈಸೂರು.
೬೬೯

**ಬೋಧಕ ಸೇವೆ** ಬೆಂಗಳೂರು,ಚಿಕ್ಕಬಳ್ಳಾಪುರ
ತ್ರೈಮಾಸ ೨೦x೧೩ ಪು.೨೪

ಶಿಕ್ಷಣ ೧೯೨೭ . .

ಸಂ. ಆರ್. ಕೃಷ್ಣಸ್ವಾಮಯ್ಯಂಗಾರ್
ಪ. (೧) ಮಿಡ್ಲ್ ಸ್ಕೂಲ, ಚಿಕ್ಕಬಳ್ಳಾಪುರ. (೨) ದಿ ನಾರ್ಮಲ್ ಸ್ಕೂಲ್, ಬೆಂಗಳೂರು.
ಹೆ.ಮಾ. ವರ್ಷಾಂತದೊಳಗೇ ನಾಲ್ಕು ತಿಂಗಳಿಗೊಮ್ಮೆ ಹೊರಡತೊಡಗಿತು.
೬೭೦

**ಬೋಧಾಮೃತ** ಹುಬ್ಬಳ್ಳಿ
ಮಾಸ ೨೦x೧೪ ಪು.೨೬

ಧಾರ್ಮಿಕ ೧೯೨೬ . .

ಸಂ. ಶ್ರೀ ಶಿವಪುತ್ರಸ್ವಾಮಿ.
ಪ್ರ. ಚಂದ್ರಗಿರಿ ಸಿದ್ಧಾಶ್ರಮ, ಹುಬ್ಬಳ್ಳಿ.
ಮು. ಕರ್ನಾಟಕ ಪ್ರಿಂಟಿಂಗ್ ಪ್ರೆಸ್, ಧಾರವಾಡ.
ಹೆ.ಮಾ. ಸದ್ಗುರು ಸಿದ್ಧಾರೂಢ ಬೋಧಾಮೃತ ಶಂಕರಾಚಾರ್ಯ ಶತಶ್ಲೋಕೀ, ಟೀಕಾತಾತ್ಪರ್ಯ ಮುಂತಾದ ಬರೆಹಗಳಿದ್ದವು.
೬೭೧

**ಬೋಧಿನೀ** ಉಡುಪಿ
ಮಾಸ ೨೦x೧೩, ೨೪x೧೮ ಪು.೨೬,೪೦
ಸಾಹಿತ್ಯ/ಸಮ್ಮಿಶ್ರ ೧೯೧೯-೪೮
ಸಂ. ಟಿ. ಮಂಗೇಶರಾವ್, ಎಂ. ಎನ್. ಕಾಮತ್, ಕೋಟಿಕಾರ ರಾಮರಾವ್.
ಪ್ರ. ಪಿ. ಎನ್. ಪ್ರಭು.
ಮು. ಪ್ರಭಾಕರ ಮುದ್ರಾಯಂತ್ರ, ಉಡುಪಿ.
೬೭೨

**ಬ್ರಹ್ಮಾನಂದ** ಮದರಾಸು
ಮಾಸ ೧೯x೧೩ ಪು.೨೪

ಧಾರ್ಮಿಕ ೧೯೨೦ . .

೬೭೩

**ಬ್ರಹ್ಮಾನಂದ** ಮೈಸೂರು
ಮಾಸ ೧೮x೧೨ ಪು.೨೪
ಧಾರ್ಮಿಕ ೧೯೦೭-೦೮
ಪ್ರ. ಶ್ರೀಶಂಕರಾನಂದ ಸಭಾ.
ಮು. ಗಾಜ್ಜುಪಟ್ಟ ಟೇಡಿಂಗ ಎಸೋಸಿಯನ್ ಪ್ರೆಸ್, ಮೈಸೂರು.
೬೭೪

**ಬ್ರಾಹ್ಮಣ** ಬೆಂಗಳೂರು
ವಾರ ೨೯x೨೨ ೧/೨ ಪು.೧೨

ಧಾರ್ಮಿಕ ೧೯೧೮ . .

ಸಂ. ಆರ್ ಜಿ. ಶರ್ಮ
ಪ. ಕಾರ್ಯದರ್ಶಿ. ಬಾಹ್ಮಣ ಸಂಘ, ಬೆಂಗಳೂರು.
೬೭೫

**ಬ್ರಾಹ್ಮಣ** ಬೆಂಗಳೂರು
ಮಾಸ ೨೪x೧೮ ಪು.೩೨

ಧಾರ್ಮಿಕ ೧೯೩೫ . .

ಸಂ. ಕರ್ಲಮಂಗಲಂ ಶ್ರೀಕಂಠಯ್ಯ.
ವ್ಯ.ಸಂ. ವಾಜಪೇಯ ಗೋವಿಂದಯ್ಯ.
ಮು. ಶ್ರೀ ವೆಂಕಟಾದ್ರಿ ಪ್ರೆಸ್, ಚಿಕ್ಕಪೇಟೆ.
ಹೆ.ಮಾ. ಮುಖಪುಟವು ಆಕರ್ಷಣೀಯವಾಗಿತ್ತು. ಧರ್ಮವೃಕ್ಷ, ಅದಕ್ಕೆ ನಾಲ್ಕು ವೇದಗಳ ಕೊಂಬೆಗಳು. ಇದರ ಹಿನ್ನೆಲೆಯಲ್ಲಿ ದೊಡ್ಡದಾದ ಓಂ. ಮಧ್ಯದಲ್ಲಿ 'ಬಾಹ್ಮಣ' ಕನ್ನಡ-ಸಂಸ್ಕೃತದಲ್ಲಿತ್ತು.

೧೯೧೮ರಲ್ಲಿ ಆರ್. ಜಿ. ಶರ್ಮ ಎಂಬುವರು ಹೊರಡಿಸಿ "ಬಾಹ್ಮಣ" ಪಕಟನೆ ನಿಲ್ಲಿಸಿತ್ತು.
೬೭೬

**ಭಕ್ತ ಕೇಸರಿ** ಹಾಸನ
ವಾರ ೩೫x೨೫ ಪು.೪

ಧಾರ್ಮಿಕ ಡಿ.೧೯೫೩ . .

ಸಂ. ಎಂ. ಸಿ. ನರಸಿಂಹಶಾಸ್ತ್ರಿ
ಪ. ಡಿ. ಬಸವರಾಜ ಆರ್ಟ್ಸ್, ಜಿ. ಎಚ್. ರಾಜಪ್ಪ.
೬೭೭

**ಭಕ್ತಬಂಧು** ಕೊಪ್ಪಳ
ಮಾಸ ೨೧x೧೮ ಪು.೪೦-೫೦
ಧಾರ್ಮಿಕ ೧೯೧೯-
ಸಂ. ಎಚ್. ಚಿದಂಬರಯ್ಯ, ಬೆಂಗಳೂರು.
ಪ. ಭಕ್ತಿವರ್ಧಕ ಸಂಘ.
ಮು. ಬಿ. ಬಿ. ಡಿ. ಪವರ ಪೆಸ್, ಬೆಂಗಳೂರು.
ಹೆ.ಮಾ. ಕರ್ಪೂರ ಶ್ರೀನಿವಾಸರಾಯರ ಪ್ರೋಪಕತ್ವದಲ್ಲಿ ಹೊರಟ ಪತ್ರಿಕೆ. ಅವರ ಪಾಂಡಿತ್ಯಪೂರ್ಣ ಲೇಖನವನ್ನು ಪಥಮ ಸಂಚಿಕೆಯಲ್ಲಿ ಕಾಣಬಹುದು. ಸಂಪಾದಕೀಯ ನುಡಿಯೇ ೧೦ ಪುಟಗಳಷ್ಟು ಸುದೀರ್ಘವಾಗಿದೆ.

ಕೊಪ್ಪಳ, ದಾವಣಗೆರೆ, ಬೆಂಗಳೂರುಗಳಿಂದ ಹೊರಟಂತೆ ಅನಿಸುತ್ತದೆ.
೬೭೮

**ಭಕ್ತವಿಜಯ** ಮೈಸೂರು
ಮಾಸ ೨೪x೧೫ ೧/೨ ಪು.೩೨

ಧಾರ್ಮಿಕ ಆ.೧೯೦೯-೧೬ . .

ಸಂ.ಪ. ಎಂ. ಸೀತಾರಾಮಶಾಸ್ತ್ರಿ.
ಮು. ಕೆ. ನರಸಿಂಹಯ್ಯ ಎಂಡ್ ಕಂಪನಿ.
ಹೆ.ಮಾ. ಭಕ್ತವಿಜಯ ಗ್ರಂಥ ಮರಾಠಾ ಮಹೀಪತಿಯಿಂದ ಬರೆಯಲ್ಪಟ್ಟದು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕ್ರಿ.ಶ.ಸು ೧೮೮೪ರಲ್ಲಿ ಅನುವಾದಿಸಲ್ಪಟ್ಟಿತ್ತು. ಅರಮನೆಯಲ್ಲಿ ಕಲ್ಲಚ್ಚಿನಲ್ಲಿ ಮುದ್ರಣದಲ್ಲಿ ಸಿದ್ಧವಾಗಿತ್ತು. ಅದನ್ನು ಧಾರಾವಾಹಿಯಾಗಿ ಈ ಮಾಸಿಕದಲ್ಲಿ ಪ್ರಕಟಿಸಲಾಗುತ್ತಿತ್ತು. ಸಂಪಾದಕರು ಮೈಸೂರು ಮಹಾರಾಜರ ನಾರ್ಮಲ್ ಹೈಸ್ಕೂಲ ಪಂಡಿತ ಸೀತಾರಾಮ ಶಾಸ್ತ್ರಿಯವರು. ಎಂದೋ ಪ್ರಕಟನೆ ನಿಂತು ಪುನಃ ೧೯೧೬ರಿಂದ ಮಾಸಿಕ ಪುಸ್ತಕವಾಗಿ ಹೊರಟಂತೆ ಕಂಡುಬರುತ್ತದೆ.
೬೭೯

**ಭಕ್ತಿ ಸಂಜೀವನ** ಗದಗ
ಮಾಸ ೧೮ ೧/೨x೧೪ ಪು.೨೮
ಕ್ರೈಸ್ತ ೧೯?
ಸಂ. ಎಂ. ಹೇಲ್ಸ್
ಪ. ಓರಿಯಂಟಲ್ ಮಿಶನರಿ ಸಂಸ್ಥೆ ಸತ್ಯವೇದ ವಿದ್ಯಾಲಯ. ಗದಗ.
೬೮೦

**ಭಕ್ತಿ ಸಂದೇಶ** ಮಂಗಳೂರು
ಮಾಸ ೧೮ ೧/೨x೧೩ ೧/೨ ಪು.೩೨

ಧಾರ್ಮಿಕ ೧೯೦೬-೨೦ . .

ಸಂ.ಪ. ದತ್ತಾತಯ ಕೃಷ್ಣ ಭಾರದ್ವಾಜ.
೬೮೧

**ಭವರೋಗ ವೈದ್ಯ** ಮೈಸೂರು
ಮಾಸ ೨೦x೧೪ ಪು.೨೪

ವೈದ್ಯಕೀಯ ೧೯೨೫ . .

ಸಂ.ಪ. ಕೆ. ಶಿವರಾಮದಾಸ.
೬೮೨

**ಭವಿಷ್ಯಬಂಧು** ತುಮಕೂರು
ಮಾಸ ೨೦x೧೪ ಪು.೨೦
ಜ್ಯೋತಿಷ್ಯ ೧೯೪೮ . .
ಸಂ. ಕೆ. ನರಸಿಂಹಮೂರ್ತಿ.
೬೮೩

**ಭವ್ಯವಾಣಿ** ಉಡುಪಿ(ದ.ಕ.)
ಮಾಸ ೧೯x೧೩ ಪು.೬೦-೬೪
ಧಾರ್ಮಿಕ ೧೯೫೭-೭೮ . .
ಸಂ. ಕೆ. ಲಕ್ಷ್ಮೀನಾರಾಯಣ ಭಟ್ಟ.
ಪ್ರ. ಕೆ. ಎಲ್. ಭಟ್ಟ
ಮು. ಲಕ್ಷ್ಮೀ ಪ್ರಿಂಟರ್ಸ್, ಉಡುಪಿ.
೬೮೪

**ಭಾಗ್ಯೋದಯ** ಶಿವಮೊಗ್ಗ
ಮಾಸ ೧೮x೧೪ ಪು.೧೬
ಮಹಿಳೆ ೧೯೧೪ . .
ಸಂ.ಪ್ರ. ಟಿ. ಸಂಜೀವಮ್ಮ
ಹೆ.ಮಾ. ಕನ್ನಡ ಪತ್ರಿಕೋದ್ಯಮದಲ್ಲಿ ಪ್ರಥಮ ಮಹಿಳಾ ಯತ್ನವಾಗಿರುವಂತೆ ತೋರುತ್ತದೆ.
೬೮೫

**ಭಾರತ** ಪುತ್ತೂರು
ವಾರ ૩೫x೨೨ ಪು.೬
ಸುದ್ದಿ ೧೯೬೦-
ಸಂ.ಪ್ರ. ಎಂ. ವೆಂಕಟರಮಣ ಭಟ್ಟ
ಮು. ವಿ. ಬಿ. ಹೊಸಮನೆ, ರಾಷ್ಟ್ರಮತ ಮುದ್ರಣಾಲಯ, ಮಂಗಳೂರು.
೬೮೬

**ಭಾರತ ದರ್ಶನ** ಬೆಂಗಳೂರು
ಮಾಸ ೧೮x೧೨ ?
ಧಾರ್ಮಿಕ/ಸಾಹಿತ್ಯ ೧೯೫೭ . .
ಸಂ. ವಿಶ್ವಾಮಿತ್ರ.
ಪ್ರ. ಕೆ. ಎಸ್. ಕೌಶಿಕ.
ಮು. ಭಾರತ ದರ್ಶನ ಪ್ರೆಸ್. ಬೆಂಗಳೂರು.
ಹೆ.ಮಾ. ಇದೇ ಪ್ರಕಾಶನವು ರಾಮೇಶ್ವರ ಅವಧಾನಿಯವರ (ಕೌಶಿಕ) ಸಂಪಾದನೆಯಲ್ಲಿ ಮಹಾಭಾರತವನ್ನು ૩೨ ಸಂಪುಟಗಳಲ್ಲಿ ಟೀಕಾಸಹಿತ ಪ್ರಕಟಿಸಿರುವದನ್ನು ಗಮನಿಸಬೇಕು.
೬೮೭

**ಭಾರತ ನಂದಿನಿ** ನಂಜನಗೂಡು
ಮಾಸ ೨೧x೧೪ ಪು.೧೨
ಸಾಹಿತ್ಯ/ಸಮ್ಮಿಶ್ರ ೧೯೨೨-
ಸಂ. ನಂಜನಗೂಡು ತಿರುಮಲಾಂಬಾ.
ಹೆ.ಮಾ. ಇದೇ ಸಂಪಾದಕಿ 'ನಂದಿನಿ' ಎಂಬ ಪತ್ರಿಕೆಯನ್ನು ಹೊರಡಿಸಿರುವದನ್ನು ಗಮನಿಸಬೇಕು (೧೯೧೬ರಲ್ಲಿ).
೬೮೮

**ಭಾರತ ವಿಭೂತಿ** ಮುಂಬಯಿ
ವಾರ
ಸುದ್ದಿ/ಸಮ್ಮಿಶ್ರ ೧೯೪೮ . .
ಸಂ. ಸ್ವಾಮಿ ಮುರುಘಾನಂದ.
೬೮೯

**ಭಾರತ ಸೇವಕ** ಬೆಂಗಳೂರು
ಮಾಸ ೨೪x೧೮ ಪು.೨೮
ಸಮಾಜಸೇವೆ ನ.೧೯೫೮-
ಸಂ. ಎನ್. ಸಿ. ಚಿಕ್ಕಣ್ಣ
ಪ್ರ. ಭಾರತ ಸೇವಕ ಸಮಾಜ.
ಮು. ಇಂಡಿಯನ್ ಪ್ರೆಸ್, ಬಳೇಪೇಟೆ.
ಹೆ.ಮಾ. ಸಿದ್ದವನಹಳ್ಳಿ ಕೃಷ್ಣಶರ್ಮ, ಎಸ್. ಡಿ. ಇಚಲ ಮುಂತಾದವರ ಲೇಖನಗಳನ್ನು ಪ್ರಕಟವಾಗಿವೆ.
೬೯೦

**ಭಾರತಿ** ಬೆಂಗಳೂರು
ದಿನ ಪು.೪
ಸುದ್ದಿ ೧೯೦೭-೧೯೦೮
ಸಂ. ಡಿ. ವಿ. ಗುಂಡಪ್ಪ, ನವರತ್ನ ಕೃಷ್ಣಸ್ವಾಮಿ
ಹೆ.ಮಾ. ಸುಮಾರು ಒಂದು ವರ್ಷ ಕಾಲ ನಡೆಯಿತು. ಕನ್ನಡದ ಪ್ರಥಮ ದೈನಿಕ ಎಂದು ಎನ್. ಎಸ್. ಲಕ್ಷ್ಮೀನಾರಾಯಣ ಭಟ್ ಹೇಳಿದ್ದಾರೆ. ಮೈಸೂರು ಪತ್ರಿಕಾ ಶಾಸನವನ್ನು ಪ್ರತಿಭಟಿಸಿದ್ದರು. ೧೯೦೮ರಲ್ಲಿ ಪ್ರಕಟನೆಯನ್ನು ನಿಲ್ಲಿಸಬೇಕಾಯಿತು.
೬೯೧

**ಭಾರತಿ II** ಬೆಂಗಳೂರು
ಮಾಸ ? ?
ಸಾಹಿತ್ಯ ೧೯೦೮-೨೪ . .
ಸಂ.ಪ್ರ. ವಿದ್ಯಾನಿಧಿ ಕಾರುಪಲ್ಲಿ ಶಿವರಾಮದಾಸ್.
೬೯೨

**ಭಾರತಿ** ಬಳ್ಳಾರಿ
ವಾರ,ಮಾಸ ೨೧x೧೪ ಪು.೨೦
ಸುದ್ದಿ/ಸಮ್ಮಿಶ್ರ ೧೯೧೫ . .
ಸಂ.ಪ. ಕೆ. ಎಂ. ಕರಿಬಸವಯ್ಯ
೬೯೩

**ಭಾರತಿ** ಮೂಲ್ಕಿ(ದ.ಕ.)
ಮಾಸಿಕ ೨೩x೧೮ ಪು.೩೬
ಸಾಹಿತ್ಯ/ಸಮ್ಮಿಶ್ರ ೧೯೪೭ . .
ಸಂ.ಪ. ವಿ. ವಾಮನ ಶೆಣೈ
ಮು. ಶ್ರೀರಾಧಾಕಾಂತ ಪ್ರೆಸ್, ಮೂಲ್ಕಿ.
ಹೆ.ಮಾ. ೧೯೩೮ರ ವರೆಗೆ ನಡೆದುದು ಸ್ಪಷ್ಟ. ಭಾರತ ಹಾಗೂ ಬಹಿರ್ದೇಶಗಳಲ್ಲಿ ಪ್ರಸಾರ ಇತ್ತೆಂದೂ ಪತ್ರಿಕೆ ಹೇಳಿದೆ. ಎರಡನೇ ವರ್ಷ "ಕರಿಯರ ಖಜಾನೆ" ವಿಭಾಗವಿತ್ತು
೬೯೪

**ಭಾರತಿ** ಮುಂಬಯಿ,ಗದಗ
ಮಾಸ ೨೧x೧೪ ಪು.೬೦
ಸಾಹಿತ್ಯ/ಕತೆಗಳು ೧೯೫೦-೫೮
ಸಂ. ಕೆ. ಸಾವಿತ್ರಿ, ಕೆ. ಕೃಷ್ಣಕುಮಾರ
ವ್ಯ. ವಿಠ್ಠಲ ಕುಲಕರ್ಣಿ.
ಪ. ಭಾರತೀ ಪ್ರಕಾಶನ ಮಂದಿರ, ದಾದರ.
ಮು. ನ್ಯೂ ಗದಗ ಪ್ರಿಂಟರಿ.
ಹೆ.ಮಾ. ಮುಖಪುಟದಲ್ಲಿ 'ಸರ್ವೋತ್ತಮ ಸಣ್ಣ ಕತೆಗಳ ಸಂಕಲನ ಪತ್ರಿಕೆ' ಎಂದು ಅನ್ವರ್ಥಕವಾಗಿ ಹೇಳಿಕೊಂಡಿದೆ. ಒಂದೇ ವೇಳೆಗೆ ಮುಂಬಯಿ-ಗದಗಗಳಿಂದ ಪ್ರಕಾಶಿತ. 'ಮಕ್ಕಳ ತೋಟ' ಎಂಬ ವಿಭಾಗವಿತ್ತು. ಕೆ. ಗೋಪಾಲ ಕೃಷ್ಣರಾಯರು, ಆರ್. ಕೆರೂರು, ಜಿ.ಆರ್. ರಾವ್ ಮುಂತಾದವರು ಸಲಹೆಗಾರ ಮಂಡಳಿಯಲ್ಲಿದ್ದರು. ಕೊನೆಯಲ್ಲಿ ಕರ್ನಾಟಕದ ಬಗ್ಗೆ ಅಂಕಿಸಂಖ್ಯೆ ಸಹಿತ ಅಪೂರ್ವ ಮಾಹಿತಿ ಕೊಡುತ್ತಿದ್ದರು. ಬೇರೆ ಭಾರತೀಯ ಭಾಷೆಗಳಲ್ಲಿಯೂ ಕತೆಗಳ ಅನುವಾದ ಇರುತ್ತಿತ್ತು.
೬೯೫

**ಭಾರತೀಯ ಇತಿಹಾಸ ಕಥಾವಳಿ** ಬೆಂಗಳೂರು
ಮಾಸ ೨೧x೧೪ ಪು.೧೬
ಸುದ್ದಿ ಇತಿಹಾಸ ಕಥೆ ೧೯೩೩ . .
ಸಂ.ಪ. ಕೆ. ಆರ್. ಸೇತೂರಾಮನ್.
೬೯೬

**ಭಾರತೀಯ ಕೆಲಸಗಾರ** ಮಂಗಳೂರು
ಪಕ್ಷ ೩೮x೨೬ ಪು.೪
ಕಾರ್ಮಿಕ ಫೆ.೧೯೬೫
ಸಂ.ಪ. ಪಿ. ಡಿ. ಬಂಗೇರ.
ಮು. ವಿಶ್ವಕರ್ಮ ಪ್ರಿಂಟರ್ಸ್.
೬೯೭

**ಭಾರತೀಯ ವಿಲಾಸ** ಮೈಸೂರು
ಮಾಸ
ಸಾಹಿತ್ಯ/ಸಮ್ಮಿಶ್ರ ೧೯೦೯-೦೯
ಸಂ. ಆನವಟ್ಟಿ ರಾಮರಾಯರು; ಎಚ್. ವಿ. ನರಸಿಂಹಯ್ಯಂಗಾರ್.
ಪ. ಗ್ರಂಥ ಪ್ರಕಟನ ಮಂದಿರ.
ಹೆ.ಮಾ. ಪತ್ರಿಕಾ ಶಾಸನದನ್ವಯ ೧೯೦೯ರಲ್ಲಿ ಪತ್ರಿಕೆ ರದ್ದಾಯಿತು.
೬೯೮

**ಭಾರದ್ವಾಜ** ಬೆಂಗಳೂರು
ಪಕ್ಷ,ಮಾಸ ೨೫x೧೯, ३೦x೧೩ ಪು.೪
ಸುದ್ದಿ ೧೯೭೧ . .
ಸಂ.ಪ. ದೆ. ವೆ. ಕೃಷ್ಣಮೂರ್ತಿ.
ಮು. ಕಾವೇರಿ ಪ್ರೆಸ್, ಶ್ರೀದೇವಿ ಪ್ರೆಸ್.
೬೯೯

**ಭಾವನಾ** ಶಿರಸಿ,ಬೆಂಗಳೂರು
ಮಾಸ ೨೧x೧೮ ಪು.೧೨
ಸಾಹಿತ್ಯ ಫೆ.೧೯೫೬-
ಸಂ. ಎಸ್. ಎಂ. ಬೊಂಗಾಳೆ, ಎಂ. ಎಸ್, ರಾಮಸ್ವಾಮಿ.
ಗೌ.ಸಂ. ಕಾಶೀನಾಥ್, ಶಿರಸಿ.
ಪ. ವಿ. ಎ. ಚೌಧುರಿ, ಬೆಂಗಳೂರು.
ಮು. ವಿಜಯಾನಂದ ಪವರ ಪ್ರೆಸ್, ಬೆಂಗಳೂರು. ಹಿಂದೂಪುರ ಪವರ್ ಪ್ರೆಸ್.
ಹೆ.ಮಾ. ಸ.೧೯೫೬ರಲ್ಲಿ ಎರಡನೇ ಸಂಚಿಕೆಯಿಂದ 'ಚಿಣ್ಣರ ಚಿನ್ನ' ವಿಭಾಗ-೬ ಪುಟಗಳದ್ದಿತ್ತು. ಸಪ್ಟೆಂಬರದಲ್ಲಿ ತೆಲುಗಿನಲ್ಲಿ ಪ್ರಾರಂಭ. ೬ ಪುಟಗಳು ಇಂಗ್ಲಿಷ್‌ನಲ್ಲಿ.
೭೦೦

**ಭಿಷಗ್ವರ** ಬೆಳಗಾವಿ
ಮಾಸ ೨೦x೧೪ ಪು.೨೬

ಆಯುರ್ವೇದ ೧೯೫೫-೫೯ . .

ಪ.ಸಂ. ವೈ. ರಾ. ಕ್ರ ಕುಲಕರ್ಣಿ.
ಪ. ಎ. ವಿ. ಗದಗ, ಆಯುರ್ವೇದ ವಿದ್ಯಾಪೀಠ ಸೊಸೈಟಿ.
ಮು. ವಿಶಭಾರತಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ.
ಹೆ.ಮಾ. ಸಹಾಯಕ ಸಂಪಾದಕರಾಗಿ, ವೈದ್ಯರಾದ ಜಿ. ಎಸ್. ಜಕಾತಿ, ವಿ. ಎನ್. ಗ್ರಾಮೋಪಾಧ್ಯೆ, ಎ. ವಿ. ಗದಗ, ಕಾರಕಾರೀ ಸಂಪಾದಕರಾಗಿ ಕೆ. ಜೇ. ಹಿರೇಮಠ ಇದ್ದರು.
೭೦೧

**ಭಿಷಗ್ವಿಲಾಸ** ಅಹಮ್ಮದನಗರ
ಮಾಸ ೨೧x೧೩ ಪು.೨೪

ಆಯುರ್ವೇದ ೧೯೦೧-೩೮ . .

ಸಂ. ವೈದ್ಯ ಗಂಗಾಧರ ಶಾಸ್ತ್ರಿ ಗುಣೆ.
ಹೆ.ಮಾ. ೩೨ ವರ್ಷಗಳ ಕಾಲ ನಡೆದು ಬಂದ ಜನಪ್ರಿಯ ಪತ್ರಿಕೆ. ಮರಾಠಿಯಲ್ಲಿಯೂ ಪ್ರಕಟವಾಗುತ್ತಿತ್ತು.
೭೦೨

**ಭೂದಾನ** ಕಡೋಲಿ(ಬೆಳಗಾವಿ)
ಪಕ್ಷ ೨೮x೨೨ ಪು.೧೨

ಸರ್ವೋದಯ/ಭೂದಾನ ೧೯೫೪-೬೯ . .

ಸಂ. ವಾಮನ ಅನಂತ ಹೊದಿಕೆ.
ಪ್ರ. ಭೂದಾನ ಕಾರ್ಯಾಲಯ, ಕಡೋಲಿ, ಸರ್ವಸೇವಾ ಸಂಘ.
ಮು. ಮಹಾವೀರ ಪ್ರೆಸ್, ಬೆಳಗಾವಿ.
ಧ್ಯೇಯವಾಕ್ಯ: "ಬ್ರಹ್ಮ ಸತ್ಯಂ ಜಗತ್‌ಸ್ಫೂರ್ತಿಃ ಜೀವನ ಸತ್ಯ ಶೋಧನಂ".
ಹೆ.ಮಾ. ಪ್ರತಿಗಳು ಸಂಖ್ಯೆ ೧೧೪೦ ಎಂದಿದೆ. (೧೯೬೯) ಪ್ರಿಯವ್ರತ ಕೋಪಿದರವರು ಸಂಪಾದಕರಾಗಿದ್ದರು. ಸರ್ವೋದಯ ಕಾರ್ಯಾಲಯ ಹಿಚಕಡದ ಕರ್ನಾಟಕ ಭೂದಾನ ಸಮಿತಿಯ ಪ್ರಕಟನೆ. ಬೆಂಗಳೂರಿನಿಂದಲೂ ಏಕಕಾಲಕ್ಕೆ ಹೊರಟಿತ್ತು. ಅಂಕೋಲಾದಿಂದಲೂ ಇದೇ ಕಾಲಕ್ಕೆ ಹೊರಟಿತ್ತು.

ಆರ್. ಎಸ್. ಮಹಾಲೆ ಅಂಕೋಲೆಯ ಗಜಾನನ ಪ್ರಿಂಟಿಂಗ್ ವರ್ಕ್ಸ್‌ದಲ್ಲಿ ಮುದ್ರಿಸುತ್ತಿದ್ದರು. ಇಲ್ಲಿ ಅದು ವಾರಪತ್ರಿಕೆಯಾಗಿತ್ತು. ಮೈಸೂರು ಭೂದಾನ ಸಮಿತಿಯಿಂದ ೧೯೫೬ರಲ್ಲಿ ಸಾಪ್ತಾಹಿಕವಾಗಿ ಪ್ರಕಟ. ಸರ್ವಸೇವಾಸಂಘದ ಸಹಮಂತ್ರಿ ಶ್ರೀವಲ್ಲಭಸ್ವಾಮಿಯವರ ಸಲಹೆಯ ಮೇರೆಗೆ ೧-೧೦-೫೬ರಿಂದ ಎರಡೂ ಸೇರಿ ಕರ್ನಾಟಕ ಭೂದಾನ ಸಮಿತಿಯಿಂದ ಪ್ರಕಟ. ಅಕೋಲೆಯ ಶ್ರೀ ತಿಮ್ಮಪ್ಪ ನಾಯ್ಕರು ಸಂಯೋಜಕರಾಗಿದ್ದರು.
೭೦೩

**ಭೂದಾನ** ಬೆಂಗಳೂರು
ವಾರ ೨೬x೧೯ ಪು.೬

ಸರ್ವೋದಯ/ಭೂದಾನ ೧೯೫೪-೫೭

ಸಂ. ಪ್ರಿಯವ್ರತ
ಪ. ಎಚ್. ಆರ್. ವೆಂಕಟರಮಣ ಅಯ್ಯರ್.
ಮು. ಇಂಡಿಯನ್ ಪ್ರೆಸ್.
ಹೆ.ಮಾ. ಶೀರ್ಷಿಕೆ 'ಭೂದಾನದ ಮೂಲಕ ಗ್ರಾಮೋದ್ಯೋಗ. ಪ್ರಧಾನ ಅಹಿಂಸಾತ್ಮಕ ಕ್ರಾಂತಿಗಾಗಿ' ಎಂದಿತ್ತು. ಅಯ್ಯರರು ಸರ್ವಸೇವಾ ಸಂಘದ ಕರ್ನಾಟಕ ವಿಭಾಗದ ಸಂಚಾಲಕರಾಗಿದ್ದರು.
೭೦೪

**ಭೂದಾನ ಸರ್ವೋದಯ ಸಂದೇಶ** ಬೆಂಗಳೂರು
ಪಕ್ಷ ೨೮x೨೧ ೧/೨ ಪು.೧೨

ಸರ್ವೋದಯ/ಭೂದಾನ ೧೯೫೪-೫೭ . .

ಸಂ. ಪ್ರಿ. ವೆಂಕೋಬರಾವ್
ಪ್ರ. ಕರ್ನಾಟಕ ಸರ್ವೋದಯ ಮಂಡಲ, ಕಡೋಲಿ.
ಮು. ಎಲೆಕ್ಟ್ರಾನ್ ಪ್ರಿಂಟರ್ಸ್.
ಹೆ.ಮಾ. ಈ ಪತ್ರಿಕೆಯು ಕರ್ನಾಟಕ ಸರ್ವೋದಯ ಮಂಡಲ ಖಾದಿ ಫೆಡರೇಶನ್-ಬೆಂಗೇರಿ-ಹುಬ್ಬಳ್ಳಿಗೆ ಸಂಬಂಧಿಸಿತ್ತು. ೧೦೦೦ ಪ್ರತಿಗಳನ್ನು ಮುದ್ರಿಸುತ್ತಿದ್ದರು. ಇದರ ಕಾರ್ಯಾಲಯ ಬೆಂಗಳೂರಿನಲ್ಲಿ ಇತ್ತು.
೭೦೫

**ಭೂವಿಕಾಸ** ಬೆಂಗಳೂರು
ತ್ರೈಮಾಸ ೨೮x೨೧ ಪು.೫೨

ಕೃಷಿ ೧೯೭೧ . .

ಸಂ. ಜಯಕುಮಾರ ಅನಗೋಳ.
ಪ. ಮೈ. ರಾ. ಸಹಕಾರಿ ಭೂವಿಕಾಸ ಬ್ಯಾಂಕ್.
ಮು. ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು.
೭೦೬

**ಭೈರವ** ದಾವಣಗೆರೆ
ವಾರ ೩೨x೨೦ ೧/೨ ಪು.೪

ಸುದ್ದಿ ೧೯೬೮-೭೪ . .

ಸಂ.ಪ್ರ. ಎಚ್. ಎಂ ದುಗ್ಗಪ್ಪನವರು.
ಮು. ವೀರೇಶ ಪ್ರಿಂಟರ್ಸ್, ದಾವಣಗೆರೆ.
ಧ್ಯೇಯವಾಕ್ಯ: "ಓಯಮ್ಮ ದೇವಿ ನಾಯವನ್ನುಳಿಸಿ ಧರ್ಮವನ್ನು ರಕ್ಷಿಸಮ್ಮ".
೭೦೭

**ಮಂಗಲಾ** — ಕುಮಟಾ
ಮಾಸ ೨೫x೧೦ ಪು.೨೦

ಸಾಹಿತ್ಯ/ಸಮ್ಮಿಶ್ರ ೧೯೫೨ . .

ಸಂ.ಪ. ಎಚ್. ಆರ್. ಪ್ರಭು.
೨೦೮

**ಮಂಗಳೂರ ಸಮಾಚಾರ** — ಮಂಗಳೂರು
ಪಕ್ಷ ೨೫x೧೮ ಪು.೮

ಸುದ್ದಿ ೧೯೪೩-೪೪ . .

ಸಂ. ಹರ್ಮನ್ ಮೋಗ್ಲಿಂಗ್
ಪ. ಬಾಸೆಲ್ ಮಿಶನ್ ಸಂಸ್ಥೆ, ಮಂಗಳೂರು. (ಕಲಚು)
ಹೆ.ಮಾ. ಕನ್ನಡದ ಪಥಮ ಪತಿಕೆಯ ಹಿರಿಮೆ ಇದರದು. ವಾರ್ತಾ ಪತಿಕೆಯಾಗಿ ಮಂಗಳೂರಿನಿಂದ ಹೊರಟ ಈ ಪತಿಕೆ-ಪ್ರಚಾರದ ದೃಷ್ಟಿಯಿಂದ ೧೮೪೪ರಲ್ಲಿ ಬಳ್ಳಾರಿಗೆ ಸ್ಥಾನಾಂತರಗೊಂಡಿತು. ಆತನೇ "ಕಂನಡ ಸಮಾಚಾರವು" ಎಂದು ಹೆಸರು ಬದಲಿಸಿ ವರ್ಷದ ಕೊನೆಯವರೆಗೆ ಹೊರಡಿಸಿದ ಐತಿಹಾಸಿಕ ಪತ್ರಿಕೆಯು. ತೆಲುಗು ಮಾದರಿಯ ಅಚ್ಚಿನ ಅಕ್ಷರಗಳಲ್ಲಿತ್ತು. ೧೮೪೪ ಡಿಸೆಂಬರ ವರೆಗೆ ನಡೆಯಿತು.

(ವಿವರಗಳಿಗಾಗಿ ಲೇಖನ ವಿಭಾಗದಲಿಯ ಈ ಕುರಿತ ಲೇಖನ ನೋಡಬಹುದು.)
೨೦೯

**ಮಕರಂದ** — ಹುಬಳ್ಳಿ
ಷಾಣ್ಮಾಸಿಕ,ಮಾಸ ೧೮x೧೨ ಪು.೮೦
ಸಾಹಿತ್ಯಕ ಜುಲೈ ೧೯೬೧-೬೫
ಸಂ.ಪ. ವೆಂಕಟೇಶ ಸಿ. ಮಣ್ಣೂರು.
ಮು. ಮಕರಂದ ಕಾರ್ಯಾಲಯ.
೨೧೦

**ಮಕ್ಕಳ ಪುಸ್ತಕ** — ಬೆಂಗಳೂರು
ಮಾಸ ೨೫x೧೮ ಪು.೪೨೦

ಬಾಲಸಾಹಿತ ೧೯೨೬-೫೬ . .

ಸಂ. ಸಿ. ಅಶ್ವತ್ಥನಾರಾಯಣರಾವ್, ಡಿ. ಕೆ. ಭಾರದ್ವಾಜ, ದೇವುಡು ನರಸಿಂಹಶಾಸ್ತ್ರಿ (೧೯೨೯ ರಿಂದ)
ಪ. ಕೃಷ್ಣ ಅಂಡ್ ಕಂಪನಿ
ಮು. (೧) ಮಕ್ಕಳ ಪುಸ್ತಕ ಮುದಣ, (೨) ಬಿ. ಬಿ. ಡಿ ಪವರ ಪೆಸ್, ಬೆಂಗಳೂರು.
ಹೆ.ಮಾ. ಸಿ. ಅ. ನಾ. ರಾಯರು ೧೯೩೫ರಲ್ಲಿ 'ನವಜೀವನ' ದೈನಿಕ ನಡೆಸುತ್ತಿದರು.
೨೧೧

**ಮಕ್ಕಳ ಪುಸ್ತಕ** — ಮಂಗಳೂರು
ಮಾಸ ೧೮x೧೨ ಪು.೨೦

ಬಾಲಸಾಹಿತ್ಯ ೧೯೪೯ . .

ಸಂ.ಪ. ಕೆ. ಎಸ್. ಕಾರಂತ
ಮು. ಧರ್ಮ ಪಕಾಶ ಪೆಸ್, ಮಂಗಳೂರು.
೨೧೨

**ಮಕ್ಕಳ ಬಾವುಟ** — ಬೆಂಗಳೂರು
ಮಾಸ ೨೫x೧೮ ಪು.೨೪

ಬಾಲಸಾಹಿತ್ಯ ೧೯೫೩ . .

ಸಂ. ಆರ್. ಕಲ್ಯಾಣಮ್ಮ
ಸಹ ಸಂ. ಕೆ. ಟಿ. ಬನಶಂಕರಮ್ಮ
ಹೆ.ಮಾ. ಆರ್. ಕಲ್ಯಾಣಮ್ಮನವರು "ಮಕ್ಕಳ ಬಾವುಟ" ಪ್ರಾರಂಭಿಸಿದರು. ೧ ವರ್ಷದ ನಂತರ ೧೯೬೪ ನವೆಂಬರ ವೇಳೆಗೆ ಕೆ. ಟಿ. ಬನಶಂಕರಮ್ಮನವರು ವಹಿಸಿಕೊಂಡರು.
೨೧೩

**ಮಕ್ಕಳ ಮಂಟಪ** — ಮಂಗಳೂರು
ಮಾಸ ೧೮ ೧/೨x೧೨ ೧/೨ ಪು.೨೪

ಬಾಲಸಾಹಿತ್ಯ ೧೯೫೫ . .

ಸಂ. ಬಿ. ಎಂ. ಶರ್ಮ
೨೧೪

**ಮಕ್ಕಳ ಸ್ನೇಹಿತ** — ಬೆಳಗಾವಿ
ಮಾಸ ೧೮x೧೩ ಪು.೨೦

ಬಾಲಸಾಹಿತ್ಯ ೧೯೭೦ . .

ಸಂ. ಐ. ಬಿ. ಜಾನ್.
ಪ. ಜೀವಜಲ ಕಾರಾಲಯ.
ಹೆ.ಮಾ. ಕಿಶ್ಚಿಯನ್ ಧಾರ್ಮಿಕ ಮುಖಪತ್ರವಾದ "ಜೀವ-ಜಲ" ಮಾಸಿಕದಲಿ ಪಕಟಿತ ಮಕ್ಕಳ ಪುಟದಲಿಯ ಲೇಖನಗಳ ಸಂಗಹ ರೂಪವಾಗಿತ್ತು.
೨೧೫

**ಮಠಪತ್ರಿಕೆ (ಕಲ್ಲಚ್ಚು)** ಬೆಳಗಾವಿ,ಧಾರವಾಡ
ಮಾಸ ೧೮x೧೨ ಪು.೨೪
ಶಿಕ್ಷಣ/ಪ್ರಾಥಮಿಕ ೧೮೬೫-೬೭-
ಸ್ಥಾ. ಡೆ. ಚೆನಬಸಪ್ಪನವರು
ಸಂಚಾಲಕ. ವೆಂಕಟ ರಂಗೋ ಕಟ್ಟಿ
ಪ್ರ. ಸರಕಾರಿ ಟ್ರೇನಿಂಗ್ ಕಾಲೇಜು, ಬೆಳಗಾವಿ.
ಮು. ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು.

ಮೊದಲು ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು; ೧೮೭೧ರಲ್ಲಿ ಬೆಳಗಾವಿ ಸಮಾಚಾರ ಪ್ರೆಸ್; (೩.೦ ೧೮೮೭ರಲ್ಲಿ ಜ್ಞಾನವರ್ಧಕ ಪ್ರೆಸ್; ೧೮೯೫ರಿಂದ ಕರ್ನಾಟಕಾ ಬುಕ್ ಡಿಪೊ ಪ್ರೆಸ್‌ನಲ್ಲಿ; ೧೯೨೦ರಿಂದ ಹುಬ್ಬಳ್ಳಿಯ ಶೀಕ್ಷ ಪ್ರೆಸ್. ಜುಲೈ ವೇಳೆಗೆ ಹುಬ್ಬಳ್ಳಿಯ ಲಿಂಗರಾಜು ಪ್ರೆ ೧೯೨೧ರಿಂದ ಮೇ ವೇಳೆಗೆ ವೆ. ಬಿ. ಜಠಾರರ ಧಾರವಾಡದ ಕರ್ನಾಟಕ ಪ್ರಿಂಟಿಂಗ್ ಪ್ರೆಸ್‌ಗಳಲ್ಲಿ ಮುದ್ರಿತವಾಗುತ್ತಿತ್ತು. ಹೆ.ಮಾ. ಪ್ರಪ್ರಥಮ ಶೈಕ್ಷಣಿಕ ಪತ್ರಿಕೆ. ೧೮೬೫ರಲ್ಲಿ ಮಠಪತ್ರಿಕೆಯಾಗಿ ಪ್ರಾರಂಭ. ೧೮೬೭ರಲ್ಲಿ ಶಾಲಾ ಪತ್ರಿಕೆಯಾಯಿತು. ೧೮೭೧ರಲ್ಲಿ ಕನ್ನಡ ಶಾಲಾಪತ್ರಕ ಎಂದು, ೧೯೨೯ರಲ್ಲಿ ಪ್ರಾಥಮಿಕ ಶಿಕ್ಷಣವಾಗಿ. (೧೯೪೩ರಲ್ಲಿ ತ್ರೈಮಾಸಿಕವಾಯಿತು. ೧೯೪೮ರಲ್ಲಿ ಪುನಃ ಮಾಸಿಕವಾಯಿತು.)

ಕಳೆದ ಶತಮಾನದಿಂದ ಸುಮಾರು ೧೪೦ ವರ್ಷ ದಾಟಿದ ಏಕಮೇವ ಶೈಕ್ಷಣಿಕ ಪತ್ರಿಕೆಯಾಗಿದೆ. ೧೯೫೬ರಿಂದ ಜೀವನ ಶಿಕ್ಷಣವಾಗಿ ಬರುತ್ತಿದೆ.
೭೧೬

**ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನ ಪತ್ರಿಕೆ** ಮಡಿಕೇರಿ
ತ್ರೈಮಾಸ ೨೧x೧೪ ಪು.೪
ಸಾಹಿತ್ಯ/ಶಿಕ್ಷಣ ೧೯೧೦-೩೪
ಸಂ. ಬಿ. ಎಸ್. ಕುಶಾಲಪ್ಪ.
ಪ್ರ. ಹಳೆಯ ವಿದ್ಯಾರ್ಥಿ ಸಂಘ.
ಹೆ.ಮಾ. ೧೯೧೯ರಲ್ಲಿ ಪತ್ರಿಕೆ ನಿಂತು ೧೯೩೨ರಲ್ಲಿ ಪುನರಾರಂಭ. ಬಿ. ಎಸ್. ಕುಶಾಲಪ್ಪನವರ ನೇತೃತ್ವದಲ್ಲಿ ೨ ವರ್ಷ ನಡೆಯಿತು.
೭೧೭

**ಮತ್ಸ್ಯಲೋಕ** ಹೊಸಬೆಟ್ಟು(ಸುರತ್ಕಲ್)
ಮಾಸ (ಅನಿಯಮಿತ) ೨೪ ೧/೨x೧೮ ಪು.೩೨
ಮತ್ಸ್ಯೋದ್ಯಮ ೧೯೭೧ . .
ಸಂ. ಶ್ರೀನಿವಾಸ ಕೋಟ್ಯಾನ್.
ಸಹ ಸಂ. ಯು ರಾಮನಾಥ ಮೆಂಡನ್.
ಪ. ಡಿ. ಟಿ. ಕೋಟ್ಯಾನ್.
ಮು. ಗೀತಾಂಜಲಿ ಪ್ರಿಂಟರ್ಸ್ ಉಡುಪಿ.
ಹೆ.ಮಾ. ಮೈಸೂರು ರಾಜ್ಯದ ಕರಾವಳಿ ಹಾಗೂ ಒಳನಾಡಿನ ಮೀನುಗಾರಿಕೆ ಮೀಸಲಾದ ಏಕಮೇವ ಪತ್ರಿಕೆ ಎಂದುಕೊಂಡಿದೆ.
೭೧೮

**ಮದನ** ಮದ್ರಾಸ
ಮಾಸ ೨೪x೧೭ ಪು.೪೦
ಲೈಂಗಿಕ ವಿಜ್ಞಾನ ?
ಸಂ.ಪ. ರಾಮಚಂದ್ರನ್.
ಮು. ಪ್ರಿಯಾ ಪ್ರಿಂಟರ್ಸ್, ಮದ್ರಾಸ.
೭೧೯

**ಮದ್ರಾಸು ಸಮಾಚಾರ** ಮದ್ರಾಸ
ಪಕ್ಷ ೨೮x೨೨ ಪು.೨೪
ಸುದ್ದಿ/ಪ್ರಾದೇಶಿಕ ಜನ.೧೯೪೭-೫೦
ಸಂ.ಪ. ಡೈರೆಕ್ಟರ್, ಸಮಾಚಾರ ಪ್ರಚಾರ ಶಾಖೆ.
ಮು. ಸರಕಾರೀ ಪ್ರೆಸ್.
೭೨೦

**ಮಧ್ವಪ್ರಬಂಧಮಾಲಾ** ಮದ್ರಾಸು
ದ್ವೈಮಾಸ ೨೦ ೧/೨x೧೩ ೧/೨ ಪು.೨೪
ದ್ವೈತಮತ ೧೯೦೮ . .
ಸಂ. ಕೆ. ಶೇಷಗಿರಿರಾವ್
ಪ್ರ. ಪದ್ಮವಿಲಾಸ-ಟಪ್ಲಿಕೇನ್, ಮದ್ರಾಸ.
ಹೆ.ಮಾ. 'ಸಮಧ್ವನಿವಿಜಯ' ಮುಂತಾದ ಮೂಲಗ್ರಂಥಗಳ ಟೀಕಾತಾತ್ಪರ್ಯಗಳ ಅನುವಾದ ಮಾಡಿ ಪ್ರಕಟಿಸುತ್ತಿದ್ದರು.
೭೨೧

**ಮಧ್ವಸಿದ್ಧಾಂತ ಪ್ರಕಾಶಿನೀ** ಮೈಸೂರು
ಮಾಸ ೨೧x೧೪ ಪು.೨೦
ದ್ವೈತಮತ ೧೯೧೬-೨೬ . .
ಸಂ. ಎಚ್. ನರಸಿಂಗರಾಯರು.
ಪ್ರ. ಮಧ್ವಸಿದ್ಧಾಂತ ಪ್ರಕಾಶಿನೀ ಸಭಾ.
ಮು. (೧) ಜಯಾಲಯ ಮುದ್ರಾ ಯಂತ್ರ, (೨) ಜಿ. ಟಿ. ಎ. ಪ್ರೆಸ್, ಮೈಸೂರು.
ಹೆ.ಮಾ. ಧರ್ಮಾಧಿಕಾರಿ ರಾಘವೇಂದ್ರಚಾರ್ಯರ ಗೀತಾರಹಸ್ಯದ ಮೇಲೆ ವಿಚಾರ ಸಂಗ್ರಹ. ಷಟ್ ಪ್ರಶ್ನೋಪನಿಷತ್ ಸಾರ. ವಿ. ಶ್ಯಾಮಾಚಾರ್ಯರ ಗುರು ಚರಿತ್ರೆ. ಪಂಡಿತ ವಾಸುದೇವಾಚಾರ್ಯರ ಕಪಿಲ ರಹಸ್ಯ, ಗೀತಾರ್ಥ ನಿರ್ಣಯ ಮುಂತಾದವುಗಳು ಧಾರಾವಾಹಿಯಾಗಿರುತ್ತಿದ್ದವು.
೭೨೨

**ಮಧು** ಗದಗ
ಮಾಸ ೨೫x೧೮ ಪು.೨೪
ಸಾಹಿತ್ಯ ೧೯೬೭-
ಸಂ. ಎಚ್. ಸಿ. ಕೌಜಗೇರಿ
ಪ. ಮಧು ಕಾರ್ಯಾಲಯ, ಗದಗ, ಬೆಟಗೇರಿ.
ಮು. ಪ್ರಭು ಪ್ರಿಂಟಿಂಗ್ ಪ್ರೆಸ್, ಗದಗ.
೭೨೩

**ಮಧುಮತಿ** ಮದ್ರಾಸು
ಮಾಸ ೨೨ ೧/೨x೧೮ ಪು.೪೨
ಚಲನಚಿತ್ರ ಮೇ.೧೯೬೯ . .
ಸಂ. ಸರಸ್ವತಿ ಬಾಸು
ಪ. ಕೆ. ಸರಸ್ವತಿ
ಪ್ರ. ಮಧುಮತಿ ಕಾರ್ಯಾಲಯ.
ಮು. ಕಾವೇರಿ ಪ್ರಿಂಟರ್ಸ್, ಮದರಾಸು.
೭೨೪

**ಮಧುರವಾಣಿ** ಮೈಸೂರು
ಮಾಸ ೧೮x೧೨ ಪು.೪೦
ಸಾಹಿತ್ಯ/ಸಮ್ಮಿಶ್ರ ೧೯೧೨-೧೯ . .
ಸಂ. ಹನುಮಾನ್
ಪ. ಏ. ಹನುಮಾನ್ ಅಂಡ್ ಕಂಪನಿ, ಮೈಸೂರು.
ಮು. ಶ್ರೀನಿವಾಸ ಪ್ರೆಸ್.
ಧ್ಯೇಯವಾಕ್ಯ: "ಸತ್ಯಂ ವದ ಧರ್ಮಂ ಚರ".
೭೨೫

**ಮಧುರವಾಣಿ** ಬೆಂಗಳೂರು
ವಾರ ೩೦x೨೫ ಪು.೮
ಸುದ್ದಿ/ಸಮ್ಮಿಶ್ರ ೧೯೬೯ . .
ಸಂ. ಎಂ. ಚಂದ್ರಶೇಖರಯ್ಯ
ಮು. ಗೌರಿಶಂಕರ ಪ್ರೆಸ್. ಮೈಸೂರು.
೭೨೬

**ಮಧುವನ** ಮಂಗಳೂರು
ಮಾಸ ೨೨x೧೪ ಪು.೩೦
ಜೇನು ವ್ಯವಸಾಯ ಎ.೧೯೫೭-೬೦ . .
ಸಂ. ಪಿ. ಲಕ್ಷ್ಮೀನಾರಾಯಣರಾವ್
ಪ. ದ. ಕ. ಸಹಕಾರಿ ಜೇನು ವ್ಯವಸಾಯ ಉತ್ಪಾದನಾ ಹಾಗೂ ಮಾರಾಟ ಕೇಂದ್ರ.
ಮು. ಉದಯ ಪ್ರಿಂಟರಿ ಎಂಡ್ ಪಬ್ಲಿಷರ್ಸ್.
೭೨೭

**ಮಧುವನ** ಕುಮಟಾ
ಮಾಸ ೨೧ ೧/೨x೧೪ ಪು.೧೬-೩೦
ಜೇನು ವ್ಯವಸಾಯ ೧೯೫೭-೬೫
ಸಂ. ಲಿಂಗೇಶ ಶರ್ಮಾ.
ಪ. ಉ. ಕ. ಜಿಲ್ಲಾ ಗ್ರಾಮಾಭಿವೃದ್ಧಿ ಸಂಘ.
ಮು. ಉ. ಕ. ಜಿಲ್ಲಾ ಸಹಕಾರಿ ಪ್ರಿಂಟಿಂಗ್ ಸೊಸೈಟಿ ನಿಯಮಿತ, ಕುಮಟಾ.
೭೨೮

**ಮನುಕುಲ** ಮುಂಬಯಿ
ತ್ರೈಮಾಸ ೨೧x೧೩ ೧/೨ ಪು.೭೪
ಸಾಹಿತ್ಯ/ಸಮ್ಮಿಶ್ರ ೧೯೬೭ . .
ಸಂ. ಪ್ರಿಯತಮಾ
ಪ. ಮನುಕುಲ ಪ್ರಕಾಶನ.
ಮು. ಸಾಗರ ಮುದ್ರಣ, ಸಾಗರ.
ಹೆ.ಮಾ. ಚಂದಾದಾರರಿಗೆ ಪತ್ರಿಕೆಯ ಜೊತೆಗೆ ಪ್ರಕಾಶನ ಸಾಹಿತ್ಯವನ್ನೂ ಕಳಿಸಲಾಗುತ್ತಿತ್ತು.
೭೨೯

**ಮನೋರಮಾ** ಹುಬ್ಬಳ್ಳಿ
ಪಕ್ಷ ೨೭x೨೧ ಪು.೩೬
ಚಲನಚಿತ್ರ ೧೯೬೧ . .
ಸಂ. ಪಾಟೀಲ ಪುಟ್ಟಪ್ಪ
ಪ. ಪ್ರಪಂಚ ಪ್ರಕಾಶನ.
ಮು. ಪ್ರಪಂಚ ಪ್ರಿಂಟರಿ, ಹುಬ್ಬಳ್ಳಿ.
೭೩೦

**ಮನ್ವಂತರ** ಧಾರವಾಡ
ಅನಿಯತ ೨೦x೧೬ ಪು.೮೦
ಸಾಹಿತ್ಯ ೧೯೬೨-
ಸಂ. ಕೀರ್ತಿನಾಥ ಕುರ್ತಕೋಟಿ, ಜಿ. ಬಿ. ಜೋಶಿ.
ಪ. ಮನೋಹರ ಗ್ರಂಥಮಾಲೆ, ಧಾರವಾಡ
ಹೆ.ಮಾ. ಒಂದೊಂದು ಸಂಚಿಕೆಯಲ್ಲಿ ಪೂರ್ಣಸ್ವರೂಪದ ಗ್ರಂಥಗಳು.
೭೩೧

**ಮಯೂರ** ಬೆಂಗಳೂರು
ಮಾಸ ೨೪x೧೮ ಪು.೪೦
ಸಾಹಿತ್ಯ/ಸಮ್ಮಿಶ್ರ ೧೯೪೬-೪೭
೭೩೨

**ಮಯೂರ II** ಬೆಂಗಳೂರು
ಮಾಸ ೨೦x೧೪ ಪು.೧೩೦

ಸಾಹಿತ್ಯ/ಸಮ್ಮಿಶ್ರ ೧೯೬೮ . .

ವ್ಯ.ಸಂ. ಕೆ. ಎ. ನೆಟ್ಟಕಲ್ಲಪ್ಪ, ಮುಂತಾದವರು.
ಪ್ರ. ದಿ ಪ್ರಿಂಟರ್ಸ್ (ಮೈಸೂರು) ಪ್ರೈ. ಲಿ.
ಮು. ಡೆಕ್ಕನ್ ಹೆರಾಲ್ಡ್ ಪ್ರೆಸ್, ಬೆಂಗಳೂರು.
ಹೆ.ಮಾ. ಇಂದಿಗೂ ನಿಯಮಿತವಾಗಿ ಹೊರಡುತ್ತಿರುವ ಮನರಂಜನ ಸಾಹಿತ್ಯದ ಮಾಸಿಕ.
೭೩೩

**ಮಲಯವಾಣಿ** ಸಿದ್ದಾಪುರ
ವಾರ್ಷಿಕ ೨೪x೧೮ ೧/೨ ಪು.೧೦೦

ಮಲೆನಾಡು ಅಭಿವೃದ್ಧಿ ೧೯೫೫ . .

ಸಂ. ಗಜಾನನ ಶರ್ಮಾ ಕಲ್ಲಾಳ, ರಾಮಕೃಷ್ಣ ಹೆಗಡೆ ದೊಡ್ಮನೆ, ಮಹಾಬಲೇಶ್ವರ ಶಾಸ್ತ್ರಿ, ಹೊಸಮನೆ.
ಪ್ರ. ಕರ್ನಾಟಕ ಸಂಘ, ಸಿದ್ದಾಪುರ.
ಮು. (೧) ಶಾರದಾ ಮುದ್ರಣಾಲಯ. ಶಿರಸಿ. (೨) ಆಶಾ ಪ್ರಿಂಟರಿ, ಹುಬ್ಬಳ್ಳಿ.
ಹೆ.ಮಾ. ಮಲೆನಾಡಿನ ಅಭಿವೃದ್ಧಿ ಪತ್ರಿಕೆಯ ಗುರಿಯಾಗಿದ್ದಿತು.
೭೩೪

**ಮಲೆನಾಡು** ಮುಂಡಾಜೆ(ದ.ಕ.)
ಮಾಸ ೨೦x೧೩ ಪು.೩೦-೪೬

ಮಲೆನಾಡಿನ ಅಭಿವೃದ್ಧಿ ಎ.೧೯೪೭-೪೯ . .

ಸಂ.ಪ್ರ. ಎಂ. ಎನ್. ಭಿಡೆ.
ಮು. ಹಿಂದ್ ಆರ್ಟ್ಸ್ ಪ್ರೆಸ್, ಮಂಗಳೂರು.
೭೩೫

**ಮಲೆನಾಡು** ಬೆಂಗಳೂರು
ಮಾಸ ೨೪x೧೮ ಪು.೪೮

ಮಲೆನಾಡಿನ ಅಭಿವೃದ್ಧಿ ೧೯೫೪-೬೯ . . .

ಸಂ.ಪ್ರ. ಎಂ. ವಿ. ಗುರುಬಸಪ್ಪ ಶೆಟ್ಟಿ, ಚಿಕ್ಕಮಗಳೂರು.
ಮು. ಶ್ರೀನಿವಾಸ ಮುದ್ರಣಾಲಯ, ಬೆಂಗಳೂರು, ಮಲೆನಾಡು ಪ್ರಿಂಟರ್ಸ್, ಬೆಂಗಳೂರು (೧೯೬೯), ಶ್ರೀ ಪಾರ್ವತೀ ಪ್ರಿಂಟರ್ಸ್, ಬೆಂಗಳೂರು.
೭೩೬

**ಮಲೆನಾಡು ವಾರ್ತಾ** ಶಿವಮೊಗ್ಗ
ದಿನ,ವಾರ ೩೬x೨೫ ಪು.೨

ಮಲೆನಾಡಿನ ಅಭಿವೃದ್ಧಿ ೧೯೬೧-೭೦ . .

ಸಂ. ಭೂಪಾಳಂ ಚಂದ್ರಶೇಖರಯ್ಯ
ಪ್ರ. ಬಿ. ಸಿ. ನಾಗಾರ್ಜುನ, ಹುಲಿಕಲ್ ಸುಬ್ರಾವ್.
ಮು. (೧) ವಿನಾಯಕ ಮುದ್ರಣಾಲಯ, (೨) ರಂಗನಾಥ ಶ್ರೀ ಶ್ರೀಧರ ಪ್ರೆಸ್, ರೇಣುಕಾ ಪ್ರಿಂಟರ್ಸ್, ಶಿವಮೊಗ್ಗ.
೭೩೭

**ಮಲೆನಾಡು ಸಮಾಚಾರ** ಶಿವಮೊಗ್ಗ
ಮಾಸ ? ?

ಮಲೆನಾಡಿನ ಅಭಿವೃದ್ಧಿ ೧೯೧೭ . .

ಸಂ. ಪಿ. ವೆಂಕಪ್ಪಯ್ಯ
ಹೆ.ಮಾ. ಸಂಪಾದಕರು 'ಶಿವಮೊಗ್ಗ ವೃತ್ತಾಂತ ಪತ್ರಿಕೆ'ಯನ್ನೂ ಹೊರಡಿಸುತ್ತಿದ್ದರು.
೭೩೮

**ಮಲ್ನಾಡ ವಿಜಯಕೇಸರಿ** ಸಾಗರ
ವಾರ ೪೪x೨೮ ೧/೨ ಪು.೨

ಮಲೆನಾಡು ಅಭಿವೃದ್ಧಿ ೧೯೨೦ . .

ಸಂ. ನಡಹಳ್ಳಿ ವೆಂಕಪ್ಪ
ಪ್ರ. ವಿಜಯಕೇಸರಿ ಕಾರ್ಯಾಲಯ, ಸಾಗರ.
ಮು. ಶ್ರೀ ಲಕ್ಷ್ಮೀವಿಲಾಸ ಪ್ರಿಂಟಿಂಗ್ ವರ್ಕ್ಸ್, ಸಾಗರ.
ಹೆ.ಮಾ. ಇದೇ ಸಂಪಾದಕರು ೧೯೧೩ ರಿಂದ ಸೊರಬದ ನಡಹಳ್ಳಿಯಿಂದ 'ಶ್ರೀಮದ್ವರ್ಣನಿದಾನಂ', 'ಹವ್ಯಕೋದಯ', 'ಆರ್ಯಧರ್ಮ ಪ್ರಕಾಶ' ಮಾಸಿಕಗಳನ್ನು ನಡೆಸಿದ್ದರು.
೭೩೯

**ಮಲ್ಲಿಗೆ** ಬೆಂಗಳೂರು
ಮಾಸ ೨೦x೧೪ ಪು.೯೪

ಸಾಹಿತ್ಯ/ಸಮ್ಮಿಶ್ರ ೧೯೬೦ . .

ಸಂ. ಬಿ. ಎನ್. ಗುಪ್ತ, ತಾಂಡವೇಶ್ವರ, ಇತರರು.
ಪ್ರ. ಬೆಂಗಳೂರು ಪ್ರಿಂಟಿಂಗ್ ಅಂಡ್ ಪ್ರಕಾಶನ (ಬಾಪ್ಕೊ)
ಮು. (೧) ಪ್ರಗತಿ ಪ್ರಿಂಟರ್ಸ್, ಬೆಂಗಳೂರು, (೨) ರಾಧಾ ಆಫ್‌ಸೆಟ್ ಪ್ರಿಂಟರ್ಸ್,
ಹೆ.ಮಾ. ಇಂದಿಗೂ ಹೊರಡುತ್ತಿರುವ ರುಚಿಶುದ್ಧಿಯ ಪತ್ರಿಕೆ.
೭೪೦

**ಮಹಾಕರ್ನಾಟಕ** ಬೆಂಗಳೂರು
ವಾರ ೨೮x೨೬ ಪು.೧೨

ಸುದ್ದಿ/ಸಮಿಶ್ರ ೧೯೫೯-೬೦ . .

ಸಂ. ತಿರುಮಲೆ ತಾ. ಶರ,
ಪ. ತಿ. ಶೀರಂಗಾಚಾರ್.
ಮು. ನವನೀತ ಪೆಸ್, ಬೆಂಗಳೂರು.
೭೪೧

**ಮಹಾಧ್ವನಿ** ಧಾರವಾಡ
ಮಾಸ ೨೪x೧೮ ೧/೨ ಪು.೪೦

ಸುದ್ದಿ/ಸಮ್ಮಿಶ್ರ ೧೯೪೦ . .

ಸಂ. ಎ. ಎ. ಕವಾಲ. ಶಂ. ವಾ. ಜಠಾರ.
ಪ. ಕೆ. ಜಿ. ರಾಯದುರ್ಗ.
ಮು. ಮೋಹನ ಪೆಸ್, ಧಾರವಾಡ.
೭೪೨

**ಮಹಾವೀರ** ಧಾರವಾಡ
ಮಾಸ ೨೫x೧೮ ಪು.೪೮

ಸಾಹಿತ್ಯ/ಸಮ್ಮಿಶ್ರ ೧೯೫೦-೫೪ . .

ಸಂ. ನೆಗಳೂರ ರಂಗನಾಥ, ವಿ. ವಾಸುದೇವ.
ಸಹ ಸಂ. ಶೀರಂಗ.
ಪ. ಸವಿತಾ ಪಕಾಶನ, ಧಾರವಾಡ.
ಹೆ.ಮಾ. ಇದೇ ಪಕಾಶನದವರಿಂದ ಇನ್ನೊಂದು ವಾರಪತಿಕೆಯನ್ನು ಹೊರಡಿಸುವ ಸೂಚನೆ ೧ನೇ ಸಂಚಿಕೆಯಲ್ಲಿದೆ. 'ನರಸಿಂಹ' ಪತಿಕೆ ಇದರ ಮೊದಲ ಹೆಸರು. ಆ ಹೆಸರಿನಿಂದ ಸರಿಯಾಗಿ ನಡೆಯದ ಕಾರಣ 'ಮಹಾವೀರ' ಹೆಸರಿನಿಂದ ಹೊರಡಿಸಲಾಯಿತು.
೭೪೩

**ಮಹಿಳಾ** (ಜ್ಞಾನೋತ್ಕರ್ಷಮಾಲಾ) ಗದಗ
ತ್ರೈಮಾಸ ೨೦x೧೩ ೧/೨ ಪು.೪೦

ಮಹಿಳಾಭಿವೃದ್ಧಿ ೧೯೧೭-೨೭ . .

ಸಂ. ಚನ್ನಬಸವಯ್ಯಾ ರಾಚಯ್ಯ, ಚಂಡೂರಮಠ, ಗದಗ
ಪ. ಮಹಿಳಾ ಜ್ಞಾನೋತ್ಕರ್ಷ ಸಂಘ
ಮು. ಶೀ ತೋಂಟದ ಸಿದ್ಧಲಿಂಗ-ವಿಜಯ ಪಿಂಟಿಂಗ್ ಪೆಸ್, ಗದಗ.
ಹೆ.ಮಾ. ಶೀ ಶಿವಯೋಗಿ ಮಂದಿರದ ಮಹಿಳಾ ಪರಿಷತ್ತಿನ ವತಿಯಿಂದ ಸ್ಥಾಪಿಸಲ್ಪಟ್ಟಿತು.
೭೪೪

**ಮಹಿಳಾಜ್ಯೋತಿ** ಹುಬ್ಬಳ್ಳಿ
ಮಾಸ ೨೧x೧೩ ಪು.೬೨

ಮಹಿಳಾಭಿವೃದ್ಧಿ ೧೯೫೫-೫೮ . .

ಸಂ.ಪ. ಶೀಮತಿ ಎಂ. ಎ ಕಮಲ.
ಮು. ಜನತಾ ಪಿಂಟಿಂಗ್ ಪೆಸ್, ಹುಬ್ಬಳ್ಳಿ
೭೪೫

**ಮಹಿಳಾ ಪ್ರಕಾಶ** ಮೈಸೂರು
ಮಾಸ ೧೪x೧೧ ಪು.೩೨

ಮಹಿಳೆ ೧೯೩೯ . .

ಸಂ.ಪ. ಎಂ. ಸಿ. ಉಮಾಬಾಯಿ.
೭೪೬

**ಮಾರ್ಗದರ್ಶಿ** ಬೆಂಗಳೂರು
ವಾರ ೩೮x೨೫ ೧/೨ ಪು.೪-೮

ಸುದಿ/ರಾಜಕೀಯ ೧೯೬೭ . .

ಸಂ.ಪ. ಎಸ್. ಎಸ್. ಅರಕೇರಿ
ಸಹ ಸಂ. ಎಂ. ಷಣ್ಮುಗಂ
ಮು. ವೃದ್ಧಿ ಪಿಂಟರ್ಸ್.
೭೪೭

**ಮಾರ್ಗದರ್ಶಿ** ಶಿವಮೊಗ
ದಿನ,ವಾರ ೩೮x೨೫ ೧/೨ ಪು.೨,೪
ಸುದ್ದಿ/ಪಾದೇಶಿಕ ಜಿಲ್ಲೆ
ಸಂ. ಜಿ. ಸದಾಶಿವರಾವ್.
೭೪೮

**ಮಾತೃಭೂಮಿ** ಬೆಳಗಾಂವಿ
ದಿನ,ಮಾಸ ೩೮x೨೫ ಪು.೪೦

ಸುದ್ದಿ/ಸಮ್ಮಿಶ್ರ ೧೯೨೦-೨೯ . .

ಸಂ. ಆರ್. ಬಿ. ಕುಲಕರ್ಣಿ, ಕರಗುಪ್ಪಿ ಕೃಷ್ಣರಾವ್
ಪ. ಭಾರತ ಸೇವಕ ಸಮಾಜ, ಬೆಳಗಾವಿ.
ಮು. ಚೌಗುಲೆ ದೇವೇಂದಪ. ಮಹಾವೀರ ಮುದ್ರಣಾಲಯ
ಹೆ.ಮಾ. ದೇಶಪಾಂಡೆ ಗಂಗಾಧರರಾಯರು ಭಾರತ ಸೇವಕ ಸಮಾಜದ ಅಧಿಕಾರಿಗಳಾಗಿದ್ದರು.
೭೪೯

**ಮಾತೃಭೂಮಿ** ಬೆಂಗಳೂರು
ವಾರ ೪೪x೨೯ ಪು.೪

ಸುದ್ದಿ ೧೯೬೯ . .

ಸಂ.ಪ. ಎಸ್. ಜಿ. ಎನ್. ಸ್ವಾಮಿರಾವ್.
ಮು. ಪ್ರಿಂಟರ್ಸ್, ಬೆಂಗಳೂರು.
೭೫೦

**ಮಾಧವಿ** ಧಾರವಾಡ
ಮಾಸ ೨೧x೧೩ ಪು.೧೦೦

ಸಾಹಿತ್ಯ ೧೯೬೭ . .

ಸಂ. ಕುವಲಯ.
ಪ. ಆರ್. ಆರ್. ಪಾಟೀಲ.
೭೫೧

**ಮಾಧುರಿ** ಬೆಂಗಳೂರು
ಮಾಸ ೧೫x೧೩ ೧/೨ ಪು.೯೬
ಡೈಜೆಸ್ಟ್ ಎ.೧೯೬೯
ಸಂ.ಪ. ಎಂ. ಎನ್. ದಿವಾಕರ.
ಮು. ಶಾಂತಿಲಕ್ಷ್ಮಿ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು.
೭೫೨

**ಮಾನವ** ಶಿರಸಿ
ಮಾಸ ೨೨x೧೩ ೧/೨ ಪು.೪೦
ಶಿಕ್ಷಣ ೧೯೫೨-೫೪
ಸ್ಥಾ. ಎಲ್. ಜಿ. ರಾಯ್ಕರ
ಸಂ. ಬಿ. ಪಿ. ಹೊಸಮನಿ
ಪ. ಶಿರಾಂವ ನಿಕೊಲಾಸ್.
ಮು. ಶ್ರೀ ಲಕ್ಷ್ಮೀನಾರಾಯಣ ಪ್ರಿಂಟಿಂಗ್ ಪ್ರೆಸ್.
೭೫೩

**ಮಾನವ** ಮೈಸೂರು
ಮಾಸ ೨೪x೧೮ ಪು.೨೬

ಸಾಹಿತ್ಯ/ಸಮ್ಮಿಶ್ರ ೧೯೬೭-೭೯ . .

ಸಂ. ಎಂ. ಡಿ. ನಂಜುಂಡಸ್ವಾಮಿ, ನಾಗಭೂಷಣ, ಕೆ. ದೇವೇಗೌಡ
ಸಹ ಸಂ. ಎಂ. ಆರ್. ಶಿವಣ್ಣ
ಪ. ಪ. ಮಲ್ಲೇಶಪ್ಪ.
ಮು. ಮಯೂರ ಮುದ್ರಣ ಮತ್ತು ಪ್ರಕಾಶನ, ರಾಘವೇಂದ್ರ ಪ್ರಿಂಟರ್ಸ್, ಪ್ರಗತಿ ಎಂಟರಪ್ರೈಸಸ್, ಮೈಸೂರು.
೭೫೪

**ಮಾನವಿಕ ಕರ್ನಾಟಕ** ಮೈಸೂರು
ತ್ರೈಮಾಸ ೨೧x೧೩ ಪು.೧೨೬

ಸಾಮಾಜಿಕ ೧೯೭೦-೭೫ . .

ಸಂ. ಹಾ. ಮಾ. ನಾಯಕ, ಇತರರು
ಪ. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮು. ಮೈಸೂರು ವಿ.ವಿ. ಮುದ್ರಣಾಲಯ.
ಹೆ.ಮಾ. ವಿಶ್ವವಿದ್ಯಾಲಯವು ಇದರ ಜೊತೆಗೆ 'ಪ್ರಬುದ್ಧ ಕರ್ನಾಟಕ'ವನ್ನು ಸಾಹಿತ್ಯ ವಿಷಯಗಳಿಗಾಗಿ, 'ವಿಜ್ಞಾನ ಕರ್ನಾಟಕ'ವನ್ನು ವೈಜ್ಞಾನಿಕ ವಿಷಯಗಳಿಗಾಗಿ ಹೊರಡಿಸುತ್ತಿತ್ತು.
೭೫೫

**ಮಾನವಿಕ ಭಾರತಿ** ಧಾರವಾಡ
ಷಾಣ್ಮಾಸಿಕ ೧೮x೧೨ ಪು.೧೨೦
ಸಾಮಾಜಿಕ ೧೯೭೨-
ಸಂ. ಎ. ಎಂ. ರಾಜಶೇಖರಯ್ಯ, ಇತರರು
ಪ. ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ.
ಹೆ.ಮಾ. ಇದರ ಜೊತೆಗೆ 'ಕರ್ನಾಟ ಭಾರತಿ'ಯೂ ಪ್ರಕಟಿತ.
೭೫೬

**ಮಾಮನೆ** ಬೆಂಗಳೂರು
ಮಾಸ ೧೮x೧೨ ಪು.೧೨೦

ವೀರಶೈವ ೧೯೭೨ . .

ಸಂ. ವಿ. ಕೆ. ಜವಳಿ
ಪ. ಅಂತಾರಾಷ್ಟ್ರೀಯ ಅಕಾಡೆಮಿ, ಬೆಂಗಳೂರು.
ಹೆ.ಮಾ. ಸಂಪಾದಕರು 'ಕಾಯಕ' ಎಂಬ ವಾರಪತ್ರಿಕೆಯನ್ನು ಹೊರಡಿಸುತ್ತಿದ್ದರು.
೭೫೭

**ಮಾಲತೀಶ ವಿಜಯ** ದೇವಗಿರಿ(ಧಾರವಾಡ)
ಮಾಸ ೧೮x೧೩ ೧/೨ ಪು.೩೪

ಸನಾತನಧರ್ಮ ೧೯೨೯ . .

ಸಂ. ನರಸಿಂಹ ಭೀ. ಕುಲಕರ್ಣಿ
ಪ. ಗಣೇಶ-ಮುರಹರ ಶಿವಪೂಜಿ.
ಮು. ಕರ್ನಾಟಕ ಫೇಮ್ ವರ್ಕ್ಸ್, ಧಾರವಾಡ.
೭೫೮

**ಮಿಂಚು** ಶಿವಮೊಗ್ಗ
ದಿನ ೩೬x೨೫ ಪು.೨
ಸುದ್ದಿ/ಪಾದೇಶಿಕ ಜುಲೈ.೧೯೫೯-
ಸಂ.ಪ. ಎ. ವಿ. ಶೀನಿವಾಸ
ಮು. ಕೃಷ್ಣ ಪೆಸ್, ಶಿವಮೊಗ್ಗ.
ಹೆ.ಮಾ. ಖಾರದ ಬರೆವಣಿಗೆಗಾಗಿ ಜಿಲ್ಲಾದ್ಯಂತ ಹೆಸರಾದ ಪತಿಕೆಯಾಗಿತು. ಸಂಪಾದಕರು 'ಮಿಂಚು-ಶೀನಿವಾಸ' ಎಂದೇ ಹೆಸರಾಗಿದ್ದರು.
೭೫೯

**ಮಿತ್ರ** ಗುಡ್ಡೇತೋಟ(ಚಿಕ್ಕಮಗಳೂರು)
ಮಾಸ ೨೦x೧೩ ?
ಸಾಹಿತ್ಯ/ಸಮ್ಮಿಶ್ರ ೧೯೪೯-೫೦ . .
ಸಂ. ಗು. ಶ್ರೀ. ಸುಬ್ಬರಾಯರು.
ಪ. ಮಿತ್ರ ಕಾರ್‍ಯಾಲಯ.
ಹೆ.ಮಾ. ರಾಷ್ಟ್ರೀಯ ಮಾಸಪತಿಕೆ ಎಂದು ಬರೆದುಕೊಂಡಿದೆ. ಕವಿತಾ ವಿಭಾಗ, ಕಥಾ, ಮಕ್ಕಳ ವಿಭಾಗ ಬೇರೆ ಬೇರೆ ಇದ್ದವು. 'ಮಕ್ಕಳ ವಿಭಾಗ'ಕ್ಕೆ ಕೊ. ರಾ. ಶಂಕರ್ ಸಂಪಾದಕರಾಗಿದ್ದರು.
೭೬೦

**ಮೀನುಗಾರ** ಅಳಿಕೆ,ಸುರತ್ಕಲ್
ಮಾಸ ೨೬x೧೯ ಪು. ೨೦
ಮತ್ಸ್ಯೋದ್ಯಮ ೧೯೬೮ . .
ಸಂ.ಪ. ಹೊಸಬೆಟ್ಟು ಶೀನಿವಾಸ ಗುರಿಕಾರ.
ಮು. ರಾಯಲ್ ಪಿಂಟರ್ಸ್, ಅಳಿಕೆ.
೭೬೧

**ಮುಂದಾಳು** ವಿಜಾಪುರ
ವಾರ ೩೬x೨೫ ಪು.೮
ಸುದ್ದಿ ೧೯೨೬-೩೦ . .
ಸಂ. ವಿ. ಎಸ್. ಗುಡಕಂಟಿ
ಪ. ಎ. ಜಿ. ಚಿನವಾಲ.
೭೬೨

**ಮುಂಬಯಿ ಕನ್ನಡಿಗ** ಮುಂಬಯಿ
ವಾರ ೪೩x೩೮ ಪು.೪
ಕನ್ನಡಿಗರ ಸಂಘಟನೆ . . ೧೯೩೮ . .
ಸಂ. ಕಾರ್‍ಯದರ್ಶಿ, ಕನ್ನಡಿಗರ ಸಂಘ.
ಪ. ಮುಂಬಯಿ ಕನ್ನಡಿಗರ ಸಂಘ.
ಹೆ.ಮಾ. ಕೆಲವೇ ವಾರ ಪಕಟವಾಯಿತು.
೭೬೩

**ಮುಂಬಯಿ ಪತ್ರಿಕೆ** ಮುಂಬಯಿ
ವಾರ ೪೩x೩೮ ಪು.೪
ಸುದ್ದಿ/ಮುಂಬಯಿರಾಜ್ಯ ೧೯೪೦-೪೬-
ಪ. ಮುಂಬಯಿ ಸರಕಾರದ ಸುದ್ದಿ ಖಾತೆ, ಮುಂಬಯಿ.
೭೬೪

**ಮುಂಬಯಿ ಪೋಲೀಸ್** ಮುಂಬಯಿ
ತ್ರೈಮಾಸ ? ?
ಸುದ್ದಿ ೧೯೫೩ . .
ಸಂ. ಮುಂಬಯಿ ಸರಕಾರದ ಪ್ರಕಟನ ಇಲಾಖೆ.
೭೬೫

**ಮುಕ್ಕಣ್ಣ** ವಿಜಾಪುರ,ಬೆಂಗಳೂರು
ಮಾಸ ೨೧x೧೩ ಪು.೨೪
ಸುದ್ದಿ/ಸಮ್ಮಿಶ್ರ ೧೯೪೭ . .
ಸಂ.ಪ. ರಾ. ಕುಲಕರ್ಣಿ.
ವಿಜಾಪುರ-ಬೆಂಗಳೂರುಗಳಿಂದ ಒಂದೇ ಕಾಲಕ್ಕೆ ಹೊರಡುತ್ತಿತ್ತೆಂದು ಕಂಡುಬರುತ್ತದೆ.
೭೬೬

**ಮುಕ್ತಿ** ಶಿವಮೊಗ್ಗ
ವಾರ,ದಿನ ೩೩x೨೧ ಪು.೪
ಸುದ್ದಿ/ಪಾದೇಶಿಕ ೧೯೭೨-೭೪ . .
ಸಂ.ಪ್ರ. ಬಿ. ಕೆ. ಶ್ರೀನಿವಾಸಮೂರ್ತಿ.
ಮು. ಜ್ಯೋತಿ ಮುಕ್ತಿ ಮುದ್ರಣಾಲಯ.
ಹೆ.ಮಾ. ವಾಣಿ ಪಿಂಟರ್ಸ್‌ನಲ್ಲೂ ಮುದಿತವಾಗುತ್ತಿತ್ತು; ಜ್ಯೋತಿ-ಮುಕ್ತಿ ಮುದ್ರಣಾಲಯ.
೭೬೭

**ಮುತ್ತು** ಧಾರವಾಡ
ಮಾಸ ೧೪x೧೩ ಪು.೪೮
ಬಾಲಸಾಹಿತ್ಯ ನ.೧೯೬೮ . .
ಸಂ.ಪ. ಹಾಲೇಶ್ ಮೇಟಿ
ಮು. ಪಭು ಪಿಂಟಿಂಗ್ ಪೆಸ್, ಗದಗ.
೭೬೮

**ಮುನ್ನಡೆ** ಸಿದ್ದಾಪುರ
ವಾರ, ದಿನ ೨೧x೨೫, ೫೧x೩೮ ಪು.೪,೨
ಸುದ್ದಿ/ಪ್ರಾದೇಶಿಕ ೧೯೬೧-೧೯೯೯
ಸ್ಥಾ. ಗಣೇಶ ಹೆಗಡೆ, ದೊಡ್ಮನೆ.
ಸಂ. ಕೆಕ್ಕಾರು ಗಣೇಶ ಭಟ್ಟ.
ಪ. ಸಿದ್ದಾಪುರ ತಾಲೂಕು ಅಭಿವೃದ್ಧಿ ಮಂಡಲ.
ಮು. ಶ್ರೀರಾಮ ಮುದ್ರಣಾಲಯ.
ಹೆ.ಮಾ. ಈಗ ಸಮಾಜ ಶಿಕ್ಷಣ ವಿಶ್ವಸ್ಥ ಸಮಿತಿಯ ಪರವಾಗಿ ಕಾಶ್ಯಪ ಪರ್ಣಕುಟಿ ಸಂಪಾದಕತ್ವದಲ್ಲಿ ಶಿರಸಿಯ ಮುನ್ನಡೆ ಮುದ್ರಣಾಲಯ–ಶಿರಸಿಯಿಂದ ಪ್ರಕಟವಾಗುತ್ತಿದೆ.

ಗೋವಿಂದ ಶಾನಭಾಗ ಸಿದ್ದಾಪುರ, ದಿವಸ್ಪತಿ ಹೆಗಡೆ, ನಾ. ಸು. ಭರತನಹಳ್ಳಿ, ಆರ್. ವಿ. ಹೆಗಡೆ, ಎಂ. ವಿ. ಶರ್ಮ ತದ್ದಲಸೆ ಮುಂತಾದವರು ಸೇವೆ ಸಲ್ಲಿಸಿದ್ದಾರೆ. ಸಿದ್ದಾಪುರ ತಾಲೂಕು ಅಭಿವೃದ್ಧಿ ಮಂಡಳದಿಂದ ಪ್ರಕಟವಾಗುತ್ತಿತ್ತು. ನಂತರ ಶಿರಸಿಯಿಂದ ಪ್ರಕಟವಾಗ ತೊಡಗಿತು. ಯಲ್ಲಾಪುರದಲ್ಲಿಯೂ ಉಪ ಕಾರ್ಯಾಲಯವಿತ್ತು.

ಸಾಪ್ತಾಹಿಕವಾಗಿ ಆರಂಭವಾಗಿ (೧೯೬೧-೬೨), ಮಾಸಿಕ (೧೯೬೩-೬೪ ಜನ.) ಪಾಕ್ಷಿಕ (೧೯೬೪ ಫೆ. ೧೯೭೫), ವಾರಪತ್ರಿಕೆಯಾಗಿ (೧೯೭೫-) ಅಲ್ಲಿಂದ ದೈನಿಕವಾಗಿ ಪ್ರಕಟವಾಗತೊಡಗಿತು.

ಮೊದಲು ಶಿರಸಿಯ ಸಹಕಾರಿ ಮುದ್ರಾಲಯ, ಯಲ್ಲಾಪುರದ ಚೇತನಾ ಪ್ರೆಸ್, ಸಿದ್ದಾಪುರದ ಶ್ರೀರಾಮ ಮುದ್ರಾಲಯ. ಹೀಗೆ ಅನೇಕ ಕಡೆಗಳಿಂದ ಮುದ್ರಣ ಹೊಂದುತ್ತಾ ಈಗ ತನ್ನದೆ ಮುದ್ರಣಾಲಯದಿಂದ ಮುದ್ರಿತವಾಗುತ್ತಿದೆ.
೭೬೯

**ಮುಲ್ಕೀ ಮ್ಯಾಗಝಿನ್** ಧಾರವಾಡ
ಮಾಸ ೨೦x೧೪ ಪು.೮೪
ಶಿಕ್ಷಣ ೧೯೫೩ . .
ಸಂ.ಪ್ರ. ಎಂ. ಎನ್. ಹುದ್ದಾರ
ಮು. ಭಾರತ ಮುದ್ರಣಾಲಯ, ಧಾರವಾಡ.
ಹೆ.ಮಾ. ಮೈಸೂರು ರಾಜ್ಯ ನಡೆಸುತ್ತಿದ್ದ ಪ್ರಾಥಮಿಕ ೭ನೇ ತರಗತಿಯ ಪಬ್ಲಿಕ್ ಪರೀಕ್ಷೆಗಾಗಿ ಸಂಪಾದಕ ಮಂಡಳವು ಆ ಪರೀಕ್ಷೆ ಇರುವವರೆಗೂ ತರುತ್ತಿದ್ದ ಪತ್ರಿಕೆಯಾಗಿತ್ತು. ನುರಿತ ಶಿಕ್ಷಕರು ಇದರ ಬರೆಹಗಾರರಾಗಿದ್ದರು.
೭೭೦

**ಮುಲ್ಕೀಮಿತ್ರ** ಬೆಳಗಾಂವಿ
ಮಾಸ ೨೦x೧೩ ೧/೨ ಪು.೮೪
ಶಿಕ್ಷಣ ೧೯೫೫-೬೭ . .
ಸಂ.ಪ. ಆರ್. ಎಲ್. ಪಾಟೀಲ
ಮು. ನೂತನ ಪ್ರಿಂಟಿಂಗ್ ಪ್ರೆಸ್.
ಹೆ.ಮಾ. ಏಳನೇ ತರಗತಿಯ ಪಬ್ಲಿಕ್ ಪರೀಕ್ಷೋಪಯೋಗೀ ವಿಷಯಗಳನ್ನು ವಿವರಿಸಿ ಕೊಡುತ್ತಿದ್ದರು.
೭೭೧

**ಮುಸ್ಲಿಂ ಸಂದೇಶ** ಧಾರವಾಡ
ಮಾಸ ೨೧x೧೪ ಪು.೩೬
ಮುಸ್ಲಿಮ್ ೧೯೩೫ . .
ಸಂ.ಪ್ರ. ಇಮಾಮುದ್ದೀನ ಕಿಲ್ಲೇದಾರ
ಹೆ.ಮಾ. ೧೯೩೦ರಲ್ಲಿ ಪ್ರಾರಂಭವಾದ 'ವೀರ ಮುಸ್ಲಿಂ' ಎರಡೇ ವರ್ಷಗಳಲ್ಲಿ ನಿಂತಿತು. ಮುಂದೆ 'ಮುಸ್ಲಿಂ ಸಂದೇಶ'ವಾಗಿ ಪ್ರಕಟವಾಗತೊಡಗಿತು.
೭೭೨

**ಮೃಡವಾಣಿ** ಮುಂಡರಗಿ
ಮಾಸ ೨೧x೧೪ ಪು.೫೦
ವೀರಶೈವ ೧೯೬೪ . .
ಸಂ. ಸಿ. ಎಂ. ಚುರ್ಚಿಹಾಳಮಠ.
ಪ್ರ. ಮಹಾಲಿಂಗ ಯಾಳಗಿ.
ಹೆ.ಮಾ. ಡಿ. ಎಸ್. ಕರ್ಕಿ, ದೇವೇಂದ್ರಕುಮಾರ ಹಕಾರಿ, ಮಹಾದೇವ ಬಣಕಾರ ಮುಂತಾದವರ ಲೇಖನಗಳು ಪ್ರಕಟವಾಗಿವೆ.
೭೭೩

**ಮೇನಕಾ** ಬೆಂಗಳೂರು
ವಾರ ೪೦x೨೭, ೪೨x೨೮ ಪು.೮,೧೦
ಚಲನಚಿತ್ರ ೧೯೬೪-೭೦ . .
ಸಂ. ಸಿ. ಕೆ. ಕೃಷ್ಣರಾವ್
ಪ್ರ. ರಂಜನಾ ಪ್ರಕಾಶನ.
ಮು. ಜನಶಕ್ತಿ ಪ್ರಿಂಟರ್ಸ್, ಬೆಂಗಳೂರು.
೭೭೪

**ಮೈಸೂರು ಇನ್‌ಫರ್ಮೇಶನ್ ಬುಲಿಟಿನ್**
ಬೆಂಗಳೂರು
ಮಾಸ ೨೪x೧೮ ಪು.೨೪

ರಾಜ್ಯದ ಮಾಹಿತಿ ೧೯೩೮-೪೪ . .

ಸಂ. ನಂಜರಾಜ
ಪ್ರ. ಮೈಸೂರು ಸರಕಾರ ಪಬ್ಲಿಸಿಟಿ
ಮು. ಸರಕಾರಿ ಮುದ್ರಣ.
೭೭೫

**ಮೈಸೂರು ಗೆಝೆಟ್** ಬೆಂಗಳೂರು
ವಾರ ೩೬x೨೧ ೧/೨ ಪು.೪೦-೬೦
ಗೆಜೆಟ್ ೧೮೬೬-
ಪ್ರ.ಮು. ಮೈಸೂರು ಸರಕಾರ.
ಹೆ.ಮಾ. ಪ್ರಾರಂಭದಿಂದ ಈ ವರೆಗೂ ಅವಿರತವಾಗಿ ಪ್ರಕಟವಾಗುತ್ತಿರುವ ಸರಕಾರೀ ಪತ್ರಿಕೆ. ಇದು ಅನೇಕ ಭಾಗಗಳಲ್ಲಿ ವಿವಿಧ, ಸರಕಾರೀ ಆದೇಶ ಹಾಗೂ ಮಾಹಿತಿಗಳನ್ನು ನೀಡುತ್ತಿದೆ. ಇಂಗ್ಲಿಷ್ ಹಾಗೂ ಕನ್ನಡಗಳಲಿ ಪ್ರತ್ಯೇಕವಾಗಿ ಬರುತ್ತಿದೆ.

ಪ್ರಾರಂಭದಲ್ಲಿ ಈ ಪತಿಕೆ ಬರಿಯೆ ಸರಕಾರದ ನಿರೂಪದ್ದಾಗಿರಲಿಲ್ಲ. ಸಮಕಾಲೀನ ವಾರ್ತೆಗಳನ್ನೂ ಒಳಗೊಂಡಿದ್ದಿತು. (ಆಗಿನ ಸಂಪಾದಕನ ಹೆಸರು ಎಲ್. ರಿಕೆಟ್ಸ್). ಸಾಮಾನ್ಯ ವಾಚಕರೂ ಅದಕ್ಕೆ ಚಂದಾದಾರರಾಗಿದ್ದರು.
೭೭೬

**ಮೈಸೂರು ಗ್ರಾಮ ಪಂಚಾಯಿತಿ** ಬೆಂಗಳೂರು
ಮಾಸ ೨೭x೨೧ ಪು.೪೦

ಗ್ರಾಮೀಣಾಭಿವೃದ್ಧಿ ೧೯೩೨ . .

ಸಂ. ಎಸ್. ಸೀತಾರಾಮಯ್ಯ (ಅಸಿಸ್ಟಂಟ ಕಮೀಶನರ್)
ಸಹ ಸಂ. ಕೆ. ಎಂ. ಲಕ್ಷ್ಮೀಪತಯ್ಯ
ಹೆ.ಮಾ. ಮೈಸೂರು ಸರ್ಕಾರದ ಪ್ರಕಟನೆ.
೭೭೭

**ಮೈಸೂರು ಗ್ರಾಮಾಭಿವೃದ್ಧಿ ಪತ್ರಿಕೆ** ಬೆಂಗಳೂರು
ಮಾಸ ೨೪ ೧/೨x೧೭ ಪು.೩೨

ಗ್ರಾಮೀಣಾಭಿವೃದ್ಧಿ ೧೯೩೩ . .

ಸಂ.ಪ್ರ. ಎಸ್. ಸೀತಾರಾಮಯ್ಯ ಎ.ಸಿ.
ಮು. ದಿ ಪವರ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು.
೭೭೮

**ಮೈಸೂರು ಪತ್ರಿಕೆ** ಮೈಸೂರು
ದಿನ ೩೮x೨೬ ಪು.೨,೪

ಸುದ್ದಿ ೧೯೪೧ . .

ಸಂ.ಪ್ರ. ಟಿ. ನಾರಾಯಣ.
ಮು. ನ್ಯಾಶನಲ್ ಪವರ್ ಪ್ರೆಸ್,
ಹೆ.ಮಾ. ತಿರುಮಕೂಡಲು ನಾರಾಯಣರು ಸ್ಥಾಪಿಸಿ ಅನೇಕ ವರ್ಷ ನಡೆಸಿದ ನಂತರ ಅವರ ಮಗ ಟಿ. ವೆಂಕಟರಾಂ ನಡೆಸುತ್ತಿದ್ದಾರೆ.

ಮೈಸೂರು ಸರಕಾರ ರಚಿಸಿದ ವೃತ್ತ ಪತ್ರಿಕಾ ಸಲಹಾ ಸಮಿತಿ. ಯುದ್ಧದ ಸುದ್ದಿ ಮುಂತಾದ ಮಹತ್ವದ ವಿಷಯಗಳಿದ್ದವು.
೭೭೯

**ಮೈಸೂರು ಪರಸ್ಪರ ಸಹಾಯ ಪತ್ರಿಕೆ** ಬೆಂಗಳೂರು
ಮಾಸ ೨೧x೧೮ ಪು.೩೦-೪೦

ಸಹಕಾರ ತತ್ವ ೧೯೧೩-೧೭ . .

ಸಂ. ಕೆ. ಎಸ್. ಕೃಷ್ಣಯ್ಯರ್
ಮು. ಐರಿಷ್-ಮುದ್ರಾಲಯ, ಮೈಸೂರು.
೭೮೦

**ಮೈಸೂರು ಪೋಲೀಸ್ ಗೆಝೆಟ್** ಬೆಂಗಳೂರು
ಮಾಸ,ಪಕ್ಷ ೩೮x೨೫ ಪು.೧೨

ಸುದ್ದಿ ೧೮೮೬-೧೯೦೮ . .

ಸಂ.ಪ್ರ. ಪೋಲೀಸ್ ಇನ್ಸಪೆಕ್ಟರ್ ಜನರಲ್
ಮು. ಸರಕಾರಿ ಮುದ್ರಣಾಲಯ.
೭೮೧

**ಮೈಸೂರು ಪ್ರಭಾ** ಬೆಂಗಳೂರು,ಹುಬ್ಬಳ್ಳಿ
ದಿನ ೩೮x೨೪ ೧/೨, ೫೭x೩೮ ಪು.೨
ಸುದ್ದಿ ೧೯೫೧-
ಸ್ಥಾ. ಕೆ. ಎಂ. ಆರ್. ವಿ. ಶಾಸ್ತ್ರಿ
ಸಂ.ಪ್ರ. ರಾ. ಉಳ್ಳಾಗಡ್ಡೀಮಠ
ಮು. ಶಶಿಧರ ಮುದ್ರಣಾಲಯ.
ಹೆ.ಮಾ. ಹುಬ್ಬಳ್ಳಿ, ಹಾಗೂ ಬೆಂಗಳೂರುಗಳಿಂದ ಏಕಕಾಲಕ್ಕೆ ಪ್ರಕಾಶಿತ.
೭೮೨

**ಮೈಸೂರು ಬ್ಲೂಬುಕ್ ಮತ್ತು ಪಬ್ಲಿಸಿಟಿ ಜರ್ನಲ್** ಬೆಂಗಳೂರು
ತ್ರೈಮಾಸ,ಮಾಸ ೨೪x೧೫ ಪು.೮೦-೧೦೦

ಸರಕಾರೀ ವಿಷಯಕ ಮಾಹಿತಿ ೧೯೨೪-೨೯ . .

ಸಂ. ಆರ್. ರಂಗರಾವ್
ಪ. ಪಬ್ಲಿಕ್ ಆಫೀಸು, ಬೆಂಗಳೂರು.
ಮು. ಗವರ್ನಮೆಂಟ ಪ್ರೆಸ್.
ಹೆ.ಮಾ. ಸರಕಾರೀ ಹುಕುಂ, ಟಿಪಣಿಗಳು ಗೆಝೆಟ್ ಮಾದರಿಯಲ್ಲೇ ಪ್ರಕಟಿತ. ಪುಸ್ತಕ ರೂಪದಲ್ಲಿ ವಿಭಾಗಗಳಾಗಿಯೇ ಇದ್ದವು. ೧೯೨೪ ಎಪ್ರಿಲದಲ್ಲಿ ಇಂಗ್ಲಿಷ್ ತ್ರೈಮಾಸವಾಗಿ ಪಾರಂಭ. ೧೯೨೭ರ ನಂತರ ಮಾಸಿಕವಾಗಿ ಕನ್ನಡ ಹಾಗೂ ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಹೊರಟಿತು.
**೭೮೩**

**ಮೈಸೂರು ಮಕ್ಕಳು** ಮೈಸೂರು
ಮಾಸ ೨೧x೧೮ ಪು.೮-೧೨

ಆರೋಗ್ಯ ನ.೧೯೨೮-೩೭ . .

ಸಂ. ಎನ್. ಎಸ್. ನಾರಾಯಣ ಶಾಸ್ತ್ರಿ
ಪ್ರ. ಮಕ್ಕಳ ಮಂಡಳಿ ಕಾರ್ಯಾಲಯ.
ಮು. ಪಂಚಾಚಾರ್ಯ ಎಲಕ್ಟ್ರಿಕ್ ಪ್ರೆಸ್.
ಹೆ.ಮಾ. ಆರ್. ಕೆ. ಲಕ್ಕೂರ ಹಾಗೂ ಆರ್. ಅಶ್ವತ್ಥ ನಾರಾಯಣರಾಯರಿಂದಾಗಿ ಮೈಸೂರು ಜಿಲ್ಲಾ ಸ್ಕೌಟ್ ಸಂಘದಿಂದ ಪರಿಪೋಷಿತವಾಗಿತ್ತು.
ಧ್ಯೇಯವಾಕ್ಯ: "ಓದುವ ಹೆಣ್ಣಳು ಗಂಡುಗಳುಲಿವರು।
ಹರುಷವ ಬೀರುತ ಓಡ್ಯಾಡಿ ನಾಲ್ವಡಿ ಕೃಷ್ಣನ ಕೊಂಡಾಡಿ॥"
**೭೮೪**

**ಮೈಸೂರು ರೆವಿನ್ಯೂ ಮತ್ತು ವ್ಯವಸಾಯಿಕ ಗೆಝೆಟ್** ಬೆಂಗಳೂರು
ಪಾಕ್ಷಿಕ ೨೧x೧೪ ಪು.೧೬-೨೦

ಕೃಷಿ ೧೯೦೬-೧೪ . .

ಪ್ರ. ಮೈಸೂರು ಬುಕ್ ಡಿಪೋ - ಪ್ರೆಸ್.
ಮು. ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಪ್ರಿಂಟರ್ಸ್, ಬೆಂಗಳೂರು.
**೭೮೫**

**ಮೈಸೂರು ವ್ಯವಸಾಯ ಪತ್ರಿಕೆ** ಬೆಂಗಳೂರು
ಮಾಸ ೨೪x೧೬ ಪು.೩೬

ಕೃಷಿ ೧೯೨೪ . .

ಸ್ಥಾ.ಸಂ. ಎಂ. ವಿ. ರಾಜಶೇಖರನ್, ಮೈಸೂರು ಪದೇಶ ಕೃಷಿಕ ಸಮಾಜ.
ಪ್ರ. ಪಿ. ವೈ. ವೆಂಕಟರಾಯಪ್ಪ, ಟಿ. ಕೆ. ಬಾಲಕೃಷ್ಣನ್.
ಮು. ಫಾರ್ಮರ್ಸ್ ಫೋರಂ ಪ್ರೆಸ್.
ಹೆ.ಮಾ. ಎಚ್. ಆರ್. ಅರಕೇರಿ ಆರ್. ದ್ವಾರಕೀನಾಥ ಡಾ. ಟಿ. ಕೃಷ್ಣನ್ ಮುಂತಾದವರ ಸಲಹೆಗಾರ ಮಂಡಳಿಯಿತ್ತು. ೧೯೭೪ರ ನಂತರ 'ಕರ್ನಾಟಕ ವ್ಯವಸಾಯ ಪತ್ರಿಕೆ' ಎಂದಾಯಿತು. ಡಿ. ಕೆ. ದೊಡ್ಡ ಶೆಟ್ಟಿ ಸಂಪಾದಕರಾದರು.
**೭೮೬**

**ಮೈಸೂರು ವಾಣಿ** ಬೆಂಗಳೂರು
ಮಾಸ ೨೭ ೧/೨x೨೧ ೧/೨ ಪು.೧೬

ಸುದ್ದಿ/ಪ್ರಾದೇಶಿಕ ನ.೧೯೫೬-೬೪ . .

ಸಂ. ಜಿ. ನಂಜುಂಡಯ್ಯ, ಡಿ. ರಾಮಯ್ಯ.
ಪ್ರ. ಪ್ರಚಾರ ಮತ್ತು ವಾರ್ತಾ ಇಲಾಖೆ.
ಮು. ಮೈಸೂರು ಸರಕಾರದ ಬ್ರ್ಯಾಂಚ್ ಮುದ್ರಣಾಲಯ.
ಹೆ.ಮಾ. ಮಾಸಿಕವಾಗಿ ಪ್ರಾರಂಭ ೧೯೫೮ ಪಾಕ್ಷಿಕವಾಯಿತು. ಪುನಃ ೧೯೬೪ರ ನಂತರ ಮಾಸಿಕವಾಯಿತು.
**೭೮೭**

**ಮೈಸೂರು ವಾರ್ತಾಸಂಗ್ರಹ** ಬೆಂಗಳೂರು
ಮಾಸ ೨೪x೧೮ ೧/೨ ಪು.೪೦

ಸುದ್ದಿ ಜುಲೈ ೧೯೫೨-೫೪ . .

ಸಂ. ವಾರ್ತಾ ಇಲಾಖೆಯ ಮುಖ್ಯಾಧಿಕಾರಿಗಳು.
ಪ್ರ. ಮೈಸೂರು ಸರಕಾರದ ವಾರ್ತಾ ಇಲಾಖೆ.
ಮು. ಡೈ. ಮೈಸೂರು ಸರಕಾರದ ಮುದ್ರಣಾಲಯ.
**೭೮೮**

**ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ** ಬೆಂಗಳೂರು
ತ್ರೈಮಾಸ ೨೪x೧೫ ಪು.೬೦

ಕೃಷಿ ೧೯೨೪ . .

ಸಂ. ಬಿ. ನರಸಿಂಹಯ್ಯಂಗಾರ್
ಪ್ರ. ಮೈಸೂರು ವ್ಯವಸಾಯಿಕ ಮತ್ತು ಪರೀಕ್ಷಕ ಸಂಘದ ಇಲಾಖೆ.
ಮು. ಸರಕಾರೀ ಮುದ್ರಣ, ಬೆಂಗಳೂರು.
**೭೮೯**

**ಮೈಸೂರು ವಿಶ್ವವಿದ್ಯಾನಿಲಯದ**
**ಗೆಝೆಟ್** ಮೈಸೂರು
ಪಕ್ಷ,ಮಾಸ ೨೮x೨೧ ಪು.೧೨
ಶಿಕ್ಷಣ ೧೯೪೫-
೧೯೩೮- (ಮಾಸಿಕವಾಗಿ)

ಸಂ. ಅಭಯ ಪಕಾಶ್
ಸಹ. ವಿ. ಕೆ. ನಟರಾಜ್, ಇತರರು.
ಪ. ಮೈ. ವಿ. ವಿ. ಕಾರ್ಯ ಸೌಧ, ಮೈಸೂರು.
ಮು. ಮೈ. ವಿ. ವಿ. ಮುದಣಾಲಯ.
೭೯೦

**ಮೈಸೂರು ವೃತ್ತಾಂತ** ಗುಂಡ್ಲುಪೇಟೆ(ಮೈಸೂರು)
ವಾರ ೪೪x೨೮ ಪು.೪

ಸುದ್ದಿ/ಮೈಸೂರು ರಾಜ್ಯ ೧೯೨೦-೪೨ . .

ಸಂ.ಪ. ವಿ. ಕೆ. ನಂಜುಂಡಯ್ಯ.
೭೯೧

**ಮೈಸೂರು ವೃತ್ತಾಂತ ಪತ್ರಿಕೆ** ಮೈಸೂರು
ವಾರ ೪೪x೨೮ ಪು.೪

ಸುದ್ದಿ ೧೮೮೮-೧೯೪೨ . .

ಸಂ. ಹೆನಿ ಹೇಗ್, ಇತರರು
ಪ್ರ. ಎಚ್. ಸ್ಪೆನ್ಸರ್.
ಮು. ವೆಸ್ಲಿಯನ್ ಮಿಶನ್ ಪ್ರೆಸ್.
ಹೆ.ಮಾ. ರಾಜ್ಯದಲ್ಲಿ ಹೆಚ್ಚು ಪ್ರಸಾರ ಹೊಂದಿದ ಜನಪಿಯವಾದ ಪತಿಕೆ. ಕ್ರೈಸ್ತರು ಹೊರಡಿಸುತ್ತಿದ್ದ ಪತ್ರಿಕೆಯಾಗಿದ್ದರೂ, ಸಾಮಾನ್ಯ ಜನತೆಗೆ ಒಗ್ಗುವಂತೆ ಇತ್ತು.
೭೯೨

**ಮೈಸೂರು ವೈಶ್ಯ ಪತ್ರಿಕೆ**

ನೋಡಿರಿ: ಕರ್ನಾಟಕ ವೈಶ್ಯ ಪತಿಕೆ.
೭೯೩

**ಮೈಸೂರು ಸಹಕಾರ ಪತ್ರಿಕೆ** ಮೈಸೂರು
ವಾರ,ಮಾಸ ೨೪x೧೮ ಪು.೧೬

ಸಹಕಾರತತ್ವ ೧೯೫೨-೫೪ . .

ಸಂ. ಸಿ. ರಾಜಗೋಪಾಲಾಚಾರ.
ವ್ಯ.ಸಂ. ಪಿ. ಆರ್. ಕಂಠಿ.
ಪ. ಮೈಸೂರು ಪ್ರಾವಿನಿಯಲ್ ಕೋ ಆಪರೇಟಿವ್ ಇನ್‌ಸ್ಟಿಟ್ಯೂಟ್, ಬೆಂಗಳೂರು
ಮು. ಮೈಸೂರು ಸಹಕಾರ ಮುದಣಾಲಯ.
ಹೆ.ಮಾ. ೧೯೬೪ರ ವೇಳೆಗೆ ಎಸ್. ಶ್ರೀನಿವಾಸರು ವ್ಯವಸ್ಥಾಪಕ ಸಂಪಾದಕರಾಗಿದ್ದರು. ಪಿ. ಆರ್. ಕಂಠಿ ಸಂಪಾದಕರಾಗಿದ್ದರು. ಮೈಸೂರು ರಾಜ್ಯ ಸಹಕಾರಿ ಸಂಘದ ಪರವಾಗಿ ಪ್ರಕಾಶ ಹೆಸರುಗೊಂಡಿತ್ತು, ಗಾತ್ರವೂ ದೊಡ್ಡದಾಗಿತ್ತು. ೧೯೬೬ರ ವೇಳೆಗೆ ಪಿ. ಎಸ್. ಭಟ್ಟರ ವ್ಯವಸ್ಥಾಪಕತ್ವದಲ್ಲಿ ಹೊರಡ ತೊಡಗಿತು. ಕರ್ನಾಟಕ ಸಹಕಾರಿ ಪ್ರಕಾಶನದಿಂದ ಹೊರಡುತ್ತಿತ್ತು. ೧೯೭೬ರಿಂದ "ಕರ್ನಾಟಕ ಸಹಕಾರ ಪತ್ರಿಕೆ" ಎಂದಾಯಿತು.
೭೯೪

**ಮೈಸೂರು ಸ್ಟ್ಯಾಂಡರ್ಡ್** ಬೆಂಗಳೂರು
ಅರ್ಧವಾರ ? ?

ಸುದ್ದಿ/ರಾಜಕೀಯ ೧೯೦೯ . .

ಸಂ. ಎಂ. ಶ್ರೀನಿವಾಸಯ್ಯಂಗಾರ್
ಹೆ.ಮಾ. ೧೯೦೮ರ ಪತ್ರಿಕಾ ನಿರ್ಬಂಧದ ಕಾನೂನನ್ನು ಪ್ರತಿಭಟಿಸಿ ಪತ್ರಿಕೆ ನಿಂತಿತು.
೭೯೫

**ಮೈಸೂರು ಸ್ಟಾರ್** ಮೈಸೂರು
ವಾರ,ದಿನ ೫೫x೩೭, ೪೫x೨೮ ೧/೨ ಪು.೬

ಸುದ್ದಿ/ಸ್ಥಾನಿಕ ೧೮೮೧-೧೯೨೮ . .

ಸ್ಥಾ. ಯಜಮಾನ ವೀರಬಸಪ್ಪ.
ಸಂ. ವೈ. ವಿರೂಪಾಕ್ಷಯ್ಯ ಪ್ರೊಪ್ರೈಟರ್.
ಪ್ರ. ಮೆ. ಮೈಸೂರು ಸ್ಟಾರ್.
ಮು. ಸ್ಟಾರ್ ಪ್ರೆಸ್.
ಹೆ.ಮಾ. ೧೯೭೨ರ ವೇಳೆಗೆ ಕೌನ್ ಎಲಕ್ಟ್ರಿಕ್ ಪ್ರೆಸ್‌ನಲ್ಲಿ ಮುದ್ರಿತವಾಗುತ್ತಿತ್ತು. ಮುಖಪುಟವು ಚಿತ್ರಮಯ ಜಾಹೀರಾತುಗಳಿಂದ ಕೂಡಿರುತ್ತಿತ್ತು ಕೆಲ ಸಲ ಸಂಪಾದಕೀಯ ಶುದ್ಧ ಇಂಗ್ಲಿಷ್ ಭಾಷೆಯಲ್ಲಿತ್ತು, ಪತ್ರಿಕೆಯ ಉದ್ದೇಶ ನಿಮ್ನವರ್ಗದವರ ಏಳ್ಗೆಗಾಗಿ ಹೋರಾಟ.

ಶೀರ್ಷಿಕೆಯಾಗಿ "ರಾಜಭಕ್ತಿಯೇ ಮುಖ್ಯ ಧ್ವಜ" ಎಂದಿತ್ತು, ೧೯೨೮ರಿಂದ ದೈನಿಕವಾಗಿಸಲು ಅಪ್ಪಣೆ ಸಿಕ್ಕಿತು. ಯಜಮಾನ ವೀರಬಸಪ್ಪನವರ ನಂತರ ಯಜಮಾನ ವಿರೂಪಾಕ್ಷಯ್ಯನವರು ನಡೆಸತೊಡಗಿದರು.

ಆ ಕಾಲದಲ್ಲಿ ಮೈಸೂರು ವೃತ್ತಾಂತ ಪತ್ರಿಕೆ ಹಾಗೂ ಹಾಗೂ ಮೈಸೂರು ಸ್ಟಾರ್ ಉತ್ತಮ ಸೇವೆ ಸಲ್ಲಿಸಿ ಹೆಸರಾದ ಪತ್ರಿಕೆಗಳಾಗಿದ್ದವು.
೭೯೬

**ಮೊಗವೀರ** ಮುಂಬಯಿ,ಕಾಪು(ದ.ಕ.)
ತ್ರೈಮಾಸ,ಮಾಸ ೨೪x೧೮ ಪು.೩೨
ಸಮ್ಮಿಶ್ರ/ಮೊಗವೀರ ಜನಾಂಗ ೧೯೪೦-
ಸಂ. ಭಾಸ್ಕರ ಎಸ್. ಪಡುಬಿದ್ರಿ, ರಮಾನಂದ ಅಮೀನ್, ಮುಂತಾದವರು.
ಪ್ರ. ಮೊಗವೀರ ವ್ಯವಸ್ಥಾಪಕ ಮಂಡಳಿ.
ಮು. ಮಹಾಲಕ್ಷ್ಮಿ ಪ್ರೆಸ್, ಮುಂಬಯಿ, ಸುರತ್ಕಲ್.
ಹೆ.ಮಾ. ತ್ರೈಮಾಸಿಕವಾಗಿ ರಮಾನಂದ ಅಮೀನರವರ ಸಂಪಾದಕತ್ವದಲ್ಲಿ ಹೊರಟ ಮೊಗವೀರ ೧೯೫೮ರಿಂದ ಮಾಸಪತ್ರಿಕೆಯಾಗಿತ್ತು. ಧನಂಜಯ ಕೋಟ್ಯಾನ್ (೧೯೬೬) ಎಚ್. ಕೆ. ಪುತ್ರನ್, ಸುಂದರ ಕುಂದರ್ (೧೯೭೪), ಎಸ್. ಬಿ. ಕುಂದರ, ಎಸ್. ಬಿ. ಅಮೀನ್, ಎನ್. ಎಂ. ಪುತ್ರನ್, ಎಲ್. ಎಂ. ಮೆಂಡನ್, ಆರ್. ಡಿ. ಮೆಂಡನ್, ಮೋನಪ್ಪ ಟಿ. ಪುತ್ರನ್ ಮುಂತಾದವರು ಪತ್ರಿಕೆಗೆ ಬಲವಾಗಿದ್ದರು. ಸೋಮನಾಥ ಎಸ್. ಕರ್ಕೇರಾ ಸಂಪಾದಕರಾಗಿ, ಸಂಜೀವ ಕೆ. ಶ್ರೀಯಾನ್ ಮೆನೇಜರರಾಗಿದ್ದರು. (೧೯೮೪). ಈ ವೇಳೆಗೆ ಜಿ. ಎಸ್. ಪುತ್ರನ್‌ರು ತಮ್ಮ ಮಹಾಲಕ್ಷ್ಮೀ ಪ್ರೆಸ್‌ನಿಂದ ಮುದ್ರಿಸಿ ಪ್ರಕಟ ಮಾಡತೊಡಗಿದರು.
೭೯೭

**ಮೋಹಿನೀ** ಮದರಾಸು
ಮಾಸ ೨೪x೧೮ ಪು.೫೦
ಸಾಹಿತ್ಯ/ಸಮ್ಮಿಶ್ರ ೧೯೫೧-೫೨
ಸಂ.ಪ್ರ. ಪಿ. ಸೀತಾರಾಮಯ್ಯ.
ಮು. ರೂಪವಾಣಿ ಪ್ರೆಸ್, ಮದರಾಸು.
೭೯೮

**ಯಕ್ಷಗಾನ** ಕುಮಟಾ,ಶಿರಸಿ
ದ್ವೈಮಾಸ,ಮಾಸ ೨೪x೧೮ ಪು.೨೪
ಯಕ್ಷಗಾನ ೧೯೫೬-೬೦ . .
ಸಂ. ಮಂಜುನಾಥ ಶಂಭು ಭಾಗವತ ಕಡತೋಕಾ
ಪ್ರ. ಯಕ್ಷಗಾನ ಕಾರ್ಯಾಲಯ, ಕುಮಟಾ.
ಮು. ಶ್ರೀಧರ ಮುದ್ರಣಾಲಯ, ಹೊನ್ನಾವರ.
ಹೆ.ಮಾ. ಕಡತೋಕಾ ಮಂಜುನಾಥ ಭಾಗವತರು ಪ್ರಾರಂಭಿಸಿದ ಈ ಯಕ್ಷಗಾನ ಪತ್ರಿಕೆಗೆ ಗ. ಶಂ. ಸರ್ಪ ಕರ್ಣೇಶ್ವರ (೧೯೫೯) ಕೆ. ವೆಂಕಟರಾಯಾಚಾರ್ಯ-ಸುರತ್ಕಲ್ (೧೯೫೮) ಸಂಪಾದಕರಾಗಿ ನಡೆಸಿದರು. ಶಿರಸಿಯ ತಡಗುಣಿ ಗ್ರಾಮದಲ್ಲಿ ದ್ವೈಮಾಸಿಕವಾಗಿ ಪ್ರಾರಂಭ. ಜಿಲ್ಲೆಯ ಯಕ್ಷಗಾನ ಕಲಾವಿದ, ವಿ. ಎಚ್. ಶ್ರೀಧರ ಮುಂತಾದವರ ಲೇಖನಗಳಿರುತ್ತಿದ್ದವು. ನಾಜಗಾರ ಶಂಭುಶಾಸ್ತ್ರಿ ಹುಲಿಮನೆ ಸೀತಾರಾಮ ಶಾಸ್ತ್ರಿ ಕೆ. ಬಾಲಕೃಷ್ಣರಾವ್ ಮುಂತಾದವರು ಸಲಹೆ-ಸಹಕಾರಗಳ ಪತ್ರಿಕೆ. ೧೯೬೦ರ ವೇಳೆಗೆ ನಿಂತು ಹೋದ ಈ ಮಾಸಿಕ ಜಿಲ್ಲೆಯ ಪ್ರಥಮ ಯಕ್ಷಗಾನ ಪತ್ರಿಕೆ ಎಂಬ ಹೆಗ್ಗಳಿಕೆಯದಾಗಿದೆ.

ಇದನ್ನನುಸರಿಸಿ ಯಲ್ಲಾಪುರ ಅನಂತ ವೈದ್ಯರು "ಯಕ್ಷಗಾನ" ಮಾಸಿಕ ಪತ್ರಿಕೆಯನ್ನು ವಿಜಯಶ್ರೀ ಪ್ರಕಾಶನದಿಂದ ೧೯೮೧ ಮೇ ದಿಂದ ಪ್ರಾರಂಭಿಸಿದ್ದರು.

ಕೆಲ ಕಾಲಾ ನಂತರ ಹೊನ್ನಾವರದಿಂದ ಶಂಭುಶಾಸ್ತ್ರಿ-ನಾಜಗಾರರವರ "ಶೃಂಗಾರ" ಪತ್ರಿಕೆಯನ್ನು ನಡೆಸಿದರು. ೧೯೫೫ರಿಂದ ಚಾರ್ಮಾಡಿ-ಬೆಳ್ತಂಗಡಿಯಿಂದ ಕುಬಣೂರ ಶ್ರೀಧರರಾವ್‌ರ ಕು. "ಯಕ್ಷಪ್ರಭಾ", ಅದರಂತೆ, ಕಾಸರಗೋಡಿನ ಯಕ್ಷರಂಗ ಮುಂತಾದವುಗಳು ಈ ಕೆಲ ಬಗೆಗಿನ ಪತ್ರಿಕಾ ಯತ್ನಗಳು.
೭೯೯

**ಯದುಗಿರಿ** ಮೇಲುಕೋಟೆ-ಮಂಡ್ಯ
ಮಾಸ ? ?
ಶ್ರೀವೈಷ್ಣವ ಮತ ೧೯೩೬-೫೨ . .
ಸಂ. ಇ. ಎಲ್. ಪಿಳ್ಳೈ ಅಯ್ಯಂಗಾರ್.
ಸಹ. ಅ. ನ. ಶ್ರೀನಿವಾಸ ಅಯ್ಯಂಗಾರ್.
ಪ್ರ. ಕನ್ನಡ ಸಂಘ, ಮೇಲುಕೋಟೆ.
೮೦೦

**ಯಾತ್ರಿಕ** ಬೆಂಗಳೂರು
ಪಕ್ಷ ೨೪ ೧/೨x೧೮ ೧/೨ ಪು.೧೪
ಸಾಹಿತ್ಯ/ಯಾತ್ರೆ ೧೯೭೨ . .
ಸಂ. ಎಚ್. ವಿ. ವರದರಾಜನ್
ಸಹ ಸಂ. ಎಚ್. ವಿ. ನಾರಾಯಣ.
ಪ್ರ. ಹೆಬ್ಬೂರು ರಂಗಸ್ವಾಮಿ, ಏಷ್ಯನ್ ಎಂಟರ್‌ಟೇನಮೆಂಟ್ಸ್.
ಮು. ಸುಧಾ ಪ್ರಿಂಟರ್ಸ್.
ಹೆ.ಮಾ. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ದರ್ಶಕ ಪತ್ರಿಕೆಗಳು ಕಡಿಮೆ. ಇದರಂತೆ "ವಿಶ್ವಪರ್ಯಟನ" ಪತ್ರಿಕೆ (ಮಾಸ) ನಡೆದುದನ್ನು ಗಮನಿಸಬೇಕು.
೮೦೧

**ಯುಗದೀಪ** ಗೋಕಾಕ,ಕಾರವಾರ
ವಾರ ೩೬x೨೫ ಪು.೪
ಸುದ್ದಿ/ಸಮ್ಮಿಶ್ರ ೧೯೬೯
ಸಂ.ಪ್ರ. ಬಿ. ಎನ್. ಧಾರವಾಡಕರ.
ಮು. ಗಣಾನಾಯ್ಕ ಮೆಮೋರಿಯಲ್ ಪ್ರಿಂಟಿಂಗ್ ಪ್ರೆಸ್, ಕಾರವಾರ.
ಹೆ.ಮಾ. ಗೋಕಾಕದಿಂದ ಇವರೇ ಹೊರಡಿಸಿದ ಮಾಸಿಕ ಯುಗದೀಪ (೧೯೬೯) ನಿಂತ ನಂತರ-ಕಾರವಾರದಿಂದ ಸಾಪ್ತಾಹಿಕವಾಗಿ ಪ್ರಾರಂಭಿಸಿದರು. (೧೯೬೯ . . )
೮೦೨

**ಯುಗಪುರುಷ** ಉಡುಪಿ.ಕಿನ್ನಗೋಳಿ(ದ.ಕ.)
ಮಾಸ ೨೪x೧೮ ೧/೨ ಪು.೩೦
ಸುದ್ದಿ/ಸಾಹಿತ್ಯ ೧೯೪೭-೭೯
ಸಂ.ಪ್ರ. ಕೊಡತ್ತೂರು ಅನಂತ ಪದ್ಮನಾಭ ಉಡುಪ.
ಮು. (೧) ಆನಂದ ಪ್ರಿಂಟಿಂಗ್ ವರ್ಕ್ಸ್ (೨) ಕೆ. ಕಮಲಾಕ್ಷಿ ಉಡುಪ, ಯುಗಪುರುಷ ಮುದ್ರಣ.
ಹೆ.ಮಾ. ಸಹ ಸಂಪಾದಕರಾಗಿ ಬನ್ನಂಜೆ ರಾಮಾಚಾರ್ಯರು ಕೆಲಸ ಮಾಡಿದರು. ಪೇಜಾವರ ಮಠಾಧೀಶರು ಪತ್ರಿಕೆಯ ಸ್ಥಾಪಕ ಸದಸ್ಯರು. ಸಂಪಾದಕರು ತೀರಿಹೋದ ಮೇಲೆ ಮಕ್ಕಳು ಮುಂದುವರಿಸಿದ್ದಾರೆ.
೮೦೩

**ಯುಗವಾಣಿ** ಶಿರಸಿ
ವಾರ ೩೮x೨೫ ಪು.೧೨
ಸುದ್ದಿ/ಸಮಿಶ್ರ ೧೯೬೨-೬೬ . .
ಸಂ. ಟಿ. ಕೆ. ಮಹಮ್ಮೂದ.
ಪ್ರ. ಜಿ. ಎನ್. ಹೆಗಡೆ, ಅಲೇಸರ, ಶಿರಸಿ.
ಮು. ಭಾರತ ಮುದ್ರಣಾಲಯ, ಶಿರಸಿ
ಹೆ.ಮಾ. ಕೆ. ಕೆ. ಕೊಠಾರಿಯವರು ವ್ಯವಸ್ಥಾಪಕರಾಗಿದ್ದರು. ಚನ್ನಪಟ್ಟಣದ ಬಝಾರ್‌ನಲ್ಲಿ ಕಾರ್ಯಾಲಯ ಶಾಖೆ ಇತ್ತು. ೪-೫ ವರ್ಷ ಮಾತ್ರ ನಡೆಯಿತು. ಸಮಾಜವಾದದ ಧುರೀಣರಾದ ಸಂಪಾದಕ ಟಿ. ಕೆ. ಮಹಮ್ಮೂದರವರು "ಸಮಾಜವಾಣಿ" ಸಾಪ್ತಾಹಿಕವನ್ನೂ ನಡೆಸುತ್ತಿದ್ದರು.
೮೦೪

**ಯುಗಾಂತರ** ಬೆಂಗಳೂರು
ಮಾಸ ೧೮x೧೪ ಪು.೨೪
ಸುದ್ದಿ/ಸಾಹಿತ್ಯ ೧೯೫೦ . .
ಸಂ. ಎನ್. ಡಿ. ಶಂಕರ.
೮೦೫

**ಯುದ್ಧ ಸಂಚಿಕೆ** ಮದರಾಸು
ಪಕ್ಷ ೨೮x೧೯ ಪು.೧೬
ಯುದ್ಧವಾರ್ತೆ ೧೯೩೯ . .
ಪ. ವಾರ್ತಾ ಇಲಾಖೆ, ಮದರಾಸು.
ಹೆ.ಮಾ. ಎರಡನೇ ವಿಶ್ವಯುದ್ಧದ ಪರಿಚಯ ಹಾಗೂ ಜನರಿಗೆ ಮುನ್ನೆಚ್ಚರ ನೀಡುವುದಕ್ಕಾಗಿ ಸರಕಾರದ ಪ್ರಚಾರ ಮಾಡುತ್ತಿದ್ದ ಪೂರ್ತಿ ಸಚಿತ್ರ ಪಕ್ಷ ಪತ್ರಿಕೆ. ತುಂಬ ಆಕರ್ಷಕವಾಗಿತ್ತು.
೮೦೬

**ಯುವಜನ** ಬೆಂಗಳೂರು
ವಾರ ? ?
ಯುವಜನಾಂಗ ೧೯೪೭ . .
ಸಂ.ಪ. ವಿ. ಅಣ್ಣಯ್ಯ.
೮೦೭

**ಯುವಜನ II** ಬೆಂಗಳೂರು
ವಾರ ೨೪x೧೮ ೧/೨ ಪು.೨೪
? ೧೯೬೨ . .
ಸಂ.ಪ. ಎಂ. ರಾಮಮೂರ್ತಿ.
೮೦೮

**ರಂಗಭೂಮಿ** ಬೆಂಗಳೂರು
ಮಾಸ ೨೫x೧೯ ಪು.೨೪-೩೨
ರಂಗಭೂಮಿ ೧೯೨೫-೩೬ . .
ಸಂ. ದ. ಕೃ. ಭಾರದ್ವಾಜ, ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿ (೧೯೩೪)
ಪ್ರ.ವ್ಯ. ರಂಗಭೂಮಿ ಕಾರ್ಯಾಲಯ.
ಮು. ಬಿ. ಶ್ರೀನಿವಾಸ ಅಯ್ಯಂಗಾರ್.
ಹೆ.ಮಾ. ಮುಖಪುಟದಲ್ಲಿ ಹಿಂದೀ ಲಿಪಿಯ ರಂಗಭೂಮಿ ಎಂದಿತ್ತು. ೧೯೨೯ರ ವರೆಗೆ ಭಾರದ್ವಾಜರು ಸಂಪಾದಕರಾಗಿದ್ದರು. ಗದಗದ ದತ್ತಾತ್ರೇಯ ಸಂಗೀತ ನಾಟಕ ಮಂಡಳಿಯ ಆಶ್ರಯವಿತ್ತು. ಡಿ. ವಿ. ಅಯ್ಯರರು ವ್ಯವಸ್ಥಾಪಕರಾಗಿದ್ದರು. ಸಿ. ಕೆ. ವೆಂಕಟರಾಮಯ್ಯನವರ "ಮೈಸೂರಿನ ರಂಗಭೂಮಿ" ಎಂಬ ಪ್ರಬುದ್ಧ ಲೇಖನ ಪ್ರಕಟವಾದದ್ದಿದೆ.
೮೦೯

**ರಂಗಮಂಟಪ** ಬೆಂಗಳೂರು
ತ್ರೈಮಾಸ ೨೪x೧೮ ೧/೨ ಪು.೪೮
ರಂಗಭೂಮಿ ೧೯೭೨-೭೩ . .
ಸಂ.ಪ. ಬಿ. ಕೃಷ್ಣ.
ಮು. ಶ್ರೀ ಶಂಕರ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು.
೮೧೦

**ರಂಜನ** ಬೆಂಗಳೂರು
ಪಕ್ಷ ೧೯x೧೩ ಪು.೪೮
ಕಥೆ/ಸಾಹಿತ್ಯ ೧೯೬೧-೬೨
ಸಂ. ಕು. ವೆಂಕಣ್ಣ
ಪ್ರ. ಪಿ. ಎನ್. ವೈದ್ಯನಾಥನ್.
ಮು. ಯುಗಾಂತರ ಪ್ರೆಸ್, ಬೆಂಗಳೂರು.
ಧ್ಯೇಯವಾಕ್ಯ: "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ".
ಟಿ. ಪಾರ್ಥಸಾರಥಿಯವರು ಇದರ ಸೂತ್ರಧಾರ ಎನ್ನಬೇಕು.
೮೧೧

**ರಂಜನೆ** ಗದಗ
ಮಾಸ ? ?
ಸಾಹಿತ್ಯ ?
ಸಂ.ಪ್ರ. ಪ. ಲೋ. ಬಂಕಾಪುರ.
೮೧೨

**ರಣಭೇರಿ** ಬೆಂಗಳೂರು
ಪಕ್ಷ ೩೮x೨೫ ಪು.೪
ಸುದ್ದಿ/ಸಮ್ಮಿಶ್ರ ೧೯೬೩-೭೬ . .
ಸಂ.ಪ್ರ. ಜಿ. ಜಿ. ಪ್ರಸಾದ್.
ಮು. ರೇವಣ ಪ್ರಿಂಟರ್ಸ್, ಬೆಂಗಳೂರು.
೮೧೩

**ರತ್ನಗಿರಿ** ಬೆಂಗಳೂರು
ಮಾಸ ೨೪x೧೮ ಪು.೩೨
ಸಾಮಾಜಿಕ ೧೯೨೯ . .
ಸಂ. ಕನ್ನೆಲ್ಲಿ ಮುನಿರೆಡ್ಡಿ, ಹೊಸೂರು.
ಪ್ರ. ರೆಡ್ಡಿ ಮಹಾಸಭೆ, ಬೆಂಗಳೂರು.
ಮು. ವ್ಯಾಯಾಮ ಮುದ್ರಣಾಲಯ.
೮೧೪

**ರತ್ನಮಾಲಿಕೆ** ಮಂಗಳೂರು
ಅನಿಯತ ೧೪x೯ ೧/೨ ಪು.೨೦
ಸಾಹಿತ್ಯ/ಸಮ್ಮಿಶ್ರ ೧೯೦೧ . .
ಪ್ರ. ರತ್ನಮಾಲಿಕಾ ಪ್ರಕಾಶನ.
ಮು. ಧರ್ಮಪ್ರಕಾಶ ಮುದ್ರಾಲಯ.
ಹೆ.ಮಾ. ಚಿಕ್ಕ ಅಳತೆಯ ಆಕರ್ಷಕ ಪುಸ್ತಕ ಮಾಲಿಕೆಯಾಗಿತ್ತು. ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸಲಾಗುತ್ತಿತ್ತು.
೮೧೫

**ರತ್ನಾಕರ** ಚಿತ್ರದುರ್ಗ
ವಾರ ೩೭x೨೪ ೧/೨ ಪು.೪
ಸುದ್ದಿ/ಸಮ್ಮಿಶ್ರ ೧೯೩೨ . .
ಸಂ.ಪ್ರ. ಮುರಗೆಪ್ಪ ಗುಮಾಸ್ತೆ.
೮೧೬

**ರತಿರಂಗ** ಧಾರವಾಡ
ಮಾಸ ೨೧x೧೩ ಪು.೨೪
ಲೈಂಗಿಕ ವಿಜ್ಞಾನ ೧೯೪೨
ಸಂ. ವೆಂಕಟ ಜಿ. ಭಸ್ಮೆ
೮೧೭

**ರಮಣ ಸಂದೇಶ** ಕುಮಟಾ
ತ್ರೈಮಾಸ ೨೧x೧೩ ೧/೨ ಪು.೯೬
ಧಾರ್ಮಿಕ ೧೯೭೧ . .
ಸಂ. ಡಾ. ಆರ್. ಎಂ. ಮಾಸೂರಕರ.
ಪ್ರ. ಎಂ. ಡಿ. ನಾಯ್ಕ, ರಮಣ ಕ್ಲಿನಿಕ್.
ಮು. ಗಜಾನನ ಪ್ರೆಸ್.
ಹೆ.ಮಾ. ರಮಣ ಮಹರ್ಷಿಗಳ ತತ್ವವಿಚಾರಗಳಿಗೆ ಮೀಸಲಾದ ಪತ್ರಿಕೆ ಶ್ರೀ ಸ್ವಾಮಿ ಪ್ರಣವಾನಂದ ಆರ್. ಎಂ. ಪ್ರಭು ಸಂಪಾದಕರಾಗಿದ್ದರು. ಎಂ. ಡಿ. ನಾಯ್ಕ ವ್ಯವಸ್ಥಾಪಕರಾಗಿದ್ದರು.
೮೧೮

**ರಮಣಿ** ಮದ್ರಾಸ
ಮಾಸ ೨೩ ೧/೨x೧೮ ಪು.೪೮
ಮಹಿಳಾಭಿವೃದ್ಧಿ ೧೯೭೧ . .
ಸಂ. ಜಿಂದೆ ನಂಜುಂಡಸ್ವಾಮಿ.
ಪ್ರ. ಎಸ್. ಎಂ. ಕೇಫಾ, ಮದರಾಸು.
ಮು. ರಮಣ ಪ್ರಿಂಟರ್ಸ್.
೮೧೯

**ರವಿ** ಮಡಿಕೇರಿ
ದಿನ ೩೮x೨೫ ಪು.೨
ಸುದ್ದಿ ೧೯೬೪-೭೫ . .
ಸಂ.ಪ. ಕೆ. ಕೆ. ಪುಟ್ಟರಾಜು
ಮು. ಶ್ರೀ ಗಣೇಶ ಪ್ರಿಂಟರ್ಸ್, ಮಡಿಕೇರಿ.
೮೨೦

**ರಶ್ಮಿ** ಕೋಟ(ದ.ಕ.)
ಮಾಸ ೨೧x೧೪ ಪು.೬೦

ಸಾಹಿತ್ಯ/ಸಮ್ಮಿಶ್ರ ೧೯೭೧ . .

ಸಂ.ಪ. ಎ. ಗಣಪಯ್ಯ ಅಲ್ಸೆ
ಮು. ದಿನೇಶ ಪ್ರಿಂಟರ್ಸ್, ಬಹ್ಮಾವರ.
ಹೆ.ಮಾ. ಎ. ಸದಾನಂದ ಹೆಬ್ಬಾರ, ಕಡತೋಕ ಮಂಜುನಾಥ ಭಾಗವತ, ಕೆ. ಎ. ರಾಘವೇಂದ ಉರಾಳ, ಶ್ರೀ ಸುಬಾಯ ಚೊಕ್ಕಾಡಿ, ಶ್ರೀನಿವಾಸ ಉಡುಪ, ಶಿವರಾಮ ಕಾರಂತ, ಗೌರೀಶ ಕಾಯ್ಕಿಣಿ, ಬೈಕಾಡಿ, ವೆಂಕಟಕೃಷ್ಣಯ್ಯ ಮುಂತಾದವರ ಸಲಹೆಗಾರ ಮಂಡಳಿ ಇತ್ತು.
**೮೨೧**

**ರಸರಂಗ** ಹುಬ್ಬಳ್ಳಿ
ಮಾಸ ೨೪x೧೮ ೧/೨ ಪು.೧೬

ಚಲನಚಿತ್ರ ೧೯೬೨-೬೮ . .

ಸಂ.ಪ. ಸಿ. ಬಾಬುರಾವ್
ಮು. ಶಕ್ತಿ ಮುದಣಾಲಯ, ಹುಬ್ಬಳ್ಳಿ.
**೮೨೨**

**ರಸಿಕ ರಂಜಿನಿ** ಗದಗ
ವಾರ ೪೪x೩೮ ಪು.೪

ಸುದ್ದಿ/ಸಮ್ಮಿಶ್ರ ೧೮೮೪ . .

ಸಂ. ಗೌರೀಶಂಕರ ಮಿಸರ.
ಸಹ ಸಂ. ಉಮಚಗಿ ಶ್ರೀನಪ್ಪ.
ಪ್ರ.ಮು. (೧) ರಸಿಕ ರಂಜಿನಿ ಪ್ರೆಸ್, ಗದಗ. (೨) ಜ್ಞಾನ ಚಂದ್ರೋದಯ ಪ್ರೆಸ್.
ಹೆ.ಮಾ. ಭಾಷೆ ಪ್ರಭಾವಿತ. ಕಲಿಚಿನ ನಾಲ್ಕು ಮುಖಪುಟಗಳದ್ದಾಗಿತ್ತು.
**೮೨೩**

**ರಾಜಕುಮಾರ್** ಮೈಸೂರು
ವಾರ ೩೯x೨೫ ಪು.೪-೮
ಚಲನಚಿತ್ರ ಎ.೧೯೭೧-
ಸಂ. ಎಂ. ಲಿಂಗರಾಜ್.
ಪ್ರ.ಮು. ಕಲಾ ಪ್ರಿಂಟರ್ಸ್, ಮೈಸೂರು.
**೮೨೪**

**ರಾಜಭಕ್ತಿ** ಮೈಸೂರು
ವಾರ ೩೮x೨೫ ಪು.೪

ಸುದ್ದಿ/ದೇಶಭಕ್ತಿ ೧೯೩೧ . .

ಸಂ. ಎಸ್ ಶರ್ಮ
ಪ. ಮೆ. ರಾಜಭಕ್ತಿ ಕಾರ್ಯಾಲಯ.
ಮು. ಸರಸ್ವತಿ ಮುದ್ರಾಲಯ, ಮೈಸೂರು.
**೮೨೫**

**ರಾಜಹಂಸ** ಧಾರವಾಡ
ವಾರ, ದಿನ ೩೪x೨೫ ಪು.೪
ಸುದ್ದಿ/ಸಮ್ಮಿಶ್ರ ೧೯೧೪-೧೯೩೫
ಸಂ. ಆರ್. ವಿ. ಜಠಾರ, ಮಂ. ನಾ. ಟೇಂಬೆ, ಇತರರು.
ಪ. ಮು. ರಾಮರಾವ, ಬಳ್ಳಾರಿ.
ಮು. ರಾಜಹಂಸ ಮುದ್ರಣ; ಕನಕಾದಿತ್ಯ ಛಾಪಖಾನೆ, ಧಾರವಾಡ.
ಹೆ.ಮಾ. ವಾಮನರಾವ್ ಜಠಾರರು ಪ್ರಕಟಿಸುತ್ತಿದ್ದರು. ರಘುನಾಥ ವಾಮನ ಜಠಾರರು ಮೊದಲ ಸಂಪಾದಕರಾಗಿದ್ದರು. ಬಳ್ಳಾರಿ ರಾಮರಾವ್ ಮಾಲೀಕರಾಗಿದ್ದರು. ಜಠಾರರ ಆರ್ಥಿಕ ಸಹಾಯವಿತ್ತು. ೧೯೧೩ರಿಂದ ದಿನ ಪತ್ರಿಕೆಯಾಗಿ ಬದಲಾಯಿತು. ೧೯೩೧ರ ವೇಳೆಗೆ ಕನಕಾದಿತ್ಯ ಛಾಪಖಾನೆಯಲ್ಲಿ ಮುದ್ರಿತವಾಗುತ್ತಿತ್ತು. ಮುಂದೆ ಮಾಸಿಕವಾಯಿತು ಎಂದು ಹೇಳಲಾಗುತ್ತದೆ. ಇದರ ನಿಯಮಿತ ಲೇಖಕರೆಂದು ಹೊಸಕೇರಿ ಅಣ್ಣಾಚಾರ್ಯರು, ಶಟ್ಟೂರ ಮಧ್ವರಾವ, ಗುತ್ತಲ ಗೋವಿಂದಾಚಾರ್ಯ ....
**೮೨೬**

**ರಾಜಹಂಸ** ಬಳ್ಳಾರಿ
ವಾರ ೩೮x೨೫ ಪು.೪

ಸುದ್ದಿ ೧೯೫೩ . .

ಸಂ.ಪ. ಶ್ರೀರಾಮಪ್ಪ.
**೮೨೭**

**ರಾಜ್ಯಧರ್ಮ** ಮೈಸೂರು
ದಿನ ೩೭x೨೭ ಪು.೨
ಸುದ್ದಿ ೧೯೬೬-೭೮
ಸಂ. ಬಿ. ಪಿ. ಆರ್. ವಿಠಲ.
ಪ.ಮು. ಜಿ. ಕೃಷ್ಣಪ್ಪ, ಶ್ರೀ ಲಕ್ಷ್ಮೀ ಪ್ರಿಂಟರ್ಸ್.
ಹೆ.ಮಾ. ೧೯೭೮ರಲ್ಲಿ ಸ್ಥಗಿತಗೊಂಡರೂ ಪುನಃ ಅದೇ ವರ್ಷ ಆರಂಭವಾಯಿತು.
**೮೨೮**

**ರಾಜ್ಯಪ್ರಗತಿ** ಬೆಂಗಳೂರು
ವಾರ,ಪಕ ೩೭x೨೫ ಪು.೧೬
ಸುದಿ/ಸಮ್ಮಿಶ್ರ ಮಾ.೧೯೭೦-೭೭ . .
ಸಂ. ಎನ್. ಶ್ರೀಕಾಂತ್.
ಸಹ. ಮಾ. ಭೀ. ಶೇಷಗಿರಿರಾವ್.
ಪ್ರ. ಆರ್. ಬಸಪ್ಪ.
ಮು. ಭಾವನ ಪ್ರೆಸ್, ಬೆಂಗಳೂರು.
**೮೨೯**

**ರಾಮರಾಜ್ಯ** ಬೆಂಗಳೂರು
ಪಕ್ಷ ೨೮x೨೧, ೨೧x೧೮ ಪು.೧೨,೩೬
ಸುದ್ದಿ/ಸಮ್ಮಿಶ್ರ ೧೯೪೬-೫೬ . .
ಸಂ.ಪ್ರ. ಎಚ್. ವಿ. ವರದರಾಜನ್
ಸಹ ಸಂ.ಎಚ್. ವಿ. ನಾರಾಯಣ.
ಮು. ಚೇತನಾ ಪ್ರಿಂಟರ್ಸ್; ಅರುಣೋದಯ ಪ್ರೆಸ್, ಮುಂ.
**೮೩೦**

**ರಾಯಚೂರವಾಣಿ** ರಾಯಚೂರು
ದಿನ ೩೭x೪೯, ೪೧x೨೯ ಪು.೨,೪
ಸುದ್ದಿ/ಪ್ರಾದೇಶಿಕ ೧೯೬೮-೭೭ . .
ಸಂ. ಎನ್. ಕೆ. ಕುಲಕರ್ಣಿ
ಸಹ ಸಂ.ಎಂ. ಆರ್. ಶಿವಣ್ಣ
ಪ್ರ. ಎನ್. ಕೆ. ಕುಲಕರ್ಣಿ
ಮು. ವಾಣಿ ಪ್ರಿಂಟರ್ಸ್.
**೮೩೧**

**ರಾಯಭಾರಿ** ಉಡುಪಿ
ವಾರ ೩೭x೨೫ ಪು.೧೨
ಸುದ್ದಿ/ಸಮ್ಮಿಶ್ರ ೧೯೫೦-೭೭
ಸಂ. ಎಸ್. ಎಲ್. ನಾರಾಯಣ ಭಟ್.
ಪ್ರ. ಪಾಂಗಾಳ ಉಪೇಂದ್ರ ನಾಯಕ; ಪಿ. ರವೀಂದ್ರ ನಾಯಕ
ಮು. ಮೆಜೆಸ್ಟಿಕ್ ಪ್ರೆಸ್, ಪ್ರಭಾಕರ ಮುದ್ರಣ, ಉಡುಪಿ.
**೮೩೨**

**ರಾಷ್ಟ್ರಜ್ಯೋತಿ** ಮಂಗಳೂರು
ವಾರ ೩೮x೨೫ ಪು.೪
ಸುದ್ದಿ/ಸಮ್ಮಿಶ್ರ ೧೯೫೩-೬೨ . .
ಸ್ಥಾ. ಬಿ. ಎಸ್. ಭಾಸ್ಕರ ರೈ
ಸಂ. ಕೆ. ಕೆ. ಶೆಟ್ಟಿ.
ಸಹ ಸಂ. ಎಂ. ರಮಾನಾಥ ಶೆಟ್ಟಿ
ಪ್ರ. ಎಚ್. ಕೆ. ತಿಂಗಳಾಯ.
ಮು. ಕೆನರಾ ಪ್ರಿಂಟಿಂಗ್ ವರ್ಕ್ಸ್, ಮಂಗಳೂರು.
ಹೆ.ಮಾ. ಹಿಂದೆ ಇದೇ ಪತ್ರಿಕೆ "ಜ್ಯೋತಿ" ಎಂಬ ಹೆಸರಿನಿಂದ ಹೊರಡುತ್ತಿತ್ತು.
**೮೩೩**

**ರಾಷ್ಟ್ರಬಂಧು** ಮಂಗಳೂರು,ವಿರಾಜಪೇಟೆ(ಕೊಡಗು)
ವಾರ,ದಿನ ೪೬x೨೯ ಪು.೪
ಸುದ್ದಿ/ಸಾಹಿತ್ಯ ೧೯೨೮-೬೭ . .
ಸಂ. ಬಿ. ಕೆ. ಶೇಷ ಭಟ್ಟ; ಕಡೆಂಗೋಡು ಶಂಕರ ಭಟ್ಟ (೧೯೨೮); ಕೆ. ಆರ್. ಆಚಾರ್ (೧೯೫೩)
ಸ್ಥಾ+ಮಾಲೀಕರು. ಯು. ರಾಮರಾವ್
ಪ್ರ. ಯು. ನಾರಾಯಣ ಆಚಾರ್, ಕ. ಶಂಕರ ಭಟ್ಟ
ಮು. ಧರ್ಮ ಪ್ರಕಾಶ ಪ್ರೆಸ್, ಉಡುಪಿ (೧೯೩೪), ರಾಷ್ಟ್ರಬಂಧು ಪ್ರೆಸ್ (೧೯೫೩)
ಹೆ.ಮಾ. ಬ್ರಾಹ್ಮಣರೇ ಹೆಚ್ಚಿನ ಚಂದಾದಾರರಾಗಿದ್ದರು. ರಾಮರಾಯರ ಅಳಿಯ ಕೆ. ಆರ್. ಆಚಾರ್ಯ ಹಾಗೂ ಶಂಕರಭಟ್ಟರಿಗೆ ಭಿನ್ನಾಭಿಪ್ರಾಯ ಬರಲು ೧೯೫೨ರಲ್ಲಿ ಶಂಕರಭಟ್ಟರು 'ರಾಷ್ಟ್ರಮತ'ವನ್ನು ಪ್ರಾರಂಭಿಸಿದರು. ಆಮೇಲೆ ಕೊಡಗಿನ ವಿರಾಜಪೇಟೆಯ ಕೃಷ್ಣಗಿರಿ ಗೋವಿಂದರಾಯರು ಎರಡನ್ನು ಖರೀದಿಸಿದರೂ "ರಾಷ್ಟ್ರಬಂಧು"ವನ್ನು ದೈನಿಕವನ್ನಾಗಿಸಿ ನಡೆಸಿದರು. ಅವರ ಪತ್ನಿ ಜಯಲಕ್ಷ್ಮಿ ರಾಷ್ಟ್ರಮತವನ್ನು ಸಾಪ್ತಾಹಿಕವಾಗಿ ನಡೆಸಿದರು. ೧೯೪೮-೫೨ರ ವರೆಗೆ ಕಾರಣಾಂತರಗಳಿಂದ ಪತ್ರಿಕೆ ನಿಂತಿತು. ಪತ್ರಿಕೆಗಳ ಸಂಖ್ಯೆ ಆಗ ೧೫೦೦-೨೦೦೦ ತಲುಪಿತ್ತು. ಗೋವಿಂದರಾಯರು ವಿರಾಜಪೇಟೆಯಲ್ಲಿ 'ವೀರವಾಣಿ' ಸಾಪ್ತಾಹಿಕವನ್ನು ಕೈಗೆತ್ತಿಕೊಂಡರು. ರಾಷ್ಟ್ರಬಂಧು ಪತ್ರಿಕೆಯು ಅಗ್ರಲೇಖನ, ವಸ್ತುನಿಷ್ಠತೆ, ಸಮಾಲೋಚನೆ, ತರ್ಕಬದ್ಧ ಬರಹಗಳಿಗಾಗಿ ಹೆಸರಾಗಿತ್ತು. ಜನಪ್ರಿಯವೆನಿಸಿತ್ತು.
**೮೩೪**

**ರಾಷ್ಟ್ರಮತ** ಮಂಗಳೂರು
ವಾರ ೪೬x೨೯ ಪು.೪
ಸುದ್ದಿ/ಸಮ್ಮಿಶ್ರ ೧೯೫೩-೬೧
ಸಂ. ಕೆ. ಶಂಕರ ಭಟ್ಟ
ಪ. ರಾಷ್ಟ್ರಮತ ಪ್ರೈವೇಟ್ ಲಿಮಿಟೆಡ್.
ಮು. ರಾಷ್ಟ್ರಮತ ಮುದ್ರಣಾಲಯ.
ಹೆ.ಮಾ. (ನೋಡಿ. ರಾಷ್ಟ್ರಬಂಧು)
೧೯೬೧ರ ವಿಶೇಷ ಸಂಚಿಕೆಯನ್ನು ಶ್ರೀ ಸೇಡಿಯಾಪು ಕೃಷ್ಣಭಟ್ಟರು ವಿಶೇಷ ಸಂಪಾದಕರಾಗಿ ಹೊರತಂದಿದ್ದರು.
**೮೩೫**

**ರಾಷ್ಟ್ರವಾಣಿ** ಚಿಕ್ಕಮಗಳೂರು
ವಾರ ೩೮x೨೫ ಪು.೪

ಸುದ್ದಿ/ಸಮ್ಮಿಶ್ರ ಮೇ.೧೯೫೯-೭೬ . .

ಸಂ. ಜಿ. ಕೆ. ಸಿದ್ದಪ್ಪ ಶೆಟ್ಟಿ.
ಸಹ ಸಂ. ಎಸ್ ಸದಾಶಿವ ಪ್ರಕಾಶ.
ಮು. ರಾಷ್ಟ್ರವಾಣಿ ಪ್ರೆಸ್, ಚಿಕ್ಕಮಗಳೂರು.
**೮೩೬**

**ರಾಷ್ಟ್ರಾಭ್ಯುದಯ** ಬೆಂಗಳೂರು
ವಾರ, ಪಕ್ಷ ೩೮x೨೫ ಪು.೮

ಸುದ್ದಿ/ಸಮ್ಮಿಶ್ರ ೧೯೬೯-೭೨ . .

ಸಂ.ಪ್ರ. ಎನ್. ಎಚ್. ಚಂದ್ರಶೇಖರ.
ಮು. ಮೆಜೆಸ್ಟಿಕ್ ಪ್ರಿಂಟರ್ಸ್, ಕರ್ನಾಟಕ ಮುದ್ರಣ, ಬೆಂಗಳೂರು.
**೮೩೭**

**ರಾಷ್ಟ್ರೋತ್ಥಾನವಾರ್ತಾ** ಬೆಂಗಳೂರು
ತ್ರೈಮಾಸ,ಮಾಸ ೨೧x೧೮ ಪು.೧೬

ಸುದ್ದಿ/ಸಾಹಿತ್ಯ ೧೯೭೧-೭೬ . .

ಸಂ. ಎಂ. ಎಸ್. ನರಸಿಂಹಮೂರ್ತಿ, ಪ. ರಾ. ಆನಂದರಾವ್, ಮೈ. ಚ. ಜಯದೇವ
ಪ್ರ. ರಾಷ್ಟ್ರೋತ್ಥಾನ ಪರಿಷತ್, ಬೆಂಗಳೂರು.
ಮು. ರಾಷ್ಟ್ರೋತ್ಥಾನ ಮುದ್ರಣಾಲಯ.
ಹೆ.ಮಾ. ಜೆ. ಮಧುಸೂದನ್ ಅವರು ಕೆಲಕಾಲ ಸಂಪಾದಕರಾಗಿದ್ದರು. ಮಾಸಿಕವಾಗಿ ೪ ವರ್ಷ ನಡೆದು ನಿಂತಿತು. ಪ್ರತಿ ತಿಂಗಳೂ ಪ್ರಕಟಿತ ಗ್ರಂಥಗಳ ಸಮಗ್ರ ಪಟ್ಟಿ, ಉತ್ತಮ ಪುಸ್ತಕ ಪರಿಚಯ ಸಮಾರಂಭದ ವರದಿ, ಹಿರಿಯ ಸಾಹಿತಿ, ವಿದ್ವಾಂಸರ, ಉಪನ್ಯಾಸ ಸಂಗ್ರಹ ಒದಗಿಸುವ ಉದ್ದೇಶ ಹೊಂದಿತ್ತು.
**೮೩೮**

**ರೂಪಲೇಖಾ** ಬೆಂಗಳೂರು
ವಾರ ೪೦x೨೯ ಪು.೮

ಚಲನಚಿತ್ರ ೧೯೬೭-೭೭ . .

ಸಂ.ಪ್ರ. ಎಂ. ರಾಮನ್
ಮು. ಆಲ್ ಆರ್ಟ್ಸ್ ಕಂಪನಿ, ಕರ್ನಾಟಕ ಪತ್ರಿಕಾ ಪಬ್ಲಿಷರ್ಸ್.
**೮೩೯**

**ರೂಪಶಿಲ್ಪಿ** ಬೆಂಗಳೂರು
ವಾರ,ಮಾಸ ೩೬x೨೫, ೧೭x೧೨ ಪು.೪,೯೮

ಚಲನಚಿತ್ರ ೧೯೬೯-೭೭ . .

ಸಂ.ಪ್ರ. ಎಲ್. ಬಾಬು ಕೃಷ್ಣಪ್ರಸಾದ್
ಮು. ಶ್ರೀ ಸಾಯಿರಾಮ ಪ್ರಿಂಟರ್ಸ್.
**೮೪೦**

**ರೈತ** ಬಳ್ಳಾರಿ
ವಾರ ೩೭x೨೫ ಪು.೪

ಕೃಷಿ ೧೯೪೮-೫೪ . .

ಸಂ.ಪ್ರ. ಕೆ. ಚನ್ನಬಸಪ್ಪ
ಮು. ಕೆ. ಚನಬಸಪ್ಪ, ಸ್ವಂತ ಮುದ್ರಣಾಲಯ.
**೮೪೧**

**ರೈತ** ಮೈಸೂರು
ವಾರ ೩೮x೨೫ ಪು.೮

ಕೃಷಿ ೧೯-೫-೧೯೪೯ . .
**೮೪೨**

**ರೈತನ ಪೇಟೆ** ಧಾರವಾಡ,ಹುಬ್ಬಳ್ಳಿ
ಮಾಸ ೨೪ ೧/೨x೧೯ ಪು.೩೦

ಕೃಷಿ ೧೯೬೩-೭೨ . .

ಸಂ. ಆರ್. ಬಿ. ಮಾಮಲೇ ದೇಸಾಯಿ.
ಪ್ರ. ಕರ್ನಾಟಕ ಕ್ರಮಪಡಿಸಿದ ಪೇಟೆಗಳ ಸಲಹಾ ಸಮಿತಿ, ಧಾರವಾಡ.
ಮು. ವಸಂತ ಪ್ರಿಂಟಿಂಗ್ ಪ್ರೆಸ್, ಮನೋಹರ ಮುದ್ರಣ, ಹುಬ್ಬಳ್ಳಿ.
ಹೆ.ಮಾ. ಹನ್ನೊಂದು ಮಂದಿಯ ಸಂಪಾದಕ ಮಂಡಳಿ ಇತ್ತು. ಇದೇ ಪತ್ರಿಕೆಯನ್ನು ಅನುಸರಿಸಿ "ಕೃಷಿಪೇಟೆ, ಕೃಷಿವಾರ್ತೆ" ಪತ್ರಿಕೆಗಳು ಹೊರಟವು.
**೮೪೩**

**ರೈತಪ್ರಗತಿ** ಬೆಂಗಳೂರು
ವಾರ ೪೨x೨೮ ಪು.೪

ಕೃಷಿ ೧೯೬೯-೭೭ . .

ಸಂ.ಪ್ರ. ಎಚ್. ಆರ್. ಕೃಷ್ಣಮೂರ್ತಿ.
ಸಹ ಸಂ. ಕೆ. ಬಾಬೂರಾವ ನಾಯಕ.
ಮು. ವನಜ ಪ್ರಿಂಟರ್ಸ್. ಬೆಂಗಳೂರು.
**೮೪೪**

**ರೈತಬಂಧು** ಬೆಂಗಳೂರು
ವಾರ ೩೫ ೧/೨x೨೪ ೧/೨ ಪು.೧೨

ಕೃಷಿ ೧೯೬೩-೭೪ . .

ಸಂ.ಪ. ಎಂ. ನಾರಾಯಣಗೌಡ.
ಮು. ರಮಾಭಾರತಿ ಪಿಂಟರ್ಸ್.
**೮೪೫**

**ರೈತಮತ** ಹಾಸನ
ವಾರ ೩೮x೨೫ ಪು.೮

ಕೃಷಿ ೧೯೫೮ . .

ಸಂ.ಪ. ಗೋವಿಂದಯ್ಯ
**೮೪೬**

**ರೈತವಾಣಿ** ಬೆಂಗಳೂರು
ಪಕ್ಷ ೩೭x೨೫ ಪು.೧೨

ಕೃಷಿ ೧೯೫೫ . .

ಸಂ.ಪ್ರ. ಟಿ. ಎಂ. ತಿಮ್ಮೇಗೌಡ.
**೮೪೭**

**ರೈತವಾಣಿ** ಸಂತೆಬೆನ್ನೂರು
ಮಾಸ ೨೪x೧೯ ಪು.೧೬

ಕೃಷಿ ೧೯೬೨ . .

ಸಂ. ಎಚ್. ತಿಮ್ಮಪ್ಪ
ಪ್ರ. ಡೆವಲಪ್‌ಮೆಂಟ ಬ್ಲಾಕ್ ಆಫೀಸ್, ಸಂತೆಬೆನ್ನೂರು.
ಮು. ಸೋಮೇಶ್ವರ ಮುದ್ರಣ.
ಹೆ.ಮಾ. ಕೇವಲ ಒಳಹಂಚಿಕೆಗೆ ಎಂದಿತ್ತು.
**೮೪೮**

**ರೈತವಾಣಿ** ಮಂಗಳೂರು
ವಾರ ೩೮x೨೫ ಪು.೮

ಕೃಷಿ ೧೯೪೮-೫೦ . .

ಸಂ. ಎನ್. ವಿಠಲದಾಸ್, ಜಾರ್ಜ ಎಂ. ಫರ್ನಾಂಡಿಸ್
ಪ್ರ.ಸಂ. ಸಂಜೀವನಾಥ್
ಪ. ಎ. ಎ. ಡಿಸೋಜಾ.
ಮು. ಕೊಹಿನೂರ ಮುದ್ರಣ, ಮಂಗಳೂರು, ಮುಂತಾದವು.
**೮೪೯**

**ರೋಶನಿ** ಮಂಗಳೂರು
ಪಕ್ಷ ೨೫x೧೯ ಪು.೨೪

ಯುವಜನಾಂಗ ಆಗ.೧೯೬೧-೬೨ . .

ಸಂ. ಜೋಸೆಫ್ ಲೋಬೋ.
ಮು. ಆದರ್ಶ ಪ್ರಿಂಟಿಂಗ್ ಪ್ರೆಸ್.
ಹೆ.ಮಾ. ಯುವ ಜನರ ವಿವಿಧ ಸಮಸ್ಯೆ, ಅಭಿಪ್ರಾಯ ಕುರಿತು ಚರ್ಚಿಸುವ ವಿಚಾರ ವೇದಿಕೆಯಾಗಿತ್ತು.
**೮೫೦**

**ರೋಹಿಣಿ** ಬೆಂಗಳೂರು
ಮಾಸ ೧೮x೧೩ ಪು.೯೬

ಸಾಹಿತ್ಯ/ಸಮ್ಮಿಶ್ರ ೧೯೬೨ . .

ಸಂ. ಚಿಕ್ಕಮುನಿಸ್ವಾಮಿ.
ವ.ಸಂ.ಎನ್. ಎಸ್. ಸಿ. ಕೇಶವ.
ಪ. ಕಲ್ಪನಾ ಪಿಂಟರ್ಸ್, ಬೆಂಗಳೂರು.
**೮೫೧**

**ಲಲಿತ** ಕಾಸರಗೋಡು
ಮಾಸ ೨೧x೧೪ ಪು.೬೪

ಸಾಹಿತ್ಯ/ಸಮ್ಮಿಶ್ರ ೧೯೬೬ . .

ಸಂ. ಟಿ. ಎಸ್. ಕಾರ್ಯಹಳ್ಳ.
ವ.ಸಂ. ಕೆ. ಆರ್. ಸಾರಂಗ.
ನ. ಪಕಾಶ ಪಿಂಟರ್ಸ್, ಕಾಸರಗೋಡು.
ಹ . ಕಾಸರಗೋಡಿನಿಂದ ಹೊರಟ ಕೆಲವೇ ಸಾಹಿತ್ಯಕ ಪತ್ರಿಕಾ ಯತ್ನಗಳಲ್ಲಿ ಇದೊಂದು ಒಳ್ಳೇ ಮಟ್ಟದಲ್ಲಿದ್ದರೂ ಹೆಚ್ಚು ಕಾಲ ನಡೆಯಲಿಲ್ಲ.
**೮೫೨**

**ಲಹರಿ** ಮೈಸೂರು
ಮಾಸ ೧೮x೧೨ ಪು.೬೪

ಸುದ್ದಿ/ಸಾಹಿತ್ಯ ೧೯೬೪ . .

ಸಂ.ಪ್ರ. ಬಿ. ಎನ್. ಶ್ರೀರಾಮು.
ಮು. ನೃಪತುಂಗ ಮುದ್ರಣ, ಮೈಸೂರು.
**೮೫೩**

**ಲಾ-ಗೆಝೆಟ್** ಮಂಡ್ಯ
ಮಾಸ ೨೪x೧೪ ಪು.೨೪

ಕಾನೂನು ೧೯೦೭ . .

ಸಂ.ಪ. ಬಿ. ನರಸಿಂಗರಾವ್
ಮು. ಸನಾತನ ಧರ್ಮ ಪಚಾರಕ ಮುದ್ರಣ.
**೮೫೪**

**ಲಾ-ರಿಪೋರ್ಟು** ಬೆಂಗಳೂರು
ಮಾಸ ೨೪x೨೪ ಪು.೨೪

ಕಾನೂನು ೧೯೦೮ . .

ಸಂ. ಎಂ ಮಲ್ಲಾರಾಧ್ಯ.
**೮೫೫**

**ಲಾವಣ್ಯ** ಬೆಂಗಳೂರು
ಮಾಸ ೨೧x೧೪ ಪು.೧೪

ಚಲನಚಿತ ೧೯೭೨-೭೫ . .

ಸಂ. ಶ್ರೀಕೃಷ್ಣ
ಪ್ರ. ಮ. ನ. ರಾಮನರಸಯ್ಯ.
ಮು. ತ್ರಿವೇಣಿ ಮುದಣಾಲಯ.
**೮೫೬**

**ಲಿಂಗಾಯತ** ಬೆಳಗಾವಿ
ಮಾಸ ೨೪x೧೮ ಪು.೨೪

ವೀರಶೈವ ೧೯೪೨ . .

ಪ್ರ. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸಾಹಿತ್ಯ ಸಮಿತಿಯ ಪತ್ರಿಕೆ.
**೮೫೭**

**ಲೇಖಕ** ಬೆಂಗಳೂರು
ಮಾಸ ೨೪x೧೮ ಪು.೨೦

ಸಾಹಿತ್ಯ ೧೯೫೩ . .

ಸಂ. ಎಸ್ ಬಾಲೂರಾವ್
ಪ್ರ. ಅಖಿಲ ಕರ್ನಾಟಕ ಲೇಖಕ ಸಂಘ ರತನ್ ಮಹಲ್.
ಮು. ಚಿತ ಪಿಂಟರಿ.
ಹೆ.ಮಾ. ಕ. ವೆಂ. ರಾಜಗೋಪಾಲ, ಬಿ. ಎಚ್. ಶೀಧರ, ವೀ.ಸೀ., ಬಾಲೂರಾವ್, ಗೋವಿಂದ ಪೈ ಮುಂತಾದವರು ಲೇಖನಗಳು ಪಕಟವಾಗಿವೆ.
**೮೫೮**

**ಲೋಕದರ್ಶನ** ಬೆಳಗಾವಿ,ಬಳ್ಳಾರಿ(ಹೊಸಪೇಟೆ)
ದಿನ ೫೬x೪೨ ಪು.೪

ಸುದ್ದಿ/ಜಾಗತಿಕ ೧೯೬೨-೭೬ . .

ಸಂ. ಎಂ. ಬಿ. ದೇಸಾಯಿ
ಪ. ದರ್ಶನ ಎಜ್ಯುಕೇಶನ್ ಸರ್ವಿಸಸ್ ಮತ್ತು ಅಲ್ಲಾಡ್ ಇಂಡಸ್ಟ್ರೀಸ್.
ಮು. ದರ್ಶನ ಪಿಂಟಿಂಗ್ ಪೆಸ್.
ಹೆ.ಮಾ. ಹೊಸಪೇಟೆ, ರಾಯಚೂರು, ಬೀದರಗಳಲ್ಲೂ ಪಕಟವಾಗುತ್ತಿತ್ತು.
**೮೫೯**

**ಲೋಕಪಾವನ** ಮಡಿಕೇರಿ
ವಾರ ? ?

ಸುದಿ/ಸಮ್ಮಿಶ್ರ ೧೯೨೫-೬೨ . .

ಸಂ. ಬಲ್ಲಚಂಡ ಬೆಳ್ಳಪ
ಮಾಲಕ: ಪಾಂಡಂಡ ನಂಜಪ್ಪ
ಪ. ಬಿ. ಎ. ಬೆಳ್ಳಪ
ಮು. ಶ್ರೀ ಕಾವೇರಿ ಪೆಸ್, ಮಡಿಕೇರಿ
ಹೆ.ಮಾ. ಸ್ವಾತಂತ್ರ್ಯ ಪೂರ್ವದ ಕೊಡಗಿನ ಪತ್ರಿಕೆಗಳಲ್ಲಿ ಕಾಂಗೆಸ್, ಧೋರಣೆಗಳಿಗೆ ವಿರೋಧಿ ಪತ್ರಿಕೆ ಎಂದು ಹೆಸರಾಗಿತ್ತು. ೧೯೫೨ರಲ್ಲಿ ಕಾಂಗೆಸ್ ಆಡಳಿತ ವಹಿಸಿಕೊಂಡ ಸಂದರ್ಭದಲ್ಲಿ ಮಕ್ಕಿ ಸುಬ್ಬಾಯರು "ಜನ್ಮಭೂಮಿ" ಎಂಬ ಹೆಸರಿನಿಂದ ಇದನ್ನು ನಡೆಸಿಕೊಂಡು ಹೋದರು. ೧೯೬೧ ಜನವರಿಯಲ್ಲಿ ಕೋಟೇರ ಸೋಮಣ್ಣ ವಹಿಸಿಕೊಂಡು ೧೯೬೨ರ ಡಿಸೆಂಬರ ವರೆಗೆ ನಡೆಸಿದರು.
**೮೬೦**

**ಲೋಕಬಂಧು** ಧಾರವಾಡ
ವಾರ ೩೭x೨೫ ಪು.೮

ಸುದಿ/ಸಮ್ಮಿಶ್ರ ೧೮೮೦-೧೯೨೪ . .

ಸಂ. ಗುರುರಾವ ರಾಘವೇಂದ್ರ ಮಮದಾಪೂರ.
ಮು. ಪಸಾದ ರಾಘವ ಪೆಸ್, ಧಾರವಾಡ.
ಹೆ.ಮಾ. ಸಂಪಾದಕರು ಪಸಿದ್ಧ ನಾಟಕಕಾರ ಹಾಗೂ ಗಂಧೋದ್ಯಮಿಯಾಗಿದ್ದರು.
**೮೬೧**

**ಲೋಕಮತ** ಹುಬ್ಬಳ್ಳಿ
ಮಾಸ,ವಾರ,ದಿನ ? ?

ಸುದ್ದಿ ೧೯೨೪-೪೭ . .

ಸಂ.ಪ. ವಿ. ಬಿ. ಪುರಾಣಿಕ, ರಾವ್ ಸಾಹೇಬ ಅನಂತರಾಯರು.
ಮು. ಲೋಕಮತ ಪೆಸ್.
ಹೆ.ಮಾ. ಸಂಪಾದಕರಾದ ಅನಂತರಾಯರು "ಕರ್ನಾಟಕ ಕೇಸರಿ"ಯ ಸಂಪಾದಕರೂ ಆಗಿದ್ದರು.
**೮೬೨**

**ಲೋಕಮಿತ್ರ** ಹಾವೇರಿ
ವಾರ,ಪಕ್ಷ ೩೮x೨೫ ಪು.೮
ಸುದ್ದಿ/ಸಮ್ಮಿಶ್ರ ೧೯೦೦-೧೯೫೦
ಸಂ. ದೇವನಗೋಡ ಪಾಟೀಲ
ಪ್ರ. ಆರ್. ಎ. ಹಿರೇಮಠ.
ಮು. ಚಂದ್ರೋದಯ ಮುದ್ರಣಾಲಯ, ಧಾರವಾಡ.
ಹೆ.ಮಾ. ಹಿಂದುಳಿದ ವರ್ಗದ ಒಳಿತಿಗಾಗಿ ಕೆಲಸ ಮಾಡಿತು.
೮೬೩

**ಲೋಕರಹಸ್ಯ** ವೀರರಾಜೇಂದಪೇಟೆ
ಮಾಸ ೨೦x೧೬ ಪು.೭೦
ಸಮ್ಮಿಶ್ರ ೧೯೨೫-೩೩ . .
ಸಂ.ಪ್ರ. ಕೆ. ನಾರಾಯಣರಾಯರು.
ಮು. ಜಿ. ಎಚ್. ಹೌಸ್, ವೀರರಾಜೇಂದಪೇಟೆ.
ಹೆ.ಮಾ. ವರ್ಷಕ್ಕೆ ಸುಮಾರು ೫೦೦ ಪುಟಗಳ ಸಾಹಿತ್ಯ ಪೂರೈಸುವ ಉದ್ದೇಶವನ್ನು ಇರಿಸಿಕೊಂಡಿತ್ತು. ವಿವಿಧ ವಿಷಯಗಳನ್ನು ಹೊಂದಿದ ಕೊಡಗು ರಾಜ್ಯದಲ್ಲಿ ಹೆಸರಾದ ಮಾಸ ಪತ್ರಿಕೆಯಾಗಿತ್ತು.
೮೬೪

**ಲೋಕರಾಜ್ಯ** ಮುಂಬಯಿ
ವಾರ ೩೭x೨೯ ಪು.೪
ಸುದ್ದಿ/ಪ್ರಾದೇಶಿಕ ೧೯೪೬-೫೫ . .
ಪ್ರ. ಮುಂಬಯಿ ಸರಕಾರದ ಪ್ರಸಿದ್ಧಿ ಶಾಖೆಯ ಪ್ರಕಟನೆ.
೮೬೫

**ಲೋಕವಾಣಿ** ಕೊಪ್ಪಳ
ವಾರ ೩೭x೨೦ ಪು.೮
೧೯೫೫-೬೩
ಸಂ. ವಿಠಲದಾಸ ನಂದಳಿಕೆ.
ಪ್ರ. ವೀರಭದ್ರಪ್ಪ ಶಿರೂರ.
ಮು. ಜನತಾ ಪಿಂಟಿಂಗ್ ಹೌಸ್, ಕೊಪ್ಪಳ, ಬ್ರಹ್ಮಭೂಷಣ ಪ್ರೆಸ್, ರಾಯಚೂರು.
ಧ್ಯೇಯವಾಕ್ಯ: "ಲೋಕವಾಣಿಯೇ ಹೇಮವಾಣಿ".
೮೬೬

**ಲೋಕಶಿಕ್ಷಕ** ಧಾರವಾಡ
ಮಾಸ ೨೪x೧೮ ಪು.೩೬
ಶಿಕ್ಷಣ ೧೮೮೮-೧೯೧೬ . .
ಸಂ. ಬಂಡನಗೌಡ ಸಂಕನಗೌಡ, ವೆಂಕಟರಂಗೋ ಕಟ್ಟಿ.
ಪ್ರ. ಮಿತ್ರ ಸಮಾಜ, ಧಾರವಾಡ.
ಮು. ಸ್ಪೆಮನ್ ಪಿಂಟಿಂಗ್ ಪ್ರೆಸ್.
ಹೆ.ಮಾ. ಶೋಧಕ ಪತ್ರಿಕೆಯನ್ನು (೧೮೭೫-೭೮) ಹೊರಡಿಸಿ ನಿಲ್ಲಿಸಿದ ನಂತರ ವೆಂಕಟರಂಗೋ ಕಟ್ಟಿಯವರು ಇದನ್ನು ಪ್ರಾರಂಭಿಸಿ ೧೮೯೦ರಿಂದ ಆದರ ಪೂರ್ಣ ಹೊಣೆ ಹೊತ್ತರು. ೧೮೯೫ರಿಂದ ಕ.ವಿ.ವ. ಸಂಘಕ್ಕೆ ವಹಿಸಿಕೊಟ್ಟರು. ವೈ. ವಿ. ಜಠಾರರು (ಹಿರಿಯರ ಚರಿತೆ), ಕೃಷ್ಣಾಚಾರ್ಯ ರಾಯಚೂರರು (ವೈದ್ಯಕೀಯ ವಿಚಾರ), ರಾ. ಹ. ದೇಶಪಾಂಡೆ (ಸಂಸಾರ ಕ್ರಮ) ಮುಂತಾದವರು ಲೇಖನಗಳನ್ನು ಪ್ರಕಟಿಸಿದ್ದಾರೆ.
೮೬೭

**ವಂದೇಮಾತರಂ** ಬೆಂಗಳೂರು
ವಾರ ೨೪x೧೮ ಪು.೧೬
ಸುದ್ದಿ ೧೯೫೦ . .
ಸಂ.ಪ್ರ. ಎಂ. ರಾಮಮೂರ್ತಿ
ಮು. ಚಂದ್ರಿಕಾ ಪ್ರಿಂಟಿಂಗ್ ವರ್ಕ್ಸ್.
೮೬೮

**ವದಂತಿ** ಮೈಸೂರು
ಮಾಸ ೧೭x೧೨ ಪು.೧೬
ವಿಷಯ/ವೈಚಾರಿಕ ೧೯೪೬-
ಸಂ.ಪ್ರ. ಎನ್. ಶ್ರೀಕಂಠಯ್ಯ; ಕಲಾಕೂಟ.
ಮು. ಶ್ರೀಕಾಂತ ವಿದ್ಯುನ್ಮುದ್ರಣಾಲಯ, ರಾಮಚಂದ್ರ ಅಗ್ರಹಾರ.
ಹೆ.ಮಾ. ಪುಟಕ್ಕೊಂದು ಪ್ರಚಲಿತ ಸಮಸ್ಯೆ ಬರೆಹವಿತ್ತು. "ಜೀವಾಳ" ಎಂಬ ದಿನಪತ್ರಿಕೆ ಹೊರಡಿಸುವ ಸೂಚನೆ ಇತ್ತಿದ್ದರು. ಇದಕ್ಕೆ ತೇಜ ಬಹದ್ದೂರ ಸಪ್ರು, ಎಸ್. ರಾಧಾಕೃಷ್ಣನ್‌ರ ಬೆಂಬಲ ಇತ್ತೆಂದು ಪತ್ರಿಕೆ ಹೇಳಿಕೊಂಡಿದೆ. 'ಕೇವಲ ಸರಳ ಹೃದಯವಂತಿಕೆ ಉಳ್ಳವರು ಕಲಾಕೂಟದ ಸದಸ್ಯರಾಗಬಹುದಿತ್ತು.'
೮೬೯

**ವನಸುಮ** ಮಂಡ್ಯ
ವಾರ ೩೬x೨೫ ಪು.೪
ಸುದ್ದಿ ೧೯೭೦ . .
ಸಂ. ಬಿ. ರಾಜಣ್ಣ
ಪ್ರ. ಎ. ರಾಡ್ರಿಗ್ಸ್.
ಮು. ಸುಧಾ ಪವರ ಪ್ರೆಸ್, ಮಂಡ್ಯ.
೮೭೦

**ವರದಿಗಾರ** ಬೆಂಗಳೂರು
ವಾರ ೩೬x೨೫ ಪು.೪
ಸುದ್ದಿ ೧೯೭೦-೭೫ . .
ಸಂ.ಪ. ದೇವಗಿರಿ ಪಾಂಡುರಂಗ
ಮು. ಹೊಯ್ಸಳ ಮುದ್ರಣ, ಬೆಂಗಳೂರು.
೮೭೧

**ವರ್ತಕ ಧುರೀಣ** ಉಡುಪಿ
ಮಾಸ ೨೫x೧೯ ಪು.೨೬
ಉದ್ಯಮ ಅಕ್ಟೋ.೧೯೩೫-೩೬
ಸಂ. ರಾಮಚಂದ್ರ ಶ್ಯಾಮ ಶೆಣೈ
ಪ. ಪಿ. ವೆಂಕಟರಮಣಚಾರ್ಯ
ಮು. ಪ್ರಭಾಕರ ಪ್ರೆಸ್, ತುಳುನಾಡ ಪ್ರೆಸ್, ಉಡುಪಿ.
ಹೆ.ಮಾ. ವಾಣಿಜ್ಯ, ಕೈಗಾರಿಕೆ, ಗೋರಕ್ಷಣೆ ಕೃಷಿ ವಿಷಯಗಳಿಗಾಗಿತ್ತು ಎಂದು ಹೇಳಿಕೊಂಡಿದೆ. ವಿವಿಧ ವ್ಯಾಪಾರಿಗಳ ವಿಳಾಸ ಮಾಹಿತಿ ನೀಡಲಾಗುತ್ತಿತ್ತು.
೮೭೨

**ವರ್ತಮಾನ** ಮೈಸೂರು
ದಿನ ೩೮x೨೫ ಪು.೨
ಸುದ್ದಿ/ಪ್ರಾದೇಶಿಕ ಸ್ಥಾನಿಕ ೧೯೪೭-೭೭
ಸಂ.ಪ್ರ. ಎಂ. ಎನ್. ತಿಮ್ಮಯ್ಯ
ಮು. ಗೀತಾ ಮುದ್ರಣಾಲಯ. ಮೈಸೂರು.
೮೭೩

**ವಸಂತ** ಕುಂದಾಪುರ,ಮಂಗಳೂರು
ಮಾಸ, ಪಕ್ಷ ೧೮x೧೨ ಪು.೪೮
ಸಾಹಿತ್ಯ/ಸಮ್ಮಿಶ್ರ ೧೯೩೮-೨೬
ಸಂ.ಪ. ಕೆ. ಶಿವರಾಮ ಕಾರಂತ
ಮು. ಧರ್ಮಪ್ರಕಾಶ ಮುದ್ರಣಾಲಯ, ಮಂಗಳೂರು, ಜಿ. ಗಣಪಯ್ಯ ನಾಯಕ, ದಿವಾಕರ ಛಾಪಖಾನೆ.
ಹೆ.ಮಾ. ಪತ್ರಿಕೆಯ ಕುರಿತಾದ ನೀರಸತೆಯಿಂದ ರೋಸಿ ಕಾರಂತರು ದೇವಣ್ಣ ಪೈಗಳು ಸಹಾಯದಿಂದ ವಸಂತ ಮಾಸಿಕ ಪ್ರಾರಂಭಿಸಿದರು. ಗೌರವ ಸಂಪಾದಕರಾದ ಆನಂದ ಭಂಡಾರಿ ಸಾಲ ಮಾಡಿದರೂ ಪತ್ರಿಕೆ ನಡೆಸುವ ಧೈರ್ಯ ಮಾಡಿದರು. ಸುಮನಮಾಲಾ ಶೀರ್ಷಿಕೆಯಡಿ-ಗೋವಿಂದ ಪೈ ಕುವೆಂಪುರವರ ಬರೆಹ ತರಿಸಿದರು. ಎರಡನೇ ವರ್ಷ ಚಂದಾದಾರರ ಕೊರತೆಯಿಂದ ಪತ್ರಿಕೆ ಮುಚ್ಚಿತು. ೧೯೨೭ರಲ್ಲಿ ಬೆಂಗಳೂರಿನಲ್ಲಿ ನೆಲೆಸಿದ ಕಾರಂತರು ಪಾಕ್ಷಿಕವಾಗಿ ಮಾಡಿ ನಡೆಸಿ ಕೆಲ ಕಾಲದ ನಂತರ ಮಾಸಪತ್ರಿಕೆಯನ್ನಾಗಿಸಿದರು. ಮುದ್ರಣ ವಿನ್ಯಾಸ, ಕೈಗಾರಿಕೆ, ಬೇಸಾಯ ಮುಂತಾದ ಸಕಲ ವಿಷಯಗಳನ್ನು ಒಳಗೊಂಡಿತ್ತು. ಇಡೀ ವರುಷದಲಿ ಕೊಡಬಹುದಾದ ವಿಷಯಸೂಚಿಯನ್ನು ಮೊದಲೇ ನೀಡುತ್ತಿದ್ದು. ಆರ್ಥಿಕ ದುಃಸ್ಥಿತಿಯು ಪತ್ರಿಕೆ ನಿಲ್ಲಲು ಕಾರಣವಾಯಿತು.
೮೭೪

**ವಸಂತ** ಗದಗ
ಮಾಸ ೩೨x೧೮ ?
ಸಾಹಿತ್ಯ/ಸಮ್ಮಿಶ್ರ ೧೯೩೮ . .
ಸಂ. ಎನ್. ಕೆ. ಕುಲಕರ್ಣಿ
ಪ. ಕರ್ನಾಟಕ ಕಮರ್ಶಿಯಲ್ ಹೌಸ್.
೮೭೫

**ವಸಂತ** ಮೈಸೂರು
ಮಾಸ ? ?
ಸಾಹಿತ್ಯ/ಸಮ್ಮಿಶ್ರ ೧೯೪೭ . .
ಸಂ.ಪ. ತ. ಸು. ಶ್ಯಾಮರಾವ್.
೮೭೬

**ವಸಂತ** ಧಾರವಾಡ
ಮಾಸ ೩೨x೧೮ ಪು.೩೪
ಸಾಹಿತ್ಯ/ಸಮ್ಮಿಶ್ರ ೧೯೫೨ . .
ಸಂ.ಪ. ಮಾರ್ಪಳ್ಳಿ ರಾಮಕೃಷ್ಣ ಭಟ್.
ಮು. ಉದಯ ಪ್ರಿಂಟಿಂಗ್ ಪ್ರೆಸ್, ಧಾರವಾಡ.
೮೭೭

**ವಸಂತ** ಬೆಂಗಳೂರು
ಮಾಸ ? ?
ಸಾಹಿತ್ಯ/ಸಮ್ಮಿಶ್ರ ೧೯೬೧ . .
ಪ. [illegible]ಂತ ಕಾರ್ಯಾಲಯ, ಬೆಂಗಳೂರು.
೮೭೮

**ವ್ಯವಸಾಯ ದರ್ಪಣ** ಮೈಸೂರು
ಮಾಸ ೨೧x೧೩ ಪು.೨೦
ಕೃಷಿ ೧೯೦೯ . .
ಪ. ವ್ಯವಸಾಯ ದರ್ಪಣ ಕಾರ್ಯಾಲಯ, ಮೈಸೂರು.
೮೭೯

**ವ್ಯವಸಾಯೋತ್ಪನ್ನಗಳ ವಾಣಿಜ್ಯ ವಾರ್ತೆ** ಬೆಂಗಳೂರು
ಮಾಸ ೨೫. ೧/೨x೧೮ ಪು.೪೦
ಉದ್ಯಮ ೧೯೫೯-೬೯ . .
ಪ. ಮುಖ್ಯ ಮಾರ್ಕೆಟಿಂಗ್ ಅಧಿಕಾರಿ.
ಮು. ವಿಜಯಾನಂದ ಪವರ ಪ್ರೆಸ್, ಬೆಂಗಳೂರು.
೮೮೦

**ವಾಗ್ಭೂಷಣ** ಧಾರವಾಡ
ಮಾಸ ೨೧x೧೪ ಪು.೩ ೨,೬೪

ಸಾಹಿತ್ಯ ೧೮೯೭-೧೯೭೩ . .

ಸಾ. ರಾ. ಹ. ದೇಶಪಾಂಡೆ
ಸಂ. ಆಲೂರ ವೆಂಕಟರಾಯರು, ಬೆನಗಲ್ ರಾಮರಾಯರು, ಮುಂತಾದವರು.
ಪ. ಕರ್ನಾಟಕ ವಿದ್ಯಾವರ್ಧಕ ಸಂಘ.
ಮು. ಮಹಾವೀರ ಮುದಣಾಲಯ, ಬೆಳಗಾವಿ.
ಹೆ.ಮಾ. ತಿ. ತಾ. ಶರ್ಮ, ಸಿದ್ದವನಹಳ್ಳಿ ಕೃಷ್ಣ ಶರ್ಮ, ವಿ. ಬಿ. ಜೋಶಿ, ನಾರಾಯಣ ರಾಘವೇಂದ್ರ ದೇಶಪಾಂಡೆ ಮುಂತಾದವರೆಲ್ಲ ಸಂಪಾದಕರಾಗಿದ್ದರು. ಮುಂಬಯಿ, ಕರ್ನಾಟಕದ ಆ ಕಾಲದ ಏಕಮಾತ್ರ ಮಾಸಿಕ. ನಾರಾಯಣ ಮತ್ತು ಕರಿಗುದರಿಯವರ ಧನಸಹಾಯದಿಂದ ನಡೆಯಿತು. ವೆಂ. ರಂಗೋಕಟ್ಟಿ ಕೂಡ ಲೇಖಕರೇ. ವಿವಿಧ ಗ್ರಂಥಾವಳಿಯ ಭಾಗ, ಸ್ವತಂತ್ರ ವೈಚಾರಿಕ ಬರೆಹಗಳಿದ್ದವು. ಕರ್ನಾಟಕದಲ್ಲಿ ಕನ್ನಡನಾಡು, ಭಾಷೆ ಕುರಿತಾದ ಜಾಗೃತಿಗೆ ಉತ್ತಮ ಕಾರಣವಾಯಿತು. ೧೯೨೩ರಲ್ಲಿ ವಾರ್ಷಿಕ ಸಂಚಿಕೆ ಪ್ರಕಟಿತ. ಶ್ರೀರಂಗರು ಕೆಲಕಾಲ ಸಂಘದ ಅಧ್ಯಕ್ಷ ಹಾಗೂ ಪತ್ರಿಕೆಯ ಸಂಪಾದಕರಾಗಿದ್ದರು.
೮೮೧

**ವಾಗ್ದೇವಿ** ಧಾರವಾಡ
ಮಾಸ ೨೧x೧೪ ಪು.೬೦

ಸಾಹಿತ್ಯ/ಸಮ್ಮಿಶ್ರ ೧೯೦೫ . .

ಸಂ. ಗದಿಗೆಯ್ಯಾ ಹುಚ್ಚಯ್ಯ ವಿಭೂತಿ, ಹೊನ್ನಾಪೂರಮಠ
ಪ್ರ. ವಾಗ್ದೇವಿ ಕಾರ್ಯಾಲಯ, ಧಾರವಾಡ.
೮೮೨

**ವಾಣಿ** ಬೆಂಗಳೂರೂ
ಮಾಸ ೨೦x೧೩, ೨೧x೧೪ ಪು.೫೪

ಸಾಹಿತ್ಯ/ಸಮ್ಮಿಶ್ರ ಜನ.೧೯೪೩-೪೭ . .

ಸಂ. ಬೆಂ. ಶ್ರೀ. ಪಾಂಡುರಂಗರಾವ್, ಸಿ. ಕೆ. ನಾಗರಾಜರಾವ್.
ಪ. ವಿ. ಬಿ. ಬಳ್ಳಾರಿ, ಬೆಂಗಳೂರು
ಮು. ಲಲಿತಾ ಪ್ರಿಂಟಿಂಗ್ ವರ್ಕ್ಸ್, ಸ್ವತಂತ್ರ ಕರ್ನಾಟಕ ಪ್ರೆಸ್.
೮೮೩

**ವಾಣೀ** ಉಡುಪಿ
ಮಾಸ ೨೧x೧೩ ೧/೨ ಪು.೨೦

ಸಾಹಿತ್ಯ/ಸಮ್ಮಿಶ್ರ ೧೯೬೭ . .

ಸಂ. ಕೆ. ಹರಿದಾಸ ಉಪಾಧ್ಯಾಯ
ಪ. ವಾಣೀ ಪ್ರಕಾಶನ, ಕ್ರೋಧಾಶ್ರಮ.
ಮು. ನ್ಯಾಶನಲ್ ಪ್ರಿಂಟರ್ಸ್.
೮೮೪

**ವಾಣಿಜ್ಯ ಪ್ರಬೋಧಿನೀ** ಹರಪನಹಳ್ಳಿ
ಮಾಸ ೨೧x೧೪ ಪು.೨೦

ಉದ್ಯಮ . ೧೯೧೮ . .

ಸಂ. ಹೊಳೆ ಬಸವಶಾಸ್ತ್ರಿ
೮೮೫

**ವಾರ್ತಾ** ಬೆಂಗಳೂರು
ದಿನ ೪೪x೨೯ ಪು.೪

ಸುದ್ದಿ ೧೯೪೨-೪೩ . .

ಸಂ. ವೀರಣ್ಣಗೌಡ.
ಪ್ರ. ಎಂ. ರಾಮಮೂರ್ತಿ.
ಮು. ಶ್ರೀನಿವಾಸ ಪ್ರೆಸ್, ಬೆಂಗಳೂರು.
೮೮೬

**ವಾರ್ತಾಪತ್ರ** ಘಟಪ್ರಭಾ
ಮಾಸ ೩೪x೨೨ ಪು.೨೦

ಆರೋಗ್ಯ ೧೯೬೩-೮೪ . .

ಪ್ರ. ಕರ್ನಾಟಕ ಆರೋಗ್ಯಧಾಮದ ಮುಖ್ಯಾಧಿಕಾರಿ, ಘಟಪ್ರಭಾ.
೮೮೭

**ವಾರ್ತಾಪತ್ರಿಕೆ** ಹುಬ್ಬಳ್ಳಿ
ದಿನ(?) ? ?

ಸುದ್ದಿ ೧೯೪೭ . .

ಸಂ. ನಂದೇಶ್ವರ ಗೋವಿಂದರಾವ್
ಪ. ವಾರ್ತಾ ಪ್ರಸಾರಕ ಸಂಘ, ಹುಬ್ಬಳ್ಳಿ.
ಮು. ಕರ್ಮವೀರ ಮುದಣಾಲಯ, ಧಾರವಾಡ.
೮೮೮

**ವಾರ್ತಾಲೋಕ** ಮಂಗಳೂರು
ದಿನ ೩೭.೨.೫೫ ಪು.೨
ಸುದ್ದಿ ೧೯೬೩ . .
ಸಂ. ಪಿ. ಗೋಪಾಲಕೃಷ್ಣ
ಪ. ಕೆ. ರಾಮಚಂದರಾವ್, ವಿಜಯ ಪ್ರಿಂಟರ್ಸ್ ಮತ್ತು ಪ್ರಕಾಶಕರು.
೮೮೯

**ವಾರ್ತಾವಾಣಿ** ಮಂಗಳೂರು
ದಿನ ೩೮x೨೬ ಪು.೨
ಸುದ್ದಿ/ಪ್ರಾದೇಶಿಕ ೧೯೬೭ . .
ಸಂ. ಎಂ. ವಸುಕುಮಾರ
ಮು. ರಾಜಾ ಪ್ರಿಂಟಿಂಗ್ ಪ್ರೆಸ್, ಮಂಗಳೂರು.
೮೯೦

**ವಾರ್ತಾವಿಚಾರ** ಬೆಳಗಾವಿ
ವಾರ ೩೭x೨೬ ಪು.೪
ಸುದ್ದಿ/ಸಮ್ಮಿಶ್ರ ೧೯೭೦-೭೧ . .
ಸಂ.ಪ. ಶ್ರೀಮತಿ ಸುವರ್ಣ ಭಿವಾರಿ
ಮು. ಭುವನೇಶ್ವರಿ ಮುದ್ರಣಾಲಯ, ಬೆಳಗಾಂವಿ.
೮೯೧

**ವಾಸವಿ** ಗದಗ-ಬೆಟಗೇರಿ
ಮಾಸ ೨೪x೧೮, ೧೯x೧೩ ಪು.೨, ೧೦೦
ಸಾಹಿತ್ಯ/ಸಮ್ಮಿಶ್ರ ಏ.೧೯೭೨-೭೯ . .
ಸಂ. ಎಸ್. ಎಚ್. ಶಿರಹಟ್ಟಿ
ಸಹ ಸಂ. ಜಗನ್ನಾಥ ಸಿಂಗ್
ಪ. ವಾಸವಿ ಪ್ರಕಾಶನ; ಇಕೋ ಎಡ್ವರಟೈಸಿಂಗ್ ಬ್ಯೂರೋ
ಮು. ಶಾರದಾ ಪ್ರೆಸ್, ಗದಗ; ಆದರ್ಶ ಪ್ರಿಂಟರಿ, ಹುಬ್ಬಳ್ಳಿ.
೮೯೨

**ವಾಹಿನಿ** ಬೆಂಗಳೂರು
ವಾರ,ಮಾಸ ೩೮.೨೫ ಪು.೧೨
ಸುದ್ದಿ ೧೯೪೬-೪೭ . .
ಸಂ. ತ. ರಾ. ಸುಬ್ಬರಾವ್.
ಪ. ಎಂ. ಎಸ್. ಚಿಂತಾಮಣಿ.
ಮು. ಈಸ್ಟರ್ನ್ ಪ್ರೆಸ್; ವಾಹಿನಿ ಮುದ್ರಣ.
೮೯೩

**ವಿಕಾಸ** ಶಿರಾಳಕೊಪ್ಪ
ಮಾಸ ೩೩x೨೧, ೩೭.೨೫ ಪು.೧೦
ಗ್ರಾಮಾಭಿವೃದ್ಧಿ ೧೯೫೩-೫೭
ಸಂ. ಕೆ. ಆರ್. ಲಿಂಗಪ್ಪ
ಪ. ಪ್ರಾಜೆಕ್ಟ್ ಎಕ್ಸಿಕ್ಯೂಟಿವ್ ಆಫೀಸರ, ರೂರಲ್ ಕಮ್ಯುನಿಟಿ ಪ್ರಾಜೆಕ್ಟ್.
ಮು. ಭಾರತಿ ಪ್ರಿಂಟಿಂಗ್ ಪ್ರೆಸ್, ಶಿಕಾರಿಪುರ.
ಹೆ.ಮಾ. ಸೊರಬ, ಶಿಕಾರಿಪುರ, ಸಾಗರ ಪ್ರದೇಶಗಳ ಸಾಮೂಹಿಕ ಯೋಜನಾ ವಾರ್ತಾಪತ್ರಿಕೆಯಾಗಿತ್ತು.
೮೯೪

**ವಿಕಾಸ** ಉಡುಪಿ
ವಾರ ೩೭x೨೫ ಪು.೬-೮
ಸುದ್ದಿ/ಸಮ್ಮಿಶ್ರ ೧೯೬೩-೭೧-
ಸಂ. ಯು ವ್ಯಾಸರಾವ್
ಪ. ಪ್ರತಿಮಾ ಪ್ರಕಾಶನ.
ಮು. ಮೆಜೆಸ್ಟಿಕ್ ಪ್ರೆಸ್, ಕಲ್ಯಾಣಪುರ, ಉಡುಪಿ, ಜಯಭಾರತಿ ಪ್ರೆಸ್, ಮಂಗಳೂರು.
೮೯೫

**ವಿಕಾಸವಾಣಿ** ಮಂಗಳೂರು
ಮಾಸ ೨೪x೧೮ ಪು.೩೨
ಜಿಲ್ಲಾಭಿವೃದ್ಧಿ ನ.೧೯೫೪-
ಸಂ. ಕೆ. ಎಲ್. ಸೂರ್ಯನಾರಾಯಣ
ಪ. ದ. ಕ. ಜಿಲ್ಲಾ ಸಮಾಜ ವಿಕಾಸ ಯೋಜನಾ ಕಾರ್ಯಾಲಯ, ಬಂದರು, ಮಂಗಳೂರು.
ಮು. ಕಾಳೂರಕರ - ಯುನಿವರ್ಸಲ್ ಪ್ರಿಂಟರ್ಸ್
ಹೆ.ಮಾ. ಆಂತರಿಕ ಪ್ರಸಾರಕ್ಕೆ ಮಾತ್ರವಾಗಿತ್ತು.
೮೯೬

**ವಿಕಾಸವಾಣಿ** ಶಿವಮೊಗ್ಗ
ತ್ರೈಮಾಸ ೨೪x೧೮ ಪು.೪೪
ಜಿಲ್ಲಾಭಿವೃದ್ಧಿ ಆಗ.೧೯೬೩-
ಸಂ. ಜಿ. ಕೆ. ಚೆನ್ನಬಸಪ್ಪ
ಪ. ಕಾರ್ಯದರ್ಶಿ ಜಿಲ್ಲಾಭಿವೃದ್ಧಿ ಸಮಿತಿ ಕಾರ್ಯಾಲಯ, ಶಿವಮೊಗ್ಗ.
ಮು. ವಿಜಯಾನಂದ ಪ್ರೆಸ್, ಶಿವಮೊಗ್ಗ.
ಹೆ.ಮಾ. ಸಂಪಾದಕ ಸಮಿತಿಯಲ್ಲಿ ಎಚ್. ಎಲ್. ನಾಗೇಗೌಡ, ಎಂ. ಬದರಿನಾರಾಯಣಯ್ಯಂಗಾರ್, ಎನ್. ಹುಚ್ಚಪ್ಪ ಮುಂತಾದವರಿದ್ದರು. ಮಾಸಪತ್ರಿಕೆಯಾಗಿ ಹೊರಡಿಸುವ ಯೋಚನೆಯಿದ್ದರೂ ತ್ರೈಮಾಸಿಕವಾಗಿ ಹೊರಟಿತು.
೮೯೭

**ವಿಕ್ರಾಂತ ಭಾರತ** ಜಮಖಂಡಿ
ವಾರ ೩೮x೨೫ ೧/೨ ಪು.೪, ೬

ಸುದ್ದಿ/ಸಮ್ಮಿಶ್ರ ೧೯೬೮-೭೫ . .

ಸಂ. ಎಂ. ಸಿ. ಗೊಂದಿ
ಸಹ ಸಂ. ಬಿ. ಎ. ಹಂದಿಗೊಂದ
ಪ. ವಿಕ್ರಾಂತ ಭಾರತ ಕಾರಾಲಯ, ಜಮಖಂಡಿ, ವಿಜಾಪುರ.
ಮು. ಆರ್. ಪಿ. ಜೆ.
ಧ್ಯೇಯವಾಕ್ಯ: "ಜಯ್ ಜವಾನ ಜಯ್ ಕಿಸಾನ, ಸತ್ಯವೇ ಧರ್ಮ, ಕಾಯಕವೇ ಕೈಲಾಸ".

ವಿಜಾಪುರ-ಜಮಖಂಡಿಗಳಿಂದ ಏಕಕಾಲಕ್ಕೆ ಪ್ರಕಾಶಿತ.

**೮೯೮**

**ವಿಚಾರ ಗುಚ್ಛ** ಮೇಲುಕೋಟೆ
ಮಾಸ ೨೫x೧೮ ಪು.೧೬
ಸಾಹಿತ್ಯ/ಸಮ್ಮಿಶ್ರ ೧೯೭೨-೭೮
ಸಂ. ಎಸ್. ಪಟ್ಟಾಭಿರಾಮನ್, ಸುರೇಂದ್ರ ಕೌಲಗಿ.
ಪ. ಜನಪದ ಸೇವಾ ಟ್ರಸ್ಟ್.
ಮು. ಜನಪದ ಸೇವಾ ಮುದ್ರಣಾಲಯ.
ಹೆ.ಮಾ. ಇದೇ ಪತ್ರಿಕೆ ೧೫-೭-೧೯೭೮ರಿಂದ "ಜನಪದ ವಿಚಾರ"ವಾಗಿ ಬದಲಾಯಿತು.

**೮೯೯**

**ವಿಚಾರ ತರಂಗಿಣೀ** ಬಿರೂರು
ಮಾಸ ? ?

ಸಾಹಿತ್ಯ ೧೯೨೯ . .

ಸಂ.ಪ್ರ. ಟಿ. ಚಿದಂಬರ ಪಂಡಿತ.
ಹೆ.ಮಾ. ಮೇ ೧೯೨೮ರಿಂದ ಹೊರಟ "ಕಥಾ ಸರಿತ್ಸಾಗರ" ಮಾಸಿಕ ಜೂನ್ ೧೯೨೯ರ ನಂತರ "ವಿಚಾರ ತರಂಗಿಣೀ" ಎಂದು ಬದಲಾಯಿತು. (ಕಥಾ ಸರಿತ್ಸಾಗರದ ೧೩ ಸಂಚಿಕೆಗಳು ಮಾತ್ರ ಹೊರಟವು) ಆರೋಗ್ಯ, ಲೋಕಹಿತ ವಿಚಾರ ನೀಡುವುದು, ವಿಚಾರ ತರಂಗಿಣಿಯ ಉದ್ದೇಶ.

**೯೦೦**

**ವಿಚಾರಪ್ರಭ** ಬೆಂಗಳೂರು
ವಾರ ೩೬x೨೫ ಪು.೨

ಸುದ್ದಿ ೧೯೭೨ . .

ಸಂ. ಎಸ್. ನಾಗೇಂದ
ಪ.ಮು. ಪಭಾ ಮುದಣ, ಬೆಂಗಳೂರು.

**೯೦೧**

**ವಿಚಾರವಾಣಿ** ಪುತ್ತೂರು, ಮಂಗಳೂರು
ವಾರ ೩೪x೨೫, ೨೫x೧೯ ಪು.೧೬

ಸುದ್ದಿ/ಸಮ್ಮಿಶ್ರ ೧೯೫೦ . . ೧೯೬೨

ಸ್ಥಾ. ಕೋಟ ರಾಮಕೃಷ್ಣ ಕಾರಂತ
ಸಂ. ಶಿವರಾಮ ಕಾರಂತ, ಎಸ್. ಎಂ. ರಾಮಕೃಷ್ಣ ರಾವ್, ಎಂ. ಜನಾರ್ದನ ಮತ್ತು ಎಂ. ಬಿ. ಮರಕಿಣಿ.
ಪ. ಪ್ರಜಾ ಸೋಶಿಯಲಿಸ್ಟ್ ಪಕ್ಷದ ಅನಧಿಕೃತ ಪ್ರಕಟನೆ. ಶ್ರೀನಿವಾಸ ಉಪಾಧ್ಯಾಯರಿಂದ.
ಮು. ಪುತ್ತೂರು, ಮಂಗಳೂರಿನ ಹಲವು ಮುದ್ರಣಾಲಯಗಳಲ್ಲಿ
ಹೆ.ಮಾ. ದ. ಕ. ಜಿಲ್ಲೆಯ ರಾಜಕೀಯ ಪ್ರಜ್ಞೆಯ ವಾರಪತ್ರಿಕೆ. ಮುಳಿಯ ತಿಮ್ಮಪ್ಪಯ್ಯ, ಕಯ್ಯಾರ ಕಿಞ್ಞಣ್ಣ ರೈ, ಕೆ. ವಿ. ತಿರುಮಲೇಶ ಮುಂ. ಲೇಖನಗಳು ಪಕಟವಾಗಿವೆ.

ಪುತ್ತೂರಿನಲ್ಲಿ ಆರಂಭವಾದ ಪತ್ರಿಕೆ ಮೂರು ವರ್ಷಗಳಾದ ಮೇಲೆ ಮಂಗಳೂರಿಗೆ ಸ್ಥಳಾಂತರಗೊಂಡಿತು. ಕೆ. ಶ್ರೀನಿವಾಸ ಉಡುಪರ ಉದಯ ಪ್ರಿಂಟರಿಯಲ್ಲಿ. ಆದರೆ ಪ್ರಕಟನೆ ಕೆಲ ವರ್ಷ ಸ್ಥಗಿತಗೊಂಡಾಗ ಶಿವರಾಮ ಕಾರಂತರಿಂದಾಗಿ ಮರಳಿ ಪುತ್ತೂರಿಗೆ ಬಂತು. ಆಗಿ ಸಂಪಾದಕರು ಎಂ. ಬಿ. ಮರಕಿಣಿ,

ಅನಂತರದವರು ಶಂ. ಪಾ. ದೈತೋಟರು ೧೯೬೨ರ ಸುಮಾರಿಗೆ ಮೈಸೂರಿಗೆ ಸ್ಥಳಾಂತರಿಸ ಬೇಕೆಂದುಕೊಂಡಾಗ ಪತ್ರಿಕೆ ನಿಂತುಬಿಟ್ಟಿತು.

**೯೦೨**

**ವಿಚಾರವಾಹಿನಿ** ತೀರ್ಥಹಳ್ಳಿ,ಚಾಮರಾಜಪುರಂ
ಮಾಸ ೨೪x೧೬ ಪು.೫೬

ಸಾಹಿತ್ಯ/ಸಮ್ಮಿಶ್ರ ೧೯೩೯-೪೨ . .

ಸಂ.ಪ. ಕೂಡಲಿ ಚಿದಂಬರಂ
ಮು. ಪಿ. ವೆಂಕಟರಮಣಾಚಾರ್ಯ, ಮಣಿಪಾಲ ಪವರ ಪೆಸ್, ಉಡುಪಿ.
ಹೆ.ಮಾ. ೧೯೪೧ರಲ್ಲಿ ಕೆ ವಿ. ಪುಟ್ಟಪ್ಪ, ಬಿ. ಎಸ್. ಕೇಶವನ್, ತೀ. ನಂ. ಶ್ರೀ. ಆನಂದ, ಮುಂತಾದವರು ಬರೆಯುತ್ತಿದ್ದರು.

**೯೦೩**

**ವಿಚಿತ್ರ ವರ್ತಮಾನ ಸಂಗ್ರಹ** ಮಂಗಳೂರು
ಪಕ. ೫೨x೩೭ ೧/೨ ಪು.೪
ಸುದ್ದಿ ೧೯೬೨-೬೬
ಸಂ. ಜೆ. ಮಾಕ್
ಪ. ಬಾಂಬೆ ಕೆನರೀಜ್ ವರ್ನ್ಯಾಕುಲರ್ ಸೊಸೈಟಿ.
ಮು. ಮಿಶನ್ ಪ್ರೆಸ್, ಮಂಗಳೂರು.
ಹೆ.ಮಾ. ಕಿಟೆಲ್ಲರೂ ಆ ಪತ್ರಿಕೆಗೆ ಸಂಪಾದಕರಿದರೆಂದು ಹೇಳಲಾಗುತ್ತದೆ. 'ವಿಚಿತ್ರ' ಎಂದರೆ ಸಚಿತ್ರ ಸೊಗಸಾದ ಚಿತ್ರಗಳು ಇರುತ್ತಿದ್ದವು. ಉತ್ಕೃಷ್ಟ ಮುದ್ರಣ. ಆದರಿಂದ ಕನ್ನಡದ ಪ್ರಥಮ ಸುಂದರ ಪತ್ರಿಕೆ ಎನ್ನಬಹುದು. ಪತ್ರಿಕೆಯ ಜೊತೆಗೆ (The canerese messenger) 'ಇಂಡಿಯಾ ಮತ್ತು ಅನ್ಯದೇಶದ ವಾರ್ತಿಕ' ಎಂಬುದೂ ಸೇರ್ಪಡೆಯಾಗಿತ್ತು.
೬೦೪

**ವಿಜಯ** ಧಾರವಾಡ
ದಿನ,ವಾರ ೨೫x೧೭ ೧/೨ ಪು.೪
ಸುದ್ದಿ/ದೇಶಾಭಿಮಾನ ೧೯೧೯ . .
ಸ್ಥಾಸಂ. ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ, ಸತಬೋಧ ರಾಮಚಂದ್ರ ಅಡಬದ್ದಿ.
ಪ.ಮು. ವಿಜಯ ಪ್ರೆಸ್, ಧಾರವಾಡ.
ಹೆ.ಮಾ. ಹೊಸಕೇರಿಯವರು ಸಂಪಾದಕರಾದಾಗ ಅಸಹಕಾರ ಆಂದೋಲನದಲ್ಲಿ ಸೇರಿದರು. ಧಾರವಾಡದ ಗೋಳಿಬಾರ ಪ್ರಕರಣದಲ್ಲಿ ಆರೋಪಿಯನ್ನಾಗಿ ಮಾಡಿ ಒಂದು ವರ್ಷ ಸಜಾ ನೀಡಲಾಯಿತು. ಪತ್ರಿಕೆ ಮುಂದೆ ವಾರಪತ್ರಿಕೆಯಾಗಿ ನಡೆದಂತೆ ಕಾಣುತ್ತದೆ.
೬೦೫

**ವಿಜಯ** ಮೈಸೂರು
ದಿನ ೩೮x೨೪ ಪು.೨
ಸುದ್ದಿ ೧೯೪೭-೭೯ . .
ಸಂ. ಎ. ರಾಮಣ್ಣ
ಸಹ ಸಂ. ಕೆ. ಜಿ. ಕುಮಾರ
ಪ. ಎ. ರಾಮಣ್ಣ
ಮು. ವಿಜಯ ಪ್ರೆಸ್, ಮೈಸೂರು
ಹೆ.ಮಾ. ೧೯೭೯ರ ವೇಳೆ ಪ್ರಸಾರ ಸಂಖ್ಯೆ ೨೦೦೦ ದಾಟಿ ಜನಪ್ರಿಯ ಪತ್ರಿಕೆಯಾಗಿತ್ತು.
೬೦೬

**ವಿಜಯ** ಕಾರ್ಕಳ
ಮಾಸ ೨೪x೧೮ ೧/೨ ಪು.೨೪
ಸಾಹಿತ್ಯ/ಸಂಸ್ಕೃತಿ ಮಾ.೧೯೫೧ . .
ಸಂ. ವಿ. ಧರ್ಮಪಾಲ
ಪ. ವಿಜಯ ಕಾರ್ಯಾಲಯ.
ಮು. ಜಯ ಮುದ್ರಣಾಲಯ, ಮೂಡುಬಿದ್ರೆ.
ಹೆ.ಮಾ. ಉತ್ತಮ ಸಾಹಿತ್ಯದ ಪತ್ರಿಕೆ ಆಗಿದ್ದರೂ ಬಹುಕಾಲ ಬಾಳಲಿಲ್ಲ.
೬೦೭

**ವಿಜಯ** ರಾಯಚೂರು
ಮಾಸ ೨೪x೧೯ ಪು.೩೪
ಸಾಹಿತ್ಯ/ಸಮ್ಮಿಶ್ರ ೧೯೫೪ . .
ಸಂ. ಆರ್. ವೆಂಕಟ ಶೆಟ್ಟಿ
ಪ. ಕರ್ನಾಟಕ ಸಂಘ, ರಾಯಚೂರು.
ಹೆ.ಮಾ. ಆಗಿನ ಹೈದರಾಬಾದ್ ಶಿಕ್ಷಣ ಖಾತೆಯಿಂದ ಶಾಲೆ-ಕಾಲೇಜುಗಳು ತರಿಸಿಕೊಳ್ಳಲು ಆದೇಶವಿತ್ತು.
೬೦೮

**ವಿಜಯಕೇಸರೀ** ಸಾಗರ
ವಾರ ೪೫x೨೭ ಪು.೪
ಸುದ್ದಿ ೧೯೧೪ . .
ಸಂ. ನಡಹಳ್ಳಿ ವೆಂಕಪ್ಪ
ಪ. ವಿಜಯ ಕೇಸರೀ ಆಫೀಸು
ಮು. ಲಕ್ಷ್ಮೀವಿಲಾಸ ಪ್ರಿಂಟಿಂಗ್ ಪ್ರೆಸ್, ನಡಹಳ್ಳಿ, ತಾ. ಸೊರಬ.
ಹೆ.ಮಾ. ಇದೇ ಸಂಪಾದಕರು 'ಆರ್ಯಧರ್ಮ ಪ್ರಕಾಶ', 'ಹನ್ಮಕೋದಯ', 'ಶ್ರೀಮದ್ಧರ್ಮನಿದಾನಂ' ಪತ್ರಿಕೆಗಳನ್ನು ನಡೆಸಿದ್ದರು.
೬೦೯

**ವಿಜಯಕೇಸರೀ** ರಾಯಚೂರು
ಮಾಸ ? ?
ಸುದ್ದಿ/ಸಮ್ಮಿಶ್ರ ೧೯೫೫-೫೭
೬೧೦

**ವಿಜಯಧ್ವಜ** ಬಳ್ಳಾರಿ
ವಾರ ೩೭x೨೫ ಪು.೪
ಸುದ್ದಿ/ಸಮ್ಮಿಶ್ರ ೧೮೮೦-೧೯೩೦
ಹೆ.ಮಾ. ಬ್ರಿಟಿಷ್ ಸರಕಾರದಿಂದ ಬಹಿಷ್ಕೃತ ಹೊಂದಿತ್ತು. ದೇಶಭಕ್ತಿ, ಜನಜಾಗೃತಿಯ ಕಾರ್ಯಗಳನ್ನು ಮಾಡಿದ ಪತ್ರಿಕೆ.
೬೧೧

**ವಿಜಯಮಾಲ** ಬೆಂಗಳೂರು
ಮಾಸ ೧೮x೧೨ ಪು.೪೦
ಸಾಹಿತ್ಯ ೧೯೫೧-೭೧
ಸಂ.ಪ್ರ. ಕೆ. ಪಿ. ಮುತ್ತುಸ್ವಾಮಿ.
ಮು. ವಿಜಯಾ ಪವರ ಪ್ರೆಸ್.
೬೧೨

**ವಿಜಯವಾಣಿ** ಬೆಂಗಳೂರು
ವಾರ ೩೮x೨೫ ಪು.೧೨
ಸುದ್ದಿ/ಪ್ರಾದೇಶಿಕ ೧೯೪೯ . .
ಸಂ.ಪ್ರ. ಡಿ. ಆರ್. ಶಿವಪ್ಪ, ಎಸ್ ದುರ್ಗಪ್ಪ.
೬೧೩

**ವಿಜಯವಾಣಿ** ತುಮಕೂರು
ವಾರ,ದಿನ ೩೭x೨೫ ಪು.೬,೨
ಸುದ್ದಿ ೧೯೫೪-೭೮ . .
ಸಂ.ಪ್ರ. ಎಚ್. ಆರ್. ಗುಂಡೂರಾವ್, ಎಚ್. ಜಿ. ವಿ. ಮೂರ್ತಿ
ಮು. ಶ್ರೀ ರಂಗನಾಥ ಮುದ್ರಣಾಲಯ, ತುಮಕೂರು.
೬೧೪

**ವಿಜ್ಞಾನ** ಬೆಂಗಳೂರು
ಮಾಸ ೧೮ ೧/೨x೧೨ ೧/೨ ಪು.೩೨
ವಿಜ್ಞಾನ ೧೯೧೮-೨೦-
ಸಂ. ಬಿ. ವೆಂಕಟನಾರಣಪ್ಪ, ಎಸ್. ವೆಂಕಟೇಶ ಅಯ್ಯಂಗಾರ್
ಪ್ರ. ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ, ಬೆಂಗಳೂರು.
ಬೆಂಗಳೂರು ಪ್ರೆಸ್.
ಹೆ.ಮಾ. ಕನ್ನಡದ ಪ್ರಥಮ ವೈಜ್ಞಾನಿಕ ಪತ್ರಿಕೆ ವೈಜ್ಞಾನಿಕ ಮನೋಧರ್ಮ ಹುಟ್ಟಿಸಲು ವಿಶ್ವೇಶ್ವರಯ್ಯನವರ ಸಲಹೆಯ ಮೇರೆಗೆ ಕ.ವಿ.ಪ್ರ. ಸಭೆಯ ಸ್ಥಾಪನೆ. ಕೆಲವೇ ಸಂಚಿಕೆ ಪ್ರಕಟಗೊಂಡಿವೆ.

ಬಿ. ವೆಂಕಟನಾರಣಪ್ಪ, ಕೆ. ಭೀಮರಾವ್, ಎಲ್. ಸುಬ್ಬರಾವ್, ಎಂ. ಕೆ. ವೆಂಕಟರಾಯರು ಮುಂತಾದವರ ಲೇಖನಗಳಿದ್ದವು. ೨ನೆ ವರ್ಷ ಕೆ. ಎಸ್. ಕೃಷ್ಣಯ್ಯರ ಬಿ. ಎ. ಅವರ ಐರಿಷ್ ಮುದ್ರಾಲಯದಲ್ಲಿ ಮುದ್ರಣವಾಗುತ್ತಿತ್ತು.
೬೧೫

**ವಿಜ್ಞಾನ II** ಬೆಂಗಳೂರು
ಮಾಸ ೨೪x೧೮ ೧/೨ ಪು.೨೪
ವಿಜ್ಞಾನ ೧೯೫೨-೫೩ . .
ಸಂ. ಬಿ. ಎ. ಸುಬ್ಬರಾಯಪ್ಪ
ಪ್ರ. ಬೆಂಗಳೂರು ಬುಕ್ ಹೌಸ್.
ಮು. ಮೋದಿ ಪವರ ಪ್ರೆಸ್, ಬೆಂಗಳೂರು.
ಹೆ.ಮಾ. ಕೆಲವು ವಿಜ್ಞಾನ ಸಂಶೋಧನಾ ಮಂದಿರಗಳ ಪರಿಚಯ ನೀಡಲಾಗಿದೆ.
೬೧೬

**ವಿಜ್ಞಾನ ಕರ್ನಾಟಕ** ಮೈಸೂರು
ತ್ರೈಮಾಸ ೨೧x೧೪ ೧/೨ ಪು.೧೧೪
ವಿಜ್ಞಾನ ೧೯೬೭ . .
ಸಂ. ಜೆ. ಟಿ. ನಾರಾಯಣರಾವ್, ಇತರರು
ಪ್ರ. ನಿರ್ದೇಶಕರು, ಪ್ರಸಾರಾಂಗ, ಮೈ. ವಿ. ವಿ.
ಮು. ಮೈ. ವಿ. ವಿ. ಮುದ್ರಣಾಲಯ. ಮೈಸೂರು.
೬೧೭

**ವಿಜ್ಞಾನ ಜ್ಯೋತಿಷ** ಬೆಂಗಳೂರು
ಮಾಸ ೨೧x೧೪ ಪು.೫೬
ಜ್ಯೋತಿಷ್ಯ ೧೯೬೫-೬೬ . .
ಸಂ.ಪ್ರ. ಸ್ವಾಮಿ ಕೃಷ್ಣತೀರ್ಥ.
ಮು. ಸಾಯಿರಾಮ ಮುದ್ರಣ.
೬೧೮

**ವಿಜ್ಞಾನ ಜ್ಯೋತಿಷ್ಯ** ಬೆಂಗಳೂರು
ಮಾಸ ೨೧x೧೪ ಪು.೫೬
ಜ್ಯೋತಿಷ್ಯ ೧೯೫೩ . .
ಸಂ.ಪ್ರ. ಬಿ. ಎನ್. ಮಹಾದೇವರಾವ್.
ಮು. ಶ್ರೀ ಭುವನೇಶ್ವರಿ ಪ್ರಿಂಟಿಂಗ್ ಪ್ರೆಸ್.
೬೧೯

**ವಿಜ್ಞಾನ ದೀಪಿಕೆ** ಬೆಂಗಳೂರು
ಮಾಸ ? ?
ಶೈಕ್ಷಣಿಕ ೧೮೯೨-೧೮೯೫ . .
ಹೆ.ಮಾ. ಹೈಸ್ಕೂಲ ಶಿಕ್ಷಣ ಸಂಬಂಧದ ಲೇಖಗಳು. ಜೊತೆಗೆ ಕೆಲ ಕಥೆಗಳು-ಕಾದಂಬರಿಗಳ ಧಾರಾವಾಹಿ.
ಘೋಷಣಾ ಶ್ಲೋಕ: "ಅಜ್ಞಾನವೆಂಬ ಕತ್ತಲೆ ವಿಜ್ಞಾನವೆಂಬ ಬೆಳಕಿನಿಂದ ಪೋಗೀ ನಾಡೊಳ್ ಪ್ರಜ್ಞಾಶಾಲಿಗಳಾಗಲಿ ಸುಜ್ಞಾನಾಪೇಕ್ಷೆಯುಳ್ಳ, ಬಾಲಕರನಿಶಮ್."
೬೨೦

**ವಿಜ್ಞಾನ ಭಾರತಿ** ಧಾರವಾಡ
ಷಾಣ್ಮಾಸ ೧೮x೧೨ ಪು.೧೨೦

ವಿಜ್ಞಾನ ೧೯೭೨ . .

ಪ್ರ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಮು. ಕ. ವಿ. ವಿ. ಮುದ್ರಣಾಲಯ.
ಹೆ.ಮಾ. ಕರ್ನಾಟಕ ವಿಶ್ವವಿವಿದ್ಯಾಲಯದ ವಿಜ್ಞಾನ ಪತ್ರಿಕೆ.
**೬೨೧**

**ವಿಜ್ಞಾನಯುಗ** ಬೆಂಗಳೂರು
ಮಾಸ ೨೪x೧೮ ಪು.೨೪

ವಿಜ್ಞಾನ ೧೯೫೨ . .

ಸಂ. ಬಿ. ವಿ. ಸುಬ್ಬರಾಯಪ್ಪ
ಪ. ಬೆಂಗಳೂರು ಬುಕ್ ಹೌಸ್.
ಹೆ.ಮಾ. ವಿಜ್ಞಾನಯುಗ ಎಂದು ಪ್ರಕಟವಾದರೂ ವಿಜ್ಞಾನ ಎಂದೇ ಹೆಸರಾಯಿತು. ೧೯೫೦ರಲ್ಲಿ ಬಿ. ವಿ. ಸುಬ್ಬರಾಯಪ್ಪನವರು ಸಂಪಾದಕರಾಗಿ ನಡೆಸಿದರೂ ಒಂದು ವರ್ಷ ಮಾತ್ರ ನಡೆಯಿತು. ೧೯೫೨ರಲ್ಲಿ ಪುನರಾರಂಭ.
**೬೨೨**

**ವಿಜ್ಞಾನಲೋಕ** ಶ್ರೀನಿವಾಸನಗರ
ತ್ರೈಮಾಸ,ಮಾಸ ೨೧x೧೪ ಪು.೩೬

ಸುದ್ದಿ/ರಾಜಕೀಯ ೧೯೬೭-೭೫ . .

ಸಂ.ಪ್ರ. ಕೃಷ್ಣಭಟ್ಟ ಅಡ್ಕನಡ್ಕ, ಜಿ. ವಾಸುದೇವರಾವ್
ಪ್ರ. ವಿಜ್ಞಾನ ಸಂಘ, ಶ್ರೀನಿವಾಸ ಪ್ರತಿಷ್ಠಾನ, ಶ್ರೀನಿವಾಸನಗರ (ದ.ಕ.)
ಮು. ಆಲೋಕ ಪ್ರಿಂಟರ್ಸ್, ಮೂಲ್ಕಿ ಮತ್ತು ಇತರೆಡೆಗಳಲ್ಲಿ.
ಹೆ.ಮಾ. ಮಕ್ಕಳಿಗಾಗಿ ವಿಜ್ಞಾನ ಸಾಹಿತ್ಯವನ್ನು ಕೊಡುವ ಉದ್ದೇಶದಿಂದ ಹೊರಟ ಪತ್ರಿಕೆ ತ್ರೈಮಾಸಿಕವಾಗಿ ಮೂರು ವರ್ಷ ನಡೆದ ಮೇಲೆ ತಿಂಗಳಿಗೊಮ್ಮೆ ಹೊರಡತೊಡಗಿತು.
**೬೨೩**

**ವಿಜ್ಞಾನ ವೈಭವ** ಮೈಸೂರು
ಮಾಸ ೨೪x೧೮ ೧/೨ ಪು.೩೨

ಸಮ್ಮಿಶ್ರ ೧೯೦೮ . .

ಸಂ.ಪ್ರ. ಆ. ವಿ. ಗುಂಡಾಶಾಸ್ತ್ರಿ
ಮು. ಜಿ. ಟಿ. ಎ. ಪ್ರೆಸ್, ಮೈಸೂರು.
ಹೆ.ಮಾ. ಮೈಸೂರು ಸದ್ವಿದ್ಯಾಶಾಲೆಯ ಅಧ್ಯಕ್ಷ ಶ್ರೀ ಗುಂಡಾಶಾಸ್ತ್ರಿಯವರಿಂದ 'ವಾಸಿಷ್ಠ ರಾಮಾಯಣ'ದ ಟೀಕೆ ಪ್ರಕಟವಾಗಿದೆ.
**೬೨೪**

**ವಿದ್ಯಾ** ಬೆಂಗಳೂರು
ಮಾಸ ೨೦x೧೪, ೨೧x೧೩ ೧/೨ ಪು.೩೦

ಸಾಹಿತ್ಯ/ಸಮ್ಮಿಶ್ರ ೧೯೬೫-೭೧ . .

ಸಂ. ಕೆ. ನಾಗೇಶ ಹತ್ವಾರ, ಕಾರ್ಯದರ್ಶಿ.
ಪ್ರ. ಭಾರತೀಯ ಸಾಂಸ್ಕೃತಿಕ ವಿದ್ಯಾಪೀಠ.
ವ್ಯ. ಎಚ್. ಎಸ್. ರಾಮಣ್ಣ
ಮು. ಮಂಜುನಾಥ ಪ್ರೆಸ್, ಉತ್ತಮ ಪ್ರಿಂಟರ್ಸ್, ಬೆಂಗಳೂರು.
ಹೆ.ಮಾ. ಜುಲೈ ೧೯೭೧ರಿಂದ 'ವಿದ್ಯಾ ಮಕ್ಕಳ ಕೂಟ' ಎಂಬ ಪ್ರತ್ಯೇಕ ವಿಭಾಗದ ಆರಂಭ.
**೬೨೫**

**ವಿದ್ಯಾರ್ಥಿ** ಬೆಂಗಳೂರು
ಪಕ್ಷ ೨೦x೧೩ ಪು.೧೬

ಶಿಕ್ಷಣ ೧೯೪೮ . .

ಸಂ.ಪ್ರ. ಎಚ್. ಎಸ್. ಆರ್. ಪ್ರಸಾದ್.
**೬೨೬**

**ವಿದ್ಯಾರ್ಥಿ** ಮಡಿಕೇರಿ
ದ್ವೈಮಾಸ ? ?

ಶಿಕ್ಷಣ ೧೯೨೬-೩೬ . .

ಸಂ. ಡಿ. ಎಂ. ಶಿದ್ದಲಿಂಗಯ್ಯ
ಪ್ರ. ಕೊಡಗು ಶಿಕ್ಷಕ ಸಂಘ, ಮಡಿಕೇರಿ.
**೬೨೭**

**ವಿದ್ಯಾರ್ಥಿ** ವಿಜಾಪುರ
ಮಾಸ ೨೨x೧೪ ಪು.೩೪

ಶಿಕ್ಷಣ ೧೯೫೧ . .

ಸಂ.ಪ. ಟಿ. ಕೆ. ನಾಯ್ಕ
**೬೨೮**

**ವಿದ್ಯಾರ್ಥಿ II** ಬೆಂಗಳೂರು
ವಾರ ೩೬x೨೫ ಪು.೪

ಸುದ್ದಿ/ಸಮ್ಮಿಶ್ರ ೧೯೭೦-೭೫ . .

ಸಂ. ಆರ್. ನಾಗರಾಜರಾವ್.
ಪ. ಎ. ಎನ್. ಗುಂಡೂರಾವ್.
ಮು. ಲಕ್ಷ್ಮೀನರಸಿಂಹ ಮುದ್ರಣ.
**೬೨೯**

**ವಿದ್ಯಾದಾಯಿನಿ** ಮೈಸೂರು
ಮಾಸ ೨೧x೧೩ ೧/೨ ಪು.೨೪
ಶಿಕ್ಷಣ/ಸಮ್ಮಿಶ್ರ ೧೮೯೩-೧೯೫೮
ಸ್ಥಾ.ಸಂ. ಎಂ. ಶಾಮರಾವ್, ಬಾಪೂ ಸುಬ್ಬರಾವ್, ಎಂ. ಎಲ್. ಶ್ರೀಕಂಠೇಗೌಡ, ಮುಂತಾದವರು.
ಪ. ಮೈಸೂರು ಸಂಸ್ಥಾನದ ಶಿಕ್ಷಣ ಇಲಾಖೆ.
ಮು. ಟಿ. ಎ. ಪ್ರೆಸ್, ಪಂಚಾಚಾರ್ಯ ಎಲಕ್ಟ್ರಿಕ್ ಪ್ರೆಸ್, ಮೈಸೂರು.
ಹೆ.ಮಾ. ಸುಮಾರು ೬೦ ವರ್ಷಗಳ ಕಾಲ ಮೈಸೂರಿನ ಶಿಕ್ಷಣ ಹಾಗೂ ಸಾಹಿತ್ಯರಂಗದಲ್ಲಿ ಪ್ರಭಾವ ಬೀರಿದ ಪತ್ರಿಕೆ. ತಾತ ವೆಂಕಟಕೃಷ್ಣಯ್ಯ, ಎಂ. ಎಸ್. ಪುಟ್ಟಣ್ಣ, ಎಂ. ಬಿ. ಶ್ರೀನಿವಾಸಯ್ಯಂಗಾರ್ ಮೊದಲಾದವರು ಇದರಲ್ಲಿ ಪಾಲ್ಗೊಂಡಿದ್ದರು. ಶಿಕ್ಷಣ ಕಾರ್ಯಕ್ಕೆ ಬೇಕಾಗುವ ಉಪಯುಕ್ತ ಸೂಚನೆಗಳು, ಪರೀಕ್ಷೆಗೆ ಸಂಬಂಧಿಸಿದ ಪ್ರಶ್ನೋತ್ತರಗಳಂತೂ ಸರಿಯೇ, ಕನ್ನಡ ಭಾಷೆ, ಆಧುನಿಕ ಪ್ರಬಂಧಗಳು ಪ್ರಕಟವಾಗಿವೆ. ೧೯೨೦ರ ದಶಕದಲ್ಲಿ ಕೆಲ ವರ್ಷ ಸ್ಥಗಿತವಾಗಿತ್ತು. ೧೯೨೫ರ ಅನಂತರ ಜಿ. ಹನುಮಂತರಾವ್, ಎ. ಶೇಷಯ್ಯಂಗಾರ್, ಆರ್. ಕೆ. ಸಂಗಮೇಶ್ವರನ್, ಎಸ್. ವಿ. ರಂಗಣ್ಣ ಮುಂತಾದವರು ಸಕ್ರಿಯವಾಗಿ ಪತ್ರಿಕೆ ನಡೆಸುವಲ್ಲಿ ಪಾಲ್ಗೊಂಡಿದ್ದರು.
೯೩೦

**ವಿದ್ಯಾನಂದ** ಬೆಂಗಳೂರು
ಮಾಸ ? ?
ಸಾಹಿತ್ಯ ೧೯೦೯-
ಸಂ.ಪ್ರ. ಬಾಣವಾಡಿ ಆದಿನಾರಾಯಣ ಶಾಸ್ತ್ರಿಗಳು.
ಹೆ.ಮಾ. ಹತ್ತು ಚಂದಾದಾರನ್ನು ಮಾಡಿಕೊಟ್ಟವರಿಗೆ ಒಂದು ಇನಾಮು ಕೊಡಲಾಗುತ್ತಿತ್ತು.
೯೩೧

**ವಿದ್ಯಾಲೋಕ** ಮಂಗಳೂರು
ಮಾಸ,ಪಕ್ಷ ೩೮x೨೫ ೧/೨ ಪು.೪
ಸುದ್ದಿ/ಸಮ್ಮಿಶ್ರ ಸ.೧೯೬೦ . .
ಸಂ.ಪ ಪಿ. ಪದ್ಮನಾಭಯ್ಯ.
ಮು. ವಿಜಯ ಪಿಂಟರ್ಸ್, ಮಂಗಳೂರು.
ಹೆ.ಮಾ. ಮಾಸಿಕವಾಗಿ ಹೊರಟ ವಿದ್ಯಾಲೋಕ ಕೆಲಕಾಲ ನಂತರ ಪಕ್ಷಪತ್ರಿಕೆಯಾಯಿತು.
೯೩೨

**ವಿದ್ಯಾಸಾಗರ** ಸಾಗರ
ತ್ರೈಮಾಸ ೨೧x೧೪ ಪು.೩೪
ಶಿಕ್ಷಣ ೧೯೬೬-
ಸಂ. ಕೆ. ವಿ. ಸುಬ್ಬಣ್ಣ.
ಪ್ರ. ಸಾಗರ ಪ್ರಾಂತ್ಯ ವಿದ್ಯಾವರ್ಧಕ ಸಂಘ
ಮು. ಸಾಗರ ಮುದ್ರಣ, ಸಾಗರ.
ಹೆ.ಮಾ. ಸಾಗರ ಪ್ರಾಂತ್ಯ ವಿದ್ಯಾವರ್ಧಕ ಸಂಘದ ಮುಖಪತ್ರ, ಸಂಘದ ಕಾರ್ಯಕರ್ತರು, ಅಧಿಕಾರಿಗಳು, ಮಹಾಜನರು ವಿದ್ಯಾಭಿಮಾನಿಗಳ ಮಧ್ಯೆ ಸಂಪರ್ಕ ಮಾಧ್ಯಮವಾಗಬೇಕೆಂಬ ಉದ್ದೇಶ. ವಿದ್ಯಾಕ್ಷೇತ್ರದ ಪರಿಚಯ, ವಿಮರ್ಶೆ, ಪ್ರತಿಕ್ರಿಯೆ ಪ್ರಶ್ನೋತ್ತರಗಳಿಗೆ ಅವಕಾಶವಿತ್ತು.
೯೩೩

**ವಿದ್ಯೋದಯ** ಮಂಗಳೂರು
ಮಾಸ ೨೧x೧೩ ೧/೨ ಪು.೧೮
ಶಿಕ್ಷಣ ೧೯೪೧-೫೦ . . .
ಸಂ. ಎಸ್. ಮುಕುಂದರಾವ್.
ಪ್ರ. ದ. ಕ. ಜಿಲ್ಲಾ ಶಿಕ್ಷಕರ ಸಂಘ.
ಮು. ಶ್ರೀನಿವಾಸ ಪ್ರಿಂಟಿಂಗ್ ವರ್ಕ್ಸ್, ಕಾಸರಗೋಡು.
೯೩೪

**ವಿನೋದ** ಬೆಂಗಳೂರು
ವಾರ ೨೫x೧೮ ಪು.೨೪
ಸಾಹಿತ್ಯ ೧೯೩೩ . .
ಸಂ.ಪ್ರ. ಕೆ. ಸಿಂಗಳಾಚಾರ್.
೯೩೫

**ವಿನೋದ II** ಬೆಂಗಳೂರು
ಮಾಸ ೨೧x೧೪ ಪು.೩೨
ವಿನೋದ ಸಾಹಿತ್ಯ ೧೯೫೧-
ಸಂ.ಪ್ರ. ದೇಶಹಳ್ಳಿ ಜಿ. ನಾರಾಯಣ.
ಮು. ಸ್ವತಂತ್ರ ಮುದ್ರಣಾಲಯ, ಬೆಂಗಳೂರು.
ಹೆ.ಮಾ. ಅ. ರಾ. ಮಿತ್ರರು ಕೆಲಕಾಲ ಸಹಾಯಕ ಸಂಪಾದಕರಾಗಿದ್ದರು. ದೀರ್ಘಕಾಲ, ಒಂದೇ ರೀತಿ ನಡೆದು ಬಂದಿರುವ ಜನಪ್ರಿಯ ಹಾಸ್ಯಸಾಹಿತ್ಯದ ಪತ್ರಿಕೆ.
೯೩೬

**ವಿನೋದ ಚಂದ್ರಿಕೆ** ಬೆಂಗಳೂರು
ಮಾಸ ೨೧x೧೪ ಪು.೨೪

? ೧೯೨೬ . .

ಸಂ.ಪ. ಜಿ ಕೃಷ್ಣಮೂರ್ತಿ
೯೩೭

**ವಿನೋದ ಪ್ರಪಂಚ** ಬೆಂಗಳೂರು
ಪಕ್ಷ,ವಾರ,ಮಾಸ ೨೪ ೧/೨x೧೮ ೧/೨ ಪು.೧೨
ಸುದ್ದಿ/ರಾಜಕೀಯ ೧೯೩೧-೩೫
ಸಂ.ಪ. ತಿ. ಗೋಪಾಲಾಚಾರ್ಯ ಶರ್ಮ
ಮು. ವಿಶ್ವಕರ್ನಾಟಕ ಮುದ್ರಣಾಲಯ.
೯೩೮

**ವಿನೋದ ಭಾರತ** ಮಂಗಳೂರು
ವಾರ ೨೪x೧೮ ೧/೨ ಪು.೨೪

ಸಾಹಿತ್ಯ/ಸಮ್ಮಿಶ್ರ ೧೯೩೪ . .

ಸಂ.ಪ. ಮಂಗಳೂರು ಜಾರಪ್ಪ, ಬಿ. ನರಸಪ್ಪ.
೯೩೯

**ವಿನೋದ ರಂಜನಿ** ಬೆಂಗಳೂರು
ಮಾಸ ೨೪x೧೮ ಪು.೧೦

ವಿನೋದ ಸಾಹಿತ್ಯ ೧೯೩೦ . .

ಸಂ. ಎಂ. ವಿ. ರಂಗರಾಯರು.
ಪ. ಗುಬ್ಬಿ ಥಿಯೇಟರ್ಸ್
ಮು. ಪವರ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು.
ಧ್ಯೇಯವಾಕ್ಯ: "ಶ್ರೀಕರ್ನಾಟಕ ಜನನೀ। ಪ್ರಕಟಿಸುತೆ ಈ। ವಿನೋದ ರಂಜನಿ ವಿಬುಧಾ। ಲೇಖನ ಪೋಷಣದಿಂದಾ। ಸ್ವೋಕಾಭ್ಯುದಯವನೆ ತಳೆದು ಬಾಳುಗೆ ಸುಚಿರಂ।".
೯೪೦

**ವಿನೋದವಾಣಿ** ಬೆಂಗಳೂರು
ಮಾಸ ೨೪x೧೮ ೧/೨ . ಪು.೨೪
ವಿನೋದ ಸಾಹಿತ್ಯ ?
ಸಂ.ಪ. ಬಿ. ಎಸ್. ನರಸಿಂಹಮೂರ್ತಿ
ಸಹ ಸಂ. ಎಂ. ರಾಮಮೂರ್ತಿ.
ಮು. ಮೆ. ವಿನೋದವಾಣಿ.
೯೪೧

**ವಿನೋದಿನೀ** ಕಾರವಾರ
ಮಾಸ ೨೪x೧೭ ಪು.೨೪

ಸಾಹಿತ್ಯ/ಸಮ್ಮಿಶ್ರ ೧೯೦೫-೦೯ . .
ಸಂ.ಪ. ಕರ್ಕಿ ವಿನಾಯಕ ಶಾಸ್ತ್ರಿ, ನಾರಾಯಣ ಶಾಸ್ತ್ರಿ.
ಮು. ಮಹಮಡನ್ ಪ್ರೆಸ್.
ಹೆ.ಮಾ. ಸಂಯೋಗಿತೆ, ವಂಗವಿಜೇತೆ ಮುಂತಾದ ಕಾದಂಬರಿಗಳು (ಬಿ. ವೆಂಕಟಾಚಾರ) ಧಾರಾವಾಹಿಯಾಗಿ ಪ್ರಕಟವಾದುವು. ಉ. ಕ. ಜಿಲ್ಲೆಯ ಪ್ರಥಮ ಮಾಸಿಕ.
೯೪೨

**ವಿಪಂಚೀ** ಬೆಂಗಳೂರು
ಅರ್ಧವಾರ್ಷಿಕ ೨೫x೧೮ ಪು.೫೦

ವೀರಶೈವ ೧೯೫೦ . .
ಸಂ.ಪ. ಗುರುಸಿದ್ಧಸ್ವಾಮಿ ಮುದೇನೂರು.
ಮು. ಸ್ವತಂತ್ರ ಕರ್ನಾಟಕ ಪ್ರೆಸ್, ಬೆಂಗಳೂರು.
ಹೆ.ಮಾ. ಕಾಶಿ ಕ್ಷೇತ್ರದ ವೀರಶೈವ ವಿದ್ವತ್ಸಂಗ, ಪ್ರಭಾತ ಗೀತ, ಸಂದೇಶ, ನನ್ನ ರಾಜ್ಯಧರ್ಮ ಮುಂತಾದವು ಪ್ರಕಟವಾಗಿವೆ.
೯೪೩

**ವಿಮರ್ಶಕ** ಉಡುಪಿ
ಮಾಸ,ಪಕ್ಷ ೨೪x೧೬ ಪು.೩೦

ಸಾಹಿತ್ಯ ೧೯೫೦-೧೯೫೧ . .
ಸಂ. ನಂದಳಿಕೆ ವಿಠಲದಾಸ.
ಪ. ಎಸ್. ಎಲ್. ನಾರಾಯಣ ಭಟ್ಟ; ವಿಠಲದಾಸ.
ಮು. ಕಲ್ಯಾಣಪುರ ಪ್ರೆಸ್, ಉಡುಪಿ.
೯೪೪

**ವಿಮಾ ವಾಣಿಜ್ಯ** ಬೆಂಗಳೂರು
ಮಾಸ ೨೪x೧೬ ಪು.೫೨

ಉದ್ಯಮ ೧೯೩೪-೪೦ . .
ಸಂ.ಪ. ಜೆ. ವಿ. ದೊಡ್ಡವೀರಪ್ಪ..
೯೪೫

**ವಿವೇಕ** ಹುಬ್ಬಳ್ಳಿ,
ವಾರ ೨೫x೧೮ ಪು.೪

ಸುದ್ದಿ ೧೯೭೧-೮೦ . .
ಸಂ. ಸಿ. ಬಾಬುರಾವ್
ಪ. ಲಕ್ಷ್ಮಣ ಶೇಳಕೆ.
ಮು. ಸ್ಟಾಂಡರ್ಡ್ ಮುದ್ರಣ; ಶಕ್ತಿ ಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ.
೯೪೬

**ವಿವೇಕ ದೀಪಿಕಾ** ಮೈಸೂರು
ಮಾಸ ೨೫×೧೮ ಪು.೧೬
ಸಾಹಿತ್ಯ/ಸಮ್ಮಿಶ್ರ ೧೮೯೪-೯೫ . .
ಸಂ.ಪ. ಕೆ. ಟಿ. ಶ್ರೀನಿವಾಸ ದೇಶಿಕಾಚಾರ್ಲು,
ಮು. ಜಯಲಕ್ಷ್ಮಿ ವಿಲಾಸ ಪ್ರೆಸ್.
೯೪೭

**ವಿವೇಕಾನಂದ** ಮೈಸೂರು
ಮಾಸ ೨೧×೧೩ ಪು.೨೪
ಧಾರ್ಮಿಕ ೧೮೯೮ . .
ಸಂ. ರಾ. ಸೂ. ವೆಂಕಟಕೃಷ್ಣಯ್ಯ
ಪ್ರ. ಕೆ. ರಾಘವಾಚಾರ್, ಗ್ರಂಥ ಪ್ರಸಾರಕ ಮಂಡಳಿ.
ಮು. ಜಯಲಕ್ಷ್ಮೀವಿಲಾಸ ಮುದ್ರಾಕ್ಷರ ಶಾಲೆ.
ಹೆ.ಮಾ. ವೇದೋಕ್ತ ಆಚಾರ, ಸ್ತ್ರೀ ವಾಚಕಹಿತ, ಬ್ರಾಹ್ಮಣ್ಯ ಮುಂತಾದ ವಿಷಯಗಳಿದ್ದವು.
೯೪೮

**ವಿವೇಕಾಭ್ಯುದಯ** ಮೈಸೂರು
ಮಾಸ ೨೧×೧೪ ಪು.೩೦-೯೬
ಜೈನ ೧೯೩೩-೭೪ . .
ಸಂ. ಎ. ಶಾಂತಿರಾಜ ಶಾಸ್ತ್ರಿಗಳು, ಜಿ. ಬ್ರಹ್ಮಪ್ಪ, ಇತರರು.
ಪ್ರ. ಎಂ. ಸಿ. ಅನಂತರಾಜಯ್ಯ
ಮು. ವರ್ಧಮಾನ ಪವರ್ ಪ್ರೆಸ್, ಇತರೆಡೆಗಳಲ್ಲಿ
ಧ್ಯೇಯವಾಕ್ಯ: 'ಓಂ, ಅಹಿಂಸಾ ಪರಮೋಧರ್ಮ'.
ಹೆ.ಮಾ. ಮೈಸೂರಿನ ಜೈನ್ ಅಸೋಸಿಯೇಶನ್ನಿನ ಆಶ್ರಯ. ಶ್ರೀ ಲಿಂಗರಾಜ ಅರಸು ಅವರಿಂದ ಉದ್ಘಾಟನೆ (೧೯೩೩) ಶ್ರವಣಬೆಳ್ಗೊಳದ ಜೈನ ಸ್ವಾಮೀಜಿಯವರ ಉದಾರ ಪೋಷಣೆ. ಡಿ. ಪುಟ್ಟಸ್ವಾಮಿಯವರ ನೇತೃತ್ವ. ೧೯೭೪ರಿಂದ ಬೆಂಗಳೂರಿಗೆ ಪ್ರಕಾಶನ, ಮುದ್ರಣದ ಸ್ಥಳಾಂತರ. ಜೈನ ಸಮುದಾಯದ ಪ್ರಭಾವಶಾಲೀ ಪತ್ರಿಕೆ.

ಮೈಸೂರಿನ ಜೈನ್ ಅಸೋಸಿಯೇಶನ್ ಆಶ್ರಯದಲ್ಲಿ ನಡೆಯುತ್ತಿತ್ತು. ರಾಜವಿಭೂಷಣ ಶ್ರೀ ಲಿಂಗರಾಜ ಅರಸರವರ ಅಧ್ಯಕ್ಷತೆಯಲ್ಲಿ ಪ್ರಾರಂಭ. ಜೈನ ಮತಾಭಿವೃದ್ಧಿಯ ಕಾರ್ಯದಲ್ಲಿ ಕಾರ್ಯ ಸಾಧಿಸಿದೆ. ಮಂಗಳೂರು-ಬೆಂಗಳೂರುಗಳಲ್ಲಿ ಕೂಡ ಪ್ರಕಾಶಿತಗೊಳ್ಳುತ್ತಿತ್ತು.

೧೯೭೪ರ ಏಪ್ರಿಲದಿಂದ ಪತ್ರಿಕೆ ಮೈಸೂರಿನಲ್ಲಿ ಮುದ್ರಿತ. ಎಂ. ಸಿ. ಅನಂತ ಪ್ರಕಾಶನ ಭಾರ ಬಿಟ್ಟಿರುವುದರಿಂದ ಬೇರೆಯವರನ್ನು ನೋಡುವ ಸೂಚನೆ ಪತ್ರಿಕೆ ಫೆ.೧೯೭೪ರ ಸಂಚಿಕೆ ನೀಡಿದೆ. ಜಿ. ಬ್ರಹ್ಮಪ್ಪ ಸಂಪಾದಕರಾಗಿದ್ದರು. ಬೆಂಗಳೂರಿನ ನ್ಯೂ ಬೆಂಗಳೂರು ಪ್ರಿಂಟರ್ಸ್-ಮಲ್ಲೇಶ್ವರಂನಲ್ಲಿ ಮುದ್ರಿತವಾಗುತ್ತಿತ್ತು.
೯೪೯

**ವಿವೇಕೋದಯ** ಶ್ರೀರಂಗಪಟ್ಟಣ
ಮಾಸ ೧೮×೧೩ ಪು.೧೬
ಸಮ್ಮಿಶ್ರ ೧೯೦೫ . .
ಸಂ. ಎಸ್. ವಿ. ವೆಂಕಟರಾಮಯ್ಯ
ಪ್ರ. ವಿವೇಕೋದಯ ಕಾರ್ಯಾಲಯ, ಶ್ರೀರಂಗಪಟ್ಟಣ.
ಮು. ಜಿ. ಟಿ. ಎ. ಪ್ರೆಸ್, ಮೈಸೂರು.
ಧ್ಯೇಯವಾಕ್ಯ: "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ."
೯೫೦

**ವಿಶ್ವಕರ್ನಾಟಕ** ಬೆಂಗಳೂರು
ವಾರ,ದಿನ ? ಪು.೧೬
ಸುದ್ದಿ/ರಾಜಕೀಯ ೧೯೨೧-೫೫,
. . ೧೯೭೭ . .
ಸಂ. ತಿರುಮಲೆ ತಾತಾಚಾರ್ಯ ಶರ್ಮಾ.
ವ್ಯ. ಕೆ. ಆರ್. ಸೀತಾರಾಂ (೧೯೨೮.ಫೆ)
ಪ್ರ. ತಿ. ತಾ. ಶರ್ಮ, ಸಿದ್ದವನಹಳ್ಳಿ ಕೃಷ್ಣಶರ್ಮ ಕಾರ್ಯಾಲಯ ಚಾಮರಾಜಪೇಟೆ.
ಮು. ಮಕ್ಕಳ ಪುಸ್ತಕಾಲಯ ಮುದ್ರಣಾಲಯ (೧೯೨೮) (೨) ಶ್ರೀ ಲಕ್ಷ್ಮೀನರಸಿಂಹ ಮುದ್ರಣಾಲಯ (೩) ವಿಶ್ವ ಕರ್ನಾಟಕ ಮುದ್ರಣಾಲಯ.
ಹೆ.ಮಾ. ಮೈಸೂರು ಕ್ರಾನಿಕಲ್ ಎಂದು ಹೊರಟ ಈ ಪತ್ರಿಕೆ ಪುನರ್ಜನ್ಮ ಹೊಂದಿ 'ವಿಶ್ವಕರ್ನಾಟಕ' ಸಾಪ್ತಾಹಿಕವಾಗಿ ಪ್ರಾರಂಭವಾಯಿತು.

೧೯೨೮ರ ಫೆಬ್ರವರಿ ಸಂಚಿಕೆಯಿಂದ ಮೈಸೂರು ವೃತ್ತಪತ್ರಿಕಾ ಕರಾಳ ಶಾಸನವನ್ನು ತೆಗೆದುಹಾಕುವ ವರೆಗೆ ಪತ್ರಿಕೆಯಲ್ಲಿ ಪ್ರಧಾನ ಲೇಖನ ಸಂಪಾದಕೀಯ ಬರೆಯುವುದೇ ಇಲ್ಲ. ಎಂಬ ಸಂಕಲ್ಪ. ತಿ. ತಾ. ಶರ್ಮರ ಲೇಖನಿಯ ಕೂರಂಬು ದಿವಾನರಿಗೂ ತಟ್ಟಿತ್ತು. ಕರ್ನಾಟಕದ ಮೂಲೆ ಮೂಲೆಯಲ್ಲಿ ಜನರನ್ನು ಬಡಿದೆಬ್ಬಿಸಿದ ಜನಪ್ರಿಯ ಪತ್ರಿಕೆಯಾಗಿತ್ತು.

೧೯೩೪-೪೧ರ ವರೆಗೆ ಒಟ್ಟೊಟ್ಟಿಗೆ ಎರಡೂ ಪ್ರಕಟವಾಗುತ್ತಿದ್ದವು. ೧೯೪೨ರ ವರೆಗೆ ಸಿ. ಕೃಷ್ಣಶರ್ಮ ಸಂಪಾದಕರಾಗಿದ್ದರು. ಅಕ್ಟೋಬರ ೧೯೨೧-೩೪ರ ವರೆಗೆ (ವಾರ), ೧೯೩೪-೪೧ರ ವರೆಗೆ (ದಿನ), ಪುನಃ ೧೯೪೫-೪೮ ಅಕ್ಟೋಬರ ರವರೆಗೆ ತಿ. ತಾ. ಶರ್ಮರು ನಡೆಸಿದರು ಮುಂದೆ ಎನ್. ಎಸ್. ವೆಂಕೋಬರಾವ್ ವಹಿಸಿಕೊಂಡಾಗ ಟಿ. ಬಿ. ಧರಣೇಂದ್ರಯ್ಯ ಪ್ರಕಾಶಕರಾಗಿ ಇಂಡಿಯಾ ಪಬ್ಲಿಕೇಶನ್ಸ್‌ದಿಂದ ನಡೆಸಿದರು. ವಿಶ್ವ ಕರ್ನಾಟಕ ಪ್ರೆಸ್‌ನಲ್ಲೇ ಮುದ್ರಿತವಾಗುತ್ತಿತ್ತು.

೨೦-೧೨-೧೯೪೯ರಿಂದ ದೈನಿಕವಾಗಿ ಹೊಸ ರೂಪದಲ್ಲಿ ಹೊರಟಿತು. ೧೯೫೫ರಿಂದ ಪುನಃ ವಾರಪತ್ರಿಕೆಯಾಯಿತು.
೯೫೧

**ವಿಶ್ವಕರ್ಮ** ಮಂಗಳೂರು
ಮಾಸ ೨೪x೧೮ ಪು.೧೨

ವಿಶ್ವಕರ್ಮ(ಸ್ವರ್ಣಕಾರ ಜನಾಂಗ) ೧೯೫೪-೭೭ . .
ಸಂ. ಬಿ. ಹರಿಶ್ಚಂದ್ರಾಚಾರ್ (೧೯೬೫ ರಿಂದ)
ಗೌ.ಸಂ. ಶೀರಂಗಪ್ಪ ನಿಂಗಪ್ಪ ಕಿತ್ತಳಿ.
ಸಹ ಸಂ. ವಿ. ಜಿ. ದೀಕ್ಷಿತ.
ಪ. ರಾಷ್ಟ್ರೀಯ ವಿಶ್ವಬ್ರಾಹ್ಮಣ ಸಮಾಜೋದ್ಧಾರಕ ಸಭಾ, ಮಂಗಳೂರು (೧೯೭೧).
ಮು. ವಿಶ್ವಕರ್ಮ ಪ್ರಿಂಟರ್ಸ್, ರಥಬೀದಿ.
೯೫೨

**ವಿಶ್ವಕರ್ಮಾ** ಮೈಸೂರು,ಮಂಗಳೂರು
ಮಾಸ ೨೧x೧೩ ಪು.೫೬

ಸ್ವರ್ಣಕಾರ ಜನಾಂಗ ೧೯೫೧ . .
ಸಂ. ಗಂಗಾಧರ ಮೂರ್ತಿ.
ಹೆ.ಮಾ. ೧೯೫೪ರಿಂದ ಮಂಗಳೂರನ್ನು ಕೇಂದ್ರವನ್ನಾಗಿಸಿಕೊಂಡು ಪತ್ರಿಕೆ ಹೊರಡುತ್ತಿದೆ.
೯೫೩

**ವಿಶ್ವಕರ್ಮಪ್ರಕಾಶ** ತುಮಕೂರು
ಮಾಸ ೨೧x೧೪ ಪು.೨೪

ಸ್ವರ್ಣಕಾರ ಜನಾಂಗ ೧೯೬೮-೭೩ . .
ಸಂ.ಪ. ಟಿ. ವಿ. ಮುತ್ತುಚಾರ್ಯ
ಮು. ವಿಶ್ವಶಿಲ್ಪಿ ಮುದ್ರಣಾಲಯ, ತುಮಕೂರು.
೯೫೪

**ವಿಶ್ವಕಲ್ಯಾಣ** ಯಾದಗಿರಿ
ವಾರ ೨೯x೨೨ ೧/೨ ?

ಸಮ್ಮಿಶ್ರ ೧೯೬೫-೮೦ . .
ಸಂ.ಪ್ರ. ಬಿ. ಮಹದೇವಪ್ಪ.
ಮು. ಶಂಕರಾನಂದ ಪ್ರಿಂಟಿಂಗ್ ಪ್ರೆಸ್.
೯೫೫

**ವಿಶ್ವದೂತ** ಮೈಸೂರು
ದಿನ ೩೮x೫೫ ಪು.೪,೨

ಸುದ್ದಿ ೧೯೭೨ . .
ಸಂ.ಪ. ಎಂ. ಎನ್. ಅನಂತರಾಜು.
ಮು. ಹನುಮಾನ್ ಪವರ ಪ್ರೆಸ್. ಶಶಿ ಮುದ್ರಣಾಲಯ, ಮೈಸೂರು.
೯೫೬

**ವಿಶ್ವಪ್ರಭ** ಬೆಂಗಳೂರು
ವಾರ ೩೭x೨೫ ಪು.೮

ಸುದ್ದಿ/ಸಮ್ಮಿಶ್ರ ೧೯೫೬-೭೭ . .
ಸಂ.ಪ. ಎನ್. ಎಲ್. ಸೋಮಶೇಖರಯ್ಯ.
ಮು. ಭಾರ್ಗವ ಪ್ರಿಂಟರ್ಸ್, ಬೆಂಗಳೂರು.
೯೫೭

**ವಿಶ್ವಪ್ರೇಮಿ** ಬಳ್ಳಾರಿ
ವಾರ ೨೫x೧೮ ಪು.೨೪
ಸುದ್ದಿ ೧೯೪೮-೫೦
ಸಂ. ಬಿ. ಶೇಷಗಿರಿರಾವ್.
ಹೆ.ಮಾ. ಮಳೆ ಹಾಗೂ ಅಗ್ನಿ ಅನಾಹುತದಿಂದ ಅತಿನಷ್ಟವಾಗಿ ಪತ್ರಿಕೆ ನಿಂತಿತು. ಪ್ರಸಾರ ಸಂಖ್ಯೆ ೩೦೦೦ ಎಂದು ಹೇಳಿಕೊಂಡಿದೆ.
೯೫೮

**ವಿಶ್ವಬಂಧು** ಮೈಸೂರು
ಪಕ್ಷವಾರ ೩೮x೨೫ ೧/೨ ಪು.೪

ಜೈನ ೧೯೨೪-೨೮ . .
ಸಂ. ಜಿ. ಆರ್. ಸ್ವಾಮಿ, ಕೆ. ಎಸ್. ಧರಣೇಂದ್ರಯ್ಯ.
ಗೌ.ಸಂ. ಎ. ಶಾಂತಿರಾಜ ಶಾಸ್ತ್ರಿ.
ಪ. ಮೈಸೂರು ಜೈನ ಶಿಕ್ಷಣ ಸಂಘ.
ಮು. (೧) ಕೌನ್ ಎಲೆಕ್ಟ್ರಿಕ್ ಪ್ರೆಸ್, (೨) ವರ್ಧಮಾನ ಪವರ ಪ್ರೆಸ್.
ಹೆ.ಮಾ. "ಜ್ಞಾನೋದಯ"ದ ಬದಲಾಗಿ "ವಿಶ್ವಬಂಧು" ಹೆಸರಿನಿಂದ ಹೊರಡಿಸಲಾಯಿತು. ಪಾಕ್ಷಿಕವಾಗಿ ಹೊರಟ ಕೆಲ ಕಾಲದಲ್ಲಿ ವಾರಪತ್ರಿಕೆಯಾಯಿತು.
೯೫೯

**ವಿಶ್ವಬಂಧು** ಸೊಲ್ಲಾಪುರ
ಮಾಸ ೨೧x೧೪, ೧೮x೧೨ ಪು.೨೪,೪೦
ಜೈನ ೧೯೫೨-೫೮
ಸಂಚಾಲಕ. ವರ್ಧಮಾನ ಶಾಸ್ತ್ರಿಗಳು.
ಪ.ಮು. ವಿ. ಪಿ. ಶಾಸ್ತ್ರಿ, ಕಲ್ಯಾಣ ಪವರ್ ಪ್ರೆಸ್.
೯೬೦

**ವಿಶ್ವಬಂಧು** ಸಕಲೇಶಪುರ
ಮಾಸ ೨೧x೧೪ ಪು.೧೬

ಸುದ್ದಿ/ಸಮ್ಮಿಶ್ರ ೧೯೫೨ . .
ಸಂ. ದೊಣಿಗಲ್ ನಂಜಪ್ಪ.
ಪ. ವಿಶ್ವಬಂಧು ಕಾರ್ಯಾಲಯ.
೯೬೧

**ವಿಶ್ವಭಾರತಿ** ಬೆಂಗಳೂರು
ಮಾಸ ೨೧x೧೪ ಪು.೨೪

ಸುದ್ದಿ/ಸಮ್ಮಿಶ್ರ ೧೯೩೪ . .

ಸಂ. ಜಿ. ಎಂ. ಸಿದ್ಧಲಿಂಗಪ್ಪ
ಪ್ರ. ಕೆ. ಶಿವರಾಮದಾಸ.
ಹೆ.ಮಾ. ಆನಂದ ಚಂದಿಕೆ ಹಾಗೂ ಭವರೋಗ ವೈದ್ಯ ವಿಶ್ವಭಾರತಿಯಲಿ ಲೀನವಾದವು. ೧೯೨೭ರಲ್ಲಿ "ಭಾರತಿ" ಎಂದು ಬದಲಿಸಲು ಒಪಿಗೆ ಸಿಕ್ಕಿತು. ೨೪-೯-೧೯೩೫ರಿಂದ ಪತ್ರಿಕೆ ಹೊರರೂಪ ತಾಳಿತು.
೯೬೨

**ವಿಶ್ವವಾಣಿ** ಬೆಂಗಳೂರು
ಮಾಸ ೨೧x೧೪ ಪು.೨೪

ಸುದ್ದಿ/ಸಾಹಿತ್ಯ ೧೯೩೬-೪೯ . .

ಸಂ. ಅ. ನ. ಕೃಷ್ಣರಾಯರು
ಪ್ರ. ಎನ್. ಕೃಷ್ಣಸ್ವಾಮಿರಾವ್
ಹೆ.ಮಾ. "ಸಾಹಿತ್ಯ" ಎಂಬ ಪತ್ರಿಕೆಯಲ್ಲಿ ವಿಶ್ವವಾಣಿಯಾಗಿ ಹೊರಟಿತು. 'ಸತ್ಯ, ಸೌಂದರ್ಯ, ಶಕ್ತಿ ಸೇವೆಯೇ ಗುರಿ" ನೂತನ ಯುಗದ ವಿಚಾರವಾಹಿನಿ, ಪರಿಚಯ ಕಾವ್ಯಶಕ್ತಿಯ ಆದರ್ಶ ಕವಿತೆ-ಸಾಹಿತ್ಯ ಗ್ರಂಥ ವಿಮರ್ಶೆಗಳಿದ್ದವು.
೯೬೩

**ವಿಶ್ವವಾಣಿ** ಹುಬ್ಬಳ್ಳಿ
ದಿನ ೫೬x೪೨ ಪು.೪

ಸುದ್ದಿ ೧೯೫೯ . .

ಸಂ. ಪಾಟೀಲ ಪುಟ್ಟಪ್ಪ.
ಪ್ರ. ಪಪಂಚ ಪ್ರಕಾಶನ, ಹುಬ್ಬಳ್ಳಿ.
ಮು. ಪಪಂಚ ಪಿಂಟರಿ.
ಹೆ.ಮಾ. ಇದೇ ಪಕಾಶನ ಚಲನಚಿತ್ರ ಮಾಸಿಕ ಮನೋರಮ ಡೈಜೆಸ್ಟ್, ಸಂಗಮ ಸ್ತ್ರೀ ಎಂಬ ಪತಿಕೆಗಳನ್ನು ಹೊರಡಿಸುತ್ತಿದ್ದು, ಅವು ಪಕಟನೆಯನ್ನು ನಿಲ್ಲಿಸಿವೆ.
ನಡುವೆ ಒಂದು ವರ್ಷ ವಿಶ್ವವಾಣಿ ನಿಂತಿತ್ತು.
೯೬೪

**ವಿಶಾಲ ಕರ್ನಾಟಕ** ಹುಬ್ಬಳ್ಳಿ
ವಾರ,ದಿನ ೫೯x೪೧ ಪು.೪-೮

ಸುದಿ/ಸಮ್ಮಿಶ್ರ ೧೯೩೭-೭೬ . .

ಸಂ. ರಾ. ಯ. ಜಠಾರ (೧೯೩೭-೪೨); ಪಾಟೀಲ ಪುಟ್ಟಪ್ಪ (೧೯೪೨-೪೭); ಕೆ ಎಫ್. ಪಾಟೀಲ (೧೯೪೭-೫೨)
ಸಹ ಸಂ. ಪಾ. ಲೋ. ಬಂಕಾಪುರ.
ಪ್ರ. ಬಿ. ಎಸ್. ಪಾಟೀಲ, ಧಾರವಾಡ; ಕೆ. ಎಚ್. ಪಾಟೀಲ, ಹುಬ್ಬಳ್ಳಿ.
ಮು. ಕರ್ನಾಟಕ ಪ್ರಿಂಟಿಂಗ್ ಪೆಸ್, ಹುಬ್ಬಳ್ಳಿ, ವಿಶಾಲ ಕರ್ನಾಟಕ ಪಿಂಟಿಂಗ್ ಪೆಸ್, ಬೆಂಗಳೂರು, ವಿಶಾಲ ಕರ್ನಾಟಕ ಮುದಣಾಲಯ, ಹುಬ್ಬಳ್ಳಿ.
ಹೆ.ಮಾ. ಧಾರವಾಡದಿಂದ ೧೯೩೭ರಲ್ಲಿ ವಾರಪತ್ರಿಕೆಯಾಗಿ ಹೊರಟ ವಿಶಾಲ ಕರ್ನಾಟಕವು ೧೯೬೪ ಮೇ/ಲ್ಲಿ ದಿನಪತ್ರಿಕೆಯಾಯಿತು. ಈ ಮಧ್ಯೆ ಕೆಲವು ವರ್ಷ ಪಸಾರ ನಿಲ್ಲಿಸಿತ್ತು. ಪುನಃ ೧೯೭೬ ಜೂನ್ ೨೭ರಂದು ಪುನರಾರಂಭವಾಯಿತು. ಎಸ್. ಕೆ. ಪಾಟೀಲರೇ ಪಕಾಶಕರಾಗಿದ್ದರು. ೪-೧೧-೧೯೭೮ರಂದು ರೈತ-ಕಾರ್ಮಿಕರ ಸುಲಿಗೆಯ ಕುರಿತಾಗಿ - ೧೧-೧೨-೧೯೭೮ರಂದು ೧೨ ಪುಟಗಳ ವಿಶೇಷ ಪುರವಣಿಯನ್ನು ಪಕಟಿಸಿತು. ಕೆ. ಎಚ್. ಪಾಟೀಲ, ಡಿ. ಆರ್. ಪಾಟೀಲ, ಎಚ್. ಕೆ. ಪಾಟೀಲ (೧೯೭೪) ಮುಂತಾದವರೆಲ್ಲ ಪತ್ರಿಕೆಗೆ ಸೇವೆ ಸಲ್ಲಿಸಿದರು.
೯೬೫

**ವಿಶ್ವಾಮಿತ್ರ** ಉಡುಪಿ
ಮಾಸ ೧೯x೧೪ ೧/೨ ಪು.೧೦

ಸಾಹಿತ್ಯ ೧೯೬೫ . .

ಸಂ. ಕೆ. ರಾಘವೇಂದ್ರರಾಯರು.
ಸಹ ಸಂ. ಎಸ್. ಪದ್ಮನಾಭನಾಯ್ಕ.
ಪ್ರ. ಕೆ. ರಾಘವೇಂದರಾಯರು.
ಮು. ಮೆಜೆಸ್ಟಿಕ್ ಪೆಸ್, ಉಡುಪಿ.
೯೬೬

**ವಿಶಿಷ್ಟಾದ್ವೈತಿ** ಮೈಸೂರು
ಮಾಸ ೨೧x೧೪ ಪು.೨೦

ಶ್ರೀವೈಷ್ಣವ ೧೯೦೮ . .

ಮು. ಕ್ಷೀರಸಾಗರ ಪೆಸ್, ಮೈಸೂರು.
೯೬೭

**ವಿಸ್ತರಣ ವಿಜ್ಞಾನ** ಹಾಸನ
ವಾರ ? ?

ಸಾಹಿತ್ಯ ವಿಜ್ಞಾನ ೧೯೫೪ . .

ಸಂ. ಡಿ. ಬಸವರಾಜ ಅರಸ್
ಪ್ರ. ವಿಸರಣ ವಿಜ್ಞಾನ ಕಾರ್ಯಾಲಯ
೯೬೮

**ವಿಹಾರಿ** ಬೆಂಗಳೂರು
ಮಾಸ ೧೮x೧೨ ಪು.೬೪

ಸಾಹಿತ್ಯ ೧೯೪೮-೪೯ . .

ಸಂ.ಪ. ಟಿ. ಆರ್. ಅಯ್ಯಂಗಾರ್.
೯೬೯

**ವೀಣಾ** ಶಿರ್ವ
ಮಾಸ ೨೧x೧೪ ಪು.೨೬-೪೪

ಸಮ್ಮಿಶ್ರ ೧೯೫೦-೫೮ . .

ಸಂ. ಶಂಕರನಾರಾಯಣರಾಯ (ಹರಿದಾಸ).
ಪ್ರ. ಎಸ್. ಎನ್. ರಾವ್.
ಮು. ಮಂಜುನಾಥ ಪ್ರೆಸ್, ಬೆಳ್ತಂಗಡಿ
೯೭೦

**ವೀರ ಕನ್ನಡಿಗ** ಮುಂಬಯಿ
ತ್ರೈಮಾಸಿಕ ? ?

ಸಾಹಿತ್ಯ/ಸಮ್ಮಿಶ್ರ . . ೧೯೬೭ . .

೯೭೧

**ವೀರ ಕೇಸರಿ** ಬೆಂಗಳೂರು,ಮೈಸೂರು, ಮದ್ರಾಸು,ಮುಂಬಯಿ
ವಾರ,ದಿನ ೩೭x೨೫, ೪೪x೨೮ ಪು ೪

ಸುದ್ದಿ ೧೯೨೮ . .

ಸಂ. ಮದ್ದೂರು ಸೀತಾರಾಮಶಾಸ್ತ್ರಿ, ಎಂ. ರಾಮಮೂರ್ತಿ
ಪ್ರ. ಮೈ. ವೀರಕೇಸರಿ ಕಾರ್ಯಾಲಯ, ಬೆಂಗಳೂರು; ಮೈ. ವೀರಕೇಸರಿ ಕಾರ್ಯಾಲಯ, ಸಾಹುಕಾರಪೇಟೆ, ಮದ್ರಾಸು.
ಮು. ಫಿಜಿಕಲ್ ಕಲ್ಚರ್ ಪ್ರಿಂಟಿಂಗ್ ಪ್ರೆಸ್; ಅನಂತರ ಶ್ರೀನಿವಾಸ ಮುದ್ರಣ, ಬೆಂಗಳೂರು.
ಹೆ.ಮಾ. ಕೇಸರಿ-ಮರಾಠಾ ಮಾದರಿಯ ಪತ್ರಿಕೆ ರಾಜಕೀಯ ಅನ್ಯಾಯಗಳ ಖಂಡನೆ ಉದ್ದೇಶ. ಈ ಪತ್ರಿಕೆಯಿಂದಲೇ ಸೀತಾರಾಮ ಶಾಸ್ತ್ರಿಯವರಿಗೆ "ವೀರಕೇಸರಿ" ಎಂಬ ಉಪನಾಮ ಬಂದಿತು. ಉಗ್ರ ಟೀಕೆಗಳಿಂದಾಗಿ ೭-೨-೧೯೨೯ರಂದು ಅವರನ್ನು ಬಂಧಿಸಿ ಪತ್ರಿಕೆ ನಿಲಿಸಿದರು. ೧೯೩೩ರಲ್ಲಿ ಪುನರಾರಂಭ, ೧೯೩೭ರಲ್ಲಿ ಮೈಸೂರಲ್ಲಿ ಕಾಂಗ್ರೆಸ್ ಸ್ಥಾಪನೆ. ಆ ಕಮಿಟಿಯಲ್ಲಿ ಶಾಸ್ತ್ರಿಗಳು ಸಿದ್ದಲಿಂಗಯ್ಯ, ತಗಡೂರು ರಾಮಚಂದ್ರರಾಯರು ('ಅರ್ಥಸಾಧಕ' ಪತ್ರಿಕೆಯ ಸಂಪಾದಕರು) ಇದ್ದರು. ಆಳರಸರ ವಿರುದ್ಧ ಪತ್ರಿಕಾ ಮಾಧ್ಯಮದಿಂದ ಅಪ್ರತಿಮ ಹೋರಾಟ. ಶಾಸ್ತ್ರಿಯವರ ಮಗ ಲಕ್ಷ್ಮೀನಾರಾಯಣ ಪತ್ರಿಕೆ ನಡೆಸುತ್ತಿದ್ದರು. ಪತ್ರಿಕೆಗೆ ಮುಟ್ಟುಗೋಲು ಹಾಕಿದ ನಂತರ ಮದ್ರಾಸಕ್ಕೆ ಹೋಯಿತು. ಚೆನ್ನಕೇಶವ ಅಯ್ಯಂಗಾರರು ಸಾಪ್ತಾಹಿಕವಾಗಿ ನಡೆಸಿದರು. ಅಲ್ಲಿಯೂ ಸ್ಥಗಿತವಾಗಲು, ಶಾಸ್ತ್ರಿಗಳು ಮುಂಬಯಿಯಲ್ಲಿ ನಡೆಸಿದರು. ಸಂಪಾದಕರನ್ನು ಸರಕಾರ ಬಂಧಿಸಿತು. ವೀರಕೇಸರಿ ಎನ್ನುವುದು ಅನ್ವರ್ಥಕವೆನಿಸಿತು.
೯೭೨

**ವೀರಭಾರತಿ** ಬೆಂಗಳೂರು
ಮಾಸ,ಪಕ್ಷ ? ಪು.೨೪

ಜೈನ ೧೯೫೮-೮೨ . .

ಸಂ.ಪ. ಎಚ್. ಎಸ್. ನೇಮಿನಾಥಯ್ಯ.
ಮು. ಪದ್ಮಾಂಬಾ ಪ್ರಿಂಟರ್ಸ್, ಬೆಂಗಳೂರು; ಆರ್.ಗೌರಿ ಪ್ರೆಸ್.
ಹೆ.ಮಾ. ಗೌರವ ಸಂಪಾದಕರಾಗಿ ಡಿ. ಪದ್ಮನಾಭ ಶರ್ಮ, ಭುವನಹಳ್ಳಿ ಇದ್ದರು ದೇವೇಂದ್ರಕುಮಾರ ಪಾಟೀಲ, ಜಿ. ಬ್ರಹ್ಮಪ್ಪ ಸಂಪಾದಕ ಮಂಡಳಿಯಲ್ಲಿದ್ದರು. ಎಂ. ಜಿ. ಶಹಾ ಉಗಾರ ಅವರು ಸಂರಕ್ಷಕರಾಗಿದ್ದರು. ೧೯೮೨ರ ವೇಳೆಗೆ ಪಕ್ಷಪತ್ರಿಕೆಯಾಯಿತು.
೯೭೩

**ವೀರಭೂಮಿ** ಉಡುಪಿ
ಮಾಸ ೨೦x೧೪ ಪು.೫೬

ಸಾಹಿತ್ಯ/ಸಮ್ಮಿಶ್ರ ಆಗ.೧೯೬೩-೬೭ . .

ಸಂ.ಪ ಎಸ್. ವೆಂಕಟರಾಜ್.
ಮು. ಮೆಜೆಸ್ಟಿಕ್ ಪ್ರೆಸ್, ಉಡುಪಿ.
೯೭೪

**ವೀರಮಾತೆ** ಧಾರವಾಡ
ಮಾಸ ೨೧x೧೪, ೨೫x೧೮ ಪು.೩೪,೨೦

ಮಹಿಳಾಭಿವೃದ್ಧಿ ೧೯೫೨-೬೮ . .

ಸಂ. ಸರೋಜಿನಿ ಮಹಿಷಿ (೧೯೫೨-), ಕುರುಡಿ ನಾರಾಯಣರಾಯರು (೧೯೫೮), ರಾಮರಾವ್ ಕುಲಕರ್ಣಿ (೧೯೬೨)
ಪ್ರ. ಲ. ರಾ. ಪುರಾಣಿಕ, ವನಿತಾ ಸೇವಾ ಸಮಾಜ.
ಮು. ಸರಸ್ವತೀ ಮುದ್ರಣಾಲಯ, ವನಿತಾ ಪ್ರಿಂಟಿಂಗ್ ಪ್ರೆಸ್. ಧಾರವಾಡ.
೯೭೫

**ವೀರಮುಸ್ಲಿಂ** ಹಳಿಯಾಳ
ಮಾಸ ? ?
ಮುಸಿಂ ೧೯೩೦-೩೫
ಸಂ.ಪ. ಇಮಾಮುದೀನ ಕಿಲ್ಲೇದಾರ.
ಹೆ.ಮಾ. ಎರಡು ವರ್ಷ ನಡೆದ ಪತ್ರಿಕೆ ಮುಂದೆ ೧೯೩೫ರಿಂದ 'ಮುಸಿಂ ಸಂದೇಶ' ಹೆಸರಿನಿಂದ ನಡೆಯತೊಡಗಿತು.
೯೭೬

**ವೀರವಾಣಿ** ಹುಬ್ಬಳ್ಳಿ
ಮಾಸ ೨೧x೧೪ ಪು.೩೬
ವೀರಶೈವ ೧೯೩೭-
ಸಂ. ಗಂಗಾಧರಪ್ಪ ಶಿವಪೂಜೆಪ್ಪ ಹೊದ್ಲೂರು.
ಹೆ.ಮಾ. ಸಂಪಾದಕ ಮಂಡಳಿಯಲ್ಲಿ ಸಿದ್ಧರಾಮಪ್ಪ ಪಾವಟೆ, ವೀರಪ್ಪ ಬಿಳಿ ಅಂಗಡಿ, ಅನ್ನದಾನೀಶ್ವರ ವಿರಕ್ತಮಠ, ವೀರಪ್ಪ ಕಾಠವೇಕರ, ವೀರೇಶ್ವರ ಮುಂತಾದವರು ಇದ್ದರು.
ಧ್ಯೇಯವಾಕ್ಯ: "ಸತ್ಯವಾಣಿಯು ವೀರವಾಣಿಯು। ನಿತ್ಯವಾಣಿಯು ವೀರವಾಣಿಯು। ವ್ಯತ್ಯುಹರ ಶಿವಶರಣವಾಣಿಯು ವೀರವಾಣಿ ಇದು ಕತ್ತಲೆಯ ಕಳೆಯಲ್ಕೆ ಮುತ್ತಿನ। ತತ್ವವನು ಬೀರಲ್ಕೆ ಲೋಕದೊ। ಉತ್ತಮರ ನೆರೆಯಲ್ಕೆ ಕಹಳೆ ವೀರವಾಣಿ ಇದು ।।".
೯೭೭

**ವೀರವಾಣಿ II** ಹುಬ್ಬಳ್ಳಿ
ದಿನ ೧೫x೧೭ ಪು.೪
ಸುದ್ದಿ ೧೯೪೭-
ಸಂ.ಪ್ರ. ಗುದ್ದೆಪ್ಪ ಹಳ್ಳಿಕೇರಿ.
೧೭೮

**ವೀರವಾಣೀ** ಸೊಲ್ಲಾಪುರ
ಮಾಸ ೨೧x೧೪ ಪು.೩೨
ಜೈನ ೧೯೩೭- -೪೦
ಸಂ. ಲೋಕನಾಥ ಶಾಸ್ತ್ರಿ ಧರಣೇಂದ್ರ ಕುಮಾರ ಶಾಸ್ತ್ರಿ ಪಂಡಿತ ಭುಜಬಲಶಾಸ್ತ್ರಿ, ಆರಾ.
ಪ. ವರ್ಧಮಾನ ಶಾಸ್ತ್ರಿ ಸೊಲ್ಲಾಪುರ.
ಮು. ಕಲ್ಯಾಣ ಪವರ ಪ್ರಿಂಟಿಂಗ್ ಪ್ರೆಸ್,
ಹೆ.ಮಾ. ಶ್ರೀ ಸ್ವಸ್ತಿ ಲಕ್ಷ್ಮೀಸೇನ ಪಟ್ಟಾಚಾರ್ಯ ಕೊಲ್ಹಾಪುರ ಸ್ವಾಮಿಗಳು ಆಶಯದಾತರಾಗಿದರು.
ಮೂಡಬಿದ್ರೆ, ಮುಂಬಯಿ, ಆರಾಗಳಲ್ಲಿ ಪತ್ರಿಕೆಯ ಉಪಶಾಖೆಗಳಿದ್ದವು.
೯೭೯

**ವೀರವಿಲಾಸಿನಿ** ಬೆಂಗಳೂರು
ವಾರ ೨೪x೧೮ ಪು.೮
ಸಾಹಿತ್ಯ/ಹಾಸ್ಯ-ಮಿಶ್ರ ೧೯೨೧ . .
೯೮೦

**ವೀರಶೈವ** ಬೆಂಗಳೂರು
ಮಾಸ ೨೦x೧೩ ಪು.೨೪-೩೨
ವೀರಶೈವ ೧೯೩೫-೪೨ . .
ಸಂ.ಪ್ರ. ಪಂಡಿತ ಸಿ ಸಂಗಯ್ಯ.
ಧ್ಯೇಯವಾಕ್ಯ: "ಶ್ರೀದಜತಗಿರೀಶನ ದಯದಲಿ । ವೀರಶೈವ ಸುನಾಮ ಪತ್ರಿಕೆ । ಭೂರಿ ವಿಷಯಗಳಿಂದ ತುಳುಕುತೆ ವಿವಿಧ ವಾರ್ತೆಗಳಾ । ಬೀರುವದು ಸದ್ಧರ್ಮ ಬೋಧೆಯ। ಸಾರುವುದು ಸನ್ಮಾರ್ಗವನು ಸಲೆ । ತೋರುವದು ಸುಜನಾಳಿ ಸಂತಸಬಡುವ ಪರಿಯಂತೆ ।"
೯೮೧

**ವೀರಶೈವ ಚಂದ್ರಿಕೆ** ಶಿರಹಟ್ಟಿ-ಗದಗ
ಮಾಸ ? ?
ವೀರಶೈವ ೧೯೩೪ . .
ಸಂ.ಪ್ರ. ಆಲೂರು ಮುರುಗೇಂದ್ರ ಶೆಟ್ಟಿ
ಹೆ.ಮಾ. ಶಿರಹಟ್ಟಿಯ ಫಕೀರೇಶ್ವರ ಸ್ವಾಮಿಗಳ ಕೃಪಾಶ್ರಯವಿತ್ತು.
೯೮೨

**ವೀರಶೈವ ದರ್ಪಣ** ಮೈಸೂರು
ಮಾಸ ? ?
ವೀರಶೈವ ೧೯೨೪ . .
ಸಂ.ಪ್ರ. ಶಿರಸಿ ಗುರುಶಾಂತಶಾಸ್ತ್ರಿ
೯೮೩

**ವೀರಶೈವ ಧರ್ಮತರಂಗಿಣಿ** ಧಾರವಾಡ
ಮಾಸ ೨೧x೧೪ ಪು.೨೪
ಧಾರ್ಮಿಕ/ವೀರಶೈವ ೧೯೧೧ . .
ಸಂ.ಪ. ಎಚ್. ಎಸ್. ಶಿವಲಿಂಗಶಾಸ್ತ್ರಿ
೯೮೪

**ವೀರಶೈವ ಧರ್ಮಸಂಗ್ರಹ** ಬೆಂಗಳೂರು
ಮಾಸ ೨೦x೧೪ ಪು.೨೪

ವೀರಶೈವ ೧೯೨೩ . .
ಸಂ.ಪ. ವೀರಭಶಾಸ್ತ್ರೀ, ಮಾಗಡಿ.
ಮು. ಮಾಡಲ್ ಮುದ್ರಾಕ್ಷರ ಶಾಲಾ.
**೯೮೫**

**ವೀರಶೈವ ಧರ್ಮ ಸಂಜೀವಿನೀ** ಬೆಂಗಳೂರು
ಮಾಸ ೨೦x೧೪ ೧/೨ ಪು.೨೪

ವೀರಶೈವ ೧೯೨೫ . .
ಸಂ. ಎಸ್. ಎಸ್. ಬಸವಪಭಂಯ್ಯ
**೯೮೬**

**ವೀರಶೈವ ಧರ್ಮಸಾಮ್ರಾಜ್ಯ** ಕಮತನೂರು (ಸಂಕೇಶ್ವರ)
ಮಾಸ ೨೦x೧೪ ಪು.೪೦

ವೀರಶೈವ ೧೯೨೬ . .
ಸಂ. ರಾಚಯ್ಯಸ್ವಾಮಿ ಲಿಂಗಯ್ಯ ಸ್ವಾಮಿ ಹಿರೇಮಠ.
ಹೆ.ಮಾ. ಕೆ. ಎ. ಪಾಟೀಲ, ಎಸ್. ವಿ. ಪಾಟೀಲ. ಸದಾಶಿವ ಕುಲಕರ್ಣಿ, ವಿ. ಪಿ. ಪಾಟೀಲ ಮುಂತಾದವರು ಲೇಖಕ ಬಳಗದಲ್ಲಿದ್ದರು.
ಸಂಕೇಶ್ವರ (ಬೆಳಗಾವಿ) ಕಮತನೂರಿನಿಂದ ಹೊರಟು, ಅನಿಶ್ಚಿತ ಕಾಲ ಬಾಳಿತು.
**೯೮೭**

**ವೀರಶೈವ ಪ್ರಕಾಶಿಕೆ** ಹರಪನಹಳ್ಳಿ
ಮಾಸ ೨೧x೧೪ ?

ವೀರಶೈವ ೧೯೧೯ . .
ಸಂ.ಪ. ಟಿ ಎಚ್. ಎಂ. ಸಿದ್ಧಾಂತಿ
ಮು. ಶಿವಾನಂದ ಮುದ್ರಾಲಯ, ಹರಪನಹಳ್ಳಿ.
**೯೮೮**

**ವೀರಶೈವ ಪ್ರಭಾಕರ** ಮದರಾಸು
ಮಾಸ ೨೪x೨೦ ಪು.೨೪

ವೀರಶೈವ ೧೯೦೬ . .
ಸಂ.ಪ. ಎಸ್. ಸಿ. ಚನ್ನವೀರಪ್ಪ
ಮು. ಡಿವೈನ್ ಮುದ್ರಾಲಯ.
ಹೆ.ಮಾ. ವೀರಾಗಮ ಕಾವ್ಯ ಪ್ರಕಟವಾಗಿತ್ತು. ಜಹೀರುದ್ದೀನ ಬಾಬರ ಚರಿತೆ, ಅಂತರಾದಿ ಶ್ಲೋಕ ಮುಂತಾದವು ಪ್ರಕಟಿತವಾದವು.
**೯೮೯**

**ವೀರಶೈವ ಮತ ಪ್ರಕಾಶಿಕೆ** ಮೈಸೂರು
ಮಾಸ ೨೧x೧೨ ೧/೨ ಪು.೨೪
ವೀರಶೈವ ೧೮೯೧-೯೨
ಸಂ. ಪಿ. ವಿ. ರುದ್ರಪ್ಪ.
ಮು. ವೀರಶೈವ ಮತಪ್ರಕಾಶಿಕಾ ಮುದ್ರಾಲಯ.
ಹೆ.ಮಾ. ಸಟೀಕ 'ಬಸವೇಶ ವಿಜಯ' ಧಾರಾವಾಹಿಯಾಗಿ ಪ್ರಕಟಿತ.
**೯೯೦**

**ವೀರಶೈವ ಮತಾದರ್ಶ** ಬೆಂಗಳೂರು
ವಾರ ? ?

ವೀರಶೈವ ೧೯೯೬ . .
ಸಂ. ಬಿ. ಮುನಿಯಪ್ಪ
ಪ. ಬಿ. ಬಸಪ್ಪ
**೯೯೧**

**ವೀರಶೈವ ವಿಜಯ** ಹುಬ್ಬಳ್ಳಿ
ಮಾಸ ೨೪x೧೮ ಪು.೩೨

ಧಾರ್ಮಿಕ ೧೯೧೦ . . ೪೬ . .
ಸಂ. ಮಂಜಪ್ಪ ಹರ್ಡೇಕರ
**೯೯೨**

**ವೀರಶೈವಾಚಾರದರ್ಶನ** ಹರಪನಹಳ್ಳಿ
ಮಾಸ ? ?

ವೀರಶೈವ ೧೯೧೮ . .
ಸಂ. ಹೊಳೆ ಬಸವಶಾಸ್ತ್ರಿ
**೯೯೩**

**ವೃತ್ತ** ಮೈಸೂರು
ಮಾಸ ೨೧x೧೪ ಪು.೪೦

ಸಾಹಿತ್ಯ/ಸಮ್ಮಿಶ್ರ ನ.೧೯೭೧ . .
ಸಂ. ವಿ. ಎನ್. ಲಕ್ಷ್ಮೀನಾರಾಯಣ
ಸಂಚಾಲಕ. ಶ್ರೀನಿವಾಸ ಪುಟ್ಟಿ.
ಪ. ನುಡಿ ಪ್ರಕಾಶನ, ಮೈಸೂರು.
ಮು. ಯು. ಎಸ್. ಪ್ರಿಂಟರ್ಸ್, ಮೈಸೂರು.
**೯೯೪**

**ವೃತ್ತಾಂತ ಚಿಂತಾಮಣಿ** ಮೈಸೂರು,ಬೆಂಗಳೂರು
ವಾರ ೫೧x೩೩ ಪು.೪
ಸುದ್ದಿ/ಸಮ್ಮಿಶ್ರ ೧೮೮೫-೧೯೦೮-
. . ೧೯೧೨ . .
ಸಂ. ಎಂ. ವೆಂಕಟಕೃಷ್ಣಯ್ಯ
ಸಹ. ಸಂ ಎಸ್. ರಾಮನಾಥಯ್ಯ, ಡಿ. ವೆಂಕಟರಾಮಯ್ಯ
ದ್ವೈವಾರಿಕೆ.
ಪ. ವೃತ್ತಾಂತ ಚಿಂತಾಮಣಿ ಕಾರ್ಯಾಲಯ.
ಹೆ.ಮಾ. ಮೈಸೂರು ತಾತಯ್ಯನವರ ಪ್ರಥಮ ಪತ್ರಿಕೆಯಿದು. ೧೮೯೯ರಲ್ಲಿ ಸಾಪ್ತಾಹಿಕ ನಿಂತಿತು. ದೊಡ್ಡ ಅಳತೆಯ ೪ ಪುಟಗಳ "ಸಾಪ್ತಾಹಿಕ", "ಸಾಧ್ವಿ" ಹೊರಡಿಸತೊಡಗಿದರು. ಆಡಳಿತ ವರ್ಗದವರ ಕುರಿತಾದ ಟೀಕೆ-ಟಿಪ್ಪಣಿ, ಕಾಂಗ್ರೆಸ್ ಮೂಲಕ ದೇಶಪ್ರೇಮ ಪ್ರಕಟಗೊಳಿಸುತ್ತಿದ್ದರು. ಮಹಾರಾಜರ ವಿಷಯದಲ್ಲಿ ಗೌರವವನ್ನಿಟ್ಟುಕೊಂಡ ಪತ್ರಿಕೆ. ೧೯೦೮ರ ಆಗಸ್ಟ್‌ನಲ್ಲಿ ಪತ್ರಿಕಾ ಶಾಸನಕ್ಕೆ ಗುರಿಯಾಗಿತ್ತು. ನಂತರ ಮತ್ತೆ ಪ್ರಾರಂಭವಾಗಿ ೧೯೧೨ರಲ್ಲಿ ಸ್ಥಗಿತಗೊಂಡಿತು.
೯೯೫

**ವೃತ್ತಾಂತ ಪತ್ರಿಕೆ** ಮೈಸೂರು
ವಾರ ೪೪x೨೮ ಪು.೮
ಸುದ್ದಿ/ಕ್ರೈಸ್ತಮತ ೧೮೮೬-೧೯೪೦
ಸ್ಥಾ. ಹೆನಿ ಹೇಗ್
ಸಂ. ಎಚ್. ಗಲಿಫೋರ್ಡ್
ಪ್ರ. ವೆಸ್ಲಿಯನ್ ಮಿಶಿನ್ ಸಂಸ್ಥೆ ಮೈಸೂರು. ರೇ.ಎಚ್. ಗಲಿಫೋರ್ಡ್.
ಮು. ವೆಸ್ಲಿಯನ್ ಮಿಶಿನ್ ಪ್ರೆಸ್ (ಮೈಸೂರು).
ಹೆ.ಮಾ. ಕ್ರೈಸ್ತ ಮಿಶಿನರಿಗಳು ನಡೆಸಿದರು. ಹಿತ-ಮಿತವಾದ ಬರೆಹ, ಸುಜ್ಞಾನ ಸೂರ್ಯೋದಯ, ನೈತಿಕ ಸಂಭಾಷಣೆ ಭಾರತ ಸುದ್ದಿ, ಜಾಗತಿಕ ಸುದ್ದಿಯೂ ಪ್ರಕಟವಾಗುತ್ತಿತ್ತು. ೨ನೇ ಮಹಾಯುದ್ಧದ ಕಾಲದ ವರೆಗೆ ಮಾತ್ರ ನಡೆದಂತೆ ಕಂಡುಬರುತ್ತದೆ.
೯೯೬

**ವೃತ್ತಾಂತ ಮಂಜರೀ** ಶಿವಮೊಗ್ಗ
ವಾರ ? ?
ಸುದ್ದಿ/ಸಮ್ಮಿಶ್ರ ೧೮೯೮ . .
ಸಂ. ಬ್ಯಾಡಗಿ ಶೇಷಗಿರಿರಾವ್
೯೯೭

**ವೃತ್ತಾಂತ ರತ್ನಾಕರ** ಚಿತ್ರದುರ್ಗ
ವಾರ ? ?
ಸುದ್ದಿ/ಸಮ್ಮಿಶ್ರ ೧೯೧೮-೫೬
ಸಂ. ಎಂ. ಬಿ. ಕೃಷ್ಣರಾವ್
೯೯೮

**ವೇದವಾಹಿನೀ** ಬೆಂಗಳೂರು
ಮಾಸ ? ?
ಸನಾತನಧರ್ಮ ೧೯೧೧ . .
ಸಂ.ಪ. ಆರ್. ವೆಂಕಟರಾಮ ಶಾಸ್ತ್ರಿ, ಜಿ. ನಾರಾಯಣ ಶಾಸ್ತ್ರಿ
ಹೆ.ಮಾ. ದೇವಿ ಭಾಗವತ, ಪುರಾಣಾದಿ ಅನುವಾದಗಳಿವೆ.
೯೯೯

**ವೇದ ಸಂದೇಶ** ಮಂಗಳೂರು
ಮಾಸ ೨೧ ೧/೨x೧೪ ಪು.೩೬,೪೦
ಸನಾತನಧರ್ಮ ೧೯೨೬-೩೦ . .
ಸಂ. ಧರ್ಮದೇವ ವಾಚಸ್ಪತಿ.
ಪ್ರ. ಎಸ್. ಯು. ರಾಮಚಂದ್ರ.
ಮು. ಕೆನರಾ ಪ್ರಿಂಟಿಂಗ್ ವರ್ಕ್ಸ್, ಮಂಗಳೂರು.
ಹೆ.ಮಾ. ಆರ್ಯ ಸಮಾಜದ ಮುಖಪತ್ರ.
ಧ್ಯೇಯವಾಕ್ಯ: "ಇಂದಂ ವರ್ಧಂತೋ ಅಪ್ತುರಃ ಕೃಣ್ವಂತೋ ವಿಶ್ವಮಾರ್ಯಂ । ಅಪಘ್ನಂತೋ ಅರಾವ್ಣಃ" (ಋಗ್ವೇದವಾಣಿ) ಆತ್ಮಶಕ್ತಿ, ಜ್ಞಾನ ಐಶ್ವರ್ಯಗಳನ್ನು ವರ್ಧಿಸಿರಿ, ಛಲ, ಕಪಟ ವಿರೋಧಗಳನ್ನು ದೂರ ಮಾಡಿರಿ, ಸರ್ವರನ್ನೂ ಆರ್ಯ (ಶ್ರೇಷ್ಠ)ರನ್ನಾಗಿ ಮಾಡಿರಿ ಎಂದಿತ್ತು.
೧೦೦೦

**ವೇದ ಸಂದೇಶ** ಬೆಂಗಳೂರು
ಮಾಸ ೨೪x೧೮ ಪು.೨೦
ಸನಾತನಧರ್ಮ ೧೯೫೮-೫೯
೧೦೦೧

**ವೇದಾರ್ಥ ಪ್ರಕಾಶ** ಬೆಂಗಳೂರು
ಮಾಸ ೨೧x೧೪ ಪು.೨೦
ಸನಾತನಧರ್ಮ ೧೯೧೩ . .
ಮು. ಶಾರದಾ ವಿಲಾಸ ಪ್ರೆಸ್.
೧೦೦೨

**ವೈದ್ಯ ಬಂಧು** ಮೈಸೂರು
ವಾರ ೩೬x೨೫ ಪು.೧೨
ಆಯುರ್ವೇದ ೧೯೩೫-
ಸಂ.ಪ. ಕೆ. ಪಿ. ಪುರಾಣಿಕ
ಮು. (೧)ಪರಿಮಳ ಪ್ರೆಸ್, ಮೈಸೂರು. (೨) ಸಿ. ಎಲ್. ನಾರಾಯಣ, ವಾಣಿ ಪ್ರೆಸ್.
೧೦೦೩

**ವೈದ್ಯ ಸಿಂಧು** ಬೆಂಗಳೂರು
ಮಾಸ ೨೦x೧೪ ಪು.೧೬
ಆಯುರ್ವೇದ ೧೯೦೫-೨೦ . .
ಸಂ.ಪ. ವಿ. ಡಿ. ಪಂಡಿತ.
ಮು. ಎಸ್. ಡಿ. ಎಲ್. ಪ್ರೆಸ್, ಬೆಂಗಳೂರು.
ಹೆ.ಮಾ. ಈ ಪತ್ರಿಕೆಯಲ್ಲಿ ಸುಮಾರು ೫೦ ಗ್ರಂಥಗಳು ಪ್ರಕಟವಾದವು. ಪಂಡಿತ ನಿಘಂಟು, ಯುನಾನಿ ನಿಘಂಟು, ಯುನಾನಿ ವೈದ್ಯ ಸಂಗ್ರಹ ಮುಂತಾದವು ಧಾರಾವಾಹಿಯಾಗಿ ಪ್ರಕಟಗೊಂಡವು. ಆಯುರ್ವೇದ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ ಪತ್ರಿಕೆಯಲ್ಲಿ ಒಂದು.
೧೦೦೪

**ವೈದಿಕ ಮಿತ್ರ** ಮಂಗಳೂರು
ತ್ರೈಮಾಸ,ಮಾಸ,ಪಕ್ಷ ೨೧x೧೮ ಪು.೧೬-೩೨
ಕ್ರೈಸ್ತ ೧೯೧೦-೧೩ . .
ಪ. ಬಾಸೆಲ್ ಮಿಶನ್, ಮಂಗಳೂರು.
ಮು. ಬಾಸೆಲ್ ಮಿಶನ್ ಪ್ರೆಸ್
೧೦೦೫

**ವೈದಿಕ ಸಂದೇಶ** ಮಂಗಳೂರು
ಮಾಸ ೨೫x೧೯ ಪು.೩೪
ಸನಾತನಧರ್ಮ ೧೯೨೮ . .
ಸಂ. ವಿದ್ಯಾವಾಚಸ್ಪತಿ ಧರ್ಮದೇವ.
ಪ. ಆರ್ಯ ಸಮಾಜ.
೧೦೦೬

**ವೈದಿಕ ಸನಾತನ ಧರ್ಮ** ಶಿವಮೊಗ್ಗ
ಮಾಸ ೧೮x೧೪ ಪು.೨೪
ಸನಾತನಧರ್ಮ ೧೯೫೧-
ಸಂ. ಬಿ. ಎಂ. ಸುಬ್ರಹ್ಮಣ್ಯ ಜೋಯಿಸ.
೧೦೦೭

**ವೈದಿಕ ಸನಾತನ ಧರ್ಮಪತ್ರಿಕಾ** ಬೆಂಗಳೂರು
ಮಾಸ ೨೪x೧೯ ಪು.೧೬
ಸನಾತನಧರ್ಮ ೧೯೪೭ . .
ಸಂ.ಪ. ಬಿ. ಎಂ. ಸುಬ್ರಹ್ಮಣ್ಯ ಜೋಯಿಸ.
ಮು. ಶ್ರೀ ವಿಜಯಲಕ್ಷ್ಮಿ ಪ್ರೆಸ್.
೧೦೦೮

**ವೈಶ್ಯಕುಲ ವರ್ಧಿನಿ** ಬೆಂಗಳೂರು,ಮೈಸೂರು
ಮಾಸ,ಪಕ್ಷ ? ?
ವೈಶ್ಯಕುಲ ೧೯೦೮-೦೯ . .
ಸಂ. ಬಿ. ಸಿ. ಎಸ್. ಗೋಪಾಲಶರ್ಮ
ಪ. ವೈಶ್ಯಕುಲ ವರ್ಧಿನಿ ಸಭಾ, ಬಿಡದಿ.
ಹೆ.ಮಾ ಎರಡನೇ ವರ್ಷದಿಂದ ಪಾಕ್ಷಿಕವಾಗಿ ಬದಲಾಯಿತು. ವೈಶ್ಯಕುಲ ಸಂಬಂಧದ ಪ್ರಥಮ ಪತ್ರಿಕೆ.
೧೦೦೯

**ವೈಶ್ಯಬಂಧು** ಹುಬ್ಬಳ್ಳಿ
ಮಾಸ ೩೧x೨೧ ಪು.೨೬
ಸಾಮಾಜಿಕ/ವೈಶ್ಯಕುಲ ೧೯೬೩-೬೫ . .
ಸಂ.ಪ. ಶಂಕರ ಎಸ್. ಗುತ್ತಲ, ವೆಂಕಟೇಶ ಎಸ್. ಗುತ್ತಲ.
ಮು. ಭಾರತ ಪ್ರೆಸ್, ಹುಬ್ಬಳ್ಳಿ.
೧೦೧೦

**ಶಕ್ತಿ** ಕಾರ್ಕಳ
ಮಾಸ ೨೪x೧೯.೨೪x೧೮ ಪು.೩೨
ಸಾಹಿತ್ಯ/ಸಮ್ಮಿಶ್ರ ೧೯೨೬ . .
ಸಂ.ಪ. ಎಂ. ಗೋವರ್ಧನರಾವ್, ಕೆ. ಪಿ. ಕಾಮತ.
ಮು. ಮಾರುತಿ ಪ್ರೆಸ್, ಕಾರ್ಕಳ.
ಧ್ಯೇಯವಾಕ್ಯ: "ಪಗಲ್ ಧರ್ಮಗ್ಲಾನಿಯಪ್ಪುದೋ ಆಗಳ್ ಶಕ್ತಿ ಪುಟ್ಟಲೆಡೆಯಪ್ಪುದು" ಎಂಬ ಮುದ್ದಣನ ಉಕ್ತಿ ಧ್ಯೇಯವಾಕ್ಯವಾಗಿತ್ತು.
೧೦೧೧

**ಶಕ್ತಿ** ಮೈಸೂರು
ಮಾಸ ೧೮x೧೩ ಪು.೪೮

ಸಾಹಿತ್ಯ/ಸಮಿಶ್ರ ೧೯೫೦-೬೩ . .

ಸಂ.ಪ. ಎಲ್ ವಿ. ಕಾವೇರಮ್ಮ.
ಮು. ಹಿಂದುಸ್ತಾನ ಪ್ರೆಸ್.
ಹೆ.ಮಾ. ಸು. ರಂ. ಎಕ್ಕುಂಡಿ, ಪು. ತಿ. ನರಸಿಂಹಾಚಾರ್, ಗೋಪಾಲಕೃಷ್ಣ ಅಡಿಗ, ಬಿ. ಹೆಚ್. ಶ್ರೀಧರ, ಮುಗಳಿ, ಅ. ನ. ಕೃಷ್ಣರಾಯ ಮುಂತಾದವರ ಲೇಖನಗಳು ಪ್ರಕಟವಾಗಿವೆ.
೧೦೧೨

**ಶಕ್ತಿ** ಮಡಿಕೇರಿ
ದಿನ ೫೦x೩೭, ೨೩x೨೧, ೫೧x೩೮ ಪು.೨,೪

ಸುದ್ದಿ ೧೯೫೭ . .

ಸಂ.ಪ್ರ. ಬಿ. ಎಸ್. ಗೋಪಾಲಕೃಷ್ಣ
ಮು. ಉದಯ ಪ್ರೆಸ್, ಶಕ್ತಿ ಪವರ ಪ್ರೆಸ್, ಮಡಿಕೇರಿ.
ಹೆ.ಮಾ. ೧೯೬೧ರಿಂದ ತನದೇ ಆದ ಶಕ್ತಿ ಪ್ರೆಸ್ ಹೊಂದಿತ್ತು. ಹುತ್ತರಿ ವಿಶೇಷಾಂಕವನ್ನು ಹೊರಡಿಸುತ್ತಿತ್ತು. ಸಂಪಾದಕರು ರಾಜ್ಯದ ಚಿಕ್ಕ ಪತ್ರಿಕಾ ಒಕ್ಕೂಟದ ಅಧ್ಯಕ್ಷರಾಗಿದ್ದರು.
೧೦೧೩

**ಶರಣತತ್ವ** ವಿಜಾಪುರ
ಮಾಸ ೨೧x೧೪ ಪು.೨೪

ವೀರಶೈವ ೧೯೬೨-೬೫ . .

ಸಂ. ವೀರಪ್ಪ ದುಂಡಪ್ಪ ವಿಜಾಪುರ.
೧೦೧೪

**ಶರಣಮಾರ್ಗ** ವಿಜಾಪುರ
ತ್ರೈಮಾಸ ೧೯ ೧/೨x೧೪ ಪು.೪೮
ವೀರಶೈವ ೧೯೫೬-?
ಸಂ. ಶಿವಾನಂದ ಲಿಂಗರಾಜ ಬರಗೂರು.
೧೦೧೫

**ಶರಣವಾಣಿ** ಮೈಸೂರು
ಮಾಸ ೨೨x೧೩ ೧/೨ ಪು.೪೦

ವೀರಶೈವ ೧೯೩೮-೫೧ . .

ಸ ಎಚ್. ಗಂಗಾಧರಯ್ಯ.
ಪ್ರ. ಕೆ. ಎಸ್. ಎಸ್. ಶಾಲಾ ವಿದ್ಯಾರ್ಥಿ ಸಂಘ.
ಹೆ.ಮಾ. ಸುತ್ತೂರು ಸ್ವಾಮಿಗಳ ಆಶ್ರಯವಿತ್ತು.
೧೦೧೬

**ಶರಣ ಸಂದೇಶ** ಹುಬ್ಬಳ್ಳಿ, ಆಲಮಟ್ಟಿ
ವಾರ,ಪಕ್ಷ ೧೮x೧೨ ಪು.೪೪
ವೀರಶೈವ ೧೯೩೧-೪೭
ಸಂ.ಪ. ಮಂಜಪ್ಪ ಹರ್ಡೇಕರ.
ಹೆ.ಮಾ. ಕೆಲಕಾಲ ಹುಬ್ಬಳ್ಳಿಯಲ್ಲೂ ಪ್ರಕಟವಾಯಿತು. ಹರಿತ, ನ್ಯಾಯನಿಷ್ಠುರವಾದ ಬರೆಹಗಳಿದ್ದವು.
೧೦೧೭

**ಶರಣ ಸಾಹಿತ್ಯ** ಬೆಂಗಳೂರು
ಮಾಸ ೨೧x೧೪ ಪು.೬೪,೩೨

ವೀರಶೈವ ೧೯೩೭-೭೨ . .

ಸಂ.ಪ. ಬಿ. ಶಿವಮೂರ್ತಿ ಶಾಸ್ತ್ರಿ.
ಮು. ಮಾಡಲ್ ಮುದ್ರಾಕ್ಷರ ಶಾಲೆ.
ಹೆ.ಮಾ. ಹುಲಕಂಠೀಮಠ ತುಮಕೂರು, ಎಚ್. ಎಸ್. ರೇಣುಕಾಪ್ರಸಾದ್ ಮುಂತಾದವರ ಸಹಾಯ, ದೀರ್ಘಕಾಲ ಬಾಳಿದ ಶ್ರೇಷ್ಠಮಟ್ಟದ ವೀರಶೈವ ಪತ್ರಿಕೆ. ವೃದ್ಧಾಪ್ಯದ ಕಾರಣವಾಗಿ ಶಾಸ್ತ್ರಿಗಳು ಪತ್ರಿಕೆ ನಿಲ್ಲಿಸಿದರು.
೧೦೧೮

**ಶರಾವತಿ** ಶಿವಮೊಗ್ಗ
ವಾರ ೩೭x೨೫ ಪು.೪

ಸುದ್ದಿ/ಸಮ್ಮಿಶ್ರ ೧೯೬೩ . .

ಸಂ.ಪ್ರ. ಎಚ್. ಆರ್. ಮಲ್ಲಾರಾಧ್ಯ
ಮು. ಕೃಷ್ಣ ಮುದ್ರಣ; ಶರಾವತಿ ಪ್ರಿಂಟರ್ಸ್, ಬೆಂಗಳೂರು.
೧೦೧೯

**ಶರೀರ ವ್ಯಾಯಾಮ** ಬೆಂಗಳೂರು
ಮಾಸ ? ?

ಆರೋಗ್ಯ ೧೯೧೧ . .

ಸಂ.ಪ್ರ. ಎಂ. ವಿ. ಕೃಷ್ಣರಾವ್.
ಮು. ನಿರ್ದೇಶಕರು ಫಿಸಿಕಲ್ ಕಲ್ಚರ್ ಇನ್‌ಸ್ಟಿಟ್ಯೂಟ.
೧೦೨೦

**ಶಾಂತಿ** ಹಾಸನ
ವಾರ ? ?

ಸುದ್ದಿ/ಪ್ರಾದೇಶಿಕ ೧೯೫೪ . .

ಸಂ. ಎಂ. ಸಿ. ನರಸಿಂಹ ಶಾಸ್ತ್ರಿ
೧೦೨೧

**ಶಾಂತಿ ಸಂದೇಶ** ಹುಬ್ಬಳ್ಳಿ
ಮಾಸ ? ?

ಮುಸ್ಲಿಮ್ ೧೯೪೯ . .

೧೦೨೨

**ಶಾಂತಿ ಸಂದೇಶ** ಗದಗ
ಮಾಸ ೧೮x೧೨ ಪು.೪೦

ಸಾಹಿತ್ಯ/ಧಾರ್ಮಿಕ ೧೯೫೬-೫೭ . .

ಸಂ.ಪ್ರ. ಎಂ. ಬಿ. ಜಿ. ಬರದೂರ.
ಮು. ಶ್ರೀ ಶಂಕರನಾರಾಯಣೀ ಮುದ್ರಣ, ಗದಗ.
೧೦೨೩

**ಶಾರದಾ** ಬೆಂಗಳೂರು
ಮಾಸ ೨೧x೧೩ ಪು.-೧೬,೪೮
ಸನಾತನಧರ್ಮ ೧೯೧೦-
ಸಂ. ಮೋಟಗಾನಹಳ್ಳಿ ರಾಮಶೇಷ ಶಾಸ್ತ್ರಿ
ಪ. ದೊಡ್ಡಬೆಲೆ ನಾರಾಯಣ ಶಾಸ್ತ್ರಿ, ಶ್ರೀ ಶಿವಗಂಗಾ ಮಠ, ಬೆಂಗಳೂರು.
ಮು. ಐರಿಷ್ ಮುದ್ರಾಶಾಲೆ.
೧೦೨೪

**ಶಾರದಾ** ಮಡಿಕೇರಿ
ಮಾಸ ೧೮x೧೨ ಪು.೨೦

ಶೈಕ್ಷಣಿಕ ಸಾಹಿತ್ಯ ೧೯೩೨-೩೬ . .

ಸಂ. ಬಿ. ಎ. ಬೆಳ್ಳಿಯಪ್ಪ
ಪ. ಬಿ. ಎಸ್. ಕುಶಾಲಪ್ಪ, ಎಂ. ಎಸ್. ಸುಬ್ಬರಾವ್, ನಾಪೋಕ್ಲು,
ಮು. ಕಾವೇರಿ ಪ್ರೆಸ್, ಮಡಿಕೇರಿ.
ಹೆ.ಮಾ. ವಿದ್ಯಾರ್ಥಿ ದ್ವೈಮಾಸಿಕವಾಗಿ ಶಿಕ್ಷಕರ ಸಂಘದ ಆಶ್ರಯದಲ್ಲಿ ನಡೆಯಿತು.
೧೦೨೫

**ಶಾರದಾ** ಬೆಳಗಾವಿ
ಮಾಸ ೨೪x೧೮ ೧/೮ ಪು.೧೬
ಸಾಹಿತ್ಯ/ಸಮ್ಮಿಶ್ರ ಅಗ.೧೯೬೦-೬೨
ಸಂ.ಪ. ಪ್ರಭಾಕರ ಆನಿಗೋಳ
ಮು. ಶಾರದಾ ಪ್ರೆಸ್, ಬೆಳಗಾವಿ.
ಹೆ.ಮಾ. ಕರ್ನಾಟಕ ಯುವ ಜನಾಂಗದ ಮುಖಪತ್ರಿಕೆ.
೧೦೨೬

**ಶಿಕ್ಷಕ ಬಂಧು** ಹುಬ್ಬಳ್ಳಿ
ಮಾಸ ? ?

ಶಿಕ್ಷಣ ೧೯೩೪ . .

ಸಂ.ಪ. ಸತ್ಯಬೋಧ ರಾಮಚಂದ ಅಡಬಡ್ಡಿ, ನಾಡಕರ್ಣಿ ಭೀಮರಾವ್.
೧೦೨೭

**ಶಿಕ್ಷಕಮಿತ್ರ** ಬೆಳಗಾವಿ
ಮಾಸ ? ?

ಶಿಕ್ಷಣ ೧೯೩೯ . .

ಸಂ.ಪ್ರ. ಜೋಶಿ ಅರವಿಂದರಾಯರು.
೧೦೨೮

**ಶಿಕ್ಷಕವಾಣಿ** ಕಾಪು-ಬಂಟ್ವಾಳ
ಮಾಸ ೨೫x೧೮ ೧/೨ ಪು.೮,೧೨

ಶಿಕ್ಷಣ ೧೯೬೮-೭೭ . .

ಸಂ. ಕೆ. ಭೋಜರಾಜ ಶೆಟ್ಟಿ, ವಗ್ಗ ಗೋಪಾಲಕೃಷ್ಣ ಪ್ರಭು.
ಪ್ರ. ದ. ಕ. ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ.
ಮು. ಜನತಾ ಪವರ ಪ್ರೆಸ್, ವಿಟ್ಲ; ಜವಾದ್ ಮುದ್ರಣ, ಬಂಟ್ವಾಳ.
೧೦೨೯

**ಶಿಕ್ಷಣ** ಮುರಡೇಶ್ವರ(ಉ.ಕ.)
ತ್ರೈಮಾಸ ೨೪x೧೪, ೨೪x೧೮ ಪು.೪೦

ಶಿಕ್ಷಣ ೧೯೬೩ . .

ಸಂ. ಕೆ. ಎ. ಭಟ್ಟ, ವಿ. ರಾಮನ್.
ಪ. ಜನತಾ ವಿದ್ಯಾಲಯ, ಮುರಡೇಶ್ವರ; ಜನತಾ ಅಧ್ಯಾಪಕರ ಸಂಘ.
ಮು. ದತ್ತಾತ್ರಯ ಪ್ರಿಂಟಿಂಗ್ ಪ್ರೆಸ್, ಮುರಡೇಶ್ವರ, ಜನಮುದ್ರಣ, ಅಂಕೋಲಾ.
೧೦೩೦

**ಶಿರಸಿ ಸಮಾಚಾರ** ಶಿರಸಿ
ವಾರ ೩೮x೨೫ ಪು.೪

ಸುದ್ದಿ/ಪ್ರಾದೇಶಿಕ ೧೯೫೬-೧೯೯೫ . .

ಸಂ. ರಾಮಕೃಷ್ಣ ಹೆಗಡೆ; ಎಸ್. ಜಿ. ಹೂತನ್ (೧೯೫೬-೫೯)
ಪ. ಮಲೆನಾಡು ಸೇವಾ ಸಮಿತಿ ಕಾರ್ಯಾಲಯ.
ಮು. ಶಾರದಾ ಮುದ್ರಣಾಲಯ, ಶಿರಸಿ.
ಹೆ.ಮಾ. ಎಸ್. ಜಿ. ಹೂತನ್‌ರವರ ಜೊತೆಗೆ ಪಿ. ಎಸ್. ಭಟ್, ೧೯೫೯-೬೪ರ ವರೆಗೂ, ಹೀಪನಳ್ಳಿ ಸೀತಾರಾಮ ಹೆಗಡೆ ೧೯೭೦ರ ವರೆಗೂ ಸಂಪಾದಕರಾದರು. ಪುನಃ ೧೯೭೦ರಿಂದ ಎಸ್. ಜಿ. ಹೂತನ್ ಸಂಪಾದಕರಾದರು. ಈಗ ಶ್ರೀ ಮಂಜುನಾಥ ಬೆಳಖಂಡ (೧೯೯೫-) ಅವರು ಸಂಪಾದಕರಾಗಿ ಪತ್ರಿಕೆ ನಡೆಸುತ್ತಿದ್ದಾರೆ. ನಾಲ್ಕು ದಶಕಗಳ ಕಾಲ ತಡೆಯಿಲ್ಲದೆ ಪ್ರಸಾರವಾಗುತ್ತಿರುವ ವಾರಪತ್ರಿಕೆ.
೧೦೩೧

**ಶಿವಮೊಗ್ಗ ಗೆಝೆಟ್** ಶಿವಮೊಗ್ಗ
ವಾರ,ದಿನ ೩೬x೨೫ ಪು.೨-೪

ಸುದ್ದಿ/ಪ್ರಾದೇಶಿಕ ೧೯೫೨-೫೬ . .

ಸಂ. ಎಚ್. ರಾಮಕೃಷ್ಣರಾವ್.
ಪ. ಎನ್. ಎಸ್. ಗಿರಿಮಾಜಿ.
ಮು. ಶ್ರೀ ಕೃಷ್ಣ ಮುದ್ರಣಾಲಯ.
ಹೆ.ಮಾ. ಮಹತ್ವದ ಅಂಕಿ ಸಂಖ್ಯೆಗಳನ್ನು ನೀಡಬಲ್ಲ ಪತ್ರಿಕೆಯೆನಿಸಿತ್ತು. ಸಾಪ್ತಾಹಿಕವಾಗಿ ಪ್ರಾರಂಭವಾದ ಪತ್ರಿಕೆ ದೈನಿಕವಾಗಿ ಕೊನೆಗೊಂಡಿತು.
೧೦೩೨

**ಶಿವಮೊಗ್ಗ ವೃತ್ತಾಂತ** ಶಿವಮೊಗ್ಗ
ವಾರ ? ?

ಸುದ್ದಿ/ಪ್ರಾದೇಶಿಕ ೧೯೧೬ . .

ಸಂ.ಪ. ವೆಂಕಪ್ಪಯ್ಯ.
೧೦೩೩

**ಶಿವಮೊಗ್ಗ ವೃತ್ತಾಂತ ಮಂಜರಿ** ಶಿವಮೊಗ್ಗ
ವಾರ ? ?

ಸುದ್ದಿ/ಪ್ರಾದೇಶಿಕ ೧೮೯೮ . .

ಸಂ.ಪ. ಬ್ಯಾಡಗಿ ಶೇಷಗಿರಿಯಪ್ಪ.
ಹೆ.ಮಾ. ಕೆಲವೇ ಕಾಲ ನಡೆದ ಪತ್ರಿಕೆ ಜಿಲ್ಲೆಯ ಪ್ರಥಮ ವಾರಪತ್ರಿಕೆ.
೧೦೩೪

**ಶಿವಾನುಭವ** ವಿಜಾಪುರ
ತ್ರೈಮಾಸ,ಮಾಸ ೨೦x೧೪,೨೪x೧೪ ಪು.೩೬-೪೮

ವೀರಶೈವ ೧೯೨೫-೬೦ . .

ಸಂ.ಪ್ರ. ಫ. ಗು. ಹಳಕಟ್ಟಿ.
ಮು. ಹಿತಚಿಂತಕ ಪ್ರೆಸ್.
ಹೆ.ಮಾ. ಎಸ್. ಎಸ್. ಮಾಳವಾಡ, ಶಿ. ಚೆ. ನಂದಿಮಠ, ಸಿ. ಪಿ. ಲಿಂಗಣ್ಣ, ಹಾವೇರಿಯ ಯಗಟಿ ವಕೀಲ, ಪ್ರೊ. ಕೆ. ಜಿ. ಕುಂದಣಗಾರ ಮುಂತಾದವರು ಲೇಖಕರಾಗಿದ್ದರು. ೨೮-೧೨-೧೯೫೧ರಂದು ಬೆಳ್ಳಿಹಬ್ಬ ಆಚರಿಸಲಾಯಿತು.
೧೦೩೫

**ಶುಭೋದಯ** ಧಾರವಾಡ,ರಾಯಚೂರು
ವಾರ ೫೫x೩೬ ಪು.೪
ಸುದ್ದಿ/ಸಾಹಿತ್ಯ ೧೯೧೮-೨೧
ಸಂ.ಪ. ವಾಸುದೇವಾಚಾರ್ಯ ಕೇರೂರು.
ಮು. ವೈ. ಬಿ. ಜಠಾರ, ಕರ್ನಾಟಕ ಪ್ರಿಂಟಿಂಗ್ ಪ್ರೆಸ್, ಧಾರವಾಡ.
ಹೆ.ಮಾ. ಹಾಸ್ಯಶೈಲಿ, ವ್ಯಂಗ್ಯ ಲೇಖಗಳಿಗಾಗಿ ಪಸಿದ್ಧ ಪತ್ರಿಕೆ. 'ವೀರಶೈವನೂ-ಮಿಶ್ರವಿವಾಹವೂ', ಸತ್ಯಾಗ್ರಹವೂ ಅಪಸರ್ಪಕರು, ರಾಜಕೀಯ ಲೇಖನ ಆಹಾರ ನಿಯಂತ್ರಣ, ಹಿಂದೂ ಸರಕಾರದ ಆದಾಯ-ವ್ಯಯ ಪಂಚಾಂಗವು, ಚಿರೋಲ ಪ್ರಕರಣದಲ್ಲಿ ತಿಲಕರು ೨ ೧/೨ ಲಕ್ಷ ರೂ ವೆಚ್ಚ ಮಾಡಬೇಕಾಯಿತು. ಆ ಸಾಲವನ್ನು ಜನತೆ ಹೊರಲು ಯೋಚಿಸಿ "ತಿಲಕ ಫಂಡ್" ಆರಂಭಿಸಿದ ಸುದ್ದಿ, ಇವೇ ಮುಂತಾದ ಲೇಖಗಳು ಪ್ರಕಟವಾಗಿವೆ.
೧೦೩೬

**ಶೃಂಗಾರ** ಹೊನ್ನಾವರ
ತ್ರೈಮಾಸ,ವಾರ ? ಪು.೪೦
ಯಕ್ಷಗಾನ ೧೯೬೩-೭೪
ಸಂ. ಎಲ್. ಎಸ್. ಶಾಸ್ತ್ರಿ, ನಾಜಗಾರ, ಆರ್. ವಿ. ಭಂಡಾರಿ, ಟಿ. ಎಸ್. ಶಾಸ್ತ್ರಿ, ನಾಜಗಾರ.
ಪ್ರ. ಎಲ್. ಎಸ್. ಶಾಸ್ತ್ರಿ ನಾಜಗಾರ.
ನಿರ್ವಹಣೆ. ಗಂಗಾಧರ ಶಾಸ್ತ್ರಿ ನಾಜಗರ.
ಮು. (೧) ದೀನಬಂಧು ಮುದ್ರಣಾಲಯ; (೨) ಶೃಂಗಾರ ಮುದ್ರಣ, ಹೊನ್ನಾವರ.
ಹೆ.ಮಾ. ಜಿ. ಎಸ್. ಭಟ್, ಸಾಗರ; ಜಿ. ಎಸ್. ಅವಧಾನಿ, ವಿಘ್ನೇಶ್ವರ ಶರ್ಮ ತದ್ದಲಸೆ ಮುಂತಾದವರ ಸಹಾಯ ಸಹಕಾರಗಳಿದ್ದವು.

ತ್ರೈಮಾಸಿಕವಾಗಿ ಪ್ರಾರಂಭವಾಗಿ ನಾಲ್ಕನೇ ವರ್ಷ ಸಾಪ್ತಾಹಿಕವಾಯಿತು. ದಕ್ಷಿಣ ಕನ್ನಡ - ಉತ್ತರ ಕನ್ನಡ ಜಿಲ್ಲೆಗಳಲ್ಲಿ ಯಕ್ಷಗಾನದ ದ್ವಿತೀಯ ಪತ್ರಿಕೆ. ೧೯೬೫ರ ಆಗಸ್ಟದಲ್ಲಿ ಸಾಪ್ತಾಹಿಕ.
೧೦೩೭

**ಶೋಧಕ** (ಕಲ್ಲಚ್ಚಿನದು) ಬೆಳಗಾಂವಿ,ಧಾರವಾಡ
ಮಾಸ ? ಪು.೬೪
ಶಿಕ್ಷಣ/ಸಮ್ಮಿಶ್ರ ೧೯೭೫-೭೮
ಸಂ. ವೆಂಕಟ ರಂಗೋಕಟ್ಟಿ
ಪ. ಮಿತ್ರ ಸಮಾಜ, ಧಾರವಾಡ, ಇತರರು.
ಮು. ಕಲ್ಲಚ್ಚಿನದು.
ಹೆ.ಮಾ. ವಿಚಾರ ಪಚೋದಕವಾದ, ಮೇಲ್ಮಟ್ಟದ ಪತ್ರಿಕೆ. (ವಿವರಗಳಿಗೆ ಲೇಖನ ವಿಭಾಗದಲಿಯ 'ಪತ್ರಿಕೋದ್ಯಮದ ಮೊದಲ ಘಟ್ಟ' ಎಂಬ ಲೇಖವನ್ನೂ 'ಶೋಧಕ'ದ ಸಂಪಾದಕೀಯ ಲೇಖವನ್ನೂ ನೋಡುವುದು.)
೧೦೩೮

**ಶೋಭಾ** ಮಂಗಳೂರು
ತ್ರೈಮಾಸ ೨೪x೧೮ ಪು.೪೦
ಸಾಹಿತ್ಯ/ಸಮ್ಮಿಶ್ರ ೧೯೫೦-೫೪ . .
ಸಂ.ಪ್ರ. ಎಸ್. ಪಿ. ಭಟ್ಟ, ಬೆಳ್ಳಂಗಡಿ ನರಸಿಂಹ ಭಟ್.
ಸಹ ಸಂ. ಟಿ. ಪಿ. ಭಟ್.
ಮು. ಧರ್ಮಪ್ರಕಾಶ ಪ್ರೆಸ್, ಮಂಗಳೂರು.
ಹೆ.ಮಾ. ಪ್ರಬುದ್ಧ ಸಾಹಿತ್ಯ ಪ್ರಕಟಣೆ. ೧೯೫೦ರ ಮಾರ್ಚದಲ್ಲಿ ೧-೨ ವರ್ಷ ನಡೆದು ನಿಂತಿತು. ಪುನಃ ನರಸಿಂಹ ಭಟ್ಟರಿಂದ ಆರಂಭ. ಗೋವಿಂದ ಪೈ, ಎಸ್. ಎಸ್. ಶೇಷಗಿರಿರಾವ್, ಕೈಯ್ಯಾರ ಕಿಞ್ಞಣ್ಣ ರೈ, ಬಿ. ಸುಬ್ಬರಾಯ ಅಡಿಗ ಮುಂತಾದವರ ಲೇಖನಗಳು ಪ್ರಕಟವಾಗಿವೆ.
೧೦೩೯

**ಶೋಭಾ** ಮದ್ರಾಸ
ಮಾಸ ೨೧x೧೪ ಪು.೮೨
ಸಾಹಿತ್ಯ/ಸಮ್ಮಿಶ್ರ ಫೆ.೧೯೬೭ . .
ಸಂ. ಗುರುದತ್ತ.
ಪ. ಇಂದುಮತಿ ಪಬ್ಲಿಕೇಶನ್ಸ್
ಮು. (೧) ಧರ್ಮಪ್ರಕಾಶ ಪ್ರೆಸ್, ಮದ್ರಾಸ, (೨) ಮಲ್ನಾಡ ಪ್ರಿಂಟರ್ಸ್, ಬೆಂಗಳೂರು.
ಹೆ.ಮಾ. ವಾಗ್ಗೋರಾ (ಮದ್ರಾಸ)ದಲ್ಲಿಯ ಕನ್ನಡ ಬಳಗ ಘೋಷಣೆ ನೀಡಿತ್ತು. ಫೆಬ್ರವರಿ ೧೯೬೭ರಿಂದ ಪ್ರಾರಂಭವಾದ 'ಶೋಭಾ' ೬ ನೇ ಸಂಚಿಕೆಗೆ ನಿಂತಿತು. ಪುನಃ ೧೯೬೯ ಫೆಬ್ರವರಿಯಂದು ಪ್ರಾರಂಭವಾಯಿತು.
೧೦೪೦

**ಶ್ರೀ ಅರವಿಂದ ಕರ್ಮಧಾರಾ** ಹುಬ್ಬಳ್ಳಿ
"Sri Aurobindo's Action"
ಮಾಸ ೨೦x೧೩ ೧/೨ ಪು.೧೮
ಅರವಿಂದತತ್ವ ೧೯೭೧ . .
ಸಂ.ಪ. ರಾಜಾರಾಮ ಮೆಹವಾಡೆ.
ಸಹ ಸಂ. ಪ್ರಹ್ಲಾದ ನರೇಗಲ್.
ವ. ಬಸಪ್ಪ ಅಕ್ಕಿ.
ಮು. ಆದರ್ಶ ಪ್ರಿಂಟರ್, ಹುಬ್ಬಳ್ಳಿ.
ಹೆ.ಮಾ. 'ಭಾರತದ ಶ್ರೀಮದೂರ್ಜಿತ ಸತ್ವದ ಕನ್ನಡ ಮಾಸಪತ್ರಿಕೆ' ಎಂದು ಹೇಳಿಕೊಂಡಿದೆ. ಪಾಂಡಿಚೆರಿ ಅರವಿಂದಾಶ್ರಮದ ತತ್ವಗಳ ಮುಖಪತ್ರ.
೧೦೪೧

**ಶ್ರೀಕೃಷ್ಣ** ಮೈಸೂರು
ಮಾಸ ೧೮x೧೩ ೧/೨ ಪು.೨೪
ಧಾರ್ಮಿಕ ೧೯೧೪ . .
ಸಂ. ಬಿ. ಆರ್. ಚಕ್ರವರ್ತಿ.
ಪ. ಶ್ರೀ ಕಾರ್ಯಾಲಯ, ಮೈಸೂರು.
ಹೆ.ಮಾ. ಮೈಸೂರು, ಬೆಂಗಳೂರುಗಳಿಂದ ಏಕಕಾಲಕ್ಕೆ ಪ್ರಕಾಶಿತ.
೧೦೪೨

**ಶ್ರೀಕೃಷ್ಣ** ಬೆಂಗಳೂರು,ಮೈಸೂರು
ಮಾಸ ೧೮x೧೨ ಪು.೨೪
ಧಾರ್ಮಿಕ ೧೯೧೫ . .
ಸಂ.ಪ. ಬಿ. ಸಿ. ಎಸ್. ರಾಜಗೋಪಾಲ ಶರ್ಮ
ಮು. ಕ್ಷೀರಸಾಗರ ಮುದ್ರಾಲಯ.
ಹೆ.ಮಾ. ಚಿಕ್ಕಪೇಟೆ ಗೋಪಾಲಕೃಷ್ಣ ಮತ್ತು ಸ್ವಾಮಿ ಪರಸ್ಪರ ಸಹಾಯಕ ಸಂಘಕ್ಕಾಗಿ [illegible]ವ ಸಂಪಾದಕರು.
ಬೆಂಗಳೂರು-ಮೈಸೂರು ಎರಡೂ ಕಡೆಗಳಿಂದ ಏಕಕಾಲಕ್ಕೆ ಪ್ರಕಾಶಿತಗೊಳ್ಳುತ್ತಿತ್ತು.
೧೦೪೩

**ಶ್ರೀಕೃಷ್ಣ ಪರ್ಯಾಯ ಪ್ರಕಾಶಿನೀ** ಉಡುಪಿ
ಮಾಸ ೧೮x೧೨ ಪು.೨೪
ದ್ವೈತಮತ ೧೯೪೨ . .
ಸಂ. ಕೆ. ರಾಜಗೋಪಾಲಾಚಾರ್ಯ.
ಪ. ಶ್ರೀ ಕೃಷ್ಣಾಪುರ ಮಠ.
೧೦೪೪

**ಶ್ರೀಕೃಷ್ಣರಾಜ ವಿಜ್ಞಾನ ವೈಭವ** ಮೈಸೂರು
ಮಾಸ ೨೫x೧೮ ಪು.೪೮

ಸನಾತನಧರ್ಮ,ವಿಜ್ಞಾನ ೧೯೦೮ . .

ಸಂ. ಆ. ವಿ. ಗುಂಡಾಶಾಸ್ತ್ರಿ
ಪ್ರ. ಮೈ. ವಿಜ್ಞಾನ ವೈಭವ ಪ್ರಕಾಶನ.
ಮು. ಜೆ. ಟಿ. ಎ. ಪ್ರೆಸ್, ಮೈಸೂರು.
ಹೆ.ಮಾ. ಮಹಾರಾಜರ ಕೃಪೆಯಿತ್ತು. ಕೆಲವೇ ಕಾಲ ನಡೆದರೂ ಉತ್ತಮ ಸ್ಥಿತಿಯಲ್ಲಿ ನಡೆಯಿತು. ವಾಸಿಷ್ಠ ರಾಮಾಯಣದ ಕನ್ನಡಾನುವಾದ, ಬ್ರಹ್ಮ ವಿಜ್ಞಾನ ಮುಂತಾದವುಗಳು ಪ್ರಕಟವಾಗಿವೆ.
೧೦೪೫

**ಶ್ರೀಕೃಷ್ಣ ಸಂದೇಶ** ಬಾಗಲಕೋಟ
ಮಾಸ ೧೮x೧೨ ಪು.೪೦

ದ್ವೈತಮತ ೧೯೨೩ . .

ಸಂ.ಪ್ರ. ಶ್ರೀನಿವಾಸಾಚಾರ್ಯ ವಾ. ಬುರ್ಲಿ.
ಮು. ವಿದ್ಯಾರಣ್ಯ ಮುದ್ರಾಮಂದಿರ.
೧೦೪೬

**ಶ್ರೀಕೃಷ್ಣ ಸಂದೇಶ** ಬೆಂಗಳೂರು,ಮದ್ರಾಸ
ಮಾಸ ೨೧ ೧/೨x೧೪ ?
ದ್ವೈತಮತ ೧೯೨೧-೩೨
೪೭-೪೮-

ಸಂ.ಪ್ರ. ಮುದ್ರಾಡಿ ಜನಾರ್ಧನಾಚಾರ್ಯ
ಮು. ಶ್ರೀಕೃಷ್ಣ ಪ್ರೆಸ್.
ಹೆ.ಮಾ. ಕೆಲ ಕಾಲ ಮದ್ರಾಸದ ತಿರುವಲಕೇಣಿ (೧೯೪೭ ನವೆಂ.)ಯಲ್ಲಿ ನಡೆಯಿತು.
೧೦೪೭

**ಶ್ರೀಕೃಷ್ಣ ಸಂದೇಶ** ಉಡುಪಿ
ಮಾಸ,ಪಕ್ಷ ೨೭ ೧/೨x೨೦ ೧/೨ ಪು.೩೨,೬೪

ದ್ವೈತಮತ ೧೯೩೨-೩೫ . .

ಸಂ. ಮುದ್ರಾಡಿ ಜನಾರ್ದನಾಚಾರ್ಯ, ವೈದಿಕ ಧರ್ಮವೀರ ಸಂಘ.
ಪ್ರ. ಯು. ವೆಂಕಟರಮಣಾಚಾರ್ಯ, ಕದಂಬಳ್ಳಿ ರಾಜಗೋಪಾಲಾಚಾರ್ಯ.
ಮು. ತುಳುನಾಡು ಪ್ರೆಸ್.
ಹೆ.ಮಾ. ಸಂಪಾದಕರು ಕೆಲಕಾಲ ಬೆಂಗಳೂರಿನಿಂದ ಇದೇ ಪತ್ರಿಕೆ ನಡೆಸಿದರು. ನೀತಿಮಂಜರೀ ಎಂ. ಆರ್. ಭಟ್ಟರ ಮಧ್ವಾಚಾರ್ಯ-ಮಾಧ್ವಮತ, ವರ್ಣಾಶ್ರಮ ಪದ್ಧತಿ ಬಗೆಗೆ ಬರೆಹಗಳಿದ್ದವು.
೧೦೪೮

**ಶ್ರೀಕೃಷ್ಣಸೂಕ್ತಿ** ಉಡುಪಿ
ಮಾಸ ೨೧x೧೩ ಪು.೩೬-೭೬

ದ್ವೈತಮತ ೧೯೦೬-೧೬ (೧೯೩೮) . .

ಸಂ. ಕರೋಡಿ ಸುಬ್ಬರಾವ್, ಎನ್. ರಾಜಗೋಪಾಲ ಕೃಷ್ಣರಾವ್.
ಪ. ಸಾಹಿತ್ಯ ಪ್ರಕಾಶನ ಗ್ರಂಥಮಾಲೆ.
ಮು. ಧರ್ಮಪ್ರಕಾಶ ಮುದ್ರಣಾಲಯ, ಮಂಗಳೂರು; ಸದಾನಂದ ಪ್ರಿಂಟಿಂಗ್ ವರ್ಕ್ಸ್ ಕಂಪನಿ ಲಿಮಿಟೆಡ್, ಉಡುಪಿ.
ಹೆ.ಮಾ. ೧೯೦೯ ಜನವರಿಯಿಂದ, ಕಾರವಾರದಲ್ಲಿ ನಿಂತ 'ವಿನೋದಿನಿ' ರಿ 'ಸವಿನೋದ'ವಾದ ಶ್ರೀಕೃಷ್ಣಸೂಕ್ತಿ ಹೊರಡತೊಡಗಿತು. ೧೯೩೮ರಲ್ಲಿ ಪುನಃ ಆರಂಭವಾದುದು ಕಂಡುಬರುತ್ತದೆ.
೧೦೪೯

**ಶ್ರೀಧನ್ವಂತರಿ** ಶೃಂಗೇರಿ
ಪಕ್ಷ ೨೧ ೧/೨x೧೪ ಪು.೧೬

ಆಯುರ್ವೇದ ೧೯೨೪-೨೯ . .

ಸಂ. ಕೆ. ಶೇಷಶಾಸ್ತ್ರಿ
ಪ್ರ. ಕರ್ನಾಟಕ ಆಯುರ್ವೇದ ಮಂಡಳಿ.
ಮು. ಪ್ರಭಾಕರ ಪ್ರೆಸ್, ಉಡುಪಿ.
ಧ್ಯೇಯವಾಕ್ಯ: "ಭಿಷಜಾಂ ಸಾಧು ವೃತ್ತಾನಾಂ ಭದ್ರಮಾಗಮ ಶಾಲಿನಾಂ। ಅಭ್ಯಸ್ತ ಕರ್ಮಣಾಂಭದ್ರಂ ಭದ್ರಂ ಭದ್ರಾಭಿಲಾಷಿಣೀಂ॥"
ವಿವಾಹ ಶಾಸನ, ಸರ್ವಸಿದ್ಧ ಗ್ರಂಥ ಪ್ರಕಟವಾಗಿದ್ದವು.
೧೦೫೦

**ಶ್ರೀಧರ ಸಂದೇಶ** ಹುಬ್ಬಳ್ಳಿ,ಸಾಗರ
ಮಾಸ ೨೭ ೧/೨x೨೧ ೧/೨ ಪು.೨೦

ಸನಾತನಧರ್ಮ ೧೯೫೯ . .

ಸಂ. ಜಿ. ಕೆ. ಶೇಳಕರ.
ಪ್ರ. ಶ್ರೀಧರ ಮಹಾಮಂಡಲ, ಧಾರವಾಡ.
ಮು. ಶೇಳಕರ ಪ್ರಿಂಟಿಂಗ್ ಪ್ರೆಸ್; ಸಾಗರ ಮುದ್ರಣಾಲಯ.
ಹೆ.ಮಾ. ಸು.೨ ವರ್ಷಗಳ ನಂತರ ಪತ್ರಿಕೆ ಶಿವಮೊಗ್ಗದ ಸಾಗರದ ಶ್ರೀಧರಸ್ವಾಮಿ ಕ್ಷೇತ್ರವಾದ ವರದಹಳ್ಳಿಗೆ ಬಂತು. ಆಗ ಪ್ರಧಾನ ಸಂಪಾದಕರು ಶ್ರೀ ಜಿ. ಕೆ. ಶೇಳಕರರೆ ಇದ್ದರು. ಸಹಾಯಕರಾಗಿ ಸಾಗರದ ವಿ॥ ಚಂದಶೇಖರ ಜೋಯಿಸರು, ಹರಗೋಪಾಲ ಭಟ್ಟರು ಶ್ರೀ ಅನಂತ ಬ್ರಹ್ಮಚಾರಿ ಶ್ರೀ ಗುರುಪಾದ ಮೂರ್ತಿ ಮುಂತಾದವರು ಇದ್ದರು. ೧೯೬೯ರ ವೇಳೆಗೆ ಸುಮಾರು ೧೯೭೩ ಶ್ರೀಧರ ಸ್ವಾಮಿಯುವರ ದೇಹಾಂತ್ಯದ ವರೆಗೂ ನಡೆಯಿತು. ಮಹಾರಾಷ್ಟ್ರದಲ್ಲಿಯೂ ಚಂದಾದಾರ ಭಕ್ತರನ್ನು ಪತ್ರಿಕೆ ಹೊಂದಿತ್ತು. ಸು.೨೦೦೦ಕ್ಕೂ ಹೆಚ್ಚು ಪ್ರಸಾರದಲ್ಲಿತ್ತು.
೧೦೫೧

**ಶ್ರೀಪೂರ್ಣಬೋಧ** ಮೈಸೂರು
ಮಾಸ ೨೧x೧೪ ಪು.೬೦

ದ್ವೈತಮತ ೧೯೩೫-೩೭ . .

ಸಂ. ಕಾಶಿ ಪಾಣೇಶಾಚಾರ್ಯ
ಸಹ ಸಂ. ಕಾ. ರಾಮಚಂದಾಚಾರ್ಯ
ಪ. ಉತ್ತರಾದಿಮಠ, ಹಳೇ ಅಗಹಾರ, ಮೈಸೂರು.
ಮು. ಶ್ರೀಮತ್ ಕನ್ಯಕಾಪರಮೇಶ್ವರ ಪ್ರೆಸ್.
ಹೆ.ಮಾ. ಶೀ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಉದಾರ ಸಹಾಯವಿತ್ತು.
೧೦೫೨

**ಶ್ರೀಮದ್ಧರ್ಮನಿಧಾನಂ** ನಡಹಳ್ಳಿ(ಸಾಗರ)
ಮಾಸ ೨೧ ೧/೨x೧೪ ೧/೨ ಪು.೩೨-೪೦

ಸನಾತನಧರ್ಮ ೧೯೧೨-೧೪ . .

ಸಂ.ಪ್ರ. ನಡಳ್ಳಿ ವೆಂಕಪ್ಪ.
ಮು. ಶ್ರೀ ಲಕ್ಷ್ಮಿವಿಲಾಸ ಮುದ್ರಾಕ್ಷರ ಶಾಲೆ ನಡಹಳ್ಳಿ.
ಹೆ.ಮಾ. ಸೊರಬದಂಥ ಚಿಕ್ಕ ತಾಲೂಕಿನ ಮೂಲೆಯಾದ ನಡಹಳ್ಳಿಯಿಂದ ತಮ್ಮದೇ ಮುದ್ರಣಾಲಯದಿಂದ ೩-೪ ಪತ್ರಿಕೆಗಳನ್ನು ಸುಮಾರು ವರ್ಷಗಳ ಹಿಂದೆ ನಡೆಸಿದ ವೆಂಕಪ್ಪನವರು ಒಬ್ಬ ಸಾಹಸಿ ಪತ್ರಿಕೋದ್ಯಮಿ. ಈ ಪತ್ರಿಕೆಯಲ್ಲಿ ಧರ್ಮಸಿಂಧೂ, ಯಾಜ್ಞವಲ್ಕ ಸ್ಮೃತಿ, ಮುಂತಾದ ಗ್ರಂಥಗಳನ್ನು ಪ್ರಕಟಿಸಿದರು. ಸ್ವತಃ ಗ್ರಂಥಕರ್ತರಾದ ಈ ಪತ್ರಿಕೆಯ ಮೂಲಕ ಬ್ರಾಹ್ಮಣ್ಯ ಹಾಗೂ ಹಿಂದೂ ಸಂಸ್ಕೃತಿಯು ಈ ಪದೇಶಗಳಲ್ಲಿ ಹರಡಲು ಶ್ರಮಿಸಿದರು.
೧೦೫೩

**ಶ್ರೀಮದ್ವೀರಶೈವ** ಜುಮನಾಳ(ವಿಜಾಪುರ)
ಮಾಸ ? ?

ವೀರಶೈವ ೧೯೧೧ . .

ಸಂ.ಪ್ರ. ಬಹ್ಮಶ್ರೀ ನಾಗಶಾಸ್ತ್ರಿ
೧೦೫೪

**ಶ್ರೀಶಂಕರಕೃಪಾ** ಬೆಂಗಳೂರು.
ಮಾಸ ೨೧x೧೪ ಪು.೬೦

ಅದ್ವೈತಮತ ಜೂ.೧೯೬೪-೬೬ . .

ಸಂ. ಎ. ವಿ. ಶೀನಿವಾಸ ಮೂರ್ತಿ
ಸ್ಥಾ. ಕೆ. ಎಸ್. ರಾಮಸ್ವಾಮಿ
ಪ. ಅಖಿಲ ಭಾರತ ಶಂಕರ ಸೇವಾ ಸಮಿತಿ, ಮೈಸೂರು ಶಾಖೆ.
ಮು. ಬೆಂಗಳೂರು ಪ್ರೆಸ್.
ಘೋಷ: "ಏಷಾ ಶಂಕರಭಾರತೀ ವಿಜಯತೇ ನಿರ್ವಾಣ ಸೌಖ್ಯಪ್ರದಾ".
ಹೆ.ಮಾ. ಕನಕಧಾರಾ ಸ್ತೋತ್ರ, ವಿವೇಕ ಚೂಡಾಮಣಿ ಟೀಕಾನುವಾದ ಮುಂತಾದವು ಪ್ರಕಟವಾಗಿವೆ.
೧೦೫೫

**ಶ್ರೀಶಂಕರವಿಜಯ** ಮೈಸೂರು
ಮಾಸ ೨೧x೧೪ ಪು.೬೦

ಅದ್ವೈತಮತ ೧೯೪೦ . .

ಸಂ.ಪ್ರ. ಶ್ರೀಕಂಠಶಾಸ್ತ್ರಿ
೧೦೫೬

**ಶ್ರೀಶಾರದಾ** ಬೆಂಗಳೂರು
ಮಾಸ ೨೧x೧೩ ಪು.೪೦

ಸನಾತನಧರ್ಮ ೧೯೧೧ . .

ಸಂ.ಪ್ರ. ದೊಡ್ಡಬೆಲೆ ನಾರಾಯಣಶಾಸ್ತ್ರಿ
ಮು. ಐರಿಷ್ ಮುದ್ರಾಲಯ.
೧೦೫೭

**ಶ್ರೀಶೈಲ ಜ್ಯೋತಿ** ಶ್ರೀಶೈಲ
ಮಾಸ ೧೮x೧೨ ಪು.೨೦

ವೀರಶೈವ ೧೯೬೨ . .

ಸಂ. ಭೋಗಿಶೆಟ್ಟಿ ಜಾಗಪ್ಪ.
ಪ. ಶ್ರೀಶೈಲ ವೀರ ಸಂಘ.
೧೦೫೮

**ಶ್ರೀಸುಧಾ** ಬೆಂಗಳೂರು
ಮಾಸ ೨೧x೧೩ ಪು.೪೪
ದ್ವೈತಮತ ೧೯೫೩-
ಸಂ. ಹೆಚ್. ಕೆ. ರಂಗನಾಥಾಚಾರ್ಯ
ಪ. ಬಿ. ಶ್ಯಾಮಾಚಾರ್ಯ, ಉತ್ತರಾದಿಮಠ, ಬೆಂಗಳೂರು.
ಮು. ಭಾರತಿ ಪವರ ಪ್ರೆಸ್, ಮುಳಬಾಗಿಲು.
ಹೆ.ಮಾ. ಶ್ರೀಮನ್ಮಧ್ವ ಸಿದ್ಧಾಂತವೃದ್ಧಿಕಾರಣೀ ಸಭಾದ ಮುಖಪತ್ರ. ಉತ್ತರಾದಿಮಠದ ಸ್ವಾಮಿಗಳ ಕೃಪಾಪೋಷಿತ. ಪ್ರಕೃತ ಪತ್ರಿಕೆಯನ್ನು ಜಯಸತ್ಯ ಪ್ರಮೋದಸಧಿಯಿಂದ ನಡೆಸಲಾಗುತ್ತಿದೆ. ಜಯತೀರ್ಥಾಚಾರ್ಯ ಮಳಗಿಯವರು ಬಹುಕಾಲ ಸಂಪಾದಕರಿದ್ದರು.
೧೦೫೯

**ಸಂಕ್ರಮಣ** ಧಾರವಾಡ
ತ್ರೈಮಾಸ,ಮಾಸ,ದ್ವೈಮಾಸ ೨೧x೧೪ ಪು.೮೬
ಸಾಹಿತ್ಯ ೧೯೬೪-
ಸಂ.ಪ. ಚಂದಶೇಖರ ಪಾಟೀಲ.
ಮು. ಪತಿಭಾ ಮುದ್ರಣ, ಧಾರವಾಡ, ಶಾರದಾ ಪ್ರಿಂಟಿಂಗ್ ಪ್ರೆಸ್, ಮುಂತಾದ ಕಡೆಗಳಲ್ಲಿ ಮುದಣವಾಗುತ್ತಿತ್ತು.
ಹೆ.ಮಾ. ಗಿರಡ್ಡಿ ಗೋವಿಂದರಾಜ ಹಾಗೂ ಜೊತೆ ಸಿದ್ದಲಿಂಗ ಪಟ್ಟಣಶೆಟ್ಟಿ ಸಂಪಾದಕರಿದ್ದರು. ಕವಿತೆಗೆ ಪ್ರಾಶಸ್ತ್ಯವಿರುವ, ಉತ್ತಮಮಟ್ಟದ ಪತ್ರಿಕೆ.
೧೦೬೦

**ಸಂಕ್ರಾಂತಿ** ಬಳ್ಳಾರಿ
ವಾರ ೩೮x೨೫ ೧/೨ ಪು.೧೬
ಸುದ್ದಿ/ರಾಷ್ಟ್ರೀಯ ೧೯೬೭-೬೮
ಸಂ.ಪ್ರ. ಕೆ. ಮಹಂತಸ್ವಾಮಿ.
ಮು. ಶಾರದಾ ಮುದ್ರಣಾಲಯ.
ಹೆ.ಮಾ. ಎಂ. ವಾಸುದೇವಾಚಾರ್ಯರ ಸಹಾಯ. ಸಂಪಾದಕರು ನಿಷ್ಠಾವಂತ ಗಾಂಧೀವಾದಿಗಳು ಅನೇಕ ರಚನಾತ್ಮಕ ಕಾರ್ಯಗಳಲ್ಲಿ ಗ್ರಾಮ ಸಂಘಟನೆಯಲ್ಲಿ ಆಸಕ್ತರು. ಸುಭದ್ರ ಆರ್ಥಿಕ ತಳಹದಿ ಇಲ್ಲದೆ ಪತ್ರಿಕೆ ಸ್ಥಗಿತವಾಯಿತು.
೧೦೬೧

**ಸಂಕೀರ್ಣ** ಬೆಂಗಳೂರು
ತ್ರೈಮಾಸ,ಮಾಸ ೧೪x೧೨ ಪು.೪೮
ಸಾಹಿತ್ಯ/ಸಮ್ಮಿಶ್ರ ೧೯೭೧-೭೮ . .
ಸಂ.ಪ್ರ. ಜಿ. ಎ. ವಿಶ್ವೇಶ್ವರ.
ಮು. ಕೃತಿಕ ಮುದ್ರಣ.
ಹೆ.ಮಾ. ಸುಮಾರು ೧೯೭೪ರ ವೇಳೆಗೆ ಮಾಸಿಕವಾಯಿತು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕನ್ನಡ ವಿಭಾಗದ ಆಶ್ರಯ.
೧೦೬೨

**ಸಂಗಮ** ಹುಬ್ಬಳ್ಳಿ
ಮಾಸ ೧೮x೧೩ ೧/೨ ಪು.೧೪೪
ಡೈಜೆಸ್ಟ್ ಸ.೧೯೫೬-
ಸಂ. ಪಾಟೀಲ ಪುಟ್ಟಪ್ಪ.
ಪ. ಪ್ರಪಂಚ ಪಕಾಶನ
ಮು. ವಾಗ್ವಿಲಾಸ ಪವರ ಪ್ರಿಂಟಿಂಗ್ ಪ್ರೆಸ್, ಪಪಂಚ ಪ್ರಿಂಟರಿ, ಹುಬ್ಬಳ್ಳಿ.
೧೦೬೩

**ಸಂಗಾತಿ** ಮಂಗಳೂರು
ವಾರ ೪೫x೨೮ ೧/೨ ಪು.೪
ಸುದ್ದಿ/ಸಮ್ಮಿಶ್ರ ೧೯೪೮-೮೧
ಸಂ. ಎಂ. ನವೀನ ಚಂಡೀಪಾಲ
ಪ. ಬಿ. ವಿ. ಕೇರಕರ, ಸುಮನ ಪಕಾಶನ, ಮಂಗಳೂರು.
ಮು. ರಾಷ್ಟ್ರಬಂಧು ಪ್ರೆಸ್, ಸಿದ್ಧಾರ್ಥ ಮುದ್ರಣ. ಮಂಗಳೂರು. ಕೆಲಭಾಗಗಳು ಸರಸ್ವತಿ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ ಮುದ್ರಿತವಾಗುತ್ತಿತ್ತು. ಮಧ್ಯದಲ್ಲಿ ಕೆಲವು ವರ್ಷ ಸ್ಥಗಿತಗೊಂಡಿತ್ತು.
ಹೆ.ಮಾ. ಮುಂಬಯಿಯಲ್ಲಿಯೂ ಒಂದು ಶಾಖೆಯಿದ್ದು, ಪಿ. ಎಸ್. ತಾರಾನಾಥರು ನೋಡಿಕೊಳ್ಳುತ್ತಿದ್ದರು.
೧೦೬೪

**ಸಂಘಟಕ** ಬಾಗಲಕೋಟೆ
ವಾರ ೩೮x೨೫ ೧/೨ ಪು.೨,೪
ಸುದ್ದಿ/ಸಮ್ಮಿಶ್ರ ೧೯೭೧-೮೦ . .
ಸಂ.ಪ್ರ. ಎಚ್. ಬಿ. ಕತ್ತಿ.
ಮು. ವಿವೇಕಾನಂದ ಮುದ್ರಣಾಲಯ.
ಧ್ಯೇಯವಾಕ್ಯ: "ಸಂಘೇ ಶಕ್ತಿಃ ಕಲೌಯುಗೇ".
೧೦೬೫

**ಸಂಜಯ** ದಾವಣಗೆರೆ
ವಾರ ೩೮x೨೫ ೧/೨ ಪು.೬,೧೨
ಸುದ್ದಿ/ರಾಜಕೀಯ ೧೯೪೩-೫೩ . .
ಸಂ.ಪ್ರ. ಕೆ. ಶಾಮರಾವ್
ಮು. ವಿಜಯಲಕ್ಷ್ಮಿ ಮುದ್ರಣ, ದಾವಣಗೆರೆ, ಬೃಂದಾವನ ಪ್ರೆಸ್, ಬೆಂಗಳೂರು.
ಹೆ.ಮಾ. ರಾಜಕೀಯ ಸುದ್ದಿ, ಸಾಹಿತ್ಯಗಳಿಂದ ಹೆಸರಾದ ಪತ್ರಿಕೆ. ೧೯೫೨ರಲ್ಲಿ ನಿಂತ ಪತ್ರಿಕೆ ಬೆಂಗಳೂರಿನಿಂದ ಪುನರಾರಂಭವಾದರೂ ಮೂರೇ ತಿಂಗಳಲ್ಲಿ ಸ್ಥಗಿತವಾಯಿತು. ನಾಡಿಗೇರ ಕೃಷ್ಣರಾಯ, ಮ. ಶ್ರೀಧರ ಮೂರ್ತಿ, ಈ ಪತ್ರಿಕೆಯಲ್ಲಿ ದುಡಿದು ಲೇಖನಾನುಭವ ಪಡೆದವರು.
೧೦೬೬

**ಸಂತವಾಣಿ** ರಬಕವಿ,ಬನಹಟ್ಟಿ(ವಿಜಾಪುರ)
ಮಾಸ ೩೮x೨೫, ೩೨ ೧/೨x೨೦ ಪು.೪
ಸುದ್ದಿ/ಸಮ್ಮಿಶ್ರ ೧೯೭೧-೮೦ . .
ಸಂ.ಪ್ರ. ಭಾಸ್ಕರ ಜೀವಾಜಿ ಕೋಪರ್ಡೆ
ಮು. ಗಿರೀಶ್ ಮುದ್ರಣ ಮಂದಿರ, ಬನಹಟ್ಟಿ.
ಹೆ.ಮಾ. ಸಹಸಂಪಾದಕರಾಗಿ ಪ್ರಭುಲಕ್ಷ್ಮಣ ಚಿನ್ನಾಳೆ ಅವರಿದ್ದರು. ಸಂಪಾದಕರು ಒಂದೆರಡು ಬಾರಿ ಸರಕಾರದ ಕ್ರೂರದೃಷ್ಟಿಯ ಕಾರಣಗಳಿಂದ ಬಂಧನಕ್ಕೂ ಒಳಗಾಗಿದ್ದರು.
೧೦೬೭

**ಸಂದರ್ಶನ** ವಿಜಾಪುರ
ಮಾಸ ೪೧x೨೮ ಪು.೬-೮

ಸುದ್ದಿ/ಸಮ್ಮಿಶ್ರ ೧೯೫೯-೭೮ . .

ಸಂ.ಪ. ವಿ. ಬಿ. ನಾಯಕ.
ಮು. ಸುದರ್ಶನ ಮುದ್ರಣಾಲಯ, ವಿಜಾಪುರ.
೧೦೬೮

**ಸಂದೇಶ** ಬೆಳಗಾವಿ
ದ್ವೈವಾರ,ವಾರ ೨೧x೧೪, ೩೬\೨೫ ಪು.೪-೬

ಸುದ್ದಿ/ಸಮ್ಮಿಶ್ರ ೧೯೪೭ . .

ಸಂ.ಪ. ಗೋಪಾಲರಾವ ಅಪ್ಪಾರಾವ ದೇಶಪಾಂಡೆ.
ಮು. ಗೋಪಾಲ ಮುದ್ರಣಾಲಯ.
೧೦೬೯

**ಸಂಧ್ಯಾ** ತುಮಕೂರು
ದಿನ ೩೨x೨೫ ಪು.೨

ಸುದ್ದಿ ೧೯೫೪ . .

ಸಂ. ಎ. ಆರ್. ಸೀತೂರಾಮರಾವ್.
ಪ. ಎಸ್. ಸುಮಿತ
ಮು. ಸಂಧ್ಯಾ ಮುದ್ರಣಾಲಯ, ಚಿಕ್ಕಪೇಟೆ.
ಧ್ಯೇಯವಾಕ್ಯ: "ಧರ್ಮಾದರ್ಥಃ ಪ್ರಭವತೇ ಸುಖಂ । ಧರ್ಮೇಣ ಲಭತೇ ಸರ್ವಂ ಧರ್ಮ ಸಾರಮಿದಂ ಜಗತ್॥".
೧೦೭೦

**ಸಂಧ್ಯಾ** ಮಡಿಕೇರಿ
ದಿನ (ಸಂಜೆ) ೩೭x೨೫ ಪು.೨
ಸುದ್ದಿ/ಪ್ರಾದೇಶಿಕ ೧೯೬೮-೬೯
ಸಂ. ಬಿ. ಎಸ್. ಗೋಪಾಲಕೃಷ್ಣ.
ಹೆ.ಮಾ. ಒಂದು ವರ್ಷ ಕಾಲ ನಡೆಯಿತು.
೧೦೭೧

**ಸಂಧ್ಯಾದೀಪ** ಮಂಗಳೂರು
ದಿನ ೨೦x೧೬ ೧/೨, ೩೩x೨೦ ಪು.೨

ಸುದ್ದಿ ೧೯೫೪-೭೦ . .

ಸಂ.ಪ. ಎಚ್. ಮನಮೋಹನ ಕಾಮತ.
ಮು. ದಿ ಹಿಂದ್ ಆರ್ಟ್ ಪ್ರೆಸ್; ಗೀತ ಪ್ರೆಸ್, ಮಂಗಳೂರು.
೧೦೭೨

**ಸಂಪದಭ್ಯುದಯ** ಮೈಸೂರು
ದಿನ,ವಾರ ೪೪x೨೯ ಪು.೪

ಸುದ್ದಿ/ಪ್ರಾದೇಶಿಕ ೧೯೧೪-೨೯ . .

ಸಂ. ಎಂ. ವೆಂಕಟಕೃಷ್ಣಯ್ಯ, ಎಂ. ಎಸ್. ಲಕ್ಷ್ಮಣರಾವ್ (೧೯೨೮)
ಮು. ಸಾಧ್ವೀ ಪ್ರೆಸ್; ಕೃಷ್ಣರಾಜ ವಾಣೀವಿಲಾಸ ಮುದ್ರಣಾಲಯ.
ಧ್ಯೇಯವಾಕ್ಯ: "ಸತ್ಯಮೇವೋದ್ಧರಾಮ್ಯಹಂ ಉದ್ಯೋಗಿನಂ। ಪುರುಷಸಿಂಹಮುಪೈತಿ ಲಕ್ಷ್ಮೀ । ದೈವೇನದೀಯ ಮಿತಿಕಾ ಪುರುಷಾವದಂತೀ । ದೈವಂ ವಿಹಿತ್ಯ ವಿಹಿತ್ಯ ಕುರು ಪೌರುಷ ಮಾತ್ಯ ಶಕ್ತ್ಯಾಃ ।".
ಹೆ.ಮಾ. ಈ ಪತ್ರಿಕೆಯ ಜೊತೆಗೆ 'ಸಾಧ್ವೀ' ಕೂಡ ನಡೆಯುತ್ತಿತ್ತು. ೧೯೨೯ರ ಜನವರಿಯಲ್ಲಿ ಪತ್ರಿಕಾ ಶಾಸನದ ಬಿಸಿ ತಟ್ಟಿತು.
೧೦೭೩

**ಸಂಯುಕ್ತ ಕರ್ನಾಟಕ** ಬೆಳಗಾಂವಿ,ಹುಬ್ಬಳ್ಳಿ, ಬೆಂಗಳೂರು
ವಾರ,ದಿನ ೫೮x೪೧ ಪು.೮-೧೬

ಸುದ್ದಿ/ರಾಜಕೀಯ ೧೯೨೯, ೧೯೩೩ . .

ಸ್ಥಾ. ಬಳವಂತರಾವ ದಾತಾರ.
ಸಂ. ಮೊಹರೆ ಹಣಮಂತರಾವ; ರಂಗನಾಥ ದಿವಾಕರ; ವೆಂ. ಭೀ. ನಾಯಕ, ಮುಂತಾದವರು.
ವ್ಯ.ಸಂ. ಕೆ. ಶಾಮರಾವ್.
ಪ್ರ. ಕರ್ನಾಟಕ ಪ್ರಕಾಶಕ ಮಂಡಳಿ, ಲೋಕ ಶಿಕ್ಷಣ ಟ್ರಸ್ಟ್.
ಮು. ಹುಬ್ಬಳ್ಳಿ, ಬೆಂಗಳೂರುಗಳಲ್ಲಿಯ ಪತ್ರಿಕಾ ಕಾರ್ಯಾಲಯಗಳಲ್ಲಿ.
ಹೆ.ಮಾ. ದೀರ್ಘಕಾಲೀನ ರಾಷ್ಟ್ರೀಯ ದೈನಂದಿನಿ. ಬೆಳಗಾಂವಿಯಿಂದ ಹುಬ್ಬಳ್ಳಿಗೆ ೧೯೩೩ರಲ್ಲಿ ಸ್ಥಳಾಂತರಗೊಂಡಿತು. ಆಗ ಆರ್ಥಿಕವಾಗಿ ದುರ್ಬಲವಾಗಿತ್ತು. ೧೯೩೯ರಲ್ಲಿ ದ್ವಿತೀಯ ಮಹಾಯುದ್ಧ ಸುರುವಾದ ಮೇಲೆ ಶುಕ್ರದೆಸೆ. ಮುದ್ರಣಕ್ಕಾಗಿ ವಿಶಿಷ್ಟ ರೋಟರಿ ಯಂತ್ರದ ಸ್ಥಾಪನೆ. ೧೯೫೫ರಿಂದ ಬೆಂಗಳೂರಿನಲ್ಲಿಯೂ ಮುದ್ರಣವಾಗತೊಡಗಿತು.

ದಿವಾಕರರು ಆರಂಭಿಸಿದ್ದ ಕರ್ಮವೀರ ಸಾಪ್ತಾಹಿಕವೂ ಜೊತೆಗೆ ಪ್ರಕಟವಾಗತೊಡಗಿತು. (ಹೆಚ್ಚಿನ ವಿವರಗಳಿಗೆ ಲೇಖನ ವಿಭಾಗದಲ್ಲಿಯ ಮೊಹರೆಯವರ ಮೇಲಿನ ಲೇಖ ನೋಡಬಹುದು.)
೧೦೭೪

